


# ಹೊಸತು

ವಿಶೇಷ ಸಂಚಿಕೆ

ಜನವರಿ ೨೦೦೧
ಬೆಲೆ : ರೂ. ೨೫

ನೆಮ್ಮದಿಯ ನಾಳೆ ನಮ್ಮದು

## ೨೦೦೧

## ಹೊಸ ಸಹಸ್ರಮಾನಕ್ಕೆ ಸ್ವಾಗತ

ಕರ್ನಾಟಕ ಸರ್ಕಾರ

# ಜನರ ಆಶೋತ್ತರಗಳನ್ನು ಪೂರೈಸುತ್ತ...



## ...ಸುರಕ್ಷತೆ,



## ಶಾಂತಿ,





## ಸಮೃದ್ಧಿಯನ್ನು ಸಾಧಿಸಿದ ಕರ್ನಾಟಕ.



ಶ್ರೀ ಎಸ್.ಎಂ. ಕೃಷ್ಣ
ಸನ್ಮಾನ್ಯ ಮುಖ್ಯ ಮಂತ್ರಿಗಳು



ಶ್ರೀ ಮಲ್ಲಿಕಾರ್ಜುನ ಖರ್ಗೆ
ಸನ್ಮಾನ್ಯ ಗೃಹ ಸಚಿವರು



ಪ್ರೊ. ಬಿ.ಕೆ. ಚಂದ್ರಶೇಖರ್
ಸನ್ಮಾನ್ಯ ವಾರ್ತಾ ರಾಜ್ಯ ಸಚಿವರು

ಸಮರ್ಥ, ಧೀಮಂತ ನಾಯಕ ಶ್ರೀ ಎಸ್.ಎಂ. ಕೃಷ್ಣರವರ ನೇತೃತ್ವದಲ್ಲಿ ಪ್ರಸ್ತುತ ಸರ್ಕಾರವು ಅಧಿಕಾರದ ಚುಕ್ಕಾಣಿ ಹಿಡಿದಾಗಿನಿಂದಲೂ ಆಡಳಿತಕ್ಕೆ ಹೊಸ ಚಾಲನೆ ತಂದು ಕೊಟ್ಟಿದೆ. ಸಮಯ ಪರಿಪಾಲನೆ, ಆಡಳಿತದಲ್ಲಿ ಪಾರದರ್ಶಕತೆ ತಂದು ಅದರಲ್ಲಿ ಸಾರ್ವಜನಿಕರೂ ಭಾಗವಹಿಸುವಂತಾಗಿದೆ. ಮಾಹಿತಿ ಪಡೆಯುವ ಹಕ್ಕು ಜನರಿಗೆ ವಿಷಯ ತಿಳಿದುಕೊಳ್ಳಲು ವಿಶೇಷ ಅಧಿಕಾರವನ್ನೇ ನೀಡಿದೆ. ಆಡಳಿತದ ಎಲ್ಲಾ ಹಂತಗಳಲ್ಲೂ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಳ್ಳುವುದು, ಅಧಿಕಾರ ವಿಕೇಂದ್ರೀಕರಣಗೊಳಿಸಿ ಹೆಚ್ಚು ಅಧಿಕಾರವನ್ನು ವಹಿಸಿಕೊಡುವುದರ ಮೂಲಕ ಸ್ಥಳೀಯ ಸಂಸ್ಥೆಗಳನ್ನು ಬಲಗೊಳಿಸಲಾಗಿದೆ . ಈ ಎಲ್ಲಾ ಕ್ರಮಗಳೂ ಹಾಗೂ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಅಗತ್ಯ ಮೂಲಭೂತ ಸೌಕರ್ಯಗಳ ವ್ಯವಸ್ಥೆಯೂ ಕರ್ನಾಟಕವನ್ನು ವಿಶ್ವ ಬಂಡವಾಳ ಹೂಡಿಕೆದಾರರ ಅಚ್ಚುಮೆಚ್ಚಿನ ರಾಜ್ಯವಾಗಿ ರೂಪಿಸಿವೆ. ಜನತೆ ಮತ್ತು ಸರ್ಕಾರದ ನಡುವೆ ಏರ್ಪಟ್ಟಿರುವ ಸಮನ್ವತೆಯಿಂದಾಗಿ ಸಮಾಜದ ವಿವಿಧ ವರ್ಗಗಳಲ್ಲಿ ಸುಭದ್ರತೆ ಮತ್ತು ಶಾಂತಿ ಮೂಡಿ ಸಾಮರಸ್ಯಕ್ಕೆ ಸಹಕಾರಿಯಾಗಿವೆ. ಇವು ಕರ್ನಾಟಕದ ಯಶಸ್ಸಿನ ಹಿಂದಿರುವ ಪ್ರೇರಕ ಸೂತ್ರಗಳು.

## ಸಮರ್ಥ ಸರ್ಕಾರದ ಗಮನಾರ್ಹ ಸಾಧನೆಗಳು.

- ಸರ್ಕಾರಿ ಟೆಂಡರ್ ಮತ್ತು ಖರೀದಿ ವಹಿವಾಟುಗಳ ವಿಧಿವಿಧಾನಗಳಲ್ಲಿ ಸಂಪೂರ್ಣ ಪಾರದರ್ಶಕತೆ.
- ನಿರಾತಂಕವಾಗಿ ಮಾಹಿತಿ ಲಭ್ಯತೆ. ಜನರನ್ನು ಪೂರ್ಣವಾಗಿ ವಿಶ್ವಾಸಕ್ಕೆ ತೆಗೆದುಕೊಂಡು ಅವರಿಗೆ ನಿರಾತಂಕವಾದ ಮಾಹಿತಿ ಒದಗಿಸುವ ಕರ್ನಾಟಕ ಮಾಹಿತಿ ಹಕ್ಕು ಕಾನೂನು ಜಾರಿ. ಇದರಿಂದಾಗಿ ಸಾರ್ವಜನಿಕರು ಯಾವುದೇ ಸರ್ಕಾರಿ ಇಲಾಖೆಯಿಂದ ಮಾಹಿತಿಯನ್ನು (ಗೋಪ್ಯ ಮಾಹಿತಿಗಳನ್ನು ಹೊರತುಪಡಿಸಿ) ಪಡೆದುಕೊಳ್ಳುವ ಅವಕಾಶ.
- ಆಡಳಿತದಲ್ಲಿ ಪರಿಣಿತರನ್ನು ಒಳಗೊಂಡಿರುವ ಟಾಸ್ಕ್ ಫೋರ್ಸ್ ವ್ಯವಸ್ಥೆ. ಮೂಲಭೂತ ಸೌಕರ್ಯಗಳು, ಮಾಹಿತಿ ತಂತ್ರಜ್ಞಾನ, ವಸತಿ, ಕುಡಿಯುವ ನೀರು ಮತ್ತು ನೈರ್ಮಲ್ಯ ಮುಂತಾದ ಕ್ಷೇತ್ರಗಳಲ್ಲಿ ಆಯಾ ಕ್ಷೇತ್ರದ ಪರಿಣಿತರನ್ನೊಳಗೊಂಡ ಕಾರ್ಯಪಡೆ (ಟಾಸ್ಕ್ ಫೋರ್ಸ್)ಯ ಸಲಹೆಗಳ ಮಾರ್ಗದರ್ಶನ. ಬೆಂಗಳೂರಿನ ಸಮಗ್ರ ಅಭಿವೃದ್ಧಿಗಾಗಿ ಬೆಂಗಳೂರು ಅಜೆಂಡಾ ಟಾಸ್ಕ್ ಫೋರ್ಸ್ ರಚನೆ. ಈಗಾಗಲೇ, ರಸ್ತೆಗಳು ಮತ್ತು ಹಂಪಿ ಸಂರಕ್ಷಣೆ ಕುರಿತ ಕಾರ್ಯಪಡೆಗಳ ವರದಿಗಳು ಸಿದ್ಧ. ಆರೋಗ್ಯ, ಶಿಕ್ಷಣ ಮತ್ತಿತರ ಕ್ಷೇತ್ರಗಳ ವರದಿಗಳು ಇಷ್ಟರಲ್ಲೇ ಸಿದ್ಧ.
- ಆಡಳಿತ ಸುಧಾರಣಾ ಆಯೋಗದ ಸ್ಥಾಪನೆಯಿಂದ ಆಡಳಿತಕ್ಕೆ ಮಹತ್ತರ ಪ್ರಚೋದನೆ. ಆಯೋಗದ ವರದಿ ಶೀಘ್ರದಲ್ಲೇ ಹೊರಬೀಳುವ ನಿರೀಕ್ಷೆ.
- ಕಂಪ್ಯೂಟರೀಕರಣದಿಂದ ಆಡಳಿತಕ್ಕೆ ಹೊಸ ಚಾಲನೆ. ಮಾಹಿತಿ ತಂತ್ರಜ್ಞಾನ ಸಂಬಂಧಿತ ಹಲವಾರು ಯೋಜನೆಗಳು ಶಿಕ್ಷಣ, ಪೊಲೀಸ್ (ಪೊಲೀಸ್ ಐ.ಟಿ.2000), ಭೂದಾಖಲೆಗಳು (ಭೂಮಿ), ನೋಂದಣಿ, ವಾಣಿಜ್ಯ ತೆರಿಗೆಗಳು(ತೆರಿಗೆ), ಸಾರಿಗೆ, ಲೋಕೋಪಯೋಗಿ ಇಲಾಖೆ ಇವೇ ಮುಂತಾದ ಕ್ಷೇತ್ರಗಳು ಕಂಪ್ಯೂಟರ್ ಜಾಲದಲ್ಲಿ, ಈಗಾಗಲೇ ಕೆಲವು ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ಆನ್-ಲೈನ್ ನೋಂದಣಿ ವ್ಯವಸ್ಥೆ ಜಾರಿ.
- ಮುಖ್ಯಮಂತ್ರಿಯವರ ಮಾಹಿತಿ ಮತ್ತು ತೀರ್ಮಾನ ಬೆಂಬಲ ವ್ಯವಸ್ಥೆಯಾದ ಮುಖ್ಯ ವಾಹಿನಿ ವ್ಯವಸ್ಥೆಯು ಪೂರ್ಣವಾಗಿ ಕಾರ್ಯಾಚರಣೆಗೊಳ್ಳಲಿದೆ.
- ಜನಸಾಮಾನ್ಯರಲ್ಲಿ ಭರವಸೆ ಮೂಡಿಸಲು ವಿದ್ಯುತ್ ಸರಬರಾಜು, ಸಮಾಜ ಕಲ್ಯಾಣ, ಸಾರ್ವಜನಿಕ ವಿತರಣಾ ವ್ಯವಸ್ಥೆಗಳಂತಹ ಕ್ಷೇತ್ರಗಳ ಕುರಿತು ಜನರಿಗೆ ಅಗತ್ಯ ಮಾಹಿತಿ ಒದಗಿಸುವ ಬಳಕೆದಾರರ/ನಾಗರಿಕರ ಕೈಪಿಡಿಗಳು. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಬಳಕೆದಾರರ ಕೈಪಿಡಿ ಈಗಾಗಲೇ ಬಿಡುಗಡೆ.
- ತೆರಿಗೆ ಸುಧಾರಣೆ ಆಯೋಗ ಕಾರ್ಯಪ್ರವೃತ್ತ.
- ಪ್ರಮುಖ ತೆರಿಗೆಗಳ ವಸೂಲಾತಿಯಲ್ಲಿ ಶೇ.15ರಷ್ಟು ಹೆಚ್ಚಳ.
- ಹುಡ್ಕೊ ವತಿಯಿಂದ ರೂ.1,580 ಕೋಟಿ ಹಾಗೂ ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿಯ ವತಿಯಿಂದ ರೂ.505 ಕೋಟಿ ಬಂಡವಾಳ ಹೂಡಿಕೆಗೆ ಕ್ರಮ.
- ಕಾನೂನು ಮತ್ತು ಶಿಸ್ತು ಪಾಲನೆ ವಿಶೇಷ ಒತ್ತು. ಬಹು ಸೂಕ್ಷ್ಮ ಹಾಗೂ ನಾಜೂಕಾದ ಪರಿಸ್ಥಿತಿಗಳ ದಕ್ಷ ರೀತಿಯ ನಿರ್ವಹಣೆ.

ರಾಷ್ಟ್ರದ ಅತ್ಯಂತ ಪ್ರಗತಿಪರ ರಾಜ್ಯ – ಮುನ್ನಡೆಯಲ್ಲಿ ಕರ್ನಾಟಕ.

ಸಾಧಿಸಿದ್ದು ಬಹಳಷ್ಟು, ಸಾಧಿಸಬೇಕಾಗಿರುವುದು ಇನ್ನೂ ಬಹಳಷ್ಟು.



ಕರ್ನಾಟಕ ವಾರ್ತೆ

Visit us at : www.karnatakainformation.org

ದೂರವಾಣಿ : ೬೬೦೩೮೦೧೨
೬೬೭೪೦೩೮



# ಕನ್ನಡ ಪುಸ್ತಕ ಪ್ರಾಧಿಕಾರ

**ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮**

*ರಾಷ್ಟ್ರ ಮಟ್ಟದಲ್ಲಿ ನ್ಯಾಷನಲ್ ಬುಕ್ ಟ್ರಸ್ಟ್ ರಚನೆಯಾಗಿರುವಂತೆ ರಾಜ್ಯ ಮಟ್ಟದಲ್ಲಿ ಪುಸ್ತಕ ಸಂಸ್ಕೃತಿಯ ಪ್ರಸಾರ, ಪ್ರಚಾರ ಮತ್ತು ಪ್ರೋತ್ಸಾಹಕ್ಕಾಗಿ ಕರ್ನಾಟಕ ಸರ್ಕಾರ ಸ್ಥಾಪಿಸಿರುವ ಸಂಸ್ಥೆ ಇದು.*

**ಇದರ ಮುಖ್ಯೋದ್ದೇಶಗಳು ಹೀಗಿವೆ :-**

1. ಕನ್ನಡದಲ್ಲಿ ಲೇಖಕ-ಪ್ರಕಾಶಕ-ಮಾರಾಟಗಾರ ಮತ್ತು ಓದುಗರ ನಡುವೆ ಗಾಢವಾದ ಸಂಬಂಧವನ್ನು ಏರ್ಪಡಿಸಿ, ಓದುಗರಲ್ಲಿ ಉತ್ತಮ ವಾಚನಾಭಿರುಚಿಯನ್ನು ಬೆಳೆಸಿ, ರಾಜ್ಯದಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಕನ್ನಡ ಪುಸ್ತಕೋದ್ಯಮವನ್ನು ಜನಪರವಾಗಿ ಹಾಗೂ ದೃಢವಾಗಿ ಬೆಳೆಸಿ ಭದ್ರವಾಗಿ ಬೇರೂರುವಂತೆ ಮಾಡುವುದು.
2. ಕನ್ನಡ ಪುಸ್ತಕ ಪ್ರಕಾಶನ ಉದ್ಯಮಕ್ಕೆ ನೆರವು ನೀಡುವ ಸಲುವಾಗಿ ಕನ್ನಡದಲ್ಲಿ ಆಯಾ ವರ್ಷ ಪ್ರಕಟಿಸಲಾದ ಪುಸ್ತಕಗಳನ್ನು ಆಯ್ಕೆ ಮಾಡಿ, ಅಂತಹ ಆಯ್ದ ಪುಸ್ತಕಗಳನ್ನು ಸಗಟಾಗಿ ಖರೀದಿಸಿ ಅವುಗಳನ್ನು ರಾಜ್ಯದಲ್ಲಿರುವ ಎಲ್ಲಾ ಸಾರ್ವಜನಿಕ ಗ್ರಂಥಾಲಯಗಳಿಗೆ, ಸರ್ಕಾರಿ ಶಾಲಾ ಕಾಲೇಜುಗಳಿಗೆ ಹಾಗೂ ಇತರ ಸಂಘ ಸಂಸ್ಥೆಗಳಿಗೆ ವಿತರಿಸುವುದು.
3. ಕನ್ನಡ ಪುಸ್ತಕಗಳ ಪ್ರಕಟಣೆಗೆ ಧನಸಹಾಯ, ಅನುದಾನ, ಸಾಲ, ಬಹುಮಾನ ಮುಂತಾದವುಗಳನ್ನು ನೀಡುವಂಥ ಪ್ರೋತ್ಸಾಹಕ ಕ್ರಮಗಳನ್ನು ಕೈಗೊಳ್ಳುವುದು.
4. ಕನ್ನಡದಲ್ಲಿ ಭಾಷೆ-ಸಾಹಿತ್ಯ-ಸಂಸ್ಕೃತಿ-ಕಲೆ-ವಿಜ್ಞಾನ-ಮಾನವಿಕ-ವಿವಿಧ ಜ್ಞಾನ ಶಾಖೆಗಳು-ಇವುಗಳ ಬಗ್ಗೆ ವ್ಯಾಪಕವಾದ ಅರಿವು ಮೂಡಿಸಲು ಅಗತ್ಯವಿರುವಂಥ ಎಲ್ಲ ಬಗೆಯ ಮೂಲಭೂತ ಶೈಕ್ಷಣಿಕ ಕನ್ನಡ ಪುಸ್ತಕಗಳನ್ನು ಬರೆಸುವುದು, ಅನುವಾದ ಮಾಡಿಸುವುದು, ಸಂಪಾದನೆ ಮಾಡಿಸುವುದು, ಅಂಥ ಬಗೆಯ ಪ್ರಕಟಣೆಗಳಿಗೆ ಉತ್ತೇಜನ ನೀಡುವುದು.
5. ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಕಟಿಸುವ ಮತ್ತು ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಬಗೆಯ ಪುಸ್ತಕಗಳು ರಾಜ್ಯದ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ, ತಾಲ್ಲೂಕು ಕೇಂದ್ರಗಳಲ್ಲಿ ಹಾಗೂ ದೇಶದ ವಿವಿಧ ಭಾಗಗಳಲ್ಲಿ ಸುಲಭ ಹಾಗೂ ಸುವ್ಯವಸ್ಥಿತ ರೀತಿಯಲ್ಲಿ ಲಭ್ಯವಾಗುವಂತೆ ಮಾಡಲು ಸ್ಥಾಯೀ ಹಾಗೂ ಸಂಚಾರಿ ಪುಸ್ತಕ ಮಳಿಗೆಗಳನ್ನು ಸ್ಥಾಪಿಸುವುದು ಮತ್ತು ಕನ್ನಡ ಪುಸ್ತಕಗಳನ್ನು ಮಾರಾಟ ಮಾಡಲು ಉದ್ದೇಶಿಸಿರುವ ವ್ಯಕ್ತಿಗಳಿಗೆ/ಸಂಸ್ಥೆಗಳಿಗೆ ನೆರವು ನೀಡುವುದು.
6. ಕನ್ನಡ ಪ್ರಕಾಶನೋದ್ಯಮದಲ್ಲಿ ತೊಡಗಿರುವ ಇತರ ಸರ್ಕಾರಿ, ಅರೆಸರ್ಕಾರಿ, ಸ್ವಾಯತ್ತ, ಖಾಸಗಿ ಸಂಸ್ಥೆಗಳ ಹಾಗೂ ವಿಶ್ವವಿದ್ಯಾನಿಲಯಗಳ ಸಹಕಾರದೊಂದಿಗೆ ಕನ್ನಡ ಪುಸ್ತಕ ಪ್ರಪಂಚವನ್ನು ಬೆಳೆಸುವುದು.
7. ರಾಜ್ಯದಲ್ಲಿ ಪುಸ್ತಕ ಆಂದೋಲನಕ್ಕೆ ಅಗತ್ಯವಾದ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.
8. ಕನ್ನಡದಲ್ಲಿ ಪ್ರಕಟವಾಗುವ ಉತ್ತಮವಾದ ಎಲ್ಲಾ ಪ್ರಥಮಾವೃತ್ತಿ ಪುಸ್ತಕಗಳನ್ನು ಸಗಟಾಗಿ ಖರೀದಿಸುವ ಮೂಲಕ ಕನ್ನಡ ಪುಸ್ತಕ ಪ್ರಕಾಶಕರಿಗೆ, ಲೇಖಕ-ಪ್ರಕಾಶಕರಿಗೆ ನೆರವು ನೀಡುವುದು.
9. ಉತ್ತಮ ಎಂದು ನಿರ್ಣಯಿಸಲಾದ ಯುವ ಲೇಖಕರ ಮೊದಲನೇ ಪುಸ್ತಕ ಪ್ರಕಟಣೆಗೆ ಆರ್ಥಿಕ ನೆರವು ನೀಡುವುದು.
10. ಕನ್ನಡ ಪುಸ್ತಕ ಮಾರಾಟ ಆಂದೋಲನಕ್ಕೆ ಚಾಲನೆ ನೀಡಲು ಪ್ರತಿವರ್ಷ ರಾಜ್ಯಮಟ್ಟದ ಬೃಹತ್ ಪುಸ್ತಕ ಮೇಳವನ್ನು ಏರ್ಪಡಿಸುವುದು.
11. ಪುಸ್ತಕ ಸಂಸ್ಕೃತಿಯ ಪ್ರಸಾರಕ್ಕಾಗಿ ಪುಸ್ತಕಗಳನ್ನು ಕುರಿತ ವಿಚಾರ ಸಂಕಿರಣ, ಕಮ್ಮಟಗಳನ್ನು ಏರ್ಪಡಿಸುವುದು.
12. ಆಯಾ ವರ್ಷದಲ್ಲಿ ಅತ್ಯುತ್ತಮ ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶಕರಿಗೆ ವರ್ಷದ ಶ್ರೇಷ್ಠ ಪ್ರಕಾಶಕ ಪ್ರಶಸ್ತಿ ನೀಡುವುದು.
13. ಪುಸ್ತಕ ಸೌಂದರ್ಯದ ದೃಷ್ಟಿಯಿಂದ ಅತ್ಯುತ್ತಮ ಪುಸ್ತಕಗಳನ್ನು ಪ್ರೋತ್ಸಾಹಿಸಲು ಪುಸ್ತಕ ಸೊಗಸು ಯೋಜನೆಯ ಮೂಲಕ ಬಹುಮಾನ ನೀಡುವುದು.

**ವಿ. ಎನ್. ಮಲ್ಲಿಕಾರ್ಜುನ ಸ್ವಾಮಿ**
ಆಡಳಿತಾಧಿಕಾರಿಗಳು

**ಡಾ|| ಎಚ್. ಜಿ. ಲಕ್ಕಪ್ಪ ಗೌಡ**
ಅಧ್ಯಕ್ಷರು

ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿರಿಸುವ ಸಂದರ್ಭದಲ್ಲಿ ತನ್ನೆಲ್ಲ ಓದುಗ ಬಂಧುಗಳಿಗೆ 'ಹೊಸತು' ಶುಭಾಶಯವನ್ನು ಕೋರುತ್ತದೆ. ಜನವರಿ ೨೦೦೦ರ ಈ ವಿಶೇಷ ಸಂಚಿಕೆಯು ಓದುಗರಿಗೆ ತೃಪ್ತಿ ತರುತ್ತದೆಂಬ ಆಶಯವನ್ನು ನಾವು ಹೊತ್ತಿದ್ದೇವೆ. ಸಂಸ್ಕೃತಿ - ಸಾಹಿತ್ಯ - ಇತಿಹಾಸ - ವಿಜ್ಞಾನ - ಕೃಷಿ - ಆರ್ಥಿಕತೆ - ರಾಜಕೀಯ ಮುಂತಾದ ಕ್ಷೇತ್ರಗಳ ಅನೇಕ ವಿಷಯಗಳ ಪರಿಚಯ ಹಾಗೂ ಚರ್ಚೆ ಇಲ್ಲಿದೆ. ಆಯಾ ವಿಷಯಗಳಲ್ಲಿ ಪರಿಣತಿ ಹೊಂದಿರುವ ವಿದ್ವಾಂಸರು ತಮ್ಮ ಅನುಭವಗಳಿಂದ ಮೂಡಿಬಂದ ಹತ್ತಾರು ಅಂಶಗಳನ್ನು ನಮ್ಮ ಮುಂದಿರಿಸಿದ್ದಾರೆ. ಮುಂದಿನ ಕ್ರಿಯಾಶೀಲತೆಗೆ ಅವು ಹಾದಿ ಮಾಡಿಕೊಡುತ್ತವೆಂಬ ನಂಬಿಕೆ ನಮ್ಮದು. ಕ್ರಿಯೆಗೆ ಅನುವುಮಾಡಿಕೊಡದ ಚರ್ಚೆಗಳು ಕೇವಲ ಬೌದ್ಧಿಕ ಕಸರತ್ತುಗಳಾಗಿಬಿಡುವ ಸಾಧ್ಯತೆ ಇದೆ. ಬೌದ್ಧಿಕ ಆಯಾಮಗಳಿಗೆ ತಮ್ಮವೇ ಆದ ಶ್ರೇಷ್ಠತೆ ಮತ್ತು ಸ್ಥಾನಗಳಿವೆಯಾದರೂ ಅದು ಮಾತಿನಲ್ಲಿ ಮುಗಿಯುವಂತಿದ್ದರೆ ನಿರರ್ಥಕವೇನೋ ಎಂಬ ಆತಂಕ ಯಾವಾಗಲೂ ಇದ್ದೇ ಇರುತ್ತದೆ. ಈ ನಿಟ್ಟಿನಲ್ಲಿ ವಿಸ್ತಾರವಾದ ಹರಹನ್ನುಳ್ಳ ವಿಶೇಷ ಸಂಚಿಕೆಯನ್ನು ಹೊರತರಲು ಸಹಕಾರ ನೀಡಿರುವ ಎಲ್ಲ ಲೇಖಕರಿಗೆ 'ಹೊಸತು' ಸಂಪಾದಕ ಮಂಡಲಿ ಹಾಗೂ ಪ್ರಕಾಶಕರು ವಂದನೆಗಳನ್ನು ಸಲ್ಲಿಸುತ್ತಾರೆ. ಜಾಹಿರಾತುದಾರರಿಗೆ ಸಹ ನಾವು ಆಭಾರ ಮನ್ನಿಸುತ್ತೇವೆ. ಮುಂದೆಯೂ ಇದೇ ಸಹಕಾರ ನೀಡಬೇಕೆಂದು ವಿನಂತಿಸಿಕೊಳ್ಳುತ್ತೇವೆ.

ಓದುಗರಿಗೆಲ್ಲಾ ಶುಭಾಶಯ ಕೋರುವುದು ಕೇವಲ ಔಪಚಾರಿಕವೆನಿಸಿದರೆ ಆಶ್ಚರ್ಯವಿಲ್ಲ. – ಏಕೆಂದರೆ ಪ್ರತಿವರ್ಷದಂತೆ ಈ ಹೊಸವರ್ಷವೂ ಆರಂಭವಾಗಿದೆ ಮತ್ತು ಮುಕ್ತಾಯವಾಗುತ್ತದೆ. ಕ್ರಿಸ್ತಶಕೆಯಾಗಲಿ ಕಲಿಯುಗದ ಗಣನೆಯಾಗಲಿ ಕಾಲವಿಭಾಗವನ್ನು ಮಾಡಿ ಯಾವುದೋ ಹಂತಕ್ಕೆ ಹಳೆಯದು ಮುಗಿಯಿತು, ಇನ್ನು ಪೂರ್ತಿ ಹೊಸದೇನೋ ಅಸ್ತಿತ್ವಕ್ಕೆ ಬರುವಂತಾಗುತ್ತದೆ ಎಂದು ಹೇಳುವ ಸಾಮರ್ಥ್ಯವನ್ನು ಪಡೆದಿಲ್ಲ. ಕಾಲಚಕ್ರವು ಇಂತಹ ವಿಭಾಗವನ್ನು ಲೆಕ್ಕಿಸದೆ ಉರುಳುತ್ತಿರುತ್ತದೆ. ನಮ್ಮ ಲೇಖಕರೊಬ್ಬರು ಹೇಳಿರುವಂತೆ 'ಭಾಗ್ಯಪಂಕ್ತಿಯು ಚಕ್ರಾರಪಂಕ್ತಿಯಂತೆ ಉರುಳುತ್ತಿರುತ್ತದೆ.' ಭೂವಿಜ್ಞಾನಿಗಳು ವಿಶ್ವದ ಆಗುಹೋಗುಗಳನ್ನು ಅಳೆಯುವಾಗ ಕೋಟಿ–ಕೋಟಿ ವರ್ಷಗಳ ಮಾತನ್ನಾಡುತ್ತಾರೆ; ಎರಡು ಅಥವಾ ಆರು ಸಾವಿರ ವರ್ಷಗಳು ಅವರ ಮಾಪನದಲ್ಲಿ ಲೆಕ್ಕಕ್ಕೆ ಬಾರದಷ್ಟು ಕಡಿಮೆ ಬೆಲೆಯವು. ಆದರೆ ವ್ಯಕ್ತಿಯ ಹಾಗೂ ರಾಷ್ಟ್ರಗಳ ಇತಿಹಾಸದಲ್ಲಿ ಒಂದು ವರ್ಷವಾಗಲಿ ಒಂದು ದಶಕವಾಗಲಿ ಅಷ್ಟು ನಗಣ್ಯವಾದ ಕಾಲವಲ್ಲ. ಎಷ್ಟೋ ಜನರಿಗೆ ಜೀವನ ಎಷ್ಟು ಯಾಂತ್ರಿಕವಾಗಿದೆಯೆಂದರೆ ಅವರ ನಿನ್ನೆಗಳಿಗೂ ನಾಳೆಗಳಿಗೂ ಗಣನೀಯವಾದ ವ್ಯತ್ಯಾಸ ಕಾಣುವುದಿಲ್ಲ. ಡಿಕಿನ್ಸ್ ತನ್ನೊಂದು ಕಾದಂಬರಿಯಲ್ಲಿ ಚಿತ್ರಿಸಿರುವಂತೆ ಅವರ ದುರ್ಭರ ಜೀವನದಲ್ಲಿ ಒಂದೇ ರಾಗ : ಅದೇ ಆತಂಕ, ಅದೇ ವ್ಯಾಮೋಹ, ಅದೇ ಖಿನ್ನತೆ ಮತ್ತು ಅದೇ ಭರವಸೆ. ನಮ್ಮ ದೇಶದ ಸದ್ಯದ ಸಂದರ್ಭದಲ್ಲಂತೂ ಇದು ಸರ್ವಥಾ ಸತ್ಯವಾಗಿದೆ. ಕ್ರಮೇಣ ಹೆಚ್ಚಿನ ಉಲ್ಲಾಸದ, ಉತ್ಸಾಹದ, ಜೀವನ ನಮ್ಮದಾಗುತ್ತದೆಂಬ ಆಸೆ ಹಾಗೆಯೇ ಜಡ್ಡುಗಟ್ಟಿ ಕೂತಿದೆ. ತಲೆಯೆತ್ತಿ ನಿಂತ ರಾಷ್ಟ್ರ ನಮ್ಮದು ಎಂದು ಹರ್ಷದಿಂದ ಹೇಳಿಕೊಳ್ಳುವ ಅವಕಾಶ ನಮಗಿನ್ನೂ ದೊರಕಿಯೇ ಇಲ್ಲ. ನಮ್ಮ ರಾಜಕೀಯ ನಾಯಕರನೇಕರು ಅತಿಹುರುಪಿನಿಂದ ಅಭಿವೃದ್ಧಿಯ ಮಜಲನ್ನು ಮುಟ್ಟಿದ್ದೇವೆಂಬ ಭ್ರಮೆಯನ್ನು ಜನತೆಯ ಮನಸ್ಸಿನಲ್ಲಿ ತುಂಬಲು ಹವಣಿಸುತ್ತಿದ್ದಾರೆ. ಆದರೆ ಜನರ ದಿನನಿತ್ಯದ ಜೀವನಾನುಭವ ಅದನ್ನು ಸುಳ್ಳಾಗಿಸುತ್ತಿದೆ. ಆರ್ಥಿಕ - ಸಾಮಾಜಿಕ - ಸಾಂಸ್ಕೃತಿಕ ಜೀವನ ಹದಗೆಡುತ್ತಿದೆ. ಹಾಗಿದ್ದರೂ ನೆಮ್ಮದಿಯನ್ನು ತಂದುಕೊಳ್ಳಬೇಕೆಂದು ನಿರೀಕ್ಷಿಸುವುದು ಅತಿಯೆನಿಸುತ್ತದೆ. ಬದಲಾವಣೆಯ ಮೂಲಕ ಬದುಕನ್ನು ಹಸನಾಗಿಸುವುದೊಂದೇ ಉಳಿದ ದಾರಿ.

ಒಂದೆರಡು ಘಟನೆಗಳನ್ನು ನೋಡಿದರೆ ಕೂಡ ನಮ್ಮ ಸನ್ನಿವೇಶದ ಪೂರ್ಣ ಪರಿಚಯವಾಗುವಂತಿದೆ. ಎರಡು ಸಾವಿರದನೆಯ ಇಸವಿ ಕೊನೆಗೊಳ್ಳುವ ತಿಂಗಳಲ್ಲಿ ಮಡಿಕೇರಿಯಲ್ಲಿ ನಡೆದುದನ್ನು ನೆನೆಸಿದರೆ ನಮ್ಮ ಆಧುನಿಕತೆ ಯಾವ ಮಟ್ಟದ್ದು ಮತ್ತು ನಮ್ಮ ನಾಗರಿಕತೆಯ ಲಕ್ಷಣ ಎಂಥದು ಎಂಬುದು ಸ್ಪಷ್ಟವಾಗುತ್ತದೆ. ಮುಕ್ತವಾಗಿ ಒಂದು ವಿಚಾರ ಸಂಕಿರಣ ನಡೆಸಲಾಗದಷ್ಟು ಬಂಧನವನ್ನು ಹೇರಲು ನಮ್ಮ ಸಾಂಸ್ಕೃತಿಕ ಗೂಂಡಾಗಳಿಗೆ ಸಾಧ್ಯವಾಗುತ್ತಿದೆ. ಇದನ್ನು ಗಂಭೀರವಾಗಿ ಪರಿಗಣನೆಗೆ ತೆಗೆದುಕೊಳ್ಳದಂತಹ ಸರ್ಕಾರ ನಮ್ಮದು. ಮತೀಯ ವಿಷಾನಿಲವನ್ನು ಹರಡುವವರಿಗೆ ಸ್ವಾತಂತ್ರ್ಯ ಮತ್ತು ಅದನ್ನು ಹತ್ತಿಕ್ಕಲು ಶ್ರಮಿಸುವವರಿಗೆ ಅಡಚಣೆ, ಇದು ನಮ್ಮ ಸಾಂಸ್ಕೃತಿಕ ವಲಯದ ಸನ್ನಿವೇಶ. ಮತೀಯತೆಗೆ ವಿರೋಧಿ ತಾನು ಎಂದು ಸಾರಿಕೊಳ್ಳುವ ಕೃಷ್ಣ ಸರ್ಕಾರ ಯಥಾಪ್ರಕಾರ ಕಾಂಗ್ರೆಸ್ ಸಂಪ್ರದಾಯದಂತೆ ಕುರುಡು ನಿಷ್ಕ್ರಿಯತೆಯನ್ನು ತೋರಿದೆ. ಇಂತಹ ಪ್ರತಿಕ್ರಿಯೆಯು ಫ್ಯಾಸಿಸ್ಟ್ ಧೋರಣೆಯು ವ್ಯಾಪಕವಾಗಿ ವರ್ಧಿಸಲು ಅನುಕೂಲ ಮಾಡಿಕೊಡುತ್ತದೆಂಬುದು ಇತಿಹಾಸದ ಪ್ರಾಥಮಿಕ ಪಾಠ ಕಲಿತವರಿಗೂ ತಿಳಿದಿದೆ; ಆದರೆ ಕಾಂಗ್ರೆಸ್ ನಾಯಕರಿಗೆ ಅದು ಅಪಥ್ಯ. ಚುನಾವಣೆ ರಾಜಕೀಯವೊಂದರಲ್ಲೇ ಮುಳುಗಿರುವ ಅವರಿಗೆ ಸಾಂಸ್ಕೃತಿಕ ಲೋಕದ ಪರಿವೆಯೂ ಇಲ್ಲ, ಗೊಡವೆಯೂ ಇಲ್ಲ. ಮತೀಯ ದುಷ್ಪಭಾವನೆಯ ಪ್ರಸಾರ ಹೇಗೆ ನಡೆಯುತ್ತದೆಂದು ಚರ್ಚಿಸುವ ಒಂದು ಗೋಷ್ಠಿ ಸಹ ಮಡಿಕೇರಿಯಲ್ಲಿ ನಡೆಯಲು ಸಾಧ್ಯವಾಗದಿದ್ದರೆ ಅಭಿಪ್ರಾಯ ವಿನಿಮಯಕ್ಕೆ ಬೇಕಾದ ವಾತಾವರಣ ಎಷ್ಟು ಕಲುಷಿತವಾಗಿದೆಯೆಂಬುದು ತಿಳಿಯುತ್ತದೆ. ಚಿಕ್ಕಮಗಳೂರಿನ ಬಳಿಯ ಬಾಬಾಬುಡನ್‌ಗಿರಿಯನ್ನು ಆ ಹೆಸರಿನಿಂದ ಕರೆಯಕೂಡದೆಂದು ಆದೇಶ ಹೊರಡಿಸುವ ಮಟ್ಟಕ್ಕೆ ಕೆಲವು ಮತೀಯ ಸಂಘಟನೆಗಳು ಬಂದಿವೆಯೆಂದರೆ ಸರ್ಕಾರಕ್ಕೆ ಅದು ಆತಂಕದ ವಿಷಯವಾಗಬೇಕು. ಆದರೆ ಬೌದ್ಧಿಕ - ಸಾಂಸ್ಕೃತಿಕ ದಿವಾಳಿತನವನ್ನು ಘೋಷಿಸಿ ಕೊಂಡಿರುವ ನಮ್ಮ ಸರ್ಕಾರಕ್ಕೆ ಅದರತ್ತ ಗಮನ ಹರಿಸಲು ಸಮಯವಿಲ್ಲ. ಆದರೆ ಜನತೆ ಹಾಗೆ ನಡೆದುಕೊಳ್ಳಲಾರದು.

ಇನ್ನೊಂದು ಘಟನೆ ಇದಕ್ಕಿಂತಲೂ ಘೋರವಾದ್ದು. ಆದರೆ ಕೇಂದ್ರ ಸರ್ಕಾರ ಜಾಣತನದಿಂದ ಬಾಯಿಮುಚ್ಚಿ ಕುಳಿತಿದೆ. ನಮ್ಮ ದೇಶದಲ್ಲಿ ಮತೀಯ ರಾಜಕೀಯವನ್ನು ಕೊನೆಗಾಣಿಸಲು ಇಸ್ಲಾಂ ಧರ್ಮೀಯರಿಗೆ ಮತದಾನದ ಹಕ್ಕನ್ನು ಕೂಡಲೆ ರದ್ದುಗೊಳಿಸಬೇಕೆಂದು ಬಾಳ ಠಾಕ್ರೆ ಹೇಳಿರುವುದರ ಅಂತರಾರ್ಥ ಬಹಳಷ್ಟಿದೆ. ಅದು ಕೇವಲ ತಾತ್ಸಾರದ ಮಾತಲ್ಲ. ಅತ್ಯಂತ ಭೀಕರ ಪರಿಣಾಮಗಳಿಗೆ ಎಡೆ ಮಾಡಿಕೊಡುವಂತಹ ಸಂವಿಧಾನ ವಿರೋಧಿ, ಪ್ರಜಾಪ್ರಭುತ್ವ ವಿರೋಧಿ, ಜನ ವಿರೋಧಿ ಮಾತು ಅದು. ಬುದ್ಧಿ ಭ್ರಮಣೆಯಾಗಿರುವ ಯಾರೋ ಯಃಕಶ್ಚಿತ್ ವ್ಯಕ್ತಿಯೊಬ್ಬನ ಮಾತು ಅದಾಗಿದ್ದರೆ ಏನೋ ಹುಚ್ಚುತನವೆಂದು ಅದನ್ನು ತಳ್ಳಿಹಾಕಬಹುದಿತ್ತು. ಆದರೆ ಕೇಂದ್ರ ಸರ್ಕಾರದಲ್ಲಿ ಪಾಲ್ಗೊಂಡಿರುವ ಪಕ್ಷವೊಂದರ ಪ್ರಶ್ನಾತೀತ ನಾಯಕನ ಮಾತು ಅದು. ನಮ್ಮ ದೇಶವು ಗಣರಾಜ್ಯವಾಗಿ ಐವತ್ತು ವರ್ಷಗಳಾಗಿವೆ. ಅಷ್ಟು ವರ್ಷಗಳ ಸ್ವಯಮಾಡಳಿತದ ಫಲಶ್ರುತಿ ಠಾಕ್ರೆಯ ದ್ವೇಷಾಸೂಯೆಗಳ ನಡತೆಯಾದರೆ ನಾವು ಸಾಧಿಸಿರುವುದೇನು ? ಈ ಪ್ರಶ್ನೆ ಹಾಕಿಕೊಳ್ಳಲು ಸಿದ್ಧವಿರದ ಮನಃಸ್ಥಿತಿ ನಮ್ಮ ಪ್ರಧಾನಿಯಿಂದ ಹಿಡಿದು ಅನೇಕ ಅಧಿಕಾರಾರೂಢ ರಾಜಕೀಯ ನಾಯಕರದು. ಸ್ವತಃ ಪ್ರಧಾನಿಯೇ "ರಾಷ್ಟ್ರೀಯ ಭಾವನೆ"ಗೆ ಕೇಂದ್ರಬಿಂದುವೆಂದು ಹೆಸರಿಸಿದ್ದು ಜನರ ಶ್ರೇಯಸ್ಸಿಗೆ ಮೂಲಭೂತವೆನಿಸುವ ಆಕಾಂಕ್ಷೆಗಳನ್ನಲ್ಲ. ಅವರ ಪ್ರಕಾರ ಒಂದು ಮಂದಿರದ ನಿರ್ಮಾಣವಾದರೆ ನೂರು ಕೋಟಿ ಭಾರತೀಯರು ಹಾಲನ್ನುಂಡು ಸ್ವಾಸ್ಥ್ಯದಿಂದ ಬಾಳುವಂತಾಗುತ್ತಾರೆ! ಅಂದರೆ, ಅವರ ದೃಷ್ಟಿಯಲ್ಲಿ, ಜನರ ಮನಸ್ಸನ್ನು ಧ್ವಂಸಗೊಳಿಸಿದ ಮಸೀದಿಯ ಧ್ವಂಸ ಒಂದು ಸಾಂಸ್ಕೃತಿಕ ಸಾಧನೆ; ಜನರ ಹಿತವನ್ನು ನುಚ್ಚುನೂರು ಮಾಡಿರುವ 'ಆರ್ಥಿಕ ಸುಧಾರಣೆ' ಇತ್ಯಾದಿ ವಿಷಯಗಳ ಬಗ್ಗೆ ಯಾರೂ ವಿಚಲಿತರಾಗಬೇಕಾಗಿಲ್ಲ; ಮಂದಿರವೇ ಪರಮೋದ್ದೇಶ, ಅದೇ ಮೋಕ್ಷದ ಹಾದಿ. ಮಸೀದಿಯನ್ನು ಸ್ಫೋಟಿಸಲಾಯಿತೆಂದು ಅಪರೂಪದ ಸತ್ಯಸಂಗತಿಯನ್ನು ಹೊರಗೆಡಹಿದ ಆರ್. ಎಸ್. ಎಸ್. ನಾಯಕ ಸುದರ್ಶನ್ ಅವರು ಬಹಳ ಬೇಗನೆ ಅದು ಭಾರತೀಯರ ಭಾವನೆಗಳ ಸ್ಫೋಟವೆಂಬಂತಹ ಮಾತುಗಳನ್ನಾಡಿದ್ದಾರೆ. "ಭಾರತೀಯ" ಎಂಬ ಪದದ ನಿರ್ವಚನದಲ್ಲೇ ತಕರಾರು ಬರುವಂತಹ ಪ್ರಸಂಗ ಇದು. ಮಸೀದಿಯ ಸ್ಫೋಟದಿಂದ ಪುಳಕಿತರಾಗದವರು ಭಾರತೀಯರಲ್ಲವೆಂದು ತೀರ್ಮಾನಿಸುವುದು ಫ್ಯಾಸಿಸ್ಟ್ ಚಿಂತನೆಯ ಇನ್ನೊಂದು ಮುಖ. ಆ ಮುಖವನ್ನು ತಮ್ಮದಾಗಿಸಿಕೊಳ್ಳದವರಿಗೆ ರಾಷ್ಟ್ರದ ಇಡೀ ಜನತೆಯ ವ್ಯಕ್ತಿತ್ವ, ಅವರ ಆಕಾಂಕ್ಷೆಗಳ ಪೂರೈಕೆ, ಇವೇ ಮಹತ್ತರ ಅಂಶಗಳಾಗುತ್ತವೆ.

ನಮ್ಮ ಇಂದಿನ ಕೇಂದ್ರದ ಸಮ್ಮಿಶ್ರ ಸರ್ಕಾರದಲ್ಲಿ ಪಾಲ್ಗೊಂಡಿರುವ ಪಕ್ಷಗಳಿಗೆ ಈ ವಿದ್ಯಮಾನಗಳು ಇನ್ನೂ ಗಾಬರಿ ತಂದಿಲ್ಲದಿರುವುದು ಅನಾರೋಗ್ಯಕರವಾಗಿದೆ. ವಾಗಾಡಂಬರದಲ್ಲಿ ಮೆರೆಯುವವರಿಗೆ ವಸ್ತುಸ್ಥಿತಿ ಗೋಚರಿಸುವುದಿಲ್ಲ. ಅಂತೆಯೇ, ಸದ್ಯದ ಅವಶ್ಯಕತೆಗಳನ್ನಷ್ಟೇ ಆದ್ಯತೆಯನ್ನಾಗಿ ಕಲ್ಪಿಸಿಕೊಂಡವರಿಗೆ ಕೂಡ. ಕೇಂದ್ರದ ಗೃಹಮಂತ್ರಿ ಒಂದು ಬುದ್ಧಿವಂತಿಕೆಯ ಆಗರ. ಅವರ ಪ್ರಕಾರ ಮಸೀದಿಯ ಧ್ವಂಸ ಮಾಡುವುದು ಆಸ್ತಿಯ ಹಗರಣಗಳಲ್ಲಿ ಭಾಗಿಯಾಗುವುದರಿಂದ ಭಿನ್ನವಾದ್ದು. ಇದು ರಾಜಕೀಯ ಚಳುವಳಿಯಾದ್ದರಿಂದ ಅಪರಾಧವೆನಿಸಿಕೊಳ್ಳುವುದಿಲ್ಲ. ಅದ್ವಾನಿಯವರ ಹೆಸರು ಹವಾಲಾ ಪಟ್ಟಿಯಲ್ಲಿದ್ದಿತೆಂಬುದನ್ನು ದೊಡ್ಡದು ಮಾಡದೆಯೇ ಬೇರೆ ಪ್ರಶ್ನೆಗಳನ್ನೆತ್ತಬೇಕಾಗಿದೆ.

**ಓದುಗರಿಗೆ, ಜಾಹಿರಾತುದಾರರಿಗೆ, ಹಿತೈಷಿಗಳಿಗೆ 'ಹೊಸತು' ಬಳಗದ, ನವಕರ್ನಾಟಕ ಪ್ರಕಾಶನದ ಹೊಸ ವರ್ಷದ ಶುಭಾಶಯಗಳು**

ಬಾಗೂರು-ನವಿಲೆ, ಕೆಂಟಕಿ, ಕಾರ್ಗಿಲ್, ಸೌಂದರ್ಯ ಸ್ಪರ್ಧೆ, ಮುಂತಾದ ಪ್ರಕರಣಗಳಲ್ಲಿ ಭಾಗವಹಿಸಿದವರು ಚಳುವಳಿಗಳಲ್ಲಿ ಭಾಗವಹಿಸಿದ್ದವರೇ ತಾನೆ ? ಹಾಗೆ ಪ್ರತಿಭಟಿಸಿದವರು ಏನನ್ನೂ ಧ್ವಂಸ ಮಾಡದಿದ್ದರೂ ಅವರ ಮೇಲೆ ಮೊಕದ್ದಮೆಗಳನ್ನು ಹೂಡಿರುವುದಕ್ಕೆ ಗೃಹಮಂತ್ರಿಯ ಸಮಜಾಯಿಷಿ ಏನು ? ಕೇಂದ್ರ ಸರ್ಕಾರದಲ್ಲಿ ಪಾಲ್ಗೊಂಡಿರುವ ಪಕ್ಷಗಳು ಈ ಪ್ರಶ್ನೆಗೆ ಉತ್ತರ ಪಡೆಯಬೇಕು, ಉತ್ತರ ಕೊಡಬೇಕು.

ಹೊಸ ವರ್ಷ ಮತ್ತು ಶತಮಾನದಲ್ಲಿ ಭಾರತದ ಕೃಷಿ, ಉದ್ಯಮ, ಬ್ಯಾಂಕಿಂಗ್, ಮುಂತಾದುವೆಲ್ಲಾ ಹೇಗಿರಬಹುದೆಂಬ ಕಲ್ಪನೆ ಸುಲಭವಾಗಿ ಮಾಡಿಕೊಳ್ಳಬಹುದು. ಮಾಹಿತಿ ತಂತ್ರಜ್ಞಾನವೆಂಬ ಕಲ್ಪವೃಕ್ಷದಿಂದ ಹಣ್ಣುಗಳು ಉದುರುತ್ತಲೇ ಇರುತ್ತದೆಂಬ ತಪ್ಪು ಲೆಕ್ಕಾಚಾರದಿಂದ ಬೇರೆ ಉದ್ಯಮಗಳನ್ನು ಹಾಳುಗೆಡವುತ್ತಾ ನಮ್ಮ ಆರ್ಥಿಕ ಭದ್ರತೆಯನ್ನು ಕಳೆದುಕೊಳ್ಳುತ್ತಿದ್ದೇವೆ. ವಿಶ್ವ ಬ್ಯಾಂಕ್ ಹೇಳಿದ್ದೇ ವೇದವಾಕ್ಯವೆಂದು ನಂಬುವ ನಾಯಕರು ದೇಶದ ಹಿತಶತ್ರುಗಳಲ್ಲದೆ ಬೇರೇನೂ ಅಲ್ಲ. ಆ ಬ್ಯಾಂಕಿನ ಆಣತಿಯಂತೆ ವಿದ್ಯುದ್ದರವನ್ನು ಏರಿಸುವ 'ಸ್ವತಂತ್ರ' ರಾಜಕಾರಣ ನಮ್ಮದಾಗಿದೆ ! ಸಾರ್ವಜನಿಕ ಕ್ಷೇತ್ರದ ಉದ್ಯಮಗಳನ್ನು ನಾಶಗೊಳಿಸುವುದರಲ್ಲಿ ಹೆಮ್ಮೆಯನ್ನು ಮೆರೆಯುವ ಆರ್ಥಿಕ ನೀತಿಯು ದೇಶದ ಸ್ವಾವಲಂಬನೆಯ ಗುರಿಯನ್ನು ಸಂಪೂರ್ಣವಾಗಿ ತ್ಯಜಿಸುವುದರ ಸೂಚನೆಯಾಗುತ್ತಿದೆ.

ವಿಜ್ಞಾನ-ತಂತ್ರಜ್ಞಾನದ ಕ್ಷೇತ್ರದ ವಿಪರ್ಯಾಸಗಳು ಯಾರನ್ನಾದರೂ ಇಂದು ಸ್ತಂಭೀಭೂತರನ್ನಾಗಿಸುತ್ತವೆ. ತಿರುಪತಿಯಲ್ಲಿ ಇತ್ತೀಚೆಗೆ ನಡೆದ ಒಂದು ಗೋಷ್ಠಿಯಲ್ಲಿ ಅರವತ್ತು ವರ್ಷಗಳ ಹಿಂದೆ ನಗೆಪಾಟಲಿಗೆ ಗುರಿಯಾದ ಸಂಗತಿಯೊಂದನ್ನು ವಿಜ್ಞಾನಿಯೆಂದು ತನ್ನನ್ನು ತಾನು ಗುರುತಿಸಿಕೊಳ್ಳುವವನೊಬ್ಬ ಮತ್ತೆ ವಿಜೃಂಭಣೆಯಿಂದ ಸಾರಿದ: ವಿಮಾನ, ಅಂತರ-ಗ್ರಹ ಸಂಚಾರ, ಇವೆಲ್ಲಾ ನಮ್ಮ ಪ್ರಾಚೀನರ ಯಶಸ್ವೀ ಸಾಧನೆಗಳು, ಎಂದು. ಇದನ್ನೇ ಎರಡು ತಿಂಗಳ ಹಿಂದೆ ಕೇಂದ್ರ ಮಾನವ ಸಂಪನ್ಮೂಲ ಸಚಿವರು ದೇಶದ ಉನ್ನತ ಮಟ್ಟದ ವಿಜ್ಞಾನಿಗಳ ಸಭೆಯಲ್ಲೂ ಉದ್ಗರಿಸಿದ್ದರು. ಅಲ್ಲಿ ಸೇರಿದ್ದ ನೂರಕ್ಕೂ ಹೆಚ್ಚು ವಿಜ್ಞಾನಿಗಳ ಪೈಕಿ ಯಾರೊಬ್ಬರೂ ಬಾಯಿಬಿಟ್ಟು ಆ ತೀರ್ಮಾನಗಳನ್ನು ಪ್ರಶ್ನಿಸಲಿಲ್ಲ. ಪುರಾವೆಗಳನ್ನು ಒದಗಿಸಬೇಕೆಂದು ಆಗ್ರಹಿಸಲಿಲ್ಲ. ದೇಶದ ಪ್ರಧಾನಿಗೆ ವಿಜ್ಞಾನ ಸಲಹಾ ಮಂಡಲಿಯೊಂದಿದೆ. ಅದರ ಸದಸ್ಯರಲ್ಲಿ ಕೆಲವರ ವೈಜ್ಞಾನಿಕ ಸಾಧನೆಗಳೇನೆಂಬುದು ಆ ಮಂಡಲಿಯ ಇತರ ಸದಸ್ಯರಿಗೆ ಸಹ ತಿಳಿದಿಲ್ಲ ! ಯಾರೋ ಒಬ್ಬ ತಿವಾರಿ ಎಂಬ ಮಹಾಶಯ ಈ ಮಂಡಲಿಯಲ್ಲಿದ್ದಾನೆ. ಡೆಹರಾಡೂನಿನಲ್ಲಿ ಅರಣ್ಯ ಇಲಾಖೆಯ ಸಿಬ್ಬಂದಿಯವನು ಆತ. ಕೇಂದ್ರ ಸರ್ಕಾರದ ವಿಜ್ಞಾನ ಸಲಹಾ ಮಂಡಲಿಗೆ ಸೇರ್ಪಡೆಯಾಗಲು ಅಷ್ಟು ಅರ್ಹತೆ ಸಾಕು ! ಯಾವುದೋ ಆರ್. ಎಸ್. ಎಸ್. ಪ್ರಚಾರಕನ ಕೃಪೆ ಈತನನ್ನು ಶ್ರೇಷ್ಠ ವಿಜ್ಞಾನಿಯ ಪಟ್ಟಕ್ಕೇರಿಸುತ್ತದ.

ನಮ್ಮ ವಿಶ್ವವಿದ್ಯಾಲಯಗಳ ಸ್ಥಿತಿಯಂತೂ ಜ್ಞಾನದಾಹವನ್ನು ನಿರ್ಮೂಲ ಮಾಡುವ ಉದ್ದೇಶವನ್ನು ಸಾರುವಂತಿದೆ. ಸರ್ಕಾರಗಳು ಧನಸಹಾಯ ಮಾಡುವ ಜವಾಬ್ದಾರಿಯಿಂದ ನುಣುಚಿಕೊಂಡು ವಿಶ್ವವಿದ್ಯಾಲಯಗಳನ್ನು ನಿರ್ಗತಿಕರನ್ನಾಗಿಸುತ್ತಿವೆ. ಯಾರಿಗೆ ಆರ್ಥಿಕ ಸಾಮರ್ಥ್ಯವಿದೆಯೋ ಅವರು ಹಣ ತೆತ್ತು ವಿದ್ಯೆ ಪಡೆಯಲಿ ಎಂಬ ನೀತಿಯನ್ನು ಘೋಷಿಸಿರುವ ಸರ್ಕಾರವು ಸಾಮಾಜಿಕ ಅವಶ್ಯಕತೆಗಳನ್ನು ಗಾಳಿಗೆ ತೂರಿದೆ. ಇಂತಹ ಹಿನ್ನೆಲೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯಗಳ ಕಾಯಿದೆಯನ್ನು ಸರ್ಕಾರಿ ಸರ್ವಾಧಿಕಾರದ ಅಸ್ತ್ರವನ್ನಾಗಿ ಮಾಡಿಕೊಳ್ಳುವ ಹುನ್ನಾರದಿಂದ ತಿದ್ದುಪಡಿಗಳಿಗೆ ಗುರಿಪಡಿಸಲಾಗುತ್ತಿದೆ. ಇನ್ನೊಂದು ದಿಕ್ಕಿನಿಂದ ನೋಡಿದರೆ, ಜ್ಞಾನವು ಅನಗತ್ಯ, ಹೇಗೋ ಕೋಟ್ಯಾಧಿಪತಿಗಳಾಗಿ, ಅದಕ್ಕೆ ಅಮಿತಾಭ ಬಚ್ಚನ್ ನಡೆಸುವ ಕಾರ್ಯಕ್ರಮವೊಂದೇ ಸಾಕು, ಎಂಬ ಉಪದೇಶ ಕೇಳಿಬರುತ್ತಿದೆ. ''ಭರತನ ತಾಯಿ ಕೈಕೇಯಿ'' ಎಂದು ಹೇಳಿದರೆ ಹತ್ತು ಲಕ್ಷ ರೂಪಾಯಿಗಳನ್ನು ಪಡೆಯುವ ಸಾಂಸ್ಕೃತಿಕ ಪರಿಸರದ ರಚನೆಯಾಗುತ್ತಿದೆಯೆಂದರೆ ನಮ್ಮ ದೇಶದ ವ್ಯಕ್ತಿತ್ವ ಹೇಗೆ ರೂಪುಗೊಳ್ಳುತ್ತಿದೆಯೆಂಬುದರ ಅರಿವಾಗುತ್ತದೆ. ಇದು ಭಯಾನಕ ಬೆಳವಣಿಗೆ. ಒಂದು ಕಡೆ ಫ್ಯಾಸಿಸ್ಟ್ ಪ್ರವೃತ್ತಿ, ಇನ್ನೊಂದು ಕಡೆ ಸಾಂಸ್ಕೃತಿಕ ಲೋಕವನ್ನು ಬಂಜರು ಮಾಡುವ ಉಪಕ್ರಮ. ಇದರಿಂದ ಹೊರಬರದಿದ್ದರೆ ಹೊಸ ಶತಮಾನದಲ್ಲಿ ನಮ್ಮ ಭವಿಷ್ಯ ಇನ್ನಷ್ಟು ಕರಾಳವಾಗುತ್ತದೆ. ಕಲೆ-ಸಂಸ್ಕೃತಿಗಳು ನಮಗೆ ಹೆಚ್ಚಿನ ಆಯಾಮ ರಚಿಸಿಕೊಡುವ ಬದಲು ಭಾರವನ್ನು ಹೇರುವ ಕೆಲಸ ಮಾಡಬಾರದು. ರಾಜಕುಮಾರ್ ಪ್ರಸಂಗವೂ ಇದನ್ನೇ ತಿಳಿಸಿಕೊಡುತ್ತದೆ. ಸಿನಿಮಾ ಪ್ರಪಂಚದಲ್ಲಿ ನಮ್ಮನ್ನು ನಡುಗಿಸುವಂತಹ ಭಯಂಕರ ನಿಗೂಢ ಕಾರ್ಯಾಚರಣೆಗಳು ನಡೆಯುತ್ತಿವೆ. ಸಂಜಯ ದತ್ತನ ಮನೆಯಲ್ಲಿ ಪತ್ತೆಯಾದ ಶಸ್ತ್ರಾಸ್ತ್ರಗಳು ಹಿಂದೆಯೇ ಇದರ ಸೂಚನೆ ನೀಡಿದ್ದವು. ನಟ-ನಟಿಯರು ದುಬೈಗೆ ಹೋಗಿ 'ದಾನಿ' ದಾವೂದ್ ಇಬ್ರಾಹಿಂ ಮುಂದೆ ಕುಣಿದುಬರುತ್ತಾರೆಂದು ನಮ್ಮಲ್ಲಿ ಆಗಾಗ್ಗೆ ಮಾತುಗಳು ಕೇಳಿಬರುತ್ತಲೇ ಇವೆ. ಆದರೂ ಈ ಜನ ಮಾಡೆಲ್‌ಗಳು, ಸರ್ಕಾರದ ಜಾಹಿರಾತುಗಳಲ್ಲೂ ಇವರೇ ಮಾರ್ಗದರ್ಶಕರು. ಸಾಂಸ್ಕೃತಿಕ ರಾಷ್ಟ್ರೀಯತೆಯ ಒಣಜಂಭದ ಪ್ರದರ್ಶನದಿಂದ ಮತೀಯ ಘರ್ಷಣೆಗಳ ಕುತ್ತು ಒಂದು ಕಡೆಯಾದರೆ ಅರ್ಥರಹಿತ ಆರಾಧನಾ ಮನೋಭಾವವು ಸಾಂಸ್ಕೃತಿಕ ಜಡತೆಗೆ ಇನ್ನೊಂದು ಕಡೆಯಿಂದ ಬೆಂಬಲ ನೀಡುತ್ತಿದೆ. ಇದು ನಮ್ಮ ಔನ್ನತ್ಯಕ್ಕೆ ಮಾರ್ಗವಲ್ಲವೆಂಬುದನ್ನು ಗ್ರಹಿಸುವ ಅನಿವಾರ್ಯತೆ ನಮ್ಮದು.

ಇದೆಲ್ಲದರ ಮಧ್ಯೆ ನಮ್ಮ ಮಾಧ್ಯಮಗಳು ಅಮೆರಿಕಾ-ಬ್ರಿಟನ್‌ಗಳ ಬಗ್ಗೆ ಆಸಕ್ತಿ ವಹಿಸುವ ಸಂಭ್ರಮದಲ್ಲಿ ದೇಶದ ಜನರನ್ನು ಮರೆತುಬಿಡುತ್ತಿವೆ. ಲಂಡನ್ನಿನಲ್ಲಿ ರಾಣಿಯ ತಾಯಿ ಏನು ತಿಂದಳು, ಎಲ್ಲಿ ಬಿದ್ದಳು ಎಂಬುದನ್ನೋ, ಮಡೋನಾ ಎಲ್ಲಿ ಯಾವಾಗ ಯಾರನ್ನು ಮದುವೆಯಾಗುತ್ತಾಳೆ ಎಂಬುದನ್ನೋ ಹೇಳುತ್ತಾ ನಮ್ಮ ಸಾಮಾನ್ಯರ ಸಮಸ್ಯೆಗಳತ್ತ ನೋಟ ಬೀರಲು ನಿರಾಸಕ್ತಿ ತಾಳುವುದು ಒಂದು ರೋಗದಂತೆ ಹರಡುತ್ತಿದೆ. ಜಾಗತೀಕರಣಕ್ಕೆ ಮುಂಚಿನಿಂದಲೂ ಇದ್ದ ಉಪದ್ರವ ಇದು. ಆದರೆ ಈಗ ಅದು ಬಹಳವಾಗಿ ಉಲ್ಬಣಗೊಳ್ಳುತ್ತಿದೆ. ದುಡಿಯುವ ಜನರ ಹೋರಾಟಗಳೆಂದರೆ ಮಾಧ್ಯಮದವರಿಗೆ ಹೇಗೋ ನ್ಯಾಯಾಲಯಗಳಿಗೂ ಹಾಗೆಯೇ ಅನಗತ್ಯ ಅನಿಷ್ಟಗಳಂತೆ ಕಾಣತೊಡಗಿವೆ. ಉದಾಹರಣೆಗೆ, ಈಚಿನ ಅಂಚೆ ಕೆಲಸಗಾರರ ಮುಷ್ಕರವನ್ನೇ ನೋಡಬಹುದು. ನ್ಯಾಯಾಲಯವು ಮುಷ್ಕರದ ಬಗ್ಗೆ ಒಂದು ನಿಲುವು ತಾಳಿತು. ಮುಷ್ಕರ ನಿರತರ ಹಕ್ಕೊತ್ತಾಯಗಳನ್ನು ಬಗೆಹರಿಸದೆಯೇ ನಾವು ಅವರಿಗೆ ಪ್ರತಿಭಟನೆ, ಮೆರವಣಿಗೆ, ಇತ್ಯಾದಿಗಳನ್ನು ಮಾಡಬೇಡಿರೆಂದು ಹೇಳಲಾರಂಭಿಸಿದ್ದೇವೆ. ಲಕ್ಷಗಟ್ಟಲೆ ಇರುವ ದುಡಿಯುವ ಜನರ ಆಶೋತ್ತರಗಳನ್ನು ಹೊಸಕಿಹಾಕಿ ಕೆಲವು ಉದ್ದಿಮೆಗಳನ್ನು ಮುಚ್ಚಿಬಿಡಬೇಕೆಂದು ಹೇಳಹೊರಟಿದ್ದೇವೆ. ಪೂರ್ವಸಿದ್ಧತೆಗಳ ಅಗತ್ಯವೇ ಇಲ್ಲವೆಂಬಂತೆ ರಾತ್ರೋರಾತ್ರಿ ಉತ್ಪಾದನಾ ಘಟಕಗಳನ್ನು ಮುಚ್ಚುವುದೆಂದರೆ ಜನಸಾಮಾನ್ಯರನ್ನು ಬಂಗಾಳ ಕೊಲ್ಲಿಗೆ ಎಸೆದಂತೆ. ನಮ್ಮದೇನಾದರೂ ಲಂಗು-ಲಗಾಮಿಲ್ಲದ ಮಿಲಿಟರಿ ಆಡಳಿತವೋ, ಇಲ್ಲವೇ ಪಿನೋಶೆಯಂತಹವನ ಫ್ಯಾಸಿಸ್ಟ್ ಸರ್ವಾಧಿಕಾರವೋ ಎಂಬ ಗುಮಾನಿ ಬರುವಂತಹ ಘಟನೆಗಳು ದಿನೇ ದಿನೇ ಹೆಚ್ಚುತ್ತಿವೆ. ಹೀಗಿರುವಾಗ ಕತ್ತಲೆಯಿಂದ ಬೆಳಕಿನತ್ತ ನಮ್ಮ ಹಾದಿ ಬೆಳೆಯಬೇಕಾಗಿದೆ.

ನಮ್ಮ ಆಶಯಗಳಿಗೆ ಅಭಿವ್ಯಕ್ತಿ ನೀಡುವುದು ಪ್ರಜಾಪ್ರಭುತ್ವದ ಪ್ರಾಥಮಿಕ ಲಕ್ಷಣ. ಅದಕ್ಕೆ ಅವಕಾಶವಿದ್ದರೆ ಅಭಿಪ್ರಾಯಗಳನ್ನು ರೂಪಿಸುವ ಸಾಧ್ಯತೆ ಇರುತ್ತದೆ. ಅದರ ಆಧಾರದಲ್ಲಿಯೇ ಮಧ್ಯಪ್ರವೇಶದಿಂದ ಬದಲಾವಣೆ ಬರಬೇಕಾದ್ದು. ದುಡಿಯುವ ವರ್ಗವು ತನ್ನ ಹಿತದ ರಕ್ಷಣೆಗೆ ಅನುಸರಿಸುವ ನೇರ ಹಾದಿ ಇದೊಂದೇ. ಇದರ ಬುಡಕ್ಕೆ ಕೊಡಲಿ ಹಾಕುವ ಯಾವುದೇ ಕ್ರಮವೂ ಪ್ರಜಾಪ್ರಭುತ್ವ ವಿರೋಧಿ ಕ್ರಮವೆಂದೇ ಹೇಳಬೇಕಾಗುತ್ತದೆ. ದುಡಿಯುವ ವರ್ಗವು ಯಾರಲ್ಲೂ ಕೈಯೊಡ್ಡಿ ಭಿಕ್ಷೆ ಬೇಡಬೇಕಾಗಿಲ್ಲ. ತನ್ನ ಭವಿಷ್ಯ ಹಾಗೂ ರಾಷ್ಟ್ರದ ಭವಿಷ್ಯ ಒಂದೇ ಎಂದು ಅಚಲವಾಗಿ ನಂಬಿರುವ ವರ್ಗ ದುಡಿಯುವ ವರ್ಗ. ನಾಳೆಗಳ ನಿರ್ಧಾರ ಮಾಡುವುದು ಈ ವರ್ಗ. ಅಮೆರಿಕಾದಲ್ಲಿ ಯಾರು ಅಧ್ಯಕ್ಷನಾಗುತ್ತಾನೆ, ಯಾವ ಬಹುರಾಷ್ಟ್ರೀಯ ಕಂಪೆನಿಯ ಹುನ್ನಾರ ಏನಿದೆ, ವಿಶ್ವ ವ್ಯಾಪಾರ ಸಂಘಟನೆಯು ಯಾವ ಷಡ್ಯಂತ್ರ ರೂಪಿಸುತ್ತಿದೆ, ಆಂತರಿಕವಾಗಿ ಮತೀಯ ಗುಂಪುಗಳು ಹೇಗೆ ಫ್ಯಾಸಿಸ್ಟ್ ಪ್ರವೃತ್ತಿಗಳನ್ನು ಹೆಚ್ಚಿಸಿಕೊಳ್ಳುತ್ತಿವೆ, ಇತ್ಯಾದಿಗಳನ್ನು ಹೊರತಾಗಿಸಿಯೂ ದುಡಿಯುವ ಜನ ಹೋರಾಟದಲ್ಲಿ ಭಾಗಿಗಳಾಗುತ್ತಾರೆ ಮತ್ತು ದೇಶದ ನಾಳೆಗಳನ್ನು ಸುಭದ್ರವಾದ ನೆಲೆಯಲ್ಲಿ ಸ್ಥಿರಗೊಳಿಸುತ್ತಾರೆ.

ಹೊಸವರ್ಷದ ಮತ್ತು ಶತಮಾನದ ಬೆಳವಣಿಗೆಗಳು ಈ ಅರ್ಥದಲ್ಲಿ ಇತಿಹಾಸ ನಿರ್ಮಿಸುತ್ತವೆ, ನಿರ್ಮಿಸಬೇಕು. ಎಲ್ಲರಿಗೂ ಶುಭಾಶಯಗಳನ್ನು ಕೋರುವಾಗ 'ಹೊಸತು' ಇಟ್ಟುಕೊಳ್ಳುವ ನಿರೀಕ್ಷೆ ಅದು. ಆ ನಿರೀಕ್ಷೆಯ ಸಾಫಲ್ಯಕ್ಕೆ ನಾವೆಲ್ಲಾ ಜೊತೆಗೂಡೋಣ.



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨ ಸಂಚಿಕೆ - ೬ ಜನವರಿ ೨೦೦೧



**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

**ಹೊಸತು ಕಚೇರಿಯ ವಿಳಾಸ**




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೪೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

ಮುಖಪುಟ : ಕೆ. ಕೆ. ಮಕಾಳಿ
ಛಾಯಾಚಿತ್ರಗಳು : ಕೆ. ಪಿ. ಸ್ವಾಮಿ
ಚಿತ್ರಗಳು : ರವಿಕುಮಾರ್, ವಸಂತ ಹೊಸಬೆಟ್ಟು, ಗುಜ್ಜಾರ್, ಪ್ರಕಾಶ್ ಶೆಟ್ಟಿ, ಕೆ. ಗಣೇಶ ಕೋಡೂರು, ಹರಿಣಿ, ಶ್ರೀಹರಿ, ಶೇಖರ, ಸತೀಶ್ ಯಲ್ಲಾಪುರ, ಜೆ. ಎಂ. ಬೊಮ್ಮಳ್ಳಿ, ರೋಹಿಣಿ ಶೆಟ್ಟಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ






**ಚಂದಾ ವಿವರಗಳು**

ಬಿಡಿ ಸಂಚಿಕೆ ರೂ. ೧೦/-
ವಾರ್ಷಿಕ ಚಂದಾ ರೂ. ೧೦೦/-
ಎರಡು ವರ್ಷಗಳಿಗೆ ರೂ. ೧೮೦/-
ಮೂರು ವರ್ಷಗಳಿಗೆ ರೂ. ೨೫೦/-

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : [illegible]
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : [illegible]
ಕೆ. ಎಸ್. ಆರ್ ರಸ್ತೆ
ಮಂಗಳೂರು - [illegible] ☎ : [illegible]
ರಾಮಸ್ವಾಮಿ ವೃತ್ತ
ಮೈಸೂರು - [illegible] ☎ : [illegible]
ಸ್ಟೇಷನ್ ರಸ್ತೆ
ಗುಲ್ಬರ್ಗಾ - [illegible] ☎ : [illegible]

# ಸಹಕಾರ ಸಾರಿಗೆ

ಟ್ರಾನ್ಸ್‌ಪೋರ್ಟ್ ಕೋ-ಆಪರೇಟಿವ್ ಸೊಸೈಟಿ ಲಿ.,

ಕೊಪ್ಪ - 577 126




## ಹೊಸತು

ವಾರ್ಷಿಕ ವಿಶೇಷ ಸಂಚಿಕೆಯನ್ನು

ಹೊರತರುತ್ತಿರುವ

ಈ ಶುಭ ಸಂದರ್ಭದಲ್ಲಿ

ಹಾರ್ದಿಕ ಶುಭಾಶಯಗಳು




ಕಾರ್ಮಿಕ ವರ್ಗದ ಪರಿಶ್ರಮದಿಂದ 1991ರಲ್ಲಿ ಜನ್ಮ ತಾಳಿದ *'ಸಹಕಾರ ಸಾರಿಗೆ'* ಕಳೆದ ಹತ್ತು ವರ್ಷಗಳಿಂದಲೂ ಸಾರ್ವಜನಿಕ ಸೇವೆಯಲ್ಲಿದೆ. ಮೊದಲಿಗೆ ಕಾರ್ಮಿಕರೇ ಬಂಡವಾಳ ಹೂಡಿ 6 ಬಸ್ಸುಗಳಿಂದ ಪ್ರಾರಂಭಿಸಿ, ಇಂದು 55 ಬಸ್ಸುಗಳನ್ನು 50 ಮಾರ್ಗಗಳಲ್ಲಿ ಓಡಿಸುತ್ತಾ, ಮಲೆನಾಡ ಭಾಗದ ಸಾರಿಗೆ ವ್ಯವಸ್ಥೆಯ ಮುಖ್ಯವಾಹಿನಿಯಾಗಿ, ಕಾರ್ಮಿಕರಿಂದಲೇ ನಡೆಸಲ್ಪಡುತ್ತಿರುವ ರಾಜ್ಯದ ಏಕೈಕ ಸಹಕಾರ ಸಾರಿಗೆ ಸಂಸ್ಥೆಯಾಗಿ ಸದಾ ನಿಮ್ಮ ಸೇವೆಗೆ ಸಿದ್ಧವಾಗಿದೆ.

| ಶ್ರೀ ಎಸ್. ಸಿ. ತಮ್ಮಪ್ಪಗೌಡ | ಶ್ರೀ ಚಿಕ್ಕೇಗೌಡ | ಶ್ರೀ ವಿ. ರಮೇಶ್ |
| --- | --- | --- |
| ಅಧ್ಯಕ್ಷರು | ಮುಖ್ಯ ಕಾರ್ಯ ನಿರ್ವಾಹಕರು | ಉಪಾಧ್ಯಕ್ಷರು |

ಆಡಳಿತ ಮಂಡಳಿ ನಿರ್ದೇಶಕರುಗಳು

ಶ್ರೀ ಸಿ. ಹೆಚ್. ಕಮಲಾಕ್ಷ
ಶ್ರೀ ಈ. ಎಸ್. ಧರ್ಮಪ್ಪ
ಶ್ರೀ ಕೆ. ಟಿ. ಸುಂದರೇಶ್
ಶ್ರೀ ಬಿ. ಎಸ್. ಮಹೇಶ್
ಶ್ರೀಮತಿ ಅಮ್ಮಯ್ಯ

ಶ್ರೀ ಬಿ. ಆರ್. ವಿಶ್ವನಾಥ್
ಶ್ರೀ ಪಿ. ಗಾಡ್ವಿನ್ ಜಯಪ್ರಕಾಶ್
ಶ್ರೀ ಶೇಖರ್ ಹೆಗ್ಡೆ
ಶ್ರೀ ಎನ್. ಜಿ. ಹಾಲಪ್ಪಗೌಡ

*ಮತ್ತು ಸಿಬ್ಬಂದಿ ವರ್ಗ*

# ಕರ್ನಾಟಕ ರಾಜ್ಯದ ವಿದ್ಯುಚ್ಛಕ್ತಿ ಸಮಸ್ಯೆಗಳು

*ನಮ್ಮ ಹಳ್ಳಿಗಳಲ್ಲಿ ಮನೆಗೆ ಕನಿಷ್ಠ ಒಂದು ವಿದ್ಯುದ್ದೀಪ ಎಂಬ ಯೋಜನೆಯಡಿ ಹಲವು ಚಿಕ್ಕ ಚಿಕ್ಕ ಝೋಪಡಿಗಳಲ್ಲೂ ಒಂದು ಜ್ಯೋತಿ ಬೆಳಗುತ್ತಿದೆ. ಇದರಿಂದ ನಮಗೆ ಬೀಳುವ ಖರ್ಚು ನಗಣ್ಯವಾದರೂ ಇದರಿಂದಲೇ ವಿದ್ಯುದಿಲಾಖೆ ನಷ್ಟ ಅನುಭವಿಸುತ್ತಿದೆಯೆಂಬ ಮೂರ್ಖ ಮಾತು ಕೇಳಬರುತ್ತದೆ. ಬಹಳ [illegible] ದರದಲ್ಲಿ ದೊಡ್ಡ ಉದ್ಯಮಗಳಿಗೆ ಸರಬರಾಜು ಮಾಡುವ ವಿದ್ಯುತ್ತಿನಿಂದ ಮತ್ತು [illegible] ಉದ್ಯಮಗಳು ಸರಿಯಾಗಿ ಶುಲ್ಕ ಪಾವತಿ ಮಾಡದಿರುವುದರಿಂದ ಹೇರಳ ನಷ್ಟವಾಗುತ್ತಿದೆ. ಅದನ್ನು ಹೇಳದೆ ಮುಚ್ಚಿಡುತ್ತಾರೆ. ಕೃಷಿಗೆ ಶುಲ್ಕರಹಿತ ವಿದ್ಯುತ್ತನ್ನು ನೀಡಲಾಗುತ್ತಿದೆ ಮತ್ತು ಅದರ ಲಾಭ ಪಡೆಯುವವರು ಮೊದಲಿಗೆ ಬಾವಿ ತೆಗೆಸಿರಬೇಕು ಮತ್ತು ಪಂಪ್‌ಸೆಟ್ ಇಟ್ಟುಕೊಂಡಿರಬೇಕು. ಅಂದರೆ, ಸ್ವಲ್ಪ ಅನುಕೂಲಸ್ಥರಿಗೆ ಮಾತ್ರ [illegible] ಸೌಲಭ್ಯ ದೊರೆಯುತ್ತದೆ. ಅವರಿಗೆ ನೀಡಲಾಗುವ ವಿದ್ಯುತ್ತು ಎಷ್ಟು [illegible] ಮಟ್ಟದ್ದೆಂದರೆ ಅದರಿಂದ ನೀರನ್ನೆತ್ತಿ ಕೊಳ್ಳುವುದೇ ಕಷ್ಟವಾಗಿದೆ. ಒಳ್ಳೆಯ ಮಟ್ಟದಲ್ಲಿ ವಿದ್ಯುತ್ ಒದಗಿಸಿ ಸ್ವಲ್ಪ ಶುಲ್ಕ ವಿಧಿಸಿದರೆ ಅದನ್ನು ಕೊಡಲು ರೈತರು ನಿರಾಕರಿಸಲಾರರೇನೋ. ಲಂಚ ನುಂಗುವ ವಿದ್ಯುತ್ ನಿಗಮವು ವಿದ್ಯುತ್ತಿನ ಸೋರಿಕೆಯನ್ನು ತಡೆಯುವುದಿಲ್ಲ. ಹಾಗಿದ್ದರೆ ನಮಗಿರುವ ದಾರಿ ಯಾವುದು ?*

*ವಿದ್ಯುತ್ ಸಮಸ್ಯೆಯನ್ನು ಆಮೂಲಾಗ್ರವಾಗಿ ತಿಳಿದು ಸರ್ಕಾರಕ್ಕೆ ಹಲವು ಅಮೂಲ್ಯ ಯೋಜನೆಗಳನ್ನು ಸಲ್ಲಿಸಿರುವ ಪ್ರೊಫೆಸರ್ ದೇವಿಪ್ರಸಾದ್ ಸೇನ್‌ಗುಪ್ತ [illegible] ಹಲವು ಯೋಜನಾ ಸಮಿತಿಗಳ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಇಡೀ ರಾಜ್ಯದಲ್ಲಿ ಸಂಚರಿಸಿ ಪ್ರತಿ ಜಿಲ್ಲೆಯ ವಿಶಿಷ್ಟ ಸಮಸ್ಯೆಗಳನ್ನೂ ಸ್ಪಷ್ಟವಾಗಿ ಗುರುತಿಸಿ ಆಯಾ ಜಿಲ್ಲೆಗೆ ಯೋಜನಾಬದ್ಧ ಪರಿಹಾರವನ್ನೊದಗಿಸಲು ಹಲವು ನಿಷ್ಕೃಷ್ಟವಾದ ವರದಿಗಳನ್ನು ಸಲ್ಲಿಸಿದ್ದಾರೆ. ವಿದ್ಯುತ್ತನ್ನು ನುಂಗುವ ತಿಮಿಂಗಲಗಳು ಒಂದು ಕಡೆ, ವಿತರಣೆಯಲ್ಲಿ ವಿಚಕ್ಷಣೆ ಇಲ್ಲದ ಭ್ರಷ್ಟ ವ್ಯವಸ್ಥೆ ಇನ್ನೊಂದು [illegible] – ಹೀಗಾಗಿ ರೈತರೂ ಸೇರಿದಂತೆ ಗ್ರಾಹಕರು ಎಲ್ಲೆಡೆ ಹತಾಶರಾಗಿದ್ದಾರೆ. ಸೇನ್‌ಗುಪ್ತ ಅವರಂತಹ ಬದ್ಧ ಇಂಜಿನಿಯರುಗಳ ಯೋಜನೆಗಳು ಮಾತ್ರವೇ ಜನಪರವಾಗಿದ್ದು ನಮಗೆ ಪರಿಹಾರ ನೀಡಬಲ್ಲವು. ಅವರ ಸಂಕ್ಷಿಪ್ತ ನೀಲನಕ್ಷೆಯ ಪರಿಚಯ ಇಲ್ಲಿದೆ.*

ಭಾರತದಲ್ಲಿ ಮೊತ್ತಮೊದಲ ಜಲವಿದ್ಯುದಾಗಾರವನ್ನು ೧೮೯೭ರಲ್ಲಿ ಡಾರ್ಜಿಲಿಂಗ್‌ನಲ್ಲಿ ಸ್ಥಾಪಿಸಲಾಯಿತು. ಎರಡನೆಯದು ೧೯೦೨ರಲ್ಲಿ ಕರ್ನಾಟಕ (ಆಗಿನ ಮೈಸೂರು) ರಾಜ್ಯದಲ್ಲಿ ಸ್ಥಾಪಿತವಾಯಿತು. ಅಲ್ಲಿ ಉತ್ಪಾದಿತವಾದ ವಿದ್ಯುಚ್ಛಕ್ತಿಯನ್ನು ಕೋಲಾರದ ಚಿನ್ನದ ಗಣಿಗಳಿಗೆ ಸರಬರಾಜು ಮಾಡಲು ೧೪೭ ಕಿ. ಮೀ. ಉದ್ದದ ಸಾಗಣೆ ತಂತೀ ಮಾರ್ಗವನ್ನು ರಚಿಸಲಾಯಿತು. ಆ ಕಾಲಕ್ಕೆ ಅದು ಜಗತ್ತಿನಲ್ಲೇ ಅತ್ಯಂತ ದೀರ್ಘವಾದ ವಿದ್ಯುತ್ ಸಾಗಣೆ ಮಾರ್ಗವಾಗಿದ್ದಿತು. ಆ ಕೇಂದ್ರದಲ್ಲಿ ಆಗ ವಿದ್ಯುಚ್ಛಕ್ತಿಯನ್ನು ೨೫ ಹರ್ಟ್ಸ್(ಸೆಕೆಂಡಿಗೆ ೨೫ ಸೈಕಲ್ಸ್) ಆವರ್ತನ ದರದಲ್ಲಿ ಉತ್ಪಾದಿಸಲಾಗುತ್ತಿದ್ದಿತು. ಈಗಲಾದರೋ ವೋಲ್ಟೇಜ್‌ನಲ್ಲಿ ಕುಸಿತವನ್ನು ಮಿತಿಗೊಳಿಸಲೋಸುಗ ೫೦ ಹರ್ಟ್ಸ್ ಆವರ್ತನ ದರದಲ್ಲಿ ಉತ್ಪಾದಿಸುವುದು ಆಚರಣೆಯಲ್ಲಿದೆ. [ವೈಜ್ಞಾನಿಕ ಕಲ್ಪನೆಗಳ ತಿಳಿವಳಿಕೆ ಅಷ್ಟಾಗಿ ಇಲ್ಲದ ಓದುಗರ ನೆರವಿಗಾಗಿ ನಾವು ಇಲ್ಲಿ ದಿನವೂ ಬಳಸುವ ಕೆಲವು ವೈಜ್ಞಾನಿಕ ಪ್ರಕಲ್ಪನೆಗಳ ವಿವರಣೆ ನೀಡುವುದು ಉಚಿತವೆನಿಸುತ್ತದೆ. ವಿದ್ಯುಚ್ಛಕ್ತಿಯ ಹರಿವನ್ನು ಕೊಳಾಯಿ ಮೂಲಕ ಹರಿಯುವ ನೀರಿಗೆ ಹೋಲಿಸಬಹುದು. ಕೊಳಾಯಿಯಲ್ಲಿ ಹರಿಯುವ ನೀರಿನ ಒತ್ತಡವನ್ನು ವಿದ್ಯುತ್ ಹರಿವಿನ ವೋಲ್ಟೇಜ್ ಎನ್ನಬಹುದು. ಇದನ್ನು ವಿದ್ಯುನ್ಮಂಡಲದಲ್ಲಿ ವೋಲ್ಟ್‌ಗಳಲ್ಲಿ ಅಳೆಯಲಾಗುತ್ತದೆ. ನೀರಿನ ಹರಿವಿನ ದರವನ್ನು **ಕರೆಂಟ್**‌ಗೆ ಹೋಲಿಸಬಹುದು. ಇದನ್ನು ಆಂಪೇರ್‌ಗಳಲ್ಲಿ ಅಳೆಯಲಾಗುತ್ತದೆ. ವೋಲ್ಟೇಜ್ ಮತ್ತು ಕರೆಂಟುಗಳ ಗುಣಲಬ್ಧವೇ **ಪವರ್**. ಇದನ್ನು ವಾಟ್‌ಗಳಲ್ಲಿ ಅಳೆಯಲಾಗುತ್ತದೆ. ೧೦೦೦ ವಾಟ್ಸ್ (ಅಥವಾ ಒಂದು ಕಿಲೋವಾಟ್) ಪವರ್‌ಅನ್ನು ಒಂದು ಗಂಟೆ ಕಾಲ ಬಳಸಿದಲ್ಲಿ ಒಂದು ಯೂನಿಟ್ ವಿದ್ಯುತ್‌ಶಕ್ತಿ ಬಳಕೆಯಾಗಿರುತ್ತದೆಂದು ಹೇಳಲಾಗುತ್ತದೆ. ಬೇರೆ ಮಾತುಗಳಲ್ಲಿ, ೧೦೦-ವಾಟ್ಸ್ ಪವರ್‌ನ ಐದು ಬಲ್ಬುಗಳನ್ನು ೨ ಗಂಟೆಗಳ ಕಾಲ ಉರಿಸಿದಲ್ಲಿ ೧ ಕಿಲೋವಾಟ್-ಅವರ್ ಅಥವಾ ೧ ಯೂನಿಟ್ ವಿದ್ಯುಚ್ಛಕ್ತಿ ಬಳಕೆಯಾದಂತಾಗುತ್ತದೆ.]

ಕರ್ನಾಟಕದಲ್ಲಿ ಜಲ ವಿದ್ಯುದಾಗಾರಗಳನ್ನು (ಅಂದರೆ ಜಲಶಕ್ತಿ ಬಳಸಿಕೊಂಡು ಟರ್ಬೈನ್‌ಗಳನ್ನು ಸುತ್ತಿಸಿ ವಿದ್ಯುಚ್ಛಕ್ತಿ ಉತ್ಪಾದಿಸುವ ಕೇಂದ್ರಗಳನ್ನು) ನಿರ್ಮಿಸಲು ಆಕರಗಳು ಸಮೃದ್ಧವಾಗಿದ್ದುದರಿಂದಲೂ, ಡಾ|| ವಿಶ್ವೇಶ್ವರಯ್ಯನವರಂಥ ಮಹೋನ್ನತ ಎಂಜಿನಿಯರುಗಳ ಮುಂಗಾಣ್ಕೆ ದೊರೆತುದರ ಫಲವಾಗಿಯೂ, ಈ ರಾಜ್ಯ ಒಂದು ಕಾಲದಲ್ಲಿ ಭಾರತದಲ್ಲೇ ವಿದ್ಯುದುತ್ಪಾದನೆಯಲ್ಲಿ ಅಗ್ರಸಾಲಿನಲ್ಲಿದ್ದಿತು. ಆದರೆ ಈಗ ಈ ರಾಜ್ಯದಲ್ಲಿ ವಿದ್ಯುದುತ್ಪಾದನೆಯ ಸ್ಥಿತಿ ತೀರಾ ಶೋಚನೀಯವಾಗಿದೆ.

ಕರ್ನಾಟಕ ರಾಜ್ಯದಲ್ಲಿಂದು ವಿದ್ಯುದುತ್ಪಾದನಾ ಸಾಮರ್ಥ್ಯ ಕೇವಲ [illegible] ಮೆಗಾವಾಟ್ಸ್ ([illegible] ಮೆಗಾವಾಟ್ = ಒಂದು ಮಿಲಿಯನ್ ವಾಟ್ ಅಥವಾ ೧೦ ಲಕ್ಷ ವಾಟ್) ಆಗಿದೆ. ಇದರಲ್ಲಿ ಸುಮಾರು ಶೇ. [illegible]ರಷ್ಟು ಜಲವಿದ್ಯುದಾಗಾರಗಳಿಂದಲೂ ಶೇ. [illegible]ರಷ್ಟು ಉಷ್ಣ ವಿದ್ಯುದಾಗಾರ (ಅಂದರೆ ಕಲ್ಲಿದ್ದಲು ಅಥವಾ ಅನಿಲವನ್ನು ಉರಿಸಿ ಇಲ್ಲವೇ ಪರಮಾಣು ಶಕ್ತಿಯನ್ನು ಬಳಸಿ ಪಡೆದ ಉಗಿ ಶಕ್ತಿಯಿಂದ ಟರ್ಬೈನ್‌ಗಳನ್ನು ಸುತ್ತಿಸಿ ವಿದ್ಯುಚ್ಛಕ್ತಿ ಉತ್ಪಾದಿಸುವ ಕೇಂದ್ರ) [illegible] ಸುಮಾರು ಶೇ. ೨ರಷ್ಟನ್ನು ಬೀಸು ಗಾಳಿ ಶಕ್ತಿ (ವಿಂಡ್ ಎನರ್ಜಿ) ಬಳಕೆಯಿಂದಲೂ ಪಡೆಯಲಾಗುತ್ತಿದೆ.

ಜಲ ವಿದ್ಯುಚ್ಛಕ್ತಿ ಉತ್ಪಾದಿಸುತ್ತಿರುವ ಪ್ರಧಾನ ಕೇಂದ್ರವೆಂದರೆ ಶರಾವತಿ (೧೦೦೦ ಮೆಗಾವಾಟ್ಸ್). ಉಷ್ಣ ವಿದ್ಯುಚ್ಛಕ್ತಿ ರಾಯಚೂರು ಕೇಂದ್ರದಿಂದಲೂ (ಇಲ್ಲಿ ೨೧೦ ಮೆಗಾವಾಟ್ಸ್ ಜನರೇಟರ್‌ಗಳ ೬ ಘಟಕಗಳು ಕೆಲಸ ಮಾಡುತ್ತಿವೆ), ಪರಮಾಣು ವಿದ್ಯುಚ್ಛಕ್ತಿ ಕೈಗಾದ ಬೈಜಿಕ ವಿದ್ಯುದಾಗಾರಗಳಲ್ಲಿನ ೨ ಘಟಕಗಳಿಂದಲೂ (೨೧೫ ಮೆಗಾವಾಟ್ಸ್) ಲಭಿಸುತ್ತಿವೆ. ಇದು ನಮ್ಮ ಅಗತ್ಯಗಳಿಗೆ ಎಷ್ಟು ಮಾತ್ರವೂ ಸಾಲದು. ಒಂದು ಕಡೆ ಸಾಕಷ್ಟು ಪ್ರಮಾಣಗಳಲ್ಲಿ ವಿದ್ಯುಚ್ಛಕ್ತಿ ದೊರೆಯುತ್ತಿಲ್ಲ; ಇನ್ನೊಂದು ಕಡೆ ಸರಬರಾಜಾದ ವಿದ್ಯುಚ್ಛಕ್ತಿಯ ಗುಣಮಟ್ಟವೂ ತೀರಾ ಕಳಪೆಯಾಗಿದ್ದು ಅದಕ್ಕೇ ಅತಿ ದುಬಾರಿ ಶುಲ್ಕ ವಿಧಿಸಲಾಗುತ್ತಿದೆ. ಇದರ ಫಲವಾಗಿ ಕೈಗಾರಿಕೆಗಳು ತಮ್ಮವೇ ಡೀಸೆಲ್-ಚಾಲಿತ ವಿದ್ಯುದುತ್ಪಾದನಾ ಸೆಟ್‌ಗಳನ್ನು ಸ್ಥಾಪಿಸಿಕೊಳ್ಳುವ ಒತ್ತಾಯಕ್ಕೊಳಗಾಗಿವೆ. ಕರ್ನಾಟಕದಲ್ಲಿಂದು ಹೀಗೆ ಡೀಸೆಲ್-ಜನರೇಟರುಗಳಿಂದ ಉತ್ಪಾದಿತವಾಗುತ್ತಿರುವ ವಿದ್ಯುತ್ ಪ್ರಮಾಣ ೨೦೦೦ ಮೆಗಾವಾಟ್‌ಗಳಿಗೂ ಮೀರಿದೆ. ಇದು ವಿದ್ಯುದುತ್ಪಾದನೆಯ ತೀರಾ ಅಸಮರ್ಪಕ ವಿಧಾನ. ಅದರಲ್ಲೂ ತೈಲಾಭಾವವಿರುವಂಥ ದೇಶದಲ್ಲಿ ಇದು ತುಂಬಾ ಅನಪೇಕ್ಷಣೀಯ. ಏಕೆಂದರೆ ಭಾರತ ಇಂದು ತನ್ನ ತೈಲ ಅಗತ್ಯಗಳಲ್ಲಿ ಶೇ. ೬೦ರಷ್ಟನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುತ್ತಿದೆ. ಅದಕ್ಕಾಗಿ ತನ್ನ ವಿದೇಶೀ ವಿನಿಮಯ ಗಳಿಕೆಯಲ್ಲಿ ಬಲುದೊಡ್ಡ ಪಾಲನ್ನು ಖರ್ಚುಮಾಡುತ್ತಿದೆ. ಅಷ್ಟೇ ಅಲ್ಲ, ಸಣ್ಣ ಗಾತ್ರದ ಡೀಸೆಲ್ ಚಾಲಿತ ಜನರೇಟರುಗಳ ತಯಾರಿಕೆಯಲ್ಲೂ ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ವಸ್ತು ಹಾಗೂ ಶಕ್ತಿ ವ್ಯಯವಾಗುತ್ತಿದೆ.

ವಿದ್ಯುಚ್ಛಕ್ತಿಯ ಉತ್ಪಾದನೆ ಹಾಗೂ ವಿತರಣೆಯಲ್ಲಿನ ಈ ಕೊರತೆಯನ್ನು ನೀಗಿಸಲೋಸುಗ ವಿದ್ಯುನ್ಮಂಡಲಿಯು ತುಂಬ ಆಗಾಗ್ಗೆ 'ಲೋಡ್-ಷೆಡ್ಡಿಂಗ್' (ಹೊರೆ ಹಂಚುವ, ತಗಿಸುವ) ತಂತ್ರದ ಮರೆಹೋಗುತ್ತಿದೆ. ಇದರಿಂದಾಗಿ, ವಿದ್ಯುಚ್ಛಕ್ತಿಯ ಗೃಹ ಹಾಗೂ ಕೈಗಾರಿಕಾ ಬಳಕೆದಾರರು ಈ ಮುನ್ನ ತಿಳಿಸಿರುವಂಥ ಪರ್ಯಾಯ ವ್ಯವಸ್ಥೆ ಮಾಡಿಕೊಳ್ಳುವ ಒತ್ತಾಯಕ್ಕೊಳಗಾಗಿದ್ದಾರೆ. ಇದರ ಫಲವಾಗಿ ವಿದ್ಯುನ್ಮಂಡಲಿಯ ಆದಾಯ ತುಂಬಾ ಕುಗ್ಗಿದೆ.

ಒಟ್ಟು ವಿದ್ಯುದುತ್ಪಾದನೆಯಲ್ಲಿ ಸುಮಾರು ಶೇ. [illegible]ರಷ್ಟನ್ನು ಬಳಸುತ್ತಿರುವ ಗ್ರಾಮಾಂತರಗಳಿಗೆ ವಿದ್ಯುತ್

ಪ್ರೊ || ಡಿ. ಪಿ. ಸೇನ್‌ಗುಪ್ತ

ಸರಬರಾಜು ಬಹುಮಟ್ಟಿಗೆ ಉಚಿತವಾಗಿದೆ. ವಿದ್ಯುತ್ ಸಾಗಣೆ ಹಾಗೂ ವಿತರಣೆಯಲ್ಲಿ ನಷ್ಟ ಸಾಮಾನ್ಯವಾಗಿ ಶೇ. ೧೫ರೊಳಗೇ ಇರಬೇಕಾದುದು ಇಂದು ಇದು ಹತ್ತಿರ ಹತ್ತಿರ ಶೇ. ೩೦ರಷ್ಟಾಗಿದೆ. ಹಾಗಾಗಿ ವಿದ್ಯುತ್ ಮಂಡಳಿ (ಕೆ.ಇ.ಬಿ., ಈಗ ಕೆ.ಪಿ.ಟಿ.ಸಿ.ಎಲ್. – ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ) ತಾನು ವಿತರಣೆ ಮಾಡುತ್ತಿರುವ ವಿದ್ಯುಚ್ಛಕ್ತಿ ಪ್ರಮಾಣದಲ್ಲಿ ಕೇವಲ ಶೇ. ೩೦ರಷ್ಟಕ್ಕೆ ಮಾತ್ರ ಹಣ ಪಡೆಯುವಂಥ ಸ್ಥಿತಿ ಉದ್ಭವಿಸಿದೆ.

ಈ ಪರಿಸ್ಥಿತಿ ನಿಜಕ್ಕೂ ಅಹಿತಕರ. ಕೆ.ಪಿ.ಟಿ.ಸಿ.ಎಲ್. ತಾನು ಪಡೆಯುತ್ತಿರುವ ವಿದ್ಯುಚ್ಛಕ್ತಿಗಾಗಿ ವಿದ್ಯುದುತ್ಪಾದಕ ಸಂಸ್ಥೆ ಕೆ.ಪಿ.ಸಿ. (ಕರ್ನಾಟಕ ಪವರ್ ಕಾರ್ಪೊರೇಷನ್)ಗೆ ಪೂರ್ತಿ ಹಣ ಸಂದಾಯ ಮಾಡಲಾಗದೆ ತುಂಬಾ ಬಾಕಿ ಉಳಿಸಿಕೊಂಡಿದೆ. ಇದರ ಪರಿಣಾಮವೆಂದರೆ - ಕೆ.ಪಿ.ಸಿ.ಯು ರಾಯಚೂರ್‌ನಲ್ಲಿ ಉಷ್ಣ ವಿದ್ಯುದಾಗಾರದಲ್ಲಿ ವಿದ್ಯುದುತ್ಪಾದನೆಗೆ ಅಗತ್ಯವಾದ ಕಲ್ಲಿದ್ದಲನ್ನು ಕೊಳ್ಳಲು ಸಾಕಷ್ಟು ಹಣ ಇಲ್ಲದೆ ಕಷ್ಟ ಅನುಭವಿಸುತ್ತಿದೆ.



ಶರಾವತಿ ವಿದ್ಯುತ್ ಕೇಂದ್ರ

ಆದ್ದರಿಂದ ನಮ್ಮ ಶಕ್ತಿ (ಪವರ್) ಕೊರತೆ ತಪ್ಪಿಸಲು ಮೊದಲನೆಯದಾಗಿ ಸಾಗಣೆ ಹಾಗೂ ವಿತರಣೆಯಲ್ಲಿ ಆಗುತ್ತಿರುವ ನಷ್ಟವನ್ನು ದೊಡ್ಡ ಪ್ರಮಾಣದಲ್ಲಿ ತಗ್ಗಿಸಬೇಕು. ಇದಕ್ಕಾಗಿ ಕಂಪ್ಯೂಟರ್ ಸಹಾಯದಿಂದ ವಿದ್ಯುತ್ ಸರಬರಾಜು ಜಾಲಬಂಧವನ್ನು ಪುನರ್ರೂಪಿಸಬೇಕು. ಎರಡನೆಯದಾಗಿ, ವಿದ್ಯುಚ್ಛಕ್ತಿಯನ್ನು ಹೆಚ್ಚು ದಕ್ಷತೆಯಿಂದ ಬಳಸಬೇಕು. (ಅಂದರೆ, ಅಡಕವಾದ ಪ್ರತಿದೀಪ್ತಿ ದೀಪಗಳನ್ನು – ಕಾಂಪಾಕ್ಟ್ ಫ್ಲೂರಸೆಂಟ್ ಲ್ಯಾಂಪ್ಸ್, ಸಿ. ಎಫ್. ಎಲ್. ಗಳನ್ನು – ಬಳಸಬೇಕು, ಹೆಚ್ಚು ವಿದ್ಯುತ್ತನ್ನು ಪೋಲು ಮಾಡದೆ ಸಮರ್ಥವಾಗಿ ಕಾರ್ಯ ನಿರ್ವಹಿಸುವ ಮೋಟಾರ್‌ಗಳನ್ನು ಬಳಸಬೇಕು.) ಆದರೂ ಇದು ನಮ್ಮ ತೊಂದರೆಯನ್ನು ಭಾಗಶಃವಷ್ಟೇ ನಿವಾರಿಸಬಲ್ಲದು. ಬಹುಮುಖ್ಯವಾದುದು - ಮೇಲೆ ತಿಳಿಸಲಾದ ನಮ್ಮ ಒಟ್ಟು ವಿದ್ಯುದುತ್ಪಾದನೆಯನ್ನು ಗಣನೀಯವಾಗಿ ಹೆಚ್ಚಿಸಬೇಕು. ಕರ್ನಾಟಕ ರಾಜ್ಯದಲ್ಲಂತೂ ಕೊನೆಯ ಪಕ್ಷ ೧೦೦೦ ಮೆಗಾವಾಟ್‌ನಷ್ಟು ಅಧಿಕ ವಿದ್ಯುದುತ್ಪಾದನೆ

ಮಾಡಬೇಕು. ಇಲ್ಲದಿದ್ದರೆ ಭಾರಿ ಪ್ರಮಾದವೇ ಆಗುತ್ತದೆ ಎಂದು ಕೆಲವರು ಸಲಹೆ ಮಾಡಿದ್ದಾರೆ.

ಅದು ಸರಿ. ಮುಖ್ಯ ಪ್ರಶ್ನೆಯೆಂದರೆ - ಹೆಚ್ಚಿನ ವಿದ್ಯುದುತ್ಪಾದನೆ ಮಾಡಲು ಅವಶ್ಯವಾದ ಭಾರಿ ಮೊತ್ತದ ಹಣವನ್ನು ಯಾರು ಒದಗಿಸುವದು ? ವಿದ್ಯುದುತ್ಪಾದನೆಗೆ ಇಂಧನದ ಅಥವಾ ಶಕ್ತಿಯ ಆಕರ ಯಾವುದಾಗಿರಬೇಕು ? ಈ ಎಲ್ಲ ಕಾರ್ಯವನ್ನೂ ಯಾವುದಾದರೂ ವಿದೇಶೀ ಕಂಪೆನಿಗೆ ವಹಿಸಿ ಕೊಡಬೇಕೆ (ಕರ್ನಾಟಕದಲ್ಲಿ 'ಕೊಜೆಂಟ್ರಿಕ್ಸ್' ಕಂಪೆನಿಯೊಂದಿಗೆ ಮಾಡಿಕೊಳ್ಳಲಿದ್ದಂತೆ ಅಥವಾ ಮಹಾರಾಷ್ಟ್ರದಲ್ಲಿ 'ಎನ್ರಾನ್' ಕಂಪೆನಿಯೊಂದಿಗೆ ಒಪ್ಪಂದ ಮಾಡಿಕೊಂಡಿರುವಂತೆ)? ಯಾವ ಇಂಧನವನ್ನು ಬಳಸಲು ಇವುಗಳಿಗೆ ಅನುಮತಿ ನೀಡಬೇಕು ? ನನ್ನ ಅಭಿಪ್ರಾಯದಲ್ಲಿ, ಮೊದಲ ಅವಕಾಶವನ್ನು ಭಾರತೀಯ ಕಂಪೆನಿಗೇ ಒದಗಿಸಬೇಕು. ಆ ಕಂಪೆನಿಯೇ ಅವಶ್ಯ ಹಣ ಕೂಡಿಸುವ ಜವಾಬ್ದಾರಿ ಹೊರಬೇಕು. ವಿದೇಶೀ ಕಂಪೆನಿಗಳಿಗೆ ಯಾವುದೇ ವಿಶೇಷ ಆದ್ಯತೆ ನೀಡಬಾರದು.

ವಿದ್ಯುದುತ್ಪಾದನೆಯಲ್ಲಿ ನ್ಯಾಫ್ತವನ್ನು ಇಂಧನವನ್ನಾಗಿ ಉಪಯೋಗಿಸುವುದನ್ನು ಆದಷ್ಟೂ ತಪ್ಪಿಸಬೇಕು. ಅನಿಲವನ್ನು ಇಂಧನವನ್ನಾಗಿ ಉಪಯೋಗಿಸುವುದಕ್ಕೇ ಹೆಚ್ಚಿನ ಒತ್ತು ನೀಡಬೇಕು. ಜಲ ವಿದ್ಯುದುತ್ಪಾದನೆಯೇ ಅತ್ಯುತ್ತಮವಾದುದು. ಇದು ಅತ್ಯಂತ ಅಗ್ಗದ ಹಾಗೂ ಮಾಲಿನ್ಯರಹಿತವಾದ ವಿದ್ಯುತ್ ಆಕರ. ಬೈಜಿಕ ವಿದ್ಯುದುತ್ಪಾದನೆಯಾದರೋ ವಿವಾದಾತ್ಮಕವಾದುದು. ಬೈಜಿಕ ಬಾಂಬುಗಳ ತಯಾರಿಕೆಯನ್ನು ವಿರೋಧಿಸ ಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ 'ಬೇಸ್ ಲೋಡ್' ಎಂದು ಹೇಳಲಾಗುವಂತಹುದನ್ನು ಒದಗಿಸಲೋಸುಗವಾದರೂ ಬೈಜಿಕ ವಿದ್ಯುದುತ್ಪಾದನೆಯನ್ನು ಮಾಡಬಹುದೇನೋ. ಜಲವಿದ್ಯುಚ್ಛಕ್ತಿ ಉತ್ಪಾದನೆಗಾಗಿ ಮಳೆಯ ಮೇಲೆಯೇ ಸಂಪೂರ್ಣವಾಗಿ ಅವಲಂಬಿಸುವ ಅಪಾಯಕ್ಕೆ ನಾವು ಈಡಾಗಬಾರದಲ್ಲವೇ ?

ವಿದ್ಯುದುತ್ಪಾದನೆಯಲ್ಲೂ ವಿತರಣೆಯಲ್ಲೂ ಹೆಚ್ಚು ದಕ್ಷತೆ ಉಂಟುಮಾಡಲೆಂದು ಈ ಕಾರ್ಯವನ್ನು ಖಾಸಗೀಕರಿಸುವುದು ಪ್ರಸ್ತುತದಲ್ಲಿ ಮುಖ್ಯವೆಂದು ಪರಿಗಣಿಸಲಾಗುತ್ತಿದೆ. ಒರಿಸ್ಸಾದಲ್ಲಿ ಈಗಾಗಲೇ ಹೀಗೆ ಮಾಡಲಾಗಿದೆ. ಇತರ ರಾಜ್ಯಗಳೂ ಇದೇ ಮಾರ್ಗ ಅನುಸರಿಸತೊಡಗಿವೆ - ಹೆಚ್ಚಾಗಿ ವಿಶ್ವ ಬ್ಯಾಂಕ್‌ನ ಒತ್ತಾಯಕ್ಕೆ ಒಳಗಾಗಿ.

ವಿದ್ಯುದುತ್ಪಾದನೆ ಹಾಗೂ ವಿತರಣೆ – ಈ ಎರಡರ 'ಕಟ್ಟನ್ನು ಬಿಚ್ಚುವುದು' ಅತ್ಯವಶ್ಯ. ಇದರ ಬಗೆಗೆ ಇತರ ರಾಜ್ಯಗಳು ಕಲ್ಪಿಸಿಕೊಳ್ಳುವುದಕ್ಕೂ ಮುನ್ನವೇ ಕರ್ನಾಟಕ ರಾಜ್ಯ ಈ ನಿಟ್ಟಿನಲ್ಲಿ ಆಗಲೇ ಮೊದಲ ಹೆಜ್ಜೆಯನ್ನಿಟ್ಟಿದ್ದಿತು. ವಿದ್ಯುದುತ್ಪಾದನೆಗೇ ಒಂದು ಸಂಸ್ಥೆ (ಕೆ.ಪಿ.ಸಿ.), ವಿದ್ಯುಚ್ಛಕ್ತಿಯ ಸಾಗಣೆ ಹಾಗೂ ವಿತರಣೆಗೇ ಇನ್ನೊಂದು ಸಂಸ್ಥೆ (ಕೆ.ಇ.ಬಿ.) ಹೀಗೆ ಎರಡೂ ಪ್ರತ್ಯೇಕ ಸಂಸ್ಥೆಗಳನ್ನು ಕರ್ನಾಟಕ ಸ್ಥಾಪಿಸಿದ್ದಿತು. ಈಗ ಕೆ.ಇ.ಬಿ. ತನ್ನ ಸಾಗಣೆ ಹಾಗೂ ವಿತರಣೆ ಜವಾಬ್ದಾರಿಗಳನ್ನೂ ಪ್ರತ್ಯೇಕಿಸಿ ಅವನ್ನು ಎರಡು ವೃಂದಗಳಿಗೆ ವಹಿಸಿಕೊಟ್ಟು ತಾನೇ ಕೆ.ಪಿ.ಟಿ.ಸಿ.ಎಲ್. ಎಂಬ ಹೊಸ ಹೆಸರು ಇಟ್ಟುಕೊಂಡಿದೆ. ಆದರೆ ಆಡಳಿತ ವ್ಯವಸ್ಥೆಯಂತೂ ಎಷ್ಟು ಮಾತ್ರವೂ ಬದಲಾಗದೆ ಹಿಂದಿನಂತೆಯೇ ಉಳಿದಿದೆ. ವಿದ್ಯುತ್ ವಿಭಾಗದ ಆಡಳಿತವನ್ನೂ ಅದರ ಚಾಲನೆಯನ್ನೂ ಸಕ್ರಮಗೊಳಿಸಲು, ವಿದ್ಯುಚ್ಛಕ್ತಿ ಬಳಕೆಯ ಶುಲ್ಕದ ದರ ಮತ್ತಿತರ ಸ್ವರೂಪಗಳನ್ನು ನಿರ್ಧರಿಸಲು ನಿಯಂತ್ರಕ ಆಯೋಗವೊಂದನ್ನು (ಕೆ.ಇ.ಆರ್.ಸಿ.) ಸ್ಥಾಪಿಸಲಾಗಿದೆ. ವಿದ್ಯುದುತ್ಪಾದನಾ ಸಂಸ್ಥೆಗಳು ಒಂದು ರೀತಿಯಲ್ಲಿ ಕೆ.ಇ.ಆರ್.ಸಿ.ಗೆ [illegible]

ವಿದ್ಯುತ್ ವಿತರಣೆಯ ಮೇಲ್ವಿಚಾರಣೆ [illegible] ಕೊಳ್ಳುತ್ತಿರುವ ವಿಭಾಗವನ್ನು ಖಾಸಗೀಕರಿಸಲೂ ಯತ್ನಗಳಾಗುತ್ತಿವೆ. ಇದನ್ನು ಒರಿಸ್ಸಾದಲ್ಲಿ ಈಗಾಗಲೇ ಮಾಡಲಾಗಿದೆಯೆಂದು ಈಗಾಗಲೇ ಹೇಳಿದೆವಷ್ಟೆ. ವಿಶ್ವ ಬ್ಯಾಂಕು ಇದನ್ನು ಅನುಕರಣ ಯೋಗ್ಯವನ್ನಾಗಿ ಆಗಾಗ್ಗೆ ಇತರ ರಾಜ್ಯಗಳಿಗೂ ಸಲಹೆ ಮಾಡುತ್ತಿದೆ.

ಆದರೆ ಒರಿಸ್ಸಾದಲ್ಲಿ ಕೃಷಿ ವಿಭಾಗ ಬಳಸುತ್ತಿರುವ ವಿದ್ಯುಚ್ಛಕ್ತಿ ಪ್ರಮಾಣ ಕೇವಲ ಶೇ. ೬ ರಷ್ಟಾಗಿದ್ದರೆ ಕರ್ನಾಟಕದಲ್ಲಿ ಇದು ಶೇ. ೪೦ರಷ್ಟಿದೆ ಅನ್ನುವುದನ್ನು ಮರೆಯಲಾಗದು. ಶೇ. ೪೦ ರಷ್ಟು ವಿದ್ಯುಚ್ಛಕ್ತಿಯನ್ನು ತಗ್ಗಿದ ಸಹಾಯಕ ದರದಲ್ಲಿ ಸರಬರಾಜು ಮಾಡಲು ಯಾವ ಖಾಸಗಿ ಸಂಸ್ಥೆ ತಾನೆ ಒಪ್ಪಿಕೊಂಡು ಮುಂದೆ ಬಂದೀತು ?

ಜಲವಿದ್ಯುದುತ್ಪಾದನೆ ಉಷ್ಣವಿದ್ಯುದುತ್ಪಾದನೆಗಿಂತ ಕಡಿಮೆ ವೆಚ್ಚದ್ದಷ್ಟೆ. ಆದ್ದರಿಂದ ಖಾಸಗಿ ವಿತರಣ ಸಂಸ್ಥೆಗಳು ಕೆ.ಪಿ.ಟಿ.ಸಿ.ಎಲ್.ನಿಂದ ಕೊಂಡ ಅಗ್ಗದ ಜಲವಿದ್ಯುತ್ತನ್ನು ಕೃಷಿ ವಿಭಾಗಕ್ಕೆ ಸರಬರಾಜು ಮಾಡಿ, ಹೆಚ್ಚು ದುಬಾರಿಯಾದ ಉಷ್ಣ ವಿದ್ಯುತ್ತನ್ನು ಕೈಗಾರಿಕೆಗಳಿಗೂ ನಗರಗಳ ಗೃಹಬಳಕೆಗಾರರಿಗೂ ಸರಬರಾಜು ಮಾಡಲಿ, ಎಂಬುದು ಕೆಲವರ ಸಲಹೆ. ಈ ಸಂಸ್ಥೆಗಳು ಕೆ.ಪಿ.ಸಿ.ಯಿಂದಲೂ ಮಿಗುತಾಯ ವಿದ್ಯುಚ್ಛಕ್ತಿಯನ್ನು ಕೊಳ್ಳಬಹುದು. ಹೀಗೆ ಮಾಡಹೋದರೆ ನಗರ ವಿಭಾಗದ ಬಳಕೆದಾರರಿಗೆ ವಿಧಿಸಿರುವ ದರಗಳನ್ನು ಬಹುವಾಗಿ ಪುನರ್ ವಿಮರ್ಶಿಸಬೇಕಾಗುತ್ತದೆ ಮತ್ತು ಕೆ.ಇ.ಆರ್.ಸಿ. ಇದರ ಮೇಲೆ ಕಟ್ಟುನಿಟ್ಟಾದ ನಿಯಂತ್ರಣ ಇರಿಸಬೇಕಾಗುತ್ತದೆ.

ಕರ್ನಾಟಕ ರಾಜ್ಯದ ಆರ್ಥಿಕ ಭವಿತವ್ಯ, ಮಾಹಿತಿ ತಂತ್ರಜ್ಞಾನ (ಐಟಿ) ವಿಭಾಗದ ಯಶಸ್ಸು ಹಾಗೂ ಕೈಗಾರಿಕೆ ಮತ್ತು ಕೃಷಿ ವಿಭಾಗಗಳ ಅಳಿವು ಉಳಿವು ವಿದ್ಯುತ್ ವಿಭಾಗವನ್ನೇ ಸಂಪೂರ್ಣವಾಗಿ ಅವಲಂಬಿಸಿವೆ ಎಂದು ಈ ಸಂದರ್ಭದಲ್ಲಿ ಒತ್ತಿ ಹೇಳಬೇಕಾಗಿದೆ. ಹಾಗಾಗಿ ಇಂದು ವಿದ್ಯುತ್ ವಿಭಾಗ ಎದುರಿಸುತ್ತಿರುವ ಸಮಸ್ಯೆಗಳನ್ನು ಯಾವುದೇ ಪೂರ್ವಗ್ರಹ ಅಥವಾ ಪೂರ್ವಕಲ್ಪನೆಗಳಿಲ್ಲದೆ ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಹರಿಸುವುದು ಅತ್ಯಗತ್ಯ. ಇದಕ್ಕಾಗಿ ಅತ್ಯುತ್ತಮ ತಾಂತ್ರಿಕ - ಆರ್ಥಿಕ ಪರಿಹಾರಗಳನ್ನು ಹುಡುಕಬೇಕಾಗಿದೆ. ಹಾಗೆ ಮಾಡಿದರಷ್ಟೆ ರಾಜ್ಯದ ಆರ್ಥಿಕತೆ ಸುಧಾರಿಸುತ್ತದೆ ಮತ್ತು ಪ್ರತಿಯೊಂದು ಮನೆಯೂ ವಿದ್ಯುದ್ದೀಪದಿಂದ ಬೆಳಗುವಂತಾಗುತ್ತದೆ

ಪ್ರೊ॥ ಡಿ. ಪಿ. ಸೇನ್‌ಗುಪ್ತ
ನಿವೃತ್ತ ಇಲೆಕ್ಟ್ರಿಕಲ್ ಇಂಜಿನಿಯರಿಂಗ್ ಪ್ರಾಧ್ಯಾಪಕರು
ಭಾರತೀಯ ವಿಜ್ಞಾನ ಮಂದಿರ, ಬೆಂಗಳೂರು - [illegible]

'ಹೊಸತು'ವಿಗಾಗಿಯೇ [illegible] ಲೇಖನವನ್ನು ಕನ್ನಡದಲ್ಲಿ ನಿರೂಪಿಸಿದವರು ಶ್ರೀ [illegible] ಗೋಪಾಲಕೃಷ್ಣರಾವ್

# ಕೋಮುವಾದದ ರಾಜಕೀಯ ಅರ್ಥಶಾಸ್ತ್ರ

## ಭಾರತದ ಸಮಕಾಲೀನ ರಾಜಕೀಯ ಆಗು-ಹೋಗುಗಳತ್ತ ಒಂದು ಇಣುಕು ನೋಟ

ಕಳೆದ ಎರಡು ದಶಕಗಳಿಂದಲೂ ಕೋಮು ಮತ್ತು ಜಾತಿಗಳ ಪ್ರಭಾವ ಭಾರತದ ರಾಜಕಾರಣದಲ್ಲಿ ತೀವ್ರವಾಗುತ್ತಿದೆ. ಈ ಬೆಳವಣಿಗೆಯಿಂದಾಗಿ ಸಮಾಜವನ್ನು ಕಾಡುತ್ತಿರುವ ನಿರುದ್ಯೋಗ, ಬೆಲೆ ಏರಿಕೆ, ಹಸಿವು, ಬಡತನ, ಅನಕ್ಷರತೆ, ಆರ್ಥಿಕ ಅಸಮಾನತೆ ಮತ್ತಿತರ ಸಮಸ್ಯೆಗಳು ರಾಜಕೀಯ ಚರ್ಚಾ ವೇದಿಕೆಗಳಿಂದ ಹಿಂದೆ ಸರಿಯುತ್ತಿವೆ. ಆಹಾರ ಸಹಾಯಧನ, ಜನಾರೋಗ್ಯ ಇವೇ ಮುಂತಾದ ಸಮಾಜ ಕಲ್ಯಾಣ ಯೋಜನೆಗಳೂ ಇದೇ ಜಾಡನ್ನು ಹಿಡಿಯುವಂತಾಗಿದೆ. ಕೃಷಿ ರಂಗವನ್ನು ಬಿಟ್ಟು ಬೇರೆಲ್ಲ ಕ್ಷೇತ್ರಗಳಿಗೂ ಸಹಾಯಧನ ನೀಡುವ ವ್ಯವಸ್ಥೆಗೆ ಇತಿಶ್ರೀ ಹಾಡುವ ತರಾತುರಿಯಲ್ಲಿ ಇಂದಿನ ಆಡಳಿತ ವರ್ಗ ತನ್ನ ಕಾರ್ಯಾಚರಣೆಯನ್ನು ನಡೆಸುತ್ತಿದೆ. ಇದಕ್ಕೆ ವಿರೋಧ ಕಂಡುಬಂದಿರುವುದು ಎಡಪಂಥೀಯ ಪಕ್ಷಗಳಿಂದ ಮಾತ್ರ.

ಸಾಮ್ರಾಜ್ಯಶಾಹಿ ವಿರೋಧಿ ದೀರ್ಘ ಹೋರಾಟದಿಂದ ಸ್ಫೂರ್ತಿ ಪಡೆದು ಜಾತ್ಯತೀತ ಮತ್ತು ಪ್ರಜಾಪ್ರಭುತ್ವದ ಸುಭದ್ರ ವ್ಯವಸ್ಥೆಯ ಕನಸುಗಳನ್ನು ಹೊತ್ತು ಅಸ್ತಿತ್ವಕ್ಕೆ ಬಂದ ಭಾರತ ಇಂದು ಅತಂತ್ರ ಸ್ಥಿತಿಯಲ್ಲಿದೆ. ಸಾಮ್ರಾಜ್ಯಶಾಹಿ ವಿರೋಧಿ ಪರಂಪರೆಯಿಂದ ಹುಟ್ಟಿಬಂದ ಬಹುಮುಖೀ ಸಂಸ್ಕೃತಿ, ಅನೇಕತ್ವ ಮತ್ತು ಪ್ರಜಾಪ್ರಭುತ್ವ ಸಂಸ್ಥೆಗಳನ್ನು ನಿರ್ನಾಮ ಮಾಡಲು ಹೊರಟಿರುವ ಭಾರತೀಯ ಜನತಾ ಪಕ್ಷ ಮತ್ತು ಸಂಘಪರಿವಾರದ ಸಂಘಟನೆಗಳ ಪಿತೂರಿ ಹಾಗೂ ಬುಡಮೇಲು ಕೃತ್ಯಗಳು ಒಂದುಕಡೆಯಾದರೆ ಮತ್ತೊಂದು ಕಡೆ ಬೃಹತ್ ರಾಷ್ಟ್ರೀಯ ಪಕ್ಷವೆನಿಸಿಕೊಂಡಿರುವ ಕಾಂಗ್ರೆಸ್ ಈ ಬೆಳವಣಿಗೆಗಳ ದುಷ್ಪರಿಣಾಮಗಳ ಅರಿವಿದ್ದೂ ತನ್ನ ಬೇಜವಾಬ್ದಾರಿ ತನವನ್ನು ಪ್ರದರ್ಶಿಸುತ್ತಿರುವುದು. ರಾಜಕೀಯ ಅಧಿಕಾರ ದಾಹದಿಂದಲೋ ಸರಿಯಾದ ಸೈದ್ಧಾಂತಿಕ ದೃಷ್ಟಿಕೋನದ ಅಭಾವದಿಂದಲೋ ರಾಷ್ಟ್ರಮಟ್ಟದ ಮತ್ತು ರಾಜ್ಯಮಟ್ಟದ ಕೆಲವು ಪಕ್ಷಗಳು ಈ ಪ್ರಕ್ರಿಯೆಗೆ ಶಾಮೀಲಾಗಿ ನಿಂತಿವೆ.

ಗಂಭೀರವಾಗಿ ಪರಿಗಣಿಸಿದರೆ ಈ ಎಲ್ಲ ಆಗು ಹೋಗುಗಳಿಗೂ ಜವಾಬ್ದಾರಿ ಹೊರಬೇಕಾದದ್ದು ಕಾಂಗ್ರೆಸ್ ಪಕ್ಷ. ಬಲಪಂಥೀಯ ಧೋರಣೆಗಳಿಗೆ ಕುಮ್ಮಕ್ಕು, ಶಿಲಾನ್ಯಾಸ ಮತ್ತು ಬಾಬ್ರಿ ಮಸೀದಿ ಕೆಡವಿದ ಸಂದರ್ಭದಲ್ಲಿ ನರಸಿಂಹರಾವ್ ಸರಕಾರ ಗುಮ್ಮನೆ ಕುಳಿತದ್ದು ಇದೆಲ್ಲವನ್ನೂ ಪ್ರಜ್ಞಾವಂತ ಜನತೆಯು ಮರೆಯಲು ಸಾಧ್ಯವಿಲ್ಲ. ಇದು ಸಂದರ್ಭಕ್ಕೆ ತಕ್ಕಂತೆ ತನ್ನ ಬಣ್ಣವನ್ನು ಬದಲಾಯಿಸಿಕೊಂಡೇ ಬರುತ್ತಿರುವ ಆ ಪಕ್ಷದ ಜಾಯಮಾನವಲ್ಲದೆ ಮತ್ತೇನು ?

### ಜಾತ್ಯತೀತತೆಗೆ ಪೆಟ್ಟು

ವಸಾಹತುಶಾಹಿಯ ವಿರುದ್ಧದ ಭಾರತದ ಸ್ವಾತಂತ್ರ್ಯ ಸಂಗ್ರಾಮ ಅವಿಸ್ಮರಣೀಯ. ಅದು ಅಸಾಧಾರಣವಾದದ್ದು. ಆಗಾಗ್ಗೆ ಸಂಭವಿಸುತ್ತಿದ್ದ ಕೋಮು ಗಲಭೆಗಳು, ಸಾಮೂಹಿಕ ಹಿಂಸೆ, ಕೊಲೆ, ಲೂಟಿಯಂತಹ ಸಮಾಜ ಘಾತುಕ ಕೃತ್ಯಗಳನ್ನು ಬಗ್ಗು ಬಡಿದು ಶೀಘ್ರ ಅವಧಿಯಲ್ಲಿಯೇ ಶಾಂತಿಯನ್ನು ಮರು ಸ್ಥಾಪನೆ ಮಾಡಲು ಸಾಧ್ಯವಾಗುತ್ತಿದ್ದಂತಹ ಕಾಲವದು. ಆದರೆ ಈಗ ? ಕೋಮು ಗಲಭೆ, ಹಿಂಸೆಗಳು, ಅಲ್ಪಸಂಖ್ಯಾತರ ಮೇಲಿನ ದೌರ್ಜನ್ಯ ದಿನ ನಿತ್ಯದ ಘಟನೆಗಳಾಗಿವೆ. ಜಾತ್ಯತೀತ ಎಂಬುವ ಪದವೇ ಹಾಸ್ಯಾಸ್ಪದವಾಗುತ್ತಿದೆ. ಅದನ್ನು ಕುರಿತು ಹಗುರವಾಗಿ ಮಾತನಾಡುವ ರಾಜಕಾರಣಿಗಳು ದೆಹಲಿಯಲ್ಲಿ ಬೀಗುತ್ತಿದ್ದಾರೆ. ಇಂದು ಆಡಳಿತ ವರ್ಗ ಮತ್ತು ಜವಾಬ್ದಾರಿಯುತವೆನಿಸಿಕೊಂಡ ಕೆಲವು ರಾಜಕೀಯ ಪಕ್ಷಗಳು ಬಜಾಯಿಸುತ್ತಿರುವ ಡಂಗೂರಗಳಿಂದ ಹೊಮ್ಮುತ್ತಿರುವ ಕೂಗು 'ಕಾರ್ಗಿಲ್‌ನ ದಿಗ್ವಿಜಯ' ಮತ್ತು ಪೋಕ್ರಾನ್‌ನ ಪರಮಾಣು ಬಾಂಬಿನ ಸ್ಫೋಟನೆಯಿಂದ ಹೊಮ್ಮಿದ ಘೋಷಣೆ ಜೈ ವಿಜ್ಞಾನ್! ವಾಸ್ತವದಲ್ಲಿ, ಕಾರ್ಗಿಲ್‌ನಲ್ಲಿ ಸಂಭವಿಸಿದ ಚಕಮಕಿಯನ್ನು 'ಯುದ್ಧ'ವೆಂದು ಕರೆದು ಜನರಲ್ಲಿ ಭ್ರಮೆ ಮೂಡಿಸುವುದೇ ಆತ್ಮ ವಂಚನೆಯ ಕೆಲಸ. 'ರಾಷ್ಟ್ರೀಯತೆ' ಎಂಬ ಶಬ್ದ ಈಗೀಗ ಕೋಮು ಮಾರುಕಟ್ಟೆಯಲ್ಲಿ ಬಹಳ ಪ್ರಚಲಿತವಾಗಿದೆ. ಭಾರತ ಮತ್ತು ಪಾಕಿಸ್ತಾನ ತಮ್ಮ ಪರಸ್ಪರ ಹಿತಾಸಕ್ತಿಯ ದೃಷ್ಟಿಯಿಂದ ಸ್ನೇಹಭಾವದಿಂದಿರಬೇಕೆನ್ನುವವರು ಆ ದೇಶದ ಏಜೆಂಟರುಗಳೆಂದು ಪರಿಗಣಿಸಲ್ಪಡುತ್ತಿದ್ದಾರೆ. ಇಲ್ಲಿ ತನ್ನ ಅರ್ಥವನ್ನು ಕಳೆದುಕೊಳ್ಳುವುದು ರಾಷ್ಟ್ರೀಯತೆ ಎಂಬುವ ಉದಾತ್ತ ಮೌಲ್ಯ.

> *ಡಾ|| ವಿ. ಕೃಷ್ಣ ಅನಂತ್ ಅವರು 'ದಿ ಹಿಂದು' ಪತ್ರಿಕೆಯ ಸಹಾಯಕ ಸಂಪಾದಕರಾಗಿ ಚೆನ್ನೈನಲ್ಲಿದ್ದಾರೆ. ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದಲ್ಲಿ ಇತಿಹಾಸದಲ್ಲಿ ಸ್ನಾತಕೋತ್ತರ ಹಾಗೂ ಪಿಎಚ್.ಡಿ. ಪದವಿಗಳನ್ನು ಪಡೆದು ನಂತರ ಅನೇಕ ಮೌಲಿಕ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ. ೧೯೯೯ರ ಸೆಪ್ಟೆಂಬರ್‌ನಲ್ಲಿ ಕೆನಡಾದ ಮಾಂಟ್ರಿಯಾಲ್‌ನಲ್ಲಿ ಒಂದು ಬೃಹತ್ ಅಧಿವೇಶನ ನಡೆಯಿತು. ಉತ್ತರ ಅಮೆರಿಕಾದ ಶಾಂತಿ ಮತ್ತು ಸೌಹಾರ್ದ ಸಮಾವೇಶ, ಎಂದು ಅದರ ಹೆಸರು. ಅಲ್ಲಿ ಆಶಯ ಭಾಷಣ ಮಾಡಿದ್ದು ಕೃಷ್ಣ ಅನಂತ್. ಅವರ ಆಗಿನ ಉಪನ್ಯಾಸ ಇಂದಿಗೂ ಅತ್ಯಂತ ಪ್ರಸ್ತುತವಾಗಿದೆ, ವಿಶ್ಲೇಷಣಾ ವಿಧಾನಕ್ಕೆ ಒಂದು ಮಾದರಿಯಾಗಿದೆ. ಆ ಇಂಗ್ಲಿಷ್ ಉಪನ್ಯಾಸದ ಸಂಗ್ರಹಾನುವಾದವನ್ನು ಮಾಡಿಕೊಟ್ಟಿರುವವರು ಶ್ರೀ ಎಸ್. ಸುರೇಂದ್ರ.*

**ಡಾ|| ವಿ. ಕೃಷ್ಣ ಅನಂತ್**

ಅಂದಿನ ದಿನಗಳಲ್ಲಿ ಜರುಗಿದ್ದು ಮುಸ್ಲಿಮರು ಮತ್ತು ಮುಸ್ಲಿಮ್ ಲೀಗ್‌ನ ವಿರುದ್ಧ ಅಪಪ್ರಚಾರ ! ಇಂದು ಪಾಕಿಸ್ತಾನ ! ತಪ್ಪಿದರೆ ಕ್ರೈಸ್ತರು ! ಅಂದರೆ, ಎಂದೆಂದಿಗೂ ಕೋಮು ದಳ್ಳುರಿ ಉರಿಯುತ್ತಲೇ ಇರಬೇಕು ! ಇವು ಕೋಮುವಾದಿಗಳಿಗೆ ಗ್ರಾಸವಾಗಿರುವ ಮುಖ್ಯ ಅಂಶಗಳು. ಇದೇ ಬಗೆಯ ದೃಷ್ಟಿಕೋನವನ್ನಿಟ್ಟುಕೊಂಡಿರುವವರು ಅಂದಿನ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಈಗಿನ ಕಾಂಗ್ರೆಸ್(ಐ) ಪಕ್ಷದಲ್ಲಿನ ಬಹು ಮುಖ್ಯ ಸ್ಥಾನಗಳನ್ನು ಅಲಂಕರಿಸಿಕೊಂಡು ಬರುತ್ತಲೇ ಇದ್ದಾರೆ (ಗೋವಿಂದ ವಲ್ಲಭ್ ಪಂತ್, ಮದನ ಮೋಹನ ಮಾಲವೀಯ, ಗೋಪಿಚಂದ್ ಭಾರ್ಗವ ಮುಂತಾದವರು.) ಗೋಲ್ವಲ್‌ಕರ್ ಮತ್ತು ಹೆಡ್ಗೆವಾರ್ ಅವರ ಅನಿಷ್ಟ ಪರಂಪರೆಯೇ ಈಗ ಭಾರತದ ಜಾತ್ಯತೀತ ವ್ಯವಸ್ಥೆಗೆ ಮಾರಕವಾಗುತ್ತಿರುವ 'ಹಿಂದುತ್ವವಾದ.' ಇತಿಹಾಸದ ತಿರುಚುವಿಕೆ ಹಾಗೂ ಗತಿಸಿದ ಹಿಂದೂ ಸಾಮ್ರಾಜ್ಯಗಳ ವೈಭವೀಕರಣಗಳ ನಾಟಕವಾಡಿ ರಾಷ್ಟ್ರೀಯತೆಗೆ ಹೊಸ ಅರ್ಥ ಕಲ್ಪಿಸುವ ಹುನ್ನಾರ ಅವ್ಯಾಹತವಾಗಿ ಜರುಗುತ್ತಿದೆ, ಬಹಿರಂಗವಾಗಿ. ಇದು 'ಗುಪ್ತ ಕಾರ್ಯಕ್ರಮ' ಎಂಬ ಭ್ರಮೆ ಯಾರಿಗೂ ಬೇಡ.

### ರಾಷ್ಟ್ರೀಯತೆ

ಹಾಗೆ ನೋಡಿದರೆ, ಭಾರತೀಯ ಸಂದರ್ಭದಲ್ಲಿ ರಾಷ್ಟ್ರೀಯತೆ ಎನ್ನುವ ಕಲ್ಪನೆಯೇ ಇತ್ತೀಚಿನದು. ವಸಾಹತು ಮತ್ತು ಸಾಮ್ರಾಜ್ಯಶಾಹಿ ವಿರುದ್ಧದ ಹೋರಾಟಗಳೇ ಅದಕ್ಕೆ ಪ್ರೇರಣೆ. ಭಾರತದ ಇತಿಹಾಸವನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿದರೆ ಮಾತ್ರ ಅಂದಿನ ಘಟನೆಗಳನ್ನು, ಆಗುಹೋಗುಗಳನ್ನು ಸರಿಯಾಗಿ ಅರ್ಥೈಸಲು ಸಾಧ್ಯ. ಈ ಹಿನ್ನೆಲೆಯಲ್ಲಿ ೧೮೫೭ರ ಸಿಪಾಯಿ ದಂಗೆ, ಟಿಪ್ಪೂಸುಲ್ತಾನ್ ಹಾಗೂ

ಮರಾಠರ ಹೋರಾಟಗಳ ಮಿತಿಗಳನ್ನು ಗುರುತಿಸಲು ಸಾಧ್ಯ. ಅವರ ಅಪ್ರತಿಮ ಕೆಚ್ಚು ಮತ್ತು ವೀರಾವೇಶದ ಹೋರಾಟಗಳ ಬಗ್ಗೆ ಯಾರೇ ಆಗಲಿ ಹೆಮ್ಮೆ ಪಡಬೇಕಾದ್ದು ಸಹಜ. ಆದರೆ, ಅವರ ಹೋರಾಟಗಳಿಗೆ ರಾಷ್ಟ್ರೀಯ ಕಲ್ಪನೆ ಎಂಬುದು ಎಲ್ಲಿತ್ತು? ಅಲ್ಲದೆ, ಅಂದಿನ ಸಂದರ್ಭದಲ್ಲಿ, ಅವು ವ್ಯವಸ್ಥೆಯ ವಿರುದ್ಧದ ಹೋರಾಟಗಳಾಗಲಿ, ಜನಸಾಮಾನ್ಯರ ಶೋಷಣೆಯ ವಿರುದ್ಧದ ಸಂಘಟಿತ ಹೋರಾಟಗಳಾಗಲಿ, ವಸಾಹತುಶಾಹಿಯ ಉತ್ಪಾದನಾ ವಿಧಾನದ ವಿರುದ್ಧ ಹೋರಾಟಗಳಾಗಲಿ ಆಗಿರಲಿಲ್ಲ.

ರಾಷ್ಟ್ರೀಯತೆಯ ಮೊದಲ ಕಲ್ಪನೆಗಳನ್ನು ದಾದಾಭಾಯ್ ನವ್‌ರೋಜಿ ಹಾಗೂ ಬಾಲಗಂಗಾಧರ ತಿಲಕ್ ಅವರ ಬರಹಗಳಲ್ಲಿ ಮತ್ತು ಅವರು ಸಂಘಟಿಸಿದ ಹೋರಾಟಗಳಲ್ಲಿ ಕಾಣಬಹುದು. ಆರ್ಯರು ಆಕ್ರಮಣಕಾರರಲ್ಲ ಎಂಬ ವಾದವು ಈಗೀಗ ಹೆಚ್ಚು ಪ್ರಚಲಿತವಾಗುತ್ತಿದೆ. ಇದರ ವಿರುದ್ಧದ ಧೋರಣೆ ತಿಲಕರದು. ಇವರ ಅಭಿಪ್ರಾಯವನ್ನೇ, ಜವಾಹರಲಾಲ್ ನೆಹರು ಸಮರ್ಥಿಸುತ್ತಾರೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಇತಿಹಾಸದ ವೈಭವೀಕರಣದ ಪ್ರಯತ್ನಗಳು ಅಲ್ಲಲ್ಲಿ ಜರುಗಿದರೂ ರಾಷ್ಟ್ರೀಯತೆ ಎಂಬುದು ಒಂದು ಪ್ರಗತಿಶೀಲ ಕಲ್ಪನೆಯೆಂದು ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಂಚೂಣಿಯಲ್ಲಿದ್ದ ಬಹುತೇಕ ನಾಯಕರು ಮನಗಂಡಿದ್ದು ನಿರ್ವಿವಾದ. ಪರಿಣಾಮ, ಹಿಂದು, ಮುಸ್ಲಿಮ್, ಕ್ರಿಶ್ಚಿಯನ್ ಎಂಬ ಭೇದಭಾವವಿಲ್ಲದೆ ಸಮಸ್ತ ಜನಕೋಟಿ ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಬಂಡೆದ್ದದ್ದು; ನಂತರ ಅದೊಂದು ವಸಾಹತುಶಾಹಿ, ಸಾಮ್ರಾಜ್ಯಶಾಹಿ ವಿರುದ್ಧದ ಐತಿಹಾಸಿಕ ಹೋರಾಟವಾದದ್ದು.

**ಕಾಂಗ್ರೆಸ್‌ನ ಸ್ವರೂಪ**

ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಹಿಂದುಗಳು, ಮುಸ್ಲಿಮರು, ಕ್ರಿಶ್ಚಿಯನ್ನರು, ಕಾರ್ಮಿಕ ವರ್ಗ ಮತ್ತು ರೈತ ಸಮುದಾಯ, ಬುದ್ಧಿಜೀವಿಗಳು, ಹೀಗೆ ಎಲ್ಲ ಜನ ವಿಭಾಗಗಳ ವೇದಿಕೆಯಂತಿದ್ದ ಮತ್ತು ಹೋರಾಟದ ನಾಯಕತ್ವ ವಹಿಸಿದ್ದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಸ್ವರೂಪ ೧೯೪೭ರ ನಂತರದ ದಿನಗಳಲ್ಲಿ ಬದಲಾವಣೆಯಾಗತೊಡಗಿತು. ಅದರ ಕೆಲವು ನಾಯಕರ ಬಂಡವಾಳಶಾಹಿ ಮತ್ತು ಪುರೋಹಿತಶಾಹಿ ಧೋರಣೆಗಳು ಪಕ್ಷದ ರೀತಿ ನೀತಿಗಳಿಗೂ ಅಂಟಿಕೊಂಡವು. ಇಲ್ಲಿ ಹೇಳಬೇಕಾದ್ದು ಇಷ್ಟೆ : ಕೊಳೆತು ನಾರುತಿದ್ದ ವ್ಯವಸ್ಥೆಯ ಬಳುವಳಿಯಾಗಿ ಬಂದ ಸಾಮಾಜಿಕ–ಆರ್ಥಿಕ ಅನ್ಯಾಯ, ಅಸಮಾನತೆಗಳನ್ನು ತೊಲಗಿಸಿ ಹೊಸ ಸಮಾಜ ವ್ಯವಸ್ಥೆಯನ್ನು ಸೃಷ್ಟಿಸುವ ದೂರದೃಷ್ಟಿ, ಬದ್ಧತೆ ಅಂದಿನ ಸರಕಾರಕ್ಕಿರಬೇಕಿತ್ತು. ಆದರೆ ಅಂದಿನ ವಸ್ತುಸ್ಥಿತಿ ಏನು ಗೊತ್ತೇ? ಹೆಚ್ಚಿನ ಸಂಖ್ಯೆಯಲ್ಲಿ ಮೇಲ್ಜಾತಿಯವರು ಮತ್ತು ಭೂಮಾಲಿಕರೇ ನಾಯಕತ್ವದಲ್ಲಿದ್ದ ಕಾಂಗ್ರೆಸ್ ಊಳಿಗಮಾನ್ಯ ಪದ್ಧತಿ ವಿರುದ್ಧ, ದುಡಿವ ಜನತೆಯ ಪರವಾದ ರೀತಿ ನೀತಿಗಳನ್ನು ರೂಪಿಸುವಲ್ಲಿ ಸಂಪೂರ್ಣವಾಗಿ ಸೋತಿದ್ದು ಭಾರತದ ರಾಜಕಾರಣಕ್ಕೇ ಹೊಸ ತಿರುವು ಕೊಟ್ಟಂತಾಯಿತು. ಇದು ರಾಷ್ಟ್ರಕ್ಕೆ ಕಾಂಗ್ರೆಸ್ ಬಗೆದ ದ್ರೋಹ; ಅದನ್ನು ನಂಬಿ ಪ್ರಗತಿಯ ಕನಸುಗಳನ್ನು ಕಂಡ ಕೋಟಿ ಕೋಟಿ ಜನರ ವಂಚನೆ.

ಜನಸಾಮಾನ್ಯರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ವೈಜ್ಞಾನಿಕ ದೃಷ್ಟಿಯಿಂದ ಪರಿಹರಿಸಲು ಸಾಧ್ಯವಾಗದ ಸಂದರ್ಭಗಳಲ್ಲಿ ಆಡಳಿತವರ್ಗ ಸ್ವಾತಂತ್ರ್ಯ ಹೋರಾಟದ ಮೌಲ್ಯಗಳನ್ನು ಮರೆತು ತೋರಿಕೆಗೆ ಮಾತ್ರವೇ ವೇದ-ಉಪನಿಷತ್ತುಗಳ ಮರೆಹೊಕ್ಕು ಪರಿಹಾರಗಳಿಗಾಗಿ ಹಾತೊರೆದದ್ದು ಇತಿಹಾಸದ ಒಂದು ಭಾಗ. ಇದು ಒಂದು ಪುನರುತ್ಥಾನದ ಪ್ರಕ್ರಿಯೆ; ಆಡಳಿತ ವರ್ಗ ತನ್ನ ಸಿಂಹಾಸನವನ್ನು ಭದ್ರಪಡಿಸಿಕೊಳ್ಳುವ ಒಂದು ಹವಣಿಕೆ. ಇಂತಹ ಸಂದರ್ಭಗಳಲ್ಲಿ ರಾಷ್ಟ್ರೀಯತೆಗೆ ಹೊಸ ಅಪಾರ್ಥಗಳನ್ನು ಕಲ್ಪಿಸುವುದು ಇಂತಹ ಪಕ್ಷಗಳಿಗೆ ಸುಸಂದರ್ಭವಾಗುತ್ತದೆ. ಮುಗ್ಧ ಜನತೆಯ ಭವಿಷ್ಯ ಕತ್ತಲಿನತ್ತ ಸಾಗಲು ಪ್ರಾರಂಭಿಸುವುದು ಇಲ್ಲಿಂದ.

**ಉನ್ನತ ಪರಂಪರೆ**

ತೆಲಂಗಾಣ, ತೇಭಾಗ, ಪುನ್ನಪ್ರ - ವಯಲಾರ್ ಅವುಗಳಂತಹ ಸಶಸ್ತ್ರ ಹೋರಾಟಗಳು, ಭಾರತೀಯ ರಾಯಲ್ ನೌಕಾ ಪಡೆಯ ಬಂಡಾಯ, ಐ. ಎನ್. ಎ. ಸೈನಿಕರ ವಿಚಾರಣೆ, ರೈಲ್ವೆ ಕಾರ್ಮಿಕರ ಬೃಹತ್ ಹೋರಾಟಗಳು ಇಂತಹ ಅನೇಕ ಹೋರಾಟಗಳು ಸಾಮ್ರಾಜ್ಯಶಾಹಿ ವಿರುದ್ಧವಾಗಿದ್ದುದರ ಜೊತೆಗೆ ಪ್ರಜಾಪ್ರಭುತ್ವ, ಜಾತ್ಯತೀತತೆ ಮತ್ತು ಸಮಾನತೆಗಳ ಮೌಲ್ಯಗಳನ್ನೇ ಮೂಲ ಅಂಶಗಳನ್ನಾಗಿಟ್ಟುಕೊಂಡು ಬೆಳೆದುಬಂದವು. ಅಂದಿನ ದಿನಗಳಲ್ಲಿ ಇಡೀ ಜನಸ್ತೋಮ ಕೋಮು, ಜಾತಿಗಳೆಂಬ ಕ್ಷುಲ್ಲಕ ವಿಷಯಗಳನ್ನು ಬದಿಗಿಟ್ಟು ಬೀದಿಗಿಳಿದದ್ದು ಆ ಹೋರಾಟಗಳ ಉಜ್ವಲ ಚಾರಿತ್ರ್ಯಕ್ಕೆ ಕುರುಹಾಗಿದೆ. ಅದೇ ಸಮಯದಲ್ಲಿ ಕೋಮುವಾದಿಗಳ ಧ್ವನಿ ಸದ್ದಿಲ್ಲದೆ ಅಡಗಿಹೋದದ್ದೂ [illegible] ಸಂದರ್ಭದಲ್ಲಿನ ಬಹು ಮುಖ್ಯ ಅಂಶ.



**ನಂತರದ ವಿಪರ್ಯಾಸ**

ಸಹಜವಾಗಿಯೇ, ಕಾಂಗ್ರೆಸ್ ಕೈಬಿಡುತ್ತಿದ್ದ ಸಾಮ್ರಾಜ್ಯಶಾಹಿ ವಿರೋಧಿ ಧೋರಣೆಗಳು ಮತ್ತು ಸಮಾಜವಾದದ ಮೌಲ್ಯಗಳ ಹಿಂಬದಿಯಲ್ಲಿಯೇ ಆ ಪಕ್ಷದ ನಾಯಕರು ಗ್ರಾಮಾಂತರ ಪ್ರದೇಶಗಳ ಭೂಮಾಲಿಕರ ಜೊತೆ ಶಾಮೀಲಾಗಿದ್ದುದು, ಬಂಡವಾಳಶಾಹಿ ಬೇರೂರುವುದಕ್ಕೆ ಕಾರಣವಾದದ್ದು, ಈ ನಿಟ್ಟಿನಲ್ಲಿ ಗಮನಾರ್ಹವಾದ ಬೆಳವಣಿಗೆ. ಆಡಳಿತ ವರ್ಗ ಹೆಚ್ಚು ಹೆಚ್ಚಾಗಿ ಪ್ರಜಾಪ್ರಭುತ್ವವಾದಿ ಬೆಳವಣಿಗೆಗೆ ವಿರುದ್ಧವಾಗಿ ಕೋಮುವಾದದ ಬೀಜಗಳನ್ನು ಬಿತ್ತಲು ಪ್ರಯತ್ನಿಸಿದ್ದು ಈ ಕಾಲಘಟ್ಟದಲ್ಲಿಯೇ. ಹಿಂದುತ್ವದ ಸೋಗಿನಲ್ಲಿ ಫ್ಯಾಸಿಸ್ಟ್ ಶಕ್ತಿಗಳು ಯೋಜಿತ ರೀತಿಯಲ್ಲಿ ತಮ್ಮ ಕಾರ್ಯಾಚರಣೆಯನ್ನು ಆಗಲೇ ಪ್ರಾರಂಭಿಸಿದ್ದು ಕಾಕತಾಳೀಯವೇನಲ್ಲ. ಹಿಟ್ಲರ್‌ನ ಜರ್ಮನಿಯಲ್ಲಿ ಮತ್ತು ಮುಸ್ಸೋಲಿನಿಯ ಇಟಲಿಯಲ್ಲಿ ಆದ ಘಟನೆಗಳನ್ನು ಈ ಬೆಳವಣಿಗೆಗಳು ನಮಗೆ ನೆನಪಿಗೆ ತಂದುಕೊಡುತ್ತವೆ.

**ಇಂದಿನ ಕರಾಳತೆ**

ಸ್ವತಂತ್ರ ಭಾರತದ ಆರ್ಥಿಕ ಬೆಳವಣಿಗೆ ಯಾವ ಹಾದಿಯಲ್ಲಿ ಮುಂದುವರೆಯಬೇಕು ಹಾಗೂ ಇಂದು ಸರಕಾರ ಆಡಂಬರದಿಂದ ಅನುಸರಿಸುತ್ತಿರುವ ಉದಾರೀಕರಣ ಅಥವಾ ಸಂರಚನೆಯ ಹೊಂದಾಣಿಕೆ ನೀತಿ, ಇವುಗಳ ಬಗ್ಗೆ ಆಳವಾದ ವಿಶ್ಲೇಷಣೆಯ ಅಗತ್ಯವಿದೆ.

೧೯೪೭ರಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಪಕ್ಷಕ್ಕೆ ಮಾರ್ಕ್ಸ್‌ವಾದದ ಆಧಾರದ ಮೇಲೆ ಸಾಮಾಜಿಕ ಕ್ರಾಂತಿಯನ್ನು ತರಬೇಕೆನ್ನುವ ಉದ್ದೇಶಗಳೇನೂ ಇರಲಿಲ್ಲ. ಕಾರ್ಮಿಕ ಚಳುವಳಿಗಳು ಮತ್ತಿತರ ರಾಷ್ಟ್ರಮಟ್ಟದ ಬೃಹತ್ ಜನತಾ ಹೋರಾಟಗಳನ್ನು ಅವತ್ತಿನ ಆಡಳಿತ ವರ್ಗ ಹತ್ತಿಕ್ಕುತ್ತಿದ್ದದ್ದು ಇದಕ್ಕೆ ಸಾಕ್ಷಿ.

**ಹೀಗಾದುದರ ಹಿನ್ನೆಲೆ**

ಸ್ವತಂತ್ರ ಆರ್ಥಿಕ ಬೆಳವಣಿಗೆ, ಸರಕಾರದಿಂದ ಬಂಡವಾಳ ಹೂಡಿಕೆ, ಸಾರ್ವಜನಿಕ ಕ್ಷೇತ್ರಕ್ಕೆ ಮಾನ್ಯತೆ, ಭೂಸುಧಾರಣೆ, ಭೂಸ್ವಾಮಿಗಳ ಹಿಡಿತದಿಂದ ಬಡ ರೈತರ ವಿಮೋಚನೆ ಇವುಗಳೆಲ್ಲಕ್ಕೂ ಇಂಬು ಕೊಡುವಂತಿದ್ದ [illegible] ಯೋಜನೆಯನ್ನು [illegible] ಕಾರ್ಯರೂಪಕ್ಕೆ ತರುವ [illegible] ಕಾಂಗ್ರೆಸ್ ಸರಕಾರದ ಜನಪ್ರಿಯತೆಯನ್ನು [illegible] ಹೆಚ್ಚಿಸಿತ್ತು. ಭೂಮಾಲಿಕರು ಹಾಗೂ ಹಣವಂತ ರೈತರ ಒಲವು [illegible] ಸರಕಾರಕ್ಕಿತ್ತು. ಹಾಗೆಯೇ ದಲಿತರ, ಮುಸ್ಲಿಮರ ಬೆಂಬಲವೂ ಕೂಡಾ ಸರಕಾರದ [illegible] ವಾಸ್ತವಾಂಶ

ಶೋಷಿತರ, ದುಡಿವ ಜನರ ಪರವಾದ ಅನೇಕ ಹೋರಾಟಗಳನ್ನು ಸಂಘಟಿಸುತ್ತಿದ್ದ ಕಮ್ಯುನಿಸ್ಟ್ ಮತ್ತು ಸಮಾಜವಾದಿ ಪಕ್ಷಗಳ ವರ್ಚಸ್ಸಿಗೆ ಈ ಕಾಲಘಟ್ಟದಲ್ಲಿ ಧಕ್ಕೆಯುಂಟಾದುದಕ್ಕೆ ಹಲವಾರು ಕಾರಣಗಳಿವೆ.

ಸ್ವಾತಂತ್ರ್ಯ ಪಡೆದ ಗುಂಗಿನಲ್ಲಿ ಅಧಿಕಾರದ ಗದ್ದುಗೆಯನ್ನೇರಿದ ಕಾಂಗ್ರೆಸ್ ಪಕ್ಷ ರಾಷ್ಟ್ರೀಯ ವಿಮೋಚನಾ ಚಳುವಳಿಯ ಮೂಲ ಉದ್ದೇಶಗಳನ್ನೇ ಮರೆತು ಬಡತನ ನಿವಾರಣೆಯು ಸರಕಾರದ ಮುಂದಿರುವ ಬಹುಮುಖ್ಯ ಸವಾಲೆಂಬುದನ್ನೇ ಪರಿಗಣಿಸಲಿಲ್ಲ. ವಿವಿಧ ಕ್ಷೇತ್ರಗಳಲ್ಲಿ ಸ್ವಲ್ಪಮಟ್ಟಿಗೆ ಅಭಿವೃದ್ಧಿ ಕಂಡುಬಂದರೂ ಮೊದಲ ಮೂರು ಪಂಚವಾರ್ಷಿಕ ಯೋಜನೆಗಳು ಈ ದೃಷ್ಟಿಯಲ್ಲಿ ಫಲಕಾರಿಯಾಗಲಿಲ್ಲವೆಂದೇ ಹೇಳಬೇಕು. ಆಹಾರ ಪದಾರ್ಥಗಳಿಗೆ ಇನ್ನಿಲ್ಲದ ಬೇಡಿಕೆ, ಜೊತೆಗೆ ೧೯೭೪-೭೫ ಮತ್ತು ೧೯೬೨-೧೯೬೬ರಲ್ಲಿ ಉದ್ಭವಿಸಿದ ಕ್ಷಾಮದ ಪರಿಸ್ಥಿತಿ, ಬಿಹಾರದ ಬರಗಾಲ, ಈ ಕಾರಣಗಳಿಂದ ೨. ೨೦ ಮಿಲಿಯನ್ ಟನ್‌ನಷ್ಟು ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳಬೇಕಾಯಿತು.

೧೯೭೦ರ ನಂತರ ಪಂಚವಾರ್ಷಿಕ ಯೋಜನೆಗಳನ್ನು ಕೈಬಿಟ್ಟು ವಾರ್ಷಿಕ ಯೋಜನೆಗಳನ್ನು ಜಾರಿಗೆ ತಂದಾಗ ಎಲ್ಲ ಆರ್ಥಿಕ ಲೆಕ್ಕಾಚಾರಗಳು ಏರುಪೇರಾದವು. ಆಹಾರ ಧಾನ್ಯಗಳ ಕೊರತೆ, ಬೆಲೆ ಏರಿಕೆಗಳಿಂದ ಗ್ರಾಮೀಣ ಪ್ರದೇಶಗಳಲ್ಲಿಯೇ ಅಲ್ಲದೆ ನಗರಗಳಲ್ಲಿಯೂ ಜನಸಾಮಾನ್ಯರು ಕಂಗಾಲಾದರು. ಪರಿಣಾಮ, ಸರಕಾರದ ವರ್ಚಸ್ಸಿನ ಭಾರಿ ಇಳಿಮುಖ. ಬಹುತೇಕ ರಾಜ್ಯ ಚುನಾವಣೆಗಳಲ್ಲಿ ಕಾಂಗ್ರೆಸ್‌ಗೆ ಸೋಲು. ಚಿಂತೆಗೀಡಾದ ಕಾಂಗ್ರೆಸ್ ಪಕ್ಷ ಸೈದ್ಧಾಂತಿಕವಾಗಿ ಬಂಡವಾಳಶಾಹಿ ಧೋರಣೆಗಳಿಗೆ ಇನ್ನೂ ಹೆಚ್ಚಿನ ಒಲವು ತೋರಿಸಲು ಪ್ರಾರಂಭಿಸಿತು. ಹತಾಶೆಗೊಂಡ ಇಂದಿರಾ ಗಾಂಧಿ ಸರಕಾರ ಕೋಟ್ಯಂತರ ಕೃಷಿ ಕೂಲಿಗಾರರಿಗೆ, ಬಡರೈತರ ಸಮಸ್ಯೆಗಳಿಗೆ ಮೂಲಭೂತ ಪರಿಹಾರ ವೆನಿಸಿದ್ದ ಭೂಸುಧಾರಣೆಯನ್ನು ಬದಿಗೊತ್ತಿ ತಾನು ಬಹಳ ಪ್ರಗತಿಶೀಲ ಎಂದು ಸೋಗು ಹಾಕಿ ಬ್ಯಾಂಕ್ ರಾಷ್ಟ್ರೀಕರಣ, ರಾಜಧನ ರದ್ಧತಿ ಮತ್ತು ಸಾರ್ವಜನಿಕ ವಿತರಣಾ ವ್ಯವಸ್ಥೆಯ ವಿಸ್ತರಣೆ, ಇಂತಹ ಕ್ರಮಗಳನ್ನು ಘೋಷಿಸಿತು. ಇದೇ ಅವಧಿಯಲ್ಲೇ ಜನತೆಯ ಆಕ್ರೋಶಕ್ಕೆ ಕಾರಣವಾದದ್ದು ವಿಪರೀತದ ಬೆಲೆ ಏರಿಕೆ, ಕಳ್ಳ ದಾಸ್ತಾನು, ಕಪ್ಪು ಮಾರುಕಟ್ಟೆ ಮತ್ತು ಲಂಚಗುಳಿತನ.

ಈ ಸಂದರ್ಭದಲ್ಲಿಯೇ "ರಾಜಕೀಯ ಗುತ್ತಿಗೆದಾರರು'' ಎನ್ನಬಹುದಾದ ಹೊಸ ವರ್ಗ ಭಾರತದ [illegible] ರಾಜಕಾರಣಕ್ಕೆ ಒಂದು ಹೊಸ ಆಯಾಮವನ್ನು ಸೃಷ್ಟಿಸಿದ್ದು ದೊಡ್ಡ [illegible] ಬೆಳವಣಿಗೆಯಾಯಿತು.

ಹಾಗೆ ನೋಡಿದರೆ, ಇಲ್ಲಿಂದಲೇ ಪ್ರಾರಂಭವಾದದ್ದು ಕಾಂಗ್ರೆಸ್‌ನ ಹೊಸ ಅವತಾರ. ಚುನಾವಣೆಗಳಿಗಾಗಲಿ ಯಾವುದೇ ರಾಜಕೀಯ ಚಟುವಟಿಕೆಗಳಿಗಾಗಲಿ ಕಾಂಗ್ರೆಸ್ ತನ್ನ ಉಳಿವಿಕೆಗಾಗಿ ಈ ವರ್ಗವನ್ನೇ ಅವಲಂಬಿಸಬೇಕಾಗಿ ಬಂದದ್ದು ಭಾರತದ ರಾಜಕೀಯ ಇತಿಹಾಸದಲ್ಲಿ ಒಂದು ಅನಿಷ್ಟ ಬೆಳವಣಿಗೆಯಾಗಿ ಪರಿಣಮಿಸಿತು. ಲಂಚಗುಳಿತನ ಸಂಸ್ಥೀಕರಣಗೊಂಡದ್ದು, ದೇಶದ ರಾಜಕೀಯದಲ್ಲಿ ಗೂಂಡಾಗಳ, ಸಮಾಜ ಘಾತುಕರ ಆಧಿಪತ್ಯದ ಉಗಮವಾದದ್ದು ಈ ಸಂದರ್ಭದಲ್ಲೇ.

ತೀವ್ರವಾಗುತ್ತಿದ್ದ ಆರ್ಥಿಕ ಬಿಕ್ಕಟ್ಟಿನ ವಿರುದ್ಧ ಬಿಹಾರ್, ಉತ್ತರ ಪ್ರದೇಶ, ಗುಜರಾತ್‌ಗಳಲ್ಲಿ ಭುಗಿಲೆದ್ದ ಜನಾಂದೋಲನವನ್ನು ಬಗ್ಗುಬಡಿಯಲು ಆಡಳಿತ ವರ್ಗ ಅಮಾನವೀಯ ಕ್ರಮಗಳನ್ನು ಬಳಸಿತು. ಆನಂತರ ಜರುಗಿದ ಚುನಾವಣೆಗಳಲ್ಲಿ ಹೀನಾಯ ಸೋಲನ್ನನುಭವಿಸಿದ ಕಾಂಗ್ರೆಸ್ ೧೯೮೦ರಲ್ಲಿ ಮತ್ತೆ ಅಧಿಕಾರಕ್ಕೆ ಬಂದಿತು. ಕೂಡಲೆ ತಾನು ಜನಪರವಾದ ಸರಕಾರ ಎನಿಸಿಕೊಳ್ಳಲು ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಬಡತನ ನಿವಾರಣಾ ಯೋಜನೆಗಳಂತಹ ನಾಟಕಗಳ ಮರೆಹೋದದ್ದು ಒಂದು ದೊಡ್ಡ ಕತೆ. ಆದರೂ, ಬ್ಯಾಂಕ್ ರಾಷ್ಟ್ರೀಕರಣ, ಕೃಷಿಯೇತರ ಕ್ಷೇತ್ರಗಳಲ್ಲಿ ಉದ್ಯೋಗ ಅವಕಾಶಗಳಿಗೆ ಹೆಚ್ಚಿನ ಆದ್ಯತೆ ಹಾಗೂ ಖಾಸಗಿ ಕ್ಷೇತ್ರಗಳಲ್ಲಿ ಆದ ಕೆಲವು ಬದಲಾವಣೆಗಳಿಂದಾಗಿ ಆರ್ಥಿಕ ಕ್ಷೇತ್ರದಲ್ಲಿ ಒಂದೆರಡು ಸಕಾರಾತ್ಮಕ ಬೆಳವಣಿಗೆಗಳಾದದ್ದು ನಿಜವೇ.

**ಪ್ರಸಕ್ತ ಸನ್ನಿವೇಶ**

ಈ ಪ್ರಕ್ರಿಯೆಯಲ್ಲಿ ರಾಷ್ಟ್ರದ ರಾಜಕಾರಣದಲ್ಲಿ ಘಟಿಸಿದ ಕೆಲವು ಮಹತ್ತರ ಬದಲಾವಣೆಗಳು ನಮ್ಮ ಮುಂದಿವೆ. ಆಡಳಿತ ವರ್ಗ ದಿಕ್ಕೆಡುತ್ತಿದ್ದ ಮತ್ತು ಜನಸಾಮಾನ್ಯರಿಂದ ದೂರ ಸರಿಯುತ್ತಿದ್ದ ಅಂದಿನ ಸಂದರ್ಭದಲ್ಲಿ ಹುಟ್ಟಿಕೊಂಡ ಅನೇಕ ಪ್ರಾದೇಶಿಕ ಪಕ್ಷಗಳು ರಾಷ್ಟ್ರದ ರಾಜಕೀಯ ಚಿತ್ರಣಕ್ಕೆ ಹೊಸ ತಿರುವು ಕೊಟ್ಟವು. ಅದೇ ಸಂದರ್ಭದಲ್ಲಿ ಕೆಲವು ಸುಧಾರಣೆಗಳನ್ನು, ಅದರಲ್ಲೂ ಭೂಸುಧಾರಣೆಯನ್ನು ಜಾರಿಗೆ ತರುವ ದಿಟ್ಟ ಹೆಜ್ಜೆ ಇಟ್ಟದ್ದು ಕೇರಳ ಮತ್ತು ಪಶ್ಚಿಮ ಬಂಗಾಲದ ಎಡ ಪಕ್ಷಗಳ ಸರಕಾರಗಳು. ತೆಲುಗು ದೇಶಂ ಪಕ್ಷದ ನೇತೃತ್ವದಲ್ಲಿ ಆಂಧ್ರದಲ್ಲಿಯೂ ಇಂತಹ ಕ್ರಮಗಳನ್ನು ಕೈಗೊಳ್ಳಲಾಯಿತು. ಬಿಹಾರ್, ಉತ್ತರ ಪ್ರದೇಶದ ಸರಕಾರಗಳು ಕನಿಷ್ಠ ಮಟ್ಟದ ಯಾವ ಜನಪರ ಯೋಜನೆಗಳನ್ನೂ ಜಾರಿಗೆ ತರುವ ರಾಜಕೀಯ ಗತ್ತನ್ನು ಪ್ರದರ್ಶಿಸಲಿಲ್ಲ. ಕರ್ನಾಟಕದಲ್ಲಿ ದೇವರಾಜ ಅರಸ್ ಸರ್ಕಾರ ಒಂದೆರಡು ಹೆಜ್ಜೆ ಇಟ್ಟು ಅಲ್ಲೇ ನಿಂತುಬಿಟ್ಟಿತು.

ಆರ್ಥಿಕ ಬೆಳವಣಿಗೆ ಮತ್ತು ಬಡತನ ನಿವಾರಣೆ ಎರಡೂ ಒಂದಕ್ಕೊಂದು ಹೊಂದಿಕೊಂಡು ಆಚರಣೆಗೆ ತರಬೇಕಾದ ಅಂಶಗಳು. ಅದಕ್ಕೆ ಬದಲಾಗಿ ನೀತಿಗೆಟ್ಟ, ರಾಜಕೀಯ ಮುನ್ನೋಟವಿಲ್ಲದ, ಸರಕಾರಿ ಆಶ್ರಯದಲ್ಲಿನ ಯೋಜನೆಗಳನ್ನು ಕೇಂದ್ರ ಸರಕಾರ ಜಾರಿಗೆ ತಂದದ್ದು ಅನೇಕ ಸಮಸ್ಯೆಗಳಿಗೆ ಕಾರಣವಾಯಿತು. ಇದರ ವಿರುದ್ಧ ರಾಷ್ಟ್ರಾದ್ಯಂತ ಹರಡಿಕೊಂಡ ಪ್ರತಿಭಟನಾ ಹೋರಾಟಗಳಲ್ಲಿ ಬಲಪಂಥೀಯ ಶಕ್ತಿಗಳದ್ದೇ ಮೇಲುಗೈ ಆಗಿ ಎಡ ಪಕ್ಷಗಳು ಜನಸಾಮಾನ್ಯರ ಆವತ್ತಿನ ವಿಕೋಪಕ್ಕೆ ವೈಜ್ಞಾನಿಕ ವಿಶ್ಲೇಷಣೆಯ ಆಧಾರದಿಂದ ಸ್ಪಂದಿಸದೇ ಹೋದದ್ದು, ನಂತರದ ದಿನಗಳ ರಾಜಕೀಯ ಬೆಳವಣಿಗೆಗಳ ಮೇಲೆ ಅರ್ಥಪೂರ್ಣವಾದ ಪರಿಣಾಮ ಬೀರಿದ್ದು, ಎಲ್ಲರಿಗೂ ತಿಳಿದಿರುವ ವಿಷಯ. ಅಂದಿನ ರೈಲ್ವೆ ಮುಷ್ಕರವಾಗಲಿ, ಜಯಪ್ರಕಾಶ ನಾರಾಯಣ್ ಅವರ 'ಸಂಪೂರ್ಣ ಕ್ರಾಂತಿ'ಯ ಚಳುವಳಿಯಾಗಲಿ ಈ ನಿಟ್ಟಿನಲ್ಲಿ ಒಂದೆರಡು ಉದಾಹರಣೆಗಳು ಮಾತ್ರ.

ವಿದೇಶಿ ಸಾಲದ ಹೊರೆ ಹೆಚ್ಚಾಗುತ್ತಿದ್ದ ಅಂದಿನ ಕಾಲಘಟ್ಟದಲ್ಲಿ ಮತ್ತು ಆಡಳಿತ ವರ್ಗವು ಸಮಾಜವಾದದ ಸೋಗನ್ನು ತೊರೆದು ಅಧಿಕಾರದ ಗದ್ದುಗೆಯೇರಲು ಜನವಿರೋಧಿ ನೀತಿಗಳ ಮರೆ ಹೋಗುತ್ತಿದ್ದ ಸಂದರ್ಭದಲ್ಲಿ ಬಲಪಂಥೀಯರು, ಅದರಲ್ಲೂ ಆರ್. ಎಸ್. ಎಸ್., ತಮಗೆ ಒದಗಿಬಂದ ಈ ಸುಸಂದರ್ಭವನ್ನು ಉಪಯೋಗಿಸಿಕೊಳ್ಳಲು ಅನುವಾದರು. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತಿತರ ಅಂತರರಾಷ್ಟ್ರೀಯ ಸಂಸ್ಥೆಗಳ ಷರತ್ತುಗಳ ಒತ್ತಡದಿಂದ ಸಮಾಜಕಲ್ಯಾಣ ಯೋಜನೆ, ಸಹಾಯಧನ ವ್ಯವಸ್ಥೆ ಎಲ್ಲವನ್ನೂ ಸರಕಾರ ಕ್ರಮೇಣ ಆರ್ಥಿಕ ನೀತಿಗಳ ವ್ಯಾಪ್ತಿಯಿಂದ ದೂರವಿಡುವ ಪ್ರಕ್ರಿಯೆಯಲ್ಲಿ ಪ್ರಾಮುಖ್ಯತೆಗೆ ಬಂದದ್ದು ಮುಕ್ತ ಮಾರುಕಟ್ಟೆಯ ವ್ಯವಸ್ಥೆ.

ಈ ಕಾಲಘಟ್ಟದಲ್ಲಿ ಕಾಂಗ್ರೆಸ್ (ಐ) ಪಕ್ಷದ ರೀತಿನೀತಿಗಳಲ್ಲಿ ಕೋಮುವಾದದ ಒಲವುಗಳನ್ನು ಕಾಣುವುದು ಕಷ್ಟವೇನಲ್ಲ. ಹಿಂದುತ್ವ ಮತ್ತು ಬಹುಸಂಖ್ಯಾತವಾದ ಎರಡೂ ಕಾಂಗ್ರೆಸ್, ಭಾ. ಜ. ಪ.



'ಚರಿತ್ರೆ'ಯ ತಯಾರಿ ನಡೆದಿದೆ

ಗಳೆರಡೂ ಹೆಚ್ಚು ಜನಪ್ರಿಯವಾಗಲು ನಡೆಸಿದ ಸೆಣಸಾಟದ ಪರಿಣಾಮಗಳು. ಇದು ನಂತರದ ಮಹತ್ತರ ರಾಜಕೀಯ ಬೆಳವಣಿಗೆಗಳಿಗೆ ದ್ಯೋತಕವಾಗಿದೆ.

ಇಂದು ಭಾ. ಜ. ಪ. ಬಹುದೊಡ್ಡ ರಾಜಕೀಯ ಪಕ್ಷವೆಂಬುದು ನಿಜ. ಸೈದ್ಧಾಂತಿಕವಾಗಿ ಹಿಟ್ಲರನ ಫ್ಯಾಸಿಸಂಗೂ ಇದಕ್ಕೂ ಬಹಳ ಸಾಮ್ಯತೆ ಇದೆ. ಪ್ರಜಾಪ್ರಭುತ್ವವನ್ನು ನುಂಗಿಹಾಕಿದ, ಎರಡನೆಯ ಜಾಗತಿಕ ಯುದ್ಧಕ್ಕೆ ಕಾರಣನಾದ ಹಿಟ್ಲರನ ಪಾಶವೀ ಕೃತ್ಯಗಳನ್ನು ಈ ಪಕ್ಷವೂ ಅನುಸರಿಸುತ್ತದೆ.

**ಆದ್ಯತೆ ಯಾವುದಕ್ಕೆ?**

ಜಾತ್ಯತೀತತೆ-ಕೋಮುವಾದ ಇವೆರಡರ ಮಧ್ಯೆಯ ಘರ್ಷಣೆಯೇ ಇಂದು ರಾಷ್ಟ್ರದ ಮುಂದಿರುವ ದೊಡ್ಡ ಪ್ರಶ್ನೆ ಎಂಬುವ ಅಪಪ್ರಚಾರ ನಡೆಯುತ್ತಿದೆ. ಕಾಂಗ್ರೆಸ್‌ಗೆ ಬೇಕಾಗಿರುವುದೂ ಇದೇ. ಆದರೆ ನಿಜಾಂಶವೆಂದರೆ ಕೋಮುವಾದವನ್ನು ಮೀರಿ ಇಲ್ಲಿನ ವ್ಯವಸ್ಥೆಯ ಆಂತರಿಕ ವೈರುಧ್ಯಗಳ ಫಲವಾಗಿ ಉಂಟಾಗಿರುವ ಆರ್ಥಿಕ ಮುಗ್ಗಟ್ಟಿನ ಬಗ್ಗೆ ಕೂಡಲೆ ಜನತೆ ತಮ್ಮ ಗಮನಹರಿಸಬೇಕಾಗಿದೆ. ಅದಕ್ಕೆ ಅವಶ್ಯಕವಾದ ಪರ್ಯಾಯದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಸ್ಥಾಪಿಸುವ ಸಲುವಾಗಿ ಚಳುವಳಿಗಳನ್ನು ರೂಪಿಸಬೇಕಾಗಿದೆ. ಜಾತ್ಯತೀತ ಮತ್ತು ಪ್ರಜಾಪ್ರಭುತ್ವಗಳ ಉಜ್ವಲ ಇತಿಹಾಸ, ಪರಂಪರೆ ಇರುವ . ಎಡ ಪಕ್ಷಗಳು ಜಾತ್ಯತೀತತೆ ಮತ್ತು ಕೋಮುವಾದಕ್ಕೆ ಮಾತ್ರ ಸೀಮಿತಗೊಂಡ ಈ ರಾಜಕೀಯ ಚಿತ್ರಣದ ಪಿತೂರಿಯ ಬಲೆಗೆ ಬೀಳದೆ ಜನರನ್ನು ಕ್ರಾಂತಿಕಾರಿ ಹೋರಾಟಗಳಲ್ಲಿ ತೊಡಗಿಸಬೇಕಾಗಿದೆ. ರಾಷ್ಟ್ರೀಯ ಬಂಡವಾಳಶಾಹಿ ಗಳಿಗೆ ಎಂದಿನಿಂದಲೂ ಸಮಾಜವಾದಿ ಹಾದಿಯಲ್ಲಿ ತಮ್ಮ ನೀತಿಗಳನ್ನು ರೂಪಿಸಿ ಅಭಿವೃದ್ಧಿಯನ್ನು ತರಬೇಕೆಂಬುದಿರಲಿಲ್ಲ. ಅವರು ಕಾಲಕಾಲಕ್ಕೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪರಿಸ್ಥಿತಿಗೆ ಹೊಂದಿಕೊಂಡಂತೆ ತಮ್ಮ ಬಣ್ಣವನ್ನು ಬದಲಾಯಿಸುತ್ತಲೇ ಬಂದಿದ್ದಾರೆ. ''ಜಾಗತಿಕ ಬಂಡವಾಳಶಾಹಿ'' ಯಿಂದ ಮೊದಲ್ಗೊಂಡು ಇಂದು ''ಉದಾರೀಕರಣ'' ಮತ್ತು ''ಖಾಸಗೀಕರಣ''ದ ಮಾತುಗಳನ್ನೇ ಆಡುತ್ತಿದ್ದಾರೆ. ಇದೆಲ್ಲದರ ಮೂಲ ಉದ್ದೇಶ ಖಾಸಗಿ ಬಂಡವಳಿಗರು, ಮಾಲಿಕ ವರ್ಗ ಮತ್ತು ಭೂಮಾಲಿಕರ ಉದ್ಧಾರವಷ್ಟೆ. ಈ ಕಾರ್ಯಾಚರಣೆಗೆ ಕೋಮು ಮತ್ತು ಮತೀಯ ದ್ವೇಷ ನೆರವಾಗುವುದು ಖಂಡಿತ. ಮಾರ್ಕ್ಸ್ ಈ ಮಾತುಗಳನ್ನು ಬಹಳ ಹಿಂದೆಯೇ ಹೇಳಿದ್ದಾನೆ. [illegible] ಮಾಡಿಕೊಂಡು ಇಂದಿಗೆ ಅನ್ವಯಿಸುವುದು [illegible] ಹೋರಾಟಗಳ ಜವಾಬ್ದಾರಿ.

ಈಗಿನ ಜಾಗತಿಕ ಬಂಡವಾಳದ ಕ್ರೂರ ಕ್ರೀಡೆಯ ಹಿನ್ನೆಲೆಯಲ್ಲಿ ಜನ ವಿರೋಧಿ 'ಉದಾತ್ತ' ಚಿಂತನೆಗಳು ಆಡಳಿತ ವರ್ಗದ (ಕಾಂಗ್ರೆಸ್ ಆಗಲಿ, ಭಾ. ಜ. ಪ. ಆಗಲಿ) ಆರ್ಥಿಕ ನೀತಿಗಳಿಂದ ಸಹಾಯಧನ ಖೋತಾ, ಲಂಚಗುಳಿತನ, ಅನಕ್ಷರತೆ, ಕಳ್ಳ ದಾಸ್ತಾನು, ಸರಕಾರಿ ನೌಕರಿಗಳಲ್ಲಿ ಖೋತಾ ಇವುಗಳಿಗೆ ಅನುವಾಗುವುದರಲ್ಲಿ ಸಂದೇಹವಿಲ್ಲ.

ಇವೆಲ್ಲದರ ಅರ್ಥ ಇಷ್ಟೆ : ಭಾರತದಲ್ಲಿ ಫ್ಯಾಸಿಸಂ ಅವತರಿಸುವ ಎಲ್ಲ ಲಕ್ಷಣಗಳೂ ಕಂಡುಬರುತ್ತಿವೆ. ಅಧ್ಯಕ್ಷೀಯ ಪದ್ಧತಿ, ದೊಡ್ಡ ಬಂಡವಾಳಶಾಹಿಯ ಆಟಾಟೋಪಗಳು, ಬಹುಸಂಖ್ಯಾತವಾದ, ಸಂವಿಧಾನದ ವಿಮರ್ಶೆ, ಅಲ್ಪಸಂಖ್ಯಾತರ ಮೇಲೆ ದೌರ್ಜನ್ಯ, ಇವೆಲ್ಲವೂ ಆ ಲಕ್ಷಣಗಳ ಕೆಲವು ಅಂಶಗಳು. ಕಟ್ಟೆಚ್ಚರ ಹಿಂದೆಂದಿಗಿಂತಲೂ ಇಂದು ಹೆಚ್ಚು ಅಗತ್ಯವಾಗಿದೆ.

○○○

# ಅಪರೂಪದ ವಿಜ್ಞಾನಿ ಜೆ. ಡಿ. ಬರ್ನಾಲ್

ಇಪ್ಪತ್ತೊಂದನೆಯ ಶತಮಾನದಲ್ಲಿ ವಿಜ್ಞಾನದ ಮುನ್ನಡೆಗೆ ಇಪ್ಪತ್ತನೆ ಶತಮಾನದ ವೈಜ್ಞಾನಿಕ ಕ್ರಾಂತಿಯು ಅದ್ಭುತವಾದ ಆರಂಭದ ನೆಲೆಯನ್ನು ಕಲ್ಪಿಸಿಕೊಟ್ಟಿದೆ. ಮಾನವ ಜಿನೋಮ್ ಭೂಪಟವನ್ನು ಪೂರ್ಣಗೊಳಿಸಿದ ಬಗೆಗಿನ ವರದಿಗೆ ಆ ಮಹತ್ವವಿದೆ. ಇದೊಂದು ದೊಡ್ಡ ಜಿಗಿತ. ಮಾನವನ ಚಿಂತನೆಯ ಮೇಲೆ ಅದರ ಆಳವಾದ ಪ್ರಭಾವ ಖಂಡಿತ. ಒಬ್ಬ ಸಾಮಾನ್ಯನಿಗೆ ಇದರ ಅರ್ಥ ಇದು: ''ನಾನೇನೆಂಬುದು ಈಗ ಇನ್ನಷ್ಟು ಸ್ಪಷ್ಟವಾಗಿದೆ. ಇಪ್ಪತ್ತು ವರ್ಷಗಳ ನಂತರವೋ ಏನೋ ನನಗೆ ಕ್ಯಾನ್ಸರ್‌ನ ಭೀತಿ ಉಂಟೇ ಎಂಬುದನ್ನು ಇಂದೇ ಖಚಿತವಾಗಿ ಹೇಳಬಹುದು. ಜ್ಯೋತಿಷಿಯನ್ನೋ ಪುರೋಹಿತನನ್ನೋ ಕೇಳಿ ಸುಳ್ಳಾಪಳ್ಳೆ ಏನೇನೋ ಆತನಿಂದ ತಿಳಿದುಕೊಳ್ಳಬೇಕಾಗಿಲ್ಲ.'' ಜೆ. ಡಿ. ಬರ್ನಾಲ್ ಎಷ್ಟೋ ದಶಕಗಳ ಮುಂಚೆ ಹೇಳಿದ್ದಂತೆ, ''ಜೀವನ ಕ್ರಮೇಣ ವಿಸ್ಮಯರಹಿತವಾಗುತ್ತಿದೆಯೇ ಎಂಬ ಭಾವನೆ ನಮ್ಮಲ್ಲಿ ಉಂಟಾಗುತ್ತಿದೆ. ಬದಲಾಗಿ ಅದು ನಿಜಕ್ಕೂ ಒಂದು ಗುಪ್ತ ಚಿತ್ರವಾಗಿಯೋ, ಒಗಟಿನಂತೆಯೋ ಕಾಣಲಾರಂಭಿಸಿದೆ. ಅದರಲ್ಲಿರುವ ಗುಪ್ತ ಸಂದೇಶವನ್ನು ಬಿಡಿಸಿಕೊಳ್ಳಲು ಶಕ್ಯವಿದೆ. ಇಂದಲ್ಲದಿದ್ದರೆ ನಾಳೆ ಅದು ಸಿದ್ಧಿಸುತ್ತದೆ. ಹಾಗೆಂದ ಮಾತ್ರಕ್ಕೆ ಜೀವನದ ವಿಸ್ಮಯಗಳಲ್ಲಿರುವ ಸಂಕೀರ್ಣತೆ ಮತ್ತು ಸೌಂದರ್ಯವು ಜೀವವಿಜ್ಞಾನಿಗಳ ಅನುಭವಕ್ಕೆ ಇನ್ನು ಬರುವುದಿಲ್ಲವೆಂದರ್ಥವಲ್ಲ.''

ಬರ್ನಾಲ್ ಒಬ್ಬ ಆದಿ ಪರಿಶೋಧಕ; ೨೦ನೆಯ ಶತಮಾನದಲ್ಲಿ ಪ್ರಖ್ಯಾತ ಸರ್ವವ್ಯಾಪಿ ಎನಿಸಿಕೊಂಡ ಜೀವವಿಜ್ಞಾನಿ. ೧೯೬೪ರಲ್ಲಿ ನೊಬೆಲ್ ಪುರಸ್ಕಾರ ಪಡೆದ ಜೀವವಿಜ್ಞಾನಿ ಡರೋತಿ ಹಾಜ್‌ಕಿನ್ ಆತನ ವಿದ್ಯಾರ್ಥಿನಿ ಮತ್ತು ಸಹೋದ್ಯೋಗಿ. ಸಾರ್ವಜನಿಕ ಚಟುವಟಿಕೆಗಳಲ್ಲಿ ಇಬ್ಬರೂ ಜೊತೆಗೂಡಿ ಕೆಲಸ ಮಾಡಿದವರು. ಆಕೆ ಹೇಳಿದ್ದಿದು: ''ವಿಜ್ಞಾನದಲ್ಲಿ ಬರ್ನಾಲ್ ಒಬ್ಬ ಮಾರ್ಗದರ್ಶಿ. ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಜೀವಶಾಸ್ತ್ರಗಳಲ್ಲಿ ನಮ್ಮ ಪೀಳಿಗೆಯವರು ಅನೇಕ ದೊಡ್ಡ ಹೆಜ್ಜೆಗಳನ್ನಿಟ್ಟು ಎಷ್ಟೋ ಸ್ವರೂಪ ಹಾಗೂ ಕ್ರಿಯಾವಿಧಾನಗಳನ್ನು ಸಂಶೋಧಿಸಿದ್ದೇವೆ.

*ಈ ವರ್ಷ ಜೆ. ಡಿ. ಬರ್ನಾಲ್‌ರ ಜನ್ಮ ಶತಮಾನೋತ್ಸವದ ಸಂದರ್ಭ. ಐರ್ಲೆಂಡ್‌ನಲ್ಲಿ ಹುಟ್ಟಿ ಬ್ರಿಟನ್ನಿನಲ್ಲಿ ವಿಜ್ಞಾನಿಯಾಗಿ ಬೆಳೆದ ಈತ ಒಂದು ರೀತಿಯಲ್ಲಿ ವಿಶ್ವಮಾನವ. ಎರಡನೆಯ ಮಹಾಯುದ್ಧದಲ್ಲಿ ಹಿಟ್ಲರನ ಫ್ಯಾಸಿಸಂ ಅನ್ನು ಸೋಲಿಸಲು ಬರ್ನಾಲ್ ಕಾಣಿಕೆ ಮಹತ್ವದ್ದು. ಹಾಗೆಯೇ ಯುದ್ಧಾನಂತರದಲ್ಲಿ ವಿಶ್ವ ಶಾಂತಿ ಚಳುವಳಿಯ ಸಕ್ರಿಯ ಕಾರ್ಯಕರ್ತ ಸಹ. ಭಾರತದೊಡನೆ ನಿಕಟ ಸಂಪರ್ಕವಿದ್ದ ಬರ್ನಾಲ್‌ಗೆ ಇಲ್ಲಿ ಅನೇಕ ಸ್ನೇಹಿತರಿದ್ದರು. ಖ್ಯಾತ ಭೌತಶಾಸ್ತ್ರಜ್ಞರೂ ಸಮಾಜ ವಿಜ್ಞಾನಿಗಳೂ ಆದ ಡಾ|| ಸವ್ಯಸಾಚಿ ಚಟರ್ಜಿ ಅವರು 'ಹೊಸತು'ವಿಗಾಗಿಯೇ ಬರೆದ ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಡಾ|| ಜಿ. ರಾಮಕೃಷ್ಣ.*

ಅವುಗಳಿಗೆ ಬರ್ನಾಲ್‌ನ ಚಿಂತನೆ ಮತ್ತು ಪ್ರಾರಂಭಿಕ ಪ್ರಯೋಗಗಳು ಒತ್ತಾಸೆ ನೀಡಿವೆ.'' ಯಾವುದೇ ವಸ್ತುವಿನ ಸ್ವರೂಪ ಮತ್ತು ಕ್ರಿಯಾವಿಧಾನಗಳು ಹಾಗೂ ಅವುಗಳ ನಡುವಿನ ಸಂಬಂಧವು ಬರ್ನಾಲ್‌ಗೆ ಆಸಕ್ತಿಯ ವಿಷಯವಾಗುತ್ತಿದ್ದುವು. ಸಾಮಾಜಿಕ ಪ್ರಶ್ನೆಗಳೂ ಈ ಪರಿಧಿಗೆ ಸೇರುತ್ತವೆ. ಅದರಲ್ಲೂ ಆತನೊಬ್ಬ ಆದಿಪರಿಶೋಧಕನೇ: ವಿಜ್ಞಾನದ ಕಾರ್ಯಶೀಲತೆ ಮತ್ತು ಅದು ಯಾವ ಸಾಮಾಜಿಕ ಸನ್ನಿವೇಶದಲ್ಲಿ ಆಗುಗೊಳ್ಳುತ್ತದೆ ಎಂಬುದನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದು ಆತನ ವೈಶಿಷ್ಟ್ಯ. ಪ್ರಪಂಚವನ್ನು ಅರ್ಥೈಸುವುದಷ್ಟೇ ತತ್ತ್ವಜ್ಞಾನಿಗಳ ಕೆಲಸವಲ್ಲ ಎನ್ನುವಂತೆ ವಿಜ್ಞಾನದ ಸಾಮಾಜಿಕ ಕಾರ್ಯಭಾರಗಳನ್ನು ಬದಲಾಯಿಸುವುದು ವಿಜ್ಞಾನಿಯ ಜವಾಬ್ದಾರಿ ಎಂಬುದು ಬರ್ನಾಲ್‌ರ ಗ್ರಹಿಕೆ. ನ್ಯಾಯ ಮತ್ತು ಸಮಾನತೆಗಳು ಆವಿಷ್ಕರಿಸುವಂತೆ ಮತ್ತು ಯಾವುದೇ ವಿಶೇಷ ಸವಲತ್ತುಗಳಿರುವ ವರ್ಗವೂ ತನ್ನ ಶೋಷಣಾ ಉದ್ದೇಶಗಳಿಗೆ ವಿಜ್ಞಾನವನ್ನು ಬಳಸಿಕೊಳ್ಳದಿರುವಂತೆ ಮಾಡುವುದು ವಿಜ್ಞಾನಿಯ ಕೆಲಸವೆಂಬುದು ಆತನ ನಂಬಿಕೆ.

ಐರ್ಲೆಂಡಿನ ರೋಮನ್ ಕ್ಯಾಥೊಲಿಕ್ ಕುಟುಂಬವೊಂದರಲ್ಲಿ ಜಾನ್ ಡೆಸ್ಮಂಡ್ ಬರ್ನಾಲ್ ಜನಿಸಿದ್ದು ೧೯೦೧ರ ಮೇ ೧೦ರಂದು. ಅವನ ಹಿಂದಿನ ತಲೆಮಾರಿನವರು ಸ್ಪೇನ್ ದೇಶದ ಯಹೂದ್ಯ ಕುರುಬರು. ಅವನ ತಾಯಿ ಅಮೆರಿಕಾದವಳು. [illegible] ಯೂರೋಪಿಗೆ ಹೋಗಿದ್ದಾಗ ಆಕೆ ಡೆಸ್ಮಂಡ್‌ನನ್ನು ಸಂಧಿಸಿದ್ದಳು. ಮಗ ಜಾನ್ ಬಹಳ ಚುರುಕು ಹುಡುಗ. ಅವನು ಏನೇನೋ ಪ್ರಯೋಗಗಳನ್ನು ನಡೆಸುತ್ತಿದ್ದ. ಒಮ್ಮೆ ತನ್ನ ಕೋಣೆಯಲ್ಲಿ ಆಸ್ಫೋಟವನ್ನು ಉಂಟುಮಾಡಿದ್ದ! ಒಂಭತ್ತನೆ ವಯಸ್ಸಿನಲ್ಲಿ ಆತ್ಮಚರಿತ್ರೆ ಬರೆಯಲು ಉಪಕ್ರಮಿಸಿದ್ದ ಈ ಹುಡುಗ. ವಿವಿಧ ಸಲಕರಣೆಗಳನ್ನು ರಚಿಸುವ ವ್ಯಾಮೋಹ ಇವನಿಗೆ. ಮುಂದಿನ ದಿನಗಳಲ್ಲಿ ಕಂಡುಬಂದಂತೆ ಅವನು ಈ ಕ್ಷೇತ್ರದಲ್ಲಿ ಅಷ್ಟೇನೂ ಕೌಶಲ್ಯವನ್ನು ತೋರ್ಪಡಿಸಲಿಲ್ಲ. ವಿದ್ಯುತ್ತಿನ ಜೊತೆ ಸರಸದಲ್ಲಿ ಒಮ್ಮೆ ಭಾರಿ ಹೊಡೆತ ತಿಂದ ಈ ಬಾಲಕ : ಒಂದು ಎಕ್ಸ್-ರೇ ಟ್ಯೂಬ್ ಮಾಡಲು ಹೋಗಿ. ವೈಜ್ಞಾನಿಕ ಉಪಕರಣಗಳ ರಚನೆಯ ಬಗ್ಗೆ ಅಮೂಲ್ಯ ಸಲಹೆಗಳನ್ನು ಕೊಡುವುದರಲ್ಲಿ ಮುಂದೆ ಈತ ಸಿದ್ಧಹಸ್ತನಾದ. ಅವನ ಸಹೋದ್ಯೋಗಿಗಳು ಅವನ್ನು ತೀರಾ ಕಡಿಮೆ ಬೆಲೆಯ ಬಿಸುಟ ಪದಾರ್ಥಗಳಿಂದ ಕೂಡ ಮಾಡಿಬಿಡುತ್ತಿದ್ದರು. ಯಾವುದೋ ಮುರಿದ ಗಡಿಯಾರ, ಸೈಕಲ್ ಟ್ಯೂಬ್, ಹೀಗೆ ಎಲ್ಲವೂ ಬರ್ನಾಲ್‌ಗೆ ಪರಿಕರಗಳೇ!

ತನ್ನ ಹತ್ತನೆಯ ವಯಸ್ಸಿನಲ್ಲಿ ಶಾಲೆಗೆ ಸೇರಲು ಬರ್ನಾಲ್ ಇಂಗ್ಲೆಂಡಿಗೆ ಬಂದ. ತನ್ನ ದೇಶದಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಕಂಡು ಅದಕ್ಕೆ ಸಹಾನುಭೂತಿ ವ್ಯಕ್ತಪಡಿಸಿದ್ದ ಹುಡುಗ ಮೊದಲ ಮಹಾಯುದ್ಧವು ಇಂಗ್ಲೆಂಡಿನ ಸಾಮಾಜಿಕ ಜೀವನಕ್ಕೆ ಉಂಟುಮಾಡಿದ ಆಘಾತವನ್ನು ನೇರವಾಗಿ ಅನುಭವಿಸಿದ. ಕೇಂಬ್ರಿಜ್‌ನಲ್ಲಿ ವ್ಯಾಸಂಗ ಮಾಡಲು ತೆರಳಿದಾಗ ತನ್ನ ಬೌದ್ಧಿಕ ಕೃಷಿಗೆ ದೊರೆತ ಮೊದಲ ಸಮೃದ್ಧ ಫಸಲು ಎಂಬ ತೃಪ್ತಿ ಆವರಿಸಿತು. ಇಲ್ಲಿ ಅನೇಕ ಬಗೆಯ ಜನರ ಸಂಪರ್ಕ ದೊರೆಯಿತು : ಯುದ್ಧ ಭೂಮಿಯಿಂದ ಹಿಂದಿರುಗಿದ್ದ ಸೈನಿಕರು, ವಿವಿಧ ಶಿಸ್ತುಗಳ ವಿದ್ಯಾರ್ಥಿಗಳು, ದುಡಿಯುವ ಜನ, ಇತ್ಯಾದಿ. ಇಂಥವರೊಡನೆ ಸಭೆಯೊಂದರಲ್ಲಿ ಭಾಗವಹಿಸಿದ್ದಾಗ ಒಬ್ಬ ಸ್ನೇಹಿತ ಅಕ್ಟೋಬರ್ ಸಮಾಜವಾದಿ ಕ್ರಾಂತಿ ಮತ್ತು ಸೋವಿಯೆತ್ ಒಕ್ಕೂಟದ ಉದಯದ ಬಗ್ಗೆ ತಿಳಿಸಿದ. ಅಲ್ಲಿಯ ಪ್ರಯೋಗಗಳು ಹೊಸ ವಿಶ್ವವೊಂದನ್ನು ತೆರೆದಿಡುತ್ತಿರುವಂತೆ ಬರ್ನಾಲ್‌ಗೆ ಭಾಸವಾಯಿತು. ತನ್ನ ಸಂಕುಚಿತ ''ಐರಿಷ್ ದೇಶಭಕ್ತಿ'' ಎಷ್ಟು ಜಾಳೆಂದು ಅರ್ಥವಾಗತೊಡಗಿತು. ಗಾಢವಾಗಿ ಅವನಿಗಾಗ ಅನಿಸಿದ್ದು ಜನಸಮುದಾಯವೊಂದೇ ತಾನು ಧಿಕ್ಕರಿಸುತ್ತಿದ್ದ ಪಿಡುಗುಗಳನ್ನು ನಿರ್ಮೂಲನ ಮಾಡಲು ಶಕ್ತವಾದ್ದು ಎಂದು. ವೈಜ್ಞಾನಿಕ ವಿಶ್ವ ರಾಷ್ಟ್ರ ಎಂಬುದೇನಾದರೂ ಇದ್ದರೆ ಅದನ್ನು ಜನಸಮುದಾಯ ಮಾತ್ರವೇ ಸೃಷ್ಟಿಸಬಲ್ಲದು ಎಂಬ ಖಚಿತ ನಿಲುವು ಅವನದಾಯಿತು.

ಇಲ್ಲಿಂದ ಮುಂದಿನ ಹೆಜ್ಜೆ ಮಾರ್ಕ್ಸ್‌ವಾದದ ಆಳವಾದ ಅಭ್ಯಾಸ. ಅದರಿಂದ ವಿಜ್ಞಾನದ ಬಗೆಗಿನ ತಿಳಿವಳಿಕೆಯೂ ವಿಸ್ತಾರವಾಯಿತು. ಕೇಂಬ್ರಿಜ್‌ನಲ್ಲಿ ಏನೆಲ್ಲಾ ಅಭ್ಯಾಸ ಮಾಡಬಹುದಿತ್ತೋ ಅಷ್ಟನ್ನೂ ಆಯ್ಕೆ ಮಾಡಿಕೊಳ್ಳಬೇಕೆಂಬ ಹುರುಪು. ಆದರೆ ತನ್ನ ಟ್ರೈಪೋಸ್‌ಗೆ (ಆನರ್ಸ್ ಪರೀಕ್ಷೆಗೆ ಸಮಾನ) ಅಧ್ಯಯನ ಮಾಡಿದ್ದು ಗಣಿತ, ರಸಾಯನಶಾಸ್ತ್ರ, ಜೀವಶಾಸ್ತ್ರ, ಭೌತಶಾಸ್ತ್ರ, [illegible] ಆತನನ್ನು ಡರೋತಿ ಹಾಜ್‌ಕಿನ್ ಮೊಟ್ಟಮೊದಲ [illegible] ಉತ್ಪನನಶಾಸ್ತ್ರದ ಬಗೆಗಿನ ಆತನ ಪಾಂಡಿತ್ಯವನ್ನು ಕಂಡು [illegible]

ಡಾ|| ಎಸ್. ಚಟರ್ಜಿ

ಜ್ಞಾನವ್ಯಾಪ್ತಿ ವಿಶ್ವಕೋಶದಂತಿದ್ದು ಅವನಿಗೊಂದು [illegible] ಬಂದಿತ್ತು. ತೀಕ್ಷ್ಣಮತಿ, ಎಂದು [illegible] ಜೀವನಚರಿತ್ರೆಗೆ ಅದೇ ಶೀರ್ಷಿಕೆ [illegible]



*೧೯೪೪ : ಸಿಲೋನ್‌ನಲ್ಲಿ ಲಾರ್ಡ್ ಮೌಂಟ್‌ಬ್ಯಾಟನ್ ಅವರೊಂದಿಗೆ ಜೆ. ಡಿ. ಬರ್ನಾಲ್ ಮತ್ತಿತರರು.*

ಮಾರ್ಕ್ಸ್‌ವಾದದ ಅಭ್ಯಾಸವು ಎರಡು ದಿಟ್ಟ ಹೆಜ್ಜೆಗಳನ್ನಿಡಲು ಅವನಿಗೆ ಪ್ರೇರಣೆ ನೀಡಿತು : ತನ್ನ ಕ್ಯಾಥೊಲಿಕ್ ಧಾರ್ಮಿಕ ಪಂಥವನ್ನು ಬಿಡುವುದು ಮತ್ತು ತಾನು ಕಮ್ಯುನಿಸ್ಟ್ ಎಂದು ಘೋಷಿಸಿಕೊಳ್ಳುವುದು. ಮೊದಲನೆಯ ತೀರ್ಮಾನವು ಅವನ ಕುಟುಂಬದವರಿಗೆ ಘಾಸಿಯನ್ನುಂಟುಮಾಡಿತು. ತಂದೆಯು ಒಬ್ಬ ಪಾದ್ರಿಯನ್ನು ಮಗನ ಬಳಿಗೆ ಕಳಿಸಿದ. ಚರ್ಚೆ ಮಾಡಿ ಅವನನ್ನು ಮತ್ತೆ ಮತದ ಹಾದಿಗೆ ತರಲು ಪ್ರಯತ್ನಿಸಲು ಪಾದ್ರಿಯು ಸಿದ್ಧನಿದ್ದ. ಆದರೆ ಫಲಿತಾಂಶ ತೀರಾ ಅನಿರೀಕ್ಷಿತವಾಗಿತ್ತು : ಮಗನು ಧಾರ್ಮಿಕ ಪಂಥಕ್ಕೆ ಹಿಂದಿರುಗುವ ಬದಲು ಪಾದ್ರಿಯೂ ಅದನ್ನು ಬಿಟ್ಟುಬಿಟ್ಟ !

ಎರಡನೆಯ ತೀರ್ಮಾನ ಇದಕ್ಕಿಂತ ಹೆಚ್ಚು ಗಂಡಾಂತರಕಾರಿಯಾಗಿತ್ತು. ಈ ಪಟಿಂಗ ಯುವಕ ಕಮ್ಯುನಿಸ್ಟನಿಗೆ ಪಾಠ ಕಲಿಸಬೇಕೆಂದು ಕೆಲವು ವಿದ್ಯಾರ್ಥಿಗಳು ಸಜ್ಜಾಗತೊಡಗಿದರು. ಒಂದು ರಾತ್ರಿ ತನ್ನ ಕೊಠಡಿಯಲ್ಲಿದ್ದಾಗ ಅವರು ಬರ್ನಾಲನ್ನು ಹಿಡಿದು ತದಕಿದರು. ಮುಂದೆ ಲಾರ್ಡ್ ಮೌಂಟ್‌ಬ್ಯಾಟನ್ ಎಂದು ಪ್ರಸಿದ್ಧನಾದ ವ್ಯಕ್ತಿ ಈ ಗುಂಪಿಗೆ ಅನೌಪಚಾರಿಕ ನೇತಾರನಾಗಿದ್ದ. ತನ್ನ ಮೇಲೆ ಬಿದ್ದವರನ್ನು ಬರ್ನಾಲ್ ಸಹ ಚೆನ್ನಾಗಿಯೇ ಥಳಿಸಿದ. ಅವನೊಬ್ಬ, ಆದರೆ ಹಲ್ಲೆ ಮಾಡಲು ಬಂದವರು ಹಲವರು. ಆದರೂ ಅವರೆಲ್ಲಾ ಕಂಬಿ ಕೀಳುವಂತಾಯಿತು. ಕಾರ್ಯತಂತ್ರದಲ್ಲಿ ಅವರೊಂದು ಚಿಕ್ಕ ತಪ್ಪು ಮಾಡಿದ್ದರು : ಅವನ ಕೊಠಡಿಗೆ ಬರುವಾಗ ಸಿಗರೇಟು ಸೇದುತ್ತಾ ಬಂದಿದ್ದರು. ಬರ್ನಾಲ್ ತನ್ನ ಕೊಠಡಿಯ ದೀಪ ಆರಿಸಿಬಿಟ್ಟ. ಅವನು ಅವರಿಗೆ ಚೆನ್ನಾಗಿ ಕಾಣುತ್ತಿರಲಿಲ್ಲ; ಆದರೆ ಸಿಗರೇಟು ಮುಖಗಳಿಗೆ ಚೆನ್ನಾಗಿ ಗುದ್ದುವುದು ಬರ್ನಾಲ್‌ಗೆ ಸರಾಗವಾಯಿತು ! ಏನೇ ಇರಲಿ, ೧೯[illegible]ರ ವೇಳೆಗೆ ಬರ್ನಾಲ್ ಹಾಗೂ ಅವನ ಪತ್ನಿ ಕಮ್ಯುನಿಸ್ಟ್ ಪಕ್ಷದ ಸದಸ್ಯರಾದರು. ೧೯೨೬ರ ಸಾರ್ವತ್ರಿಕ ಮುಷ್ಕರಕ್ಕೆ ಕಾರ್ಮಿಕರನ್ನು ಸಂಘಟಿಸುವಲ್ಲಿ ಅವರಿಬ್ಬರ ಪಾತ್ರವೂ ಮಹತ್ವದ್ದಾಗಿತ್ತು.

ಕಮ್ಯುನಿಸ್ಟ್ ಕಾರ್ಯಕರ್ತನಾಗಿ ಬರ್ನಾಲ್ ಏಕಾಂಗಿಯಾಗಿರಲಿಲ್ಲ. ಕೇಂಬ್ರಿಜ್‌ನಲ್ಲಿ ಅವರ ಗುಂಪು ಅಸಾಧಾರಣವಾಗಿತ್ತು. ಇತರ ವಿಖ್ಯಾತ ವಿಜ್ಞಾನಿಗಳು, ಪ್ರಾಧ್ಯಾಪಕರು, ಇತಿಹಾಸಕಾರರು, ಎಲ್ಲಾ ಕಾರ್ಯಕರ್ತರೇ: ಜೊಸೆಫ್ ನೀಡ್ಹ್ಯಾಮ್, ಜೆ. ಬಿ. ಎಸ್. ಹಾಲ್ಡೇನ್, ಎಮಿಲ್ ಬರ್ನ್ಸ್, ಜಾರ್ಜ್ ಥಾಮ್ಸನ್, ಇತ್ಯಾದಿ. ಇವರಿಗೆ ಗಣಿತಶಾಸ್ತ್ರಜ್ಞ ಜಿ. ಎಚ್. ಹಾರ್ಡಿಯ ನೈತಿಕ ಬೆಂಬಲವಿತ್ತು. ಸೋವಿಯೆತ್ ಒಕ್ಕೂಟದಲ್ಲಿ ಒಪಾರಿನ್ ಮಾಡಿದ್ದಂತೆ ಕೇಂಬ್ರಿಜ್‌ನಲ್ಲಿ ಹಾಲ್ಡೇನ್ ಜೀವ ವಿಕಾಸದ ರಾಸಾಯನಿಕ ಸಿದ್ಧಾಂತವನ್ನು ಕುರಿತಂತೆ ಸಾಕಷ್ಟು ಪ್ರಮುಖ ಸಂಶೋಧನೆಗಳನ್ನು ಮಾಡಿದ್ದ. (ಇವರು ನಂತರ ಭಾರತದ ಪ್ರಜೆಯಾಗಿ ಭುವನೇಶ್ವರದಲ್ಲಿ ಸಂಶೋಧನೆಗಳಲ್ಲಿ ನಿರತರಾಗಿದ್ದರು). ಜೀವವು ಜೀವರಹಿತ ಅಣುಗಳಿಂದ ಕೂಡಿದೆಯೆಂಬ ಆ ಸಂಶೋಧನೆಗೆ ಬರ್ನಾಲ್ ಇನ್ನೊಂದು ಮಗ್ಗುಲನ್ನು ಕಟ್ಟಿಕೊಟ್ಟ. ಅಣುಗಳ ರಾಸಾಯನಿಕ ವಿಧಾನವನ್ನು ತಿಳಿದರೆ ಸಾಲದು, ಅವು ಹೇಗೆ ಜೋಡಿಸಲ್ಪಟ್ಟಿವೆ ಎಂಬುದನ್ನು ಗಮನಿಸಬೇಕೆಂಬುದು ಆತನ ಕೊಡುಗೆ. ಡರೋತಿ ಹಾಜ್‌ಕಿನ್ ಹಾಕಿಕೊಂಡಿದ್ದ ಪ್ರಶ್ನೆ ಅದೇ: ಜೀವಕಣಗಳ ಸ್ವರೂಪವು ಹೇಗೆ ಕಾರ್ಯತಂತ್ರವನ್ನು ನಿರ್ಧರಿಸುತ್ತದೆ, ಎಂಬುದು.

ವಿದ್ಯಾರ್ಥಿಯಾಗಿದ್ದಾಗ ಬರ್ನಾಲ್ ಬಹುಮುಖ ಪ್ರತಿಭೆಯ ಚೂಟಿ ಕಾರ್ಯಕರ್ತನೆಂದು ಖ್ಯಾತಿ ಗಳಿಸಿದ್ದ. ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರಗಳಲ್ಲಿ ಅಪಾರ ನಿಷ್ಠೆ. ಅದರಲ್ಲೇ ಒಂದು ಕ್ಷೇತ್ರವು ಆತನ ಸಂಶೋಧನಾರಂಗ ಆಗುತ್ತದೆಂಬ ಭಾವನೆ ಎಲ್ಲರಲ್ಲೂ ಇತ್ತು. ಆಗ್ಗೆ ಭೌತಶಾಸ್ತ್ರದ ದಿಗ್ಗಜ ಅರ್ನೆಸ್ಟ್ ರದರ್ - ಫೋರ್ಡ್. ಪರಮಾಣು ವಿಜ್ಞಾನಕ್ಕೆ ತನ್ನನ್ನು ಅರ್ಪಿಸಿಕೊಳ್ಳದೆ ಸಂಶೋಧಕ ಬರ್ನಾಲ್ ಆಗಲೆ ರದರ್‌ಫೋರ್ಡ್‌ಗೆ ಅಸಮಾಧಾನ ತಂದಿದ್ದ. ಸಂಶೋಧನೆಗೆ ಆಯ್ಕೆ ಮಾಡಿಕೊಂಡದ್ದು ಸ್ಫಟಿಕವಿಜ್ಞಾನ; ಕಡೆಗೆ ನೆಲೆಸಿದ್ದು ಜೀವಶಾಸ್ತ್ರದಲ್ಲಿ.

*ಬರ್ನಾಲ್‌ರ ಪುಸ್ತಕ ವಿಜ್ಞಾನದ ಸಾಮಾಜಿಕ ಕರ್ತವ್ಯ ಪ್ರಕಟವಾದ ೨೫ ವರ್ಷಗಳ ನಂತರ "ವಿಜ್ಞಾನಗಳ ವಿಜ್ಞಾನ" ಎಂಬ ಒಂದು ಸಂಕಲನ ಹೊರಬಂತು. ಸ್ನೋ, ಬ್ಲ್ಯಾಕೆಟ್, ಹಾಲ್ಡೇನ್ ಮುಂತಾದ ಉದ್ದಾಮ ವಿಜ್ಞಾನಿಗಳು ಅದರಲ್ಲಿ ಅಭಿವೃದ್ಧಿ-ಸಿದ್ಧಾಂತ-ತತ್ತ್ವಶಾಸ್ತ್ರ - ಸಮಾಜ ವಿಜ್ಞಾನ ಮುಂತಾದ ವಿಷಯಗಳನ್ನು ಕುರಿತು ಬರೆದಿದ್ದಾರೆ. ಬರ್ನಾಲ್ ಗೌರವಾರ್ಥ ಪ್ರಕಟವಾದ ಪುಸ್ತಕ ಅದು. ಸ್ಫಟಿಕಶಾಸ್ತ್ರ ಸಂಶೋಧಕನಾಗಿದ್ದ ಸಿ. ಪಿ. ಸ್ನೋ ಅದರಲ್ಲಿ ಬರ್ನಾಲ್ ಬಗ್ಗೆ ಬರೆದಿದ್ದಾನೆ. ಆತ ಬರ್ನಾಲ್‌ಗೆ ನಿಕಟವರ್ತಿ. ಅಲ್ಲಿ ಬರುವ ಒಂದು ಪ್ರಸಂಗ ಸ್ವಾರಸ್ಯವಾಗಿದೆ.*

*ಚರ್ಚಿಲ್ ಅಪೇಕ್ಷೆಯಂತೆ ಬರ್ನಾಲ್ ಯುದ್ಧಕಾಲದಲ್ಲಿ ರಕ್ಷಣಾ ಇಲಾಖೆಯಲ್ಲಿ ವೈಜ್ಞಾನಿಕ ಸಲಹೆಗಾರನಾಗಿ ಒಂದು ವಿಭಾಗದ ಮುಖ್ಯಸ್ಥನಾದ. ಆತನದು ಒಂದು ಷರತ್ತು : ಯಾವುದೇ ವಿಜ್ಞಾನಿಯನ್ನಾಗಲಿ ತನ್ನ ಸಹೋದ್ಯೋಗಿಯನ್ನಾಗಿ ಆಯ್ದುಕೊಳ್ಳಲು ಅವಕಾಶ ಇರಬೇಕು, ಎಂದು. ಚರ್ಚಿಲ್ ಒಪ್ಪಿದ. ಕೆಲವು ದಿನಗಳ ನಂತರ ಸಿ. ಪಿ. ಸ್ನೋ ತನ್ನ ವಿಭಾಗಕ್ಕೆ ಬೇಕೆಂದು ಬರ್ನಾಲ್ ತಿಳಿಸಿದಾಗ ಯಾರೂ ಅದಕ್ಕೆ ಅಸಮ್ಮತಿ ಸೂಚಿಸಲಿಲ್ಲ. ಆದರೆ ಎರಡು ವಾರ ಕಳೆದರೂ ಇನ್ನೂ ಸ್ನೋ ಬಂದಿರಲಿಲ್ಲ. ಬರ್ನಾಲ್ ಕೂಡಲೆ ಚರ್ಚಿಲ್‌ಗೆ ವಿಷಯ ತಿಳಿಸಿದರು. ವಿಚಾರಣೆ ಮಾಡಲಾಗಿ ಸ್ನೋ ಹಿಂದೆಲ್ಲಾ ಗುಮಾನಿ ಉಂಟಾಗಬಹುದಾದ ರೀತಿಯಲ್ಲಿ ಯಾರಯಾರ ಜೊತೆಯೋ ಬೆರೆಯುತ್ತಿದ್ದ, ಆದ್ದರಿಂದ ಆತನ ಪೂರ್ವಾಪರಗಳ ತನಿಖೆ ನಡೆಯುತ್ತಿದೆ, ಅದು ಮುಗಿದ ಕೂಡಲೆ ವರದಿ ಸಲ್ಲಿಸಲಾಗುತ್ತದೆ, ಯುದ್ಧ ಕಾಲದಲ್ಲಿ ಜಾಗರೂಕತೆ ಅವಶ್ಯಕ, ಎಂದು ಸರ್ಕಾರದ ಗೃಹ ಖಾತೆಯು ಚರ್ಚಿಲ್‌ಗೆ ತಿಳಿಸಿತು. ಯಾರು ಅಂಥವರು, ಸ್ನೋ ಯಾರೊಡನೆ ಬೆರೆಯುತ್ತಿದ್ದ ಎಂಬುದನ್ನು ಖಚಿತಪಡಿಸಲು ಚರ್ಚಿಲ್ ಆದೇಶವಿತ್ತನು. ಉತ್ತರ ಬಂತು : ಸ್ನೋ ಕೇಂಬ್ರಿಜ್‌ನಲ್ಲಿ ಯಾವಾಗಲೂ ಜೆ. ಡಿ. ಬರ್ನಾಲ್ ಜೊತೆ ಇರುತ್ತಿದ್ದ ಮತ್ತು ಬರ್ನಾಲ್ ಒಬ್ಬ ಕಟ್ಟಾ ಕಮ್ಯುನಿಸ್ಟ್, ಎಂದು. ಚರ್ಚಿಲ್ ಮರು ಆದೇಶ ನೀಡಿದ : ಈಗ ಸ್ನೋ ಬೇಕಾಗಿರುವುದು ಅದೇ ಬರ್ನಾಲ್ ಜೊತೆ ಯುದ್ಧದ ಕೆಲಸದಲ್ಲಿ ಭಾಗಿಯಾಗುವುದಕ್ಕೆ ; ನಿಮ್ಮ ತನಿಖೆ ಸಾಕುಮಾಡಿ ಆತನನ್ನು ಕೂಡಲೆ ಕರೆತನ್ನಿ , ಎಂದು. ಗೃಹ ಖಾತೆಯ ದಾಖಲೆಗಳಲ್ಲಿ ಬರ್ನಾಲ್ ಬಗ್ಗೆ ಒಂದು ದೊಡ್ಡ ಪುಸ್ತಕವೇ ಭರ್ತಿಯಾಗಿತ್ತೋ ಏನೋ !*

ವಿಜ್ಞಾನದ ಗಾಢ ಸಮಸ್ಯೆಗಳಿರುವುದು ಇಲ್ಲೇ ಮತ್ತು ಜೀವನದ ವಿಸ್ಮಯಗಳು ಇಲ್ಲಿ ಮನಸ್ಸನ್ನು ಕಲಕುತ್ತವೆ ಎಂಬುದು ಬಹುಶಃ ಆ ಆಯ್ಕೆಗೆ ಕಾರಣ. ಅದಕ್ಕಿಂತಲೂ ಹೆಚ್ಚಾಗಿ, ಮಾನವನ ಪ್ರಗತಿಗೆ ಮಾರಕವಾಗಿರುವ ಮನಸ್ಸಿನ ಶೃಂಖಲೆಗಳನ್ನು ಬಿಡಿಸಲು ಈ ಕ್ಷೇತ್ರದ ವಿಸ್ಮಯಗಳು ಸಹಕಾರಿಯಾಗುತ್ತವೆಂಬ ಕಾರಣವೂ ಇತ್ತು. ಜೊತೆಗೆ, ಈ ವಿಸ್ಮಯಗಳನ್ನು ಬಿಡಿಸಲು ಜೀವಶಾಸ್ತ್ರಜ್ಞರಿಗೆ ಮಾತ್ರವೇ ಸಾಧ್ಯವಾಗದೆಂಬ ಇಂಗಿತವೂ ಇತ್ತು. ಈ ಸಂಕೀರ್ಣ ಪ್ರಶ್ನೆಗಳಿಗೆ ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರಗಳ ಕೊಡುಗೆಗಳು ಪರಿಹಾರ ದೊರಕಿಸಿಕೊಡಬಹುದೆಂಬ ಕಾರಣದಿಂದ ವೈಜ್ಞಾನಿಕ ಶಿಸ್ತುಗಳ ಸಂಮಿಶ್ರಣವು ಜೀವಶಾಸ್ತ್ರಕ್ಕೆ ಅಗತ್ಯವೆಂದು ಬರ್ನಾಲ್ ಬಗೆದಿದ್ದರು. ಜೀವಶಾಸ್ತ್ರದಲ್ಲಿ ಎಕ್ಸ್-ರೇ ಸ್ಫಟಿಕಶಾಸ್ತ್ರವನ್ನು ಒಂದು ಪ್ರಮುಖ ಸಾಧನವಾಗಿ ಬಳಸುವುದನ್ನು ಮೊದಲಿಗೆ ಆರಂಭಿಸಿದ್ದು ಬರ್ನಾಲ್. ಇದರಿಂದಾಗಿ ಮುಂದೆ ಎಷ್ಟೊಂದು ಅಗಾಧ ಕೊಡುಗೆಗಳು ಮೂಡಿಬಂದು ವೆಂಬುದು ವಿಜ್ಞಾನದ ಇತಿಹಾಸದಲ್ಲಿ ದಾಖಲಾಗಿದೆ.

ಜೀವಶಾಸ್ತ್ರದ ವಿವಿಧ ಶಾಖೆಗಳಿಗೆ ಬರ್ನಾಲ್ ನೀಡಿರುವ ಮಹತ್ತರ ಸಂಶೋಧನಾ ಕೊಡುಗೆಗಳ ಪಟ್ಟಿ ಮಾಡುವುದು ಕಷ್ಟಸಾಧ್ಯವೆನ್ನಬೇಕು. ಬರ್ನಾಲ್ ಕೋಷ್ಟಕಗಳೆಂದು ಪ್ರಸಿದ್ಧವಾಗಿರುವ ಭಾಗವು ಮುಂಚಿನ ಸ್ಫಟಿಕಶಾಸ್ತ್ರ ಸಂಶೋಧಕರಿಗೆ ಅಮೂಲ್ಯ ಸಾಧನವಾಯಿತು. ಆಗ್ಗೆ ಕಂಪ್ಯೂಟರ್‌ಗಳಿರಲಿಲ್ಲ. ಆದರೆ ಆ ಕೋಷ್ಟಕಗಳಿಂದ ಸ್ಫಟಿಕದ ರಚನೆ, ಲೈಂಗಿಕ ಹಾರ್ಮೋನುಗಳು, ಪ್ರೋಟೀನ್, ನೀರಿನ ವಿವಿಧ ಸ್ವರೂಪಗಳು (ನೀರ್ಗಲ್ಲು, ಘನಹಿಮ, ಇತ್ಯಾದಿ), ಮುಂತಾದವುಗಳ ಅಧ್ಯಯನವು ಉನ್ನತ ಮಟ್ಟದಲ್ಲಿ ನಡೆಯಲು ಸಾಧ್ಯವಾಯಿತು. ದ್ರವಸ್ವರೂಪದ ಮೊದಲ ಮಾದರಿಯನ್ನು ಕೊಟ್ಟಿದ್ದು ಬರ್ನಾಲ್. ಸಂಘಟಿತ ವಸ್ತುಗಳ ಭೌತಶಾಸ್ತ್ರ ಕ್ಷೇತ್ರದಲ್ಲೂ ಆತ ಮೊದಲಿಗನೆನ್ನುತ್ತಾರೆ. ಬರ್ನಾಲ್ ನೀಡಿದ ಅಂತರ್ದೃಷ್ಟಿಯಿಂದಾಗಿ ತಮ್ಮ ಸಂಶೋಧನೆಗಳು ಯಶಸ್ವಿಯಾದುವೆಂದು ನೊಬೆಲ್ ಪುರಸ್ಕಾರ ಪಡೆದವರನ್ನು ಒಳಗೊಂಡಂತೆ ಅನೇಕ ಜೀವಶಾಸ್ತ್ರಜ್ಞರು ಬರ್ನಾಲ್‌ಗೆ ಗೌರವ ಸಲ್ಲಿಸಿದ್ದಾರೆ. ತನ್ನ ನೊಬೆಲ್ ಪುರಸ್ಕಾರವು ತನ್ನೊಬ್ಬಳಿಗೇ ದಕ್ಕುವುದಕ್ಕಿಂತ ಬರ್ನಾಲ್ ಜೊತೆಗೆ ತನಗೆ ಅದನ್ನು ನೀಡಬೇಕಾಗಿತ್ತೆಂದು ಡರೋತಿ ಹಾಜ್‌ಕಿನ್ ಬಹಿರಂಗವಾಗಿಯೇ ಹೇಳಿದ್ದಾರೆ. ಸ್ವಾರಸ್ಯದ ವಿಷಯವೆಂದರೆ ಸ್ವತಃ ಬರ್ನಾಲ್‌ಗೆ ನೊಬೆಲ್ ಪುರಸ್ಕಾರ ಎಂದೂ ಲಭಿಸಲಿಲ್ಲ; ಅದರಿಂದ ಬರ್ನಾಲ್ ಹತಾಶನಾಗಲಿಲ್ಲ. ಒಂದರಲ್ಲೇ ಮಗ್ನನಾಗದೆ ಆಚೀಚೆ ಎಲ್ಲಾ ಸಂಶೋಧನೆ ಮಾಡುತ್ತಾ ಅಡ್ಡಾಡಿದರೆ ಗೌರವವೂ ಹರಡಿಹೋಗುತ್ತದೆಯೆಂದು ಅವರು ಚಟಾಕಿ ಹಾರಿಸುತ್ತಿದ್ದುದುಂಟು. ವಿಜ್ಞಾನದ ವಿದ್ಯಾರ್ಥಿಯಾಗಿ ನನಗೇ ಕೆಲವೇಳೆ ಅನಿಸುವುದುಂಟು : ಎಲಾ, ಈ ಸಮಸ್ಯೆಗೆ ಬರ್ನಾಲ್ ನೀಡಿರುವ ಪರಿಹಾರ ಎಷ್ಟು ಸರಳವಾಗಿದೆ, ಆದರೆ ಅದು ಅತ್ಯಂತ ಗಾಢವಾದ ಪ್ರಜ್ಞೆಯಿಂದಲೂ ಕೂಡಿದೆಯಲ್ಲಾ! ನಾನೇಕೆ ಈ ಧಾಟಿಯಲ್ಲಿ ಮೊದಲೇ ಚಿಂತಿಸಲಾಗಲಿಲ್ಲ, ಎಂದು. ಮತ್ತು, ಹಾಗೆ ಎಷ್ಟೊಂದು ಸಮಸ್ಯೆಗಳಿಗೆ ಬರ್ನಾಲ್ ಪರಿಹಾರ ನೀಡಿದ್ದಾನೆ!

ವಿಜ್ಞಾನದಲ್ಲಿ ಅಂತರ್‌ಶಿಸ್ತೀಯ ಅಧ್ಯಯನಗಳಿಗೆ ಮಹತ್ತರ ಚಾಲನೆ ಕೊಟ್ಟಿದ್ದು ಬರ್ನಾಲ್. ಆಧುನಿಕ ಜೀವಶಾಸ್ತ್ರ ಅದಕ್ಕೆ ಪುಷ್ಟಿ ಕೊಟ್ಟಿತು. ಆದರೆ ಬಹಳ ಹೆಚ್ಚಿನ ಹಣವು ಬರ್ನಾಲ್ ಸಂಶೋಧನೆಗಳಿಗೆ ಎಂದೂ ಕೂಡಿಬರಲಿಲ್ಲ. ಆತ ಬಹುಕಾಲ ಅಧ್ಯಾಪಕನಾಗಿದ್ದ ಲಂಡನ್ನಿನ ಬರ್ಕ್‌ಬೆಕ್ ಕಾಲೇಜು ಶ್ರೀಮಂತ ವಿದ್ಯಾರ್ಥಿಗಳದ್ದಲ್ಲ; ಸಾಮಾನ್ಯ ದುಡಿಯುವ ಜನರದ್ದು. ಅಲ್ಲಿಗೆ ಬರುತ್ತಿದ್ದವರಲ್ಲಿ ವಯಸ್ಕರೂ ಇರುತ್ತಿದ್ದರು. ಜ್ಞಾನವನ್ನು ನವೀಕರಿಸಿಕೊಳ್ಳಲು ಬರುತ್ತಿದ್ದವರೂ ಬಹಳ ಮಂದಿ. ಈ ವರ್ಗದವರೊಂದಿಗೆ ಸ್ಪಂದಿಸುವುದು ಬರ್ನಾಲ್‌ಗೆ ಬಹಳ ಹಿತವೆನಿಸುತ್ತಿತ್ತು. ಅವರೇ ಮಾನವ ಜನಾಂಗದ ವಿಮೋಚಕರೆಂಬ ಪ್ರಚಂಡ ಭಾವನೆಯೂ ಇದಕ್ಕೆ ಕಾರಣವಾಗಿರುತ್ತಿತ್ತು. ಹೀಗಾಗಿ ತಮ್ಮ ಪ್ರಯೋಗಗಳಿಗೆ ಬರ್ನಾಲ್ ಬಳಸುತ್ತಿದ್ದ ಉಪಕರಣಗಳು ಸಾಮಾನ್ಯ ಮಟ್ಟದವು, ಕಡಿಮೆ ಬೆಲೆಯವು. ಅದರಿಂದ ಅವರ ಸಂಶೋಧನೆಗಳ ಪ್ರತಿಫಲವು ಕಳಪೆಯದ್ದೇನೂ ಆಗಲಿಲ್ಲವೆಂಬುದು ಮುಖ್ಯ. ಭಾರತೀಯ ವಿಜ್ಞಾನಕ್ಕೆ ಇದು ಬಹಳ ಗಮನಾರ್ಹವಾದ ಅಂಶ. ನಮ್ಮಲ್ಲಿ ಸಹ ಅಂತರರಾಷ್ಟ್ರೀಯವಾಗಿ ಹೆಚ್ಚಿನ ಮನ್ನಣೆ ಪಡೆದ ವಿಜ್ಞಾನಿಗಳು ವಿಶ್ವವಿದ್ಯಾನಿಲಯಗಳ ವಾತಾವರಣದಲ್ಲಿ ಕೆಲಸ ಮಾಡಿದ್ದವರು. ಜೆ. ಸಿ. ಬೋಸ್, ಎಸ್. ಎನ್. ಬೋಸ್, ಎಂ. ಎನ್. ಸಹಾ, ಕೆ. ಎಸ್. ಕೃಷ್ಣನ್ ಮತ್ತು ನಂತರದ ಜಿ. ಎನ್. ರಾಮಚಂದ್ರನ್ ಎಲ್ಲರೂ ಇಂಥವರೇ. ಬರ್ನಾಲ್ ವಿಷಯದಲ್ಲಿ ಇದು ಇನ್ನೂ ಹೆಚ್ಚು ಗಂಭೀರವಾದ್ದು. ಆತನ ಪ್ರಯೋಗಶಾಲೆಗೆ ''ಪದಾರ್ಥಗಳ ಅಧ್ಯಯನ ಸಂಸ್ಥೆ'' ಎಂದೇ ಹೆಸರಿದ್ದುದು. ಇಂತಹ ದುಡಿಯುವ ವರ್ಗದ ಕಾಲೇಜಿನ ವಾತಾವರಣದಲ್ಲಿ ದೊರೆಯುತ್ತಿದ್ದ ಬೌದ್ಧಿಕ ಉತ್ತೇಜನದ ವಿಶೇಷ ಪ್ರಯೋಜನ ಪಡೆಯಲು ದೇಶವಿದೇಶಗಳಿಂದ ಖ್ಯಾತ ವಿಜ್ಞಾನಿಗಳು ಅಲ್ಲಿ ನೆರೆಯುತ್ತಿದ್ದರೆಂಬುದು ಬರ್ನಾಲ್ ಸಂಶೋಧನೆಯ ಮೌಲಿಕತೆಗೆ ನಿದರ್ಶನ.

ಬರ್ನಾಲ್ ಮತ್ತು ಅವರ ಸಹ-ಸಂಶೋಧಕರಿಗೆ ಆಸಕ್ತಿ ಇದ್ದುದು ಜೀವಶಾಸ್ತ್ರದಲ್ಲಿ ಮಾತ್ರವಲ್ಲ : ಅದಕ್ಕೂ ಹೆಚ್ಚಾಗಿ ಅವರಿಗೆ ಜೀವನದಲ್ಲಿ ಆಸಕ್ತಿ ಇತ್ತು. ಅದು ಪ್ರಯೋಗಶಾಲೆಗೆ ಮಾತ್ರ ಸಂಬಂಧಿಸಿರಲಿಲ್ಲ. ಹೊರ ಜಗತ್ತಿನ ಸರ್ವಾಂಗೀಣ ಜೀವನವನ್ನೂ ಆವರಿಸಿತ್ತು. ಪ್ರಯೋಗಗಳಿಂದ ಆಗಿಂದಾಗ್ಗೆ ಅವರನ್ನು ಹೊರಕ್ಕೆ ಸೆಳೆಯುತ್ತಿದ್ದುದು ಹೊರಗಿನ ಎಷ್ಟೋ ಘಟನೆಗಳು. ಕೇಂಬ್ರಿಜ್‌ನಲ್ಲಿ ಬರ್ನಾಲ್ ಒಂದು ಸಂಘವನ್ನು ಸ್ಥಾಪಿಸಿದ್ದರು. ಕೇಂಬ್ರಿಜ್ ವಿಜ್ಞಾನಿಗಳ ಯುದ್ಧ ವಿರೋಧಿ ಸಂಘ. ಜಾಗತಿಕ ಸಂಗತಿಗಳಿಗೆ ಪ್ರತಿಕ್ರಿಯಿಸುವುದು ಅದರ ಒಂದು ಉದ್ದೇಶವಾಗಿತ್ತು. ಮೂವತ್ತರ ದಶಕದ ಆರ್ಥಿಕ ಕುಸಿತದಂತಹ

**ಹೊಸತು**
**ವಿಮರ್ಶಾ ಲೇಖನ**

ಓದುಗರಿಂದ ನಮಗೆ ಬಂದಿದ್ದ ಹಲವು ವಿಮರ್ಶಾ ಲೇಖನಗಳ ಪೈಕಿ ಶ್ರೀ ಎಂ. ಕೃಷ್ಣರಾಜ ಕೆದ್ಲಾಯ, ಸಾಮೆತ್ತಡ್ಕ ರೈಲ್ವೆ ಕ್ರಾಸ್, ಪುತ್ತೂರು, ದ. ಕ. - ೫೭೪ ೨೦೧ ಇವರ ಲೇಖನ ಅತ್ಯುತ್ತಮವಾದುದೆಂದು ಪರಿಗಣಿಸಲ್ಪಟ್ಟಿದೆ. ಲೇಖಕರಿಗೆ ನಮ್ಮ ಅಭಿನಂದನೆಗಳು. ಲೇಖಕರಿಗೆ ಬಹುಮಾನವನ್ನು ಕಳಿಸಲಾಗುತ್ತದೆ.

*- ಸಂಪಾದಕ*



*ಜೆ. ಡಿ. ಬರ್ನಾಲ್, ಜಾನ್ ಕೆಂಡ್ರೂ, ಡಿ. ಎಚ್. ಮತ್ತು ಡೇವಿಡ್ ಫಿಲಿಪ್ಸ್‌ರವರು ಹೊಸದಾಗಿ ನಿರ್ಮಿತವಾದ ಐಸೋಜೋಮ್‌ನ ಮಾದರಿಯೊಂದನ್ನು ವೀಕ್ಷಿಸುತ್ತಿರುವುದು.*

ಸಾಮಾಜಿಕ ಸಮಸ್ಯೆಗಳು, ಜರ್ಮನಿಯಲ್ಲಿ ಹಿಟ್ಲರನ ಪ್ರಭಾವ, ಸ್ಪೇನಿನ ಅಂತರ್ಯುದ್ಧ, ಜಪಾನಿನಿಂದ ಚೈನಾದ ಆಕ್ರಮಣ, ಬ್ರಿಟನ್‌ನ ಸಾಮ್ರಾಜ್ಯದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಗಳು, ಇತ್ಯಾದಿಗಳೆಲ್ಲಾ ಆ ಸಂಘದ ಚರ್ಚೆಯ ಪರಧಿಯಲ್ಲಿರುತ್ತಿದ್ದುವು. ಇಂತಹ ಅಂಧಕಾರದ ಹಿನ್ನೆಲೆಯಲ್ಲಿ ಬರ್ನಾಲ್‌ಗೆ ಸೋವಿಯೆತ್ ಒಕ್ಕೂಟವು ಒಂದು ಬೆಳಕಿನ ಹೊಂಗಿರಣವಾಗಿ ಕಾಣುತ್ತಿತ್ತು. ೧೯೩೧ರಲ್ಲಿ ಬುಖಾರಿನ್ ನೇತೃತ್ವದಲ್ಲಿ ಕೆಲವು ಸೋವಿಯೆತ್ ವಿಜ್ಞಾನಿಗಳು ಬ್ರಿಟನ್ನಿಗೆ ತೆರಳಿದ್ದಾಗ ಬರ್ನಾಲ್ ಅವರೊಡನೆ ಮೊದಲ ಸಂಪರ್ಕ ಸಾಧಿಸಿಕೊಂಡರು.

೧೯೩೦ರ ಕೊನೆಯ ಭಾಗದಲ್ಲಿ ಹೊರಬಂದ ''ವಿಜ್ಞಾನದ ಸಾಮಾಜಿಕ ಜವಾಬ್ದಾರಿ'' ಎಂಬ ಬರ್ನಾಲ್‌ರ ಗ್ರಂಥದಲ್ಲಿ ಅನೇಕ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣೆ ಇದೆ. ಸೋವಿಯೆತ್ ಒಕ್ಕೂಟದ ಸಮಾಜವಾದಿ ಕ್ರಾಂತಿಯು ಹೇಗೆ ವಿಮೋಚನೆಯ ಸಾಧನೆಯಾಗಬಲ್ಲುದೆಂಬ ಚರ್ಚೆ ಅಲ್ಲಿದೆ. ವಿಜ್ಞಾನದ ಸರ್ವತೋಮುಖ ವಿಕಾಸಕ್ಕೆ ಬಂಡವಾಳಶಾಹಿ ವ್ಯವಸ್ಥೆಯು ಹೇಗೆ ಅಡೆತಡೆಗಳನ್ನೊಡ್ಡುತ್ತದೆಯೆಂಬ ಪ್ರತಿಪಾದನೆಯೂ ಮಾಡಲ್ಪಟ್ಟಿದೆ. ಶೋಷಣೆಯೇ ಆಧಾರವಾಗಿರುವ ವ್ಯವಸ್ಥೆಯಲ್ಲಿ ಸರ್ವಾಂಗೀಣ ವಿಕಾಸ ಅಸಾಧ್ಯವೆಂಬುದು ಬರ್ನಾಲ್‌ರ ಅಭಿಪ್ರಾಯ. ಅಂದು ಬ್ರಿಟನ್ನಿನ ವಸಾಹತಾಗಿದ್ದ ಭಾರತದಲ್ಲಿ ವಿಜ್ಞಾನದ ಸ್ಥಾನಮಾನವನ್ನು ವಿಶ್ಲೇಷಿಸುತ್ತಾ ಆಗಾಗ್ಗೆ ಇಲ್ಲಿ ಉದ್ಭವಿಸಿದ್ದ ಅಮೋಘ ವೈಜ್ಞಾನಿಕ ಪ್ರತಿಭೆಯನ್ನು ಬರ್ನಾಲ್ ಗುರುತಿಸಿದರು. ಅವರ ಒಂದು ವಿವೇಚನೆ ಹೀಗಿತ್ತು: ಭಾರತದಲ್ಲಿ ವಿಜ್ಞಾನದ ಅಭಿವೃದ್ಧಿಗೆ ಸಹಾಯಕವಾಗುವ ಸಾಮಾಜಿಕ ಶಕ್ತಿಗಳೆಂದರೆ ಸ್ವಾತಂತ್ರ್ಯ ಮತ್ತು ಸ್ವಾವಲಂಬನೆಗಾಗಿ ಹೋರಾಡು [illegible] ರಾಜಕೀಯ ಚಳುವಳಿಗಾರರೇ ವಿನಾ ಸ್ವತಃ ವಿಜ್ಞಾನಿಗಳಲ್ಲ. ಇಂದಿನ ಸಂದರ್ಭದಲ್ಲಿ ಸಮಕಾಲೀನ ಭಾರತೀಯ ವಿಜ್ಞಾನದ ಹರಹನ್ನು ಈ ನಿಟ್ಟಿನಿಂದ ವಿಶ್ಲೇಷಿಸಬೇಕಾದ ಅಗತ್ಯವಿದೆ. ಇಂದು ವೈಜ್ಞಾನಿಕ ಪ್ರಗತಿಗೆ ಪೂರಕವಾಗಿ ಯಶಸ್ವಿಯಾಗಿ ಶ್ರಮಿಸುವವರು ಯಾರು?-ಫ್ಯಾಸಿಸ್ಟ್ ಹಾಗೂ ಮತೀಯ ದುಷ್ಟಕೂಟಕ್ಕೆ ಪ್ರತಿರೋಧವನ್ನೊಡ್ಡುವ ಹಾಗೂ ಅಂತರರಾಷ್ಟ್ರೀಯ ಬಂಡವಾಳದ ಹಿತವನ್ನು ಕಾಪಾಡುವಂತಹ ಜಾಗತೀಕರಣದ ವಿರುದ್ಧ ಹೋರಾಡುವ ಜನಸಮುದಾಯವೋ ಅಥವಾ ಆ ಪ್ರತಿಗಾಮಿ ಪ್ರಕ್ರಿಯೆಗಳಿಗೆ ಬೆಂಬಲವಾಗಿ ನಿಂತಿರುವ ಆಳುವ ವರ್ಗದ ಕುತಂತ್ರಿಗಳೋ? ಇದಕ್ಕೆ ಉತ್ತರ ಕಂಡುಕೊಳ್ಳಬೇಕಾದ್ದು ಅತ್ಯವಶ್ಯಕ.

ಮೇಲೆ ಉಲ್ಲೇಖಿಸಲಾದ ಬರ್ನಾಲ್‌ರ ಪುಸ್ತಕದಲ್ಲಿ ನಾಜಿ ಜರ್ಮನಿಯಲ್ಲಿ ವಿಜ್ಞಾನ ಹೇಗೆ ಬೆಳೆದಿತ್ತೆಂಬುದರ ವಿಶ್ಲೇಷಣೆ ಇದೆ. ಯಹೂದಿಗಳಲ್ಲದ ಬುದ್ಧಿಜೀವಿಗಳು ತುಟಿಪಿಟಕ್ಕೆನ್ನದೆ ನಡೆಯುತ್ತಿದ್ದ ಪಾತಕಗಳನ್ನೆಲ್ಲಾ ಸುಮ್ಮನೆ ನೋಡುತ್ತಾ ಕುಳಿತಿದ್ದುದು ಶೈಕ್ಷಣಿಕ ಕ್ಷೇತ್ರವನ್ನು ಹಾಳುಗೆಡವಲು ಹಿಟ್ಲರ್‌ಗೆ ಸಹಾಯಕವಾಯಿತು. ಯಹೂದಿಗಳನ್ನು ಅಟ್ಟಿಬಿಟ್ಟರೆ ತಮಗೆ ಸ್ಥಾನಗಳು ತೆರವಾಗುತ್ತವೆಂದು ಈ ಜನ ಭಾವಿಸಿದಂತಿತ್ತು. ಫ್ಯಾಸಿಸ್ಟ್ ವಿಜ್ಞಾನದ ಅಪಾಯ ಬೇಗನೆ ಅವರ ಅನುಭವಕ್ಕೆ ಬಂದಿತು. ಮಾನವಿಕ ಮೌಲ್ಯಗಳನ್ನು ಮರುವ್ಯಾಖ್ಯಾನಿಸಲು ವಿಜ್ಞಾನವನ್ನು ಬಳಸಿಕೊಳ್ಳಲಾಯಿತು. ಅದರಿಂದ ಜನಾಂಗದ ಶುದ್ಧತೆ, ರಾಷ್ಟ್ರೀಯ ಅಭಿಮಾನ, ಶಾಂತಿಯೆಂದರೆ ಯುದ್ಧಕ್ಕೆ ಸಿದ್ಧವಾಗಲು ಉಳಿದ ಸಮಯ, ಮುಂತಾದ ಕಲ್ಪನೆಗಳು ಹೊರಬಂದವು. ಇದೇ ಸಂದರ್ಭದಲ್ಲಿ ಫ್ರಾನ್ಸಿನ ಬುದ್ಧಿಜೀವಿವರ್ಗವು ಮನುಕುಲಕ್ಕೆ ಸ್ವಲ್ಪ ನೆಮ್ಮದಿ ನೀಡುವಂತಹ ಪ್ರಕ್ರಿಯೆಯಲ್ಲಿ ತೊಡಗಿತ್ತು. ಫ್ರಾನ್ಸಿನಲ್ಲಿ ತಲೆಯೆತ್ತುತ್ತಿದ್ದ ಫ್ಯಾಸಿಸ್ಟ್ ಬಣಗಳಿಗೆ ಅವರು ಪ್ರಬಲವಾದ ವಿರೋಧ ಒಡ್ಡಿದರು ಮತ್ತು ಅದನ್ನು ಬಲಗೊಳಿಸಲು ಸಾರ್ವಜನಿಕರ ಅಭಿಪ್ರಾಯವನ್ನು ರೂಪಿಸಲು ಮುಂದಾದರು. ಅಸಾಧಾರಣ ಮೇಧಾವಿಗಳಾಗಿದ್ದ ಫ್ರೆಡರಿಕ್ ಮತ್ತು ಐರೀನ್ ಜೋಲಿಯೋ ಕ್ಯೂರಿ, ಪಾಲ್ ಲಾಂಗೆವಾನ್, ಪ್ಯಾಬ್ಲೊ ಪಿಕಾಸೊ, ಸಾರ್ತ್ರ್, ಆಂದ್ರೆ ಮಾಲ್ರೋ ಮುಂತಾದವರೆಲ್ಲಾ ಫ್ಯಾಸಿಸ್ಟ್ ವಿರೋಧಿ ಬಣದ ನೇತಾರರಾದರು.



*ವಿಜ್ಞಾನ ಕಾರ್ಯಕರ್ತರ ಜಾಗತಿಕ ಫೆಡರೇಷನ್‌ನ ಕಾರ್ಯಕಾರಿ ಸಮಿತಿಯ ಸಭೆ. ಎಡದಿಂದ ಮೂರನೆಯವರು ಪ್ರೊ.॥ ಜೋಲಿಯೋ ಕ್ಯೂರಿ (ಅಧ್ಯಕ್ಷರು), ನಾಲ್ಕನೆಯವರು ಜೆ. ಡಿ. ಬರ್ನಾಲ್. (೧೯೪೬)*

ಇದನ್ನೆಲ್ಲಾ ವಿಶ್ಲೇಷಿಸಿದ ಬರ್ನಾಲ್ ಒಂದು ತೀರ್ಮಾನಕ್ಕೆ ಬಂದರು: ಹಿಟ್ಲರನು ಮಹಾಯುದ್ಧವೊಂದನ್ನು ಆರಂಭಿಸಿಯೇ ತೀರುತ್ತಾನೆ. ಅದಕ್ಕೆ ಪ್ರತಿರೋಧವನ್ನು ಒಡ್ಡಲು ಬ್ರಿಟನ್ನಿನ ವಿಜ್ಞಾನಿಗಳನ್ನು ಅಣಿಗೊಳಿಸುವುದು ಬರ್ನಾಲ್‌ಗೆ ತುರ್ತಿನ ಅಗತ್ಯವೆನ್ನಿಸಿತು. ಯುದ್ಧ ಆರಂಭವಾದಾಗ ವೈರಿಯು ಬಾಂಬಿನ ಮಳೆ ಸುರಿಸಿದರೆ ದುಡಿಯುವ ಜನ ಮಾನಸಿಕವಾಗಿ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದು ಕೂಡ ವಿಶ್ಲೇಷಣೆಯ ವಿಷಯವಾಯಿತು. ಈ ರೀತಿಯ ಪೂರ್ವಭಾವಿ ತಯಾರಿಗಳು ಬರ್ನಾಲ್ ಮತ್ತು ಅವರ ಸಹಯೋಗಿಗಳನ್ನು ಸರ್ಕಾರದ ರಕ್ಷಣಾ ವಿಭಾಗವು ಗೌರವದಿಂದ ಕಾಣುವಂತೆ ಮಾಡಿತು. ಬರ್ನಾಲ್ ಕಮ್ಯುನಿಸ್ಟನಾಗಿ ಹೇಯ ''ನರಕದ ಬೆಂಕಿಯಷ್ಟೇ ಕೆಂಪಾಗಿದ್ದ''ನೆಂದು ಕನ್ಸರ್ವೇಟಿವ್ ಪಕ್ಷದ ನಾಯಕರು ಘೋಷಿಸಿದ್ದರಾದರೂ ಯುದ್ಧದ ಸಮಯದಲ್ಲಿ ಆತನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಅವರು ಹಿಂದುಮುಂದು ನೋಡಲಿಲ್ಲ. ಸೈನ್ಯದ ಮುನ್ನಡೆಗೆ ಯೋಜನೆಗಳನ್ನು ತಯಾರಿಸುವುದು ಅವರ ಪಾಲಿಗೆ ಬಂದ ಕೆಲಸ. ವೈಜ್ಞಾನಿಕ ಸಲಹೆಗಾರನಾಗಿ ಬರ್ನಾಲ್ ಬ್ರಿಟನ್ನಿನ ಸೈನ್ಯವು ನಾರ್ಮಂಡಿಯಲ್ಲಿ ಬಂದಿಳಿದು ಪ್ರಸಿದ್ಧ ನಿರ್ಣಾಯಕ ಯುದ್ಧದಲ್ಲಿ ವಿಜಯಿಯಾಗಲು ಅಗತ್ಯವಾದ, ಆಮೂಲಾಗ್ರವಾದ ನೀಲಿನಕ್ಷೆಯನ್ನು ತಯಾರಿಸಿದ್ದು, ತಾನೂ ಸ್ವತಃ ಅಲ್ಲಿ ಪ್ರತ್ಯಕ್ಷವಾಗಿ ಹಾಜರಿದ್ದುದು ಇಂದು ಇತಿಹಾಸದ ಭಾಗವಾಗಿದೆ. ಹೇಗೆ ಗಾಳಿ ಬೀಸಿದರೆ ಸಮುದ್ರತಟವನ್ನು ಸೇರುವ ನೌಕೆ ಯಾವ ಕಡೆಗೆ ಹೋಗಬಹುದು, ನಿರ್ಧಾರಿತ ಜಾಗಕ್ಕೇ ಅದನ್ನು ಕೊಂಡೊಯ್ಯುವುದು ಹೇಗೆ, ಸೈನಿಕರನ್ನು ಎಲ್ಲಿ ಇಳಿಸಬೇಕು, ಮುಂತಾದುವನ್ನೆಲ್ಲಾ ಲೆಕ್ಕಾಚಾರ ಮಾಡಿ ಅದರಂತೆ ನಿರ್ವಹಿಸುವುದರಲ್ಲಿ ಬರ್ನಾಲ್‌ದು ಪ್ರಮುಖ ಪಾತ್ರವಾಗಿತ್ತು.

ಯುದ್ಧ ಮುಗಿಯಿತು. ವಿನ್‌ಸ್ಟನ್ ಚರ್ಚಿಲ್ ತನ್ನ ಕುಖ್ಯಾತ ಫುಲ್ಟನ್ ಭಾಷಣದಿಂದ ಯುದ್ಧಕಾಲದ ಮೈತ್ರಿಕೂಟವನ್ನು ಭಗ್ನಗೊಳಿಸಿ ಶೀತಲ ಸಮರಕ್ಕೆ ನಾಂದಿ ಹಾಡಿದ. ಸರ್ಕಾರದ ಶಾಖೆಗಳು ಬರ್ನಾಲ್, ಜೋಲಿಯೋ ಕ್ಯೂರಿ ಅಂಥವರನ್ನು ವಕ್ರದೃಷ್ಟಿಯಿಂದ ನೋಡಲಾರಂಭಿಸಿದುವು. ಮುಂಚೆಯೇ ಹಿರೋಷಿಮಾ-ನಾಗಸಾಕಿಗಳ ಮೇಲೆ ಪರಮಾಣು ಬಾಂಬುಗಳನ್ನು ಬೇರೆ ಹಾಕಲಾಗಿತ್ತು. ಆದ್ದರಿಂದ ವಿಜ್ಞಾನಿಗಳ ಜವಾಬ್ದಾರಿ ಮೊದಲಿಗಿಂತಲೂ ಗುರುತರವಾಗಿತ್ತು. ವಿಜ್ಞಾನಿಗಳ ಸಂಶೋಧನೆಯ ಫಲ ಹೀಗೆ ಮನುಕುಲಕ್ಕೆ ಮಾರಕವಾಗುವ ಧ್ವಂಸಾಕೃತ್ಯಗಳಿಗೆ

ಹಾದಿ ಮಾಡಿಕೊಡಬೇಕೆ? ಶೀತಲ ಸಮರದಿಂದ ಉಂಟಾಗಿದ್ದ ಕಹಿ ಭಾವನೆ ಮತ್ತು ಪರಸ್ಪರ ಸಂಶಯದ ವಾತಾವರಣವನ್ನು ತಿಳಿಗೊಳಿಸಲು ಬರ್ನಾಲ್ ವಿಶೇಷವಾಗಿ ಶ್ರಮಿಸಿ ವಿವಿಧ ವೇದಿಕೆಗಳನ್ನು ರಚಿಸಿದರು : ವೈಜ್ಞಾನಿಕ ಕೆಲಸಗಾರರ ಸಂಘ, ಪಗ್‌ವಾಶ್ ಅಧಿವೇಶನ, ವಿಶ್ವ ಶಾಂತಿ ಮಂಡಲಿ, ಇತ್ಯಾದಿ. ವಸಾಹತುಗಳಾಗಿದ್ದು ಹೊಸದಾಗಿ ಸ್ವಾತಂತ್ರ್ಯ ಪಡೆದಿದ್ದ ರಾಷ್ಟ್ರಗಳ ಅಭಿವೃದ್ಧಿಗೆ ಬ್ರಿಟನ್ನಿನ ವಿಜ್ಞಾನಿಗಳು ಸಹಕಾರ ನೀಡಬೇಕೆಂದೂ ಯುನೆಸ್ಕೋವನ್ನು ಬಲಪಡಿಸಬೇಕೆಂದೂ ಬರ್ನಾಲ್ ಆಗ್ರಹಿಸಿದರು.

೧೯೫೪ರಲ್ಲಿ ಬರ್ನಾಲ್‌ರ ಅತಿವಿಖ್ಯಾತ ಗ್ರಂಥ ಇತಿಹಾಸದಲ್ಲಿ ವಿಜ್ಞಾನ ಪ್ರಕಟವಾಯಿತು. ಅದರ ಮಹತ್ವ ಎಷ್ಟೆಂದು ವಿವರಿಸುವುದು ಕಷ್ಟ. ಅಂತಹ ವ್ಯಾಪ್ತಿಯುಳ್ಳ ಗ್ರಂಥಗಳೇ ವಿರಳ. ನಾಲ್ಕು ಸಂಪುಟಗಳ ಈ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ವಿಮರ್ಶಿಸಲು ಸೋವಿಯೆತ್ ಒಕ್ಕೂಟದ ವಿಜ್ಞಾನ ಅಕಾಡೆಮಿಯು ಒಂದು ಇಡೀ ಅಧಿವೇಶನವನ್ನು ಮೀಸಲಾಗಿರಿಸಿತು. ಬೇರಾವ ವಿಜ್ಞಾನಿಗೂ ಇಂತಹ ಮನ್ನಣೆ ದೊರೆತುದಿಲ್ಲ. ಆ ಗ್ರಂಥವನ್ನು ಪರಿಚಯಿಸಲು ಬಹುಶಃ 'ಹೊಸತು'ವಿನ ಒಂದು ಇಡೀ ಸಂಚಿಕೆಯೇ ಬೇಕಾಗಬಹುದು. ಒಂದಂಶವಂತೂ ನಿಜ : ಅದು ಕಾಲಾನುಕ್ರಮವಾಗಿ ವಿಜ್ಞಾನವು ಬೆಳೆದುಬಂದುದರ ಇತಿಹಾಸವಷ್ಟೇ ಅಲ್ಲ. ಇತಿಹಾಸದಲ್ಲಿ ವಿಜ್ಞಾನವು ನಿರ್ವಹಿಸಿರುವ ಪಾತ್ರವನ್ನು ವಿಶ್ಲೇಷಿಸಲು ಒಂದು ವಿಧಾನವನ್ನು ಈ ಗ್ರಂಥ ಕಲ್ಪಿಸಿಕೊಡುತ್ತದೆ. ಬರ್ನಾಲ್ ಒಂದೆಡೆ ಹೇಳುತ್ತಾರೆ : ''ಮಾನವನ ಸಾಮರ್ಥ್ಯದ ಕೊರತೆಯಿಂದಾಗಿ ವಿಜ್ಞಾನವೆಂದೂ ಸೋಲುವುದಿಲ್ಲ; ಆ ಸಾಮರ್ಥ್ಯದ ಬಳಕೆಗೆ ಅಗತ್ಯವಾದ ಸಾಮಾಜಿಕ ಸಂಘಟನೆಯನ್ನು ರೂಪಿಸಿಕೊಳ್ಳದಿದ್ದಾಗ ಮಾತ್ರವೇ ಅದು ಸೋಲಬಹುದು, ಅಷ್ಟೆ.'' ಇದನ್ನು ಅನ್ವಯ ಮಾಡಿದರೆ ಯಾವ ಘಟ್ಟದಲ್ಲೂ ಮಾನವನ ಇತಿಹಾಸವನ್ನು ಅರ್ಥೈಸಲು ಸಾಧ್ಯ. ಪ್ರಸ್ತುತ ಸನ್ನಿವೇಶದಲ್ಲಿ ಸಾಮ್ರಾಜ್ಯಶಾಹಿಯ ಉಪಟಳದಿಂದಾಗಿ ಅನಭಿವೃದ್ಧ ರಾಷ್ಟ್ರಗಳು ಸೊರಗಿ ನಿಂತಿವೆ. ಜ್ಞಾನರಾಶಿಯ ಪ್ರಯೋಜನ ಅವರಿಗೆ ಲಭಿಸದಿರಲು ಕಂಟಕಪ್ರಾಯವಾಗಿ ನಿಂತಿರುವುದು ಕೆಲವು ಬಲಿಷ್ಠ ರಾಷ್ಟ್ರಗಳ ಲಾಭಕೋರತನ. ವಿಶ್ವದ ಮಾನವ ಸಂಪನ್ಮೂಲವನ್ನು ಪೂರ್ಣಪ್ರಮಾಣದಲ್ಲಿ ಹರಿಯ ಬಿಟ್ಟರೆ ಮನುಕುಲದ ಪ್ರಗತಿ ಸಾಧ್ಯವಿದೆ. ಅದು ವಿಜ್ಞಾನದ ಪ್ರಗತಿಗೂ ನೇರವಾದ ಮಾರ್ಗ. ಆದರೆ ಅದು ಸಾಮ್ರಾಜ್ಯಶಾಹಿ-ಬಂಡವಾಳಶಾಹಿಗಳ ಪತನದಿಂದಲೇ ಆಗಬಹುದಾದ್ದು.

ಮನುಕುಲದ ಹಸಿರು ಆಶಯದ ಈಡೇರಿಕೆಗೆ ಇರುವುದೊಂದೇ ಮಾರ್ಗವೆಂದು ಬರ್ನಾಲ್ ಬಗೆದಿದ್ದರು. ಅದು ಸಮಾಜವಾದಿ ವ್ಯವಸ್ಥೆ. ಇದು ಹುಸಿಯಾಗಿ ತೋರಬಹುದು. ಏಕೆಂದರೆ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನಲ್ಲಿ ಆ ವ್ಯವಸ್ಥೆ ಕುಸಿದುಬಿದ್ದಿದೆ. ಇದು ''ಸಿದ್ಧಾಂತದ ಪತನ'', ''ಇತಿಹಾಸದ ಕೊನೆ'', ''ಮುಕ್ತತೆಯ ಗೆಲುವು'', ಇತ್ಯಾದಿಯಾಗಿ ವರ್ಣನೆಯಾಗಿದೆ. ಇತಿಹಾಸದ ಗಂಭೀರ ವಿದ್ಯಾರ್ಥಿಗಳಾರೂ ಇದರಿಂದ ವಿಚಲಿತರಾಗುವುದಿಲ್ಲ, ಹತಾಶರಾಗುವುದಿಲ್ಲ. ಸಮಾಜವಾದಿ ರಾಷ್ಟ್ರಗಳು ಸಾಧಿಸಿದ ವೈಜ್ಞಾನಿಕ ಪ್ರಗತಿ ಅಸಾಧಾರಣವಾದ್ದು. ಅಷ್ಟು ಅಲ್ಪಕಾಲದಲ್ಲಿ ಅಷ್ಟೊಂದು ಸಾಧನೆ ಬೇರೆಲ್ಲೂ, ಯಾವ ವ್ಯವಸ್ಥೆಯಡಿಯಲ್ಲೂ, ಯಾವ ಕಾಲದಲ್ಲೂ ಆಗಿರದಿದ್ದ ಬೆಳವಣಿಗೆ. ಮನುಕುಲದ ಮುನ್ನಡೆಗೆ ಪೂರಕವಾಗುವಂತೆ ವಿಜ್ಞಾನವನ್ನು ಅಳವಡಿಸಿದ್ದು ಸಮಾಜವಾದಿ ವ್ಯವಸ್ಥೆಯ ಹೆಗ್ಗಳಿಕೆ. ಈ ಸಮಾಜಗಳಲ್ಲಿ, ಅಂತೆಯೇ ಚೇನಾದ ಜನ ಪ್ರಜಾಪ್ರಭುತ್ವದಲ್ಲಿ, ವಿಜ್ಞಾನದ ಭವಿಷ್ಯವು ಕೇವಲ ಅಲ್ಲಿಯ ಆಂತರಿಕ ಭದ್ರತೆಯನ್ನವಲಂಬಿಸಿರುವುದಿಲ್ಲವೆಂದು ಬರ್ನಾಲ್ ಖಚಿತವಾಗಿ ಹೇಳಿದ್ದರು. ಹೊರಗಿನಿಂದ ಹೇರಲಾಗುವ ಯುದ್ಧದ ವಾತಾವರಣ, ಬುಡಮೇಲು ಕೃತ್ಯಗಳು, ಇವನ್ನು ಸೋಲಿಸುವುದು ಕೂಡ ವಿಜ್ಞಾನದ ಭವಿಷ್ಯವನ್ನು ನಿರ್ಧರಿಸುತ್ತದೆ. ಅಣ್ವಸ್ತ್ರಗಳ ಭೀತಿ, ಸೈದ್ಧಾಂತಿಕ ಅಪಕ್ವತೆ, ಸಮಾಜವಾದಿ ಬಣದಲ್ಲಿ ಆಂತರಿಕ ಕಾದಾಟಗಳು, ಇವನ್ನೆಲ್ಲಾ ಪರಿಹರಿಸಿಕೊಂಡಾಗ ಸಂದರ್ಭವೇ ಬೇರೆಯಾಗುತ್ತದೆ. ವಿಜ್ಞಾನ ಮತ್ತು ಮಾನವನ ಪ್ರಗತಿ ಪರಸ್ಪರ ತಾಳೆ ಹಾಕಿಕೊಂಡಿರುವುದು ಇದರಿಂದಲೂ ಸ್ಪಷ್ಟವಾಗುತ್ತಿದೆ.

ಸೋವಿಯೆತ್ ಒಕ್ಕೂಟದ ಮಾರ್ಪಾಟಿಗೆ ಇಪ್ಪತ್ತು ವರ್ಷಗಳ ಮುನ್ನ ೧೯೭೧ರ ಸೆಪ್ಟೆಂಬರ್ ೧೫ರಂದು ಬರ್ನಾಲ್ ನಿಧನರಾದರು. ೧೯೫೦ರ ಸುಮಾರಿನಿಂದ ಅಲ್ಲಿಗೆ ಆಗಾಗ್ಗೆ ಹೋಗಿಬರುತ್ತಿದ್ದ ಬರ್ನಾಲ್‌ಗೆ ಅಲ್ಲಿನ ನ್ಯೂನತೆಗಳು ತಿಳಿದಿರಲಿಲ್ಲವೆಂದಲ್ಲ. ಸ್ಟಾಲಿನ್ ಕಾಲದಲ್ಲಾಗಲಿ ನಂತರದಲ್ಲಾಗಲಿ ಅಲ್ಲಿ ಎಲ್ಲವೂ ಪರಿಪೂರ್ಣವೆಂದು ಬರ್ನಾಲ್ ಭಾವಿಸಿರಲಿಲ್ಲ. ಅಲ್ಲಿಯ ಅನೇಕ ಋಣಾತ್ಮಕ ವಿದ್ಯಮಾನಗಳನ್ನು ಬಹಿರಂಗವಾಗಿ ಖಂಡಿಸಿರದ ಬರ್ನಾಲ್ ಯಾವ ನಿಲುವನ್ನು ತಾಳಿದ್ದರೋ ಹೇಳಬರುವುದಿಲ್ಲ. ಆದರೆ ಬರ್ನಾಲ್ ಇರಿಸಿಕೊಂಡಿದ್ದ ಸಖ್ಯ ಅವರ ಜಾಗತಿಕ ದೃಷ್ಟಿಕೋನಕ್ಕೆ ಒಂದು ಸೂಚನೆಯಾಗಿದೆ. ಮಾವೋ, ಕ್ರುಶ್ಚೇವ್, ಚೌ ಎನ್ ಲೈ, ಎನ್‌ಕ್ರುಮಾ ಮೊದಲಾದ ರಾಜಕೀಯ ಧುರೀಣರಲ್ಲದೆ ಸಾಮ್ರಾಜ್ಯಶಾಹಿ ವಿರೋಧಿಗಳಾಗಿದ್ದ ಪಿಕಾಸೊ, ನಜೀಂ ಹಿಕ್ಮೆತ್, ಪ್ಯಾಬ್ಲೊ ನೆರುದಾ, ಮುಂತಾದವರು ಅವರ ಸ್ನೇಹಿತರು. ಸಮಾಜವಾದಿ ಬಣದ ಐಕ್ಯತೆ ಎಂದಾದರೂ ಸಿದ್ಧಿಸಲೇಬೇಕೆಂಬ ಆಶಯ ಅವರದಾಗಿತ್ತು.

ಭಾರತದೊಡನೆ ಬರ್ನಾಲ್ ನಿಕಟ ಬಾಂಧವ್ಯ ಬೆಳೆಸಿಕೊಂಡಿದ್ದರು. ನಮ್ಮ ದೇಶಕ್ಕೆ ಹಲವು ಬಾರಿ ಅವರು ಬಂದಿದ್ದರು. ಅವರ ನಿಕಟವರ್ತಿ ಭೌತಶಾಸ್ತ್ರಜ್ಞ ಪಿ. ಎಂ. ಎಸ್. ಬ್ಲ್ಯಾಕೆಟ್ ವೈಜ್ಞಾನಿಕ ಸಲಹೆಗಾರರಾಗಿ ಭಾರತಕ್ಕೆ ಅನೇಕ ಬಾರಿ ಬಂದಿದ್ದುದುಂಟು. ಬರ್ನಾಲ್‌ರ ಶಿಷ್ಯೆ ಡರೋತಿ ಹಾಜ್‌ಕಿನ್‌ಗೆ ಭಾರತದಲ್ಲಿ, ಬೆಂಗಳೂರಿನಲ್ಲಿ, ಅನೇಕ ಶಿಷ್ಯರು, ಸಹೋದ್ಯೋಗಿಗಳು ಇದ್ದರು. ಹಾಲ್ಡೇನ್ ಇಲ್ಲೇ ನೆಲೆಸಿದರು ಕೂಡ. ಹಾಲ್ಡೇನ್ ಮತ್ತು ಬರ್ನಾಲ್ ಇಬ್ಬರಿಗೂ ದೇವಿಪ್ರಸಾದ ಚಟ್ಟೋಪಾಧ್ಯಾಯ ಅಚ್ಚುಮೆಚ್ಚಿನ ಸ್ನೇಹಿತರಾಗಿದ್ದರು. ಭಾರತೀಯ ವಿಜ್ಞಾನಿಗಳು ಬರ್ನಾಲ್‌ಗೆ ವಿಶೇಷವಾಗಿ ಆದರ ತೋರಲು ಎರಡು ಕಾರಣಗಳಿವೆ: (ಅ) ಪ್ರೊಟೀನ್ ಸ್ವರೂಪದಲ್ಲಿರುವ ಕೆಲವು ಮಹತ್ವದ ಸಮಸ್ಯೆಗಳತ್ತ ಜಿ. ಎನ್. ರಾಮಚಂದ್ರನ್ ಅವರ ಗಮನ ಹರಿಸುವುದರಲ್ಲಿ ಬರ್ನಾಲ್‌ರ ಪಾತ್ರ ಸಾಕಷ್ಟು ಹಿರಿದಾಗಿತ್ತು; (ಆ) ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಡಾ|| ಎ. ಆರ್. ವಾಸುದೇವಮೂರ್ತಿಯವರನ್ನು ಪುಣೆಯ ಡಿ. ಡಿ. ಕೋಸಾಂಬಿಯವರಿಗೆ ಮೊದಲು ಪರಿಚಯ ಮಾಡಿಕೊಟ್ಟಿದ್ದು ಜೆ. ಡಿ. ಬರ್ನಾಲ್; ೧೯೫೦ರಲ್ಲಿ ಪುಣೆಯಲ್ಲಿ ಜರುಗಿದ ಭಾರತೀಯ ವಿಜ್ಞಾನ ಅಧಿವೇಶನದ ಸಂದರ್ಭದಲ್ಲಿ. ಕೋಸಾಂಬಿಯವರ ಬೆಂಗಳೂರು ಸಂಪರ್ಕ ಘಟಿಸಿದ್ದು ಈ ರೀತಿಯಲ್ಲಿ. ನಮ್ಮ ಕರಗದ ಬಗ್ಗೆ ಅವರು ಸಂಶೋಧನೆ ನಡೆಸಲು ಸಾಧ್ಯವಾದದ್ದು ಆ ಮೂಲಕ. ವಿಜ್ಞಾನದ ಸಾಮಾಜಿಕ ಜವಾಬ್ದಾರಿಯ ಬಗ್ಗೆ ಇಂದು ನಾವೇನಾದರೂ ಸ್ವಲ್ಪ ಎಚ್ಚೆತ್ತಿದ್ದರೆ ಅದಕ್ಕೆ ಬರ್ನಾಲ್‌ರು ಮೂಲಪ್ರೇರಣೆ ಎಂಬುದನ್ನು ಮರೆಯಲಾಗದು.

ಡಾ|| ಎಸ್. ಚಟರ್ಜಿ
ಫ್ಲಾಟ್ ನಂ. ೨೩, ೧೩೭, ೮ನೇ ಮುಖ್ಯ ರಸ್ತೆ, ೨ನೇ ಹಂತ
ಅಯೋಧ್ಯಾ ಅಪಾರ್ಟ್‌ಮೆಂಟ್, ಡಾ|| ಎಮ್. ಶಿವರಾಮ್ ರಸ್ತೆ
ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

# ಅಸಾಧಾರಣ ಪ್ರಗತಿ ಅಗಾಧ ಸಮಸ್ಯೆಗಳ ಇಪ್ಪತ್ತನೆ ಶತಮಾನ

ರಾಜಕೀಯ, ಸಾಮಾಜಿಕ, ಆರ್ಥಿಕ, ವೈಜ್ಞಾನಿಕ, ತಂತ್ರಜ್ಞಾನ ಮುಂತಾದ ಎಲ್ಲ ಕ್ಷೇತ್ರಗಳಲ್ಲೂ ವಿಶಿಷ್ಟವಾದ, ಅದ್ಭುತವಾದ ಬೆಳವಣಿಗೆಗಳು ಇಪ್ಪತ್ತನೆಯ ಶತಮಾನದ ವಿಶೇಷ. ಮಾನವ ಇತಿಹಾಸದ ನೂರಾರು-ಸಾವಿರ ವರ್ಷಗಳ ಮುನ್ನಡೆಯಲ್ಲಿ ಪರಾಕಾಷ್ಠೆ ಮುಟ್ಟಿದ ಶತಮಾನ ಅದು. ಈ ಭೂಮಂಡಲದ ಮೇಲೆ ತನ್ನ ಆಧಿಪತ್ಯ ಸ್ಥಾಪಿಸಿಕೊಂಡ ಮನುಷ್ಯ ಸೌರಮಂಡಲದ ಇತರ ಗ್ರಹಗಳನ್ನೂ ಪ್ರವೇಶಿಸಲು ಪ್ರಯತ್ನಿಸಿದ. ಕೃತಕ ಉಪಗ್ರಹಗಳನ್ನು ನಿರ್ಮಿಸಿಕೊಂಡು ಅಂತರಿಕ್ಷಕ್ಕೆ ಜಿಗಿದ. ಚಂದ್ರ ಮಂಡಲದ ಮೇಲೆ ಕಾಲೂರಿ ಅನ್ವೇಷಣೆ ನಡೆಸಿದ. ಜೀವರಹಸ್ಯವನ್ನು ಕಂಡುಕೊಳ್ಳುವ ದಿಶೆಯಲ್ಲಿ ಅಪಾರವಾದ ಪ್ರಗತಿ ಸಾಧಿಸಿದ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಪ್ರಗತಿಯಿಂದ ಮಾನವನ ಜೀವನವನ್ನು ಸುಗಮಗೊಳಿಸುವಂಥ ಹೊಸ ಉಪಕರಣಗಳನ್ನು ತಯಾರಿಸಿದ. ಇಡೀ ಮನುಷ್ಯ ಕುಲವನ್ನೇ ನಿರ್ನಾಮಗೊಳಿಸುವ ಸಾಮರ್ಥ್ಯವುಳ್ಳ ನ್ಯೂಕ್ಲಿಯರ್ ಅಸ್ತ್ರಗಳನ್ನು ಸೃಷ್ಟಿಸಿದ. ಎರಡು ಮಹಾಯುದ್ಧಗಳು, ಒಂದು ಮಹಾಕ್ರಾಂತಿ, ವಸಾಹತುಶಾಹಿಯ ನಿರ್ಮೂಲನ, ಸ್ವತಂತ್ರ ರಾಷ್ಟ್ರಗಳ ಉದಯ, ಅಪಾರವಾದ ಶ್ರೀಮಂತಿಕೆ ಒಂದು ಕಡೆ, ಬಹುಸಂಖ್ಯಾತ ಬಡ ಜನರು ಇನ್ನೊಂದು ಕಡೆ, ಇವು ಈ ಶತಮಾನದ ಹೆಗ್ಗುರುತುಗಳು.

**ಮೊದಲನೆ ಮಹಾಯುದ್ಧ**

ಇಪ್ಪತ್ತನೆಯ ಶತಮಾನದ ಪ್ರಾರಂಭದ ಹೊತ್ತಿಗಾಗಲೆ ವಸಾಹತುಶಾಹಿ ವ್ಯವಸ್ಥೆ ಭದ್ರವಾಗಿ ಬೇರೂರಿತ್ತು. ಜಗತ್ತಿನ ಬಹುಭಾಗ, ಮುಖ್ಯವಾಗಿ ಏಷ್ಯ, ಆಫ್ರಿಕ ಖಂಡದ ದೇಶಗಳು ಯೂರೋಪಿನ ಕೆಲವೇ ಸಾಮ್ರಾಜ್ಯಶಾಹಿಗಳ ವಶದಲ್ಲಿದ್ದಿತು. ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಅತ್ಯಂತ ಪ್ರಬಲರಾಗಿದ್ದರು. ಒಂದು ಅಂದಾಜಿನ ಪ್ರಕಾರ ಪ್ರಪಂಚದ ಜನಸಂಖ್ಯೆಯಲ್ಲಿ ಪ್ರತಿ ನಾಲ್ವರಲ್ಲಿ ಒಬ್ಬ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿದ್ದ. ನೂರಾರು ವರ್ಷಗಳ ಕಾಲ ಈ ದೇಶಗಳ ನೈಸರ್ಗಿಕ ಸಂಪತ್ತನ್ನು ಸೂರೆಮಾಡಿ, ಜನರನ್ನು ಶೋಷಣೆ ಮಾಡಿ ಸಾಮ್ರಾಜ್ಯಶಾಹಿ ದೇಶಗಳು ಐಶ್ವರ್ಯವಂತವಾಗಿದ್ದುವು. ಕೈಗಾರಿಕಾಭಿವೃದ್ಧಿ ಹೆಚ್ಚುತ್ತಿದ್ದಂತೆ ಸಾಮ್ರಾಜ್ಯಶಾಹಿ ದೇಶಗಳ ಮಧ್ಯೆ ಮಾರುಕಟ್ಟೆಗಾಗಿ ಪೈಪೋಟಿಯೂ ತೀವ್ರಗೊಳ್ಳುತ್ತಿತ್ತು, ಪರಸ್ಪರ ವೈಮನಸ್ಯ ಹೊಗೆಯಾಡುತ್ತಲೇ ಇತ್ತು. ೧೯೧೪ರಲ್ಲಿ ಅದು ಆಸ್ಫೋಟನೆಗೊಂಡಿತು. ಮೊದಲನೆ ಮಹಾಯುದ್ಧ ಎಂದು ಇತಿಹಾಸದಲ್ಲಿ ಗುರ್ತಿಸಲಾಗಿರುವ ಈ ಯುದ್ಧ ಯೂರೋಪಿನ ರಾಷ್ಟ್ರಗಳ ನಡುವೆ ಆಗಿದ್ದಾದರೂ ಅವುಗಳಿಗಷ್ಟೇ ಸೀಮಿತವಾಗಿರಲಿಲ್ಲ. ಇದರ ಬಿಸಿ ಪ್ರಪಂಚದ ಎಲ್ಲ ರಾಷ್ಟ್ರಗಳಿಗೂ ತಟ್ಟಿತು. ಮುಖ್ಯವಾಗಿ ಬ್ರಿಟನ್, ರಷ್ಯ, ಜರ್ಮನಿ ಮತ್ತು ಇತರ ರಾಷ್ಟ್ರಗಳು ಈ ಯುದ್ಧದಲ್ಲಿ ಭಾಗವಹಿಸಿದ್ದುವು. ಯುದ್ಧದಲ್ಲಿ ಅತ್ಯಂತ ಅಭಿವೃದ್ಧಿ ಹೊಂದಿದ ಕೈಗಾರಿಕಾ ರಾಷ್ಟ್ರವಾಗಿದ್ದ ಜರ್ಮನಿ ಪರಾಜಯಗೊಂಡಿತು. ನಾಲ್ಕು ವರ್ಷಗಳ ಕಾಲ ನಡೆದ ಈ ಯುದ್ಧದಲ್ಲಿ ಆಧುನಿಕ ಶಸ್ತ್ರಾಸ್ತ್ರಗಳು ಬಳಕೆಯಾದವು. ಮೊದಲಬಾರಿಗೆ ರಾಸಾಯನಿಕ ಅಸ್ತ್ರಗಳನ್ನು, ಮುಖ್ಯವಾಗಿ ವಿಷಾನಿಲವನ್ನು ಈ ಯುದ್ಧದಲ್ಲಿ ಬಳಸಲಾಯಿತು. ವಿಷಾನಿಲ ಬಳಕೆಯನ್ನು ಅನಂತರ ನಿಷೇಧಿಸಲಾಯಿತು. ಯುದ್ಧದಲ್ಲಿ ಮಡಿದ ಯೋಧರ ಸಂಖ್ಯೆ ಸುಮಾರು ಒಂದೂವರೆ ಕೋಟಿ. ಸಾವಿಗೀಡಾದ ನಾಗರಿಕರ ಸಂಖ್ಯೆ ಒಂದು ಕೋಟಿಗೂ ಅಧಿಕ ಎಂದು ಅಂದಾಜು. ನೇರವಾಗಿ ಯುದ್ಧದಲ್ಲಿ ಭಾಗವಹಿಸದೆ ಶಸ್ತ್ರಾಸ್ತ್ರಗಳನ್ನು ಒದಗಿಸಿದ ಅಮೆರಿಕ ಈ ಯುದ್ಧದಿಂದಾಗಿ ಹೆಚ್ಚು ಶ್ರೀಮಂತಗೊಂಡಿತು. ಇಂಥ ಭೀಕರ ಯುದ್ಧ ಮತ್ತೆ ಸಂಭವಿಸದಂತೆ ತಡೆಯಲು ೧೯೧೯ರಲ್ಲಿ 'ಲೀಗ್ ಆಫ್ ನೇಷನ್ಸ್' ಎಂಬ ಅಂತರರಾಷ್ಟ್ರೀಯ ಸಂಸ್ಥೆಯೊಂದನ್ನು ಸ್ಥಾಪಿಸಲಾಯಿತು. ಇಪ್ಪತ್ತು ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ ಈ ಸಂಸ್ಥೆಗೆ ಇನ್ನೊಂದು ಮಾರಕ ಯುದ್ಧವನ್ನು ತಡೆಯಲಾಗಲಿಲ್ಲ.

**ರಷ್ಯಾದ ಮಹಾಕ್ರಾಂತಿ**

ಮೊದಲನೆಯ ಮಹಾಯುದ್ಧ ಬಂಡವಾಳಶಾಹಿ ವ್ಯವಸ್ಥೆಯ ಶಿಥಿಲತೆಯನ್ನು, ವೈರುಧ್ಯಗಳನ್ನು ಬಯಲುಮಾಡಿತು. ಯುದ್ಧಾನಂತರ ಪ್ರಪಂಚದ ರಾಜಕೀಯದಲ್ಲಿ ತೀವ್ರವಾದ ಬದಲಾವಣೆ ಉಂಟಾಯಿತು. ಯುದ್ಧ ಮುಕ್ತಾಯದ ಹಂತದಲ್ಲಿರುವಾಗಲೆ ರಷ್ಯಾದಲ್ಲಿ ಜಾರ್‌ಶಾಹಿ ನಿರಂಕುಶಾಡಳಿತೆಯನ್ನು ಅಂತ್ಯಗೊಳಿಸಿದ ಮಹಾಕ್ರಾಂತಿ ಹೊಸಯುಗವೊಂದನ್ನು ಪ್ರಾರಂಭಿಸಿತು. ಮಾರ್ಕ್ಸ್‌ವಾದಿ ಸಿದ್ಧಾಂತದ ಪ್ರೇರಣೆಯಿಂದ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಈ ಮಹಾಕ್ರಾಂತಿ ಬಂಡವಾಳಶಾಹಿ ವ್ಯವಸ್ಥೆಯ ಬುಡವನ್ನೇ ಅಲುಗಾಡಿಸಿತು. ಅಕ್ಟೋಬರ್ ಮಹಾಕ್ರಾಂತಿ ಎಂದು ಪ್ರಸಿದ್ಧವಾಗಿರುವ ಈ ಕ್ರಾಂತಿ ಶೋಷಣೆಗೀಡಾಗಿದ್ದ ಕಾರ್ಮಿಕವರ್ಗ ಮತ್ತು ರೈತವರ್ಗ ನಡೆಸಿದ ಮೊದಲ ಯಶಸ್ವೀ ಕ್ರಾಂತಿ. ಮಾನವನಿಂದ ಮಾನವನ ಶೋಷಣೆಯನ್ನು ಕೊನೆಗೊಳಿಸಿ ಎಲ್ಲರಿಗೂ ಸಮಾನಾವಕಾಶ ಕಲ್ಪಿಸುವ ಸಮಾಜವಾದಿ ಸಮಾಜವನ್ನು ನಿರ್ಮಿಸುವ ಗುರಿ ಹೊಂದಿದ್ದ ಈ ಮಹಾಕ್ರಾಂತಿಯ ನೇತಾರ ವ್ಲದೀಮಿರ್ ಇಲ್ಯಿಚ್ ಲೆನಿನ್. ರಷ್ಯಾದಲ್ಲಿ ೧೯೧೭ರ ಅಕ್ಟೋಬರ್‌ನಲ್ಲಿ ಜರುಗಿದ ಕ್ರಾಂತಿ ಪ್ರಪಂಚದ ಜನತೆಯ ಮೇಲೆ ಬೀರಿದ ಪ್ರಭಾವ ಅಗಾಧವಾದ್ದು. ಶೋಷಣೆಗೀಡಾಗಿದ್ದ ಕೋಟ್ಯಾನುಕೋಟಿ ಕಾರ್ಮಿಕರಿಗೆ, ರೈತರಿಗೆ, ದುಡಿಯುವ ಜನಸಮೂಹಗಳಿಗೆ ಅದು ವಿಮೋಚನೆಗೆ ಹೊಸ ಆಶಾಕಿರಣವನ್ನು ತಂದಿತು. ವಸಾಹತುಶಾಹಿಗಳ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ದೇಶಗಳ ಜನತೆಗೆ ನವ ಚೈತನ್ಯವನ್ನು ನೀಡಿತು. ಕ್ರಾಂತಿಯನ್ನು ಮೊಳಕೆಯಲ್ಲೇ ಚಿವುಟಿಹಾಕುವ ಸಾಮ್ರಾಜ್ಯಶಾಹಿಗಳ ಪ್ರಯತ್ನವನ್ನು, ಸಶಸ್ತ್ರ ಹಸ್ತಕ್ಷೇಪವನ್ನು ಹಿಮ್ಮೆಟ್ಟಿಸಿ ೧೯೨೦ರಲ್ಲಿ ಸ್ಥಾಪನೆಗೊಂಡ ಸೋವಿಯತ್ ಒಕ್ಕೂಟ ಯೋಜನಾಬದ್ಧವಾದ ರೀತಿಯಲ್ಲಿ [illegible]



ತ್ಸಾರ್‌ಶಾಹಿ ರಷ್ಯಾದಲ್ಲಿ
ಸಂಭವಿಸಿದ ಮಹಾಕ್ರಾಂತಿ - ೧೯೧೭

ಸೀಯಾರ್ಕೆ

ಕಾಲಾವಧಿಯಲ್ಲಿ ಸಾಧಿಸಿದ ಪ್ರಗತಿ ಪ್ರಪಂಚದ ಎಲ್ಲ ರಾಷ್ಟ್ರಗಳ ಗಮನವನ್ನು ಸೆಳೆಯಿತು. ಎಪ್ಪತ್ತು ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ ಸೋವಿಯತ್ ಒಕ್ಕೂಟ ಸಾಮ್ರಾಜ್ಯಶಾಹಿ ದೇಶಗಳಿಗೆ ದೊಡ್ಡ ಸವಾಲಾಗಿ ನಿಂತಿದ್ದಿತು. ಹೊಸದಾಗಿ ಸ್ವತಂತ್ರಗೊಂಡಿದ್ದ ದೇಶಗಳಿಗೆ ಆಸರೆಯಾಗಿದ್ದುದಲ್ಲದೆ, ಸ್ಫೂರ್ತಿಯ ಸೆಲೆಯಾಗಿದ್ದಿತು. ಸಾಮ್ರಾಜ್ಯಶಾಹಿಗಳ ದುರಾಶೆಗೆ, ಅಟ್ಟಹಾಸಕ್ಕೆ ಅದು ಕಡಿವಾಣ ಹಾಕಿತ್ತು. ಆದರೆ ಈ ಶತಮಾನದ ಕೊನೆಯ ದಶಕದಲ್ಲಿ ಸೋವಿಯತ್ ಒಕ್ಕೂಟ ಕುಸಿದುಬಿದ್ದದ್ದು ಒಂದು ದುರಂತ. ಶತಮಾನದ ಆದಿಯಲ್ಲಿ ಪ್ರಪಂಚದ ಪುರೋಗಾಮಿ ಶಕ್ತಿಗಳಿಗೆ ಪುಷ್ಟಿ ನೀಡಿದ್ದ ಕ್ರಾಂತಿಯಿಂದ ಸ್ಥಾಪಿತವಾಗಿದ್ದ ರಾಜ್ಯ ಶತಮಾನದ ಕೊನೆಯಲ್ಲಿ ಕುಸಿದು ಬಿದ್ದದು ಭಾರೀ ಹಿನ್ನಡೆಯಾಯಿತು. ಪ್ರಪಂಚದಲ್ಲಿ ಆಗಲೇ ಪ್ರಬಲ ರಾಷ್ಟ್ರವೆನಿಸಿದ್ದ ಅಮೆರಿಕ ರಾಷ್ಟ್ರ ಏಕಶಕ್ತಿ ಕೇಂದ್ರವಾಗಿ ಉದ್ಭವಿಸಿತು. ಸಮಾಜವಾದಿ ಸಮಾಜ ನಿರ್ಮಾಣದ ಗುರಿ ಮುಟ್ಟಲಾಗದೆ ಹೋದ ಸೋವಿಯತ್ ಒಕ್ಕೂಟದ ವಿಫಲತೆಯಿಂದ ಬಂಡವಾಳಶಾಹಿ ವ್ಯವಸ್ಥೆಯ ಶ್ರೇಷ್ಠತೆ ಸಾಬೀತಾದಂತೇನಲ್ಲ. ಸಮಾಜವಾದಿ ವಿಚಾರಧಾರೆ ಇನ್ನೂ ಜೀವಂತ. ಹಾಗೆಯೇ ಶೋಷಣೆಯ ವ್ಯವಸ್ಥೆಯನ್ನು ಅಂತ್ಯಗೊಳಿಸಿ ಎಲ್ಲರಿಗೂ ಸಮಾನಾವಕಾಶಗಳನ್ನು ಕಲ್ಪಿಸುವಂಥ ನವ ಸಮಾಜದ ನಿರ್ಮಾಣಕ್ಕಾಗಿ ಮಾನವನ ಹೋರಾಟವೂ ನಿರಂತರ.

**ಆರ್ಥಿಕ ಕುಸಿತ**

ರಷ್ಯದಲ್ಲಿ ಜರುಗಿದ ಕ್ರಾಂತಿ ಒಂದು ಮಹತ್ವದ ರಾಜಕೀಯ ಬೆಳವಣಿಗೆಯಾದರೆ, ಮುವ್ವತ್ತರ ದಶಕದ ಕಾಲದಲ್ಲಿ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ತಲೆದೋರಿದ ಆರ್ಥಿಕ ಬಿಕ್ಕಟ್ಟು ಇನ್ನೊಂದು ಪ್ರಮುಖ ಘಟನೆ. ಅದೇ ಸಮಯದಲ್ಲಿ ಯೂರೋಪಿನಲ್ಲಿ ತಲೆ ಎತ್ತುತ್ತಿದ್ದ ಫ್ಯಾಸಿಸಮ್ ಮುಂಬರಲಿದ್ದ ಅಪಾಯಕ್ಕೆ ಮುನ್ಸೂಚನೆಯಾಗಿತ್ತು. ೧೯೨೯ರಲ್ಲಿ ಬಂಡವಾಳಶಾಹಿ ಜಗತ್ತಿನಲ್ಲಿ ಸಂಭವಿಸಿದ ಆರ್ಥಿಕ ಕುಸಿತ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಪೊಳ್ಳನ್ನು ಬಯಲುಮಾಡಿತು. ಪ್ರಮುಖ ಬಂಡವಾಳಶಾಹಿ ದೇಶಗಳ ಸ್ಟಾಕ್ ಮಾರ್ಕೆಟ್ಟುಗಳು ದಿವಾಳಿ ಎದ್ದುವು, ಸಾವಿರಾರು ಕಾರ್ಖಾನೆಗಳು ಮುಚ್ಚಿಹೋದುವು, ಲಕ್ಷಗಟ್ಟಲೆ ಕಾರ್ಮಿಕರು ನಿರುದ್ಯೋಗಿಗಳಾಗಿ ಬೀದಿಪಾಲಾದರು. ಮಹಾನ್ ಆರ್ಥಿಕ ಕುಸಿತ ಎಂದು ಹೆಸರುಗಳಿಸಿದ ಈ ಘಟನೆಯಿಂದ ಬಂಡವಾಳಶಾಹಿ ರಾಷ್ಟ್ರಗಳು ತತ್ತರಿಸಿಹೋದುವು. ಈ ಬಿಕ್ಕಟ್ಟಿನಿಂದ ದೂರವಾಗಿದ್ದು ಏಕಪ್ರಕಾರವಾದ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದ್ದುದು ಆಗ ಸೋವಿಯತ್ ಒಕ್ಕೂಟ ಮಾತ್ರ. ಈ ಆರ್ಥಿಕ ಕುಸಿತದಿಂದ ಚೇತರಿಸಿಕೊಳ್ಳಲು ಬಂಡವಾಳಶಾಹಿ ರಾಷ್ಟ್ರಗಳಿಗೆ ಕೆಲವು ವರ್ಷಗಳೇ ಬೇಕಾಯಿತು. ಆನಂತರದ ಕಾಲದಲ್ಲಿಯೂ ಬಂಡವಾಳಶಾಹಿ ಜಗತ್ತಿನಲ್ಲಿ, ಅಷ್ಟೊಂದು ತೀವ್ರವಾಗಿ ಅಲ್ಲದಿದ್ದರೂ ಆಗಾಗ್ಗೆ ಬಿಕ್ಕಟ್ಟು ತಲೆದೋರುತ್ತಿತ್ತು. ವೈಜ್ಞಾನಿಕ ಮತ್ತು ತಾಂತ್ರಿಕ ಪ್ರಗತಿಯಿಂದ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆರ್ಥಿಕ ಮುಗ್ಗಟ್ಟು ತಕ್ಕಮಟ್ಟಿಗೆ ತಹಬಂದಿಯಲ್ಲಿದ್ದು ಸ್ಫೋಟಗೊಳ್ಳದಿದ್ದರೂ ಬಿಕ್ಕಟ್ಟಿನಿಂದ ದೂರವಿಲ್ಲ. ಹಾಗಾಗಿ ಬಂಡವಾಳಶಾಹಿ ವ್ಯವಸ್ಥೆಯು ಇಂದೂ ಕೂಡ ಆರ್ಥಿಕ ಮುಗ್ಗಟ್ಟುಗಳಿಂದ ಮುಕ್ತವಾಗಿಲ್ಲ.



*ಬರ್ಲಿನ್ ಪತನ. ಎರಡನೇ ಮಹಾಯುದ್ಧದ ಅಂತ್ಯ.*

**ಫ್ಯಾಸಿಸಮ್ ವಿರುದ್ಧ ಸಮರ**

ಇದೇ ಸಮಯದಲ್ಲಿ ಜರ್ಮನಿಯಲ್ಲಿ ಹಿಟ್ಲರನ ಫ್ಯಾಸಿಸ್ಟ್ ನಾಜಿ ಪಾರ್ಟಿ ಬಲಗೊಳ್ಳುತ್ತಿತ್ತು. ಜರ್ಮನಿಯ ರಾಜಧಾನಿ ಬರ್ಲಿನ್‌ನಲ್ಲಿ ಸಂಭವಿಸಿದ ಪಾರ್ಲಿಮೆಂಟ್ ಭವನ ರೀಚ್‌ಷ್ಟಾಗ್ ಬೆಂಕಿ ಪ್ರಕರಣ ಫ್ಯಾಸಿಸಮ್ ಬಾರಿಸಿದ ಎಚ್ಚರಿಕೆಯ ಕರೆಗಂಟೆಯಾಗಿತ್ತು. ೧೯೩೩ರಲ್ಲಿ ಅಧಿಕಾರ ಗ್ರಹಣ ಮಾಡಿದ ಹಿಟ್ಲರ್‌ನ ನಾಜಿ ಪಾರ್ಟಿ ಸರ್ವಾಧಿಕಾರದ ಸ್ಥಾಪನೆಯತ್ತ ದಾಪುಗಾಲು ಹಾಕಿತು. ಯೆಹೂದ್ಯರು ಮತ್ತು ಇತರ ಅಲ್ಪಸಂಖ್ಯಾತರ ಮೇಲೆ ದಬ್ಬಾಳಿಕೆ ನಡೆಸಲಾರಂಭಿಸಿದ ಅಡಾಲ್ಫ್ ಹಿಟ್ಲರ್ ದೊಡ್ಡ ಪ್ರಮಾಣದಲ್ಲಿ ದೇಶದಲ್ಲಿ ಸೈನಿಕೀಕರಣ ಕಾರ್ಯಕ್ರಮ ಕೈಗೊಂಡಿದ್ದ, ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲಿ ತೊಡಗಿದ್ದ, ನೆರೆಯ ರಾಷ್ಟ್ರಗಳ ಭೂಮಿಯನ್ನು ಅತಿಕ್ರಮಿಸತೊಡಗಿದ್ದ. ಪ್ರಜಾಪ್ರಭುತ್ವ ರಾಷ್ಟ್ರಗಳೆಂದು ಕರೆದುಕೊಳ್ಳುತ್ತಿದ್ದ ಬ್ರಿಟನ್, ಅಮೆರಿಕ ಮತ್ತು ಇತರ ದೇಶಗಳು ಹಿಟ್ಲರ್‌ನ ಈ ಕ್ರಮಗಳ ವಿರುದ್ಧ ಕ್ರಮ ತೆಗೆದುಕೊಳ್ಳದೆ ಕಡೆಗಣಿಸಿದ್ದು ಭಾರೀ ಅನಾಹುತಕ್ಕೆ ಎಡೆಯಾಗಿದ್ದರಲ್ಲಿ ಸಂಶಯವಿಲ್ಲ. ಫ್ಯಾಸಿಸ್ಟ್ ಶಕ್ತಿಗಳೊಂದಿಗೆ ರಾಜೀ ಮನೋಭಾವ ತೋರಿದ್ದೇ ಎರಡನೇ ಮಹಾಯುದ್ಧಕ್ಕೆ ಅಡಿಪಾಯವಾಯಿತು. ಇಟಲಿಯಲ್ಲಿ ಮುಸ್ಸೋಲಿನಿಯ ಸರ್ವಾಧಿಕಾರಾಡಳಿತ ಬೇರೂರಿತ್ತು. ಯೂರೋಪಿನಲ್ಲಿ ಫ್ಯಾಸಿಸ್ಟ್ ಸರ್ವಾಧಿಕಾರ ಬೆಳೆಯುತ್ತಿದ್ದ ಹಾಗೆಯೇ ಅದರ ವಿರುದ್ಧವಾಗಿ ಮೊದಲ ಸಮರ ನಡೆದದ್ದು, ಅದಕ್ಕೆ ಅಂತರರಾಷ್ಟ್ರೀಯ ಬೆಂಬಲ ದೊರೆತದ್ದು ಒಂದು ಮಹತ್ವದ ಘಟನೆ. ಸ್ಪೇನಿನಲ್ಲಿ ಪ್ರಜಾಪ್ರಭುತ್ವ ರೀತ್ಯಾ ಚುನಾಯಿತವಾಗಿದ್ದ ಸರಕಾರವನ್ನು ಉರುಳಿಸಲು ಬಲಪಂಥವಾದಿ, ಫ್ಯಾಸಿಸ್ಟ್ ಮನೋಭಾವದ ಸೇನಾನಿ ಜನರಲ್ ಫ್ರಾಂಕೋ ಸೇನಾ ಕಾರ್ಯಾಚರಣೆ ಪ್ರಾರಂಭಿಸಿದ. ಇದರ ವಿರುದ್ಧವಾಗಿ ಸ್ಪೇನಿನ ಜನತೆ ನಡೆಸಿದ ಹೋರಾಟಕ್ಕೆ ಪ್ರಪಂಚದ ಎಲ್ಲ ಪುರೋಗಾಮಿ ಶಕ್ತಿಗಳು ಬೆಂಬಲ ನೀಡಿದ್ದಲ್ಲದೆ, ಅಂತರರಾಷ್ಟ್ರೀಯ ಸ್ವಯಂಸೇವಕ ಪಡೆ ಸ್ಥಾಪಿಸಿಕೊಂಡು ನೇರವಾಗಿ ಸಶಸ್ತ್ರ ಸಮರದಲ್ಲಿ ಭಾಗಿಯಾದದ್ದು ಗಮನಾರ್ಹ. ಮೂರು ವರ್ಷ (೧೯೩೬-೩೯) ಜರುಗಿದ ಈ ಅಂತರ್ಯುದ್ಧದಲ್ಲಿ ಅಂತಿಮವಾಗಿ ಫ್ರಾಂಕೋಗೆ ಜಯ ಲಭಿಸಿತು. ಅವನಿಗೆ ಜರ್ಮನಿಯ ಕಡು ಫ್ಯಾಸಿಸ್ಟ್ ನಾಯಕ ಹಿಟ್ಲರ್ ಹಾಗೂ ಇಟಲಿಯ ಸರ್ವಾಧಿಕಾರಿ ಮುಸ್ಸೋಲಿನಿಯ ಬೆಂಬಲವಿತ್ತು. ಸ್ಪೇನಿನಲ್ಲಿ ಫ್ಯಾಸಿಸ್ಟ್ ಶಕ್ತಿಗಳ ವಿರುದ್ಧವಾಗಿ ನಡೆದ ಅಂತರರಾಷ್ಟ್ರೀಯ ಕಾರ್ಯಾಚರಣೆ ಒಂದು ಐತಿಹಾಸಿಕ ಘಟನೆ.

**ಎರಡನೇ ಮಹಾಯುದ್ಧ**

ಯೂರೋಪಿನಲ್ಲಿ ಆ ಹೊತ್ತಿಗಾಗಲೇ ಯುದ್ಧದ ಕಾರ್ಮೋಡ ಕವಿಯತೊಡಗಿತ್ತು. ಮೊದಲನೆ ಮಹಾಯುದ್ಧದಲ್ಲಿ ಪರಾಜಯಗೊಂಡಿದ್ದ ಜರ್ಮನಿ ಹಿಟ್ಲರ್‌ನ ನೇತೃತ್ವದಲ್ಲಿ ಪ್ರತೀಕಾರಕ್ಕಾಗಿ ಹವಣಿಸುತ್ತಿತ್ತು. ತೀವ್ರಗತಿಯಲ್ಲಿ ಶಸ್ತ್ರಾಸ್ತ್ರಗಳನ್ನು ಉತ್ಪಾದಿಸುತ್ತಿದ್ದು ಸೇನಾಬಲವನ್ನು ವರ್ಧಿಸಿಕೊಳ್ಳುತ್ತಿದ್ದ ಜರ್ಮನಿಯನ್ನು ಎದುರಿಸಿ ತಡೆ ಹಿಡಿಯುವ ಬದಲು ಸಾಮ್ರಾಜ್ಯಶಾಹಿ ದೇಶಗಳು ಫ್ಯಾಸಿಸ್ಟರೊಂದಿಗೆ ರಾಜೀ ಮಾಡಿಕೊಳ್ಳತೊಡಗಿದ್ದುವು. ಹಿಟ್ಲರ್‌ನ ವಿಸ್ತರಣಾಕಾಂಕ್ಷೆಯನ್ನು ಅವು ಕಡೆಗಣಿಸಿದವು. ಇದರಿಂದ ಉತ್ತೇಜನಗೊಂಡ ಫ್ಯಾಸಿಸ್ಟರು ೧೯೩೯ರಲ್ಲಿ ಇಡೀ ಜಗತ್ತನ್ನೆ ಕಬಳಿಸುವ ಗುರಿಯಿಂದ ಇನ್ನೊಂದು ಯುದ್ಧವನ್ನು ಪ್ರಾರಂಭಿಸಿದರು. ಇಟಲಿಯ ಸರ್ವಾಧಿಕಾರಿ ಮುಸ್ಸೋಲಿನಿ ಮತ್ತು ಜಪಾನಿನ ವಿಸ್ತರಣವಾದಿಗಳು ಹಿಟ್ಲರ್‌ನಿಗೆ ಬೆಂಬಲವಾಗಿ ನಿಂತರು. ಆರು ವರ್ಷಗಳ ಕಾಲ ನಡೆದ ಈ ಎರಡನೇ ಮಹಾಯುದ್ಧ ಅತ್ಯಂತ ಭೀಕರವಾದ್ದಾಗಿತ್ತು. ಅತ್ಯಾಧುನಿಕ ಶಸ್ತ್ರಾಸ್ತ್ರಗಳು, ಟ್ಯಾಂಕುಗಳು, ಬಾಂಬ್‌ಗಳು, ವಿಮಾನಗಳು ಈ ಯುದ್ಧದಲ್ಲಿ ಬಳಕೆಯಾದುವು. ಹಠಾತ್ ಧಾಳಿಯನ್ನಾರಂಭಿಸಿದ ಹಿಟ್ಲರ್‌ನ ನಾಜಿ ಸೇನೆಗಳು ಒಂದಾದ ಮೇಲೊಂದರಂತೆ ಯೂರೋಪಿನ ರಾಷ್ಟ್ರಗಳನ್ನು ಆಕ್ರಮಿಸಿಕೊಳ್ಳತೊಡಗಿತ್ತು. ಯುದ್ಧ ಪ್ರಾರಂಭವಾದ ನಂತರ ಎರಡು ವರ್ಷಗಳಲ್ಲಿ ಯೂರೋಪಿನ ಬಹುಭಾಗವನ್ನು ಜರ್ಮನಿ ಆಕ್ರಮಿಸಿಕೊಂಡಿತ್ತು. ೧೯೪೧ರ

ಜೂನ್‌ನಲ್ಲಿ ಸೋವಿಯತ್ ಒಕ್ಕೂಟದ ಮೇಲೆ ಹಿಟ್ಲರ್ ಧಾಳಿ ಪ್ರಾರಂಭಿಸಿದ. ಇದು ಯುದ್ಧಕ್ಕೆ ಹೊಸ ತಿರುವನ್ನು ನೀಡಿತು. ಹಿಟ್ಲರ್‌ನ ಫ್ಯಾಸಿಸ್ಟ್ ಸೇನೆಯನ್ನು ಎದುರಿಸಲು ಇಂಗ್ಲೆಂಡ್, ಅಮೆರಿಕಾ, ಫ್ರಾನ್ಸ್ ಮತ್ತು ಸೋವಿಯತ್ ಒಕ್ಕೂಟಗಳ ಮೈತ್ರಿಕೂಟ ಸ್ಥಾಪನೆಗೊಂಡಿತು. ಮೊದಲನೆ ಮಹಾಯುದ್ಧದಲ್ಲಿ ತಟಸ್ಥವಾಗಿದ್ದ ಅಮೆರಿಕ ಈ ಯುದ್ಧದಲ್ಲಿ ನೇರವಾಗಿ ಪಾಲ್ಗೊಂಡಿತು. ಯೂರೋಪು ಖಂಡಕ್ಕಷ್ಟೇ ಈ ಯುದ್ಧ ಸೀಮಿತವಾಗಿರದೆ ಏಷ್ಯಾ, ಆಫ್ರಿಕಾಗಳಿಗೂ ಹರಡಿತ್ತು. ಜಪಾನಿನ ಸೇನೆಗಳು ಏಷ್ಯಾದಲ್ಲಿ ಮುನ್ನುಗ್ಗುತ್ತಿದ್ದು ಭಾರತ ಉಪಖಂಡಕ್ಕೂ ಪ್ರವೇಶಿಸಿದ್ದಿತು. ಮೂರು ವರ್ಷಗಳ ಕಾಲ ಸೋಲನ್ನೇ ಕಾಣದಿದ್ದ ಹಿಟ್ಲರ್‌ನ ಸೇನೆ ೧೯೪೨ರ ನವೆಂಬರ್ ತಿಂಗಳಲ್ಲಿ ಸ್ಟಾಲಿನ್‌ಗ್ರಾಡ್ ಕದನದಲ್ಲಿ ಸೋತು ಹಿಮ್ಮೆಟ್ಟಿತು. ಅಲ್ಲಿಂದಾಚೆಗೆ ಫ್ಯಾಸಿಸ್ಟ್ ಸೇನೆಗಳು ಒಂದಾದ ಮೇಲೊಂದರಂತೆ ಸೋಲನ್ನನುಭವಿಸಿದವು. ೧೯೪೫ರಲ್ಲಿ ಫ್ಯಾಸಿಸಂ ಸಂಪೂರ್ಣವಾಗಿ ಸೋತು ಮಣ್ಣುಮುಕ್ಕಿತು. ಎರಡನೆಯ ಮಹಾಯುದ್ಧ ಮೊದಲನೆಯದಕ್ಕಿಂತ ಅತ್ಯಂತ ಹೆಚ್ಚು ಭೀಕರವೂ ವಿನಾಶಕಾರಿಯೂ ಆಗಿತ್ತು. ಆಕ್ರಮಿತ ಪ್ರದೇಶಗಳಲ್ಲಿ ಹಿಟ್ಲರ್‌ನ ಸೇನೆ ನಡೆಸಿದ ದೌರ್ಜನ್ಯ ಭಯಾನಕ. ಯೆಹೂದ್ಯ ಜನರ ಮೇಲೆ ನಡೆಸಿದ ಹತ್ಯಾಕಾಂಡಗಳು, ನಾಜಿ ಕೂಡು ದೊಡ್ಡಿಗಳು ನಾಜಿಗಳ ಹಿಂಸಾ ಕೃತ್ಯಗಳಿಗೆ, ಕ್ರೌರ್ಯಕ್ಕೆ ನಿದರ್ಶನಗಳಾಗಿದ್ದವು. ಆಧುನಿಕ ಶಸ್ತಾಸ್ತ್ರಗಳು ಎಂಥ ಸರ್ವನಾಶ ಉಂಟುಮಾಡಬಲ್ಲವೆಂಬುದು ಈ ಯುದ್ಧದಲ್ಲಿ ಪ್ರದರ್ಶಿತವಾಯಿತು. ಬಾಂಬ್ ಧಾಳಿಗಳಿಂದ ನೂರಾರು ಸಾವಿರ ನಗರಗಳು, ಪಟ್ಟಣಗಳು, ಗ್ರಾಮಗಳು ಧೂಳೀಪಟವಾದುವು. ಸುಮಾರು ಐವತ್ತೈದು ದಶಲಕ್ಷಕ್ಕೂ ಹೆಚ್ಚು ಜನ ಮಡಿದರು. ಅತ್ಯಂತ ವಿನಾಶಕಾರಿಯಾದ ಪರಮಾಣು ಬಾಂಬ್ ಬಳಕೆಯಾದ್ದೂ ಈ ಮಹಾಯುದ್ಧದಲ್ಲಿಯೇ. ಯುದ್ಧ ಕೊನೆಯ ಹಂತದಲ್ಲಿದ್ದು ಜಪಾನ್ ಶರಣಾಗತವಾಗುವುದರಲ್ಲಿದ್ದಾಗ ಅಮೆರಿಕ ಜಪಾನಿನ ಹಿರೋಷಿಮಾ, ನಾಗಸಾಕಿ ನಗರಗಳ ಮೇಲೆ ೧೯೪೫ರ ಆಗಸ್ಟ್ ೬ ಮತ್ತು ೯ ರಂದು ಪರಮಾಣು ಬಾಂಬು ಹಾಕಿ ಜಗತ್ತನ್ನೆ ತಲ್ಲಣಗೊಳಿಸಿತು. ಜಗತ್ತು ಹಿಂದೆಂದೂ ಕಂಡರಿಯದಿದ್ದಂಥ ಸರ್ವನಾಶವನ್ನು ಈ ಪರಮಾಣು ಬಾಂಬ್ ಧಾಳಿ ತಂದಿತು. ಹಿರೋಷಿಮಾ ನಾಗಸಾಕಿ ನಗರಗಳು ನೆಲಸಮವಾದುವು. ಐವತ್ತು ವರ್ಷಗಳಿಗೂ ಮೇಲಾದರೂ ಈ ಬಾಂಬ್ ಆಸ್ಫೋಟನೆಯಿಂದ ಹೊಮ್ಮಿದ ರೇಡಿಯೋಆಕ್ಟಿವ್ ಕಣಗಳ ದುಷ್ಪರಿಣಾಮ ಈಗಲೂ



*ಭಾರಿ ವಿನಾಶಕ ಶಕ್ತಿಯ ಅಣುಬಾಂಬ್*

## ಶತಮಾನದ ರಾಜಕೀಯ ಕೊಲೆಗಳು

*ರಾಜಕೀಯ ಧುರೀಣರ ಹತ್ಯೆ ಪ್ರಕರಣಗಳು ಇತಿಹಾಸದುದ್ದಕ್ಕೂ ಕಾಣಬರುತ್ತವೆ. ಇಪ್ಪತ್ತನೆಯ ಶತಮಾನ ಅದಕ್ಕೆ ಹೊರತಾದ್ದೇನಲ್ಲ. ಹಲವಾರು ಪ್ರಮುಖ ವ್ಯಕ್ತಿಗಳು ಹಂತಕರ ಸಂಚಿಗೆ ಬಲಿಯಾಗಿದ್ದಾರೆ.*

*ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿರುದ್ಧ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಹಿಂಸಾತ್ಮಕ ಅಸಹಕಾರ ಸತ್ಯಾಗ್ರಹ ಚಳವಳಿ ರೂಪಿಸಿ ಹೋರಾಟದ ನೇತೃತ್ವ ವಹಿಸಿದ್ದ, ಕೋಮು ಸೌಹಾರ್ದಕ್ಕಾಗಿ ಜೀವಸವೆಸಿದ ಮಹಾತ್ಮನೆನಿಸಿಕೊಂಡ ರಾಷ್ಟ್ರಪಿತ ಮೋಹನದಾಸ್ ಕರಮಚಂದ್ ಗಾಂಧಿ ಮತೀಯವಾದಿಗಳ ಒಳಸಂಚಿಗೆ ಗುರಿಯಾಗಿ ಮತಾಂಧನೊಬ್ಬನ ಗುಂಡಿಗೆ ಬಲಿಯಾದರು. ಹಾಗೆಯೇ ಭಾರತದಲ್ಲಿ ರಾಜಕೀಯ ಕಗ್ಗೊಲೆಗೀಡಾದವರು ಭಾರತದ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿ ಮತ್ತು ಅವರ ಪುತ್ರ ರಾಜೀವ ಗಾಂಧಿ.*

*ಕಾಂಗೋದಲ್ಲಿ ಬೆಲ್ಜಿಯನ್ ವಸಾಹತುಶಾಹಿಗಳ ಕುತಂತ್ರಕ್ಕೆ ಬಲಿಯಾದವರು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ, ಸ್ವಾತಂತ್ರ್ಯಾನಂತರ ಅಧಿಕಾರದಲ್ಲಿದ್ದ ಪ್ಯಾಟ್ರಿಸ್ ಲುಮುಂಬ. ಅವರು ಅತ್ಯಂತ ಅಮಾನುಷ ರೀತಿಯಲ್ಲಿ ವಿದ್ರೋಹಿಗಳಿಂದ ಕೊಲೆಗೀಡಾದರು. ಕಾಂಗೋದ ಈ ಪ್ರಕರಣದ ಹಿನ್ನೆಲೆಯಲ್ಲೇ ಅತ್ಯಂತ ನಿಗೂಢವಾಗಿ ಕೊಲೆಯಾದವರು ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾಗ್ ಹ್ಯಾಮರ್‌ಷೀಲ್ಡ್. ಕಾಂಗೋದಲ್ಲಿ ಸಂಭವಿಸಿದ ಹೆಲಿಕಾಪ್ಟರ್ ಅಪಘಾತದಲ್ಲಿ ಅವರು ಸಾವಿಗೀಡಾದರು. ಈ ಪ್ರಕರಣದ ಹಿಂದಿನ ಒಳಸಂಚು ಪತ್ತೆಯಾಗಲೇ ಇಲ್ಲ.*

*ಅಮೆರಿಕದ ಕಪ್ಪು ಜನಾಂಗದವರಿಗೆ ಸಮಾನ ಹಕ್ಕುಗಳಿಗಾಗಿ ಶಾಂತಿಯುತ ಹೋರಾಟ ನಡೆಸುತ್ತಿದ್ದ ಮಾರ್ಟಿನ್ ಲೂಥರ್ ಕಿಂಗ್ ವಿರೋಧಿಗಳ ಗುಂಡಿಗೆ ಬಲಿಯಾದ. ಅವರ ಕೊಲೆ ಇನ್ನೂ ನಿಗೂಢ. ಹಾಗೆಯೇ ಅಧ್ಯಕ್ಷ ಜಾನ್ ಎಫ್ ಕೆನಡಿ ಹಾಗೂ ಅಧ್ಯಕ್ಷೀಯ ಅಭ್ಯರ್ಥಿ ಅವರ ಸಹೋದರ ರಾಬರ್ಟ್ ಕೆನಡಿ ಹತ್ಯೆ ಕೂಡ ಇನ್ನೂ ನಿಗೂಢ. ಇವರ ಕೊಲೆ ಪ್ರಕರಣ ಅಮೆರಿಕದಲ್ಲಿ ಈಗಲೂ ವಿವಾದಾತ್ಮಕ.*

*ಪಾಕಿಸ್ತಾನದ ದಬ್ಬಾಳಿಕೆಯ ವಿರುದ್ಧ ಹೋರಾಟ ನಡೆಸಿದ, ಚುನಾವಣೆಗಳಲ್ಲಿ ಅಧಿಕ ಮತ ಗಳಿಸಿದರೂ ಅಧಿಕಾರದಿಂದ ವಂಚಿತರಾದ ಮುಜೀಬುರ್ ರೆಹಮಾನ್ ಪೂರ್ವ ಪಾಕಿಸ್ತಾನದ ವಿಮೋಚನೆಗಾಗಿ ನಡೆಸಿದ ಹೋರಾಟದಲ್ಲಿ ಜಯ ಗಳಿಸಿದರು. ಪಾಕ್ ಸೈನ್ಯದ ದಬ್ಬಾಳಿಕೆಯ ಅವಧಿಯಲ್ಲಿ ಕಾರಾಗೃಹದಲ್ಲಿದ್ದ ಅವರು ಬಂಗ್ಲಾ ದೇಶದ ರಾಷ್ಟ್ರಪಿತನೆನಿಸಿಕೊಂಡರು. ನಂತರ ಅವರ ವಿರೋಧಿಗಳಿಂದ ಕಗ್ಗೊಲೆಗೆ ಈಡಾದಾಗ ಅಮೆರಿಕೆಯ ಹಸ್ತಕ್ಷೇಪವಿದ್ದಿತೆಂದೂ ಶಂಕಿಸಲಾಗಿತ್ತು. ರಾಷ್ಟ್ರಪಿತ ಮುಜೀಬುರ್ ರೆಹಮಾನ್‌ರೂ ವಿರೋಧಿಗಳ ಕಗ್ಗೊಲೆಗೆ ಈಡಾದವರಲ್ಲೊಬ್ಬರು.*

*ಅಮೆರಿಕದ ಕುಮ್ಮಕ್ಕಿನಿಂದ, ಬಹುರಾಷ್ಟ್ರೀಯ ಕಂಪೆನಿಗಳ ಒಳಸಂಚಿನಿಂದ ಜನರಲ್ ಪಿನೋಷೆ ನಡೆಸಿದ ರಾಜ್ಯ ಕ್ರಾಂತಿಯಲ್ಲಿ ಚಿಲಿಯ ಜನಪ್ರಿಯ ನಾಯಕ ಹಾಗೂ ರಾಷ್ಟ್ರಪಿತ ಸಾಲ್ವಡೋರ್ ಅಲೆಂಡೆ ಹತ್ಯೆಯಾದ್ದು ಇಡೀ ಜಗತ್ತನ್ನೇ ದಿಗ್ಭ್ರಮೆಗೊಳಿಸಿತು.*

*ಕ್ಯೂಬಾದಲ್ಲಿ ಪ್ರಜಾಪ್ರಭುತ್ವದ ಸ್ಥಾಪನೆಗಾಗಿ ಸರ್ವಾಧಿಕಾರದ ವಿರುದ್ಧ ನಡೆದ ಹೋರಾಟದಲ್ಲಿ ಫೀಡಲ್ ಕ್ಯಾಸ್ಟ್ರೋ ಜೊತೆಗೂಡಿ ಭಾಗವಹಿಸಿದ್ದ ಬೊಲಿವಿಯದ ಕ್ರಾಂತಿಕಾರಿ ಚೆ ಗುವೆರಾ ಪ್ರತಿಕ್ರಾಂತಿಕಾರಿಗಳ ಗುಂಡಿಗೆ ಬಲಿಯಾದರು. ಚೆ ಗುವೆರಾ ನಿಜವಾದ ಅಂತರರಾಷ್ಟ್ರೀಯವಾದಿ ಕ್ರಾಂತಿಕಾರಿಯಾಗಿ ಅಮರರಾಗಿದ್ದಾರೆ.*

*ಶ್ರೀಲಂಕಾದ ಅಧ್ಯಕ್ಷ ಬಂಡಾರ ನಾಯಿಕ, ಈಜಿಪ್ಟಿನ ಅಧ್ಯಕ್ಷ ಅನ್ವರ್ ಸದಾತ್, ಪಾಕಿಸ್ತಾನದ ಪ್ರಧಾನಿ ಲಿಯಾಖತ್ ಅಲಿ ಖಾನ್, ಬ್ರಿಟನ್ನಿನ ಲಾರ್ಡ್ ಮೌಂಟ್ ಬ್ಯಾಟನ್ ಕೊಲೆಯಾದ ಇತರ ಪ್ರಮುಖರು.*

ಇದೆ. ಈ ವಿನಾಶಕಾರಿ ಬಾಂಬನ್ನು ಬಳಸುವ ಅವಶ್ಯಕತೆ ಇಲ್ಲದಿದ್ದಾಗ್ಯೂ ಅಮೇರಿಕ ಅವನ್ನು ಉಪಯೋಗಿಸಿ, ಜಗತ್ತಿಗೆ ತನ್ನ ಶಕ್ತಿಯನ್ನು ಪ್ರದರ್ಶಿಸಿತು. ಹೊಸ ಅಣ್ವಸ್ತ್ರ ಯುಗವನ್ನೇ ಅದು ಪ್ರಾರಂಭಿಸಿತು.

**ಶೀತಲ ಯುದ್ಧ, ಶಸ್ತ್ರಾಸ್ತ್ರ ಪೈಪೋಟಿ**

ಎರಡನೆ ಮಹಾಯುದ್ಧದಿಂದ ಪ್ರಪಂಚದ ನಕಾಶೆಯೇ ಬದಲಿಸಿತು. ಯುದ್ಧದಲ್ಲಿ ಪರಾಜಯಗೊಂಡ ಜರ್ಮನಿ ಇಬ್ಭಾಗವಾಯಿತು. ಜರ್ಮನಿಯ ಪೂರ್ವಭಾಗ ಸೋವಿಯತ್ ಒಕ್ಕೂಟದ ಪ್ರಭಾವದಲ್ಲಿದ್ದರೆ, ಪಶ್ಚಿಮ ಭಾಗ ಸಾಮ್ರಾಜ್ಯಶಾಹಿ ದೇಶಗಳ ಪ್ರಭಾವ ವಲಯದಲ್ಲಿ ಉಳಿಯಿತು. ಸೋವಿಯತ್ ಒಕ್ಕೂಟ ಯುದ್ಧದಲ್ಲಿ ಅಪಾರವಾದ ಕಷ್ಟ ನಷ್ಟಗಳನ್ನು ಅನುಭವಿಸಿದಾಗ್ಯೂ, ಅತ್ಯಂತ ಪ್ರಬಲ ರಾಷ್ಟ್ರವಾಗಿ ಉದ್ಭವಿಸಿತು. ಪೂರ್ವ ಯೂರೋಪಿನ ದೇಶಗಳಲ್ಲಿ ಕಮ್ಯುನಿಸ್ಟ್ ಆಡಳಿತಗಳು ಸ್ಥಾಪನೆಗೊಂಡವು. ಏಕಾಂಗಿಯಾಗಿದ್ದ ಸೋವಿಯತ್ ಒಕ್ಕೂಟಕ್ಕೆ ಪೂರ್ವ ಯೂರೋಪಿನ ರಾಷ್ಟ್ರಗಳ ಮೈತ್ರಿ ಲಭಿಸಿತು. ಹಾಗಾಗಿ ಸೋವಿಯತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳು ಒಂದು ಕಡೆ, ಪಶ್ಚಿಮ ಯೂರೋಪಿನ ರಾಷ್ಟ್ರಗಳು ಮತ್ತು ಅಮೇರಿಕ ಇನ್ನೊಂದು ಕಡೆ, ಹೀಗೆ ಎರಡು ಬಣಗಳು ಅಸ್ತಿತ್ವಕ್ಕೆ ಬಂದುವು. ಅಮೇರಿಕ ಯುದ್ಧಾನಂತರದಲ್ಲಿ ಅತ್ಯಂತ ಪ್ರಬಲ ಶಕ್ತಿಯಾಗಿ ಉದ್ಭವಿಸಿತ್ತು. ಪರಮಾಣು ಶಕ್ತಿಯನ್ನು ಹೊಂದಿದ್ದ ಅಮೇರಿಕ ಕಮ್ಯುನಿಸಂ ವಿಸ್ತರಣೆಯನ್ನು ತಡೆಯುವ ಹೆಸರಿನಲ್ಲಿ ಪ್ರಪಂಚದ ಮೇಲೆ ತನ್ನ ಏಕಸ್ವಾಮ್ಯವನ್ನು ಸ್ಥಾಪಿಸುವ ಸನ್ನಾಹದಲ್ಲಿ ತೊಡಗಿತು. ಇದರಿಂದ ಪರಸ್ಪರ ಎದುರಾಗಿದ್ದ ಬಂಡವಾಳಶಾಹಿ ಮತ್ತು ಸಮಾಜವಾದಿ ದೇಶಗಳ ಮಧ್ಯೆ ವೈಮನಸ್ಯಕ್ಕೆಡೆಯಾಯಿತು. ಎರಡೂ ಬಣಗಳ ನಡುವೆ ತೀವ್ರವಾದ ಶಸ್ತ್ರಾಸ್ತ್ರ ಪೈಪೋಟಿ ಪ್ರಾರಂಭವಾಯಿತು. ಯುದ್ಧವೂ ಇಲ್ಲದ, ಶಾಂತಿಯೂ ಇಲ್ಲದ ಸ್ಥಿತಿ ಉದ್ಭವಗೊಂಡು ಅದು 'ಶೀತಲ ಯುದ್ಧ' ಎಂದೇ ಹೆಸರು ಗಳಿಸಿತು. ಸೋವಿಯತ್ ಒಕ್ಕೂಟ ಮತ್ತು ಅಮೇರಿಕಗಳ ಮಧ್ಯೆ ತೀವ್ರವಾದ ಶಸ್ತ್ರಾಸ್ತ್ರ ಪೈಪೋಟಿ ಪ್ರಾರಂಭವಾಯಿತು.

ಈ ಭೂಮಂಡಲವನ್ನು ಹಲವುಬಾರಿ ಧೂಳೀಪಟ ಮಾಡುವ ಶಕ್ತಿಯುಳ್ಳ ನ್ಯೂಕ್ಲಿಯರ್ ಅಸ್ತ್ರಗಳು ಜಮಾವಣೆಯಾಗತೊಡಗಿದ್ದವು. ಹಿರೋಷಿಮಾ ಮತ್ತು ನಾಗಸಾಕಿಗಳ ಮೇಲೆ ಹಾಕಿದ ಪರಮಾಣು ಬಾಂಬುಗಳಿಗಿಂತ ನೂರುಪಟ್ಟು ಸಾವಿರಪಟ್ಟು ಅಧಿಕ ಶಕ್ತಿಯುಳ್ಳ ಬಾಂಬುಗಳು ತಯಾರಾದವು. ಅವನ್ನು ದೂರ ದೂರಕ್ಕೆ ಒಯ್ದು ಹಾಕಲು ಸಾಮರ್ಥ್ಯವುಳ್ಳ ಕ್ಷಿಪಣಿಗಳು ಅಸ್ತಿತ್ವಕ್ಕೆ ಬಂದವು. ಜಗತ್ತು ಸರ್ವನಾಶ ಉಂಟುಮಾಡುವ ಮೂರನೇ ಮಹಾಯುದ್ಧದ ಅಂಚಿನಲ್ಲಿತ್ತು. ಇಬ್ಭಾಗಗೊಂಡಿದ್ದ ಜರ್ಮನಿ ಯೂರೋಪಿನಲ್ಲಿ ಮತ್ತೆ ಯುದ್ಧದ ಕಾವು ನೆಲೆಯಾಗಿತ್ತು. ಆದರೆ ಯುದ್ಧ



*ಎರಡನೇ ಮಹಾಯುದ್ಧ : ನಾಜಿ ಕೂಡು ದೊಡ್ಡಿಗಳಲ್ಲಿ ಸಾವನ್ನಪ್ಪುತ್ತಿರುವ ನತದೃಷ್ಟರು.*

ಸಂಭವಿಸಲಿಲ್ಲ. ಇದಕ್ಕೆ ಮುಖ್ಯವಾದ್ದೊಂದು ಕಾರಣ ನ್ಯೂಕ್ಲಿಯರ್ ಅಸ್ತ್ರಗಳ ಮಾರಕ ಶಕ್ತಿ. ಇನ್ನೊಂದು ನ್ಯೂಕ್ಲಿಯರ್ ಅಸ್ತ್ರಗಳ ವಿರುದ್ಧವಾಗಿ ವಿಶ್ವದಾದ್ಯಂತ ಪ್ರಬಲವಾಗಿದ್ದ ಶಾಂತಿ ಚಳುವಳಿ. ನ್ಯೂಕ್ಲಿಯರ್ ಅಸ್ತ್ರದ ವಿನಾಶಕಾರಿ ಶಕ್ತಿಯನ್ನು ಕಂಡುಕೊಂಡ ಜನತೆ, ಈ ಅಸ್ತ್ರಗಳ ಸಂಪೂರ್ಣ ನಿಷೇಧಕ್ಕಾಗಿ, ನಿರ್ಮೂಲನಕ್ಕಾಗಿ ಹೋರಾಟ ಪ್ರಾರಂಭಿಸಿದುವು. ಮತ್ತೊಂದು ಯುದ್ಧ ತಡೆಯುವುದರಲ್ಲಿ ಈ ಶಾಂತಿ ಚಳುವಳಿಯ ಕಾಣಿಕೆ ಅತ್ಯಮೂಲ್ಯ. ಈಗಲೂ ಈ ಮಾರಕಾಸ್ತ್ರಗಳ ನಿರ್ಮೂಲನಕ್ಕಾಗಿ ಹೋರಾಟ ಮುಂದುವರಿದಿದೆ. ಶೀತಲಯುದ್ಧ ಕೊನೆಗೊಂಡದ್ದು ೧೯೯೦ರ ದಶಕದಲ್ಲಿ ಸೋವಿಯತ್ ಒಕ್ಕೂಟದ ವಿಸರ್ಜನೆಯ ನಂತರ. ಆದರೆ ಈಗಲೂ ಮಾರಕಾಸ್ತ್ರಗಳ ರಾಶಿ ಮಾತ್ರ ಹಾಗೇ ಉಳಿದುಕೊಂಡಿದೆ. ಪರಮಾಣು ಅಸ್ತ್ರಗಳನ್ನು ಹೊಂದಿರುವ ರಾಷ್ಟ್ರಗಳ ಜೊತೆಗೆ ಭಾರತ, ಪಾಕಿಸ್ತಾನಗಳಂತಹ ಹೊಸ ರಾಷ್ಟ್ರಗಳೂ ಸೇರಿಕೊಂಡಿವೆ, ನ್ಯೂಕ್ಲಿಯರ್ ಅಸ್ತ್ರ ಪ್ರಯೋಗ ನಡೆಸಿ. ಇದರಿಂದಾಗಿ ಜಗತ್ತು ಇನ್ನೂ ನ್ಯೂಕ್ಲಿಯರ್ ಯುದ್ಧದ ಭೀತಿಯಿಂದ ಮುಕ್ತವಾಗಿಲ್ಲ.

**ನಿರ್ವಸಾಹತೀಕರಣ**

ಯುದ್ಧಾನಂತರದ ಅತ್ಯಂತ ಪ್ರಮುಖವಾದ ಇನ್ನೊಂದು ರಾಜಕೀಯ ಬೆಳವಣಿಗೆ ಎಂದರೆ ಪ್ರಪಂಚದಲ್ಲಿ ವಸಾಹತುಗಳ ನಿರ್ಮೂಲನ, ಸ್ವತಂತ್ರ ರಾಷ್ಟ್ರಗಳ ಉದಯ. ವಸಾಹತುಶಾಹಿಯ ವಿರುದ್ಧವಾಗಿ ಜನತೆ ನಡೆಸುತ್ತಿದ್ದ ಸ್ವಾತಂತ್ರ್ಯ ಹೋರಾಟಗಳು ಯುದ್ಧಾನಂತರ ತೀವ್ರಗೊಂಡವು. ಹಲವು ದೇಶಗಳಲ್ಲಿ ವಿದೇಶೀ ಆಳ್ವಿಕೆಯಿಂದ ವಿಮೋಚನೆಗಾಗಿ ಸಶಸ್ತ್ರ ಆಂದೋಲನಗಳು ನಡೆಯುತ್ತಿದ್ದುವು. ಯುದ್ಧದಿಂದಾಗಿ ಬ್ರಿಟನ್ ಹಾಗೂ ಇತರ ಸಾಮ್ರಾಜ್ಯಶಾಹಿ ದೇಶಗಳು ದುರ್ಬಲಗೊಂಡಿದ್ದುವು. ಸೂರ್ಯಾಸ್ತಮವನ್ನೇ ಕಾಣದ ಸಾಮ್ರಾಜ್ಯ ಎಂದು ಕರೆಯಲ್ಪಡುತ್ತಿದ್ದ ಬ್ರಿಟಿಷ್ ಸಾಮ್ರಾಜ್ಯ ಕುಸಿಯಿತು. ೧೯೪೭ರ ಆಗಸ್ಟ್ ೧೫ರಂದು ಬ್ರಿಟನ್ನಿನ ಅತಿದೊಡ್ಡ ವಸಾಹತು ಆಗಿದ್ದ ಭಾರತ ಸ್ವತಂತ್ರವಾಯಿತು. ಸುಮಾರು ಎರಡು ಶತಮಾನಗಳ ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆ ಅಂತ್ಯಗೊಂಡಿತು. ಭಾರತದ ಜನತೆ ನಡೆಸಿದ ವಿಶಿಷ್ಟ ರೀತಿಯ ಸ್ವಾತಂತ್ರ್ಯ ಹೋರಾಟ ಇತರ ವಸಾಹತುಗಳು ಜನತೆಗೆ ಸ್ಫೂರ್ತಿ ನೀಡಿತು. ಕಾಲಕ್ರಮೇಣ ಏಷ್ಯ, ಆಫ್ರಿಕಾಖಂಡದ ಎಲ್ಲ ವಸಾಹತು ದೇಶಗಳೂ ಸ್ವತಂತ್ರ ರಾಷ್ಟ್ರಗಳಾದುವು. ಸುದೀರ್ಘವಾದ ಸಶಸ್ತ್ರ ಸಮರದ ಪರಿಣಾಮವಾಗಿ ದಕ್ಷಿಣ ಆಫ್ರಿಕಾದಲ್ಲಿದ್ದ ಅನಾಗರಿಕ, ನೀಚ ಅಪಾರ್ಥೀಡ್ ವ್ಯವಸ್ಥೆ ಕೊನೆಗೊಂಡಿದ್ದು ಯುದ್ಧಾನಂತರ ಈ ಶತಮಾನದ ಕೊನೆಯಲ್ಲಿ. ಜನತೆಯ ಸ್ವಾತಂತ್ರ್ಯಾಕಾಂಕ್ಷೆಯನ್ನು ದಮನ ಮಾಡಲು ಯಾವ ಪ್ರಬಲ ಶಕ್ತಿಗೂ ಸಾಧ್ಯವಿಲ್ಲ ಎಂಬುದು ರುಜುವಾತುಗೊಂಡದ್ದು ಈ ಶತಮಾನದಲ್ಲಿಯೇ. ಅದಕ್ಕೆ ಉದಾಹರಣೆ, ವಿಯೆಟ್ನಾಮ್ ಮತ್ತು ಕ್ಯೂಬಾ. ಅಮೇರಿಕದ ನೆಲೆಯಲ್ಲೇ ಇದ್ದು, ಅದರ ಬೆದರಿಕೆ ಮತ್ತು ದಿಗ್ಬಂಧನಗಳಿಗೆ ಜಗ್ಗದೆ ಸವಾಲಾಗಿ ನಿಂತಿರುವ ಕ್ಯೂಬಾ ಶೋಷಣೆಯಿಂದ ಮುಕ್ತವಾದ ಸಮಾಜವಾದಿ ಸಮಾಜದ ನಿಯೋಗದಲ್ಲಿ ತೊಡಗಿರುವುದು ಗಮನಾರ್ಹ. ಫ್ರೆಂಚ್ ಸಾಮ್ರಾಜ್ಯಶಾಹಿಗಳ ವಿರುದ್ಧ ಸುದೀರ್ಘ ಸಮರ ನಡೆಸಿ ಸ್ವಾತಂತ್ರ್ಯ ಗಳಿಸಿಕೊಂಡ ವಿಯೆಟ್ನಾಮ್‌ನ ಜನತೆ ಅಮೇರಿಕಾದ ಹಸ್ತಕ್ಷೇಪದ ವಿರುದ್ಧ ಸುದೀರ್ಘ ಹೋರಾಟ ನಡೆಸಿ ಸಫಲಗೊಂಡಿದ್ದು ಈ ಶತಮಾನದ ಅದ್ಭುತ ಸಾಹಸಗಳಲ್ಲೊಂದು. ಕಮ್ಯುನಿಸಂ ವಿಸ್ತರಣೆಯನ್ನು ತಡೆಯುವ ಹೆಸರಿನಲ್ಲಿ ಅಮೇರಿಕ ವಿಯೆಟ್ನಾಮ್‌ನಲ್ಲಿ ನಡೆಸಿದ ಯುದ್ಧ ಅತ್ಯಂತ ನೀಚವಾದ್ದು, ದೌರ್ಜನ್ಯಕಾರಿಯಾದ್ದು ಎಂದು ಇತಿಹಾಸದಲ್ಲಿ ದಾಖಲಾಗಿದೆ. ಎರಡು ದಶಕಗಳ ಕಾಲ ಪ್ರಪಂಚದ ಅತ್ಯಂತ ಶಕ್ತಿಶಾಲಿ ದೇಶವಾದ ಅಮೇರಿಕವನ್ನು ಎದುರಿಸಿ ಕಾದಾಡಿ ದಿಗ್ವಿಜಯ ಗಳಿಸಿದ ವಿಯೆಟ್ನಾಮ್ ಜನತೆ ನಿಜಕ್ಕೂ ಅಭಿನಂದನಾರ್ಹರು. ನ್ಯೂಕ್ಲಿಯರ್ ಅಸ್ತ್ರವೊಂದನ್ನು ಬಿಟ್ಟು ಉಳಿದೆಲ್ಲ ಅಸ್ತ್ರಗಳನ್ನು ಅಮೇರಿಕ ವಿಯೆಟ್ನಾಮ್ ಯುದ್ಧದಲ್ಲಿ ಬಳಸಿದ್ದು ದೌರ್ಜನ್ಯದ ಪರಮಾವಧಿಯಾಗಿತ್ತು. ಇನ್ನೊಂದು ಪ್ರಮುಖವಾದ ಘಟನೆ ಚೀಣಿ ಜನತಾ ಗಣರಾಜ್ಯದ ಉದಯ. ಏಷ್ಯಾದ ಬೃಹತ್ ರಾಷ್ಟ್ರಗಳಲ್ಲೊಂದಾದ ಚೀಣಾದಲ್ಲಿ ಅಮೇರಿಕಾದ ಬೆಂಬಲದಿಂದ ಅಧಿಕಾರದಲ್ಲಿದ್ದ ಕೊಮಿಂಗ್‌ಟಂಗ್ ಪಕ್ಷದ ಚಿಯಾಂಗ್ ಕೈ ಶೇಕ್ ವಿರುದ್ಧ ೩೦ ವರ್ಷಗಳು ಸಶಸ್ತ್ರ ಸಮರ ನಡೆಸಿ ವಿಜೇತಗೊಂಡು ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ೧೯೪೯ರ ಅಕ್ಟೋಬರ್ ೧ ರಂದು ಚೀಣಿ ಜನತಾ ಗಣರಾಜ್ಯ ಸ್ಥಾಪನೆಗೊಂಡದ್ದು ಮಹತ್ವಪೂರ್ಣ. ಕಮ್ಯುನಿಸ್ಟ್ ಆಡಳಿತೆಯಲ್ಲಿ ಚೀಣಾ ಮೊದಲಬಾರಿಗೆ ರಾಷ್ಟ್ರವ್ಯಾಪಿಯಾಗಿ ಏಕತೆ ಸಾಧಿಸಿರುವುದು

ಮುಂದುವರಿಯುತ್ತಿರುವುದು ಗಮನಾರ್ಹ.

**ಅಲಿಪ್ತ ಚಳವಳಿ**

ಹೊಸದಾಗಿ ಸ್ವತಂತ್ರಗೊಂಡ ರಾಷ್ಟ್ರಗಳನ್ನು ಶೀತಲ ಯುದ್ಧದ ಕಾಲದಲ್ಲಿ ತನ್ನ ಬಲೆಗೆಳೆದುಕೊಳ್ಳಲು ಅಮೆರಿಕ ಪ್ರಯತ್ನಿಸಿತು. ಸಿಯಾಟೋ, ಸೆಂಟೋ ಮುಂತಾದ ಮಿಲಿಟರಿ ಕೂಟಗಳನ್ನು ಅಮೆರಿಕ ರಚಿಸಿತು. ಅದು ಸ್ಥಾಪಿಸಿದ ಮಿಲಿಟರಿ ಕೂಟಗಳಿಗೆ ಕೆಲವು ದೇಶಗಳನ್ನು ಆಕರ್ಷಿಸಿತು. ಆದರೆ ಬಹುತೇಕ ರಾಷ್ಟ್ರಗಳು ಎರಡೂ ಬಣಗಳಿಂದ ದೂರ ಉಳಿದುವು. ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಈ ರಾಷ್ಟ್ರಗಳು ಸ್ಥಾಪಿಸಿಕೊಂಡ ಅಲಿಪ್ತ ಚಳವಳಿ ಇಪ್ಪತ್ತನೆಯ ಶತಮಾನದ ಬಹುಮುಖ್ಯ ರಾಜಕೀಯ ಬೆಳವಣಿಗೆ. ಭಾರತದ ಪ್ರಧಾನಿ ಜವಹರಲಾಲ್ ನೆಹರೂ, ಈಜಿಪ್ಟಿನ ಅಧ್ಯಕ್ಷ ನಾಸರ್ ಮತ್ತು ಯುಗೋಸ್ಲಾವಿಯಾದ ಅಧಿಪತಿ ಮಾರ್ಷಲ್ ಟಿಟೋ ಉಪಕ್ರಮದ ಮೇರೆಗೆ ಸ್ಥಾಪನೆಗೊಂಡ ಅಲಿಪ್ತ ಚಳವಳಿಯ ಮೂಲ ಗುರಿ ಹೊಸದಾಗಿ ಸ್ವತಂತ್ರಗೊಂಡ ದೇಶಗಳ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಎತ್ತಿಹಿಡಿಯುವುದು, ಪರಸ್ಪರ ಸಹಕಾರ, ಇತರರ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕದಿರುವುದು, ಶಾಂತಿ ಮತ್ತು ನಿರಾಯುಧೀಕರಣ ಸಾಧಿಸಲು ಹೋರಾಡುವುದು ಮೊದಲಾದುವಾಗಿದ್ದವು. ಇದಕ್ಕೂ ಮುನ್ನ ಇಂಡೊನೇಶಿಯದ ಬಾಂಡುಂಗ್‌ನಲ್ಲಿ ನಡೆದ ಸ್ವತಂತ್ರಗೊಂಡ ಏಶಿಯಾ - ಆಫ್ರಿಕಾ ದೇಶಗಳ ಸಮ್ಮೇಳನದಲ್ಲಿ ರಾಷ್ಟ್ರಗಳ ನಡುವಣ ಪರಸ್ಪರ ಸಂಬಂಧಗಳಿಗಾಗಿ ಐದು ಅಂಶಗಳ ಸೂತ್ರವನ್ನು ಅಂಗೀಕರಿಸಲಾಯಿತು. ಇದೇ ಪಂಚಶೀಲ ತತ್ವ ಎಂದು ಹೆಸರಾಯಿತು. ಪ್ರಧಾನವಾಗಿ ಏಷ್ಯ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕದ ದೇಶಗಳನ್ನೊಳಗೊಂಡಿದ್ದ ಈ ಚಳವಳಿ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ವಹಿಸಿದ ಪಾತ್ರ ಗಣನೀಯವಾದದ್ದು. ಪ್ರಭಾವಶಾಲಿ ಶಕ್ತಿಗಳಿಂದ ದೂರವಿದ್ದು ತಮ್ಮ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಎತ್ತಿಹಿಡಿಯುವುದರಲ್ಲಿ ಸಫಲಗೊಂಡಿದ್ದಲ್ಲದೆ ಅಲಿಪ್ತ ರಾಷ್ಟ್ರಗಳು ರಾಷ್ಟ್ರೀಯ ವಿಮೋಚನಾ ಚಳವಳಿಗಳಿಗೆ ನೀಡಿದ ಬೆಂಬಲ, ನಿರ್ವಸಾಹತೀಕರಣ ಪ್ರಕ್ರಿಯೆಯಲ್ಲಿ ಅದು ವಹಿಸಿದ ಪಾತ್ರ, ದಕ್ಷಿಣ ಆಫ್ರಿಕಾದಲ್ಲಿ ಅಪಾರ್ಥೀಡ್ ವ್ಯವಸ್ಥೆಯನ್ನು ಅಂತ್ಯಗೊಳಿಸುವುದಕ್ಕೆ ನಡೆಸಿದ ಪ್ರಯತ್ನ ಸ್ತುತ್ಯಾರ್ಹ. ನಿರಾಯುಧೀಕರಣಕ್ಕಾಗಿ, ಪರಮಾಣು ಅಸ್ತ್ರಗಳ ನಿಷೇಧಕ್ಕಾಗಿ, ಸತತವಾಗಿ ಶ್ರಮಿಸಿದ ಅಲಿಪ್ತ ಚಳವಳಿ ಒಂದು ರೀತಿಯಲ್ಲಿ ಸಾಮ್ರಾಜ್ಯಶಾಹಿ ದೇಶಗಳ ದುಸ್ಸಾಹಸಕ್ಕೆ ಕಡಿವಾಣವೂ ಆಗಿತ್ತು. ಆರ್ಥಿಕ ಕ್ಷೇತ್ರದಲ್ಲಿ ಪರಸ್ಪರ ಸಹಕಾರಕ್ಕೆ ಸಾಮ್ರಾಜ್ಯಶಾಹಿ ಒತ್ತಾಯದ ವಿರುದ್ಧ ಅಲಿಪ್ತ ಚಳವಳಿ ನಿರ್ಣಯಗಳನ್ನು ಅಂಗೀಕರಿಸಿದರೂ ಅದು ಕಾರ್ಯಗತವಾಗದೇ ಹೋದುದು ಚಳವಳಿಯ ದೌರ್ಬಲ್ಯಗಳಲ್ಲೊಂದು. ಮೂಲತಃ ಸಾಮ್ರಾಜ್ಯಶಾಹಿ ವಿರೋಧಿಯಾಗಿದ್ದ ಅಲಿಪ್ತ ಚಳವಳಿ ಕ್ರಮೇಣ ಅದರ ತೀವ್ರತೆಯನ್ನು ಕಳೆದುಕೊಂಡದ್ದು ಇನ್ನೊಂದು ದೌರ್ಬಲ್ಯ. ಚಳವಳಿಯ ಇಂದಿನ ಸ್ಥಿತಿಗೆ ಇದೂ ಕಾರಣ. ಅರವತ್ತರ ದಶಕದಿಂದ ಮುವ್ವತ್ತು ವರ್ಷಗಳ ಕಾಲ ಜಾಗತಿಕ ರಾಜಕಾರಣದಲ್ಲಿ ಸಕ್ರಿಯ ಪಾತ್ರ ವಹಿಸಿದ ಈ ಅಲಿಪ್ತ ಚಳವಳಿ ಈಗ ಹೆಚ್ಚು ಕಡಿಮೆ ನಿಷ್ಕ್ರಿಯಗೊಂಡಿರುವುದು ವಿಷಾದಕರ. ಏಕಶಕ್ತಿ ಕೇಂದ್ರದ ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ ಸಾಮ್ರಾಜ್ಯಶಾಹಿ ದೇಶಗಳು ಒಡ್ಡಿರುವ ಹೊಸ ಸವಾಲುಗಳನ್ನು ಎದುರಿಸಲು ಅಲಿಪ್ತ ಚಳವಳಿ ಸಕ್ರಿಯಗೊಳ್ಳುವುದು ಇಂದು ಜರೂರು ಅವಶ್ಯಕ. ಮುಖ್ಯವಾಗಿ ಬಹುರಾಷ್ಟ್ರೀಯ ಸಂಸ್ಥೆಗಳ ಮೂಲಕವಾಗಿ ಸಾಮ್ರಾಜ್ಯಶಾಹಿ ದೇಶಗಳು ಆರ್ಥಿಕಾಭಿವೃದ್ಧಿಗಾಗಿ ಸೆಣಸುತ್ತಿರುವ ರಾಷ್ಟ್ರಗಳನ್ನು ಅಧೀನಗೊಳಿಸಿಕೊಳ್ಳಲು ನಡೆಸಿರುವ ಕುತಂತ್ರಗಳನ್ನು ಹಿಮ್ಮೆಟ್ಟಿಸಲು ಅಲಿಪ್ತ ಚಳವಳಿ ಇಂದು ಮುಂದೆ ನಿಲ್ಲಬೇಕು. ಆದರೆ ಅಲಿಪ್ತ ಚಳವಳಿ ತನ್ನ ಈ ಕರ್ತವ್ಯ ನಿರ್ವಹಣೆಯಲ್ಲಿ ವಿಫಲಗೊಂಡಿರುವುದನ್ನು ಕಾಣುತ್ತಿದ್ದೇವೆ.

**ವಿಶ್ವಸಂಸ್ಥೆ**

ಎರಡು ವಿನಾಶಕಾರಿ ಮಹಾಯುದ್ಧಗಳನ್ನು ಶತಮಾನದ ಉತ್ತರಾರ್ಧದಲ್ಲೇ ಕಂಡ ಜಗತ್ತಿನ ರಾಷ್ಟ್ರಗಳು ಮತ್ತೊಂದು ಮಾರಕ ಯುದ್ಧವನ್ನು ತಡೆಯಲು ಇನ್ನೊಂದು ಅಂತರರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಲು ಮುಂದಾದುವು. ಮೊದಲನೆ ಮಹಾಯುದ್ಧದ ನಂತರ ಅಸ್ತಿತ್ವಕ್ಕೆ ಬಂದಿದ್ದ ಲೀಗ್ ಆಫ್ ನೇಷನ್ಸ್ ವಿಫಲಗೊಂಡಿತ್ತು. ಅದರಿಂದಾಗಿಯೇ ಪ್ರಪಂಚದ ಪ್ರಮುಖ ರಾಷ್ಟ್ರಗಳು ಸಭೆ ಸೇರಿ ೧೯೪೫ರ ಅಕ್ಟೋಬರ್ ೨೪ರಂದು ಸಂಯುಕ್ತ ರಾಷ್ಟ್ರ ಸಂಘ (ಯುಎನ್‌ಓ) ಎಂಬ ಅಂತರರಾಷ್ಟ್ರೀಯ ಸಂಸ್ಥೆಯೊಂದನ್ನು ಸ್ಥಾಪಿಸಿದವು. ಎಲ್ಲ ವಿವಾದಾತ್ಮಕ ಸಮಸ್ಯೆಗಳನ್ನು ಸಂಧಾನದ ಮೂಲಕ ಬಗೆಹರಿಸುವ, ಮತ್ತೊಂದು ಮಾರಕ ಯುದ್ಧವನ್ನು ತಡೆಯುವ ಗುರಿ ಹೊಂದಿದ್ದ ಈ ಸಂಸ್ಥೆಯನ್ನು ಸ್ಥಾಪನೆ ಮಾಡಿದಾಗ ಸದಸ್ಯರಾಷ್ಟ್ರಗಳ ಸಂಖ್ಯೆ ಐವತ್ತು ಮಾತ್ರ. ಈಗ, ಅಂದರೆ ಶತಮಾನದ ಅಂತ್ಯದ ವೇಳೆಗೆ ಸದಸ್ಯ ರಾಷ್ಟ್ರಗಳ ಸಂಖ್ಯೆ ಸುಮಾರು ಇನ್ನೂರು ಆಗಿದೆ. ಸಂಸ್ಥೆಯ ಅಂಗರಚನೆಯಲ್ಲಿ ಹಲವಾರು ನ್ಯೂನತೆಗಳಿದ್ದರೂ, ಪ್ರಬಲ ರಾಷ್ಟ್ರಗಳ ಪ್ರಭಾವವೇ ಅಧಿಕವಾಗಿದ್ದರೂ, ಕಳೆದ ೫ ದಶಕಗಳ ಕಾಲದಲ್ಲಿ ಈ ಸಂಸ್ಥೆ ಇನ್ನೊಂದು ಯುದ್ಧ ತಡೆಯುವುದರಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾಗಿದೆಯೆಂದೇ ಹೇಳಬೇಕು. ಆದರೆ ಈ ಕಾಲಾವಧಿಯಲ್ಲಿ ಸಂಸ್ಥೆಗೆ ಸ್ಥಳೀಯ ಯುದ್ಧಗಳನ್ನು ತಡೆಯಲಾಗಲಿಲ್ಲ. ಕೊರಿಯಾ ಯುದ್ಧದಿಂದ ಹಿಡಿದು ಇತ್ತೀಚಿನವರೆಗೆ ನಡೆದ ಎಲ್ಲ ಸ್ಥಳೀಯ ಯುದ್ಧಗಳಲ್ಲೂ ಅಮೆರಿಕದ ಕೈವಾಡ ವಿದ್ದುದನ್ನು ಕಂಡಿದ್ದೇವೆ. ಆದ್ದರಿಂದ ಬಲಾಢ್ಯ ರಾಷ್ಟ್ರಗಳು ಶಾಮೀಲಾಗಿದ್ದುದರಿಂದಲೇ ಅದು ಸಾಧ್ಯವಾಗಲಿಲ್ಲ. ಅಲ್ಲದೆ ಈ ಜಾಗತಿಕ ಸಂಘಟನೆಗೆ ಯಾವುದೇ ತೀರ್ಮಾನ ವನ್ನು ಜಾರಿಗೊಳಿಸುವಂತೆ ಮಾಡಲು ಬೇಕಾಗಿರುವ ವ್ಯವಸ್ಥೆಯಲ್ಲಿ ಎಲ್ಲವೂ ಬಲಿಷ್ಠ ರಾಷ್ಟ್ರದ ಮೇಲೇ ಅವಲಂಬಿತವಾಗಿವೆ. ಹಾಗಿದ್ದರೂ ನಿರ್ವಸಾಹತೀಕರಣದ ಪ್ರಕ್ರಿಯೆಗೆ, ದಕ್ಷಿಣ ಆಫ್ರಿಕದಲ್ಲಿದ್ದ ಅನಾಗರಿಕ ಅಪಾರ್ಥೀಡ್ ಪದ್ಧತಿಯನ್ನು ತೊಡೆದು ಹಾಕುವುದಕ್ಕೆ, ಸಶಸ್ತ್ರ ಘರ್ಷಣೆಯಲ್ಲಿ ತೊಡಗಿರುವ ಪಕ್ಷಗಳನ್ನು ಸಂಧಾನದ ಮೇಜಿಗೆ ಕರೆತರುವುದಕ್ಕೆ ಈ ಸಂಸ್ಥೆ ಸಲ್ಲಿಸಿರುವ ಕಾಣಿಕೆ ಮೆಚ್ಚುವಂಥದ್ದು. ನಿರಾಯುಧೀಕರಣ ಸಾಧನೆಗೆ, ಪರಮಾಣು ಅಸ್ತ್ರಗಳ ಪ್ರಯೋಗಗಳ ನಿಲುಗಡೆಗೆ, ದಾಸ್ತಾನಿನಲ್ಲಿರುವ ನ್ಯೂಕ್ಲಿಯರ್ ಅಸ್ತ್ರಗಳ ನಿರ್ನಾಮಕ್ಕೆ ಈ ಸಂಸ್ಥೆಯ ಬಹುತೇಕ ರಾಷ್ಟ್ರಗಳು ಶ್ರಮಿಸುತ್ತಿದ್ದರೂ ಅದು ಇನ್ನೂ ಫಲಕಾರಿಯಾಗಿಲ್ಲ. ಬಲಾಢ್ಯ ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕ, ತಳೆದಿರುವ ನಕಾರಾತ್ಮಕ ಧೋರಣೆಯೇ ಇದಕ್ಕೆ ಕಾರಣ. ಈಚಿನ ದಿನಗಳಲ್ಲಿ, ಅದರಲ್ಲೂ ಸೋವಿಯತ್ ಒಕ್ಕೂಟದ ವಿಸರ್ಜನೆಯ ನಂತರ, ಈ ಅಂತರರಾಷ್ಟ್ರೀಯ ಸಂಸ್ಥೆ ಅಮೆರಿಕದ ಅಧೀನಕ್ಕೆ ಒಳಪಡುತ್ತಿರುವ ಭೀತಿ ಇದೆ. ಹಲವು ಪ್ರಮುಖ ವಿಷಯಗಳಿಗೆ ಸಂಬಂಧಿಸಿದಂತೆ ವಿಶ್ವಸಂಸ್ಥೆ ಇಂದು ಅಮೆರಿಕದ ಕೈಗೊಂಬೆಯಂತೆ ನಡೆದುಕೊಳ್ಳುತ್ತಿದೆ. ಅಮೆರಿಕಕ್ಕೆ ಅಪಥ್ಯವೆನಿಸಿರುವ ದೇಶಗಳ ಮೇಲೆ ವಿಶ್ವಸಂಸ್ಥೆಯ ಹೆಸರಿನಲ್ಲಿ ಅಮೆರಿಕದ ದಿಗ್ಬಂಧನದ ಹೇರಿಕೆ, ಮಿಲಿಟರಿ ಕಾರ್ಯಾಚರಣೆಗಳು ಅದಕ್ಕೆ ಉದಾಹರಣೆ. ಇದು ನಿಜಕ್ಕೂ ಆತಂಕಕಾರಿ ಬೆಳವಣಿಗೆ. ಅಧಿಕ ಸಂಖ್ಯೆಯಲ್ಲಿರುವ ಸಣ್ಣ ರಾಷ್ಟ್ರಗಳಿಗೆ ಈ ಜಾಗತಿಕ ಸಂಘಟನೆ[illegible] ಪ್ರಾತಿನಿಧ್ಯ ದೊರಕಿ ಸಂಸ್ಥೆಯನ್ನು ಬಲಗೊಳಿಸಲು ಕ[illegible] ಅಗತ್ಯವಾಗಿದೆ. ದೈನಂದಿನ ವಹಿವಾಟನ್ನು ನೋಡಿಕೊಳ್ಳುವ [illegible]



*ದಿಲ್ಲಿಯಲ್ಲಿರುವ ಪಾರ್ಲಿಮೆಂಟ್ ಭವನ*

ಅಭಿವೃದ್ಧಿಶೀಲ ದೇಶಗಳಿಗೆ ಪ್ರಾತಿನಿಧ್ಯ ಕಲ್ಪಿಸ ಬೇಕಾಗಿದೆ.

**ಆರ್ಥಿಕ ಅಸಮಾನತೆ**

ವೈಜ್ಞಾನಿಕ ಹಾಗೂ ತಂತ್ರಜ್ಞಾನದ ಕ್ಷೇತ್ರದಲ್ಲಿ ಆಗಿರುವ ಪ್ರಗತಿ ಅಗಾಧ. ಹಿಂದಿನ ಯಾವ ಶತಮಾನಗಳಲ್ಲೂ ಆಗದಿದ್ದಂತಹ ಪ್ರಗತಿ ಈ ಕ್ಷೇತ್ರದಲ್ಲಾಗಿದೆ. ಈ ಪ್ರಗತಿಯಿಂದ ಜನಜೀವನ ಸುಗಮಗೊಂಡಿದೆಯಾದರೂ ಅದರ ಫಲ ಸಮಾನವಾಗಿ ಎಲ್ಲ ಜನರಿಗೂ ಲಭ್ಯವಾಗಿಲ್ಲ. ಕೆಲವೇ ಶ್ರೀಮಂತ ರಾಷ್ಟ್ರಗಳು ಅದರ ಲಾಭ ಪಡೆದುಕೊಂಡು ಹೆಚ್ಚು ಐಶ್ವರ್ಯವಂತವಾಗಿವೆ, ಬಹ್ವಂಶದಲ್ಲಿರುವ ಅಭಿವೃದ್ಧಿಶೀಲ ರಾಷ್ಟ್ರಗಳು ಇನ್ನೂ ಬಡತನದಲ್ಲೇ ಇವೆ. ಬಂಡವಾಳಶಾಹಿ ವ್ಯವಸ್ಥೆ ಸೃಷ್ಟಿಸಿರುವ ಕೊಳ್ಳುಬಾಕ ಸಮಾಜದಲ್ಲಿ ಶ್ರೀಮಂತರು ಮತ್ತು ಬಡ ಜನರ ಮಧ್ಯೆ ಕಂದರ ದೊಡ್ಡದಾಗುತ್ತಿದೆ. ನೂರಾರು ವರ್ಷಗಳ ಕಾಲ ವಸಾಹತು ಆಳ್ವಿಕೆಯಲ್ಲಿದ್ದು ಕ್ರೂರವಾದ ಶೋಷಣೆಗೆ, ನೈಸರ್ಗಿಕ ಸಂಪತ್ತಿನ ಲೂಟಿಗೆ ಬಲಿಯಾಗಿದ್ದ ಏಷ್ಯಾ, ಆಫ್ರಿಕಾದ ರಾಷ್ಟ್ರಗಳು ಆರ್ಥಿಕವಾಗಿ ಚೇತರಿಸಿಕೊಳ್ಳದೆ ಇವೆ. ವಸಾಹತುಶಾಹಿ ಆಳ್ವಿಕೆಯ ದುಷ್ಪರಿಣಾಮಗಳು ಹೆಚ್ಚಾಗಿ ಆಫ್ರಿಕಾಖಂಡದ ದೇಶಗಳಲ್ಲಿ ಇಂದು ಕಾಣ ಬರುತ್ತಿದೆ. ಸಾಮ್ರಾಜ್ಯಶಾಹಿ ಶಕ್ತಿಗಳು ವಸಾಹತುಗಳನ್ನು ಕಳೆದುಕೊಂಡರೂ, ಆರ್ಥಿಕವಾಗಿ ತಮ್ಮ ಪ್ರಾಬಲ್ಯವನ್ನು ಕಳೆದುಕೊಳ್ಳಲಿಲ್ಲ.

ಹಿಂದಿನ ಶತಮಾನಗಳಲ್ಲಿನಂತೆ ಬಲಿಷ್ಠ ರಾಷ್ಟ್ರವೊಂದು ಇಂದು ಸೇನಾ ಕಾರ್ಯಾಚರಣೆಯಿಂದ ಇನ್ನೊಂದು ದೇಶವನ್ನು ಆಕ್ರಮಿಸಿಕೊಂಡು ಜನತೆಯನ್ನು ಅಧೀನದಲ್ಲಿರಿಸಿಕೊಳ್ಳುವುದು ಸಾಧ್ಯವಿಲ್ಲವಾಗಿದೆ. ಅದರಿಂದಾಗಿ ಶ್ರೀಮಂತ ಸಾಮ್ರಾಜ್ಯಶಾಹಿ ದೇಶಗಳು ಹಿಂದಿನ ವಸಾಹತು ದೇಶಗಳನ್ನು ಅಧೀನದಲ್ಲಿರಿಸಿಕೊಳ್ಳಲು ಹಲವಾರು ವಿಧಾನಗಳನ್ನು ರೂಪಿಸಿವೆ. ಅವುಗಳಲ್ಲಿ ಮುಖ್ಯವಾದುದು ತಮ್ಮ ಆರ್ಥಿಕ ಪ್ರಾಬಲ್ಯವನ್ನು ಬಳಸಿಕೊಂಡು ದುರ್ಬಲ ರಾಷ್ಟ್ರಗಳನ್ನು ಅಧೀನತೆಗೊಳಪಡಿಸಿಕೊಳ್ಳುವುದಾಗಿದೆ. ಈ ಉದ್ದೇಶದಿಂದಲೇ ಅವು ತಮ್ಮ ಬಹುರಾಷ್ಟ್ರೀಯ ಸಂಸ್ಥೆಗಳ ಮೂಲಕವಾಗಿ ಬಡರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯ ಮೇಲೆ ನಿಯಂತ್ರಣ ಸಾಧಿಸುವ ಪ್ರಯತ್ನ ನಡೆಸಿವೆ. ಅಂತರರಾಷ್ಟ್ರೀಯ ವಿತ್ತೀಯ ಸಂಸ್ಥೆಗಳಾದ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ವಿತ್ತೀಯ ನಿಧಿ (ಐಎಂಎಫ್), ವಿಶ್ವ ವ್ಯಾಪಾರಿ ಸಂಸ್ಥೆ (ಡಬ್ಲ್ಯೂಟಿಒ) ಮೂಲಕ ಶ್ರೀಮಂತ ರಾಷ್ಟ್ರಗಳು ಬಡರಾಷ್ಟ್ರಗಳನ್ನು ಸಾಲದ ಮಡುವಿಗೆ ದೂಡಿ, ಆ ರಾಷ್ಟ್ರಗಳ ಆರ್ಥಿಕತೆ ಮೇಲೆ ನಿಯಂತ್ರಣವನ್ನು ಸ್ಥಾಪಿಸುತ್ತಿವೆ. ಉದಾರೀಕರಣ, ಮುಕ್ತ ಮಾರುಕಟ್ಟೆ, ವಿದೇಶೀ ಬಂಡವಾಳ ಮೊದಲಾದ ಪೊಳ್ಳು ಘೋಷಣೆಗಳ ಅನಿಷ್ಟಕ್ಕೆ ಪ್ರಪಂಚದ ರಾಷ್ಟ್ರಗಳು ಬಲಿಯಾಗುತ್ತಿರುವುದು ವಿಷಾದಕರ. ಅಮೆರಿಕದ ನೇತೃತ್ವದಲ್ಲಿ ಸಾಮ್ರಾಜ್ಯಶಾಹಿಗಳು ಆರ್ಥಿಕ ಕ್ಷೇತ್ರದಲ್ಲಿ ಬೀಸಿರುವ ಈ ಬಲೆಯ ದುಷ್ಪರಿಣಾಮಗಳನ್ನು ಮುಂದಿನ ಶತಮಾನದಲ್ಲಿ ಕಾಣಲಿದ್ದೇವೆ. ಪ್ರಪಂಚದ ಬಹುಸಂಖ್ಯಾತ ರಾಷ್ಟ್ರಗಳ ಅರ್ಥವ್ಯವಸ್ಥೆಯ ಮೇಲೆ ಕೆಲವೇ ಶ್ರೀಮಂತ ರಾಷ್ಟ್ರಗಳು ಸ್ಥಾಪಿಸಲು ಹೊರಟಿರುವ ಆಧಿಪತ್ಯವು ಆರ್ಥಿಕ ದಾಸ್ಯಕ್ಕೆಡೆಕೊಡುತ್ತದೆ. ಇಪ್ಪತ್ತನೆಯ ಶತಮಾನದಲ್ಲಿ ನಿರ್ವಸಾಹತೀಕರಣ ಒಂದು ಸಾಧನೆಯಾದರೆ ಹೊಸ ಇಪ್ಪತ್ತೊಂದನೆ ಶತಮಾನದಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ ಮೂಲಕವಾಗಿ ಆರ್ಥಿಕ ವಸಾಹತೀಕರಣ ಆದಲ್ಲಿ ಅಚ್ಚರಿ ಏನಿಲ್ಲ.

ಇಪ್ಪತ್ತನೆಯ ಶತಮಾನದ ಸಾಧನೆಗಳು ಎಷ್ಟೇ ಉಜ್ವಲವಾಗಿದ್ದರೂ ಮಾನವ ಕೋಟಿ ಇನ್ನೂ ಬಗೆಹರಿಯದ ಹಲವಾರು ಸಮಸ್ಯೆಗಳನ್ನು ಹೊತ್ತುಕೊಂಡು ಮುಂದಿನ ಶತಮಾನಕ್ಕೆ ಕಾಲಿರಿಸುತ್ತಿದೆ. ಮೇಲೆ ಹೇಳಿರುವ ಆರ್ಥಿಕ ಅಸಮಾನತೆಯ ಜೊತೆಗೆ ಮಾನವ ನ್ಯೂಕ್ಲಿಯರ್ ಸಮರದ ಭೀತಿಯಿಂದಲೇ ಜೀವಿಸಬೇಕಾಗಿದೆ. ನ್ಯೂಕ್ಲಿಯರ್ ಅಸ್ತ್ರಗಳ ಪ್ರಯೋಗ ಪರೀಕ್ಷೆ ತತ್ಕಾಲಕ್ಕೆ ಇಲ್ಲದಿದ್ದರೂ ಈ ಮಾರಕಾಸ್ತ್ರಗಳ ವಿಸ್ತರಣೆ ನಿಂತಿಲ್ಲ. ಹೊಸ ರಾಷ್ಟ್ರಗಳು ಈ ಅಸ್ತ್ರಗಳನ್ನು ಪಡೆದುಕೊಂಡಿವೆ. ಇನ್ನಷ್ಟು ದೇಶಗಳು ಸೇರಿದರೆ ವಿಪತ್ತು ಮತ್ತಷ್ಟು ಹೆಚ್ಚಲಿದೆ. ಈ ಅಪಾಯದ ಹಿನ್ನೆಲೆಯಲ್ಲಿ ನ್ಯೂಕ್ಲಿಯರ್ ಅಸ್ತ್ರಗಳ ಸಂಪೂರ್ಣ ನಿಷೇಧ ಹಾಗೂ ಅವುಗಳ ದಾಸ್ತಾನಿನ ವಿಸರ್ಜನೆಯು ಸುರಕ್ಷತೆಗೆ ಅತ್ಯಗತ್ಯ. ಹಾಗೆಯೇ ವಿವಾದಾತ್ಮಕವಾದ ಇನ್ನೂ ಬಗೆಹರಿಯದ ಸಮಸ್ಯೆಗಳು, ಉದಾಹರಣೆಗೆ, ಮಧ್ಯಪ್ರಾಚ್ಯದಲ್ಲಿ ಪ್ಯಾಲಸ್ಟೈನ್ ಅರಬ್ಬರ ಪ್ರಶ್ನೆ, ಭಾರತ ಮತ್ತು ಪಾಕಿಸ್ತಾನಗಳ ನಡುವಣ ವಿವಾದಗಳು, ಇತ್ಯಾದಿ ಬಗೆಹರಿಯುವವರೆಗೆ ಸುರಕ್ಷತೆ ಸಾಧ್ಯವಿಲ್ಲ. ಅಭಿವೃದ್ಧಿ ಕಾರ್ಯಗಳ ಜೊತೆಗೇ ಇಪ್ಪತ್ತನೆಯ ಶತಮಾನದಲ್ಲಿ ಪರಿಸರ ಮಾಲಿನ್ಯದ ಸಮಸ್ಯೆಯೂ ಬೃಹದಾಕಾರವಾಗಿ ಬೆಳೆದಿದೆ. ಅಭಿವೃದ್ಧಿ ಹೊಂದಿರುವ ದೇಶಗಳು ಈ ಸಮಸ್ಯೆ ಬಗೆಹರಿಸಲು ತಮ್ಮ ಹೊಣೆಗಾರಿಕೆಯಿಂದ ಜಾರಿಕೊಳ್ಳುತ್ತಿರುವುದೀಗ ಶೋಚನೀಯ. ಮುಂದಿನ ಪೀಳಿಗೆಗಳು ಈ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಇಪ್ಪತ್ತನೆಯ ಶತಮಾನವನ್ನು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದ ಯುಗ ಎಂದು ಬಣ್ಣಿಸಬಹುದು. ಈ ಹೋರಾಟ ಮುಂದಿನ ಶತಮಾನದಲ್ಲೂ ಮುಂದುವರಿಯಲಿದೆ. ಏಕೆಂದರೆ, ವಸಾಹತು ಸಾಮ್ರಾಜ್ಯ ಕಳೆದುಕೊಂಡರೂ ಸಾಮ್ರಾಜ್ಯಶಾಹಿ ಅಳಿಯಲಿಲ್ಲ. ಪರೋಕ್ಷವಾಗಿ ಪ್ರಪಂಚದ ದೇಶಗಳ ಮೇಲೆ ಹಿಡಿತವಿರಿಸಿಕೊಳ್ಳಲು ನೋಡುತ್ತಿದೆ. ಒಟ್ಟಿನಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಅಸಾಧಾರಣವಾದ ಪ್ರಗತಿಸಾಧನೆಯಾಗಿದ್ದರೂ, ಅದು ಅಷ್ಟೇ ಅಗಾಧವಾದ ಸಮಸ್ಯೆಗಳನ್ನು ಸೃಷ್ಟಿಸಿದೆ.

ಸೀಯಾರ್ಕೆ
೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ
೩ನೇ ಫೇಜ್, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೮೫

*ಸಿ. ಎನ್. ಆರ್. ರಾವ್ ಅವರು ಅಂತರರಾಷ್ಟ್ರೀಯ ಖ್ಯಾತಿ ಮತ್ತು ಮನ್ನಣೆ ಪಡೆದ ರಸಾಯನ ಶಾಸ್ತ್ರದ ವಿಜ್ಞಾನಿ. ಸಧ್ಯದಲ್ಲಿ ಜವಹರಲಾಲ್ ನೆಹ್ರು ಉನ್ನತ ಸಂಶೋಧನಾಲಯದ ಗೌರವ ಅಧ್ಯಕ್ಷರು. ಟ್ರೆಯಸ್ಟಿಯಲ್ಲಿರುವ ತೃತೀಯ ವಿಶ್ವದ ವಿಜ್ಞಾನ ಅಕಾಡೆಮಿಯ ಸ್ಥಾಪಕರು ಮತ್ತು ಅಧ್ಯಕ್ಷರು. ಭಾರತೀಯ ವಿಜ್ಞಾನ ಮಂದಿರದ ಅಧ್ಯಕ್ಷರಾಗಿ ಹತ್ತು ವರ್ಷ ಸೇವೆ ಸಲ್ಲಿಸಿದ್ದಾರೆ. ವಿಶ್ವದ ಸುಮಾರು ಇಪ್ಪತ್ತು ದೇಶಗಳ ಅಕಾಡೆಮಿಯ ಗೌರವ ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ. ಸುಮಾರು ೧೦೦೦ ಸಂಶೋಧನಾ ಪ್ರಬಂಧಗಳನ್ನೂ, ೪೦ ಪುಸ್ತಕಗಳನ್ನೂ ರಚಿಸಿದ್ದಾರೆ. ಲಂಡನ್ನಿನ ರಾಯಲ್ ಸೊಸೈಟಿಯ ಫೆಲೊ ಸಹ ಆಗಿದ್ದಾರೆ. ಭಾರತ ಸರ್ಕಾರದ ವಿಜ್ಞಾನ ಸಲಹಾಮಂಡಳಿಯ ಅಧ್ಯಕ್ಷರಾಗಿಯೂ ಕರ್ತವ್ಯ ನಿರ್ವಹಿಸಿದರು. ವಿಜ್ಞಾನವನ್ನು ಜನಪ್ರಿಯಗೊಳಿಸುವ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಮತ್ತು ಭಾರತ ಜ್ಞಾನ ವಿಜ್ಞಾನ ಸಮಿತಿಗೆ ನೆರವನ್ನು ನೀಡಿರುವ ಪ್ರತಿಭಾವಂತ ಕನ್ನಡಿಗರು.*

*ಬೆಂಗಳೂರಿನಲ್ಲಿರುವ ಜವಹರಲಾಲ್ ನೆಹ್ರು ಉನ್ನತ ವೈಜ್ಞಾನಿಕ ಸಂಶೋಧನಾಲಯದ ಸ್ಥಾಪಕ ನಿರ್ದೇಶಕರಾದ ಪ್ರೊ॥ ಸಿ. ಎನ್. ಆರ್. ರಾವ್ ಅವರನ್ನು ಡಾ॥ ಜಿ. ರಾಮಕೃಷ್ಣ ಮತ್ತು ಪ್ರೊ॥ ಎಂ. ಎ. ಸೇತುರಾವ್ ಅವರು ಸಂದರ್ಶಿಸಿ ವಿಜ್ಞಾನ ಹಾಗೂ ಶಿಕ್ಷಣ ಕ್ಷೇತ್ರಗಳ ಹಲವು ಪ್ರಮುಖ ವಿಚಾರಗಳನ್ನು ಕುರಿತು ಚರ್ಚೆ ನಡೆಸಿದರು. ಸಂದರ್ಶನದ ಸ್ಥೂಲ ವಿವರಗಳನ್ನು ಈ ಲೇಖನದಲ್ಲಿ ಓದಬಹುದು. ಸಂದರ್ಶನದ ವೇಳೆಯಲ್ಲಿ ಶ್ರೀ ಕೆ.ಪಿ. ಸ್ವಾಮಿ ಸಹ ಉಪಸ್ಥಿತರಿದ್ದರು.*



# ವಿಜ್ಞಾನಿಯೊಡನೆ ಸಂದರ್ಶನ

## [illegible]॥ ಸಿ. ಎನ್. ಆರ್. ರಾವ್, ಎಫ್.ಆರ್.ಎಸ್.

**ಸಂದರ್ಶಕರು :** ಪ್ರೊ॥ ರಾವ್, ನೀವು ತಾತಾ ವಿಜ್ಞಾನ ಮಂದಿರದ ಡೈರೆಕ್ಟರ್ ಆಗಿದ್ದ ಅವಧಿಯಲ್ಲೇ ಜವಹರಲಾಲ್ ನೆಹ್ರು ಉನ್ನತ ಸಂಶೋಧನಾಲಯದ ಸ್ಥಾಪನೆಗೆ ಕಾರಣರಾದಿರಿ. ತಾತಾ ವಿಜ್ಞಾನ ಮಂದಿರ ಒಂದು ಪ್ರತಿಷ್ಠೆಯ ಸಂಶೋಧನಾಲಯವಾಗಿದ್ದು , ಬೆಂಗಳೂರಿನಲ್ಲಿ ಮತ್ತೊಂದು ಸಂಶೋಧನಾಲಯದ ಅಗತ್ಯವಿತ್ತೇ ?

**ಸಿ. ಎನ್. ಆರ್. ರಾವ್ :** ಭಾರತ ಬೃಹತ್ ದೇಶ. ಹಲವಾರು ಸಂಶೋಧನಾಲಯಗಳ ಅಗತ್ಯವಿದ್ದೇ ಇದೆ. ಭಾರತ ಸರ್ಕಾರ ನೆಹ್ರು ಅವರ ಹೆಸರಿನಲ್ಲಿ ಒಂದು ಪ್ರತಿಷ್ಠಿತ ಸಂಸ್ಥೆಯನ್ನು ಆರಂಭಿಸುವ ಉದ್ದೇಶವನ್ನಿಟ್ಟುಕೊಂಡು ಹಲವಾರು ಸಲಹೆಗಳನ್ನು ಸ್ವೀಕರಿಸಿತು. ಒಂದು ಹೆಸರಾಂತ ಸಂಸ್ಥೆಯ ಬಳಿಯಲ್ಲೇ, ಆ ಸಂಸ್ಥೆಯೊಂದಿಗೆ ಸಹಕರಿಸಿ ಮತ್ತೊಂದು ಸಂಸ್ಥೆಯನ್ನು ಹುಟ್ಟುಹಾಕಬಹುದೆಂಬ ಅಭಿಪ್ರಾಯ ಮೂಡಿತು. ಖಗೋಳ ವಿಜ್ಞಾನ, ಜನಸಂಖ್ಯೆ ವಿಜ್ಞಾನ ಮತ್ತು ಇತರ ಕ್ಷೇತ್ರಗಳ ಬಗ್ಗೆ ವಿಚಾರ ಮಾಡಿ ಅಂತಿಮವಾಗಿ ಭಾರತೀಯ ವಿಜ್ಞಾನ ಮಂದಿರದ ಹತ್ತಿರದಲ್ಲೇ ಸಂಶೋಧನಾಲಯವನ್ನು ಸ್ಥಾಪಿಸಲು ತೀರ್ಮಾನಿಸಲಾಯಿತು. ಹಾಗೆ ನೋಡಿದರೆ, ಈ ಸಂಸ್ಥೆ ಭಾರತೀಯ ವಿಜ್ಞಾನ ಮಂದಿರದ ಸಹಯೋಗದಿಂದಲೇ ಕೆಲಸ ಮಾಡುತ್ತಿದೆ. ಅಂಥ ದೊಡ್ಡ ಸಂಸ್ಥೆಯೇನಲ್ಲ. ಸುಮಾರು ನಾಲ್ವತ್ತು ವಿಜ್ಞಾನಿಗಳು ಇಲ್ಲಿ ಸೀಮಿತ ಕ್ಷೇತ್ರಗಳಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ. ಭಾರತೀಯ ವಿಜ್ಞಾನ ಮಂದಿರದ ಜೊತೆಯಲ್ಲೇ ವರ್ಷಕ್ಕೆ ೩೦ ಚರ್ಚಾಕೂಟಗಳನ್ನು ಏರ್ಪಡಿಸುತ್ತಿದ್ದೇವೆ. ಬೇಸಿಗೆ ಕಾಲದಲ್ಲಿ ಭಾರತದಿಂದ ಮತ್ತು ಹಲವು ಅಭಿವೃದ್ಧಿಶೀಲ ರಾಷ್ಟ್ರಗಳಿಂದ ಯುವ ವಿಜ್ಞಾನಿಗಳನ್ನು ಆಹ್ವಾನಿಸಿ ಸಂಶೋಧನೆ ನಡೆಸಲು ಅವಕಾಶವನ್ನು ನೀಡುತ್ತಿದ್ದೇವೆ. ನೆಹ್ರು ಉನ್ನತ ಸಂಶೋಧನಾಲಯವು ಸಂಶೋಧನೆಗಳೊಂದಿಗೆ ವಿಜ್ಞಾನ ಪ್ರಸರಣ ಕಾರ್ಯವನ್ನೂ ಹಮ್ಮಿಕೊಂಡಿದೆ. ಬಹುಮಾಧ್ಯಮದ ಕ್ಯಾಸೆಟ್ಟುಗಳನ್ನೂ ತಯಾರಿಸುತ್ತಿದೆ. ಸಂಸ್ಥೆಯ ಬಜೆಟ್ ಸುಮಾರು ೧೦ಕೋಟಿ ರೂ. ನಷ್ಟು ಮಾತ್ರವಿದೆ.

**ಸಂ :** ಸುಮಾರು ೪೦ ವರ್ಷಗಳಿಂದ ನೀವು ವೈಜ್ಞಾನಿಕ ಸಂಶೋಧನೆಗಳಲ್ಲಿ ತೊಡಗಿದ್ದೀರಿ. ಅನೇಕ ಪ್ರಶಸ್ತಿಗಳು, ಪುರಸ್ಕಾರಗಳು ಹಾಗೂ ಮೆಡಲ್ಲುಗಳು ದೊರಕಿವೆ. ಇವುಗಳಲ್ಲಿ ನಿಮಗೆ ಹೆಚ್ಚು ಆಪ್ಯಾಯಮಾನವಾದದ್ದು ಯಾವುದು ?

**ರಾವ್ :** ನಾನು ಕಾನ್ಪುರದಲ್ಲಿ ಐ. ಐ. ಟಿ.ಯಲ್ಲಿದ್ದಾಗ ಯುವ ವಿಜ್ಞಾನಿಯಾಗಿ ಮಾರ್ಲೊ ಮೆಡಲ್ ಲಭ್ಯವಾಯಿತು. ಚಿಕ್ಕಂದಿನಲ್ಲೇ ದೊರೆತ ಈ ಪ್ರಶಸ್ತಿ ಹೊಸ ಉತ್ಸಾಹವನ್ನು ತುಂಬಿತು. ಇತ್ತೀಚೆಗೆ ರಾಯಲ್ ಸೊಸೈಟಿಯವರು ನೀಡಿದ ಹ್ಯೂಸ್ ಮೆಡಲ್ ಬಹಳ ಪ್ರಶಸ್ತವಾದದ್ದು. ಇದು ಡಾ॥ ಸಿ. ವಿ. ರಾಮನ್ ಅವರ ನಂತರ ನನಗೆ ಮಾತ್ರ ದೊರಕಿದ ಅತ್ಯುನ್ನತ ಗೌರವವೆಂದು ನಾನು ಭಾವಿಸುತ್ತೇನೆ. ರಾಯಲ್ ಸೊಸೈಟಿ ನನ್ನನ್ನು ಶತಮಾನದ ಉಪನ್ಯಾಸಗಳನ್ನು ನೀಡಲು ಲಂಡನ್ನಿಗೆ ಆಹ್ವಾನಿಸಿರುವುದು ಹೆಮ್ಮೆಪಡಬೇಕಾದ ಸಂಗತಿ. ನಾನು ಕಾನ್ಪುರದಲ್ಲೇ ಸಂಶೋಧನೆಯನ್ನು ಪ್ರಾರಂಭಿಸಿದೆ. ಆದರೆ, ಸಂಶೋಧನೆಗಳು ಅತ್ಯಂತ ತೃಪ್ತಿಯ ಮಟ್ಟವನ್ನು ತಲುಪಿದ್ದು ನಾನು ಭಾರತೀಯ ವಿಜ್ಞಾನ ಮಂದಿರದ ಡೈರೆಕ್ಟರ್ ಆದಾಗ. ಅಂದರೆ, ೧೯೯೫-೨೦೦೦ದ ಅವಧಿಯು ನನ್ನ ಸಂಶೋಧನೆಗಳ ಉನ್ನತ ಕಾಲವೆಂದೆನಿಸುತ್ತದೆ. ಈ ಅವಧಿಯಲ್ಲಿ ನಾನು ಹಚ್ಚ ಹೊಸದಾದ ವಸ್ತುಗಳ ನಿರ್ಮಾಣದ ಬಗ್ಗೆ ಸಂಶೋಧನೆಯನ್ನು ನಡೆಸಿದೆ.

**ಸಂ :** ಇತ್ತೀಚೆಗಿನ ನಿಮ್ಮ ಸಂಶೋಧನೆಗಳ ಕ್ಷೇತ್ರವನ್ನು ವಿವರಿಸುವಿರಾ ?

**ರಾವ್ :** ಸೂಕ್ಷ್ಮ ರಾಸಾಯನಿಕ ವಿಧಾನಗಳನ್ನು ಬಳಸಿಕೊಂಡು ಬರಿಕಣ್ಣಿಗೆ ಕಾಣಿಸದ ಹೊಸ ವಸ್ತುಗಳ ನಿರ್ಮಾಣದಲ್ಲಿ ತೊಡಗಿದ್ದೇನೆ. ಸುಮಾರು ೧೦-೧೫ $A^{o}$ ($A^{o}$ = ೧೦$^{-೮}$ ಸೆಂ. ಮೀ.) ಗಾತ್ರದ ನಾನೊ ಅಣುಗಳ ರಚನೆ, ತಯಾರಿಕೆ ಬಹಳ ಮುಖ್ಯವಾದ ಘಟ್ಟವಾಗಿದೆ. ಗಾಳಿಯಲ್ಲಿರುವ ನೈಟ್ರೋಜನ್ ಮತ್ತು ಆಕ್ಸಿಜನ್ ಅನಿಲಗಳನ್ನು ಬೇರ್ಪಡಿಸುವುದು ಬಹಳ ಕಷ್ಟ. ನಾನು ತಯಾರಿಸಿರುವ ನಾನೊ ಟ್ಯೂಬುಗಳು ಈ ಕ್ಷೇತ್ರದಲ್ಲಿ ಉಪಯುಕ್ತವಾಗಬಲ್ಲವು. ನಾನೊ ಟ್ಯೂಬುಗಳು, ನಾನೊ ಕಣಗಳು ಟಿ.ವಿ. ಸೆಟ್ಟುಗಳಲ್ಲಿ ಬಳಕೆಯಾಗಬಲ್ಲವು. ನಾನು ಸಂಶೋಧಿಸುತ್ತಿರುವ ಸೂಕ್ಷ್ಮ ಪ್ರಮಾಣದ ವಸ್ತುಗಳು ಕಂಪ್ಯೂಟರ್ ತಂತ್ರಜ್ಞಾನಕ್ಕೂ ಕೊಡುಗೆಯನ್ನು ನೀಡಬಲ್ಲವು. ನಾನೊ ವಿಜ್ಞಾನ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ವಿಜ್ಞಾನ ಶಾಖೆ. ಶಕ್ತಿಯ ಕ್ಷೇತ್ರದಲ್ಲೂ ಇದರ ಉಪಯುಕ್ತತೆ ಇದೆ. ಭವಿಷ್ಯದಲ್ಲಿ ಹೈಡ್ರೋಜನ್ ಮತ್ತು ಸೌರಶಕ್ತಿ ನಮ್ಮ ಶಕ್ತಿಯ ಆಕರಗಳಾಗುವುದರಲ್ಲಿ ಸಂದೇಹವಿಲ್ಲ. ಹೈಡ್ರೋಜನ್ ಅನಿಲವನ್ನು ಶೇಖರಿಸುವುದು ಜಟಿಲವಾದ ಸಮಸ್ಯೆ. ನಾನೊ ಟ್ಯೂಬುಗಳು ಈ ಸಮಸ್ಯೆಗೆ ಸೂಕ್ತ ಪರಿಹಾರ ನೀಡಬಲ್ಲವು.

(ರಾವ್ ಅವರು ಅಭಿಮಾನದಿಂದ, ಉತ್ಸಾಹದಿಂದ ಇಂಥ ರಚನೆಗಳ ಛಾಯಾಚಿತ್ರಗಳನ್ನು ಸಂದರ್ಶಕರಿಗೆ ತೋರಿಸಿದರು.)

**ಸಂ :** ನೀವು ಸಂಶೋಧನೆಗಳನ್ನು ನಡೆಸುವಾಗ ಅವುಗಳ ಉಪಯುಕ್ತತೆಯನ್ನು ಕುರಿತು ಗಮನ ನೀಡಿದ್ದುಂಟೇ ?

**ರಾವ್ :** ಯಾವುದೇ ಸಂಶೋಧನೆಗೂ [illegible]



ಡಾ॥ ಸಿ.ಎನ್.ಆರ್. ರಾವ್ ತಾವು ರಚಿಸಿರುವ ಗ್ರಂಥಗಳನ್ನು ಸಂದರ್ಶಕರಿಗೆ ತೋರಿಸುತ್ತಿರುವುದು

ಇರುತ್ತದೆ. ಒಬ್ಬ ಒಳ್ಳೆಯ ವಿಜ್ಞಾನಿ ಈ ದೃಷ್ಟಿಯಿಂದಲೇ ಸಂಶೋಧನೆಯನ್ನು ಆರಂಭಿಸುತ್ತಾನೆ. ಉಪಯುಕ್ತತೆಯನ್ನು ಗಮನದಲ್ಲಿರಿಸಿಕೊಂಡು ಅದನ್ನು ಸಾಧಿಸಲು ಅಗತ್ಯವಾದ ಸಂಶೋಧನೆಗಳನ್ನು ಒಬ್ಬ ಕ್ರಿಯಾಶೀಲ ವಿಜ್ಞಾನಿ ನಡೆಸುತ್ತಾನೆ.

**ಸಂ :** ವಿಜ್ಞಾನಿಗಳು 'ದಂತಗೋಪುರ'ದಲ್ಲಿರುತ್ತಾರೆ ಎಂಬ ದೂರು ಸಾಮಾನ್ಯವಾಗಿ ಕೇಳಿಬರುತ್ತಿದೆ. ನಿಮ್ಮ ಅಭಿಪ್ರಾಯವೇನು ?

**ರಾವ್ :** ಸಾಮಾನ್ಯವಾಗಿ ಬುದ್ಧಿಜೀವಿಗಳು, ವಿಜ್ಞಾನಿಗಳು, ಸ್ವತಂತ್ರವಾಗಿ ಯೋಚನೆ ಮಾಡಬಲ್ಲವರು ಇವರೆಲ್ಲಾ ಸ್ವಲ್ಪಮಟ್ಟಿಗೆ ಪ್ರತ್ಯೇಕವಾಗಿದ್ದಾರೆಂದು ಭಾಸವಾಗಬಹುದು. ಹಾಗೆ ನೋಡಿದರೆ, ಹೆಸರಾಂತ ವಿಜ್ಞಾನಿಗಳೂ ಸಹ 'ದಂತಗೋಪುರ'ಗಳಲ್ಲಿರಲಿಲ್ಲ. ಆಲ್ಬರ್ಟ್ ಐನ್‌ಸ್ಟೈನ್ ಅವರು ಸಾಮಾಜಿಕ ಘಟನೆಗಳಿಗೆ ಸ್ಪಂದಿಸುತ್ತಿದ್ದರು. ನ್ಯೂಟನ್ ಕೂಡ 'ದಂತಗೋಪುರ'ದಲ್ಲಿದ್ದನೆಂದು ಹೇಳಲು ಸಾಧ್ಯವಿಲ್ಲ. ವಿಜ್ಞಾನಿಗಳು ಸಾಮಾಜಿಕ ಘಟನೆಗಳ ಬಗ್ಗೆ ಚಿಂತನೆ ಮಾಡಬೇಕೆಂಬುದು ನನ್ನ ದೃಢ ನಂಬಿಕೆ.

**ಸಂ :** ಅಮೆರಿಕ, ಬ್ರಿಟನ್ ಮುಂತಾದ ದೇಶಗಳಲ್ಲಿ 'ಸಾಮಾಜಿಕ ಜವಾಬ್ದಾರಿಯನ್ನು' ಪ್ರದರ್ಶಿಸುವ ವಿಜ್ಞಾನಿಗಳ ಸಂಸ್ಥೆಗಳಿವೆ. ಭಾರತದಲ್ಲಿ ಏಕಿಲ್ಲ ?

**ರಾವ್ :** ಭಾರತದಲ್ಲಿ ಸಂಶೋಧನಾ ಸಂಸ್ಥೆಗಳಿಗೆ ಸಂಪೂರ್ಣವಾಗಿ ಸರ್ಕಾರ ಧನಸಹಾಯ ನೀಡುತ್ತಿದೆ. ಇಂಥ ಸ್ಥಿತಿಯಲ್ಲಿ ಸಂಶೋಧನಾಲಯಗಳಲ್ಲಿ ಕೆಲಸ ಮಾಡುತ್ತಿರುವ ವಿಜ್ಞಾನಿಗಳು ಅನೇಕ ಸಂದರ್ಭಗಳಲ್ಲಿ ತಮ್ಮ ವೈಯಕ್ತಿಕ ಅಭಿಪ್ರಾಯಗಳನ್ನು ಬಹಿರಂಗಪಡಿಸದೇ ಇರಬಹುದು. ಆದರೆ, ದೇಶದ ಮುಂದಿರುವ ಜಟಿಲವಾದ ಸಮಸ್ಯೆಗಳ ಬಗ್ಗೆ ವಿಜ್ಞಾನಿಗಳ ಪರಿಣತ ಸಂಸ್ಥೆಗಳು (ಅಕಾಡೆಮಿಗಳು) ಸ್ಪಂದಿಸುವುದು ಮತ್ತು ಸ್ಪಷ್ಟ ಅಭಿಪ್ರಾಯ ನೀಡುವುದು ಅಗತ್ಯ. ಈಗಾಗಲೇ ಹಾಗೆ ಮಾಡಿಲ್ಲದಿದ್ದರೆ ಇನ್ನಾದರೂ ಅದನ್ನು ಮಾಡಬೇಕು.

**ಸಂ :** ಪಾಶ್ಚಾತ್ಯ ದೇಶಗಳಲ್ಲಿ ಪ್ರತಿಭಾವಂತ ವಿಜ್ಞಾನಿಗಳಾದ ಲೈನಸ್ ಪಾಲಿಂಗ್ ಜೆ.ಡಿ. ಬರ್ನಾಲ್, ಜೋಲಿಯೊ ಕ್ಯೂರಿ, ಐನ್‌ಸ್ಟೈನ್ ಮುಂತಾದವರು ಪರಮಾಣು ಬಾಂಬುಗಳ ತಯಾರಿಕೆಗೆ ವಿರೋಧ ವ್ಯಕ್ತಪಡಿಸಿದ್ದಾರೆ. ಶಾಂತಿ ಚಳವಳಿಗಳಲ್ಲಿ ಪಾಲ್ಗೊಂಡಿದ್ದಾರೆ. ಭಾರತದಲ್ಲಿ ಕೇವಲ ಬೆರಳೆಣಿಸುವಷ್ಟು ವಿಜ್ಞಾನಿಗಳು ಮಾತ್ರ ಪರಮಾಣು ಬಾಂಬುಗಳ ತಯಾರಿಕೆಯ ವಿರುದ್ಧ ಅಭಿಪ್ರಾಯ ಮಂಡಿಸಿದ್ದಾರೆ. ಇದೊಂದು ವಿಷಾದದ ಸಂಗತಿಯಲ್ಲವೇ ?

**ರಾವ್ :** ವಿಜ್ಞಾನಿಗಳು ನೈತಿಕ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು ಅವಶ್ಯಕವಾಗಿದೆ. ಬಹುತೇಕ ವಿಜ್ಞಾನಿಗಳು ಸರ್ಕಾರೀ ಸಂಶೋಧನಾಲಯಗಳಲ್ಲಿ ಹುದ್ದೆಯಲ್ಲಿರುವುದರಿಂದ ಪರಮಾಣು ಬಾಂಬುಗಳ ವಿರುದ್ಧ ಹೇಳಿಕೆಯನ್ನು ನೀಡಿಲ್ಲದಿರಬಹುದು. ಏನೇ ಆಗಲಿ, ಪರಮಾಣು ಬಾಂಬುಗಳಿಂದಾಗಬಹುದಾದ ಅಪಾರ ಹಾನಿಯನ್ನು ಪರಿಗಣಿಸಿ, ಇವುಗಳ ನಿರ್ಮಾಣಕ್ಕೆ ತಡೆಯೊಡ್ಡುವುದು ದೇಶದ [illegible]

**ಸಂ :** ಇತ್ತೀಚಿನ ವರ್ಷಗಳಲ್ಲಿ ವಿದ್ಯಾರ್ಥಿಗಳು ವೈದ್ಯಕೀಯ ಹಾಗೂ ಇಂಜಿನಿಯರಿಂಗ್ ಪದವೀಧರರಾಗಲು ಇಚ್ಛಿಸುತ್ತಾರೆ. ಶುದ್ಧ ವಿಜ್ಞಾನದ ಕಡೆಗೆ ಅವರ ಒಲವಿಲ್ಲ. ಬಿ. ಎಸ್‌ಸಿ. ಎಂ. ಎಸ್‌ಸಿ.ಗೆ ವಿದ್ಯಾರ್ಥಿಗಳೇ ಇಲ್ಲದಿರಬಹುದು. ಇದು ಆತಂಕದ ಸಂಗತಿಯಲ್ಲವೇ ? ಈ ಸಮಸ್ಯೆಯನ್ನು ಹೇಗೆ ಬಿಡಿಸಬಹುದು ?

**ರಾವ್ :** ಶುದ್ಧ ವಿಜ್ಞಾನದ ಮಟ್ಟವನ್ನು ಹೆಚ್ಚಿಸುವುದರ ಬದಲು ಎಲ್ಲೆಲ್ಲೂ ಐ.ಟಿ. (ಮಾಹಿತಿ ತಂತ್ರಜ್ಞಾನ) ವಿಜೃಂಭಿಸುತ್ತಿದೆ. ಅಮೆರಿಕ ಅಂಥಾ ದೇಶಗಳು ಸಾಕಷ್ಟು ಅಭಿವೃದ್ಧಿ ಹೊಂದಿದ್ದು ಮಾಹಿತಿ ತಂತ್ರಜ್ಞಾನದ ಕಡೆ ಸಂಪೂರ್ಣ ಆಸ್ಥೆ ನೀಡಬಹುದು. ಆದರೆ, ಭಾರತದಲ್ಲಿ ವಿಜ್ಞಾನ, ತಂತ್ರಜ್ಞಾನ ಮತ್ತು ಕೈಗಾರಿಕೆಗಳು ಇನ್ನೂ ಬಲವಾಗಬೇಕು. ಈ ಕ್ಷೇತ್ರಗಳಲ್ಲಿ ನಾವು ಮುಂದುವರಿಯದಿದ್ದರೆ ನಮಗೆ ಭವಿಷ್ಯವೇ ಇಲ್ಲದಂತಾಗುತ್ತದೆ. ಮಾಹಿತಿ ತಂತ್ರಜ್ಞಾನಕ್ಕೆ ಉತ್ತೇಜನ ನೀಡಬೇಕು, ಆದರೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಕಡೆಗಣಿಸಬಾರದು. ಇದು ಬಹಳ ಅಪಾಯಕಾರಿ ಘಟ್ಟ. ಇನ್ನು ೧೦ ವರ್ಷಗಳಲ್ಲಿ ದೇಶದಲ್ಲಿ ವಿಜ್ಞಾನ ಹಾಗೂ ಇಂಜಿನಿಯರಿಂಗ್ ಕ್ಷೇತ್ರಗಳಲ್ಲಿ ಪರಿಣತರ ಅಪಾರವಾದ ಕೊರತೆಯಾಗಬಹುದು. ಈ ನಿಟ್ಟಿನಲ್ಲಿ ನಾನು ಭಾರತದ ವಿಜ್ಞಾನ ಮತ್ತು ತಂತ್ರಜ್ಞಾನದ ವಿಭಾಗದ ಮಂತ್ರಿಗಳಿಗೆ ದೀರ್ಘಪತ್ರವನ್ನು ಬರೆದಿದ್ದೇನೆ. ಈ ವಿಷಯದಲ್ಲಿ ಮುಂದುವರಿಯದೇ ಫಲಜ್ಯೋತಿಷ್ಯ, ಪೂಜಾರಿಗಳ ತರಬೇತಿಗೆ ಆದ್ಯತೆ ನೀಡುವುದು ಸಾಧುವಲ್ಲ.

**ಸಂ :** ನೀವು ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರಾಗಿ ಆಡಳಿತಗಾರರಾಗಿದ್ದಾಗಲೂ ಪ್ರತಿದಿನ ೧೨ ತಾಸುಗಳನ್ನು ಸಂಶೋಧನೆಗೆ ಮೀಸಲಾಗಿಟ್ಟಿದ್ದು ತಿಳಿದಿದೆ. ಆಡಳಿತ ಮತ್ತು ಸಂಶೋಧನೆ ಎರಡನ್ನೂ ಸಮರ್ಪಕವಾಗಿ ನಿರ್ವಹಿಸಿದ್ದು ಹೇಗೆ ?

**ರಾವ್ :** ನನ್ನ ಮಟ್ಟಿಗೆ ಹೇಳುವುದಾದರೆ, ನಾನೆಂದೂ ಸರ್ಕಾರದ ವ್ಯವಸ್ಥೆಯಲ್ಲಿ ಆಡಳಿತಗಾರನಾಗಿರಲಿಲ್ಲ. ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕನಾಗಿದ್ದ ಕಾಲದಲ್ಲೂ ಉತ್ತಮ ಸಂಶೋಧನೆಗಳನ್ನು ಮಾಡಿದೆ. ಸಂಶೋಧನೆ ಮತ್ತು ಬೋಧನೆ ಎರಡನ್ನೂ ಮುಖ್ಯ ಆದ್ಯತೆಯಾಗಿ ಸ್ವೀಕರಿಸಿದ್ದೇನೆ. ಇದು ನನ್ನ ಜೀವನದ ಆದರ್ಶ. ಇತರ ಅನೇಕ ಸಂಶೋಧಕರಿಗೆ ಆಡಳಿತಗಾರರಾಗಬೇಕೆಂಬ ಹಂಬಲವಿರುತ್ತದೆ. ಹೀಗಾಗಿ, ಅವರು ಸಂಶೋಧನೆಗೆ ಎರಡನೆಯ ಸ್ಥಾನ ನೀಡುತ್ತಾರೆ. ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರಾಗಿ ಮೂರನೆಯ ಸಲ ಇರಬೇಕೆಂಬ ಒತ್ತಾಯ ಬಂತು, ಅದನ್ನು ನಾನು ತಿರಸ್ಕರಿಸಿದೆ.

**ಸಂ :** ಭಾರತ ಸರ್ಕಾರ ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿದ ನಂತರ ಪೇಟೆಂಟ್ ಮಸೂದೆಯನ್ನು ಬದಲಾಯಿಸಿದೆ. ಇದರಿಂದ ನಮ್ಮ ದೇಶಕ್ಕೆ ಯಾವ ಪರಿಣಾಮವಾದೀತು ?



ಜವಹರಲಾಲ್ ನೆಹರು ಉನ್ನತ ವೈಜ್ಞಾನಿಕ ಸಂಶೋಧನಾಲಯ



*ಸಂದರ್ಶಕರೊಂದಿಗೆ ಡಾ॥ ಸಿ. ಎನ್. ಆರ್. ರಾವ್*

**ರಾವ್** : ಪೇಟೆಂಟ್ ಮಸೂದೆಯ ಪ್ರಶ್ನೆಗಿಂತ ಉದಾರೀಕರಣ (ಜಾಗತೀಕರಣ)ದ ಬಗ್ಗೆ ವಿಚಾರ ಮಾಡುವುದು ಅಗತ್ಯ. ಪೇಟೆಂಟ್ ಮಾರ್ಪಾಡು ಉದಾರೀಕರಣದ ಒಂದು ಮುಖ. ಉದಾರೀಕರಣದಿಂದ ನಮ್ಮ ಕೈಗಾರಿಕೆಗಳಿಗೆ, ಕೃಷಿಗೆ ಉಂಟಾಗುವ ಸಮಗ್ರ ಪರಿಣಾಮಗಳನ್ನು ವಿಶ್ಲೇಷಿಸುವುದರ ಮೊದಲೇ ತೀರ್ಮಾನವನ್ನು ತೆಗೆದುಕೊಂಡಿರುವುದು ನಿಜಕ್ಕೂ ಆಘಾತವೆನಿಸುತ್ತದೆ. ನಮ್ಮ ಉದ್ಯಮಗಳಿಗೆ ರಕ್ಷಣೆ ನೀಡುವುದರ ಬದಲು ಎಲ್ಲವನ್ನೂ ಆಮದು ಮಾಡಿಕೊಳ್ಳುವ ಪ್ರವೃತ್ತಿ ವಿನಾಶಕ್ಕೆ ದಾರಿಯಾಗುತ್ತದೆ. ನಮ್ಮ ಸಿ-ಡಾಟ್ ಸುಮಾರು ಉತ್ತಮವಾಗಿಯೇ ಇದೆ. ಅದನ್ನು ಸುಧಾರಿಸುವುದರ ಬದಲು ವಿದೇಶೀ ಕಂಪೆನಿಗಳಿಗೆ ಆಹ್ವಾನ ನೀಡುವುದು ಜಾಣತನವಲ್ಲ. ದಿಢೀರೆಂದು ಉದಾರೀಕರಣದ ನೆಪದಲ್ಲಿ ಸಾರಾಸಗಟು ಬದಲಾವಣೆ ನಮ್ಮ ದೇಶದ ಕೈಗಾರಿಕೆಗೆ ಕುತ್ತಾಗುತ್ತದೆ. ನಮ್ಮ ದೇಶದಲ್ಲಿ ಪೇಟೆಂಟ್ ತೆಗೆದುಕೊಳ್ಳುವುದು ಅಷ್ಟೇನೂ ಸುಲಭವಲ್ಲ. ಅಂತರರಾಷ್ಟ್ರೀಯ ಪೇಟೆಂಟ್ ಅನ್ನು ತೆಗೆದುಕೊಳ್ಳಲು ಸುಮಾರು ೧೦,೦೦೦ ಡಾಲರುಗಳಷ್ಟು ಹಣ ಖರ್ಚಾಗುತ್ತದೆ. ನಮ್ಮ ಸಂಶೋಧನಾಲಯಗಳಲ್ಲಿ ಅಷ್ಟು ಹಣ ಲಭ್ಯವಿರುವುದಿಲ್ಲ. ನಮ್ಮ ಔಷಧ ತಯಾರಿಸುವ ಕಂಪೆನಿಗಳು ಅತ್ಯಂತ ಕಡಿಮೆ ಬೆಲೆಯ ಔಷಧಗಳನ್ನು ತಯಾರಿಸುವುದರಿಂದ ಬಡವರಿಗೆ ತೊಂದರೆಯಾಗುವುದಿಲ್ಲ. ಉದಾರೀಕರಣ ಮತ್ತು ವಿದೇಶೀ ಕಂಪೆನಿಗಳು ಕಾಲಿಟ್ಟ ನಂತರ ಸ್ಥಿತಿ ಸಂಪೂರ್ಣವಾಗಿ ಬದಲಾಯಿಸಬಹುದು. ಹೀಗಾಗಿ, ನಮ್ಮ ದೇಶೀಯ ತಂತ್ರಜ್ಞಾನಗಳು ಮೂಲೆಗುಂಪಾಗುತ್ತವೆ. ಭಾರತ ಎದುರಿಸುತ್ತಿರುವ ಈ ವಿಷಮ ಸ್ಥಿತಿಯ ಬಗ್ಗೆ ಕೇಂದ್ರ ಸರ್ಕಾರ ನಿರ್ಲಿಪ್ತವಾಗಿರುವುದು ವಿಷಾದಕರ.

ದಿಢೀರ್ ಬದಲಾವಣೆಯನ್ನು ಮಾಡಲು ಹೊರಟ ಗೊರ್ಬಚೇವ್ ಸೋವಿಯತ್ ಒಕ್ಕೂಟವನ್ನೇ ನಾಶಪಡಿಸಿದ. ರಷ್ಯಾದಲ್ಲಿ ಎಲ್ಲರೂ ಹೆಚ್ಚಾಗಿ ದ್ವೇಷಿಸುವ ರಾಜಕಾರಣಿಯೇ ಗೊರ್ಬಚೇವ್ ! ನಮ್ಮಲ್ಲಿ ನೂರಾರು ಹೊಸ ಮಾದರಿ ಕಾರುಗಳನ್ನು ಆಮದು ಮಾಡಿಕೊಳ್ಳುವ ಅಗತ್ಯವಿದೆಯೇ ? ವಿದೇಶೀ ಬಂಡವಾಳವನ್ನು ಯಾವ ಕ್ಷೇತ್ರಗಳಲ್ಲಿ ತೊಡಗಿಸಬೇಕೆಂಬುದನ್ನು ವಿಚಾರ ಮಾಡಬೇಕು. ನಮ್ಮ ಕೈಗಾರಿಕೆಗಳು, ವಿಜ್ಞಾನ ಮತ್ತು ತಂತ್ರಜ್ಞಾನ ಅಭಿವೃದ್ಧಿಯಾಗುವ ದಾರಿಯನ್ನು ನಾವು ಸ್ಪಷ್ಟವಾಗಿ ಗುರುತಿಸಬೇಕು. ದೇಶೀಯ ಕೈಗಾರಿಕೋದ್ಯಮಿಗಳಿಗೆ ಉತ್ತೇಜನ ನೀಡಬೇಕು. ಅಂಬಾನಿಯಂಥವರು ನಮ್ಮ ದೇಶಕ್ಕೆ ಅಗತ್ಯ. ಈತ ಸುಮಾರು ೨೦,೦೦೦ ಕೋಟಿ ರೂ.ಗಳಷ್ಟು ಬಂಡವಾಳ ತೊಡಗಿಸಿ ರಾಸಾಯನಿಕ ಕೈಗಾರಿಕೆಗಳನ್ನು ಹುಟ್ಟುಹಾಕಿ ವಿದೇಶೀ ಕಂಪೆನಿಗಳಾದ ಡುಪಾಂಟ್ ಮತ್ತು ಐ.ಸಿ.ಐ.ಗಳನ್ನು ಸದೆಬಡಿದ.

**ಸಂ** : ಶಿಕ್ಷಣದ ಬಗ್ಗೆ, ಅದರಲ್ಲೂ ಕಾಲೇಜು ಶಿಕ್ಷಣದ ಬಗ್ಗೆ, ನೀವು ಅನೇಕ ವೇದಿಕೆಗಳಿಂದ ಸ್ಪಷ್ಟ ಹಾಗೂ ಗಂಭೀರವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದು ಸರಿಯಷ್ಟೆ. ನಿಮ್ಮ ನೇತೃತ್ವದಲ್ಲಿ ಭಾರತೀಯ ವಿಜ್ಞಾನ ಮಂದಿರದಲ್ಲಿ ಪದವೀಧರರಾದ ವಿದ್ಯಾರ್ಥಿಗಳನ್ನು ನೇರವಾಗಿ ಪಿಎಚ್.ಡಿ.ಗೆ ತರಬೇತಿ ನೀಡುವ ಹೊಸ ನೀತಿಯನ್ನು ಜಾರಿಗೆ ತಂದಿದ್ದೀರಿ. ಸದ್ಯದಲ್ಲಿ ಕಾಲೇಜುಗಳಲ್ಲಿ ವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ಆರಿಸಿಕೊಳ್ಳುವ ವಿದ್ಯಾರ್ಥಿಗಳ ಸಂಖ್ಯೆ ಕ್ಷೀಣಿಸುತ್ತಿದೆ. ಈ ಪರಿಸ್ಥಿತಿಯನ್ನು ಬದಲಾಯಿಸುವ ಬಗೆ ಹೇಗೆ ?

**ರಾವ್** : ನಮ್ಮ ಶಿಕ್ಷಣದ ಗುಣಮಟ್ಟ ವಿಪರೀತವಾಗಿ ಇಳಿದಿದೆ. ಇದಕ್ಕೆ ಸೌಲಭ್ಯಗಳ ಕೊರತೆಯು ಒಂದು ಮುಖ್ಯ ಕಾರಣವಾಗಿದೆ. ವಿಜ್ಞಾನ ವಿಭಾಗಕ್ಕೆ ಮೀಸಲಾಗಿರುವ ರಾಷ್ಟ್ರೀಯ ಬಜೆಟ್ ಕನಿಷ್ಠವಾಗಿದೆ. ಬೆಂಗಳೂರಿನಲ್ಲಿರುವ ಪ್ರತಿಷ್ಠೆಯ ಕಾಲೇಜು ಸಹ ಪರದೇಶಗಳಲ್ಲಿರುವ ಸಾಮಾನ್ಯ ಕಾಲೇಜೊಂದರ ಮಟ್ಟದಲ್ಲಿಲ್ಲ. ಭಾರತೀಯ ವಿಜ್ಞಾನ ಮಂದಿರದಲ್ಲಿ ಹಲವು ವರ್ಷಗಳ ಹಿಂದೆ ಮೂಲಭೂತ ಸೌಕರ್ಯಗಳ ಅತೀವ ಕೊರತೆ ಇದ್ದುದು ನನ್ನ ಗಮನಕ್ಕೆ ಬಂತು. ವೈಜ್ಞಾನಿಕ ಉಪಕರಣಗಳಿಗೆ ಧಾರಾಳವಾಗಿ ಧನ ಸಹಾಯ ಒದಗಿಸಬೇಕು. ಈಗಿರುವ ಪರಿಸ್ಥಿತಿಯನ್ನು ಅವಲೋಕಿಸಿದರೆ ಶಿಕ್ಷಣದ ಭವಿಷ್ಯ ಕರಾಳವಾಗಿದೆ. ಶೈಕ್ಷಣಿಕ ವ್ಯವಸ್ಥೆ ಶಿಥಿಲವಾಗಿದೆ. ರಾಜೀವ್ ಗಾಂಧಿ ಪ್ರಧಾನಿಯಾಗಿದ್ದ ಕಾಲದಲ್ಲಿ ವಿಜ್ಞಾನಿಗಳು ಏನಾದರೂ ಸಲಹೆಗಳನ್ನು ನೀಡಿದರೆ ಆಸ್ಥೆಯಿಂದ ಗಮನಿಸುವ ಪರಿಪಾಠವಿತ್ತು. ಈಗಿನ ಸರ್ಕಾರದಲ್ಲಿ ಬುದ್ಧಿಜೀವಿಗಳ ಅಭಿಪ್ರಾಯಗಳಿಗೆ ಬೆಲೆಯೇ ಇಲ್ಲದಂತಾಗಿದೆ. ಮಾಹಿತಿ ತಂತ್ರಜ್ಞಾನಕ್ಕಂತೂ ಚುರುಕಾದ ಮಿದುಳು ಅಗತ್ಯವಿಲ್ಲ. ಸತ್ಪರಂಪರೆಗಳು ನಷ್ಟವಾಗುತ್ತಿವೆ. ದಶಕಗಳಿಂದ ರಾಷ್ಟ್ರದಲ್ಲಿ ವಿಜೃಂಭಿಸುತ್ತಿದ್ದ ಮೌಲ್ಯಗಳಿಗೆ ಇಂದು ಬೆಲೆ ಇಲ್ಲದಂತಾಗಿದೆ. ವಿಜ್ಞಾನಿಗಳ ಸಮುದಾಯ, ಅಂದರೆ ಅಕಾಡೆಮಿಗಳು, ಈ ಸಂದಿಗ್ಧ ಕಾಲದಲ್ಲಿ ಎಚ್ಚೆತ್ತು ದಿಟ್ಟತನದಿಂದ ಅಭಿಪ್ರಾಯಗಳನ್ನು ಮಂಡಿಸಬೇಕು. ವೈಯಕ್ತಿಕ ಆಸೆ ಆಕಾಂಕ್ಷೆಗಳು ಪ್ರಗತಿಪರ ಯೋಚನೆಗಳಿಗೆ ಅಡ್ಡಿಯಾಗಬಾರದು.

**ಸಂ** : ಭಾಟ್ನಗರ್ ಪ್ರಶಸ್ತಿ ಮುಂತಾದ ಗೌರವಗಳಿಗೆ ಆಯ್ಕೆ ಎಷ್ಟು ವಸ್ತುನಿಷ್ಠ ? ಪ್ರಶಸ್ತಿ ಪಡೆದವರು ಆಮೇಲೆ ಸಾಧಿಸಿದ ಹೆಗ್ಗಳಿಕೆಗಳು ಇವೆಯೇ ?

**ರಾವ್** : ಭಾಟ್ನಗರ್ ಪ್ರಶಸ್ತಿ ಪಡೆದ ಯುವ ವಿಜ್ಞಾನಿಗಳು ಅನಂತರದ ವರ್ಷಗಳಲ್ಲಿ ಸಾಕಷ್ಟು ಉತ್ಸಾಹದಿಂದ ಸಂಶೋಧನೆಗಳನ್ನು ನಡೆಸುವುದು ಸಾಮಾನ್ಯ ಅನುಭವ. ಭಾಟ್ನಗರ್ ಪ್ರಶಸ್ತಿ ಪಡೆದ ವಿಜ್ಞಾನಿಗಳು ಒಳ್ಳೆಯ ವಿಜ್ಞಾನಿಗಳು. ಆದರೆ, ಮಹಾವಿಜ್ಞಾನಿಗಳಾಗದಿರಬಹುದು. ಅನೇಕ ವೇಳೆ ಸಂಶೋಧನಾ ಸಂಸ್ಥೆಗಳ ಮೆಚ್ಚಿಗೆ ಪಡೆಯಬಹುದು. ಬ್ಲಾಕೆಟ್ ಅವರು ಹೇಳಿರುವಂತೆ ದ್ವಿತೀಯ ದರ್ಜೆಯ ವಿಜ್ಞಾನಿಗಳು ಒಳ್ಳೆಯ ವಿಜ್ಞಾನಿಗಳಾಗುವಂತೆ ಸಂಸ್ಥೆಗಳು ಪ್ರೇರೇಪಿಸಬೇಕು. ನಮ್ಮ ದೇಶದಲ್ಲೂ ಉನ್ನತಮಟ್ಟದ ವಿಜ್ಞಾನ ಹಾಗೂ ತಂತ್ರಜ್ಞಾನದ ಸಂಶೋಧನಾ ಸಂಸ್ಥೆಗಳಿವೆ. ಹಲವನ್ನು ಹೆಸರಿಸಬಹುದು : ಭಾರತೀಯ ವಿಜ್ಞಾನ ಮಂದಿರ, ಪುಣೆಯಲ್ಲಿರುವ ರಾಷ್ಟ್ರೀಯ ರಾಸಾಯನಿಕ ಸಂಶೋಧನಾಲಯ, ಟಾಟಾ ಮೂಲಭೂತ ಸಂಶೋಧನಾಲಯ, ಹೈದರಾಬಾದಿನ ಅಣುಜೀವ ವಿಜ್ಞಾನದ ಸಂಸ್ಥೆ ಇತ್ಯಾದಿ. ಸಂಶೋಧನಾ ಕ್ಷೇತ್ರವು ಸುಧಾರಿಸಲು ಸೂಕ್ತ ವಾತಾವರಣವನ್ನು ದೇಶದಲ್ಲಿ ಕಲ್ಪಿಸಬೇಕು. ಜ್ಞಾನ ಸಂಪಾದನೆಗೆ ಉತ್ತೇಜನವಿರಬೇಕು.

**ಸಂ** : ಪ್ರಾಚೀನ ಭಾರತದಲ್ಲಿ ಪ್ರಸಿದ್ಧ ವಿಜ್ಞಾನಿಗಳಾದ ಸುಶ್ರುತ, ಆರ್ಯಭಟ, ಭಾಸ್ಕರ ಮುಂತಾದವರು ಕಾಣಸಿಕೊಳ್ಳುತ್ತಾರೆ. ಈಚಿನ ಶತಮಾನಗಳಲ್ಲಿ ಭಾರತ ಪಾಶ್ಚಾತ್ಯ ದೇಶಗಳಂತೆ ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಏಕೆ ಮುಂದುವರಿಯಲಿಲ್ಲ ?

**ರಾವ್** : ಈ ಸ್ಥಿತಿಗೆ ಅನೇಕ ಕಾರಣಗಳಿವೆ. ಭಾರತ ಬ್ರಿಟಿಷರ ಆಳ್ವಿಕೆಯಲ್ಲಿದ್ದುದು ಒಂದು ಪ್ರಮುಖ ಕಾರಣ. ಬ್ರಿಟಿಷ್ ಅಧೀನದಲ್ಲಿದ್ದಾಗ ಕೇವಲ ಕಾರಕೂನರನ್ನು

> *ನಮ್ಮಲ್ಲಿ ನಿದರ್ಶನಕ್ಕಿಂತ ಪ್ರದರ್ಶನವೇ ಹೆಚ್ಚು. ಜವಾನನಿಂದ ಹಿಡಿದು ರಾಷ್ಟ್ರಪತಿಯವರೆಗೆ ಹಲವರು ತಮ್ಮ ತಲೆಕೂದಲನ್ನು ದೇವರಿಗೆ ಕೊಡುತ್ತಾರೆ. ಮಂಡೆ ಬೋಳಾಗುವುದಕ್ಕಿಂತ ಮನ ಬೋಳಾಗುವುದು ಮುಖ್ಯ. ಹೀಗೆಯೇ ಸಾಕಷ್ಟು ಮೂಢನಂಬಿಕೆಗಳ ಪ್ರಸ್ತಾಪವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದು ಸೂಕ್ತ. ಭಯ ಮತ್ತು ವೈಚಾರಿಕತೆಯ ಅಭಾವವೇ ಮೂಢನಂಬಿಕೆಗಳ ಬಂಡವಾಳ.*
>
> **- ಡಾ॥ ಎಚ್. ನರಸಿಂಹಯ್ಯ**

ತಯಾರಿಸುವ ಉದ್ದೇಶದಿಂದ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲಾಯಿತು. ಭಾರತೀಯ ವಿಜ್ಞಾನ ಮಂದಿರ ಸ್ಥಾಪನೆಗೆ ಅಂದಿನ ವೈಸ್‌ರಾಯ್ ಆಗಿದ್ದ ಲಾರ್ಡ್ ಕರ್ಜನ್ ಒಪ್ಪಲಿಲ್ಲ. ಆಶ್ಚರ್ಯಕರವಾದ ಸಂಗತಿಯೆಂದರೆ, ಲಂಡನ್ನಿನ ರಾಯಲ್ ಸೊಸೈಟಿ ಟಾಟಾ ವಿಜ್ಞಾನ ಮಂದಿರ ಅಗತ್ಯವೆಂದು ಪಟ್ಟುಹಿಡಿಯಿತು. ಸ್ವಾತಂತ್ರ್ಯ ಪೂರ್ವದಲ್ಲಿ, ಅದರಲ್ಲೂ ೨೦ನೆಯ ಶತಮಾನದಲ್ಲಿ, ಭಾರತದಲ್ಲಿ ಅನೇಕ ಮೇಧಾವಿ ವಿಜ್ಞಾನಿಗಳು ಸಂಶೋಧನೆಗಳನ್ನು ಮಾಡಿ ಕೀರ್ತಿ ಗಳಿಸಿದ್ದಾರೆ. ಜಗದೀಶ ಚಂದ್ರ ಬೋಸ್, ಎಸ್. ಎನ್. ಬೋಸ್, ರಾಮಾನುಜನ್, ಕೆ. ಎಸ್. ಕೃಷ್ಣನ್, ಸಿ. ವಿ. ರಾಮನ್ ಅವರ ಕೊಡುಗೆಗಳು ಅಸಾಧಾರಣ ವಾಗಿದ್ದುವು. ಜಗದೀಶ ಚಂದ್ರ ಬೋಸ್ ಅವರು ತಂತಿರಹಿತ ಸಂದೇಶಗಳನ್ನು ಕುರಿತು ಪ್ರಚಂಡ ಸಾಧನೆ ನಡೆಸಿದ್ದರು. ಆದರೆ, ಲಂಡನ್ನಿನಲ್ಲಿ ಅವರ ಪ್ರಯೋಗಗಳಿಗೆ ಮನ್ನಣೆ ದೊರೆಯದೆ ಅವರು ಹತಾಶರಾದರು. ಮಾರ್ಕೊನಿಗೆ ಮುಂಚೆಯೇ ಬೋಸ್ ಅವರು ತಂತಿರಹಿತ ಸಂದೇಶಗಳ ಸಂವಹನ ಕಂಡು ಹಿಡಿದಿದ್ದರು ಎಂಬುದನ್ನು ನಾವು ಮರೆಯಬಾರದು. ನಮ್ಮ ವಿಜ್ಞಾನಿಗಳಿಗೆ ಆಡಳಿತದ ಚುಕ್ಕಾಣಿ ಹಿಡಿಯ ಬೇಕೆಂಬ ಹಂಬಲ, ಆಸೆ ಬಹಳವಾಗಿರುವುದು ಉನ್ನತ ಸಂಶೋಧನೆಗಳಾಗದಿರಲು ಮತ್ತೊಂದು ಕಾರಣ. ಆಡಳಿತಗಾರರಾಗಬೇಕೆಂದು ಆಸೆಪಡುವುದು ಒಂದು ಕಾಯಿಲೆ. 'ದಿಲ್ಲಿ ಬೀಮಾರಿ' ಎಂದು ಇದನ್ನು ಕರೆಯಬಹುದು.

**ಸಂ :** ಖಾಸಗಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಸಂಶೋಧನೆ ಯಾವ ಮಟ್ಟದಲ್ಲಿದೆ ?

**ರಾವ್ :** ಖಾಸಗಿ ಸಂಶೋಧನೆಗಳು ಇದುವರೆಗೂ ಬಹಳಷ್ಟು ಕೆಳಮಟ್ಟದಲ್ಲಿದ್ದವು. ಆದರೆ, ಇತ್ತೀಚೆಗೆ ಹಲವು ಸಂಸ್ಥೆಗಳು ಸಂಶೋಧನಾ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿವೆ. ಅಂಬಾನಿಯವರ ವೈಜ್ಞಾನಿಕ ಸಂಶೋಧನಾ ಸಂಸ್ಥೆಗಳು ಉತ್ತಮವಾಗಿವೆ. ಜಾಮ್‌ನಗರದಲ್ಲಿ ಅವರು ಉನ್ನತ ಮಟ್ಟದ ರಾಸಾಯನಿಕ ಕೈಗಾರಿಕೆಯನ್ನು ಸ್ಥಾಪಿಸಿದ್ದಾರೆ. ಮಾಹಿತಿ ತಂತ್ರಜ್ಞಾನದ ಕ್ಷೇತ್ರದಲ್ಲಿ ಪ್ರಚಂಡವಾದದ್ದೇನೂ ಇಲ್ಲ. ಇದರಲ್ಲಿ ಮಾಹಿತಿಯೂ ಇಲ್ಲ, ತಂತ್ರಜ್ಞಾನವೂ ಇಲ್ಲ. ಒಂದರ್ಥದಲ್ಲಿ ನಾವು ಕಂಪ್ಯೂಟರ್ ಕೂಲಿಗಳಾಗು ವುದನ್ನು ಹೀಗೆ ಕರೆಯಲಾಗುತ್ತಿದೆ, ಅಷ್ಟೆ. ವಿಜ್ಞಾನದಲ್ಲಿ ನಾವು ಪ್ರಚಂಡರಾದರೆ ಮಾತ್ರ ನಮಗೆ ಉಳಿಗಾಲ ವಿದೆ, ಭವಿಷ್ಯವಿದೆ.

**ಸಂ :** ಕರ್ನಾಟಕ ರೈತ ಸಂಘ ಮತ್ತಿತರ ಸಂಘ ಸಂಸ್ಥೆಗಳು ಮಾನ್ಸಾಂಟೊ ಕಂಪೆನಿಯ ವಿರುದ್ಧ ಚಳುವಳಿಯನ್ನೇ ಹೂಡಿದ್ದಾರೆ. ಈ ನಿಟ್ಟಿನಲ್ಲಿ ನಿಮ್ಮ ಅಭಿಪ್ರಾಯವೇನು ?

**ರಾವ್ :** ಮಾನ್ಸಾಂಟೊ ಒಳ್ಳೆಯ ಕಂಪೆನಿಯಲ್ಲ. ಅದರೊಡನೆ ವ್ಯವಹಾರ ತೊಂದರೆಗೀಡುಮಾಡುತ್ತದೆ. ಅದು 'ಸತ್ಸಂಗ'ವಲ್ಲ. ಭಾರತೀಯ ವಿಜ್ಞಾನ ಮಂದಿರದ ಆವರಣದಲ್ಲಿರುವ ಕಟ್ಟಡವನ್ನು ಈ ಕಂಪೆನಿಗೆ ತೆರವು ಮಾಡಿಕೊಟ್ಟಿರುವುದು ಸರಿಯಲ್ಲ. ನಾನು ಡೈರೆಕ್ಟರ್ ಆಗಿದ್ದಾಗ ಈ ಕಟ್ಟಡವನ್ನು ಶಾಶ್ವತ ಪ್ರದರ್ಶನಗಳಿಗೆ, ಪೋಸ್ಟರ್ ಪ್ರದರ್ಶನಗಳಿಗೆ ಮೀಸಲಾಗಿಡುವ ಉದ್ದೇಶವನ್ನು ಹೊಂದಿದ್ದೆ. ಅಮೆರಿಕಾದ ಜನರಲ್ ಎಲೆಕ್ಟ್ರಿಕ್ ಕಂಪೆನಿಯವರು ಸಂಶೋಧನೆ ಮತ್ತು ಅಭಿವೃದ್ಧಿಗೆ (R ಮತ್ತು D) ಹೊಸದಾಗಿ ಬೆಂಗಳೂರಿನಲ್ಲಿ ಬೃಹತ್ ಪ್ರಮಾಣದಲ್ಲಿ ಸಂಸ್ಥೆ ಆರಂಭಿಸಿರುವುದು ಸ್ವಾಗತಾರ್ಹ. ಸುಮಾರು ೧೦೦೦ ವಿಜ್ಞಾನಿಗಳು ಈ ಕಂಪೆನಿಯಲ್ಲಿ ಕಾರ್ಯನಿರತರಾಗುವ ಅವಕಾಶವಿದೆ. ನಮ್ಮ ದೇಶದಲ್ಲಿ R ಮತ್ತು Dಗೆ ಇದು ಸದವಕಾಶ. ಆದರೆ ಕಂಪೆನಿಯವರು ಖರ್ಚುಮಾಡುವ ಪ್ರತಿಯೊಂದು ಡಾಲರ್‌ನಿಂದ ಅವರಿಗೆ ೧೦೦ರಿಂದ ೧೦೦೦ ಡಾಲರ್‌ಗಳಷ್ಟು ಲಾಭವಾಗಬಹುದು. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ನಮ್ಮ ಯುವ ಜನಾಂಗ ತಮ್ಮ ಸೇವೆಯನ್ನು ಮಾರಿಕೊಳ್ಳುತ್ತಿದ್ದಾರೆ, ಅಷ್ಟೆ. ಅದರಿಂದ ಗಟ್ಟಿ ತಂತ್ರಜ್ಞಾನ ಆವಿಷ್ಕರಿಸುವುದಿಲ್ಲ. ಗಟ್ಟಿ ವಿಜ್ಞಾನ ಮತ್ತು ತಂತ್ರಜ್ಞಾನ ಮೊಳಕೆಯೊಡೆಯಲು ಮಿದುಳು ಮುಖ್ಯ. ಕೇವಲ ಇಂಟರ್‌ನೆಟ್ ಅಥವಾ ಕಂಪ್ಯೂಟರ್‌ನಿಂದ ಇದು ಸಾಧ್ಯವಿಲ್ಲ.

* * *

# ಕಾಳಿದಾಸನ ಚಕ್ರ ಸಿದ್ಧಾಂತ





ನಾನು ಮೊದಲ ಬಾರಿಗೆ ಕಾಳಿದಾಸನ ಮೇಘದೂತವನ್ನು ಓದಿದಾಗ ಅಲ್ಲಿಯ ಉಜ್ಜಯನಿ ಮಾರ್ಗವನ್ನು ಗೆರೆ ಕೊರೆದಿಟ್ಟಂತೆ ವರ್ಣಿಸುವ ಕಾಳಿದಾಸ ಕವಿ ಒಬ್ಬ ಜಾಗ್ರಫಿ ಮಾಸ್ಟರ್ ಆಗಿದ್ದಿರಬಹುದೆ ? ಎನ್ನಿಸಿತ್ತು. ಸಸ್ಯಗಳ ಬಗೆಗೆ ಅವುಗಳು ಚಿಗುರುವ ಫಲಿಸುವ ರೀತಿಗಳನ್ನು ಬಲ್ಲ ಬಾಟನಿಸ್ಟ್ ಇರಬಹುದೆ ? ಎಂದೂ ಅನ್ನಿಸಿತ್ತು. 'ಪುರಾಣಮಿತ್ಯೇವ ನ ಸಾಧು ಸರ್ವಂ' ಎಂದು ಹೇಳಿದ ಈ ಕವಿ ಒಬ್ಬ ವಿಚಾರವಾದಿ ಇದ್ದಿರಬಹುದೆ ಎನ್ನಿಸಿತ್ತು. ಯಾಕೆ ಇಷ್ಟೆಲ್ಲಾ ಅನ್ನಿಸಿಕೊಳ್ಳಲಿಕ್ಕೆ ಹೋದಿ ? ಆತನೊಬ್ಬ 'ಮಹಾನ್ ಕವಿ' ಎಂದೆನಿಸಿದರೆ ಸಾಕಿತ್ತು ಎಂದು ನನ್ನ ಸಂಸ್ಕೃತ ಪ್ರಾಧ್ಯಾಪಕರು ಹೇಳಿದ ಬಳಿಕವೇ ನನಗೆ ನನ್ನ ಅಲ್ಪತನದ ಅರಿವಾದುದು. ಆದರೂ ಕಾಳಿದಾಸ ಕವಿಯ ಒಳಗಿದ್ದ ಒಂದೊಂದೇ ವ್ಯಕ್ತಿತ್ವ ನನ್ನನ್ನು ಆಗಾಗ ಆವರಿಸಿಬಿಟ್ಟಿದ್ದಂತೂ ಸತ್ಯ.

ಭುವನೇಶ್ವರಿ ಹೆಗಡೆ

ಆದರೆ ಜೀವನದ ನಿತ್ಯ ಸತ್ಯವೊಂದನ್ನು ಅತಿ ಸುಲಭವೆಂಬಂತೆ ಹೇಳಿಹೋಗಿರುವ 'ಫಿಲಾಸಫರ್ ಕಾಳಿದಾಸ'ನನ್ನು ಮಾತ್ರ ನಾನು ನಿತ್ಯವೂ ನೆನೆಯುತ್ತೇನೆ. ಮೇಘದೂತ ಕಾವ್ಯದಲ್ಲಿಯೇ ''ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ'' ಎಂದು ಹೇಳಿದ ಕಾಳಿದಾಸ ಜೀವನದ ಕ್ರಮವನ್ನು ಒಂದು ಸದಾ ಉರುಳುವ ಚಕ್ರಕ್ಕೆ ಹೋಲಿಸಿದ್ದಾನೆ. ಅವನ ಈ ಹೇಳಿಕೆಯ ಪ್ರಕಾರ ಸುಖವಾಗಲಿ, ದುಃಖವಾಗಲಿ, ನಗುವಾಗಲಿ, ಅಳುವಾಗಲಿ, ವಿರಹವಾಗಲಿ, ಮಿಲನವಾಗಲಿ ಶಾಶ್ವತವಲ್ಲ. ಲೋಕದಲ್ಲಿ ಯಾರೂ ಬರಿಯ ಸುಖವನ್ನಾಗಲಿ ಬರಿಯ ದುಃಖವನ್ನಾಗಲಿ ಅನುಭವಿಸುವುದಿಲ್ಲ. ಉರುಳುತ್ತಿರುವ ಚಕ್ರದ ಹಲ್ಲುಗಳು ಹೇಗೆ ಮೇಲೆ ಕೆಳಗೆ ಉರುಳುತ್ತಿರುತ್ತವೆಯೋ ಹಾಗೇ ನಮ್ಮ ದೆಸೆಯೂ ಮೇಲೆ ಕೆಳಗೆ ಬದಲಾಗುತ್ತಿರುತ್ತದೆ ಎಂದೂ ಜೀವನದ ಆಗುಹೋಗುಗಳನ್ನು ಚಕ್ರೀಯವಾಗಿ ವರ್ಣಿಸುತ್ತಾನೆ.

ಈ ತನ್ನ ಚಕ್ರಸಿದ್ಧಾಂತವನ್ನು ಆತ ತನ್ನ ಯಾವ ಅನುಭವದ ಆಧಾರದ ಮೇಲೆ ಮಂಡಿಸಿದ್ದ ಎಂಬುದರ ಕುರಿತು ಅನುಮಾನ ಮೂಡುತ್ತದೆ. (ಕವಿಗಳ ಇಂಥ ಹೇಳಿಕೆಗಳೆಲ್ಲ ಅನುಭವದಿಂದಲೇ ಹೊರಬಂದವು ಎಂದು ನಂಬಲಾಗುತ್ತದೆಯಷ್ಟೆ!) ಯಾಕೆಂದರೆ ಕಾಳಿದಾಸನ ಕಾಲದಲ್ಲಿ ಉಪ್ಪರಿಗೆ ಮನೆಗಳೂ, ಮನೆಮನೆಗೆ ಮಿನಿ ಸರೋವರಗಳೂ ಇದ್ದುವೆಂದು ನಂಬಬಹುದೇ ಹೊರತು ಮುನ್ಸಿಪಾಲ್ಟಿ, ಕಾರ್ಪೊರೇಶನ್ ಎಂಬ ಆಡಳಿತ ವ್ಯವಸ್ಥೆಯಾಗಲೀ ನಲ್ಲಿ ನೀರಿನ ವ್ಯವಸ್ಥೆಯಾಗಲಿ ಇದ್ದಂತಿಲ್ಲ. ಇದ್ದಿದ್ದರೆ ಅವನಿಗೆ ಇಂಥ ಒಂದು ಹೇಳಿಕೆಗೆ ಮೂಲ ಅನುಭವ ನಲ್ಲಿಗಳದ್ದೇ ಎಂದು ಥಟ್ಟನೇ ಹೇಳಿಬಿಡಬಹುದಿತ್ತು.

ಆತನಿಗೆ ನಲ್ಲಿಗಳ ವಿಚಾರ ತಿಳಿದಿರಲಿಕ್ಕಿಲ್ಲ. ಆದರೆ ಇಂದಿನ ನಲ್ಲಿಗಳಿಗೆ ಮಾತ್ರ ಅವನ ಮಾತು ತುಂಬಾ ಪ್ರಭಾವ ಬೀರಿವೆ. ಇವತ್ತು ನಲ್ಲಿಯಲ್ಲಿ ನೀರು ಬಂದರೆ ನಾಳೆ ಖಂಡಿತ ಬರುವುದಿಲ್ಲ. ಇವತ್ತು ನೀರು ಬಂತೆಂದು (ಸಂತೋಷಪಟ್ಟು) ಅಷ್ಟೂ ನೀರು ಖರ್ಚು ಮಾಡಿಕೋಬೇಡ. ನಾಳೆ ನೀರಿಲ್ಲದೆ ಪರದಾಡಬೇಕಾಗುತ್ತದೆ. ಆಗ ಅಳಲು ಸಿದ್ಧನಾಗಿರು ಎಂಬ ಕಾರ್ಪೊರೇಶನ್ ಸತ್ಯವನ್ನು ಸಾರಿ ಸಾರಿ ಹೇಳುತ್ತವೆ. ನಲ್ಲಿಗಳೇ ಇಲ್ಲದ ಕಾಲದಲ್ಲಿದ್ದುಕೊಂಡು ಇಂದಿನ ನಲ್ಲಿಗಳಿಗೂ ಅಪ್ಲೈ ಆಗುವ ಸಾರ್ವಕಾಲಿಕ ಸತ್ಯ ಸಿದ್ಧಾಂತವನ್ನು ಬರೆದಿಟ್ಟು ಹೋದ ಕಾಳಿದಾಸ ನಿಜಕ್ಕೂ ಅದ್ಭುತನಲ್ಲವೆ ?

ಜಗತ್ತಿನ ಎಲ್ಲ ಘಟನೆಗಳೂ ಹೀಗೆ ಚಕ್ರದ ಉರುಳುವಿಕೆಯ ಕ್ರಮಕ್ಕೆ ಒಳಪಟ್ಟಿರುತ್ತವೆ ಎಂಬುದು ಅನೇಕರಿಗೆ ಗೊತ್ತೇ ಆಗಲಿಕ್ಕಿಲ್ಲ. ಈ ತಿಂಗಳು ರೇಶನ್ನು ಸಕ್ಕರೆ ಸಿಕ್ಕರೆ ಮುಂದಿನ ತಿಂಗಳು ಸಿಗದಿದ್ದುದಕ್ಕೆ ಏನೇನೋ ಕಾರಣ ಊಹಿಸಿಬಿಡುತ್ತಾರೆ. ಕೋಟಾ ಬಂದಿದ್ದು ಗೊತ್ತೇ ಆಗಲಿಲ್ಲ. ಕ್ಯೂ ತುಂಬಾ ಉದ್ದ ಇತ್ತು. ಬಿಸಿಲಲ್ಲಿ ನಿಲ್ಲಲಾರದೇ ಮನೆಗೆ ಬಂದೆ, ಕ್ಯೂ ಮುಗಿಯುವಷ್ಟರಲ್ಲಿ ಸಕ್ಕರೆ ಮುಗಿದಿತ್ತು.... ಮುಂತಾದ ಕಾರಣಗಳು ಬೇಕಷ್ಟು ಕಂಡುಬಂದರೂ ಅದು ಚಕ್ರನೇಮಿಕ್ರಮದ ಪಾಳಿಯ ಪ್ರಕಾರ ಹಾಗೇ ಆಗಬೇಕಿದ್ದ ಒಂದು ಕ್ರಮ ಅಷ್ಟೆ.

ಹಿಂದಿನ ತಿಂಗಳು ಚಕ್ರದೊಂದಿಗೆ ಮೇಲಕ್ಕೆ ಹೋಗಿದ್ದ ಇವರ ಪಾಳಿ ಚಕ್ರದ ಉರುಳುವಿಕೆಯಿಂದಾಗಿ ಈ ಸಲ ಕೆಳಗೆ ಬಂದಿದೆ ಅಷ್ಟೆ. ಅದಕ್ಕೇ ಈ ತಿಂಗಳು ಸಕ್ಕರೆ ಸಿಕ್ಕಿಲ್ಲ. ಈ ಸರಳ ಸತ್ಯವನ್ನು ಅರ್ಥಮಾಡಿಕೊಳ್ಳದೆ ಸುಮ್ಮನೆ ಸರಕಾರವನ್ನೋ ರೇಶನ್ ಪದ್ಧತಿಯನ್ನೋ ಬೈದರೆ ಕಾಳಿದಾಸ ಕಾವ್ಯಮಯವಾಗಿ ನಗದಿರುತ್ತಾನೆಯೆ ?

ದಿನನಿತ್ಯ ನಮಗರಿವಿಲ್ಲದೇ ಘಟಿಸುವ ಎಷ್ಟೋ ಘಟನೆಗಳ ಮೇಲೆ ಸೂಕ್ಷ್ಮ ನಿಗಾ ಇಟ್ಟರೆ ಚಕ್ರ ಕಾಣದಿದ್ದರೂ ಅದರ ಉರುಳುವಿಕೆಯ ಸದ್ದು ಕೇಳತೊಡಗೀತು. ಇಡೀ ಜಗತ್ತನ್ನೇ ಹಲ್ಲುಗಳೊಳಗೆ ಸಿಕ್ಕಿಸಿಕೊಂಡ ಈ ಚಕ್ರದ ಅಗಾಧತೆಯ ಅರಿವಾದೀತು. ಈ ಚಕ್ರನೇಮಿಕ್ರಮದ ಪ್ರಕಾರ ಇವತ್ತು ಬಡವನಿದ್ದವ ನಾಳೆ ಶ್ರೀಮಂತನಾಗುತ್ತಾನೆ, ಇಂದಿನ ಶ್ರೀಮಂತ ನಾಳೆ ಬಡವ ಎಂದಾಯ್ತು.

ಆದರೆ ನಮ್ಮೀ ಭಾರತವೆಂಬ ಹಿಂದುವರಿಯುತ್ತಿರುವ ರಾಷ್ಟ್ರದಲ್ಲಿ ಬಡವ ಜೀವನದುದ್ದಕ್ಕೂ ಬಡವನಾಗೇ ಸಾಯೋದನ್ನೂ, ಶ್ರೀಮಂತ ಶ್ರೀಮಂತಿಕೆಯ ಬಂಗಲೆಯೊಳಗೇ ಸಾಯೋದನ್ನು ಕಾಣ್ತೇವಲ್ಲ, ಅವರಿಗೆ ಈ ಚಕ್ರ ಅಪ್ಲೈ ಆಗಲ್ವೆ ? ಎಂದು ಕೇಳಬಹುದು. ಕಣ್ಣಿಗೆ ಕಾಣದ ಈ ಚಕ್ರದ ಗಾತ್ರ ಬ್ರಹ್ಮಾಂಡದಷ್ಟು ಎಂದು ನಂಬಲಾಗುತ್ತದೆ. ಉರುಳುತ್ತಿರುವ ಅದರ ತೀರ ಹೊರಭಾಗ ಒಂದು ಸುತ್ತು ಪೂರ್ತಿ ಸುತ್ತುವಷ್ಟರಲ್ಲಿ ಒಂದು ಯುಗವೇ ಕಳೆಯಬಹುದು. ಅದಕ್ಕೇ ಆ ಯುಗದ ಶ್ರೀಮಂತರು ಶ್ರೀಮಂತರಾಗೇ ಇರುವುದು. ಬಡವರು ಪಾಪ ಬಡವರಾಗಿಯೇ ಆಯುಷ್ಯ ಸವೆಸುವುದು. ಇವರೆಲ್ಲ ಚಕ್ರದ ತೀರ ಹೊರ ಹಲ್ಲುಗಳಲ್ಲಿ ಸಿಕ್ಕಿ ಹಾಕಿಕೊಂಡವರು. ಚಕ್ರ ಸುತ್ತಿ ಅವರ ದೆಸೆ ತಿರುಗುವಷ್ಟರಲ್ಲಿ ಪಾಪ ಅವರ ಆಯುಷ್ಯವೇ ಮುಗಿದಿರುತ್ತದೆ.

ಚಕ್ರದ ತೀರ ಒಳಭಾಗದಲ್ಲಿರುವವರ ಕತೆಯೇ ಬೇರೆ. [illegible]

ಸುತ್ತು ಹಾಕುವಷ್ಟರಲ್ಲಿ ಈ ಒಳಮೈ ಅದೆಷ್ಟೋ ಸುತ್ತು ಸುತ್ತಿ ಆಗಿರುತ್ತದೆ. ಅಂತೆಯೇ ಒಳ ಹಲ್ಲುಗಳಲ್ಲಿ ಸಿಕ್ಕುಹಾಕಿಕೊಂಡವರ ಪಾಳಿಯೂ ಚಕ್ರದ ಸುತ್ತುವಿಕೆಗನುಗುಣವಾಗಿ ದಿನಕ್ಕೊಮ್ಮೆಯೋ ವರ್ಷಕ್ಕೊಮ್ಮೆಯೋ ಬದಲಾದೀತು. ನಲ್ಲಿ ನೀರು, ಹುಣ್ಣಿಮೆಯ ದಿನಗಳಲ್ಲಿ ಬೆಳಗುವ ಬೀದಿ ದೀಪಗಳು, ಅಮಾವಾಸ್ಯೆಯ ಸುತ್ತಮುತ್ತ ಹತ್ತದೇ ಇರುವುದು, ಮೊದಲಾದವೆಲ್ಲ ಈ ಒಳಹಲ್ಲುಗಳ ಕ್ರಮದಂತೆ ಬದಲಾಗುವವು.

ಇಷ್ಟೊಂದು ನಿಖರವಾದ ಅಂಕಿ ಅಂಶ ಕೊಡುತ್ತಿರುವ ನಾನು ವರ್ಷಗಟ್ಟಲೆ ಚಕ್ರದ ಕುರಿತು ಸಂಶೋಧನೆ ಮಾಡಿರಬೇಕೆಂದು ಊಹಿಸಿದರೆ ತಪ್ಪು. ಕೇವಲ ನನ್ನ ಆಫೀಸಿನಲ್ಲಿ ಕೆಲಸವಿಲ್ಲದ ವೇಳೆಯಲ್ಲಿ ಹಾಗೆ ಕೂತು ನನ್ನ ಆಫೀಸಿನ ಆಗು ಹೋಗುಗಳನ್ನೇ ಅವಲೋಕಿಸುತ್ತಿದ್ದಾಗ ಕಂಡುಬಂದ ಚಕ್ರಕಲ್ಪನೆ ಇದು.

ತಿಂಗಳ ಮೊದಲರ್ಧ ಭಾಗ ನಮ್ಮ ಆಫೀಸಿನಲ್ಲಿ ಕೆಲಸ ಮಾಡುವ ಪ್ಯೂನಸಿಂದ ಹಿಡಿದು ಮ್ಯಾನೇಜರನ ತನಕ ಎಲ್ಲರೂ ನಗುನಗುತ್ತ ಕೆಲಸ ಮಾಡುತ್ತಿರುತ್ತೇವೆ. ಆಫೀಸು ಕಳೆಕಳೆಯಾಗಿರುತ್ತದೆ. ನಂತರದ ಅರ್ಧಭಾಗವನ್ನು ತಿಂಗಳು (ಚಕ್ರ ?) ಪ್ರವೇಶಿಸುತ್ತಿದ್ದಂತೆ ಎಲ್ಲರ ಮುಖದಲ್ಲೂ ಜೀವವೇ ಭಾರವಾದಂತಹ ಕಳೆ. ಆಫೀಸಿನ ತುಂಬ ಒಂದು ರೀತಿಯ ಪೇಲವ ವಾತಾವರಣ ಕವಿದುಬಿಟ್ಟಿರುತ್ತದೆ. ತಿಂಗಳ ಕೊನೆ ಸಮೀಪಿಸಿದಂತೆ ಅವಿನ್ನೂ ದಟ್ಟವಾಗತೊಡಗಿ ೨೦-೩೦ನೇ ತಾರೀಖಿನಂದು ಹೆಚ್ಚು ಕಡಿಮೆ ಎಲ್ಲರ ಮುಖದಲ್ಲೂ ಅಭಾವ ವೈರಾಗ್ಯದ ಕಳೆ ಹೊಮ್ಮುತ್ತಿರುತ್ತದೆ. ಮತ್ತೆ ಒಂದನೇ ತಾರೀಖು ಬಂತೋ ಎಲ್ಲರ ಮುಖದಲ್ಲೂ ನಗು ಜೀವಕಳೆ ಎಲ್ಲಾ ಹಾಜರ್ ! ಒಂದು ತಿಂಗಳೂ ಈ ಕ್ರಮ ತಪ್ಪಿದ್ದಿಲ್ಲ. ಈ ಕ್ರಮಬದ್ಧ ಬದಲಾವಣೆಯೇ ನನಗೆ ಕಾಳಿದಾಸನ ಚಕ್ರ ಸಿದ್ಧಾಂತದ ಕುರಿತು ನಂಬಿಕೆ ಹುಟ್ಟಿಸಿದ್ದು.

ಈ ಚಕ್ರ ವರ್ಷಕ್ಕೆ ಸಹ ಬದಲಾದ ದೆಸೆ ತರಬಹುದು. ಮದುವೆಯಾದ ವರ್ಷವಿಡೀ ಸುಮ್ಮಸುಮ್ಮನೇ ನಗುತ್ತ ಓಡಾಡಿಕೊಂಡಿದ್ದವನೊಬ್ಬ ಮರುವರ್ಷವೇ ಹೋದ ಹೋದಲ್ಲಿ ತಲೆಯ ಮೇಲೆ ಕೈ ಹೊತ್ತು ಕೂತುಬಿಡುವುದು ಕಂಡುಬಂದರೆ ಅದಕ್ಕೆ ಕಾರಣ ಊಹಿಸುವ ಅವಶ್ಯಕತೆಯಿಲ್ಲ. ಅವನ ವಾರ್ಷಿಕ ಚಕ್ರ ಉರುಳಿ ತಲೆಕೆಳಗಾಗಿದೆ ಅಷ್ಟೆ. ಹೈಸ್ಕೂಲಿನಲ್ಲಿ ರ್‍ಯಾಂಕ್ ಬಂದ ವಿದ್ಯಾರ್ಥಿ ಕಾಲೇಜಿಗೆ ಹೋದ ಕೂಡಲೇ ಫೇಲಾಗುವುದು, ಕೈದಿಯಾಗಿದ್ದವ ಮಂತ್ರಿಯಾಗುವುದು, ಮಂತ್ರಿಯಾಗಿ ಧನಕನಕ ಪೇರಿಸಿದವ ಮರುವರ್ಷವೇ ಕೈದಿಯಾಗಿ ಕಂಬಿಯೆಣಿಸುವುದು, ಇವೆಲ್ಲ ಈ ಚಕ್ರನೇಮಿ ಕ್ರಮದ ಅವಾಂತರ ಅಷ್ಟೆ !

ಈ ಚಕ್ರದ ಏಕಪ್ರಕಾರವಾದ ಉರುಳುವಿಕೆಯಿಂದಾಗಿ ಏಕಪ್ರಕಾರವಾಗಿ ತೊಂದರೆಗೊಳಗಾದ ಚಿರಂಜೀವಿ ವಿದ್ಯಾರ್ಥಿಯೊಬ್ಬನನ್ನು ನಾನು ನೋಡಿದ್ದೇನೆ. ಅವನ ಹೇಳಿಕೆಯ ಪ್ರಕಾರ ಅವನು ಪರೀಕ್ಷೆಯ ವೇಳೆಯಲ್ಲಿ ಚೆನ್ನಾಗಿಯೇ ಬರೆದಿರುತ್ತಾನಂತೆ. ಆದರೂ ಒಂದೂ ವರ್ಷ ಅವನದು ಪಾಸ್ ಆಗಿಲ್ಲ. ಅದಕ್ಕೆ ನಾನು ಊಹಿಸುವ ಕಾರಣವಿಷ್ಟೆ. ಪ್ರತಿಸಲ ಪರೀಕ್ಷೆ ಆಗುವ ವೇಳೆಯಲ್ಲಿ ಮೇಲೆ ಹೋದ ಅವನ ಭಾಗ್ಯಚಕ್ರ ರಿಸಲ್ಟು ಹೊರಬೀಳುವ ದಿನಗಳಲ್ಲಿ ಕೆಳಗೆ ಸರಿದು ರಿಸಲ್ಟನ್ನು ಕೆಳಗೆ ತಳ್ಳಿಬಿಡುತ್ತದೆ. ಪರಿಣಾಮ ಆತ ಚಿರವಿದ್ಯಾರ್ಥಿಯಾಗಬೇಕಾಗಿದೆ.

ಈ ಚಕ್ರನೇಮಿಕ್ರಮವನ್ನು ಲಕ್ಷಿಸುವುದು ನನಗೆ ಒಂದು ನಿತ್ಯದ ಅಭ್ಯಾಸವಾಗಿಬಿಟ್ಟಿದೆ. ದಿನದ ಪ್ರಾರಂಭದ ಘಟನೆಯನ್ನು ನೋಡಿ ದಿನದ ಕೊನೆಯನ್ನು ನಾನು ಊಹಿಸಬಲ್ಲೆ.

ನಾನು ಒಂದು ದಿನ ಊರಿಗೆ ಹೋಗುವವಳಿದ್ದೆ. ಬಸ್ಸಿಗೆ ರಿಸರ್ವೇಶನ್ ಸಿಕ್ಕಿರಲಿಲ್ಲವಾದ್ದರಿಂದ ಸ್ವಲ್ಪ ಮೊದಲೇ ಹೋಗಿ ಕ್ಯೂ ಹಿಡಿಯಬೇಕೆಂದು ಸ್ವಲ್ಪ ಬೇಗ ಆಫೀಸ್ ಬಿಡಲು ಪರ್ಮಿಶನ್ ಕೇಳಿದೆ. ನನ್ನ ಬಾಸ್ ಹೆಚ್ಚು ಚೌಕಾಶಿಯಿಲ್ಲದೆ ಒಪ್ಪಿದ್ದಲ್ಲದೇ ''ವಿಶ್ ಯೂ ಎ ಹ್ಯಾಪಿ ಜರ್ನಿ'' ಬೇರೆ ಹೇಳಿದರು. ಈ ಅನಿರೀಕ್ಷಿತ ಅದೃಷ್ಟದಿಂದ ಖುಷಿಯೋ ಖುಷಿಯಾಯ್ತು ನನಗೆ. ಅದೇ ಖುಷಿಯಲ್ಲಿ ಬಸ್‌ಸ್ಟಾಂಡಿಗೆ ಧಾವಿಸಿದೆ. ಬಂದು ನೋಡುತ್ತೇನೆ, ನಮ್ಮೂರಿಗೆ ಹೊರಡುವ ಒಂದು ಬಸ್ ನಿಲ್ಲುವ ಜಾಗದಲ್ಲಿ ಐದು ಬಸ್ಸಿಗಾಗುವಷ್ಟು ಜನ ಜಮಾಯಿಸಿದ್ದಾರೆ. ಸೀಟು ಸಿಗುವುದಿರಲಿ, ಬಸ್ಸೇ ಸಿಗುವುದು ಸಾಧ್ಯವಿರಲಿಲ್ಲ.

ಮೆಲ್ಲಗೆ ನನ್ನ ಖುಷಿಯ ಬಲೂನು ಗಾಳಿ ಕಳೆದುಕೊಳ್ಳತೊಡಗಿತು. ಆದರೂ ಗುಂಪಿನಲ್ಲಿ ಸೇರಿಕೊಂಡೆ. ಯಾವ ಬಸ್ಸೇ ಬರಲಿ ನಮ್ಮೂರ ಬಸ್ಸೇ ಇದು ಎಂದು ಜನ ಕೂಗುತ್ತಿದ್ದರು. ಗುಂಪು ಆ ಬಸ್ಸಿನತ್ತ ಧಾವಿಸುತ್ತಿತ್ತು. ಬಸ್ಸಿಗೆ ಬೇರೆ ಊರಿನ ಬೋರ್ಡು ಹಾಕಿರುತ್ತಿತ್ತು. ನನ್ನಂಥವರಿಗೆ ಕಾಲು ತುಳಿಸಿಕೊಂಡಿದ್ದೊಂದೇ ಬರುತ್ತಿತ್ತು. ತಲೆಯ ಮೇಲೆ ಸುಡುವ ಸೂರ್ಯ. ಕೈಯಲ್ಲಿ ಮಣಭಾರ ಸೂಟಕೇಸು. ಕೈ ಕಾಲು ಚಟ್ನಿ. ಅಳು ಬರಲು ಇವಕ್ಕಿಂತ ಸೂಕ್ತ ಸಮಯ ಉಂಟೆ ?

ಬಸ್ಸು ಕೊನೆಗೂ ಬಂತು. ಬಸ್ಸಿನ ಒಳನುಗ್ಗುವುದೇನೂ ಸಾಧಾರಣ ಸರ್ಕಸ್ ಆಗಿರಲಿಲ್ಲ. ಮೊಣಕಾಲಿಗೆ ನನ್ನದೇ ಸೂಟ್‌ಕೇಸಿನ ಪ್ರಹಾರ. ಹೇಗೋ ಬಸ್ಸೇರಿ ಒಂದು ಸೀಟಿನಲ್ಲಿ ಕುಕ್ಕರಿಸಿದಾಗ ಮೈ ಪೂರ್ತಿ ಬೆವರೊಡೆದಿತ್ತು. ತಕ್ಷಣ ಚಕ್ರದ ನೆನಪು ನುಗ್ಗಿ ಬಂತು. ಇದರಿಂದಲೇ ಈ ಬವಣೆ ಎಂದುಕೊಳ್ಳುತ್ತ ಗಾಜು ಸರಿಸಿದಾಗ ತಂಪಾಗಿ ಹಾಯೆನಿಸಿತು. ಒಂದು ಕ್ಷಣ ಅಷ್ಟೆ. ಕಂಡಕ್ಟರನ ಧ್ವನಿ ಮೊಳಗಿತು.

''ಮೊದಲಿನ ೨೦ ಸೀಟು ರಿಸರ್ವ್ ಆಗ್ಯದ, ಅಷ್ಟು ಸೀಟು ಬಿಟ್ಟು ಕುಂದರ್‍ರೀ.'' ಬಗ್ಗಿ ನನ್ನ ಸೀಟು ನೋಡಿ 'ಹತೋಸ್ಮಿ' ಅಂದೆ. ನಾನು ಕುಳಿತ ಸೀಟು ನಂಬರ್ ೧೮ ಆಗಿತ್ತು. ಕಾಣ ಕಾಣುತ್ತಿದ್ದಂತೆ ಮೇಲೆ ಹೋಯಿತೆಂದುಕೊಂಡ ಚಕ್ರ ಕೆಳಗೆ ಸರಿದದ್ದು ಗೊತ್ತಾಗಿಹೋಯ್ತು. ಸೂಟಕೇಸು ಹೊತ್ತು ಕೈಯಂತೂ ಬಿದ್ದುಹೋಗಿತ್ತು. ಇನ್ನೂ ನಾಲ್ಕೈದು ತಾಸು ನಿಂತೇ ಪಯಣಿಸಿದರೆ ಕಾಲುಗಳೂ ಬಿದ್ದು ಹೋಗುವುದನ್ನು ನೆನೆದೇ ಮೈ ಕಂಪಿಸತೊಡಗಿತು. ಆದರೂ ನನ್ನ ನಂಬರಿನ ರಿಸರ್ವೇಶನ್‌ವಾಲಾ ಬರುವ ತನಕವಾದರೂ ಕೂತರಾಯಿತೆಂದು ಏಳದೇ ನನ್ನನ್ನು ಎಬ್ಬಿಸಲು ಬರುವ ವ್ಯಕ್ತಿಯನ್ನು ಎದುರುನೋಡತೊಡಗಿದೆ. ಈಗ ಬಂದ ಟೊಪ್ಪಿಗೆಯವನಿರಬೇಕು. ಈಗ ಬಸ್ಸೇರುತ್ತಿರುವ ಚಷ್ಮಾದಾಕೆಯಿರಬೇಕು.... ಎಂದು ಏಳಲು ಸನ್ನದ್ಧಳಾಗುತ್ತಿದ್ದಂತೆ ಕಂಡಕ್ಟರ್ ರೈಟ್ ಅಂದದ್ದು ಕೇಳಿಸಿತು. ಎಲಾ ನನ್ನ ಪಾಲಿನ ಚಕ್ರದ ಪವಾಡವೇ ! ನನ್ನ ಸೀಟಿಗೆ ರಿಸರ್ವೇಶನ್ ಮಾಡಿಸಿದ ವ್ಯಕ್ತಿ ಎಲ್ಲಿ ಚಕ್ರದ ಕೆಳ ಹಲ್ಲುಗಳಲ್ಲಿ ಸಿಕ್ಕು ಒದ್ದಾಡುತ್ತಿದೆಯೋ, ಯಾವ ಸ್ಟಾಪಿನಲ್ಲಿ ಬಸ್ಸಿಗಾಗಿ ಕಾಯುತ್ತ ವಾಚು ನೋಡುತ್ತ ಕಾಲಚಕ್ರದ ಉರುಳುವಿಕೆಗೆ ಪರಿತಪಿಸುತ್ತಾ ನಿಂತಿದೆಯೋ.... ಎನಿಸಿತಾದರೂ ಕಿಟಕಿಯ ಗಾಜು ಸರಿಸಿದಾಗ ತಂಪುಗಾಳಿ ಬೀಸಿ ಹಾಯೆನಿಸಿತು.

ಹೀಗೆ ನನ್ನ ಅನುಭವಗಳ ಆಧಾರದ ಮೇಲೆ ಚಕ್ರದ ಅಸ್ತಿತ್ವವನ್ನು ನಾನು ಒಪ್ಪಿಕೊಂಡಿದ್ದೊಂದೇ ಅಲ್ಲದೆ ಒಂದೆರಡು 'ಚಕ್ರ ಸತ್ಯಗಳನ್ನು ನೀವೂ ಬೇಕಾದರೆ ಪರೀಕ್ಷಿಸಿ ನೋಡಬಹುದೆನ್ನುತ್ತೇನೆ.

೧. ಇವತ್ತು ನಿಮ್ಮ ಹೆಂಡತಿ ಸಂತೋಷದಲ್ಲಿದ್ದಾಳೆ. ನಗುನಗುತ್ತ ಸವಿ ಕಾಫಿ ಕೊಟ್ಟಿದ್ದಾಳೆ ಎಂದು ನಾಳೆಯೂ ನೀವದನ್ನು ನಿರೀಕ್ಷಿಸುವಂತಿಲ್ಲ. ಅವಳ ನಗುವಿಗೆ ಮನಸೋತು ಅವಳಂದಿದ್ದಕ್ಕೆಲ್ಲಾ ಹೂಂ ಎಂದರೆ ನೀವೇ ನಾಳಿನ ಸಿಹಿಕಾಫಿಗೆ ಕಲ್ಲು ಹಾಕಿಕೊಂಡಿರುತ್ತೀರಿ. ಹಾಗಿಲ್ಲವಾದರಂತೂ ಅವಳೇ ನಾಳೆ ದುಸುಬುಸು ಎನ್ನುತ್ತ ಕಹಿ ಕಾಫಿ ತಂದು ಬಡಿಯುತ್ತಾಳೆ. ಒಟ್ಟಿನಲ್ಲಿ ನಾಳೆ ನಿಮಗೆ ಕಹಿ ಕಾಫಿ ಖಂಡಿತ.

೨. ಈ ವರ್ಷವಿಡೀ ಒಂದೂ ಸೀರೆ ಖರೀದಿಸಲಾಗದ ನೀವು ಗಂಡನೊಂದಿಗೆ ಮುನಿಸಿಕೊಂಡೇ ಇದ್ದರೆ, ಮುಂದಿನ ವರ್ಷ ತವರುಮನೆಯಲ್ಲಿ ಮದುವೆಗೆಂದು ಒಂದು ಸೀರೆ, ಗಂಡನಿಗೆ ಬೋನಸ್ ಬಂತೆಂದು ಒಂದು ಸೀರೆ, ಗಂಡನ ಬಾಸ್ ರಿಟೈರ್ ಆದನೆಂದು ಒಂದು ಸೀರೆ..... ಹೀಗೆ ಸೀರೆಗಳಲ್ಲೇ ಮುಳುಗಿ ಅನಿವಾರ್ಯವಾಗಿ ಗಂಡನೆದುರು ನಗುನಗುತ್ತಲೇ ಇರಬೇಕಾದೀತು.

ಈಗೀಗ ಈ ಚಕ್ರದ ಅರಿವು ಸದಾಕಾಲ ನನ್ನಲ್ಲಿ ಎಷ್ಟು ಜಾಗ್ರತವಾಗಿದೆಯೆಂದರೆ ಈ ಚಕ್ರ ಪ್ರಜ್ಞೆಯಿಂದಾಗಿ ನಗಲೂ ಆಗದ ಅಳಲೂ ಆಗದ ಒಂದು ಪರಿಸ್ಥಿತಿ ಒದಗಿಬಿಟ್ಟಿದೆ ನನಗೆ. ತುಂಬಾ ಸಂತೋಷವಾದಾಗ ನಾನು ಎಲ್ಲರೊಂದಿಗೆ ನಗಲು ಪ್ರಾರಂಭಿಸುವುದೊಂದೇ ತಡ ಚಕ್ರ ಕಿವಿಯಲ್ಲಿ ಬಂದು ಪಿಸುನುಡಿದಂತಾಗುತ್ತದೆ.

'ನಗದಿರೆಲೆ ಮರುಳೆ ಕಾದಿಹುದು ಅಳು ನಾಳೆ' ಎಂದು ಚಕ್ರ ಉಸುರಿದಂತೆ ಭಾಸವಾಗಿ ನನ್ನ ನಗು ತಾನೇ ನಿಂತುಹೋಗುತ್ತದೆ. ಹಾಗೇ ಅಳು ಬಂದ ಪ್ರಸಂಗಗಳಲ್ಲೆಲ್ಲ ಸಮಾಧಾನ ನೀಡಿ ನಾಳೆ ಮತ್ತೆ ನಗುವಿಯಂತೆ ಈಗ ಅಳಬೇಡ ಎಂದು ಆಸೆ ಹುಟ್ಟಿಸಿ ಕಣ್ಣೀರನ್ನು ತಡೆಯುವುದೂ ಇದೇ ಚಕ್ರ.

ಇಂಥ ಒಂದು ಅದ್ಭುತ ಸತ್ಯವನ್ನು ಸಾರುವ ಈ ಚಕ್ರಕ್ಕೆ ಏನೆನ್ನಲಿ ? 'ಚಕ್ರಾಯ ತಸ್ಮೈ ನಮಃ' ಎನ್ನಲಾಗದಿದ್ದೀತೆ ? ಕಾಳಿದಾಸನಿಗೆ ನಮೋ ಎನ್ನದಿರಲಾದೀತೆ ?

ಭುವನೇಶ್ವರಿ ಹೆಗಡೆ
೧೦೧, ರತ್ನಾ ಅಪಾರ್ಟ್‌ಮೆಂಟ್ಸ್, ಕದ್ರಿ ಮಾರ್ಕೆಟ್, ಮಂಗಳೂರು

# ಸೆರೆಮನೆಯಲ್ಲಿ

ನನ್ನ ಕಾರಾಗೃಹದ ಕತ್ತಲ ಕೋಣೆಯಲಿ
ಮಿಂಚುತ್ತಲಿದೆ ನಿನ್ನ ಸ್ಮರಣೆ
ಇಲ್ಲಿ ಬೀಸುವ ಗಾಳಿಯಲಿ ಸೂಸಿ ಬರುತಲಿದೆ
ಅದರ ಮಧುರ ವಾಸನೆ
ನೀ ಬರೆದ ಅಪರೂಪ ಕಾವ್ಯದ ಸಾಲುಗಳು
ಗಾಯಗೊಂಡಿರುವೆನ್ನ ಹೃದಯಕ್ಕೆ ನೀಡುತಿವೆ ಸಾಂತ್ವನೆ !
ನಿನ್ನ ಕಾವ್ಯ ಸ್ಮರಣೆಯಿಂದ
ಈ ಸೆರೆಮನೆಯೊಂದು ಉದ್ಯಾನವೆನಿಸುತಿದೆ,
ಕೇಳುವಂತೆನಿಸುತಿರೆ ಇಲ್ಲಿ ಕೋಕಿಲೆಯ ಕುಕಿಲು
ಗಾಳಿಪಾಲಾಗುತಿದೆ ನನ್ನೆದೆಯ ಅಳಲು
ಕರಗಿದಂತೆನಿಸುತಿದೆ ಒಡಲ ಸಂಕಟದ ಸುಯಿಲು !
ಓ, ನೀನೆಷ್ಟು ಸಲ ನನ್ನಂಥ ಬಿರಿನೋವನುಂಡು
ಹೋಗಿದ್ದಿಯೋ ಏನೊ ಈ ಕಾಳ ಸೆರೆಮನೆಯ ಕಂಡು !

* * *

ಇಲ್ಲಿ ಕೈದಿಯನೊಂದು ಏಕಾಂತ ಕೋಣೆಯಲಿ
ತುರುಕಿಬಿಟ್ಟಿದ್ದಾರೆ
ದೂರದಾಕಾಶದಲಿ ಹಾರಾಡುತಿಹ ಗರುಡನೊಬ್ಬಂಟಿತನ
ಮೀರಿಸುವ ಪರಿಯಲ್ಲಿ !
ಬಾಗಿಲಿಗೆ ಜಡಿದುಬಿಟ್ಟಿದ್ದಾರೆ ದೊಡ್ಡ ಬೀಗ
ಸರಳುಗಳಾಚೆ ಸೆಟೆದು ನಿಂತು ಕಾವಲುಗಾರ
ಮಣಿಯಲಾರನು ಯಾರು ಹಾಕಿದರು ಲಾಗ !
ಒಳಗಿರುವ ಸೆರೆಯಾಳು
ಅವನ ದೃಷ್ಟಿಯಲಿ ಕಟ್ಟಿ ಹಾಕಿದ ಕೋತಿ
ಆಗೀಗ ಇವನವನ ಅಣಕ ಮಾಡುತ್ತಿಹನು
ಸರಳುಗಳ ಒಳತೂರಿ ತನ್ನ ಮೂತಿ !
ನಮ್ಮ ಬೇಡಿಕೆಗಳನವನು ಕೇಳಲಾರ
ನಾವು ಕದ ತಟ್ಟಿದರೊ, ಧುತ್ತೆಂದು ನಿಲ್ಲುವುದು
ಅವನ ರುದ್ರಾವತಾರ !
ಅವನಾಗಿ ನಮ್ಮ ಕೋಣೆಯ ಕದ ತೆರೆಯುವುದು
ಒಳಗಿನ ಕೋತಿಗೊಂದಿಷ್ಟನ್ನು ಬಿಸುಡುವಾಗ
ಅಥವಾ ಮೇಲಧಿಕಾರಿಗಳ ಬಳಿಗೆಳೆದೊಯ್ಯುವಾಗ !
ಅಲ್ಲಿ ಬೀಸುವುದುಂಟು ಬೈಗುಳದ ಬಿರುಗಾಳಿ
ಕಿವಿ ಹಿಂಡಿ ಎಳೆಯುವುದು
ಮೊಗದ ಮೇಲೆರೆದೇಟು ಬಿಗಿಯುವುದು
ಪಹರೆಯವನದೆ ಪಾಳಿ !
ಆದರೂ ಕೈದಿಗನುಮತಿಯಿರದು
ಕಣ್ಣೀರು ಸುರಿಸಲಿಕೆ ಒಂದು ಕ್ಷಣ ಬಿಸುಸುಯ್ಯಲಿಕ್ಕೆ;
ಇಲ್ಲ, ಅವನಿಗನುಮತಿಯಿಲ್ಲ ಓದಲಿಕ್ಕೆ, ಬರೆಯಲಿಕ್ಕೆ !
ಅವನಿಗನುಮತಿ ಮಾತ್ರ ಕತ್ತಲೆಯ ಕೋಣೆಯಲಿ
ಮೌನದೊಳಗೇ ಕೊರಗಿ ಸೊರಗಲಿಕ್ಕೆ !
ಅವನಿಗನುಮತಿಯುಂಟು ಪ್ರಾರ್ಥನೆಯ ಮಾಡಲಿಕೆ
ದೇವಸ್ಮರಣೆಯ ಗೈದು ಶಿರ ಬಾಗಲಿಕ್ಕೆ !
ನೆನಪಿನಿಂದಲೆ ನಾವು ಮಾಡುವೆವು ಕುರಾನ ಪಠಣ
ತಪ್ಪದೊಲು ಯತ್ನಿಸುತ ಶಬ್ದಗಳ ಉಚ್ಚರಣ !
[illegible]
[illegible]
[illegible]



ಯಾಕಂದರೆ, ಹೃದಯದ ನಿರ್ಮಲ ಸ್ಥಿತಿಯಲ್ಲೆ
ಹೊಸ ಬೆಳಗು ಬಿರಿಯುವುದು ರವಿಯುದಿಸಿದಂತೆ !
ಫಕ್ಕನೆ ಎದೆಯಾಳದಿಂದೆದ್ದ ಅಮೂರ್ತ ಕಲ್ಪನೆಗಳು
ಬಲು ಸ್ಪಷ್ಟಗೊಳ್ಳುವವು ಹೊಳೆಹೊಳೆವ ಸ್ಫಟಿಕದಂತೆ !
ಹೊರ ಹೊಮ್ಮುವುದು ಹೃದಯದನಿಸಿಕೆಯೆಲ್ಲ
ತಿಳಿನೀರ ಸೆಲೆ ಮೇಲೆ ಚಿಮ್ಮಿದಂತೆ !
ಜಗದ ಸಮಸ್ತ ಜಲನಿಧಿಗೆ ಪ್ರತಿಯಾಗಿ
ಮಾನವನ ಎದೆಗಡಲು ಎನಿತೊಂದು ಸಮೃದ್ಧ
ಎನಿತೊಂದು ಶ್ರೀಮಂತ
ಅಳತೆಗೆಟಕುವುದುಂಟೆ ಅವನ ಮನದಾಳದಂತ !

* * *

ಕತ್ತಲೆಯ ನಿನ್ನೆ, ಬಯಕೆಗಳ ಕಣ್ ಸನ್ನೆಗಳ ನಡುವಿಂದ
ನಮ್ಮ ದಿನಗಳುರುಳುವವು
ಗಳಿಗೆಗಳಿಗೆಗೂ ನಮ್ಮ ನೋವು-ನರಳಿಕೆಗಳು
ನಮ್ಮ ಪಕ್ಕೆಲುಬುಗಳ ಕುಟ್ಟಿ ಪುಡಿಗೈಯುವವು
ಆದರೂ ಒಮ್ಮೊಮ್ಮೆ ನಾವು ಮಲಗುವೆವು
ಮತ್ತೆಯೂ ಒಮ್ಮೊಮ್ಮೆ ಹೊರಜಗದ ಪರಿವೆಯೇ ಇಲ್ಲದಂತೆ
ಕತ್ತಲೆಯೊಳಗಿದ್ದ ಅಡ್ಡಗೋಡೆಗಳ ತಟ್ಟುತ್ತ ಅಡ್ಡಾಡುವೆವು;
ಸಮಾಧಿಯೆಂಬುದೆ ಇರದೆ ಸತ್ತು ಬಿದ್ದವರಂತೆ
ಸೂರ್ಯದರ್ಶನ ಕೂಡ ನಮಗೆ ದೊರೆಯುವುದಿಲ್ಲ
ಅವನಾವ ಕಡೆಗುದಿಸುವನೊ ಪತ್ತೆ ಹತ್ತುವುದಿಲ್ಲ
ನಮ್ಮನೆಲ್ಲಿಟ್ಟಿಹರೆಂದು
ನಮ್ಮ ಬಂಧು-ಮಿತ್ರರಿಗೆಲ್ಲ ಗೊತ್ತೆ ಇಲ್ಲ
ನಮ್ಮ ಪಾಲಿಗೆ ಅವರು ಕಳೆದು ಹೋದಂತಿಹರು
ಅವರಿಗಿಂತಲೂ ನಾವವರ ಪಾಲಿಗೆ ಬಲು ದೂರ ಹೋದವರು !
ಓ ನನ್ನ ಬಂಧುವೇ !
ನನ್ನ ಜೀವವನೆ ಹಿಂಡುತಿದೆ
ಈ ದ್ವಂದ್ವದಲಿ ಬೆಂದ ನನ್ನೆದೆಯ ಬೇನೆ !
ನೀನಿದ್ದ ಸೆರೆಮನೆಯಲ್ಲಿ
ನರಳಿ ನಿಟ್ಟುಸಿರಿಡುವ ಸ್ವಾತಂತ್ರ್ಯವಾದರೂ ನಿನಗಿತ್ತು ತಾನೆ !

**ಅಹಮ್ಮದ್ ಮೊಹಮ್ಮದ್ ನೌಮನ್ ಪ್ರಖ್ಯಾತ ಯೆಮೆನ್ ಕವಿ. ೧೯೪೮ರಲ್ಲಿ ನಡೆದ ಯೆಮೆನ್ ಕ್ರಾಂತಿಯಲ್ಲಿ ಸಹಭಾಗಿಯಾಗಿ ಸೆರೆಮನೆ ಕಂಡ ಸಂದರ್ಭದಲ್ಲಿ, ತನಗಿಂತ ಹಿರಿಯ ಕ್ರಾಂತಿಕಾರಿ ಕವಿ ಅಲ್ ಝುಬೈರಿ ಅವರನ್ನು ನೆನೆದು ಬರೆದ ಕವನ.**

**ಮೂಲ ಅರಬ್ಬೀ : ಅಹಮ್ಮದ್ ಮೊಹಮ್ಮದ್ ನೌಮನ್**
(೧೯೦೯-೧೯೯೬)
**ಕನ್ನಡಕ್ಕೆ : ಬಿ. ಎ. ಸನದಿ**

## ಹಾರಿದ ಹಕ್ಕಿಗಳು

ಇಲ್ಲಿ ಉದ್ಯಾನದ ತುಂಬ
ಗಿಡಗಳಿದ್ದವು.
ಗಿಡಗಳ ತುಂಬ ಹೂವು ಅಲೆದು
ಕುಲುಕುತ್ತಿದ್ದವು
ಬಣ್ಣ ಬಣ್ಣದ ಹೂವುಗಳ ಮೇಲೆ
ಬಣ್ಣ ಬಣ್ಣದ ಹಕ್ಕಿ
ಉಲಿಯುತ್ತಿದ್ದವು ಸಂತೋಷ ಉಕ್ಕಿ
ನೀವೇನು ಮಾಡಿದಿರಿ ?
ಚಿಟಬಿಲ್ಲು ತೆಗೆದುಕೊಂಡಿರಿ
ಗುರಿಯಿಟ್ಟು
ಹೊಡೆದು ಹಕ್ಕಿಯ ಮಾಂಸ
ತಪಸ್ಸಿಗೆ ಕುಳಿತಿರಿ



ಅವು ಹಾರಿಹೋದವು ಬೇರೆ
ಕಡೆ ಮಾವು ಅರಸಿ
ಅಲ್ಲೇ ಗೂಡು ಕಟ್ಟಿಕೊಂಡವು
ಮೊಟ್ಟೆಯಿಟ್ಟು ಮರಿ ಮಾಡಿದವು
ನಲಿದು ಒಲಿದು ಬದುಕ ಮಾಡಿದವು
ಈಗ ಕೂಗಿ ಕರೆಯುವಿರಿ ನೀವು
ತಿರುಗಿ ಬನ್ನಿ ಮಾತೃಸ್ಥಾನಕ್ಕೆ
ಈಗ ಏಕೆ ಬರುತ್ತವೆ ಅವು ?
ಸಮಯ ಬಂದರೆ
ತಿರುಗಿ ಬೀಳುತ್ತವೆ, ಅಷ್ಟೆ.

ಆರ್. ವಿ. ಭಂಡಾರಿ
ಅರೆಅಂಗಡಿ, ೫೮೧ ೪೪೦
ಹೊನ್ನಾವರ - ಉ. ಕ.

# ಹಳೆಯ ಜಾಡಿನತ್ತ ಹೊಸ ನೋಟ

ಡಾ॥ ಬಿ. ಎಸ್. ಶೈಲಜಾ

*ದೇವಾಲಯಗಳಲ್ಲಿ ಇಲ್ಲದ ವಾಸ್ತು ವೈಶಿಷ್ಟ್ಯ ಹುಡುಕುವವರು ಕೆಲವರು ಅಲ್ಲಿ ನಿಜಕ್ಕೂ ಇರುವ ಅದ್ಭುತಗಳನ್ನು ಪರಿವೀಕ್ಷಣೆ ಮಾಡುವಷ್ಟು ವಿಚಕ್ಷಣೆ ಹೊಂದಿರುವುದಿಲ್ಲ. ಅಂತೆಯೇ, ಕಾಸಿಗೊಂದು ಕೊಸರಿಗೊಂದು ದೇವಮಂದಿರಗಳನ್ನು ಕಟ್ಟಲು ಹೋರಾಡುತ್ತಿರುವವರಿಗೆ ಹಿಂದಿನ ಅನೇಕ ದೇವಾಲಯಗಳ ಸೂಕ್ಷ್ಮತೆಯ ಅರಿವಿಲ್ಲ. ದೇವಗೃಹವೊಂದು ಜ್ಞಾನಗೃಹವೂ ಆಗುವಂತೆ ರಚಿಸಲ್ಪಟ್ಟ ದೇವಾಲಯಗಳ ಸ್ವಾರಸ್ಯ ಪ್ರಾಚೀನರ ಪದ್ಧತಿಗಳ ಬಗ್ಗೆ ವಿಶೇಷ ಆಸಕ್ತಿಯನ್ನು ಮೂಡಿಸುತ್ತದೆ. ಪುರಾವೆಗಳನ್ನು ಕೃತಕವಾಗಿ ಸೃಷ್ಟಿಸಿ ಸಂಶೋಧನೆಯಲ್ಲಿ ತೊಡಗುವ ದೇವಾನಾಂಪ್ರಿಯರು ಹೆಚ್ಚುತ್ತಿರುವ ಇಂದಿನ ಸಂದರ್ಭದಲ್ಲಿ, ದಕ್ಕಿರುವ ಪುರಾವೆಗಳನ್ನು ವಸ್ತುನಿಷ್ಠವಾಗಿ, ನಿಖರವಾಗಿ ವಿಶ್ಲೇಷಣೆ ಮಾಡಿ ಇತಿಹಾಸದ ಹೆಜ್ಜೆಗಳನ್ನು ಗುರುತಿಸುವ ಡಾ॥ ಶೈಲಜಾ ಅವರ ಸಂಶೋಧನಾ ದೃಷ್ಟಿ ಅತ್ಯಂತ ಚೇತೋಹಾರಿಯಾಗಿದೆ. ಅದಕ್ಕೊಂದು ಉತ್ತಮ ನಿದರ್ಶನ ಈ ಲೇಖನ.*

"**ದೇ**ಶಾಂತರ ಹೋಗಿಬಂದ ವರ್ತಕ. ಅವನ ಹಡಗಿನ ತುಂಬ ಚಿನ್ನ, ವಜ್ರ. ದಕ್ಷಿಣದಿಂದ ಬೀಸುತ್ತಿದ್ದ ತಂಗಾಳಿ ಅವರನ್ನು ಸುರಕ್ಷಿತವಾಗಿ ದಡ ಮುಟ್ಟಿಸಿತು. ಸಾಗರಯಾನವನ್ನು ಯಶಸ್ವಿಯಾಗಿ ಮುಗಿಸಿಬಂದ ಈ ವರ್ತಕರು ತಮ್ಮ ರಾಜನಿಗೆ ಸಾಹಸಗಾಥೆಯನ್ನು ವಿವರಿಸಿದರು. ದೂರದ 'ಕಾಲಿಯ ದ್ವೀಪ'ದಲ್ಲಿ ದೊರಕಿದ ಸಂಪತ್ತನ್ನು ಪ್ರದರ್ಶಿಸಿದರು...."

ಈ ವಾಕ್ಯಗಳು ಅಡಗೂಲಜ್ಜಿಯ ಕಥೆಗಳನ್ನೋ ಅಥವಾ ಸಾಹಸಯಾನದ ಪೌರಾಣಿಕ ಕತೆಗಳನ್ನೋ ನೆನಪಿಗೆ ತರುವುದು ಸಹಜ. ಆದರೆ ಇಂತಹದೊಂದು ವರ್ಣನೆ ಸುಮಾರು ಒಂದನೆಯ ಶತಮಾನದಷ್ಟು ಹಿಂದೆ ಪ್ರಕಟವಾದ "ಜ್ಞಾತ ಧರ್ಮ" ಎಂಬ ಜೈನ ಗ್ರಂಥದಲ್ಲಿದೆ. ಕನಕಕೇತು ಎಂಬ ಮಹಾರಾಜನ ಹೆಸರೂ ಇರುವುದರಿಂದ ಇದಕ್ಕೆ ಐತಿಹಾಸಿಕ ಚೌಕಟ್ಟು ದೊರೆಯುತ್ತದೆ.

ಈ ವಿವರ ನನ್ನನ್ನು ಆಕರ್ಷಿಸಿದ್ದು ಇತಿಹಾಸದ ಕಾರಣದಿಂದ ಮಾತ್ರವಲ್ಲ. ಈ ಪ್ರಸ್ತಾಪ ಸಿಕ್ಕಿದ್ದು ಕಾಲಿಯ ದ್ವೀಪ ಎಂಬ ಪದಕ್ಕೆ ಮೂಲವಾದ ನಾಡಿನ ಖಗೋಳ ವೈಜ್ಞಾನಿಕ ನಿಯತಕಾಲಿಕವೊಂದರಲ್ಲಿ. *Monthly Notices of Astronomical Society of South Africa* ಎಂಬ ಖಭೌತ ವಿಜ್ಞಾನದ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸುವ ಪತ್ರಿಕೆಯೊಂದು ಈ ಅಂಶವನ್ನು ಪ್ರಕಟಿಸಿತು. ದಕ್ಷಿಣ ಆಫ್ರಿಕಾದ ಸಂಶೋಧಕ ಡಾ॥ ಹ್ರೋಮ್ನಿಕ್ ಅವರ ಈ ಪ್ರಬಂಧದಲ್ಲಿ ಇನ್ನೂ ಸ್ವಾರಸ್ಯಕರವಾದ ಅಂಶವೊಂದಿತ್ತು. ಅದು ಹೀಗಿದೆ.

ದಕ್ಷಿಣ ಆಫ್ರಿಕದ ಸ್ವಾಝಿಲೆಂಡ್, ಉತ್ತರ ಟ್ರಾನ್ಸ್‌ವಾಲ್ ಮುಂತಾದ ಪ್ರಾಂತ್ಯಗಳನ್ನೊಳಗೊಂಡ ಭೂಭಾಗಕ್ಕೆ "ಕೋಮಟಿಲ್ಯಾಂಡ್" ಎಂಬ ಹೆಸರಿದೆ. ಕೋಮಟಿ ಎಂಬ ಪದವೇ ನಮ್ಮನ್ನು ಚಕಿತರನ್ನಾಗಿ ಮಾಡುವುದು. ನಮ್ಮ ನಾಲಿಗೆಗಳಲ್ಲಿ ಲೀಲಾಜಾಲವಾಗಿ ಉರುಳಾಡುವ 'ಕೋಮಟಿ' ಪದ ಗಾದೆಗಳಲ್ಲಿಯೂ ಸ್ಥಾನ ಗಿಟ್ಟಿಸಿಕೊಂಡಿದೆ. ಡಾ॥ ಹ್ರೋಮ್ನಿಕ್ ಅವರು ಆ ಪದದ ಮೂಲದ ಬಗ್ಗೆ ದೀರ್ಘ ಅಧ್ಯಯನ ಮಾಡಿ, "ಈ ಹೆಸರಿನ ಮೂಲ ಭಾರತ, ಅದರಲ್ಲೂ ದಕ್ಷಿಣ ಭಾರತ. ಈ ಜನಾಂಗದ ಮನೆ ಮಾತು ತೆಲುಗು, ದ್ರಾವಿಡ ಭಾಷೆಗಳಲ್ಲೊಂದು. ಕೆಲವರು ಇವರನ್ನು ವರ್ತಕರು ಎಂದು ಕರೆದಿದ್ದರೆ ಕೆಲವರು ಬ್ರಾಹ್ಮಣರು ಎಂದು ಕರೆದಿದ್ದಾರೆ" ಎಂದು ದೊಡ್ಡ ವ್ಯಾಖ್ಯೆಯನ್ನೇ ಬರೆದಿದ್ದಾರೆ.

ಸ್ಥಳೀಯರು (ಆಫ್ರಿಕನ್) ಇದನ್ನು ಕೋಮಟಿಲ್ಯಾಂಡ್ ಎಂದೇಕೆ ಕರೆದರು ? 'ವೀರಾಗುನೆ' ಎಂಬ ಹೆಸರಿನ ರಾಜ ಇಲ್ಲಿ ರಾಜ್ಯಭಾರ ಮಾಡಿದ್ದನಂತೆ. ಭಾರತದಲ್ಲಿ ಕೊಂಡವೀಡು ಎಂಬಲ್ಲಿ ಆಳುತ್ತಿದ್ದ ಪೇಡಾ (ಪೆದ್ದ ಎಂಬುದರ ಅಪಭ್ರಂಶವಿರಬಹುದು) ಕೋಮಟಿವರ್ಮ ಎಂಬ ದೊರೆ ೧೪೨೦ರಲ್ಲಿ ಹಡಗಿನಲ್ಲಿ ಕಳುಹಿಸಿದ ವ್ಯಾಪಾರಿಗಳು "ಕೇಪ್ ಡಿಯಬ್" (ಇಂದಿನ ಕೇಪ್ ಆಫ್ ಗುಡ್‌ಹೋಪ್)ವರೆವಿಗೂ ತಲುಪಿದ್ದರಂತೆ. ಹಾಗೆಯೇ ಅನೇಕ ವ್ಯಾಪಾರಿಗಳು ಹಿಂದಿರುಗುವಾಗ ಹೆಸರಕತ್ತೆಯನ್ನೂ ತೆಗೆದುಕೊಂಡು ಹೋಗಿದ್ದರಂತೆ.

ಈ ಚರಿತ್ರೆಯೆಲ್ಲಾ ಖಗೋಳವಿಜ್ಞಾನದ ಪತ್ರಿಕೆಯಲ್ಲೇಕೆ ? ಎಂಬ ಕುತೂಹಲ ಉಂಟಾಗುವುದು ಸಹಜ. ೧೯೮೫ರ ಸೆಪ್ಟೆಂಬರ್‌ನಲ್ಲಿ ಡಾ॥ ಹ್ರೋಮ್ನಿಕ್ ಕೋಮಟಿಲ್ಯಾಂಡ್‌ನಲ್ಲಿಯ ಒಂದು ಪುರಾತನ ದೇವಾಲಯವನ್ನು ಕಂಡರು. ವ್ಯವಸ್ಥಿತವಾಗಿ ಹರಡಿದಂತೆ ಕಂಡುಬಂದ ಬಂಡೆಗಳ ರಾಶಿಯ ಮಧ್ಯೆ ಎತ್ತರವಾದ ಗೋಡೆಗಳು, ಪೀಠ, ಕಲ್ಯಾಣಿ, ಇವೆಲ್ಲವೂ ಇದ್ದುವು. ಅಸ್ತಮಿಸುವ ಸೂರ್ಯನ ರಥ ಎಂದೇ ಇದು ವಿಖ್ಯಾತವಾಗಿದೆ *(Dying Sun Chariot Temple)*. ಇದರ ಖಗೋಳೀಯ ಮಹತ್ವವನ್ನು ಕಂಡುಕೊಂಡ ಅವರು ಪುನಃ ಮಾರ್ಚ್ ಮತ್ತು ಜೂನ್‌ನಲ್ಲಿ ಭೇಟಿಕೊಟ್ಟರು. ತಮ್ಮ ಅನಿಸಿಕೆಗಳನ್ನು ಖಚಿತಪಡಿಸಿಕೊಂಡರು. ಪರಿಣಾಮವೇ ಆ ಪ್ರಬಂಧ.

ಸ್ಥಳೀಯ ಕೃಷಿಕರು ಫಸಲು ಕೊಯ್ಯುವ ಸಂದರ್ಭದಲ್ಲಿ, ಬೀಜ ಬಿತ್ತುವ ಮೊದಲು, ಹೀಗೆ ವಿಶೇಷ ಸಂದರ್ಭಗಳಲ್ಲಿ ಇಲ್ಲಿ ಬಂದು "ಪೂಜಿಸುತ್ತಾರೆ". ಹಣ್ಣು ಹಂಪಲು, ಬೀಜ, ದವಸ ಮುಂತಾದವುಗಳನ್ನು ಅರೆದು ಕಲ್ಲುಗಳಿಗೆ ಮೆತ್ತುತ್ತಾರೆ. ಸೂರ್ಯೋದಯ, ಅಸ್ತಮಾನಗಳನ್ನು ವೀಕ್ಷಿಸಿ ಹಿಂದಿರುಗುತ್ತಾರೆ. ಇದು ತಲತಲಾಂತರದಿಂದ ನಡೆದುಕೊಂಡುಬಂದಿದೆ.

ದೇವಾಲಯದ ರಚನೆ ಗುರಾಣಿಯ ಆಕಾರದಲ್ಲಿದೆ. (ಚಿತ್ರ. ೧) ಇದನ್ನು ಸೂರ್ಯರಥ ಎಂದು ಕರೆಯೋಣ. ಕಮಾನಿನ ಆಕಾರದಲ್ಲಿರುವ ಪೂರ್ವದ ಪ್ರವೇಶದ್ವಾರಕ್ಕೆ ನೇರವಾಗಿ ಇನ್ನೊಂದು ಸಣ್ಣ ದ್ವಾರವಿದೆ. ಅದೇ ದಿಕ್ಕಿನಲ್ಲಿ ನೋಟ



ಚಿತ್ರ ೧



ಚಿತ್ರ ೨

ಹರಿಸಿದಾಗ ದೂರದ ಒಂದು ಶಿಖರ ಕಾಣುತ್ತದೆ. ಜೂನ್ ೨೨ರ ಸೂರ್ಯಾಸ್ತದ ಬಿಂದು ಅದು. ಇದೇ ರೀತಿ ಅಂದಿನ ಸೂರ್ಯೋದಯದ ಬಿಂದುವೂ ನಿಖರವಾದ ಗುರುತು ಪಡೆದಿದೆ. ಇದನ್ನು ವೀಕ್ಷಿಸಲು ಅನುಕೂಲವಾಗುವಂತೆ "ರಥ"ದ ನೈರುತ್ಯ ದಿಕ್ಕಿನಲ್ಲಿ ಒಂದು ಪೀಠವಿದೆ. ಒಂದು ಮೂಲೆ ಮೇಲೆದ್ದಿರುವ ತ್ರಿಕೋಣಾಕಾರದ


ಕಾಶ್ಮೀರದ ಸೂರ್ಯ ದೇವಾಲಯ

ರಚನೆಯೂ ಇದೆ. ಇದಕ್ಕೆ "ಮೂಗು" ಎಂದೇ ಹೆಸರು.

ಪೀಠವನ್ನೊಳಗೊಂಡ ರಥದ ಮಧ್ಯಭಾಗಕ್ಕೆ "ಸೂರಿ" ಎಂದು ಹೆಸರಿದೆ. ಈ ಪದದ ಮೂಲವನ್ನು ಹುಡುಕಿದ ಹ್ರೋಮ್ನಿಕ್ ಅವರು, ಇದರ ಅರ್ಥ "*a wise or learned man - a Dravidian (Kan)* word" ಎಂದು ಬರೆದಿದ್ದಾರೆ. (ಕನ್ನಡ ರತ್ನಕೋಶದಲ್ಲಿ ವಿದ್ವಾಂಸ, ಬಲ್ಲಿದ ಎಂಬ ಅರ್ಥವಿದೆ).

ಜೂನ್ ೨೨ ಎಂಬ ತಾರೀಖು ದಕ್ಷಿಣಾಯನದ ಆರಂಭದ ದಿನ. ನಮಗೆ ಅಂದರೆ ಉತ್ತರ ಗೋಳಾರ್ಧದಲ್ಲಿರುವವರಿಗೆ ಬೇಸಿಗೆಯ ಮುಕ್ತಾಯವನ್ನು ಇದು ಸೂಚಿಸುತ್ತದೆ. ಆದರೆ ಸಮಭಾಜಕ ವೃತ್ತಕ್ಕಿಂತ ದಕ್ಷಿಣದಲ್ಲಿರುವವರಿಗೆ ಇದು ಛಳಿಗಾಲದ ಮುಕ್ತಾಯವನ್ನು ಸೂಚಿಸುತ್ತದೆ. ಇದು ಈ ದೇವಾಲಯ ಅಥವಾ ರಥದ ಉದ್ದೇಶದ ಸುಳಿವನ್ನು ಕೊಡುತ್ತದೆ. ಇಂದಿಗೂ ಜೂನ್ ೨೨ಕ್ಕೆ ಅಲ್ಲಿ ಜನ ಸೇರುತ್ತಾರೆ. (ಬಹುಶಃ ನಮ್ಮಲ್ಲಿಯ ಜಾತ್ರೆಯಂತೆ). ಸಂಜೆ ೪.೫೦ರ ಹೊತ್ತಿಗೆ ಸೂರ್ಯ ಅಸ್ತಮಿಸಿದ್ದನ್ನು ಶ್ರದ್ಧೆಯಿಂದ ವೀಕ್ಷಿಸಿ, ಹರ್ಷಿತರಾಗಿ ಹಿಂದಿರುಗುತ್ತಾರೆ. ಅವರಿಗಾಗಿ ಎತ್ತರದ ಗೋಡೆಯೇ ಹೊರಾವರಣದಲ್ಲಿದೆ.

ಈ ರಥಕ್ಕೆ ಸೇರಿದ ಇನ್ನೆರಡು ಚಕ್ರಗಳು ಉತ್ತರ ದಕ್ಷಿಣಗಳಲ್ಲಿ ಸುಮಾರು ಮುಕ್ಕಾಲು ಕಿ. ಮೀ. ದೂರದಲ್ಲಿವೆ. ಇವುಗಳಿಗೆ ಚಂದ್ರ ಎಂಬ ಹೆಸರಿದೆ. ಈ ಪ್ರದೇಶದ ನಕ್ಷೆಯನ್ನು ಗಮನಿಸಿದಾಗ ಈ "ಚಕ್ರಗಳು" ರಥದ ಅಚ್ಚಿನ ಮೇಲಿಲ್ಲ. ಆದರೆ ದಕ್ಷಿಣದ ಚಕ್ರ ಸಮಾನಾಂತರವಾಗಿ ಹಿಂದೆ ಸರಿದಿದೆ ಎಂದು ತಿಳಿಯುತ್ತದೆ.

ಚಂದ್ರ ಎಂಬ ಹೆಸರೇ ಈ ಚಕ್ರಗಳ ಉದ್ದೇಶವನ್ನು ವಿವರಿಸುತ್ತದೆ. ಚಂದ್ರನ ಖಗೋಳೀಯ ಪಥ ಸೂರ್ಯನ ಪಥಕ್ಕಿಂತ ಸ್ವಲ್ಪ ಭಿನ್ನವಾಗಿದೆ ಎಂಬ ಅಂಶ ಈ ರಚನೆಯಿಂದ ಸ್ಪಷ್ಟವಾಗುತ್ತದೆ. ಚಂದ್ರನ ವೀಕ್ಷಣೆಗೆ ಅನುಕೂಲಕರವಾಗಿ ಈ ರೇಖಾಗಣಿತದ ಆಕೃತಿಯನ್ನು ರಚಿಸಲಾಗಿದೆ. ಜುಲೈ/ಆಗಸ್ಟ್ ತಿಂಗಳುಗಳಲ್ಲಿ ಬರುವ ಅಮಾವಾಸ್ಯೆ ಒಂದು ವಿಶೇಷ ಸಂದರ್ಭವಾಗಿದೆ. ಇದಕ್ಕೆ 'ಅತಿ ಅಮಾವಾಸಿ' ಎಂದು ಹೆಸರಿದೆ. (ಇದೇ ಅಮಾವಾಸ್ಯೆಯನ್ನು ತಮಿಳರು ತೈ ಎಂದು ಆಚರಿಸುತ್ತಾರೆ ಎಂದು ಇಲ್ಲಿ ನೆನಪುಮಾಡಿಕೊಳ್ಳಬಹುದು. ಆದರೆ ಉತ್ತರಗೋಳಾರ್ಧದಲ್ಲಿರುವ ಕಾರಣ ಈ ಆಚರಣೆ ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ನಡೆಯುತ್ತದೆ).

ಈ ವಿನ್ಯಾಸಗಳ ನಡುವೆ ಹಳ್ಳಕೊಳ್ಳಗಳು ಮಾತ್ರವಲ್ಲದೆ ಒಂದು ಸಣ್ಣ ನದಿಯೂ ಇದೆ. ಆದರೆ ಇವು ಯಾವುವೂ ('ಸೂರಿ' ಎಂಬ ವಿದ್ವಾಂಸನ) ವೀಕ್ಷಣೆಗೆ ಅಡಚಣೆ ಉಂಟುಮಾಡುವುದಿಲ್ಲ.

'ಉತ್ತರಮಾರ್ಗ' ಅಥವಾ *The Way North* ಎಂದು ಕರೆಯಿಸಿಕೊಳ್ಳುವ ವಿನ್ಯಾಸವೂ ರಹಸ್ಯಮಯವಾಗಿ ಕಾಣುತ್ತದೆ. ಹ್ರೋಮ್ನಿಕ್ ಅವರ ವಿವರಣೆಯಿಂದ ಅಲ್ಲೊಂದು ತಪಸ್ತ್ರಿಕೋಣ (Penance triangle), ಚೌಕಾಕಾರದ ಕೊಳ (ನಮ್ಮಲ್ಲಿಯ ಕಲ್ಯಾಣಿ), ಸಣ್ಣ ಜಲಪಾತ - ಇವೆ ಎಂದು ಮಾತ್ರ ತಿಳಿಯುತ್ತದೆ.

\+ + +

ದೂರದ ಆಫ್ರಿಕಾದಲ್ಲಿ ಹೀಗೊಂದು ಸಾಂಸ್ಕೃತಿಕ (ಮತ್ತು ವೈಜ್ಞಾನಿಕ) ಚಿಹ್ನೆಯನ್ನು ಅಚ್ಚೊತ್ತಿದ್ದವರು ನಮ್ಮ ಪೂರ್ವಜರೇ ಎಂಬುದರಲ್ಲಿ ಈಗ ಯಾವ ಸಂಶಯವೂ ಉಳಿಯುವುದಿಲ್ಲ. ಇದರ ಉದ್ದೇಶವೂ ಸ್ಪಷ್ಟವಾಗಿಯೇ ಇದೆ. ಭೂಗೋಳದ ಮೇಲೆ ನಮ್ಮ ಸ್ಥಾನವನ್ನು ನಿರ್ಧರಿಸಿಕೊಳ್ಳುವುದು; ಆಮೇಲೆ ಅದಕ್ಕೆ ಅನುಗುಣವಾಗಿ ಕ್ಯಾಲೆಂಡರ್ ನಿರ್ಮಿಸಿ, ಜನಜೀವನದ ಆಗುಹೋಗುಗಳನ್ನು ಯೋಜಿಸಿಕೊಳ್ಳುವುದು.

ಈ ಕಾರ್ಯವನ್ನು ನಿರ್ವಹಿಸಿದ್ದು ಎಂದು ಎಂಬ ಮುಖ್ಯ ಪ್ರಶ್ನೆ ಈಗ ಎದುರಾಗುತ್ತದೆ. ಭಾರತದಲ್ಲಿ ದೊರಕುವ ಇಂತಹ ರಚನೆಗಳ ಸಹಾಯದಿಂದ ಒಂದು ಅಂದಾಜು ಮಾತ್ರ ಮಾಡಬಹುದು. ಈ ಸಂದರ್ಭದಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋಫಿಸಿಕ್ಸ್‌ನ ಪ್ರೊಫೆಸರ್ ಎನ್. ಕಾಮೇಶ್ವರರಾವ್ ಅವರು ನಡೆಸಿದ ಅಧ್ಯಯನವನ್ನು ಬಳಸಿಕೊಳ್ಳಬಹುದು. ಚಿತ್ರದುರ್ಗದ ಬ್ರಹ್ಮಗಿರಿ ಮತ್ತು ಗುಲ್ಬರ್ಗಾದ ಹನಮಸಾಗರಗಳಲ್ಲಿ ಪುರಾತನ ಶಿಲಾವಿನ್ಯಾಸಗಳಿದ್ದುದನ್ನು ಅವರು ಅಭ್ಯಸಿಸಿದ್ದಾರೆ. ಹನಮಸಾಗರದ ಖಾಸಗೀ ಜಮೀನೊಂದರಲ್ಲಿ ಚಕ್ರಕಟ್ಟೆ ಎಂದು ಆಸುಪಾಸಿನಲ್ಲಿ ಜನಪ್ರಿಯವಾಗಿರುವ ಚೌಕಾಕಾರದ ಆಕೃತಿಯಲ್ಲಿ ೨-೩ ಮೀಟರ್ ವ್ಯಾಸದ ಬೃಹತ್ ಬಂಡೆಗಳಿವೆ. ಕರಾರುವಾಕ್ಕಾಗಿ ಹನ್ನೆರಡು ಮೀಟರ್‌ಗಳ ದೂರದಲ್ಲಿರುವ ಇವುಗಳನ್ನು ಉರುಳಿಸಿಕೊಂಡು ತಂದು ಹೀಗೆ ವ್ಯವಸ್ಥಿತವಾಗಿ ಜೋಡಿಸಿರಬೇಕು. ಯಾವ ಆಧಾರದ ಮೇಲೆ ಈ ಬಗೆಯ ನಿಖರತೆಯನ್ನು

ಸಾಧಿಸಲಾಗಿದೆ ಎಂಬ ಅಂಶ ನಮ್ಮನ್ನು ಮೂಕರನ್ನಾಗಿಸುತ್ತದೆ.

ಹನಮಸಾಗರದ ಅಕ್ಷಾಂಶಕ್ಕೆ ಸರಿಯಾಗಿ ಜೂನ್ ೨೨ರ ಹಾಗೂ ಡಿಸೆಂಬರ್ ೨೨ರ ಸೂರ್ಯೋದಯ, ಸೂರ್ಯಾಸ್ತದ ಬಿಂದುಗಳು ಚೌಕದ ಮೂಲೆಗಳ ದಿಕ್ಕಿನಲ್ಲಿ ಕಾಣುತ್ತವೆ. ಇಂದು ತ್ರಿಕೋಣಮಿತಿಯ ಸೂತ್ರಗಳನ್ನು ಆಧಾರವಾಗಿಟ್ಟುಕೊಂಡು ಈ ಅಂಶಗಳನ್ನು ಪರಿಶೀಲಿಸುವುದು ಸಾಧ್ಯವಾಗಿದೆ.

ಚಕ್ರಕಟ್ಟೆಯ ರಚನೆಗಳಲ್ಲಿಯೂ ಚಂದ್ರನ ಸ್ಥಾನಕ್ಕೊಂದು ವಿಶೇಷ ಮಾರ್ಪಾಟು ಕಂಡುಬರುತ್ತದೆ.

ಈ ಎಲ್ಲ ಬಗೆಯ ಕಲ್ಲಿನ ರಚನೆಗಳೂ ಕ್ರಿಸ್ತಪೂರ್ವ ೧೦೦೦ದಿಂದ ೮೦೦ರ ಅವಧಿಯವು ಎಂದು ಪುರಾತತ್ತ್ವ ಸಂಶೋಧಕರ ಅಭಿಪ್ರಾಯ. ಅಂದರೆ 'ಕಾಲಿಯ ದ್ವೀಪ'ದ ಸಾಹಸಯಾತ್ರೆ, ಅಲ್ಲಿಯ ಸೂರ್ಯರಥದ ರಚನೆಯೂ ಅಷ್ಟು ಹಿಂದಿನದೇ ಎಂದು ಆಶ್ಚರ್ಯಪಡುವ ಸರದಿ ನಮ್ಮದಾಗುತ್ತದೆ.

\+ + +

ಈ ಪರಂಪರೆ ಮುಂದುವರೆಯಲಿಲ್ಲವೇ ? ಎಂಬ ಪ್ರಶ್ನೆ ಈಗ ಏಳುತ್ತದೆ. ಸೂರ್ಯಚಂದ್ರರ ಉದಯಾಸ್ತಗಳನ್ನು ಅದರಲ್ಲೂ ವಿಶೇಷವಾಗಿ ವಿಷುವದ್ ಬಿಂದುವನ್ನು ದಾಟುವ ದಿನಗಳಂದು ಹಾಗೂ ಉತ್ತರಾಯಣ ಮತ್ತು ದಕ್ಷಿಣಾಯನಗಳಂದು ಗಮನಿಸುವ ಕಾರ್ಯ ಅತಿ ಮಹತ್ತ್ವದ್ದು. ವರ್ಷವೊಂದಕ್ಕೆ ೩೬೫ ದಿನಗಳಲ್ಲ; ೩೬೫ ೧/೪ ದಿನಗಳು ಎಂಬ ಅಂಶ ತಿಳಿಯಬೇಕಾದರೆ ಈ ವೀಕ್ಷಣೆಗಳನ್ನು ವರ್ಷಾನು ಗಟ್ಟಲೆ ನಡೆಸಿ ಒಟ್ಟುಗೂಡಿಸಬೇಕು. ಕಾಲಗಣನೆಗೆ ಇದು ಅತಿ ಮುಖ್ಯ. ಆದ್ದರಿಂದ ಈ ನಿಟ್ಟಿನಲ್ಲಿ ನಡೆಸಿದ ಮೊದಲ ಪ್ರಯೋಗಗಳಾಗಿ ಈ ಕಲ್ಲಿನ ರಚನೆಗಳು ಪ್ರಾಮುಖ್ಯತೆ ಪಡೆಯುತ್ತವೆ. ವೀಕ್ಷಣೆಗಳ ನಿಖರತೆಯನ್ನು ಹೆಚ್ಚಿಸುವ ಸುಲಭ ಉಪಾಯವೆಂದರೆ ಉಪಕರಣದ ಗಾತ್ರ ಹೆಚ್ಚಿಸುವುದು. ಉದಾಹರಣೆಗೆ, ಶಾಲಾಮಕ್ಕಳು ಬಳಸುವ ಕೋನಮಾಪಿಯಲ್ಲಿ ಒಂದು ಡಿಗ್ರಿ ಅಳೆಯಬಹುದು. ಆದರೆ ಅದೇ ಕೋನಮಾಪಿಯನ್ನು ಹತ್ತುಪಟ್ಟು ದೊಡ್ಡದಾಗಿ ಮಾಡಿದರೆ ಡಿಗ್ರಿಯ ಭಿನ್ನಾಂಶಗಳನ್ನೂ ನಿಖರವಾಗಿ ಅಳೆಯಬಹುದು. ಇದೇ ಕಾರಣದಿಂದ ಈ ಕಲ್ಲಿನ ರಚನೆಗಳು ದೈತ್ಯಾಕಾರ ಪಡೆದವು. ತತ್ಪರಿಣಾಮವಾಗಿ ಅವುಗಳ ಪರಿಚಯವಿಲ್ಲದವರಿಗೆ ಅರ್ಥಹೀನ ಎನಿಸಿರುವುದೂ ಸಾಧ್ಯ.






*ಮೊಢೇರಾದ ಸೂರ್ಯ ದೇವಾಲಯ*

ಇದೇ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಬಂದ ಖಗೋಳಜ್ಞರಿಗೆ ಭೂಮಿ ಗೋಳಾಕಾರ ಎಂಬ ಅಂಶ ತಾನೇತಾನಾಗಿ ಅರಿವಾಗುತ್ತದೆ. ಅಂದಿನ ಖಗೋಳಜ್ಞರು ಗಣಿತಪಟುಗಳು ಆಗಿದ್ದರಿಂದ, ಇಪ್ಪತ್ತಮೂರುವರೆ ಡಿಗ್ರಿ ಅಕ್ಷಾಂಶದ ಮಹತ್ತ್ವವೂ ಆಗಲೇ ಮನದಟ್ಟಾಗಿದ್ದಿರಬೇಕು. ಆದ್ದರಿಂದ ಕೆಲವೊಂದು ಮುಖ್ಯ ದೇವಾಲಯಗಳು ಈ ಅಕ್ಷಾಂಶದ ಆಸುಪಾಸಿನಲ್ಲಿ ನಿರ್ಮಾಣವಾದವು.

ಖಗೋಳ ವೈಜ್ಞಾನಿಕ ಅಂಶಗಳನ್ನು ಎತ್ತಿ ಹಿಡಿಯುವ ದೇವಾಲಯಗಳಲ್ಲಿ ಮುಖ್ಯವಾದ ಕೆಲವನ್ನು ವಿವರವಾಗಿ ಅಭ್ಯಸಿಸಲಾಗಿದೆ. ಕಾಶ್ಮೀರದ ಮಾರ್ತಾಂಡ ದೇವಾಲಯ, ಗುಜರಾತ್‌ನ ಮೊಢೇರಾದ ಸೂರ್ಯ ದೇವಾಲಯ, ಸಾಂಚಿಯ ಬೌದ್ಧ ಸ್ತೂಪಗಳನ್ನು ಈ ದೃಷ್ಟಿಯಿಂದ ನೋಡೋಣ.

ಸಾಂಚಿಯ ಸ್ತೂಪ ಇವುಗಳಲ್ಲಿ ಹಳೆಯದು. ಅಶೋಕ ಚಕ್ರವರ್ತಿಯ ಕಾಲದ್ದೆಂದು ಹೇಳಲಾಗುವ ಈ ಕಟ್ಟಡದ ವಿನ್ಯಾಸ ''ಸೊಟ್ಟ''ವಾಗಿದೆ. ಅಂದರೆ ಉತ್ತರ, ದಕ್ಷಿಣ ದಿಕ್ಕಿಗೆ ಅಕ್ಷ ನೇರವಾಗಿಲ್ಲ, ಸುಮಾರು ೧೫ ಡಿಗ್ರಿಗಳಷ್ಟು ಓರೆಯಾಗಿದೆ. ಇದನ್ನು ಗಮನಿಸಿ ಮೊದಲಬಾರಿಗೆ ವರದಿ ಮಾಡಿದಾತ ಬ್ರಿಟಿಷ್ ಪುರಾತತ್ವ ಸಂಶೋಧಕ ಸರ್ ಜಾನ್ ಮಾರ್ಷಲ್. ಇದು ಏಕೆ ಓರೆಯಾಗಿದೆ ಎಂಬುದರ ಬಗ್ಗೆ ತರುವಾಯ ಸಾಕಷ್ಟು ಜನ ಗಮನಹರಿಸಿದರು. ವೈಶಾಖ ಪೂರ್ಣಿಮೆಯಂದು (ಬುದ್ಧ ಪೂರ್ಣಿಮಾ) ಚಂದ್ರೋದಯ ಮತ್ತು ಸೂರ್ಯಾಸ್ತ ಬಿಂದುಗಳನ್ನು ಸೇರಿಸುವ ಕಾಲ್ಪನಿಕ ರೇಖೆ ಈ ಕಟ್ಟಡದ ಮಧ್ಯಭಾಗದಿಂದ ಹಾದು ಹೋಗುತ್ತದೆ. ಈ ವಿಶೇಷ ವ್ಯವಸ್ಥೆಗಾಗಿ ಕಟ್ಟಡದ ವಿನ್ಯಾಸವೇ ೧೫ ಡಿಗ್ರಿಗಳಷ್ಟು ತಿರುಗಿದೆ.

ಇಂತಹ ವಿಶೇಷ ವ್ಯವಸ್ಥೆಗೆ ಅವಶ್ಯಕವಾದ ಗಣಿತಜ್ಞಾನ ಇದ್ದುದರ ಬಗ್ಗೆ ಭಿನ್ನಾಭಿಪ್ರಾಯ ಮೂಡುವುದಿಲ್ಲ. ಚಾಂದ್ರಮಾನ ಹಾಗೂ ಸೌರಮಾನ ಕಾಲಗಣನೆ ಮತ್ತು ಅವುಗಳ ನಡುವಿನ ಹೊಂದಾಣಿಕೆಯ ಪ್ರಯತ್ನವೂ ಇದರ ವಿನ್ಯಾಸದಲ್ಲಿ ಅಡಕವಾಗಿರುವುದೊಂದು ವಿಶೇಷ. ಒಳಾವರಣದ ವೃತ್ತವನ್ನು ಹನ್ನೆರಡು ಭಾಗಗಳಾಗಿ ವಿಂಗಡಿಸಿದ್ದು, ಅದರ ಹೊರಾವರಣದ ವೃತ್ತವನ್ನೂ ೧೨ ಭಾಗ ಮಾಡಲಾಗಿದೆ. ಆದರೆ ೧೧ ೨/೯ ಎಂಬ ಭಿನ್ನಾಂಶದ ತಿದ್ದುಪಡಿಯನ್ನು ಅದಕ್ಕೆ ಸೇರಿಸಲಾಗಿದೆ. (ಸಾಂಚಿಯ ಅಕ್ಷಾಂಶ ೨೩° ೨೮')

ಕಾಶ್ಮೀರದ ಮಾರ್ತಾಂಡ ದೇವಾಲಯ (ಕ್ರಿ.ಶ. ೭೫) ಪಶ್ಚಿಮಕ್ಕೆ ತಿರುಗಿವೆ (ಚಿತ್ರ ನೋಡಿ). ಮುಖ್ಯವಿಗ್ರಹ ಕಣ್ಮರೆಯಾಗಿದೆಯಾದರೂ ದೇವಾಲಯದ ಇತರ ಭಾಗಗಳು ಸುಸ್ಥಿತಿಯಲ್ಲಿವೆ. ದೇವಾಲಯದ ಹೊರಸುತ್ತಿನಲ್ಲಿ ಹನ್ನೆರಡು ಕಂಭಗಳಿವೆ. ಒಳಾವರಣದಲ್ಲಿ ೮೮ ಸಣ್ಣ ಕಂಭಗಳಿವೆ. ೨೯.೫ ದಿನಗಳು x ३ = ೮೮ ಅಂದರೆ ಮೂರು ಚಾಂದ್ರ ಮಾಸಗಳ ಅಳತೆ ಇದು. (ಈ ಸಂಖ್ಯೆ ೮೮ ಸಾಂಚಿಯ ರಚನೆಯಲ್ಲೂ ಅಡಕವಾಗಿವೆ).

ಮುಖ್ಯವಿಗ್ರಹ ಇದ್ದಿರಬಹುದಾದ ಮಂಟಪದ ಮಧ್ಯಭಾಗದಿಂದ, ದೇವಾಲಯದ ಆಗ್ನೇಯ ಮತ್ತು ನೈರುತ್ಯ ಮೂಲೆಗಳು ಉತ್ತರಾಯಣ ಮತ್ತು ದಕ್ಷಿಣಾಯನದ ಸೂರ್ಯಾಸ್ತದ ಬಿಂದುಗಳನ್ನು ಸೂಚಿಸುತ್ತವೆ ಎನ್ನುವುದು ಮುಖ್ಯ ಅಂಶ. ಮಂಟಪದಿಂದ ಮುಖ್ಯದ್ವಾರದ ರೇಖೆ ವಿಷುವದ್ ಸೂರ್ಯಾಸ್ತ ಬಿಂದುವನ್ನು

ಅಂದರೆ ಮಾರ್ಚ್ ೨೧ ಮತ್ತು ಸೆಪ್ಟೆಂಬರ್ ೨೨ರ ಸೂರ್ಯಾಸ್ತವನ್ನು ಸೂಚಿಸುತ್ತವೆ.

ಮೊಢೇರಾದ ಸೂರ್ಯ ದೇವಾಲಯವನ್ನು ಅದರ ವಿನ್ಯಾಸದ ಚಿತ್ರದಿಂದಲೇ ಅರ್ಥಮಾಡಿಕೊಳ್ಳಬಹುದು (ಚಿತ್ರ ನೋಡಿ). ಇಲ್ಲಿಯೂ ಗರ್ಭಗುಡಿಯ ಪೂರ್ವಕ್ಕೆ ಕಲ್ಯಾಣಿ ಇದೆ. ಅದರ ಮೂಲೆಗಳು ಉತ್ತರಾಯಣ ದಕ್ಷಿಣಾಯನಗಳ ಸೂರ್ಯೋದಯವನ್ನು ಸೂಚಿಸುತ್ತವೆ. ಈ ಸ್ಥಳದ ಅಕ್ಷಾಂಶ ೨೩° ೩೭' ಎಂಬುದೇ ಒಂದು ವಿಶೇಷ. ಸೂರ್ಯೋದಯದ ಸ್ಥಾನದಲ್ಲಿ ಕೆಲವೇ ಮಿನಿಟ್ (ಒಂದು ಡಿಗ್ರಿಗೆ ಅರವತ್ತು ಮಿನಿಟ್, ಈ ಕೋನ ಎಷ್ಟು ಸಣ್ಣದು ಎಂದು ಊಹಿಸಿಕೊಳ್ಳಲು ಪ್ರಯತ್ನಿಸಿ) ವ್ಯತ್ಯಾಸವನ್ನೂ ಇಲ್ಲಿ ತಿಳಿಯಬಹುದು. ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಮಾತ್ರ ಸೂರ್ಯೋದಯದ ಸ್ಥಾನ ಪುನರಾವರ್ತನೆ ಆಗುತ್ತದೆ ಎಂಬುದರ ಆಧಾರದ ಮೇಲೆ ಒಂದು ವರ್ಷಕ್ಕೆ ೩೬೫ ೧/೪ ದಿನಗಳು ಎಂದು ತಿಳಿಯಬಹುದು.

ಈ ದೇವಾಲಯಗಳು ಕೋಮಟಿಲ್ಯಾಂಡ್‌ನ ಸೂರ್ಯರಥದಂತೆಯೇ ಖಗೋಳ ಪ್ರಯೋಗಾಲಯಗಳು - ಎಂಬುದು ಈಗ ಸ್ಪಷ್ಟವಾಗುತ್ತದೆಯಲ್ಲವೇ ? ಮುಂದಿನ ಪ್ರಶ್ನೆಗಳು ಸಹಜವಾಗಿ ಏಳುವಂತಹವು. 'ಸೂರಿ' ಅಥವಾ ವಿದ್ವಾಂಸನಿಗೆ ಅಂದರೆ ಖಗೋಳವಿಜ್ಞಾನಿಗೆ ಅನುವು ಮಾಡಿಕೊಡುವ ಉದ್ದೇಶದಿಂದ ಇವುಗಳಿಗೆ ಪಾವಿತ್ರ್ಯತೆಯ ಗಂಟು ಹಾಕಲಾಗಿರಬಹುದೇ ? ಈ ಕಾರಣ ಈ ಕಲ್ಲುಗಳನ್ನಾಗಲೀ ಕಟ್ಟಡಗಳನ್ನಾಗಲೀ ಯಾರೂ ಧ್ವಂಸಗೊಳಿಸದೇ ಹಾಗೇ ಉಳಿಸಿರಬಹುದೇ ? ಅಥವಾ ಅದು ದೂರದೃಷ್ಟಿಯೂ ಆಗಿರಬಹುದಲ್ಲವೇ ?

ಇಷ್ಟು ನಿಖರವಾದ ಕಟ್ಟಡಗಳ, ಕಲಾಕೃತಿಗಳ ನಿರ್ಮಾಣ ಏಕೆ ನಿಂತು ಹೋಯಿತು ? ಇದು ಮುಂದಿನ ಪ್ರಶ್ನೆ. ಎಲ್ಲ ದೇವಾಲಯಗಳಲ್ಲಿ ಅಥವಾ ಅರಮನೆಗಳಲ್ಲಿ ಇಂತಹ ಚಾಣಾಕ್ಷ ಅಂಶಗಳು ಸೇರ್ಪಡೆಯಾಗಬಹುದಾಗಿತ್ತು.

ಸಾಂಚಿ ಸ್ತೂಪ

ಯಾವುದೋ ನಿರ್ದಿಷ್ಟ ಹುಣ್ಣಿಮೆಯಂದು ತನ್ನ ಮನೆಯ ಅಂಗಳದ ಒಂದೊಂದು ಮೂಲೆಗೂ ಚಂದ್ರನ ಬೆಳಕು ತಲುಪಬೇಕೆಂದು ಹಂಬಲಿಸಿದ ರಾಜನೊಬ್ಬನೂ ಹುಟ್ಟಿ ಬರಲಿಲ್ಲವೇ ? ಅಥವಾ ಇದನ್ನು ಸೃಷ್ಟಿಸಬಲ್ಲ 'ಸೂರಿ'ಗಳೆಲ್ಲಾ ಕತ್ತು ಬಗ್ಗಿಸಿ ಲೆಕ್ಕಮಾಡತೊಡಗಿ ಆಕಾಶವನ್ನು (ಚಂದ್ರನನ್ನೂ) ನೋಡುವುದನ್ನೇ ಬಿಟ್ಟುಬಿಟ್ಟರೇ ?

ಇವುಗಳೆಲ್ಲದರ ಉತ್ತರ ನಿಗೂಢವಾಗಿಯೇ ಉಳಿದಿದೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಶ್ರೀ ಟಿ. ಚೌಡಯ್ಯ ರಸ್ತೆ, ಬೆಂಗಳೂರು- ೫೬೦ ೦೦೧

## ಬಂತೆಂದರೂ ಇದ್ದುದಿದ್ದೆಯಿತ್ತು

ನಿದ್ದೆ ಮಂಚದ ಮೇಲೆ ಗೊರಕೆ ಹೊಡೆದನು ಸೂರ್ಯ
ಆಕಾಶ ಭೂಮಿಯಲಿ ಕತ್ತಲೆಯ
ಕಾರುಭಾರ.

ರಷ್ಯಾದಲ್ಲಿ ಕೂಲಿಕಾರರ ರಾಜ್ಯ
ರೈತಾಪಿ ಆಡಳಿತ
ಬಂತೆಂದರೂ ಇದ್ದುದಿದ್ದೆಯಿತ್ತು.

ಎಲ್ಲ ಸರಿ ಹೋಯ್ತು
ಬದುಕು ಭೇಷಕ್ಕಾಯ್ತು
ಎನುವಾಗ
ಸೀತೆ ಕಾಡಿಗೆ ಮತ್ತೆ ಹೋಗಬೇಕಾಯ್ತು.

ದ್ವೇಷ ಅಸೂಯೆ ಪಿತೂರಿ
ದ್ವಾಪರದಲ್ಲಿ ಶುರುವಾದ ದಾಯಾದಿ ಕಲಹ
ಇನ್ನು ಮುಗಿದಿಲ್ಲ ಕಲಿ ಬಂದಿದ್ದರು.

ನಮ್ಮ ಮನೆ ಪಕ್ಕವೇ
ಚಿಕ್ಕಪ್ಪನನು ಕಡಿದು ಚೆಲ್ಲಿದರು
ಅಚ್ಚ ಬೆಳಗಿನಲ್ಲೆ
ಅಲ್ಲೆ ಇನ್ನಷ್ಟು ಸಮೀಪ
ಅಮ್ಮ ತಮ್ಮ ಸೇರಿ ಅಣ್ಣನ್ನ ಕೊಚ್ಚಿದರು
ಕಪ್ಪಿರುಳ ತೆರೆಮರೆಯಲ್ಲಿ, ಗರ್ಭಿಣಿ
ಅಣ್ಣನ ಹೆಂಡತಿಯು ವಿಧವೆಯೀಗ
ಕೊಲೆಗೀಡಾದವರು ಸಾಬಸ್ತರೇನಲ್ಲ

ಹೊಲೆಮಾದಿಗ ಶಬ್ದ ಕಿವಿಗೆ ಕಾಸಿದ ಸೀಸ
ಬೀಳುತ್ತಲೇ ಇರುವ ಲಾಟಿಯೇಟು.

ಕೊಂದವರು ಕೆಟ್ಟು ಮೂರು ದಿನ
ನಾ ಬದುಕಿ ಆರುದಿನ
ಉಳಿದಿದ್ದು ಸಾಯೋಗಂಟೆ ತುಡಿವ ಪ್ರಾಣ.
ದಿಬ್ಬೂರ ಬಸವ ಹೆಬ್ಬೂರ ಹಸುವನ್ನೇರಿ
ಗಬ್ಬ ಕಟ್ಟಿದ ರೀತಿ ಕಣ್ಣೆದುರ ಲೀಲೆ
ತೂಫಿರಿಯುತಿದೆ ಮುಗಿಲು
ಕಾಫಿರನಂತೆ ಕುಡಿವ ನೆಲ
ಬೊಗಸೆಯೊಡ್ಡಿ

ಎಲ್ಲಿರುವೆ ಜೀವದಾಯಿ ಬೆಳಕೆ ?
ಮುಖದೋರು !

ದಶದಿಕ್ಕು ತಲೆಕೆಟ್ಟು ಕುಳಿತಿರುವಾಗ
ಶ್ರಾವಣವು ಹುಟ್ಟಿಲ್ಲ ಗೌರಿ ಬಂದಿಲ್ಲ.
ನವರಾತ್ರಿ ನಾಚಿಕೆ ಪಟ್ಟು
ದೀವಳಿಗೆ ದಿವಾಳಿಯಾಯ್ತು-
ನಮಗಿಲ್ಲ ಹಬ್ಬವಿನ್ನು.
ಈ ಸ್ಥಿತಿಯಲ್ಲಿ ದೇಶದೆದೆ ದಡ್ಡು ಬಿದ್ದಿರುವಾಗ
ಮನ ಮನ ಹುಳಿತಿರಲು
ಎಣ್ಣೆ ಸವರಿದ ಮಲ್ಲಗಂಬ
ಹತ್ತಿ ಇಳಿಯುವ ಭೂಪ
ಆಟದ ವಿಲಾಸ ಬಲ್ಲ ಮುಖ್ಯ
ನಮಗೆ ಬೇಕು ಈಗ ?

ಮನೆಯನ್ನು ಹೆಂಡದ ಹಟ್ಟಿ ಮಾಡಿ
ಸುಳಿರಾಣಿಯ ಕೂಡಿ
ಹೆಂಡತಿಯ ಹೊಟ್ಟೆಯಲಿ ಬೆಂಕಿ
ಸುರಿಯುವುದು

ಏಯ್ಡ್ಸ್ ಜೀವವನೇರಿ
ತಲೆ ಮೊಟಕುತಿದ್ದರೂ
ಸ್ವ ವಿಲಾಸದಲಿ ಮುಳುಗೆದ್ದು
ಅಗ್ನಿ ಮಿತ್ರನ ಹಾಗೆ
ಜನಕ್ಕೆ ಪಾದ ತೋರುವುದು.

ಜಾತಿ ಹಣ ಅಧಿಕಾರ ಸರ್ವಸ್ವವಾಗಿರಲು
ಸಮಸ್ಯೆ ಮೇಲೆ ಸಮಸ್ಯೆ ಸುತ್ತುವರಿದಿರಲು
ಬಿಡಿಸುವವರಾರು ?

ನಾಗಮಣಿಯರಸಿ ಹುಚ್ಚು ಹಿಡಿದವರಂತೆ
ಓಡಾಡುವರು ಬೆರಳೆಣಿಕೆ ಮಂದಿ.
ಮಣಿ
ರೋಗ ನಿವಾರಕ, ಅಧಿಕಾರಕಾರಕ
ಬಯಕೆ ಸಾಧನವೆಂದು ಹುಡುಕುವರು
ದುರ್ದೈವಕ್ಕೆ ಇದ್ದಲ್ಲೆ ಅದು ಮಾಯ.

ತಮ್ಮ ಬೆಳಕನು ತಾವೆ
ಕಂಡುಕೊಂಡರು
ಗಾಂಧಿ ಬುದ್ಧ ಬಸವ
ಹಾಗೆ ಮಾಡದೆ ನಾನು
ನೀನು ಯದುವಾ.

ವೀಚಿ
ಚಿಕ್ಕ ವೀರಯ್ಯನ ಪಾಳ್ಯ, ಶಿರಾ ಗೇಟ್, ತುಮಕೂರು

# ಮುಸ್ಲಿಂ ಮೂಲಭೂತವಾದ ಮುಖಾಮುಖಿ ಹೇಗೆ?

ರಹಮತ್ ತರೀಕೆರೆ

*25ಕೋಟಿ ಅಲ್ಪಸಂಖ್ಯಾತರು ನಾಲಗೆಯಲ್ಲಿ ಸದಾ ಛಾರ್ಜ್‌ಶೀಟ್ ಇಟ್ಟುಕೊಂಡು ಇರುವ ಕೋಮುವಾದದಿಂದ ಉಳಿಯಲು ಭಾರತದ ಸಣ್ಣಪುಟ್ಟ ಕಿರುಕುಳಗಳ ಜತೆಗೇ ಆತ್ಮವಿಶ್ವಾಸದಲ್ಲಿ ಬದುಕಲು ಸಾಧ್ಯವಾಗಿರುವದು, ಅವರು ಎಲ್ಲರಂತೆ ದೈನಂದಿನ ಗೋಳು ಸಂತೋಷಗಳ ಜತೆ ಬದುಕುತ್ತಿರುವುದರಿಂದ; ಬಹುಸಂಖ್ಯಾತ ಹಿಂದೂಗಳು ಕೋಮುವಾದಿಗಳ ತರ್ಕಕ್ಕೆ ತಮ್ಮ ಒಪ್ಪಿಗೆಯನ್ನು ಕೊಡದೆ ಇರುವುದರಿಂದ; ಸೆಕ್ಯುಲರ್ ಚಿಂತಕರು ಕೋಮುವಾದವನ್ನು ತೀವ್ರ ವಿಮರ್ಶೆಯ ಮೂಲಕ ನಿಗ್ರಹಿಸಿರುವುದರಿಂದ. ಒಟ್ಟಿನಲ್ಲಿ ಕೋಮುವಾದದ ಇಲ್ಲವೇ ಮೂಲಭೂತವಾದದ ಮುಖಾಮುಖಿಯು ಈ ಸಂಗಾತಿಗಳೆಂಬ ಕನ್ನಡಿಗಳಿಲ್ಲದೆ ನಡೆದೇ ಇಲ್ಲ. ಆತಂಕವೆಂದರೆ ಇತ್ತೀಚೆಗೆ ಈ ಸಂಗಾತಿಗಳು ಹಿಡಿವ ಕನ್ನಡಿಗಳಲ್ಲೂ ಕೋಮುವಾದದ ಜಿಡ್ಡು ಹತ್ತುತ್ತಿದೆಯೇ ? ಎಂದು ಶಂಕೆ ಬರುತ್ತಿರುವುದು.*

ನಮ್ಮೂರ ಕಡೆ ಮುಸ್ಲಿಮರು ಬೀದಿಜಗಳ ಮಾಡುವಾಗ 'ನಾನು ಯಾವ ಫಲಾತೂನ್ ಬಂದರೂ ಹೆದರುವುದಿಲ್ಲ' ಎಂದು ಹೇಳುವುದುಂಟು. ಯಾರು ಈ ಫಲಾತೂನ್ ? ನನಗೆ ಬಹಳ ದಿನ ಕೊರೆಯುತ್ತಿತ್ತು. ಸೂಫಿಗಳ ಅಧ್ಯಯನ ಮಾಡುವಾಗ ತಿಳಿಯಿತು - ಫಲಾತೂನ್ ಎಂದರೆ ಪ್ಲೇಟೋ ! ಒಂದು ಪದ ತನ್ನ ಗರ್ಭದಲ್ಲಿ ಎಷ್ಟೊಂದು ಚರಿತ್ರೆ ಅಡಗಿಸಿಕೊಂಡಿದೆ ? ದೈನಿಕ ಮಾತುಕತೆಯಲ್ಲಿ ಗ್ರೀಕ್ ತತ್ವಜ್ಞಾನಿಯೊಬ್ಬ ಸೇರಿಹೋಗಿರುವ ಈ ಪರಿ ಕಂಡು ಮೈ ಜುಂ ಎಂದಿತು. ಇಸ್ಲಾಮಿಕ್ ದರ್ಶನಶಾಸ್ತ್ರದಲ್ಲಿ ಗ್ರೀಕ್ ಚಿಂತಕರೊಡನೆ ಸಂವಾದ ನಡೆಸಿರುವ ಪ್ಲೇಟೋನನ್ನು, ದೊಡ್ಡ ಜ್ಞಾನಿ ಎಂದು ಗೌರವಿಸಿರುವ ಉಲ್ಲೇಖಗಳೂ ವರ್ಣಚಿತ್ರಗಳೂ ಮತ್ತೆ ಮತ್ತೆ ಬರುತ್ತವೆ. ಇದು ಇಸ್ಲಾಮಿಕ್ ಸಂಸ್ಕೃತಿಯು, ಮೂಲಭೂತವಾದಿಗಳ ಅಂಕೆಯನ್ನು ಮೀರಿ ಪರಿಸರದಿಂದ ಕಲಿಯಲು ತೋರಿದ ವಿನಯ ಮತ್ತು ಧೀಮಂತಿಕೆ. ಇಸ್ಲಾಂ ತಾನು ಹೋದಕಡೆಯಲ್ಲೆಲ್ಲ, 'ಮೂಲ' ಶುದ್ಧರೂಪದಲ್ಲಿ ಇಡಬೇಕು ಎಂಬ ಹಠಗಾರರನ್ನು ಲೆಕ್ಕಿಸದೆ, ಸಂಗಾತಿ ಸಂಸ್ಕೃತಿಗಳೊಡನೆ ಕೊಡುಕೊಳೆ ನಡೆಸಿತು. ಇದನ್ನು ಕನ್ನಡಿಯಲ್ಲಿ ಕಲಿಯುವ ಕಲೆ ಎಂದು ಕರೆಯಬಹುದು. ಇದನ್ನು ಸಾಧ್ಯಗೊಳಿಸಿದವರು, ದುಡಿಮೆಗಾರರು ಕವಿಗಳು ಚಿತ್ರಕಾರರು ತತ್ವಜ್ಞಾನಿಗಳು ಸೂಫಿಸಂತರು. ಅದರಲ್ಲೂ ಇಂಡಿಯಾದ ಬಹು ಸಂಸ್ಕೃತಿ ಬಹುಭಾಷೆ ಬಹುಧರ್ಮಗಳು ಸೇರಿ ನಿರ್ಮಿಸಿರುವ ಕನ್ನಡಿಗಳು, ಕವಿ ಇಕ್ಬಾಲ್ ರಾಮನ ಮೇಲೆ ಪದ್ಯ ಬರೆಯಲು, ಸೂಫಿಸಂ ಬೆಳೆಯಲು, ಹಿಂದೂಸ್ತಾನಿ ಸಂಗೀತ ಹುಟ್ಟಲು ಕಾರಣವಾಗಿವೆ. ''ಭಾರತೀಕರಣಗೊಳ್ಳಿ'' ಎಂದು ಅಬ್ಬರಿಸುವ ಕೋಮುವಾದಿಗಳಿಗೆ, ಮುಸ್ಲಿಮರು ಇಸ್ಲಾಮಿನಿಂದ ದೂರ ಸರಿಯುತ್ತಿದ್ದಾರೆ ಎಂದು ಕುದಿಯುವ ಮೂಲಭೂತವಾದಿಗಳಿಗೆ, ಸಮುದಾಯಗಳು ಶತಮಾನಗಳ ಪರ್ಯಂತ ಪರಸ್ಪರ ಕಲೆತು ಬದುಕುತ್ತಾ ಸೃಷ್ಟಿಸಿರುವ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಆಗುತ್ತಿಲ್ಲ. ಇವರು ಒಂದೋ ಕನ್ನಡಿಗಳನ್ನು ಭೂತಗನ್ನಡಿಗಳಾಗಿಸಿ, ಅದರಲ್ಲಿ ತಮ್ಮ ವಿಕಾರರೂಪ ಕಂಡು ಉಗ್ರರಾಗುತ್ತಾರೆ. ಇಲ್ಲವೇ ಇರುವ ಕನ್ನಡಿಗಳನ್ನೇ ಚೂರು ಮಾಡುತ್ತಾರೆ. ಮಸೀದಿಗೆ ಹೋಗುವ ಹಕ್ಕನ್ನು ಕೇಳಿದ ಹೆಣ್ಣಿಗೆ ಬಹಿಷ್ಕಾರ ಹಾಕಿದವರು, ಭಾರತೀಕರಣಗೊಳ್ಳಿ ಎಂದವರು ಕನ್ನಡಿಗಳಿಂದ ಕಲಿಯದವರು.

ಇಸ್ಲಾಮಿಕ್ ಮೂಲಭೂತವಾದವನ್ನು ಎದುರಿಸುವುದು, ಇಸ್ಲಾಮಿಕ್ ದೇಶಗಳಲ್ಲಿಗಿಂತ ಪ್ರಜಾಪ್ರಭುತ್ವ ಬಹುಧರ್ಮ ಬಹುಸಂಸ್ಕೃತಿ ಇರುವ ಭಾರತದಂತಹ ದೇಶಗಳಲ್ಲಿ ಸುಲಭ. ಎದುರಿಸುವವರಿಗೆ ರಕ್ಷಿಸುವ ಬಾಹುಗಳು ಇಲ್ಲಿ ಹೆಚ್ಚು. ಇಲ್ಲಿ ಯಾವತ್ತೂ ಒಂದೇ ಧರ್ಮದ ಜನ ಪ್ರತ್ಯೇಕವಾಗಿ ನಿಂತು ಸಂಸ್ಕೃತಿ ಕಟ್ಟಲು ಹಾಗೂ ಬದುಕಿನ ಕಷ್ಟಗಳನ್ನು ಎದುರಿಸಲು ಆಗಿಲ್ಲ.

**ಮೂಲಭೂತವಾದದ ಸ್ವರೂಪ**

ಭಾರತದ ಮಟ್ಟಿಗೆ ಇಸ್ಲಾಮಿನಲ್ಲಿರುವುದು ಕೋಮುವಾದವಲ್ಲ, ಮೂಲಭೂತವಾದ. ಮೂಲಭೂತವಾದದ ಸ್ವಭಾವವೆಂದರೆ, ತನ್ನ ಅನುಯಾಯಿಗಳು ಮೂಲಪಥದಿಂದ ದೂರಸರಿಯುತ್ತಿದ್ದಾರೆ; ಅವರನ್ನು ನಿಯಮಗಳಿಗೆ ಬದ್ಧರಾಗಿಸಬೇಕು ಎಂಬ ತಳಮಳದಲ್ಲಿ ಕ್ರೂರವಾಗುವುದು, ಆತ್ಮ ರಕ್ಷಣೆಯಲ್ಲಿ ವಿಮರ್ಶೆ ಭಿನ್ನಾಭಿಪ್ರಾಯ ಹೊಸತನ ನಿರಾಕರಿಸುವುದು. ಇದಕ್ಕೆ ಏಕದೇವತಾರಾಧಕತೆಯೂ ಒಂದು ಕಾರಣವಿರಬೇಕು. ''ಹಿಂದೂ'' ಧರ್ಮ ಬಹುದೇವತಾವಾದಿಯಾದುದು, ಅನ್ಯದೈವಕ್ಕೆ ಶ್ರದ್ಧೆ ತೋರುವುದು. ನಾಸ್ತಿಕನಾಗುವುದು ಅಲ್ಲಿ ದೊಡ್ಡಸಂಗತಿ ಅಲ್ಲ. ಏಕದೇವತಾರಾಧಕ ಧರ್ಮಗಳ ಪಾಲಿಗೆ ಅನ್ಯದೈವಶ್ರದ್ಧೆ ನಾಸ್ತಿಕತೆ ಅಕ್ಷಮ್ಯ. ಇಸ್ಲಾಂ ಯಹೂದಿ ಕ್ರೈಸ್ತ ಮುಂತಾದ ಧರ್ಮಗಳು, ಬಹುದೇವತಾರಾಧಕ ಬುಡಕಟ್ಟು ಸಮುದಾಯಗಳ ನಡುವೆ ಹುಟ್ಟಿದವಾದ್ದರಿಂದ, ಅವುಗಳ ಧರ್ಮಶಾಸ್ತ್ರದ ಒಳಗೇ ಅನ್ಯದೈವಗಳನ್ನು ನಿರಾಕರಿಸುವ ನಕಾರಾತ್ಮಕ ಗುಣವೊಂದು ಇದೆ. ಈ ಧರ್ಮಗಳ ಈ ತಾತ್ವಿಕ ಭೂಮಿಕೆ, ಮೂಲಭೂತವಾದದ ಬೀಜ ಮೊಳಕೆಯೊಡೆಯಲು ಬೆಳೆಯಲು ಸಣ್ಣ ಉತ್ತೇಜನ ನೀಡಿದೆ.

ಆದರೆ ಮೂಲಭೂತವಾದದ ಬೀಜಗಳು ಇಸ್ಲಾಮಿನ ಮೂಲ ಸ್ವರೂಪದಲ್ಲಿಯೇ ಇವೆ; ನಾಸ್ತಿಕತೆಯಾಗಲಿ ಅನ್ಯ ಧರ್ಮದ ಪ್ರಭಾವವಾಗಲೀ ಅದರಲ್ಲಿ ನುಸುಳಲಿಲ್ಲ ಎಂದರ್ಥವಲ್ಲ; ಪ್ರಭಾವಗಳು ಸ್ವೀಕರಣೆಗಳು ಗುರುತಿಸಲು ಆಗದ ರೂಪಾಂತರಗಳಲ್ಲಿ ಅಡಗಿವೆ- ಫಲಾತೂನ್‌ನಂತೆ. ವಾಸ್ತವದಲ್ಲಿ, ಆಯಾ ದೇಶ ಕಾಲಗಳ ರಾಜಕೀಯ ಸಾಮಾಜಿಕ ಬಿಕ್ಕಟ್ಟುಗಳು, ಮೂಲಭೂತವಾದ ಅವತರಿಸಲು ನೈಜ ಕಾರಣವಾಗಿವೆ. ಎಂತಲೇ ಇಸ್ಲಾಮಿಕ್ ಮೂಲಭೂತವಾದವು, ಬಹುಧರ್ಮೀಯ ದೇಶಗಳಿಗಿಂತ, ಬೇರೆ ಧರ್ಮದ ಪ್ರಭಾವಗಳು ತನ್ನ ಗುರುತನ್ನು ಬದಲಿಸಿಬಿಡುವ ಭಯವಿಲ್ಲದ ಇಸ್ಲಾಮಿಕ್ ದೇಶಗಳಲ್ಲೇ ಹೆಚ್ಚಾಗಿರುವುದು. ಇದು ತನ್ನ ರಾಜಕೀಯ ವಿರೋಧಿಗಳನ್ನು ಬಗ್ಗುಬಡಿಯಲು ಯಾವಾಗಲೂ ಧರ್ಮ ರಕ್ಷಣೆಯ ನೆಪ ಕೊಡುತ್ತದೆ. ಅಂತೆಯೇ, ಶಕ್ತಿ ರಾಜಕಾರಣವು ಮೂಲಭೂತವಾದಿಗಳನ್ನು ಮೆಚ್ಚಿಸಿ ಅಥವಾ ವಿರೋಧಿಸಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಧರ್ಮವನ್ನು ಅಸ್ತ್ರ ಮಾಡಿಕೊಳ್ಳುತ್ತದೆ. ಧರ್ಮದ ರಾಜಕೀಯ ಬಳಕೆಗೆ ದೀರ್ಘ ಚರಿತ್ರೆಯಿದೆ. ಈಗ ಅಫಘಾನಿಸ್ತಾನ ಪಾಕಿಸ್ತಾನ ಇರಾನುಗಳಲ್ಲಿ ನಡೆಯುತ್ತಿರುವುದು ಈ ಚರಿತ್ರೆಯ ಅಭಿನಯವೇ.

ಬಹು ಹಿಂದೆ ತುರ್ಕಿಯಲ್ಲಿ ಕಮಾಲ್ ಪಾಶಾ ಎಂಬ ರಾಷ್ಟ್ರಾಧ್ಯಕ್ಷ ಮೂಲಭೂತವಾದಿಗಳನ್ನು ಬಗ್ಗುಬಡಿದು ಜನಪ್ರಿಯನಾದನು. ಪಾಕಿಸ್ತಾನದಲ್ಲಿ ನವಾಜ್ ಶರೀಫ್ ಶರೀಯತನ್ನು ದೇಶದ ಸರ್ವೋಚ್ಚ ಕಾನೂನಾಗಿಸುವ ತಿದ್ದುಪಡಿ ತಂದಿದ್ದು ತನ್ನ ರಾಜಕೀಯ ಬಿಕ್ಕಟ್ಟಿನಿಂದ ಪಾರಾಗಲು. ಸಿಂಧಿ ಬಲೂಚಿ ಮುಹಾಜಿರ್ ರಾಜಕೀಯ ಪ್ರತಿರೋಧವನ್ನು ಹಾಗೂ ಮಹಿಳೆಯರ ಪ್ರಗತಿಪರರ ಚಳುವಳಿಯನ್ನು ಬಗ್ಗುಬಡಿಯಲು. ಕರ್ನಾಟಕದ ಒಂದು ಊರಿನಲ್ಲಿ ಮೂಲಭೂತವಾದಿಗಳು

ಹಾಕುವ ಬಹಿಷ್ಕಾರದಂತಹ ಘಟನೆಗಳಿಗೆ ಕೂಡ, ಸ್ಥಳೀಯವಾದ ಬಿಕ್ಕಟ್ಟುಗಳ ಹಿನ್ನೆಲೆಗಳು ಕೆಲಸ ಮಾಡಿರುತ್ತವೆ.

**ಮೂಲಭೂತವಾದದ ಕ್ರೌರ್ಯ**

ಮೂಲಭೂತವಾದವು ಮೂಲತಃ ಯಾಕೆ ಕೇಡೆಂದರೆ, ಅದು ಆಧುನಿಕ ಮೌಲ್ಯಗಳ ಪರಿಭಾಷೆಯನ್ನು ಒಪ್ಪುವುದಿಲ್ಲ; ಅದು ಬಡವ - ಶ್ರೀಮಂತರ ಭೇದವನ್ನು ಒಪ್ಪಿಕೊಳ್ಳುತ್ತದೆ (ಹೆಚ್ಚೆಂದರೆ ಬಡವರಿಗೆ ಸಿರಿವಂತರು ಮಾನವೀಯ ಕರುಣೆ ನೀಡುವಂತೆ ಉಪದೇಶಿಸುತ್ತದೆ); ಅದು ಸ್ತ್ರೀಯರು ತಮ್ಮ ಸಮಸ್ಯೆಗಳಿಗಾಗಿ ಹಕ್ಕುಗಳಿಗಾಗಿ ಹೋರಾಡುವುದನ್ನು ಒಪ್ಪುವುದಿಲ್ಲ; ಅದು ಮೂಲತಃ ಪುರುಷಪರ ಮೌಲ್ಯಗಳನ್ನು ಉಳ್ಳದ್ದು: ಅದು ಧರ್ಮವು ಹಿಂದೆಂದೂ ಇದ್ದಂತೆ ಈಗಲೂ ಪಾಲನೆಯಾಗಬೇಕು ಎಂದು ಚಂಡಿ ಹಿಡಿದು, ಚಲನಶೀಲತೆ ಅಲ್ಲಗಳೆಯುತ್ತದೆ. ಅದು ಮನಬಂದಂತೆ ತಲಾಖ್ ಕೊಡುವವರಿಗೆ, ವರದಕ್ಷಿಣೆ ಕೇಳುವವರಿಗೆ - ಇವು ಧರ್ಮವಿರೋಧಿ ಕೆಲಸಗಳಾದರೂ ದಂಡಿಸಿದ್ದು ಕಡಿಮೆ. ಪ್ರಗತಿಪರರ ಭಿನ್ನಾಭಿಪ್ರಾಯವನ್ನು ದಮನಿಸುವ, ಸಂವಾದ ನಿರಾಕರಿಸಿ ಏಕಪಕ್ಷೀಯ ಫತ್ವಾ ಹೊರಡಿಸುವ ಅದಕ್ಕೆ, ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇಲ್ಲ. ಕೆಲವು ಇಸ್ಲಾಮಿಕ್ ದೇಶಗಳು ಧಾರ್ಮಿಕ ಅಲ್ಪಸಂಖ್ಯಾತರ ವಿಷಯದಲ್ಲಿ ನಡೆದುಕೊಳ್ಳುತ್ತಿರುವ ವಿಧಾನವಂತೂ ಕೆಟ್ಟದಾಗಿದೆ. ಶಿಯಾಗಳು, ಖುರ್ದಿಶರು, ಅಹಮದೀಯರು, ಬಹಾಯಿಗಳು, ಅನೇಕ ಸೂಫಿ ಪಂಥಗಳು ಕೂಡ ಇದರ ಹಲ್ಲೆಗೆ ಒಳಗಾಗಿವೆ. ಬರಹಗಾರರು, ಕಲಾವಿದರು, ಪತ್ರಕರ್ತರು ಇದರ ಹೊಡೆತಕ್ಕೆ ಸಿಲುಕಿದ್ದಾರೆ. ಭಾರತದ ನೆರೆಹೊರೆಯಲ್ಲಿ ಇಂತಹ ಮೂಲಭೂತವಾದವಿರುವ ಇಸ್ಲಾಮಿಕ್ ದೇಶಗಳಿರುವುದು, ಭಾರತದ ಮುಸ್ಲಿಮರ ಮೇಲೆ ದೊಡ್ಡ ಭಾರವಾಗಿದೆ.

**ಮೂಲಭೂತವಾದದ ಇನ್ನೊಂದು ಮುಖ**

ಮೂಲಭೂತವಾದವು ಕೆಲವು ಚಾರಿತ್ರಿಕ ಸಂದರ್ಭಗಳಲ್ಲಿ ನ್ಯಾಯಪರ ರಾಜಕೀಯ ಹೋರಾಟಗಳಲ್ಲಿ ಧುಮುಕಿರುವುದುಂಟು. ಚೆಚನ್ಯ, ಕಾಶ್ಮೀರ, ಪ್ಯಾಲಸ್ತೈನ್ ಮುಂತಾದ ಕಡೆ ನಡೆಯುತ್ತಿರುವ ರಾಜಕೀಯ ಹೋರಾಟಗಳ ಹಿಂದೆ ಮೂಲಭೂತವಾದವೂ ಇದೆ. 'ಟೆರರಿಸ್ಟ್' ಎಂದು ಕರೆದುಕೊಳ್ಳುವ ಹಮ್ಮಾಸ್ ಸಂಘಟನೆ ಇರದಿದ್ದರೆ, ಪ್ಯಾಲಸ್ತೈನಿಗಳಿಗೆ ಈಗ ಇರುವ ನೆಲವನ್ನೂ ಅಮೆರಿಕ ಇಸ್ರೇಲುಗಳು ಉಳಿಸುತ್ತಿರಲಿಲ್ಲ. ಇಂತಹ ಹೋರಾಟಗಳಲ್ಲಿ ಧರ್ಮಯುದ್ಧ (ಜೆಹಾದ್) ಪರಿಕಲ್ಪನೆ ಕೆಲಸ ಮಾಡುತ್ತಿರಬಹುದು. ಆದರೆ ಅದು ಸಾಮ್ರಾಜ್ಯಶಾಹಿಗಳಿಗೆ ಕೇವಲ ಹುಟ್ಟಿರುವುದು [illegible] ಜಗತ್ತಿನ ಪೋಲೀಸನಾಗಿರುವ ಅಮೆರಿಕಕ್ಕೆ, ಈ [illegible] [illegible] ಕಮ್ಯುನಿಸಂನಂದಲ್ಲ [illegible] ಭಾರತದಂತಹ "ಜಗತ್ತಿನ [illegible]" ದೇಶಗಳಲ್ಲಿ [illegible]

ಲ್ಯಾಡೆನ್ ಅಂತಹವರಿಂದ ಎನ್ನುವುದು ಎಂತಹ ವಿಕಟಸ್ಥಿತಿ ?

**ಕೋಮುವಾದದ ಪ್ರಚೋದನೆ**

ಅಲ್ಪಸಂಖ್ಯಾತರ ಮೂಲಭೂತವಾದದ ಬೆಳವಣಿಗೆಯಲ್ಲಿ ಬಹುಸಂಖ್ಯಾತರ ಕೋಮುವಾದವು ಒಂದು ಪ್ರಚೋದಕವಾಗಿದೆ. ಪ್ರಜಾಪ್ರಭುತ್ವ ಸಮಾಜವಾದಿ ಸೆಕ್ಯುಲರ್ ದೇಶವೊಂದರಲ್ಲೂ ಇರುವುದು ಕೋಮುವಾದದ ಲಕ್ಷಣವೆಂದರೆ, ಬಹುಸಂಖ್ಯಾತರ ಕಷ್ಟಕ್ಕೆಲ್ಲ ಕಾರಣ ಪರಧರ್ಮೀಯರು ಹಾಗೂ ಅವರ ವಿದೇಶನಿಷ್ಠೆ ಎಂದು ವಾದಿಸುವುದು. 'ಆರೋಪ ಹೊರಿಸು ಮತ್ತು ಆಕ್ರಮಣ ಮಾಡು' ಇವು ಅದರ ಅಸ್ತ್ರಗಳು. ಅದು ಎಂದೂ ಆತ್ಮಪರೀಕ್ಷೆ ಮಾಡಿಕೊಳ್ಳದು. ಅಸ್ಪೃಶ್ಯರು ಮತಾಂತರವಾದರೆ ಅದು ಅನ್ಯಧರ್ಮಗಳ ಪಿತೂರಿ ಎಂದು ಕನಲುತ್ತದೆ. ಆರೆಸ್ಸೆಸ್ ನಾಯಕ ಸುದರ್ಶನ್, ಈಚೆಗೆ ಮಾಡಿದ ಭಾಷಣವು (ವಾಸ್ತವದಲ್ಲಿ ಮುಸ್ಲಿಮರಿಗೆ ಕ್ರೈಸ್ತರಿಗೆ ಏನು ಮಾಡಬೇಕು ಮತ್ತು ಮಾಡಬಾರದು ಎಂದು ಕೊಟ್ಟ ಫತ್ವಾ) ಇದಕ್ಕೆ ಒಂದು ಉದಾಹರಣೆ. ಈ ಭಾಷಣದಲ್ಲಿ ಇರುವುದೆಲ್ಲ ಮೈನಾರಿಟಿಗಳನ್ನು ಕಟಕಟೆಯಲ್ಲಿ ನಿಲ್ಲಿಸಿ ಮಾಡಿದ ಆಪಾದನೆಗಳೇ. ಇದಕ್ಕೆ ಸೂಚಿಸಿದ ಪರಿಹಾರ 'ಕ್ರೈಸ್ತರು ಮುಸ್ಲಿಮರು ಭಾರತೀಕರಣಗೊಳ್ಳಬೇಕು. ಮುಖ್ಯ ಪ್ರವಾಹದೊಳಗೆ ಸೇರಿಕೊಳ್ಳಬೇಕು.' ಇದಕ್ಕೆ ಅವರು ಕೊಟ್ಟ ಮಾದರಿ - ರಾಮ-ಕೃಷ್ಣರನ್ನು ತಮ್ಮ ಪೂರ್ವಜರೆಂದು ಭಾವಿಸಿರುವ ಇಂಡೋನೇಶಿಯನ್ ಮುಸ್ಲಿಮರು. ಇವು ಆರೆಸ್ಸೆಸ್ ೭೫ ವರುಷಗಳಿಂದ ಹೇಳಿಕೊಂಡು ಬಂದ ಮಾತುಗಳೇ. ಭಾರತೀಕರಣ ಅಥವಾ ಮುಖ್ಯ ಪ್ರವಾಹದಲ್ಲಿ ಸೇರುವುದು ಎಂದರೆ ಏನು ? ಅವರ ಇಂತಹ ಕರೆಗಳಿಂದ ಬಲ ಬರುವುದು ಮಾತ್ರ ಮೂಲಭೂತವಾದಿಗಳಿಗೆ. 'ನೋಡಿ ನಾವು ಕೊಂಚ ಸಡಿಲವಾದರೂ ನಮ್ಮ ಗುರುತುಗಳು ನಾಶವಾಗುತ್ತವೆ' ಎಂದು ಹೆದರಿಸಿ, ಮತ್ತಷ್ಟು ಜನರನ್ನು ಚಿಪ್ಪಿನೊಳಗೆ ಸೇರಿಸಲು ಶುರುಮಾಡುತ್ತಾರೆ. ಇಂತಹ ಕಡೆ ಸಾಂಸ್ಕೃತಿಕ ಗುರುತು, ಧರ್ಮ, ಮೂಲಭೂತವಾದ, ರಾಜಕೀಯ ಹೋರಾಟ, ಇವು ಬೇರ್ಪಡಿಸಲಾಗದಂತೆ ಹೆಣೆದುಕೊಳ್ಳುತ್ತವೆ. ಅಂತಿಮವಾಗಿ ಆಯಾ ಧರ್ಮಗಳ ಒಳಗೆ ಮೂಲಭೂತವನ್ನು ವಿರೋಧಿಸುವ ಪ್ರಯತ್ನಗಳು ಭಗ್ನಗೊಳ್ಳುತ್ತವೆ. ಬಹುಸಂಖ್ಯಾತ ಕೋಮುವಾದದ ಬೆದರಿಕೆಗಳು ಯಾವತ್ತೂ ಅಲ್ಪಸಂಖ್ಯಾತ ಮೂಲಭೂತವಾದದ ಬಲವರ್ಧನೆ ಮಾಡಿವೆ ಮತ್ತು ಸೆಕ್ಯುಲರ್ ಹೋರಾಟಗಳಿಗೆ ಹಿನ್ನಡೆ ಒಡ್ಡಿವೆ.



ಜಗತ್ತಿನಲ್ಲಿ ಜನರೆಲ್ಲ ಸಮಾನರಲ್ಲವೇಕೆ ?
ಶ್ರೀಮಂತರಿಗಿಹುದು ಅಕ್ಕಿ ಗೋಧಿ
ಸಾಕುಬೇಕಾದಷ್ಟು.
ಬಡವರಿಗಿರುವುದೆಲ್ಲ ಎಂಜಲು
ಚೂರುಪಾರು.
ಬಡವರೇಕೆ ಒಡೆಯರಿಗಿಂತ ಕೀಳು ?
ಬಡವರೇಕೆ ಒಡೆಯರಿಗಿಂತ ದಡ್ಡರು ?

*– ಚೀಣಿ ಕೃತಿಯೊಂದರಿಂದ*

**ಬಳಸಿಕೊಳ್ಳುವ ಶತ್ರುಗಳು**

ಮೂಲಭೂತವಾದ ಕುರಿತು ಜನಪ್ರಿಯವಾಗಿರುವ ಪೂರ್ವಗ್ರಹಗಳು, ಅದರ ವಿರುದ್ಧದ ಹೋರಾಟಕ್ಕೆ ಇನ್ನೊಂದು ತೊಡಕು. ಉದಾ: ಸಲ್ಮಾನ್ ರಶ್ದಿ ಪ್ರಕರಣ. ತಸ್ಲೀಮಾ-ರಶ್ದೀ ಪ್ರಕರಣಗಳನ್ನು ಸೆಕ್ಯುಲರ್ ವಿಚಾರವಾದಿಗಳು ಕೇವಲ ಅಭಿವ್ಯಕ್ತಿ ಸ್ವಾತಂತ್ರ್ಯ ದಮನಿಸುವ ಸಂಗತಿಗಳಾಗಿ ನೋಡಿದರು. ಇವು ಮೂಲಭೂತವಾದ ಎಸಗಿದ ಹೇಯಕೃತ್ಯ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಅದರ ಖಂಡನೆ ಮಾಡುವಾಗ ಸಾಮಾನ್ಯವಾಗಿ ಪರಿಗಣಿಸದ ಎರಡು ಸಂಗತಿಗಳಿವೆ. ಒಂದು ರಾಜಕೀಯ ಪ್ರಜ್ಞೆಯಿಲ್ಲದ ವೈಯಕ್ತಿಕ ಸಾಹಸವಾದಿ ಲೇಖಕರ ಮೂಲಭೂತವಾದಿ ವಿರೋಧಿ ದಂಗೆಗಳಿಂದ ಆಗುವ ಪರಿಣಾಮಗಳು; ಇಂತಹ ದಂಗೆಗಳು ಪರಿಣಾಮದಲ್ಲಿ ಸತ್ತಂತಿರುವ ಮೂಲಭೂತವಾದಿ ಶಕ್ತಿಗಳಿಗೆ ಜೀವ ತುಂಬಿಬಿಡಬಹುದು. ನಿಜಕ್ಕೂ ದಂಗೆಕೋರರಲ್ಲಿ ಪ್ರಾಮಾಣಿಕತೆ, ಮಾನವೀಯ ಕಾಳಜಿ ಇರುತ್ತವೆ. ದಂಗೆಯ ವಿಧಾನದ ಹಸಿತನ, ಆವೇಶಗಾರಿಕೆಗಳು ಮೂಲ ಉದ್ದೇಶವನ್ನೇ ಸೋಲಿಸುತ್ತವೆ. ಪ್ರತಿಭಟನೆ ಆಶಯದಲ್ಲಿ ಆರೋಗ್ಯಕರ ಆಗಿರುವುದು ಸಾಲದು, ಆಶಯವನ್ನು ಗೆಲ್ಲಿಸುವ ತಂತ್ರಗಾರಿಕೆ ಕೂಡ ಪಡೆದಿರಬೇಕು. ಇಲ್ಲದಿದ್ದರೆ ದಂಗೆಯ ಪ್ರಯೋಜನವನ್ನು ಎರಡನೇ ಶತ್ರು ಪಡೆದುಕೊಳ್ಳುವ ಸಾಧ್ಯತೆಯಿದೆ. ಎರಡು : ಇಸ್ಲಾಮಿಕ್ (ಮತ್ತು ಕಮ್ಯುನಿಸ್ಟ್) ಮೂಲಭೂತವಾದಗಳ ವಿರೋಧಿ ನಾಟಕದಲ್ಲಿ ಮೂರನೇ ಪಾತ್ರ ಸೇರಿಕೊಳ್ಳುವುದು. ರಶ್ದಿ ತಸ್ಲೀಮಾ ಅವರಿಗೆ, ಸ್ವತಃ ಮಾನವಹಕ್ಕುಗಳನ್ನು ಉಲ್ಲಂಘಿಸುತ್ತಿರುವ, ಜಗತ್ತಿನ ಬಡದೇಶಗಳಿಗೆ

ಆಯುಧ ಮಾರಿ ಹಣ ಕಮಾಯಿಸುವ, ತಮಗೆ ಬೇಡವಾದ ಸರಕಾರಗಳನ್ನು ಬುಡಮೇಲು ಮಾಡಲು ಅಂತರ್ಯುದ್ಧ ಮಾಡಿಸುವ, ಬಂಡವಾಳಶಾಹಿ ಸಾಮ್ರಾಜ್ಯಶಾಹಿ ದೇಶಗಳೇ ಯಾಕೆ ಆಶ್ರಯ ಕೊಡುತ್ತವೆ ? ಇದು ಇಸ್ಲಾಮಿಕ್ ಮೂಲಭೂತವಾದವನ್ನು ವಿರೋಧಿಸುವ ಬಂಡವಾಳಶಾಹಿ ವಿಧಾನ. ರಶ್ದಿ, ತಸ್ಲೀಮರಿಗೆ ಅಥವಾ ವಾಜಪೇಯಿ ಪದ್ಯಗಳನ್ನು ಅನುವಾದಿಸಿ ದೇಶಭ್ರಷ್ಟನಾಗಿರುವ ಪಾಕಿಸ್ತಾನಿ ಕವಿಗೆ, ಬಿಜೆಪಿ ಸರಕಾರವು ಭಾರತಕ್ಕೆ ಕರೆಸಿಕೊಂಡು ಕೊಟ್ಟ ಗೌರವವನ್ನು ಗಮನಿಸಬೇಕು. ವಾಟರ್ ಸಿನಿಮಾ ಸೆಟ್ಟನ್ನು ಸುಟ್ಟುಹಾಕಿದವರಿಗೆ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಯಾಕಿಷ್ಟು ಪ್ರೀತಿ ? ಅರಬ್ ಮುಸ್ಲಿಮರ ದಮನ ಮಾಡುತ್ತಿದೆ ಎಂಬ ಕಾರಣಕ್ಕೆ ಇಸ್ರೇಲನ್ನು, ಚೆಚನ್ಯಾದ ಮುಸ್ಲಿಮರನ್ನು ಹೊಸಕಿ ಹಾಕಿದ ಕಾರಣಕ್ಕೆ ರಶ್ಯಾದ ಪುಟಿನನನ್ನು, ಬಿನ್ ಲ್ಯಾಡನ್‌ಗೆ ಕೊಲ್ಲಲು ತಯಾರಿರುವ ಕಾರಣಕ್ಕೆ ಅಮೆರಿಕದಂತಹ ಸಾಮ್ರಾಜ್ಯಶಾಹಿಗಳನ್ನು, ಭಾರತ ಅಪ್ಪಿಕೊಳ್ಳುತ್ತಿದೆ. ಇದು ಮೂಲಭೂತವಾದವನ್ನು ನೋಡುವ ಕೋಮುವಾದಿ ವಿಧಾನ.

**ಸೆನ್ಸೇಶನ್ ಬಯಸುವ ಮಾಧ್ಯಮಗಳು**

ಈ ಹೊತ್ತು ಮುಸ್ಲಿಂ ಮೂಲಭೂತವಾದಕ್ಕೆ ಜಾಗತಿಕ ಆಯಾಮ ಬಂದುಬಿಟ್ಟಿದೆ. ಅದು ತುರ್ಕಿ ಇರಾನ್ ಅಫಘಾನಿಸ್ತಾನ, ಪಾಕಿಸ್ತಾನ ಮುಂತಾದ ದೇಶಗಳಲ್ಲಿ ಪ್ರಬಲವಾಗಿದೆ. ಇದಕ್ಕೆ ಆಯಾ ದೇಶಗಳ ಆಂತರಿಕ ರಾಜಕೀಯ ಬಿಕ್ಕಟ್ಟುಗಳ, ಸಾಮ್ರಾಜ್ಯಶಾಹಿಗಳ, ಮಧ್ಯಪ್ರವೇಶದ, ಹಾಗೂ ಸನಾತನಿಗಳ ಪಾಲು ಎಲ್ಲ ಸೇರಿಕೊಂಡಿದೆ. ಈ ದೇಶಗಳಿಂದ ಮೂಲಭೂತವಾದಿ ಕ್ರೌರ್ಯದ ಸುದ್ದಿಗಳು ಆಗಾಗ್ಗೆ ದೊರೆಯುತ್ತಿರುವುದಾದರೂ ಬಂಡವಾಳಶಾಹಿ ದೇಶಗಳ ಮಾಧ್ಯಮಗಳ ಮೂಲಕ. ಸುದ್ದಿಗಳಾದರು ಎಂತಹವು ? ಕಳ್ಳನಿಗೆ ಕೈಕತ್ತರಿಸುವ, ವ್ಯಭಿಚಾರಿಗೆ ಕಲ್ಲು ಹೊಡೆದು ಸಾಯಿಸುವ, ಅಪರಾಧಿಗೆ ಬಹಿರಂಗವಾಗಿ ನೇಣುಹಾಕುವ, ಮುದುಕನೊಬ್ಬ ೧೬ನೇ ಮದುವೆಯಾಗುವ, ಇಂತಹವೇ ರೋಚಕ ಸುದ್ದಿಗಳು. ಭಾರತದ ಮಾಧ್ಯಮಗಳು ಈ ಸುದ್ದಿಗಳನ್ನೇ ಆಯ್ದು ಪ್ರಕಟಿಸುತ್ತವೆ. ಇದರ ಉದ್ದೇಶ 'ಈ ಸಾಬರು ಎಲ್ಲಿದ್ದರೂ ಹೀಗೆ' ಎಂಬ ಅಭಿಪ್ರಾಯ ಮೂಡಿಸುವುದು. ಮಾಧ್ಯಮಗಳ ಪೂರ್ವಗ್ರಹದ ದೃಷ್ಟಿಕೋನಕ್ಕೆ, ಇಸ್ಲಾಮಿಕ್ ದೇಶಗಳಲ್ಲಿ ಕೂಡ ಪ್ರಜಾಸತ್ತೆಗಾಗಿ, ಅಲ್ಪಸಂಖ್ಯಾತರ ಹಕ್ಕುಗಳಿಗಾಗಿ, ಮೂಲಭೂತವಾದದ ಬರ್ಬರತೆಯ ವಿರುದ್ಧವಾಗಿ ಹೋರಾಡುವ ಜನ; ನಮ್ಮಂತೆ ಬಡತನದಲ್ಲಿ ನರಳುವ ಶಾಂತಿ ಸ್ನೇಹ ಬಯಸುವ ಜನ ಇರಬಹುದು ಎಂಬ ಕುತೂಹಲವೇ ಇಲ್ಲ. ಈಚೆಗೆ ಮೂಲಭೂತವಾದಿಗಳ ಅಡ್ಡಿಯನ್ನು ಲೆಕ್ಕಿಸದೆ ಬಾಂಗ್ಲಾದೇಶದ ಪಾರ್ಲಿಮೆಂಟು ದೇಶ ಬಿಟ್ಟು ಹೋದ ಹಿಂದುಗಳ ಆಸ್ತಿಯನ್ನು ಮರಳಿಸುವ ಕಾನೂನನ್ನು ಪಾಸುಮಾಡಿತು. ಇದು ಅದಕ್ಕೆ ಮುಖ್ಯವಾಗಲಿಲ್ಲ. ಬಾನು ಮುಶ್ತಾಕ್ ಬಹಿಷ್ಕಾರ ಪ್ರಕರಣದಲ್ಲಿ ಬೆಂಗಳೂರಿನ ವೀರಾವೇಶದ ಪತ್ರಿಕೆಗಳು ಕೊನೆವರೆಗೂ ಮೂರುಗಂಟೆಗಳ ಪಯಣದಲ್ಲಿರುವ ಹಾಸನಕ್ಕೇ ಹೋಗಲಿಲ್ಲ. ಬಾನು ಜತೆ ಚರ್ಚಿಸಲಿಲ್ಲ. ಬಹಿಷ್ಕಾರದ ಹಿಂದೆ ಕೆಲಸ ಮಾಡಿರುವ ಸ್ಥಳೀಯ ಒತ್ತಡಗಳನ್ನಾಗಲೀ, ಬಹಿಷ್ಕಾರ ಹಾಕಿದವರ ಕಾರಣಗಳನ್ನು ವಿಶ್ಲೇಷಿಸುವುದಾಗಲೀ ಮಾಡಲಿಲ್ಲ. ಬಹಿಷ್ಕಾರ ಕುರಿತು ಸಾಮಾನ್ಯ ಮುಸ್ಲಿಮರು ಅದರಲ್ಲೂ ಹೆಂಗಸರು ಏನೆನ್ನುತ್ತಾರೆ ಎನ್ನುವುದನ್ನು ದಾಖಲಿಸಲಿಲ್ಲ. ಇದು ಏನು ಸೂಚಿಸುತ್ತದೆ ? ಇದನ್ನು ನಾನು ಪ್ರಗತಿಪರರ ಕೋಮುವಾದೀಕರಣ ಎನ್ನುತ್ತೇನೆ. ಮುಸ್ಲಿಂ ಜನಾಂಗವನ್ನು ಕೊಳೆತ ತರಕಾರಿಯಂತೆ ಚಿತ್ರಿಸುವ ಇವು ಮೂಲಭೂತವಾದದ ಹೋರಾಟಕ್ಕೆ ಸಹಾಯಕವಾಗುವ ಬದಲು, ಕೋಮುವಾದಿಗಳು ಪ್ರಜ್ಞಾಪೂರ್ವಕವಾಗಿ ಹರಡುವ ಪೂರ್ವಗ್ರಹಗಳಿಗೆ ಸಹಾಯ ಮಾಡುತ್ತವೆ.

**ಪ್ರಗತಿಪರರ ಕೋಮುವಾದ**

ಏಕಕಾಲಕ್ಕೆ ಹಿಂದೂ ಕೋಮುವಾದವನ್ನೂ ಮುಸ್ಲಿಂ ಮೂಲಭೂತವಾದವನ್ನೂ ಖಂಡಿಸುವಲ್ಲಿ, ಕರ್ನಾಟಕದ ಪ್ರಗತಿಪರ ಸಮುದಾಯ ಉದ್ದಕ್ಕೂ ನಿಷ್ಠುರತೆ ಕಾದುಕೊಂಡು ಬಂದಿದೆ. ಸಮಸ್ಯೆಯೆಂದರೆ ಧಾರ್ಮಿಕ ದ್ವೇಷದಿಂದ ಹುಟ್ಟುವ ಕೋಮುವಾದಿ ಆಲೋಚನಾ ಕ್ರಮವು ಇಲ್ಲೂ ನುಸುಳಿರುವುದು. ಆರೆಸ್ಸೆಸ್ ಮುಸ್ಲಿಮರ ಬಗ್ಗೆ ಏನು ಹೇಳುತ್ತದೆ ಎಂದು ಎಲ್ಲರಿಗೂ ಗೊತ್ತು. ರಾಜಕೀಯ ಕಾರಣಕ್ಕಾಗಿ ಸುಳ್ಳನ್ನು ಹೇಳಬೇಕಾದ ಅನಿವಾರ್ಯತೆ ಅವರಿಗಿದೆ. ಆದರೆ, ಕೋಮುವಾದ ಮತ್ತು ಮೂಲಭೂತವಾದಗಳೆರಡನ್ನೂ ವಿಮರ್ಶಿಸುವವರು ಎಂದು ಭಾವಿಸಿರುವ ಪ್ರಗತಿಪರರಲ್ಲಿ ಇರುವ ಕೋಮುವಾದಿ ಪೂರ್ವಗ್ರಹಗಳು, ಹೆಚ್ಚು ಬೆಲೆ ತೆರುವಂತೆ ಮಾಡಿದೆ. ಕೆಲವು ಪ್ರಗತಿಪರರಲ್ಲಿ ಕೋಮುವಾದ ಮೂಲಭೂತವಾದಗಳ ನಡುವೆ ಸೈದ್ಧಾಂತಿಕ ಸ್ಪಷ್ಟತೆ ಕೂಡ ಇಲ್ಲ. ಆಶಯದಲ್ಲಿ ಮಾನವೀಯವಾಗಿದ್ದರೂ ಸರಿಯಾದ ರಾಜಕೀಯ ಪ್ರಜ್ಞೆಯಿಲ್ಲದ ಕಾರಣ, ಇವರ ಅಸೂಕ್ಷ್ಮತೆಗಳು ಕೋಮುವಾದಕ್ಕೆ ಹಿತಕರವಾಗಿವೆ. ಕಾರ್ಗಿಲ್ ಯುದ್ಧ ಹಾಗೂ ದೀನದಾರ್ ಅಂಜುಮನ್ ಪ್ರಕರಣಗಳಲ್ಲಿ ಅನುಭವಕ್ಕೆ ಬಂದ ಸಂಗತಿಯೆಂದರೆ - ಸಂಘಪರಿವಾರದ ಪ್ರಚಾರಕ್ಕೆ, ಎಂದೂ ತೀವ್ರವಾಗಿ ಸ್ವಂತವಾಗಿ ರ್‍ಯಾಡಿಕಲ್ ಆಗಿ ಆಲೋಚಿಸಲಾರದ ಮಧ್ಯಮವರ್ಗದ ಲಿಬರಲ್‌ಗಳು ಬಲಿಯಾಗಿರುವುದು ಮಾತ್ರವಲ್ಲ, ಪ್ರಗತಿಪರ ಅನಿಸಿಕೊಂಡ ಬುದ್ಧಿಜೀವಿ ಸಮುದಾಯದ ದೊಡ್ಡ ಭಾಗ ಕೂಡ ಪ್ರಭಾವಿತವಾಗಿರುವುದು. ಯಾಕೆ ಹೀಗಾಗುತ್ತದೆ ? ಆರೆಸ್ಸೆಸ್‌ನ ಎರಡು ಮುಖ್ಯ ನಿಲುವುಗಳೆಂದರೆ, ಸಾಮಾಜಿಕ ಆರ್ಥಿಕ ಮೇಲುಕೀಳುಗಳಿಗೆ ಸಮ್ಮತಿ ಹಾಗೂ ಅಲ್ಪಸಂಖ್ಯಾತರ ದ್ವೇಷ. ಆಧುನಿಕ ಶಿಕ್ಷಣ ಪಡೆದ ಪ್ರಜ್ಞಾವಂತ ದಲಿತ - ಕೆಳಜಾತಿಯ ಸ್ವಾಭಿಮಾನವುಳ್ಳ ಜನಕ್ಕೆ ಆರೆಸ್ಸೆಸ್ ಪ್ರತಿನಿಧಿಸುವ ಮೇಲುಜಾತಿಗಳ ಸಾಂಸ್ಕೃತಿಕ ಯಜಮಾನಿಕೆ ಕುರಿತು ತೀವ್ರ ಅಸಹನೆಯಿದೆ. 'ಹಿಂದುತ್ವ'ಕ್ಕೆ ಒಪ್ಪಿಗೆಯೆಂದರೆ ಬ್ರಾಹ್ಮಣಜಾತಿ ಸಂಸ್ಕೃತಭಾಷೆ ಪರವಾದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸತ್ವವನ್ನು ಒಪ್ಪಿಕೊಂಡಂತೆ; ಯಾಕೆಂದರೆ, ಸಂಘಪರಿವಾರದ ''ನಮ್ಮ ಸಂಸ್ಕೃತಿ'' ಎಂಬ ಪರಿಕಲ್ಪನೆಯಲ್ಲಿ ವೇದಗಳಿವೆ ಸಂಸ್ಕೃತವಿದೆ ಶಿವಾಜಿ ರಾಮ ಕೃಷ್ಣ ಇದ್ದಾರೆ. ಈ ನಾಡಿನ ಅಸಂಖ್ಯ ಕೆಳಜಾತಿ ವರ್ಗಗಳ ನಂಬಿಕೆ ಆಚರಣೆಗಳ ಲೋಕವೇ ಗೈರುಹಾಜರು ! ಇದರಲ್ಲಿ ವ್ಯಂಗ್ಯವೆಂದರೆ ''ಭಾರತೀಕರಣಗೊಳ್ಳಿ'' ಎಂದು ಅಲ್ಪಸಂಖ್ಯಾತರಿಗೆ ಕರೆಗೊಡುವ ಸಂಘಪರಿವಾರದ ಬುದ್ಧಿಜೀವಿಗಳಿಗೆ ಕೂಡ, ಮೊಹರಂ ಸೂಫಿಗಳು ಶಿಶುನಾಳನ ಬಗ್ಗೆಯಿರಲಿ, ಮೈಲಾರ ಮಂಟೇಸ್ವಾಮಿ, ಮಲೆಮಾದೇಶ್ವರ, ಜುಂಜಪ್ಪ, ಎಲ್ಲಮ್ಮ ಮುಂತಾದ ಲಕ್ಷಾಂತರ ''ಹಿಂದೂ''ಗಳು ಭಾಗವಹಿಸುವ ಪರಂಪರೆಯ ಬಗ್ಗೆ ಮಡಿವಾಳಪ್ಪ ಫಕೀರೇಶ ಮೋನಪ್ಪ ಬಸವಣ್ಣ ಅಲ್ಲಮಪ್ರಭು ಕುವೆಂಪು ಮಹದೇವರಂತಹ ಸಾಂಸ್ಕೃತಿಕ ವ್ಯಕ್ತಿತ್ವಗಳ ಬಗ್ಗೆ ಐದು ನಿಮಿಷ ಮಾತಾಡಲು ಆಗದಷ್ಟು ಘೋರ ಅಜ್ಞಾನವಿದೆ. (ಬದಲಿಗೆ ತಾವು ವಿರೋಧಿಸುವ ಕ್ರೈಸ್ತ ಇಸ್ಲಾಮಿನ ರಾಜಕೀಯ ಧಾರ್ಮಿಕ ಚರಿತ್ರೆಯ ಬಗ್ಗೆ



ಇಡೀ ದಿನ ನಾವು
ಬಿಳಿ ಗೋಧಿ ಹೊರಬೇಕು.
ಮಳಿಗೆಗಳು ಆಗಲೇ ತುಂಬಿವೆ,
ಧಾನ್ಯ ಹೊರ ಚೆಲ್ಲುತ್ತಿದೆ,
ಹಡಗುಗಳೂ ತುಂಬಿವೆ,
ಧಾನ್ಯ ಹೊರಚೆಲ್ಲುತ್ತಿದೆ ಇಕ್ಕೆಲಗಳಿಂದ
ಆದರೂ ಮಾಡುತಾರವರು
ನಮ್ಮನ್ನು ಇನ್ನಷ್ಟು ಹೊರುವಂತೆ
ನಿಜಕ್ಕೂ ನಮ್ಮಯ ಹೃದಯ
ತಾಮ್ರದ್ದೆನ್ನುವಂತೆ.

*– ಒಂದು ಇಜಿಪ್ಷಿಯನ್ ಹಾಡು*

ಆಳ ಅಧ್ಯಯನವಿದೆ.) ಈ ಕಾರಣಗಳಿಂದ ಹೆಸರಿನಲ್ಲಿ ''ಹಿಂದೂ'' ಆದರೂ, ಕನ್ನಡದ ಪ್ರಗತಿಪರ ಸಮುದಾಯ ಸಹಜವಾಗಿ ವೈದಿಕರೂಪೀ ಹಿಂದುತ್ವದ ಅಜೆಂಡಾವನ್ನು ವಿರೋಧಿಸುತ್ತದೆ. ಭಾರತೀಯ ಕೆಳಜಾತಿಪರ ವಿಚಾರವಾದಿ ಚಿಂತನೆಯ ಶಕ್ತಿಸ್ರೋತವು ಚರಿತ್ರೆಯುದ್ದಕ್ಕೂ ವೈದಿಕ ಸನಾತನತೆಯ ವಿರೋಧದಲ್ಲಿಯೇ ಹುಟ್ಟುತ್ತಾ ಬಂದಿರುವುದು ಆಕಸ್ಮಿಕವಲ್ಲ.

ಆದರೆ ಈ ಪ್ರಗತಿಪರ ವಿಚಾರವಾದಿ ಧಾರೆಯ ಒಂದು ಭಾಗವು, ಸಂಘಪರಿವಾರ ಹಬ್ಬಿಸುವ ಕ್ರೈಸ್ತ ಮುಸ್ಲಿಂ ದ್ವೇಷಗಳ ಮೇಲೆ ಇದೇ ಮಟ್ಟಿನ ವಿರೋಧ ವ್ಯಕ್ತಮಾಡುವುದಿಲ್ಲ. ಈ ಬಗ್ಗೆ ನಿರ್ಲಿಪ್ತವಾಗಿರುತ್ತದೆ ಇಲ್ಲವೇ ತಣ್ಣನೆ ಒಪ್ಪಿಗೆ ಕೊಟ್ಟಂತೆ ಕಾಣುತ್ತದೆ. ಇದು ಸಂಘಪರಿವಾರದ ಮುಕ್ಕಾಲು ಶತಮಾನದ ದಣಿವರಿಯದ ಪ್ರಚಾರದ ದಿಗ್ವಿಜಯ. ಈ ಹೊತ್ತು ಕೂಡ ಮುಸ್ಲಿಮರ ಕ್ರೈಸ್ತರ ಬಗ್ಗೆ ಈ ದೇಶದಲ್ಲಿ ನಿರ್ಮಾಣವಾಗಿರುವ ಅರೆಬರೆ ಸತ್ಯಗಳ ಕಥನಕ್ಕೆ ಹ್ಗೂಗುಡಲು ಸಂಘಪರಿವಾರದ ಜತೆ ದೊಡ್ಡ ಸಮುದಾಯವಿದೆ. ಇದು ಸಂಘಪರಿವಾರಕ್ಕೆ ಚೆನ್ನಾಗಿ ಗೊತ್ತು. ವಿದೇಶದ ಮೂಲಭೂತವಾದದ ಮೇಲಿನ ವರದಿಗಳು ''ನಿಮಗೆ ಇಲ್ಲಿ ನಾವು ಸ್ವಾತಂತ್ರ್ಯ ಕೊಟ್ಟಿದ್ದೇವೆ'' ಎಂದು ಇಲ್ಲಿನ ಮುಸ್ಲಿಮರಿಗೆ ಬಾಯಿಮುಚ್ಚಿಕೊಂಡಿರುವಂತೆ ಅಪರೋಕ್ಷ ಸೂಚನೆ ನೀಡುವಂತಿರುತ್ತವೆ. ಸ್ಕೂಲು ಪುಸ್ತಕಗಳಿಂದ ಟೀವಿ, ವೃತ್ತಪತ್ರಿಕೆವರೆಗೆ ಹರಡಿರುವ ಈ ಕೋಮುವಾದಿ ರಾಷ್ಟ್ರೀಯತೆಯಿಂದ ಬಿಡಿಸಿಕೊಳ್ಳಲಾಗದೆ, ಭಾರತದ ಮುಸ್ಲಿಂ ಮೂಲಭೂತವಾದವನ್ನು ಸಮಕಾಲೀನ ಅವಸ್ಥೆಯಲ್ಲಿ ವಿಶ್ಲೇಷಿಸುವುದು ಮತ್ತು ಹೋರಾಟ ಕಟ್ಟುವುದು ತೊಡಕಿನ ಕೆಲಸ.

**ಸೆಕ್ಯುಲರ್ ಮುಸ್ಲಿಮ್ ವ್ಯಾಖ್ಯೆ ಏನು ?**

ಮುಸ್ಲಿಂ ಮೂಲಭೂತವಾದವನ್ನು ಕಾಣುವ ಈ ಜನಪ್ರಿಯ ವಿಧಾನದ ಭಾಗವೆಂದರೆ, ಹಿಂದೂ ಮುಸ್ಲಿಂ ''ಸಾಮರಸ್ಯ''ದ ಗ್ರಹಿಕೆ. ಇಲ್ಲಿ ಒಬ್ಬ ವ್ಯಕ್ತಿ ತನ್ನ ಧಾರ್ಮಿಕ ಸಂಸ್ಕೃತಿಯ ಗುರುತುಗಳನ್ನು 'ಬಿಟ್ಟುಕೊಟ್ಟು' ಇನ್ನೊಂದನ್ನು ಅಪ್ಪಿಕೊಳ್ಳುವುದನ್ನು ಸಾಮರಸ್ಯ ಎಂದು ಕರೆಯಲಾಗುತ್ತಿದೆ. ಇಸ್ಲಾಮಿ ಸಂಪ್ರದಾಯಗಳನ್ನು ಬಿಟ್ಟುಕೊಟ್ಟಿರುವ, ''ಹಿಂದೂ'' ಧಾರ್ಮಿಕ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಮಾದರಿಗಳನ್ನು ಇದಕ್ಕಾಗಿ ಆರಿಸಿಕೊಳ್ಳಲಾಗುತ್ತಿದೆ. ಗಣಪತಿ ಹಬ್ಬ ಬಂದರಂತೂ ಪೆಂಡಾಲು ಕಟ್ಟುವ, ಮೆರವಣಿಗೆಯಲ್ಲಿ ಭಾಗವಹಿಸುವ ಮುಸ್ಲಿಮರನ್ನು ಆದರ್ಶ ಮಾದರಿ ಎಂದು ಬಿಂಬಿಸದ ಪತ್ರಿಕೆಗಳಿಲ್ಲ. ಒಬ್ಬ ವ್ಯಕ್ತಿಯ ಯಾವುದೇ ಕ್ರಿಯೆ ಸಹಜಭಕ್ತಿಯ ಭಾಗವಾಗಿದ್ದರೆ ಅದು ಸೃಜನಶೀಲವೂ ಧೀಮಂತವೂ ಆಗಿರುತ್ತದೆ. ಅನ್ಯರನ್ನು ಮೆಚ್ಚಿಸಲು ಅಥವಾ ಬಹುಸಂಖ್ಯಾತರ ಭಯಕ್ಕೆ ಮಾಡಿದ ಕ್ರಿಯೆ ಆಗಿದ್ದರೆ ಅದು ಆತ್ಮವಂಚಕವಾಗಿರುತ್ತದೆ. ಮೂಲಭೂತವಾದಕ್ಕೆ ಹೆದರದೆ ತಮ್ಮ ಒಳಗಿನ ಅಗತ್ಯವಾಗಿ ಗಡಿ ಮೀರಿದ್ದರಿಂದಲೇ ಶಿಶುನಾಳನ ಅನುಭಾವವು, ಹಿಂದೂಸ್ತಾನಿ ಸಂಗೀತವು, ಇಂಗಳಗಿ ಹಸನನ ಲಾವಣಿಯೂ ಸಹಜವಾಗಿ ಹುಟ್ಟಿದವು. ಇಲ್ಲಿ ಸಾಮರಸ್ಯದ ಮಾತೇ ಇಲ್ಲ. ಅನ್ಯರನ್ನು ಮೆಚ್ಚಿಸಲು ಸೆಕ್ಯುಲರ್ ಅಥವಾ ''ಭಾರತೀಕರಣ''ಗೊಂಡ ಸಾಮರಸ್ಯದ ಮಾದರಿಗಳನ್ನು ಕಂಡಾಗ, ಬಿಜೆಪಿಯಲ್ಲಿರುವ ಮುಸ್ಲಿಂ ನಾಯಕರು ನೆನಪಾಗುತ್ತಾರೆ. ಇಂತಹ ಭಯಭೀರು ಸಾಮರಸ್ಯ ಮಾದರಿಗಳಿಗೆ ಮೂಲಭೂತವಾದ ಎದುರಿಸುವ ತಾಕತ್ತೇ ಇಲ್ಲ. ಭಾರತದ ಇಸ್ಲಾಮಿಕ್ ಮೂಲಭೂತವಾದವನ್ನು ಎದುರಿಸುವ ಸಶಕ್ತ ವಿಧಾನಗಳಲ್ಲಿ ಒಂದೆಂದರೆ, ಮುಸ್ಲಿಂ ಸಮುದಾಯದ ಲೋಕದೊಳಗಿನ ಸಾಂಸ್ಕೃತಿಕ ಜಗತ್ತುಗಳ ಅನನ್ಯತೆಗಳನ್ನು, ಅದು ಮೂಲಭೂತವಾದಿ ವಿರೋಧದಲ್ಲಿ ಕಟ್ಟಿಕೊಂಡಿರುವ ಪ್ರತಿರೋಧ ಪರಂಪರೆಯನ್ನು ಅರಿಯುವುದು ಮತ್ತು ಅದರ ಅನನ್ಯತೆಯನ್ನು ಗೌರವಿಸುವುದು : ಈ ಅರಿವನ್ನು ಆಧುನಿಕ ಪ್ರಜಾಪ್ರಭುತ್ವವಾದಿ ಎಡಪಂಥೀಯ ಚಳುವಳಿಯ ಭಾಗವಾಗಿ ಉಪಾಯದಲ್ಲಿ ಬೆಸೆಯುವುದು.

**ನಾಸ್ತಿಕ ತಾರ್ಕಿಕತೆ**

ಕೆಲವು ಪ್ರಗತಿಪರರು ಸಂಸ್ಕೃತಿ ಸಮುದಾಯ ಎಂಬ ಮಾತನ್ನು ಜಾತೀಯ ಮೂಲಭೂತವಾದಿ ಪರಿಭಾಷೆಯೆಂದು ತಿಳಿದಂತೆ ಕಾಣುತ್ತದೆ. ಜಾತಿ ಮತಗಳ ಆಚೆಗೆ ಮನುಷ್ಯರನ್ನು ಮನುಷ್ಯರನ್ನಾಗಿ ಗುರುತಿಸುವ ವೈಚಾರಿಕ ಮಾನವತಾವಾದಕ್ಕೆ ಇದರಿಂದ ತಡೆ ಎಂಬುದು ಅವರ ಸಂಶಯವಿರಬೇಕು. ಸಾಂಸ್ಕೃತಿಕ ಸಂಗತಿಗಳಿಲ್ಲದೆ ಕೇವಲ ರಾಜಕೀಯ ಸಿದ್ಧಾಂತಗಳ ಮೇಲೆ ಪ್ರತಿರೋಧ ಮಾಡುವ ಟ್ರೈನಿಂಗಿನ ಪರಿಣಾಮವಿದು. ಇಂತಹ ನಿಲುವಿಗೆ ಕಾರಣ, ಕನ್ನಡ ಸೆಕ್ಯುಲರ್ ಚಿಂತನೆ ಮೂಲತಃ ನಾಸ್ತಿಕವಾದಿ, ಶುದ್ಧ ವಿಚಾರವಾದಿ ಹಾಗೂ ವ್ಯಕ್ತಿವಾದಿ ಆಗಿರುವುದು. ಮತಧರ್ಮಗಳ ಹೆಸರಿನಲ್ಲಿರುವ ಎಲ್ಲ ಸಂಗತಿಗಳನ್ನು ಅನುಮಾನಿಸುವ ನಿರಾಕರಿಸುವ ಗುಣ ಇದರದ್ದು. ಸಮಸ್ಯೆಯೆಂದರೆ, ಇದರಿಂದ ನಮ್ಮ ಅನೇಕ ವಿಚಾರವಾದಿಗಳಿಗೆ ಧಾರ್ಮಿಕತೆ, ಅನುಭಾವ,




ಅಧ್ಯಾತ್ಮ, ಕೋಮುವಾದ, ಮೂಲಭೂತವಾದ ಇವುಗಳ ನಡುವೆ ವ್ಯತ್ಯಾಸವೇ ಇಲ್ಲ. ಧರ್ಮವನ್ನು ನಂಬಿ ಬದುಕುತ್ತಿರುವ ಕೋಟ್ಯಾಂತರ ಜನಸಮುದಾಯವನ್ನು ಅವರು ಅನುಮಾನಿಸುತ್ತಾರೆ. ಸಾಮಾನ್ಯ ಜನರನ್ನು ಪ್ರಗತಿಪರವಲ್ಲದ ಧರ್ಮದ ಕೆಸರಲ್ಲಿ ಬಿದ್ದಿರುವ ಹುಳುಗಳೆಂಬಂತೆ ಕಾಣುತ್ತಾರೆ. ಜನ ಎಂಬುದು ಏಕರೂಪಿಯಾದ ಗುಂಪಲ್ಲ ಮತ್ತು ಅದೊಂದು ಸಂಕೀರ್ಣ ಗುಂಪು; ಅದು ಮಾಡಿದ್ದೆಲ್ಲ ಸಾಂಸ್ಕೃತಿಕವಾಗಿ ಆಧುನಿಕ, ಮೌಲ್ಯಯುತ, ಎಂದು ತಿಳಿಯದೆ ವಿಮರ್ಶಾತ್ಮಕವಾಗಿ ನೋಡಬೇಕು, ನಿಜವೆ. ಆದರೆ ಜನರನ್ನು ಹುಂಬರು ಎಂದು ಅನಾಮತ್ತಾಗಿ ಭಾವಿಸುವ ವಿಚಾರವಾದವು ಜನರಿಂದ ಏನನ್ನೂ ಕಲಿಯುವುದಿಲ್ಲ.

ಕನ್ನಡದ ಲೇಖಕಿ ಬಾನು ಮುಶ್ತಾಕ್ ಮಸೀದಿಯಲ್ಲಿ ಹೆಂಗಸರಿಗೆ ಪ್ರಾರ್ಥನೆ ಮಾಡಲು ಅವಕಾಶ ಕೊಡಬೇಕು ಎಂದದಕ್ಕಾಗಿ ಹಾಸನದ ಮಸೀದಿಯಲ್ಲಿ ಅವರ ಕುಟುಂಬಕ್ಕೆ ಬಹಿಷ್ಕಾರ ಹಾಕಿದ ಸುದ್ದಿ ಗೊತ್ತಾದ ದಿನ, ಈ ವಿಷಯವನ್ನು ನನ್ನ ಮನೆಯಲ್ಲಿ ಚರ್ಚಿಸಿದೆ. ಯಾರ ಹಕ್ಕಿನ ಪರ ವಿರೋಧದಲ್ಲಿ ತಲೆ ಬಿಸಿ ಮಾಡಿಕೊಳ್ಳಲಾಗಿದೆಯೋ, ಅವರ ಅಭಿಪ್ರಾಯವೇನು ಎಂದು ಕುತೂಹಲವಿತ್ತು. ಮನೆಯಲ್ಲಿ ಇದ್ದವರು ಇಬ್ಬರು ಹೆಂಗಸರು, ನನ್ನ ಮಡದಿ ಬಾನು ಹಾಗೂ ನನ್ನ ಅತ್ತೆ. ಬಾನು ಬಿ.ಎ. ಓದಿದವಳು, ಸಾಮಾಜಿಕ ವ್ಯಕ್ತಿತ್ವವುಳ್ಳವಳು. ಅವಳು ಹೇಳಿದಳು : ''ಮೊದಲಿಂದಲೂ ನಮ್ಮ ಧರ್ಮದಲ್ಲಿ ಅದು ಇಲ್ಲ ಎಂದಾದರೆ, ನಾನಂತೂ ಮಸೀದಿಗೆ ಹೋಗಬೇಕು ಎಂದು ಹಠ ಹಿಡಿಯಲಾರೆ''; (ಮಸೀದಿಗೆ ಹೋಗಲು ತವಕವಿಲ್ಲದ ಹೆಣ್ಣಿನ ಅಭಿಪ್ರಾಯವನ್ನು ನಾನು ಹಕ್ಕು ಪ್ರಜ್ಞೆಯಿಲ್ಲದ್ದು ಎಂದು ಹೇಳುವ ದುಡುಕು ಮಾಡಲಾರೆ). ಬಾನುವಿನ ತಾಯಿಗೆ ೮೦ ವರುಷ. ಅವರು ಹಜ್‌ಯಾತ್ರೆ ಮಾಡಿಬಂದವರು. ಬಾನುವಿನಂತೆ ನನ್ನಂತೆ ಕಾಲೇಜಿಗೆ ಹೋಗದವರು. ಆಧುನಿಕರಲ್ಲದವರು. ಅವರು ಹೇಳಿದರು : ''ಮಸೀದಿಗೆ ಹೆಂಗಸರು ಬರುವುದು ಬೇಡ ಎನ್ನುವುದಾದರೆ ಹಜ್ ಯಾತ್ರೆಗೆ ಯಾಕೆ ಹೋಗಬೇಕು ? ಮೂರ್ಖರು. ಅಂತಹ ಪವಿತ್ರ ಮಕ್ಕಾದಲ್ಲಿಯೇ ಗಂಡು ಹೆಣ್ಣು ಕೂಡಿ ನಮಾಜು ಮಾಡುತ್ತಾರಂತೆ, ಇನ್ನು ಮಸೀದಿಯಲ್ಲಿ ಹೆಂಗಸರು ನಮಾಜಿಗೆ ಹೋಗುವುದು ಯಾವ ದೊಡ್ಡ ಸಂಗತಿ ? ಹಾಗಾದರೆ ಖಬರಸ್ತಾನ ಯಾಕೆ ಒಂದೇ ಇರಬೇಕು ? ಅದನ್ನೂ ಬೇರೆಬೇರೆ ಮಾಡಲಿ.'' ಅವರ ಪ್ರಕಾರ ಮಸೀದಿಯಲ್ಲಿ ನಡೆದಿದ್ದು ಧರ್ಮವೇ ಅಲ್ಲ. ಆಧುನಿಕ ಹೆಣ್ಣಾದ ಬಾನು ಪ್ರತಿಭಟನೆಯ ಪರ ಹಾಗೂ ಹಳೆಗಾಲದ ಸಂಪ್ರದಾಯವಾದಿ ಕುಟುಂಬದಲ್ಲಿ ಬೆಳೆದ ಮಹಿಳೆಯಾದ ನನ್ನ ಅತ್ತೆ ಮಸೀದಿಯ ಬಹಿಷ್ಕಾರದ ಪರ ಇರುತ್ತಾರೆ ಎಂದು ನನ್ನ ಊಹೆ. [illegible] ಪ್ರತಿಕ್ರಿಯೆಗಳ ವ್ಯತ್ಯಾಸ ನನ್ನನ್ನು ಚಕಿತಗೊಳಿಸಿತು. ಸಾಮಾನ್ಯ ಜನ [illegible]

ಚಿಂತಿಸುತ್ತಾರೆ ಎಂದು ತಿಳಿಯುವುದು ಆಧುನಿಕ ವಿಚಾರವಾದದ ಇನ್ನೊಂದು ಪೂರ್ವಗ್ರಹ.

ಮೂಲಭೂತವಾದಕ್ಕೆ ಧಾರ್ಮಿಕ ನೆಲೆಯಲ್ಲಿ ಅಸಮ್ಮತಿ ವ್ಯಕ್ತಪಡಿಸುವ ಮಾನವತಾವಾದಿ ವಿವೇಚನೆ ಇಸ್ಲಾಮಿನಲ್ಲಿ ಯಾವಾಗಲೂ ಕೆಲಸಮಾಡಿಕೊಂಡು ಬಂದಿದೆ. ಸುಧಾರಣವಾದಿಯಂತೆ ತೋರುವ ಈ ಮಾದರಿ ಉಗ್ರ ವೈಚಾರಿಕ ವಿಧಾನ ಅನುಸರಿಸುವುದಿಲ್ಲ. ಧರ್ಮದ ಚೌಕಟ್ಟಿನಲ್ಲಿಯೇ ಮೂಲಭೂತವಾದವನ್ನು ತೀಕ್ಷ್ಣವಾಗಿ ವಿಮರ್ಶಿಸುತ್ತದೆ. ಹೆಂಗಸರು ಮಸೀದಿಗೆ ಹೋಗುವ ಪ್ರಶ್ನೆಯನ್ನು ಚರ್ಚೆಗೆತ್ತಿಕೊಂಡ ದಕ್ಷಿಣ ಕನ್ನಡದ ಅನೇಕ ಧಾರ್ಮಿಕ ಪಂಡಿತರು, ಇಸ್ಲಾಮಿನಲ್ಲಿ ಹೆಣ್ಣು ಮಸೀದಿಗೆ ಹೋಗುವ ಚರಿತ್ರೆಯ ಹಾಗೂ ಸಮಕಾಲೀನ ಉದಾಹರಣೆಗಳನ್ನು ಉಲ್ಲೇಖಿಸಿ, ವಾದ ಮಂಡಿಸಿದರು ಹಾಗೂ ಮಸೀದಿ ಪ್ರವೇಶವನ್ನು ಸಮರ್ಥಿಸಿದರು. ಮಿತಿಯೆಂದರೆ ಇವು ಅಂತಿಮವಾಗಿ ಹಕ್ಕನ್ನು ನಾಗರಿಕ ನೆಲೆಯಲ್ಲಿ ಮಂಡಿಸುವುದಿಲ್ಲ. ಆದರೆ ಸಿನಿಕತೆಯಿಂದ ಪರಿಷ್ಕರಣವಾದಿ ಎಂದು ತಳ್ಳಿಹಾಕದೆ, ವಾಸ್ತವವಾದಿಯಾಗಿ ನೋಡಿದರೆ, ಧಾರ್ಮಿಕ ನೆಲೆಯಿಂದ ಬೀಳುವ ಈ ಹೊಡೆತಗಳಿಗೆ ಇವುಗಳದ್ದೇ ಆದ ಶಕ್ತಿಯಿದೆ ಎಂದು ಅರಿವಾಗುತ್ತದೆ. ಇದು ಪ್ರಜಾಪ್ರಭುತ್ವವಾದಿ ನೆಲೆಯ ವಿಮರ್ಶೆ ಮತ್ತು ಹೋರಾಟಗಳ ಪ್ರಾಮುಖ್ಯವನ್ನು ಅಲ್ಲಗಳೆಯುವ ಮಾತಲ್ಲ. ಧಾರ್ಮಿಕ ಪ್ರತಿರೋಧದ ಪಾತ್ರವನ್ನು ಗುರುತಿಸುವ ಮಾತು. ವೈಚಾರಿಕ ಮತ್ತು ಆಧುನಿಕ ಮೌಲ್ಯಗಳ ನೆಲೆಯ ಪ್ರತಿರೋಧವು ಆದರ್ಶರೂಪಿಯಾಗಿ ಸರಿ. ಆದರೆ ನಿರ್ದಿಷ್ಟ ಚಾರಿತ್ರಿಕ ಸಂದರ್ಭವು ತನ್ನದೇ ಆದ ಯುದ್ಧತಂತ್ರವನ್ನು ಬೇಡುವಾಗ "ಧಾರ್ಮಿಕ" ಚೌಕಟ್ಟಿನೊಳಗಿನ ಪ್ರತಿರೋಧವೂ ಮುಖ್ಯವಾಗಬಲ್ಲದು. ಚರಿತ್ರೆಯಲ್ಲಿ ಧಾರ್ಮಿಕ ನೆಲೆಯ ಪ್ರತಿರೋಧಗಳು ಪ್ರಜಾಪ್ರಭುತ್ವವಾದಿ ರಾಜಕಾರಣದ ಭಾಗವಾಗಿ ಸೇರಿಕೊಂಡಿವೆ ಕೂಡ. ಸದ್ಯಕ್ಕೆ ಇಸ್ಲಾಮಿಕ್ ಮೂಲಭೂತವಾದವನ್ನು ಎದುರಿಸುವ ನಿಜವಾದ ಶಕ್ತಿ ಧಾರ್ಮಿಕ ಹಾಗೂ ಪ್ರಜಾಪ್ರಭುತ್ವವಾದಿ ನೆಲೆಗಳೆರಡೂ ಮೇಳವಿಸುವಲ್ಲಿ ಇರಬಹುದೇ ಎಂದು ಅನಿಸುತ್ತಿದೆ. ಇದಕ್ಕೆ ತಟ್ಟನೆ ನೆನಪಿಗೆ ಬರುತ್ತಿರುವ ಉದಾಹರಣೆ ಎಂದರೆ, ಅಸಘರ ಆಲಿ ಇಂಜಿನಿಯರ್ ಅವರದು.



**ಜನಾಂಗದ್ವೇಷೀ ಸೆಕ್ಯುಲರುಗಳು**

ಸೆಕ್ಯುಲರ್ ಪ್ರಗತಿಪರತೆಯು ನಾಸ್ತಿಕರನ್ನು ಮಾತ್ರ ಪ್ರಗತಿಪರ ಎಂದು ತಿಳಿಯುವುದು. ಆದರೆ ಅವರು ಎಷ್ಟೆಷ್ಟು ತಮ್ಮ ಧಾರ್ಮಿಕಲೋಕದಿಂದ ದೂರ ಸರಿಯುತ್ತಾರೋ ಅಷ್ಟಷ್ಟು ಸೆಕ್ಯುಲರ್ ಎಂದು ಭಾವಿಸುತ್ತದೆ. ತಮ್ಮ ಧರ್ಮದ ಭಾಗವಾಗಿರುವ ಸಾಂಸ್ಕೃತಿಕ ಲೋಕಗಳ ಜತೆಗೆ ವಿಮರ್ಶಾತ್ಮಕವಾಗಿ ಕೂಡ ಸಂಬಂಧ ಇಟ್ಟುಕೊಳ್ಳುವುದನ್ನು ಅದು ಜಾತಿವಾದ ಅಥವಾ ಮೂಲಭೂತವಾದ ಎಂದು ಅನುಮಾನಿಸುತ್ತದೆ. ಇಂತಹ ಅಪೇಕ್ಷೆಗಳ ಫಲವೋ ಏನೋ, ಅನೇಕ ಜನ ಸೆಕ್ಯುಲರರು ತಮಗೆ ತಮ್ಮ ಸಮುದಾಯದ ಜತೆ ಯಾವುದೇ ಸಂಬಂಧ ಇಲ್ಲವೆಂದೂ, ತಾವು ನಾಸ್ತಿಕರೆಂದೂ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಇದು ರಾಜಕೀಯ ಪ್ರಜ್ಞೆಯಿಲ್ಲದ ಪ್ರಗತಿಪರತೆ ಎಂದು ನನ್ನ ಭಾವನೆ.

ನಿಜವಾದ ಪ್ರಗತಿಪರರು ಆಳದಲ್ಲಿ ನಾಸ್ತಿಕರೂ ಅಧಾರ್ಮಿಕರೂ ಆಗಿರುತ್ತಾರೆ. 'ನೋಡಿ ಶುದ್ಧ ವಿಚಾರವಾದಿಯಾಗಿ, ನಾನೊಬ್ಬ ಹೇಗೆ ಪಾರಾಗಿದ್ದೇನೆ' ಎಂದು ಹೆಮ್ಮೆಗೊಳ್ಳುವ ವ್ಯಕ್ತಿವಾದಿಗಳಾಗಿ ಜನ ದೂರವಾಗಿ ಉಳಿಯುತ್ತಾರೆ. ಅವರಿಗೂ ದುಡಿಯುವ ಸಮುದಾಯಕ್ಕೂ ಆಪ್ತ ಸಂಬಂಧವಾಗಲಿ, ಮೂಲಭೂತವಾದಿಗಳ ಹಿಡಿತದಲ್ಲಿ ಸಿಲುಕಿರುವವರ ಬಗೆಗೆ ಕಾಳಜಿಯಾಗಲಿ ಇರುವುದಿಲ್ಲ. ಕೆಲವು ವಿಚಾರವಾದಿಗಳಿಗೆ ಧರ್ಮದ ಕೆಸರಲ್ಲಿ ಬಿದ್ದಿರುವ ಜನರಿಗೆ ಉದ್ಧರಿಸಬೇಕು ಎಂಬ ಅಹಂನಿಷ್ಠ ಪ್ರಜ್ಞೆಯೂ ಇದ್ದಂತಿದೆ. ಪ್ರತಿ ಸಮುದಾಯವೂ ತನ್ನ ಧರ್ಮದೊಳಗಿನ ಮೂಲಭೂತವಾದ ಹಾಗೂ ಕೋಮುವಾದಗಳ ವಿರುದ್ಧ ಗುಪ್ತ ಪ್ರತಿರೋಧಗಳ ಪರಂಪರೆ ಹೊಂದಿರುತ್ತದೆ. ಇಸ್ಲಾಮಿನಲ್ಲಿ ಸೂಫಿಗಳು, ಲೇಖಕರು, ದಾರ್ಶನಿಕರು, ಜನಪದರು ಚರಿತ್ರೆಯುದ್ದಕ್ಕೂ ಮೂಲಭೂತವಾದದ ವಿರುದ್ಧ ಬಗೆಬಗೆಯ ಸೆಣಸಾಟ ಮಾಡುತ್ತ ಪರ್ಯಾಯಗಳನ್ನು ಹುಟ್ಟಿಸುತ್ತ ಬಂದಿದ್ದಾರೆ. ಇವನ್ನು ಆಧುನಿಕ ರೂಪಿಯಾದ ಮೂಲಭೂತವಾದ ಎದುರಿಸುವ ಸ್ವಯಂಸಿದ್ಧ ಅಸ್ತ್ರಗಳು ಎಂದು ನೋಡಬೇಕಿಲ್ಲ. ಆಧುನಿಕರೂಪಿ ಕೋಮುವಾದ ಮೂಲಭೂತವಾದಗಳನ್ನು ಎದುರಿಸಲು ಪ್ರಗತಿಪರ ಶಕ್ತಿಗಳ ಜತೆಗೆ ಕೂಡಿದ ರಾಜಕೀಯ ಹೋರಾಟವೇ ಅಂತಿಮ ಇರಬಹುದು. ಆದರೆ ಚರಿತ್ರೆಯಲ್ಲಿ ನಡೆದ ಅನೇಕ ನೆಲೆಯ ಹೋರಾಟಗಳ ಪರಂಪರೆಯ ಅರಿವು ಆಧುನಿಕ ಹೋರಾಟಗಳಿಗೆ ಹೇಗೆ ಶಕ್ತಿ ತುಂಬಬಲ್ಲದು ಎಂಬ ಚಿಂತನೆ, ಕುತೂಹಲ ಕೂಡ ವ್ಯಕ್ತಿವಾದಿ ಪ್ರಗತಿಪರರಿಗೆ ಇರುವುದಿಲ್ಲ. ಇದನ್ನು ನಾನು ಸಂಸ್ಕೃತಿಹೀನ ಪ್ರಗತಿಪರತೆ ಎಂದು ಕರೆಯುತ್ತೇನೆ. ಸೆಕ್ಯುಲರ್ ಮುಸ್ಲಿಮ್ ಎಂದು ಇಂತಹ ಮಾದರಿಗಳನ್ನೇ ಕನ್ನಡದ ವಿಚಾರವಾದಿ ಪ್ರಗತಿಪರತೆ ನಿರೀಕ್ಷಿಸುತ್ತದೆಯೇ ? ಇದು ನಿಜವಿದ್ದರೆ ಇಂತಹ ಮಾದರಿಯಾಗಲು ನಾನಂತೂ ನಿರಾಕರಿಸುತ್ತೇನೆ - ಸಂಪ್ರದಾಯವಾದಿ ಅನಿಸಿಕೊಂಡರೂ ಪರವಾಗಿಲ್ಲ.

**ಭಾರತೀಕರಣಗೊಳ್ಳುವುದು ಎಂದರೆ.....**

ಸೆಕ್ಯುಲರ್ ಆಗುವುದು ಎಂದರೆ 'ಸ್ವಸಮುದಾಯದ' ದ್ವೇಷ ಎಂಬ ಕೋಮುವಾದಿ ಗ್ರಹಿಕೆ ಎಷ್ಟು ದಟ್ಟವಾಗಿದೆಯೆಂದರೆ, ಯಾರೂ 'ಮುಸ್ಲಿಂ ಲೇಖಕ'ರಿಗೆ ನೀವೇಕೆ ನಿಮ್ಮ ಮಾತೃಭಾಷೆಗಳಲ್ಲಿ ಬರೆಯುವುದಿಲ್ಲ? ನಿಮ್ಮ ಓದುಗರು ಯಾರು ? ನಿಮ್ಮ ಮಾತೃಭಾಷಿಕ ಸಮುದಾಯದೊಂದಿಗೆ ನಿಮ್ಮ ಈಗಿನ ಬರವಣಿಗೆ ಸಂಬಂಧ ಎಂಥದು ? ಎಂಬ ಪ್ರಶ್ನೆಗಳನ್ನು ಉಪಚಾರಕ್ಕೂ ಕೇಳಿಲ್ಲ. ಇವರ ಪ್ರಕಾರ ಯಾವ ಸಾವಯವ ಸಂಬಂಧವಿಲ್ಲದೆ ಸಮುದಾಯದಿಂದ ಸಿಡಿದು ಹೊರಬರುವಿಕೆ ಇಲ್ಲವೇ ವಿಮರ್ಶೆಯಿಲ್ಲದೆ ಮೂಲಭೂತವಾದ ಸಹಿಸಿಕೊಂಡು ಇರುವಿಕೆ - ಎರಡೇ ಆಯ್ಕೆಯಿರುವುದು. ಧಾರ್ಮಿಕರಾಗಿದ್ದೂ ಮೂಲಭೂತವಾದಿಗಳ ಹಿಡಿತದಿಂದ ಹೊರಗೆ ಬದುಕುವ ಅಪಾರವಾದ ಜನ ಅಥವಾ ನಾಸ್ತಿಕ ಮಾನವತಾವಾದಿಗಳಾಗಿದ್ದೂ ಅದನ್ನು ಸಾರಿಕೊಳ್ಳದೆ ಹೋರಾಟದ ದಾರಿಗಳನ್ನು ಅರಸುವ ಸೆಕ್ಯುಲರಿಗರು ಇರುವ ಮೂರನೇ ಸಾಧ್ಯತೆಯೇ ಇಲ್ಲ.

ನಿಜವಾಗಿಯೂ ಒಬ್ಬ ಸೆಕ್ಯುಲರ್ ಮುಸ್ಲಿಮರಿಂದ ಏನನ್ನು ನಿರೀಕ್ಷೆ ಮಾಡಲಾಗುತ್ತಿದೆ ? ಅವರು ತಮ್ಮ ಧರ್ಮದ ಮೂಲಭೂತವಾದವನ್ನು ಕೂಡಲೇ ಖಂಡಿಸಬೇಕು. ಇದೊಂದು ನೈತಿಕ ಹೊಣೆಗಾರಿಕೆ. ಈ ಹೊಣೆಗಾರಿಕೆಯನ್ನು ನಿಭಾಯಿಸಿ 'ನಾನು ಜಾತಿವಾದಿಯಲ್ಲ, ಸೆಕ್ಯುಲರ್, ನನಗೆ ಆತ್ಮವಿಮರ್ಶಾ ಗುಣವಿದೆ'

*ಪ್ರಪಂಚದಲ್ಲಿ ಕೇಡು ಇದೆ ಎನ್ನುವುದು ಸ್ಪಷ್ಟ. ಅದು ಎಲ್ಲಿಂದ ಬಂತು? ಕೆಲವು ಮತಗಳವರೇನೋ ಸದ್ಗುಣನಿಧಿಯಾದ ದೇವರಿದ್ದಾನೆ ಎಂದು ನಂಬುವಂತೆ ದುರ್ಗುಣನಿಧಿಯಾದ ವ್ಯಕ್ತಿಯೊಬ್ಬ ಇದ್ದಾನೆಂದು ನಂಬುತ್ತಾರೆ. ಬೈಬಲ್ ಆತನಿಗೆ ಸೈತಾನ ಎಂಬ ಹೆಸರು ಕೊಟ್ಟಿದೆ. ಅವನೇ ಎಲ್ಲ ಕೇಡಿಗೂ ಮೂಲ. ಆದರೆ ಸೈತಾನ ತನ್ನನ್ನ ತಾನೇ ಸೃಷ್ಟಿಸಿಕೊಳ್ಳಲಿಲ್ಲವಷ್ಟೆ - ಸೃಷ್ಟಿಕರ್ತ ದೇವನೊಬ್ಬನೇ ಅಂದಮೇಲೆ ಸೈತಾನನ ಕೇಡಿಗತನದ ಜವಾಬ್ದಾರಿ ದೇವರ ಮೇಲೆಯೇ ಒದಗುತ್ತದೆ.*

*- ಎ.ಎನ್. ಮೂರ್ತಿರಾವ್ ('ದೇವರು' ಕೃತಿಯಲ್ಲಿ)*

ಎಂದು ಪ್ರಮಾಣ ಒದಗಿಸಬೇಕು. ಕೋಮುವಾದಿಗಳ ಮುಂದೆ ಭಾರತೀಯನಾಗುವುದರ ಪುರಾವೆ ಒದಗಿಸುವ ಒತ್ತಡದಂತೆ, ವಿಚಾರವಾದಿಗಳ ಮುಂದೆ ಸೆಕ್ಯುಲರ್ ಆಗಿದ್ದೇನೆ ಎಂಬ ಪುರಾವೆ ಒದಗಿಸುವುದು ಒಂದು ಬಗೆಯ ಹಿಂಸೆಯ ಅನುಭವವೇ. ವ್ಯಕ್ತಿವಾದಿ ಮಾದರಿಯಲ್ಲಿ ಭಾರತೀಕರಣಗೊಂಡ ಒಬ್ಬ ಸೆಕ್ಯುಲರ್ ಮುಸ್ಲಿಮರ ಗುರುತು ನನಗಿದೆ. ಅವರು ಅಂತರ ಧರ್ಮೀಯ ಮದುವೆಯಾದರು. ಹೆಂಡತಿಯನ್ನು ಮತಾಂತರ ಮಾಡಲಿಲ್ಲ. ಹುಟ್ಟಿದ ಮಕ್ಕಳಿಗೆ 'ಹಿಂದೂ' ಹೆಸರು ಇಟ್ಟರು. ಮುಸ್ಲಿಮರ ಯಾವ ಆಚರಣೆ ಹಬ್ಬಗಳನ್ನೂ ಮಾಡುವುದಿಲ್ಲ. ನಾಸ್ತಿಕ. ತಮ್ಮ ಪಾಡಿಗೆ ತಾವು ಇರುವ ಇಂತಹ ವ್ಯಕ್ತಿಗಳು ಕುಟುಂಬಗಳು ಬೇಕಾದಷ್ಟು ಇವೆ. ಒಬ್ಬ ವ್ಯಕ್ತಿ ಧಾರ್ಮಿಕ ನೀತಿನಿಯಮಗಳ ಆಚೆ ಬದುಕಬಲ್ಲ ಒಂದು ಪರಿಸರವಿರುವುದು ನಾಗರಿಕ ದೇಶದಲ್ಲಿ ನಿಜಕ್ಕೂ ಸಾಧ್ಯವಾಗಬೇಕು. ಸಮಸ್ಯೆಯೆಂದರೆ, ನಾಸ್ತಿಕ ಮಾನವತಾವಾದಿಗಳಲ್ಲಿ ಮೂಲಭೂತವಾದಿಗಳನ್ನೂ ಅಮಾಯಕ ಮುಸ್ಲಿಮರನ್ನೂ ವ್ಯತ್ಯಾಸ ಮಾಡದೆ ತೋರುವ ತಿರಸ್ಕಾರ ಮುಸ್ಲಿಮನಾಗಿ ಹುಟ್ಟಿದ ಪಾಪ ಪರಿಹರಿಸಿಕೊಳ್ಳಲೋ ಎಂಬಂತೆ, ಹಿಂದೂಕರಣಗೊಳ್ಳುವ ಹಾದಿ ಹಿಡಿಯುವ ಇವರಿಗೆ, ತಾತ್ವಿಕವಾಗಿ ಮೂಲಭೂತವಾದವನ್ನು ಚರಿತ್ರೆಯಲ್ಲಿ ಮುಖಾಮುಖಿ ಮಾಡಿಕೊಂಡು ಬಂದಿರುವ ಯಾವ ಬಂಡುಕೋರ ಪರಂಪರೆಯ ಅರಿವೂ ಇಲ್ಲ.

**ಇಕ್ಕಟ್ಟುಗಳು**

ಧರ್ಮದ ಆಧಾರದಲ್ಲಿ ತುಂಡಾದ ದೇಶವೊಂದರಲ್ಲಿ ಉಳಿದ ಮುಸ್ಲಿಮರಿಗೆ ಬಹುಸಂಖ್ಯಾತ ಕೋಮುವಾದದ ಒತ್ತಡಗಳನ್ನು ಎದುರಿಸಿ ಬದುಕಲು ಹೇಗೆ ಸಾಧ್ಯವಾಗಿದೆ ? ಉತ್ತರ ಸರಳ. ಹೆಚ್ಚಿನ ಮುಸ್ಲಿಮರು ಅರಬಸ್ತಾನ ಮಾದರಿಯ ಇಸ್ಲಾಮನ್ನು ಪಾಲಿಸದೆ ಸ್ಥಳೀಕರಣಗೊಂಡು, ಮೂಲಭೂತವಾದಿಗಳ ಹಿಡಿತದಿಂದ ಹೊರಗೆ ಇರುವುದರಿಂದ; ಭಾರತದಲ್ಲಿ ಸೆಕ್ಯುಲರ್ ಚಿಂತಕರ ಧಾರೆಯ ಕವಚ ಇನ್ನೂ ಗಟ್ಟಿ ಇರುವುದರಿಂದ; ಹಿಂದೂ ಕೋಮುವಾದವು ಅಂತಿಮವಾಗಿ ಸುಳ್ಳು ಮತ್ತು ದ್ವೇಷದ ಸಿದ್ಧಾಂತಗಳ ಮೇಲೆ ನಿಂತಿರುವುದರಿಂದ. ಹೀಗಾಗಿ ಕೇವಲ ಮೂಲಭೂತವಾದ, ಕೋಮುವಾದಗಳ ವಿರೋಧಕ್ಕೆ ಮೀಸಲಾದ ಒಂದು ಚಳುವಳಿ ಇರುವುದು ಸಾಧ್ಯವಿಲ್ಲ ಹಾಗೂ ಈ ಪೀಡೆಗಳನ್ನು ಬಹುಸಂಖ್ಯಾತರೊಂದಿಗೆ ಸೇರಿದ, ಆರ್ಥಿಕ ರಾಜಕೀಯ ಹಕ್ಕುಗಳ ಭಾಗವಾಗಿರುವ ಕೂಡು ಚಳುವಳಿಯ ಮೂಲಕ ಎದುರಿಸಬೇಕಾಗಿದೆ. ಇಲ್ಲದಿದ್ದರೆ, ಒಂದೋ ''ನಮ್ಮದು ದಮನಿತ ಸಮುದಾಯ, ನಮ್ಮ ರಕ್ಷಣೆ ನಾವೇ ಮಾಡಿಕೊಳ್ಳಬೇಕು'' ಎಂಬ ಅಸಹಾಯಕತೆ ಹುಟ್ಟಿಬಿಡುವುದು. ಇಲ್ಲವೇ, ಕೋಮುವಾದಿಗಳಿಂದ ಉಳಿಸುವ ಜವಾಬ್ದಾರಿ ಸೆಕ್ಯುಲರ್ ವ್ಯವಸ್ಥೆಯ ಮೇಲಿದೆ ಎಂಬ ನಿರಾತಂಕ ಅವಲಂಬನವು ಆತ್ಮವಿಮರ್ಶೆ ಕಳೆದುಬಿಡಬಹುದು.

ಅಲ್ಪಸಂಖ್ಯಾತರಲ್ಲಿ ಆತ್ಮವಿಶ್ವಾಸ ಮಾತ್ರವಲ್ಲ, ಆತ್ಮವಿಮರ್ಶೆಯನ್ನೂ ಬೆಳೆಸುವುದು ಮತ್ತು ಈ ಆತ್ಮವಿಶ್ವಾಸ ಆತ್ಮ ವಿಮರ್ಶೆಗಳನ್ನು ಉಪಾಯವಾಗಿ ವಿಶಾಲ ನೆಲೆಯ ಪ್ರಜಾಪ್ರಭುತ್ವ ಚಳುವಳಿಗಳ ಭಾಗವಾಗುವಂತೆ ಕಸಿಗೊಳಿಸುವುದು ಹೇಗೆ ? ಇದು ಎದುರಿಗಿರುವ ಸವಾಲು. ಈ ಕೆಲಸದಲ್ಲಿ ಕ್ರಿಯಾಶೀಲವಾಗಿರುವ ಅನೇಕರೊಡನೆ ವಿರೋಧ, ಗೆಳೆತನಗಳ ಅಭಿನಯ ಮಾಡಬೇಕಾಗಿರುವ ಮುಸ್ಲಿಂ ಸೆಕ್ಯುಲರ್ ವರ್ಗದ ಪಾತ್ರ ಸೂಕ್ಷ್ಮವೂ ಹೊಣೆಗಾರಿಕೆಯದೂ ಆಗಿದೆ. ಜನರ ಜತೆ ಆಪ್ತ ಮತ್ತು ವಿಮರ್ಶಾತ್ಮಕ ಸಂಬಂಧ, ಕೋಮುವಾದಿಗಳ ಜತೆ ವಿರೋಧ, ಮೂಲಭೂತವಾದದೊಂದಿಗೆ ಗುದ್ದಾಟ ಹಾಗೂ ಪ್ರಗತಿಪರ ಚಳುವಳಿಗಳ ಜತೆ ಸಖ್ಯ, ಹೀಗೆ ಬಹುಮುಖಿ ಹೊಣೆಯನ್ನು ಎಲ್ಲ ವೈರುಧ್ಯಗಳ ನಡುವೆ ನಿಭಾಯಿಸಬೇಕು. ಸೆಕ್ಯುಲರ್ ಚಳುವಳಿಗಳ ಜತೆ ತಮ್ಮನ್ನು ಕ್ರೈಸ್ತರು ಮುಸ್ಲಿಮರು ಗುರುತಿಸಿಕೊಳ್ಳದಿದ್ದರೆ, ಅವರನ್ನು ಅವರವರ ಧರ್ಮಗಳ ಮೂಲಭೂತವಾದಿಗಳು, ಫ್ಯಾಸಿಸ್ಟರು, ಕೋಮುವಾದಿಗಳು ಸುಲಭವಾಗಿ ಹರಿದುಹಾಕುವರು.

ಮೂಲಭೂತವಾದ, ಕೋಮುವಾದ ವಿರೋಧಿ ಹೋರಾಟವನ್ನು ಅನೇಕ ಇಕ್ಕಟ್ಟುಗಳಲ್ಲಿ ನಡೆಸಬೇಕಾಗಿದೆ. 'ಹಿಂದೂ'ಗಳ ಮೇಲೆ ಹಲ್ಲೆಯನ್ನು ಎಲ್ಲೇ ಯಾರೇ ಯಾಕೇ ಮಾಡಿರಲಿ, ಅವು ಇನ್ನೆಲ್ಲೋ ಇರುವ ಮುಸ್ಲಿಮರ ಬದುಕುವ ಹಕ್ಕನ್ನು ಪ್ರಶ್ನೆ ಮಾಡುತ್ತವೆ. (ತಮಿಳರು ಕನ್ನಡಿಗರ ನಡುವೆ ಕೂಡ ಇಂತಹ ವಿಚಿತ್ರ ಜಿಗುವು ಈಗ ಶುರುವಾಗಿದೆ). ಇವು ಕೋಮುವಾದಿಗಳ ಹಲ್ಲೆಗಳನ್ನು, ಮಸೀದಿ ಕೆಡವಿದ ಕೃತ್ಯವನ್ನು, ನ್ಯಾಯಬದ್ಧಗೊಳಿಸುತ್ತವೆ. ಕೋಮುವಾದದ ವಿರುದ್ಧ ಸೈದ್ಧಾಂತಿಕ ರಾಜಕೀಯ ಹೋರಾಟವನ್ನು ನಡೆಸುತ್ತಿರುವವರ ನೈತಿಕ ಸ್ಥೈರ್ಯ ಕುಗ್ಗಿಸುತ್ತವೆ. ಹೀಗಾಗಿ ಭಾರತದ ಮುಸ್ಲಿಮರು ಪಕ್ಕದ ಮುಸ್ಲಿಂ ದೇಶಗಳಲ್ಲಿ ಅಲ್ಪಸಂಖ್ಯಾತರ ಮೇಲೆ ನಡೆವ ಹಿಂಸೆಗೆ ಪ್ರತಿಭಟಿಸುವ ಪ್ರತಿಕ್ರಿಯೆ ತೋರಬೇಕಾಗಿರುವುದು ಕೇವಲ ಸಹಜ ಮಾನವೀಯ ಕಾಳಜಿಯಿಂದಲ್ಲ. ತಮ್ಮ ಸುರಕ್ಷಿತ ಅಸ್ತಿತ್ವಕ್ಕಾಗಿ ಅಲ್ಲ, ಕೋಮುವಾದದ ಮೇಲಿನ ವಿಶಾಲ ಹೋರಾಟಕ್ಕೆ ನೈತಿಕತೆ ಪಡೆಯಲು ಕೂಡ ಅಗತ್ಯವಾಗಿದೆ. ಪ್ರಗತಿಪರರು ತಮ್ಮ ತಮ್ಮ ಧರ್ಮದ ಮೂಲಭೂತವಾದ, ಕೋಮುವಾದಗಳ ವಿರುದ್ಧ ದನಿಯೆತ್ತಿ ಪರಸ್ಪರ ಪ್ರೇರಣೆ ಹಾಗೂ ಬಲವನ್ನು ಪಡೆದುಕೊಳ್ಳಬೇಕಾಗಿದೆ.

**ಸಂಗಾತಿಗಳಲ್ಲಿ ಸಂವಾದವಿಲ್ಲ**

ಈ ಕಾರಣಕ್ಕಾಗಿ ಸಮಾನ ಶತ್ರುಗಳ ವಿರುದ್ಧ ಕೆಲಸಮಾಡುವ ಸಂಗಾತಿಗಳ ನಡುವೆ ಮತ್ತಷ್ಟು ತೀವ್ರವಾದ ಸಂವಾದ ನಡೆಯುವ ಅಗತ್ಯ ಎಂದಿಗಿಂತ ಹೆಚ್ಚು ಅಗತ್ಯವಾಗಿದೆ. ಸಂಗಾತಿಗಳು 'ಈತ ಮೂಲಭೂತವಾದಿ ಇರಬಹುದೇ, ಈತ ಸುಪ್ತ ಕೋಮುವಾದಿ ಇರಬಹುದೇ' ಎಂಬ ಗುಮಾನಿಗಳಲ್ಲಿ ತೊಡಗಿದ್ದು, ಗಂಭೀರ ಸೈದ್ಧಾಂತಿಕ ಚರ್ಚೆಯೇ ಅಸಾಧ್ಯವಾಗಿದೆ. ಕೋಮುವಾದಿಗಳು ಮೂಲಭೂತವಾದಿಗಳು ಏಕೀಕರಣ ಸಾಧಿಸಿದ್ದರೆ, ಅವರ ವಿರುದ್ಧ ಕೆಲಸಮಾಡುವ ಸಂಗಾತಿಗಳು ಪರಸ್ಪರ ಶಂಕೆ ಬೌದ್ಧಿಕ ಅರಾಜಕತೆಗಳಲ್ಲಿ ಛಿದ್ರವಾಗಿರುವರು. ನಮ್ಮ ಪ್ರತಿಭಟನೆ ಏಕಕಾಲಕ್ಕೆ ಆತ್ಮಪರೀಕ್ಷೆಯೂ, ಸಮುದಾಯದ ಒಳಗೆ ಚಲನೆ ಸಾಧ್ಯವಾಗಬಲ್ಲ ಪ್ರಾಮಾಣಿಕ ಯತ್ನವೂ, ಒಟ್ಟು ಸಮಾಜದ ಆರೋಗ್ಯಕರ ಬದಲಾವಣೆಯ ಅಲೆಯ ಒಂದು ಭಾಗವೂ ಆಗುವಂತೆ ಆದರೆ ಜನಪ್ರಿಯ ಪ್ರತಿಭಟನೆಯ ಹಾದಿಯಲ್ಲಿ ವೈಯಕ್ತಿಕ ವಿರೋಧ ಮಾಡಿ ಹೀರೋ ಆಗುವ ಬದಲು, ಒಂದು ವಿಶಾಲ ನೆಲೆಯಲ್ಲಿ ಸೇರಿ ಮುಖಾಮುಖಿ ಮಾಡುವ ಹಾದಿಗಳ ಹುಡುಕಾಟದ ಬಗೆ ಹೊಳೆಯುವುದು. ಸಂಗಾತಿಗಳ ಪ್ರತಿಕ್ರಿಯೆಗಳಲ್ಲಿ ಒರಟುತನ, ಅವಸರ, ಸರಳೀಕರಣ ಹಾಗೂ ಅಸೂಕ್ಷ್ಮತೆಗಳು ಶತ್ರುವಿಗೆ ಮಾಡಿದ ಸಹಾಯವಾಗುವವು. ''ಸಂಕೀರ್ಣ ಸಂದರ್ಭಕ್ಕೆ ಪ್ರತಿಕ್ರಿಯೆಯೂ ಸಂಕೀರ್ಣ''ವಾಗಿರಬೇಕು. ಈ ಮಾತನ್ನು ಹೇಳುವಾಗ, ಸಂಕೀರ್ಣತೆಯ ಧ್ಯಾನವು ಖಚಿತತೆಗೆ ಮುನ್ನಡೆಸುತ್ತದೆಯೋ ಅಥವಾ ಕ್ರಿಯೆಗಿಳಿಯದ ಬೌದ್ಧಿಕ ಹಿಂಜರಿತನಕ್ಕೆ ಸಮರ್ಥನೆಯಾಗುತ್ತದೆಯೋ ? ಮೂಲಭೂತವಾದದ ನೇರ ಮುಖಾಮುಖಿ ಮಾಡಲಾಗದ ನಿಷ್ಕ್ರಿಯತೆಯಿಂದ ಇಂತಹ ವಾದಗಳು ಹುಟ್ಟುತ್ತವೆಯೋ ಎಂಬ ಪ್ರಶ್ನೆ ಮೂಲೆಯಲ್ಲಿ ಇಣುಕುತ್ತಿದೆ. ಇದು ನಿಜವಿದ್ದರೆ, ಸೂಕ್ಷ್ಮತೆ ಸಂಕೀರ್ಣತೆಗಳ ಢಾಲಿನಲ್ಲಿ ಹೇಡಿತನವನ್ನು ಅಡಗಿಸದೆ, ಅವಸರವಾದಿ ಪ್ರಗತಿಪರರ ಟೀಕೆಗಳಿಗೆ ತಲೆ ಕೆಡಿಸಿಕೊಳ್ಳದೆ, ಸಮಾನ ಮನಸ್ಕರ ಜತೆ ಮತ್ತಷ್ಟು ಸಂವಾದ ಮಾಡುವುದು, ತಪ್ಪನ್ನು ತಿದ್ದಿಕೊಳ್ಳುವುದು ಹಾಗೂ ಮತ್ತಷ್ಟು ದೃಢವಾಗಿ ಸೂಕ್ಷ್ಮವಾಗಿ ಪ್ರತಿರೋಧವನ್ನು ಸೃಷ್ಟಿಸುವುದು - ಇದೊಂದೇ ಹೊಳೆಯುತ್ತಿರುವ ಮತ್ತು ಸಾಧ್ಯವಿರುವ ದಾರಿ. ಫಲತೂನರಂತೆ ಕನ್ನಡಿ ಹಿಡಿಯುವ. ಹಿಡಿದ ಕನ್ನಡಿಯಲ್ಲಿ ತಮ್ಮನ್ನು ನೋಡಿ ಕಲಿಯುವ ಅವಕಾಶ ಇನ್ನೂ ಮುಗಿದಿಲ್ಲ.

ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ - ೫೮೩ ೨೭೬

# ಭಾರತೀಯ ಮಿಶ್ರ ಸಂಸ್ಕೃತಿ



**ಯಾ**ವುದೇ ಕಾರಣಗಳಿಂದ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋದ ಮನುಷ್ಯ ಆ ಪರಿಸರವು ತನಗೆ ಎಲ್ಲಾ ರೀತಿಯಲ್ಲೂ ಅನುಕೂಲವಾಗಿದೆ ಎಂದು ಮನವರಿಕೆ ಆದರೆ ಅಲ್ಲೇ ನೆಲೆಸುತ್ತಾನೆ. ಸಾಮಾನ್ಯವಾಗಿ ಆಹಾರ, ರಕ್ಷಣೆ, ವಿಶ್ರಾಂತಿಗಳಿಗಾಗಿ ಒಂದು ನೆಲೆಯನ್ನು ಬಯಸುವ ಮಾನವ, ಯಾವುದೇ ರೀತಿಯ ತೊಂದರೆ ಅಥವಾ ಕೊರತೆ ಎದುರಾದಾಗ, ಅಥವಾ ತನ್ನ ಸದ್ಯದ ನೆಲೆಗಿಂತ ಉತ್ತಮವಾದ ಮತ್ತೊಂದು ನೆಲೆಯನ್ನು ಕಂಡಾಗ ಅಂತಹ ಎಡೆಗೆ ವಲಸೆ ಹೋಗುತ್ತಾನೆ. ತನ್ನ ಅನುಕೂಲಕ್ಕೆ ತಕ್ಕ ವಾಸಸ್ಥಾನವನ್ನು ಮನುಷ್ಯ ಅಪೇಕ್ಷಿಸುವುದು ಸಹಜ. ನೆಮ್ಮದಿಯಿಂದ ಜೀವನ ನಡೆಸುವಾಗ ತನ್ನ ಬಿಡುವಿನ ವೇಳೆಯನ್ನು ತನ್ನಲ್ಲಿರುವ ಸೃಜನಾತ್ಮಕ ಶಕ್ತಿಯ ಬಳಕೆಗೆ ವಿನಿಯೋಗಿಸುತ್ತಾನೆ.

ಹೀಗೆ ಬೆಳೆಯುತ್ತಾ ಮಾನವ ಏನೇನೋ ಹೊಸ ವಿಷಯಗಳ ಆವಿಷ್ಕಾರ ಮಾಡುತ್ತಾನೆ. ಒಂದು ನೆಲೆಯಾದ ಮೇಲೆ ತನ್ನದೇ ಒಂದು ಗುಂಪು, ಆ ಗುಂಪಿನದೇ ಕೆಲವು ರೀತಿ ನೀತಿಗಳು, ಆಚಾರ ವಿಚಾರಗಳು ಇತ್ಯಾದಿಗಳನ್ನು ರೂಪಿಸಿಕೊಳ್ಳುತ್ತಾನೆ. ಹೀಗೆ ರೂಪುಗೊಳ್ಳುವ ಕ್ರಿಯೆಯು ಒಂದು ಕಾಲಕ್ಕೆ ಮತ್ತು ಒಂದು ಪ್ರದೇಶಕ್ಕೆ ಮಾತ್ರ ಎಂದು ತಿಳಿಯಬೇಕಾಗಿಲ್ಲ. ಅದು ಬಹುಕಾಲ ಉಳಿಯುತ್ತದೆ. ಆ ಕ್ರಿಯೆಗಳೇ ಸಂಸ್ಕೃತಿಯ ಹೆಜ್ಜೆ ಗುರುತುಗಳು. ಈ ಸಂಸ್ಕೃತಿಯೂ ಎಲ್ಲೆಡೆ ಒಂದೇ ಕಾಲಕ್ಕೆ ರೂಪುಗೊಂಡಿಲ್ಲ. ಸಂಸ್ಕೃತಿಯು ರೂಪುಗೊಳ್ಳುವಾಗ ಅಥವಾ ರೂಪುಗೊಂಡ ನಂತರ ಬೇರೆ ಬೇರೆ ಸಂಸ್ಕೃತಿಗಳಿಂದ ತನಗೆ ಬೇಕಾದ್ದನ್ನು ಪಡೆದುಕೊಳ್ಳುತ್ತದೆ. ಆದರೆ ಮೂಲ ಸಂಸ್ಕೃತಿಯ ಎಲ್ಲ ಅಂಶಗಳನ್ನೂ ಉಳಿಸಿಕೊಂಡಿರುತ್ತದೆ. ಬಹುತೇಕ ಈ ಅಭಿಪ್ರಾಯದ ಹಿನ್ನೆಲೆಯಲ್ಲೇ ಶ್ರೀ ಬಿ. ಎಸ್. ಉಪಾಧ್ಯಾಯರು ಹೀಗೆ ಹೇಳಿದ್ದಾರೆ : ''ಮನುಜ ಕುಲದಂತೆ ಸಂಸ್ಕೃತಿಯು ಒಂದು. ಅದು ವಿಭಜಿಸಬಹುದಾದ್ದಲ್ಲ. ಆದರೆ ಅದು ಅಸೀಮಿತ ಮಾದರಿಗಳನ್ನು ಪ್ರತಿಫಲಿಸುತ್ತದೆ.''

ಭಾರತೀಯ ಸಂಸ್ಕೃತಿಯ ಅಧ್ಯಯನ ಮಾಡುವ ಯಾರಿಗೇ ಆದರೂ ಇಲ್ಲಿಯದೇ ಆದ ಮೂಲ ಸಂಸ್ಕೃತಿ ಯಾವುದು ಎಂಬ ಪ್ರಶ್ನೆ ಕಾಡಿದರೆ ಆಶ್ಚರ್ಯವಾಗುವುದಿಲ್ಲ. ಸೂರ್ಯ ಮುಳುಗಿದ ನಂತರ ಊಟ ಮಾಡದ ಶ್ರೀವೈಷ್ಣವರು ನಮ್ಮಲ್ಲಿದ್ದಾರೆ. ಅಪ್ಪಟ ಶಾಕಾಹಾರಿಗಳಾದ ಒಕ್ಕಲಿಗರು ನಮ್ಮೊಡನಿದ್ದಾರೆ. ಮೀನು ಸಸ್ಯಾಹಾರಕ್ಕೆ ಸಮ ಎಂದು ಹೇಳಿ ಅದನ್ನು ಉಪಯೋಗಿಸುವ ಬ್ರಾಹ್ಮಣರಿದ್ದಾರೆ. ಈ ಎಲ್ಲ ಉದಾಹರಣೆಗಳು ಕಾಸ್ಮಾಪಾಲಿಟನ್ ಎಂದು ಘೋಷಿಸಿಕೊಳ್ಳುವವರಿಗೆ ಅನ್ವಯಿಸುವುದಿಲ್ಲ. ಪ್ರಭಾವ, ಪ್ರೇರಣೆಗಳು ಅನೇಕ ಬದಲಾವಣೆ ಮತ್ತು ಉಳಿಕೆಗಳಿಗೆ ಕಾರಣವಾಗುತ್ತವೆ. ಸಾಹಿತ್ಯ, ಕಲೆ, ಧರ್ಮ ಎಲ್ಲವೂ ಪರಸ್ಪರ ಪೂರಕಗಳು. ಈ ವಿಚಾರಗಳ ಬಗ್ಗೆ ಶ್ರೀ ಬಿ. ಎಸ್. ಉಪಾಧ್ಯಾಯರು ತಮ್ಮ *Feeders of Indian Culture* ಕೃತಿಯಲ್ಲಿ ವಿವರವಾಗಿ ಚರ್ಚಿಸಿದ್ದಾರೆ. (ಆ ಕೃತಿಯ ಹಿನ್ನೆಲೆಯಲ್ಲಿ ಈ ಲೇಖನ ಸಿದ್ಧವಾಗಿದೆಯಾದರೂ, ಅದರೊಳಗಿನ ಎಲ್ಲವೂ ಇಲ್ಲಿಲ್ಲ ಮತ್ತು ಅದನ್ನು ಹೊರಪಡಿಸಿದ ವಿಷಯಗಳೂ ಇಲ್ಲಿವೆ ಎಂದು ಸ್ಪಷ್ಟಪಡಿಸಬಯಸುತ್ತೇನೆ). ಇತಿಹಾಸವನ್ನು ಯಾವುದೇ ರೀತಿಯಲ್ಲಿ ವಿಭಾಗ ಮಾಡಿಕೊಂಡು, ಅಂದರೆ ಒಂದು ನಿರ್ದಿಷ್ಟ ಕಾಲಕ್ಕೆ ಅಥವಾ ಒಂದು ನಿರ್ದಿಷ್ಟ ವಂಶಕ್ಕೆ ಸೀಮಿತ ಮಾಡಿಕೊಂಡು ಅಭ್ಯಾಸ ಮಾಡಿದರೆ ನಮಗೆ ಸಿಗುವುದು ಸಮಗ್ರ ಇತಿಹಾಸವಲ್ಲ. ಮನುಷ್ಯನ ಬದುಕು ಸಮಗ್ರ; ಅದಕ್ಕೆ ಹೊಂದಿಕೊಂಡ ಸಂಸ್ಕೃತಿ ಸಮಗ್ರ; ಅಂತೆಯೇ ಅಂದಿನಿಂದ ಇಂದಿನವರೆಗಿನ ಇತಿಹಾಸ ಸಮಗ್ರ. ಭಾರತೀಯ ಇತಿಹಾಸವು ಕೇವಲ ಭಾರತಕ್ಕೆ ಸಂಬಂಧಿಸಿದ್ದು ಎಂದು ತಿಳಿಯುವ ಕಾಲ ಈಗಿಲ್ಲ. ಭಾರತದ ಮೂಲಕ ಇಡೀ ವಿಶ್ವದ ಇತಿಹಾಸವನ್ನು ತಿಳಿಯುವುದು ಅವಶ್ಯಕ. ಇಲ್ಲವಾದರೆ ನಾವು ತಿಳಿಯುವ ಇತಿಹಾಸವು ಅಸಮಗ್ರವಾಗುತ್ತದೆ. ಬದುಕು ಸಮಗ್ರ, ಅಂತೆಯೇ ಇತಿಹಾಸವೂ ಸಮಗ್ರ. ಭೌತಶಾಸ್ತ್ರವಾಗಲೀ ರಸಾಯನಶಾಸ್ತ್ರವಾಗಲೀ, ಭೂಗೋಳವಾಗಲೀ [illegible] ಜ್ಞಾನದ ಮತ್ತಾವುದೇ ಶಾಖೆಯಾಗಿರಲಿ [illegible] ಯಾವುದೇ ಒಂದು ದೇ[illegible] [illegible] [illegible] ಸೀಮಿತವಾಗಿರಲು ಸಾಧ್ಯವಿಲ್ಲ. ಬಹುತೇಕ ಈ

ಡಾ|| ಎಚ್. ಎಸ್. ಗೋಪಾಲ ರಾವ್

*ಭಾರತ ಎಂಬ ಹೆಸರಿನ ನಮ್ಮ ದೇಶದಲ್ಲಿ ರಾಷ್ಟ್ರಗೀತೆ, ರಾಷ್ಟ್ರಭಾಷೆ, ರಾಷ್ಟ್ರ ಲಾಂಛನ ಇತ್ಯಾದಿ ಸ್ವೀಕೃತವಾಗಿರುವ, ಅದೂ ಸ್ವಾತಂತ್ರ್ಯಾನಂತರ ಪ್ರಜಾಸತ್ತಾತ್ಮಕವಾಗಿ ಒಪ್ಪಿಕೊಂಡಿರುವ ರಾಷ್ಟ್ರವನ್ನು ಪ್ರತಿನಿಧಿಸುವ ಸಂಕೇತಗಳನ್ನು ಹೊರತುಪಡಿಸಿದರೆ, ಒಂದು ಎಂದು ಕರೆದುಕೊಳ್ಳುವ ಯಾವ ಅಂಶವೂ ಇಲ್ಲ ಎನ್ನುವುದನ್ನು ಸಾಮಾನ್ಯ ಜನತೆ ಕೂಡ ಒಪ್ಪುತ್ತದೆ. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಯಾವೊಬ್ಬ ವಿದ್ವಾಂಸರ ಅಂಕಿತವೂ ಬೇಕಿಲ್ಲ. ಭಾರತ ಮಾತ್ರ ಇಂತಹ ಮಿಶ್ರ ಸಂಸ್ಕೃತಿಯನ್ನು ಹೊಂದಿದೆ; ಮತ್ತಾವ ದೇಶದಲ್ಲೂ ಇಂತಹ ಪರಿಸ್ಥಿತಿ ಇಲ್ಲ ಎಂದೇನೂ ತೀರ್ಮಾನಿಸಬೇಕಾದ್ದಿಲ್ಲ.*

ಅರ್ಥದಲ್ಲೇ ಡಿ.ವಿ.ಜಿ. ಹೇಳಿದ ಈ ಮಾತುಗಳು ಅರ್ಥಪೂರ್ಣ:

ಗ್ರೀಸಿನಾ ಕಬ್ಬಗಳನೋದುವರು ದೆಹಲಿಯಲಿ
ಕಾಶಿಯಾ ಶಾಸ್ತ್ರಗಳನಾಕ್ಸ್‌ಫರ್ಡಿನವರು
ದೇಶ ಕಾಲ ವಿಭಾಗ ಮನದ ರಾಜ್ಯದೊಳಿರದು
ಶ್ವಾಸವದು ಬೊಮ್ಮನದು -ಮಂಕುತಿಮ್ಮ.

ಇತಿಹಾಸಕ್ಕೂ ದೇಶ ಕಾಲ ವಿಭಾಗ ಇರಲು ಸಾಧ್ಯವಿಲ್ಲ. ಈಗಂತೂ ವಿಶ್ವವೇ ಒಂದು ಗ್ರಾಮ ಎಂಬ ಪರಿಕಲ್ಪನೆ ರೂಪುಗೊಂಡಿದೆ. ಸಂಚಾರ ಮತ್ತು ಸಂಪರ್ಕ ವ್ಯವಸ್ಥೆ ಮನುಷ್ಯನ ನಡುವಿನ ದೂರವನ್ನು ಕಡಿಮೆ ಮಾಡುತ್ತಿದೆ.

ಪ್ರಾಕ್ಚಾರಿತ್ರಿಕ ಯುಗದಲ್ಲೇ ಮನುಷ್ಯನ ವಲಸೆಯ ಬದುಕು ಆರಂಭಗೊಂಡಿದೆ. ಅಂದಿನಿಂದ ಇಂದಿನವರೆಗೆ ಅವನ ಅಲೆಮಾರಿತನ ಮುಂದುವರಿದಿದೆ. ಈಜಿಪ್ಟ್ ಮತ್ತು ಸುಮೇರಿಯಾಗಳ ನಡುವೆ ಸಂಪರ್ಕವಿತ್ತು. ಮೊಹೆಂಜೊದಾರೋವಿನ ಮುದ್ರೆಗಳು ಉರ್ ಮತ್ತು ಕಿಶ್‌ಗಳಲ್ಲಿ ದೊರೆತಿವೆ. ಪ್ರಾಚೀನ ಭಾರತದ ಪಾಟಲೀಪುತ್ರ ಮತ್ತು ನಳಂದಗಳು ಅನೇಕ ವಿದೇಶಿ ಪ್ರವಾಸಿಗರಿಗೆ ಪರಿಚಿತವಾಗಿದ್ದವು. ಭಾರತದ ಕರಿಮೆಣಸು ರೋಮ್ ನಗರವನ್ನು ತಲುಪಿತ್ತು. ಬೌದ್ಧ ಧರ್ಮದ ಹಲವಾರು ಧರ್ಮಗ್ರಂಥಗಳು ಪ್ರವಾಸಿಗರ ಮೂಲಕ ಚೀನಾವನ್ನು ತಲುಪಿತ್ತು. ಅದಕ್ಕಿಂತ ಮುಖ್ಯವೆಂದರೆ, ಭಾರತದಲ್ಲಿ ರೂಪುಗೊಂಡ ಬೌದ್ಧ ಧರ್ಮವು ನೆಲೆಗೊಂಡದ್ದು ಚೀನಾದಲ್ಲಿ; ಆದ್ದರಿಂದ ಇತಿಹಾಸವು ಒಂದು ದೇಶ ಅಥವಾ ಕಾಲಕ್ಕೆ ಸೀಮಿತಗೊಂಡದ್ದಲ್ಲ . ಹಿಂದೆ, ಒಂದು ಹಂತದಲ್ಲಿ ಆಗಿನ ಪರಿಸ್ಥಿತಿಗೆ ತಕ್ಕಂತೆ ಇತಿಹಾಸವನ್ನು ಪರಿಚಯಿಸುವ ಅವಶ್ಯಕತೆ ಇತ್ತು. ಉದಾಹರಣೆಗೆ, ಆಲೂರು ವೆಂಕಟರಾಯರು ಬರೆದ **ಕರ್ನಾಟಕದ ಗತ ವೈಭವ**. ಆದರೆ ಈಗ ಕಾಲ ಬದಲಾಗಿದೆ. ಯಾವುದೇ ಪ್ರದೇಶದ ಇತಿಹಾಸವನ್ನು ಬಣ್ಣ ಕಟ್ಟಿ ಪರಿಚಯಿಸಬೇಕಾದ ಅವಶ್ಯಕತೆ ಇಲ್ಲ. ಇತಿಹಾಸವನ್ನು ವೈಭವೀಕರಿಸಬೇಕಾದ ಕಾಲ ಮುಗಿದಿದೆ. ಆಕಸ್ಮಾತ್ ಹಾಗೆ ವೈಭವೀಕರಿಸಿದರೆ, ಆಗ ಅದು ಅನ್ಯಾಕ್ರಮಣಶೀಲವಾದ ಸ್ವದೇಶ ಪ್ರೇಮವಾಗುತ್ತದೆ.



ಈ ಗುಣವನ್ನು *chauvinism* ಎನ್ನುವ ಬಿ. ಎಸ್. ಉಪಾಧ್ಯಾಯರು, ಆ ಬಗ್ಗೆ ವಿವರಿಸುತ್ತಾ ಹೀಗೆ ದಾಖಲಿಸಿದ್ದಾರೆ: ''ಅನ್ಯಾಕ್ರಮಣಶೀಲತೆಯ ವಿಶಿಷ್ಟ ಗುಣವೆಂದರೆ ಅದರ ದುರಹಂಕಾರ ಮತ್ತು ಮಾನಸಿಕ ಜಡತೆ. ಅದು ಸರ್ವಾಧಿಕಾರವನ್ನು ಹುಟ್ಟಿಹಾಕುತ್ತದೆ. ಸರ್ವಾಧಿಕಾರವು ಕುಲಗೆಟ್ಟ ಪದ್ಧತಿಗಳಿಗೆ ಹಾದಿ ಮಾಡಿಕೊಡುತ್ತದೆ: ಮರಣದಂಡನೆ, ತಲೆ ಬೇಟೆ ಮತ್ತು ಸಾರ್ವಜನಿಕ ಸುಳ್ಳುತನ, ರಾಷ್ಟ್ರೀಯ ಅನ್ಯಾಕ್ರಮಣಶೀಲತ್ವದ ಬಗ್ಗೆ ಇತಿಹಾಸಕಾರನು ಎಚ್ಚರದಿಂದಿರಬೇಕು. ಇಲ್ಲದಿದ್ದರೆ ತಾಜಮಹಲ್ ಎಂಬುದು ಯಾವನೋ ಚಿಕ್ಕ ಸರದಾರನ ಖಾಸಗಿ ವಸತಿಗೃಹವೆಂದು ಚಿತ್ರಿತವಾಗಿ ಬಿಡುತ್ತದೆ ಮತ್ತು ಅಲ್ಲಿನ ಬಾಲಚಂದ್ರ ಚಿಹ್ನೆಯು ಶಿವನ ತ್ರಿಶೂಲವಾಗಿಬಿಡುತ್ತದೆ.'' ಸ್ವದೇಶ ಪ್ರೇಮ ಇರಲೇಬೇಕು; ಆದರೆ ಅದು ಬೇರೆ ದೇಶ ಅಥವಾ ಧರ್ಮ ಅಥವಾ ಭಾಷೆ ಇತ್ಯಾದಿಗಳನ್ನು ನಿಂದಿಸುವ ಅಥವಾ ದ್ವೇಷಿಸುವ ಮೂಲಕ ಅಲ್ಲ.

ಪ್ರಾಚೀನ ನಾಗರಿಕತೆಗಳ ಕುರುಹುಗಳು ದೊರೆತಿರುವುದು ನದಿಗಳ ಪಾತ್ರದಲ್ಲಿ ಮಾತ್ರ. ಆಹಾರ, ಕೃಷಿ, ನೀರು ಇತ್ಯಾದಿಗಳಿಗೆ ಯಾವುದೇ ಕೊರತೆ ಇಲ್ಲದ ಸ್ಥಳಗಳಲ್ಲಿ ಜನ ನೆಲೆ ನಿಂತು ಬದುಕನ್ನು ರೂಪಿಸಿಕೊಂಡರು. ಕೊರತೆ ಕಾಣಿಸಿಕೊಂಡಾಗ ಬೇರೆಡೆಗೆ ವಲಸೆ ಬಂದರು. ಅಲ್ಲಿದ್ದ ಮೂಲವಾಸಿಗಳೊಡನೆ ನೆಲೆಗಾಗಿ ಕಿತ್ತಾಡಿದರು. ಬಲಿಷ್ಠರು ಬದುಕಿದರು; ದುರ್ಬಲರು ಸೋತರು. ಬಂದವರು ಇಲ್ಲಿದ್ದವರ ಮತ್ತು ಇಲ್ಲಿದ್ದವರು ಬಂದವರ ಆಚಾರ ವಿಚಾರಗಳನ್ನು ಸಹಜವಾಗಿಯೇ ಅಳವಡಿಸಿಕೊಂಡರು. ಆದ್ದರಿಂದಲೇ ಯಾವುದೇ ಪ್ರದೇಶದಲ್ಲಿ ಮೂಲ ಅಥವಾ ಶುದ್ಧ ಸಂಸ್ಕೃತಿಯನ್ನು ಕಾಣುವುದು ಕಷ್ಟದ ಮಾತು. ಎಲ್ಲೆಡೆಯೂ ಮಿಶ್ರ ಸಂಸ್ಕೃತಿಯೇ ಉಳಿದಿರುವುದು. ಭಾರತದ ವಿಷಯದಲ್ಲೂ ಯಾವುದೇ ವಿನಾಯಿತಿಯನ್ನು ನೀಡಲು ಸಾಧ್ಯವಿಲ್ಲ. ಭಾರತದ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದು ವಿಶೇಷವೆಂದರೆ, ಭಾರತವು ಮತ್ತಾವ ದೇಶಗಳಿಗಿಂತಲೂ ವಾಯುಗುಣ, ಪ್ರಕೃತಿ ಸಂಪತ್ತು, ಜಲ ಸಂಪತ್ತು, ಖನಿಜ ಸಂಪತ್ತು ಇತ್ಯಾದಿ ವಿಷಯಗಳಲ್ಲಿ ಅತ್ಯಂತ ಶ್ರೀಮಂತವಾದುದು. ಆದ್ದರಿಂದಲೇ ಈ ನೆಲದಲ್ಲಿ ಅನೇಕ ದೇಶಗಳ ಜನ ಬಂದು ನೆಲೆ ನಿಂತು ಇಲ್ಲಿನವರೇ ಆಗಿಬಿಟ್ಟದ್ದಾರೆ. ಹಲವಾರು ಭಾಷಾ ವರ್ಗದ, ಹಲವಾರು ಜನಾಂಗದ, ಹಲವಾರು ಧರ್ಮಗಳ ಜನ ಇಲ್ಲಿ ನೆಲೆಸಿದ್ದಾರೆ ಮತ್ತು ಹಾಗೆ ನೆಲೆಸಿದವರೆಲ್ಲರೂ ತಮ್ಮ ಮೂಲದ ಯಾವುದನ್ನೂ ಮರೆಯದೆ ಮತ್ತು ಇಲ್ಲಿನ ಎಲ್ಲವನ್ನೂ ತಮ್ಮದಾಗಿಸಿಕೊಂಡು ಉಳಿದಿದ್ದಾರೆ ಮತ್ತು ಬೆಳೆದಿದ್ದಾರೆ. ಬಹುತೇಕ ಇಡೀ ವಿಶ್ವದಲ್ಲಿ ವಿಶ್ವಮಾನವತ್ವ ಎಂದೇನಾದರೂ ಇರುವುದಾದರೆ ಅದು ಭಾರತದಲ್ಲಿ ಮಾತ್ರ ಎಂದು ಇತಿಹಾಸ ಬಲ್ಲ ಎಲ್ಲರೂ ಒಪ್ಪುತ್ತಾರೆ ಎಂದು ಭಾವಿಸುತ್ತೇನೆ. ವಿಶ್ವದಲ್ಲಿ ಯಾವುದೇ ರಾಷ್ಟ್ರಕ್ಕಿಂತ ಅತ್ಯಂತ ಹೆಚ್ಚಿನ ಮತ್ತು ಮಹತ್ವದ ಕೊಡುಗೆಯನ್ನು ಸಂಸ್ಕೃತಿಗೆ ನೀಡಿರುವ ರಾಷ್ಟ್ರವೆಂದರೆ ಭಾರತ ಎಂದು ಯಾರು ಬೇಕಾದರೂ ಹೇಳುತ್ತಾರೆ. ಇದು ಉತ್ಪ್ರೇಕ್ಷೆಯ ಮಾತಲ್ಲ. ಕೊಡುವಾಗ ಒಂಟಿಯಾಗಿ ಕಡಿಮೆ ಕೊಟ್ಟರೂ ಪಡೆಯುವಾಗ ವಿವಿಧೆಡೆಗಳಿಂದ ಯಾವುದೇ ಸಂಕೋಚವಿಲ್ಲದೆ ಹೇರಳವಾಗಿ ಪಡೆದಿರುವ ಭಾರತವು ವಿಶ್ವದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅತ್ಯಂತ ಮಹತ್ವದ ಗೌರವ ಸ್ಥಾನ ಪಡೆದಿದೆ. ಶಿವ, ವಿಷ್ಣು, ಬ್ರಹ್ಮ ಇತ್ಯಾದಿ ಪೌರಾಣಿಕ ದೇವರುಗಳಲ್ಲದೆ, ವೇದಕಾಲದ ಇಂದ್ರ, ವಾಯು ಇತ್ಯಾದಿ ಮೂವತ್ತಮೂರು ಕೋಟಿ ದೇವರುಗಳ ಪೂಜೆಯ ಹೊಣೆ ಭಾರತೀಯರ ಮೇಲಿದೆ. ಈ ಶಿಷ್ಟ ದೇವತೆಗಳಲ್ಲದೆ, ರಕ್ತಬಲಿ ಬೇಡುವ ಅಸಂಖ್ಯಾತ ಜಾನಪದ ದೇವತೆಗಳನ್ನೂ ಭಾರತದಲ್ಲಿ ಪೂಜಿಸಲಾಗುತ್ತದೆ. ಇದು ಭಾರತಕ್ಕೆ ಮಾತ್ರ ಸೀಮಿತವಾದ ಸಂಪ್ರದಾಯ ಎಂದೇನೂ ಭಾವಿಸುವಂತಿಲ್ಲ. ವೇದಗಳಲ್ಲಿ ಬಳಸಲಾದ ತುರ್ಫರಿ, ಜುರ್ಫರಿ, ಅಲಗಿ, ವಿಲಿಗಿ, ಉರುಗುಲ, ತೈಮಾತಾ, ತಬುವಂ, ಯಹ್ವೆ ಇತ್ಯಾದಿ ಶಬ್ದಗಳು ಸುಮೇರೋ - ಬ್ಯಾಬಿಲಿಯಾನ್ ಸಂಪ್ರದಾಯಕ್ಕೆ ಸೇರಿದವು ಎಂದು ತಿಳಿಯಲಾಗಿದೆ. ದೇಶ, ವಿದೇಶಗಳ ಪುರಾಣದ ಕತೆಗಳಲ್ಲಿ ಅನೇಕ ಸಾಮ್ಯಗಳಿರುವುದನ್ನು ಈಗಾಗಲೇ ಗುರುತಿಸಲಾಗಿದೆ.

ಪ್ರಾಚೀನ ಕಾಲದಲ್ಲೇ ಸಿಂಧು ನಾಗರಿಕತೆಯ ಜೊತೆಗೆ ಬೇರೆ ಬೇರೆ ನಾಗರಿಕತೆಗಳ ಸಂಪರ್ಕ ಇದ್ದುದನ್ನು ಈಗಾಗಲೇ ತಿಳಿಯಲಾಗಿದೆ. ಅಲೆಗ್ಸಾಂಡರನ ಧಾಳಿಯ ನಂತರ ನಾಗರಿಕತೆಗಳ ಕೊಡು-ಕೊಳೆಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿದೆ. ಭಾರತದ ವಾಯವ್ಯ ಭಾಗಗಳು ವಿದೇಶಿಯರ ಆಕ್ರಮಣ ಹಾಗೂ

ಆಳ್ವಿಕೆಗೆ ಒಳಪಟ್ಟು ಅಲ್ಲೆಲ್ಲಾ ಆಕ್ರಮಣಕಾರರ ಸಂಸ್ಕೃತಿ ಪ್ರಭಾವ ಬೀರಿದೆ. ಇದಕ್ಕೆ ಉದಾಹರಣೆಗಳನ್ನು ಗಾಂಧಾರ, ಪಂಜಾಬ್, ಸಿಂಧ್ ಇತ್ಯಾದಿ ಪ್ರದೇಶಗಳಲ್ಲಿ ಕಾಣಬಹುದು. **ಹಿಂದ್ವಿ** ಪದವು ಮೊಟ್ಟಮೊದಲ ಬಾರಿಗೆ ಡೇರಿಯಸ್‌ನ ಶಾಸನದಲ್ಲಿ ಕಾಣುತ್ತದೆ ಮತ್ತು ಅದೇ ಪದವು ಈಗಲೂ ಹಿಂದು ಅಥವಾ ಹಿಂದಿಯನ್ನು ಸೂಚಿಸುವ ಪದವಾಗಿ ಉಳಿದಿದೆ ಎಂಬುದು ಶ್ರೀ ಬಿ. ಎಸ್. ಉಪಾಧ್ಯಾಯ ಅವರ ಅಭಿಪ್ರಾಯ. ಪರ್ಷಿಯನ್ ಭಾಷೆಯಲ್ಲಿ ಬೆಳ್ಳಿ ಮತ್ತು ಚಿನ್ನದ ತೂಕದ ಮೂಲಮಾನವಾದ **ಕರ್ಷ**ವು ಭಾರತೀಯ **ಕರ್ಷಪಣ**ದ ಹಿನ್ನೆಲೆಗೆ ಇರಬೇಕು ಎಂಬ ಅಭಿಪ್ರಾಯವೂ ಇದೆ. ಭಾರತದ ಹತ್ತಿಯ ಬಟ್ಟೆಗಳನ್ನು ಗ್ರೀಕರು ಇಷ್ಟಪಡುತ್ತಿದ್ದರು. ಹಲವಾರು ವಿದೇಶಿ ವಂಶಗಳು ಭಾರತವನ್ನು ಆಳಿವೆ. ಹಾಗೆ ಆಳಿದಾಗ ಅವರ ಆಚಾರ-ವಿಚಾರಗಳು, ಮಾತು-ಕತೆಗಳು, ಸಂಪ್ರದಾಯಗಳು, ಸಾಮಾಜಿಕ ನಡವಳಿಕೆಗಳು, ಆಡಳಿತ ವಿಧಾನಗಳು ಭಾರತೀಯರನ್ನು ಆಕರ್ಷಿಸಿ, ಹಾಗೆಯೇ ಉಳಿದುಕೊಂಡಿವೆ. ಈಜಿಪ್ಟ್‌ನ ಮೆಂಫಿಸ್‌ನಲ್ಲಿ ಭಾರತೀಯರದೇ ಒಂದು ನೆಲೆ ಇತ್ತೆಂದು ತಿಳಿದಿದೆ. ಹಾಗೆ ನೆಲೆ ನಿಂತವರಲ್ಲಿ ಅಧಿಕ ಜನ ವ್ಯಾಪಾರಿಗಳು ಎಂದೂ ತಿಳಿದಿದೆ. ಸಂಸ್ಕೃತ ನಾಟಕಗಳಲ್ಲಿ ಬರುವ **ಯವನರು**, ಕಾಶ್ಮೀರಿ **ಬೃಹತ್ಕಥೆ** ಹಾಗೂ **ಕಥಾಸರಿತ್ಸಾಗರ**ದಲ್ಲಿ ಬರುವ ಗ್ರೀಕ್ ಯಂತ್ರತಜ್ಞರೆಂದು ಅಭಿಪ್ರಾಯಪಡಲಾಗಿದೆ. ಗ್ರೀಕರ ಆಳ್ವಿಕೆಯ ದಟ್ಟ ಪ್ರಭಾವವನ್ನು ಭಾರತದ ವಾಯವ್ಯ ಭಾಗಗಳಲ್ಲಿ ಕಾಣಬಹುದು. ಇದು ಪ್ರಯೋಗಶೀಲವಾದ ಕಲೆಯ ವಿಚಾರದಲ್ಲಂತೂ ಅತ್ಯಂತ ಸ್ಪಷ್ಟವಾಗಿದೆ. ಗ್ರೀಕರ ನಂತರ ಭಾರತವನ್ನು ಪ್ರವೇಶಿಸಿದ ಶಕರು, ಮೊದಲಿಗೆ ತಮ್ಮ ಆಚಾರ- ವಿಚಾರಗಳನ್ನು ಹಂಚುವ ಕೆಲಸ ಮಾಡಿದರೂ, ಕ್ರಮೇಣ ಭಾರತೀಯರೇ ಆಗಿ ಉಳಿದುಬಿಟ್ಟರು. ಭಾರತೀಯ ವಾಸ್ತು ಮತ್ತು ಶಿಲ್ಪಕಲೆಗೆ ಶಕರ ಕೊಡುಗೆ ವಿಶಿಷ್ಟವಾದುದು. ಕೆಂಪು ಕಲ್ಲನ್ನು ಬಳಸಿ ಶಿಲ್ಪಗಳನ್ನು ನಿರ್ಮಿಸಿದ ಶಕ ಶಿಲ್ಪಿಗಳು ಆ ಪರಂಪರೆಯನ್ನು ಉಳಿಸಿದರು. ಭಾರತದಲ್ಲಿನ ಬಹುಕಾಲ ಪ್ರಚಲಿತವಿದ್ದ **ಶಕ** ಸಂವತ್ಸರವು ಶಕರ ನೆನಪು ಮಾಡುತ್ತದೆ ಎಂಬ ಅಭಿಪ್ರಾಯವೂ ಇದೆ. **ಕುಷಾನ್** ದೊರೆ ಕಾನಿಷ್ಕನನ್ನು ಭಾರತೀಯ ಇತಿಹಾಸದಲ್ಲಿ ಮರೆಯುವಂತೆಯೇ ಇಲ್ಲ. ಈ ಮೊದಲು ಉಲ್ಲೇಖಿಸಿದ **ಶಕ** ಸಂವತ್ಸರದ ಪ್ರವರ್ತಕನೇ ಕಾನಿಷ್ಕ ಎಂಬ ಅಭಿಪ್ರಾಯವೂ ಇದೆ. ಭಾರತದಲ್ಲಿ ಸೂರ್ಯಾರಾಧನೆಗೆ ಹೆಚ್ಚು ಒತ್ತು ಕೊಟ್ಟು ಸೂರ್ಯನಿಗೆ ಮೂರ್ತರೂಪ ಕೊಟ್ಟವರೇ ಶಕರು ಮತ್ತು ಕುಷಾನರು ಎಂದು ತಿಳಿಯಲಾಗಿದೆ. ಆಭೀರರು ಮತ್ತು ಗುರ್ಜರರೂ ಸಹ ಹೊರಗಿನಿಂದ ಬಂದವರು ಎಂದು ಶ್ರೀ ಬಿ.ಎಸ್. ಉಪಾಧ್ಯಾಯ ಹೇಳುತ್ತಾರೆ. ಕ್ರಿ.ಶ. ೭೧೨ರ ಸುಮಾರಿಗೆ ಮಹಮ್ಮದ್ ಬಿನ್ ಖಾಸಿಂನ ಮೂಲಕ ಭಾರತವನ್ನು ಪ್ರವೇಶಿಸಿದ **ಇಸ್ಲಾಂ** ಧರ್ಮವು ಗ್ರೀಕ್ ತತ್ವಜ್ಞಾನ ಮತ್ತು ವಿಜ್ಞಾನವನ್ನು ಪ್ರಪಂಚದ ಬಹುತೇಕ ಭಾಗಗಳಿಗೆ ಹರಡುವ ಕೆಲಸ ಮಾಡಿತು. ಮುಸಲ್ಮಾನ್ ಸೈನಿಕರ ಕ್ರೌರ್ಯ ಗುಣಗಳ ಬಗೆಗೆ ಎಲ್ಲಾ ಇತಿಹಾಸಕಾರರದೂ ಒಮ್ಮತದ ಅಭಿಪ್ರಾಯ. ತಮ್ಮದೇ ಆದ ಷರೀಯತ್, ಧರ್ಮ, ಆಚಾರ-ವಿಚಾರಗಳನ್ನು ಹೊಂದಿದ್ದ ಇಸ್ಲಾಂ ಧರ್ಮೀಯರು ತಮ್ಮದೇ ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡರು. ಶಕರಂತೆ, ಕುಷಾನರಂತೆ ಇಲ್ಲಿಯ ಜನ ಮತ್ತು ಅವರ ಆಚಾರ-ವಿಚಾರಗಳ ಜೊತೆಗೆ ಸಂಪೂರ್ಣವಾಗಿ ಬೆರೆಯಲಿಲ್ಲ ಮತ್ತು ಅವರಿಗೆ ಅದರ ಅವಶ್ಯಕತೆ ಇರಲಿಲ್ಲ.

ಮೇಲೆ ಪ್ರಸ್ತಾಪಿಸಲಾದ ಶ್ರೀ ಬಿ. ಎಸ್. ಉಪಾಧ್ಯಾಯರ ಅಭಿಪ್ರಾಯಗಳಿಗೆ ಪೂರಕವಾಗಿ ಇನ್ನೂ ಹಲವಾರು ವಿಷಯಗಳನ್ನು ಪ್ರಸ್ತಾಪಿಸಲು ಅವಕಾಶಗಳಿವೆ; ಉದಾಹರಣೆಗಳಿವೆ. ನಾವು ದಿನ ನಿತ್ಯ ಬಳಸುತ್ತಿರುವ ಅಂಕಿಗಳಾಗಲೀ, ಎಷ್ಟು ಕಷ್ಟಪಟ್ಟರೂ ಬಿಡಲಾಗದ ಇಂಗ್ಲಿಷ್ ಭಾಷೆಯಾಗಲೀ ನಮ್ಮವಲ್ಲವಾದರೂ, ಈಗ ನಮ್ಮವೇ ಆಗಿಹೋಗಿವೆ.

ಯೂರೋಪಿಯನ್ನರು, ವಿಶೇಷವಾಗಿ ಬ್ರಿಟಿಷರು, ವ್ಯಾಪಾರದ ಉದ್ದೇಶದಿಂದ ಇಲ್ಲಿಗೆ ಬಂದರೂ ಕ್ರಮೇಣ ಇಲ್ಲಿಯ ಬದುಕಿಗೆ ಹೊಂದಿಕೊಂಡು, ಇಲ್ಲಿಯ ಸಾಹಿತ್ಯ, ಕಲೆ, ಸಂಗೀತ, ಸಂಶೋಧನೆ ಇತ್ಯಾದಿ ಕ್ಷೇತ್ರಗಳಿಗೆ ನೀಡಿರುವ ಕೊಡುಗೆ ಗೌಣವೇನಲ್ಲ. ಸ್ವಾತಂತ್ರ್ಯಾನಂತರವೂ ಯೂರೋಪಿಯನ್ ಸಂಸ್ಕೃತಿ ಇಲ್ಲಿ ಉಳಿದಿದೆ.

ಭಾರತದ ನೆಲದಲ್ಲಿ ಜನ್ಮತಾಳಿ ಬೇರೆಡೆಯೇ ಹೆಚ್ಚು ಪ್ರಭಾವಶಾಲಿಯಾಗಿರುವ ಬೌದ್ಧ ಧರ್ಮವಾಗಲೀ, ಒಂದು ಕಾಲಕ್ಕೆ ತುಂಬಾ ಪ್ರಭಾವಶಾಲಿಯಾಗಿದ್ದು ಕ್ರಮೇಣ ದುರ್ಬಲಗೊಂಡಿರುವ ಜೈನ ಧರ್ಮವಾಗಲೀ, ಇಲ್ಲಿಯೇ ಹುಟ್ಟಿ, ಇಲ್ಲಿಯೇ ಬೆಳೆದು ಅನೇಕ ಶಾಖೆಗಳಾಗಿ ಹಂಚಿಹೋಗಿರುವ ಹಿಂದೂ ಧರ್ಮವಾಗಲೀ, ಧಾಳಿಕೋರರ ಜೊತೆಗೆ ಬಂದರೂ ಭಾರತದ ಬದುಕಿನ ಅವಿಭಾಜ್ಯ ಅಂಗವಾಗಿರುವ ಇಸ್ಲಾಂ ಧರ್ಮ ಮತ್ತು ಅದಕ್ಕೆ ಹೊಂದಿಕೊಂಡ ಉರ್ದು ಭಾಷೆ, ವ್ಯಾಪಾರಕ್ಕೆಂದು ಬಂದು, ಇಲ್ಲಿಯೇ ತಳವೂರಲು ಪ್ರಯತ್ನಿಸಿದ ಯೂರೋಪಿಯನ್ನರ ಜೊತೆಗೆ ಬಂದ ಕ್ರೈಸ್ತ ಧರ್ಮ ಮತ್ತು ಇಂಗ್ಲಿಷ್ ಭಾಷೆಗಳು ಈಗ ಭಾರತದ ಅವಿಭಾಜ್ಯ ಅಂಗಗಳಾಗಿಬಿಟ್ಟಿವೆ. ಹಿಂದೂಸ್ತಾನೀ ಸಂಗೀತ ಮತ್ತು ಕರ್ನಾಟಕ ಸಂಗೀತಗಳು ಪ್ರತ್ಯೇಕವಾದರೂ ಇವೆರಡೂ ಭಾರತೀಯ. ಭಾರತದಲ್ಲಿ ದೇಶೀಯ ಭಾಷೆಗಳಲ್ಲದೆ ಹಿಂದಿ ಮತ್ತು ಉರ್ದುಗಳೂ ಸಹ ಪ್ರಮುಖ ಭಾಷೆಗಳು. ಸದ್ಯಕ್ಕೆ 'ಮೃತ' ಭಾಷೆಯಾದರೂ ಸಂಸ್ಕೃತವೂ ಸಹ ಭಾರತದ ಅವಿಭಾಜ್ಯ ಅಂಗ. ಆರ್ಯ ಬುಡಕಟ್ಟಿಗೆ ಸೇರಿದ ಸಂಸ್ಕೃತ ಮತ್ತು ದ್ರಾವಿಡ ಬುಡಕಟ್ಟಿಗೆ ಸೇರಿದ ದಕ್ಷಿಣ ಭಾರತದ ಹಲವು ಭಾಷೆಗಳು ಇಲ್ಲಿ ಪರಸ್ಪರ ಹೊಂದಿಕೊಂಡಿವೆ. ಈ ಭಾಷೆಗಳಲ್ಲದೆ ಅನೇಕ ಉಪ ಭಾಷೆಗಳೂ ಇವೆ. ಇವೆಲ್ಲವೂ ಭಾರತವನ್ನು ಒಂದುಮಾಡಿವೆಯೇ ಹೊರತು ಎಂದೂ ಒಡೆಯುವ ಪ್ರಯತ್ನ ಮಾಡಿಲ್ಲ. ಪ್ರತ್ಯೇಕವಾಗಿ ಎಲ್ಲಾ ಭಾಷೆಗಳೂ ಶಕ್ತಿಯುತವಾಗಿಯೇ ಇವೆಯಾದರೂ ಪರಸ್ಪರ ಕೊಳು-ಕೊಡೆಯಲ್ಲಿ ತೊಡಗಿ, ತಾವೂ ಬೆಳೆಯುತ್ತಾ, ಇತರ ಭಾಷೆಗಳನ್ನೂ ಬೆಳೆಸುತ್ತಿವೆ.

ಭಾರತದಲ್ಲಿ ಹಲವಾರು ಧರ್ಮಗಳು ಕ್ರಿಯಾಶೀಲವಾಗಿವೆ. ಧರ್ಮಗಳೊಳಗಿನ ಶಾಖೆಗಳು, ಉಪಶಾಖೆಗಳು, ಸಿದ್ಧಾಂತಗಳು ಆಗಾಗ್ಗೆ ಹಲವು ತಾತ್ಕಾಲಿಕ ಘರ್ಷಣೆಗಳಿಗೆ ಎಡೆ ಮಾಡಿದರೂ, ಒಟ್ಟಾರೆ ಸಾಮರಸ್ಯಕ್ಕೆ ಶಾಶ್ವತ ಧಕ್ಕೆ ಎಂದೂ ಬಂದಿಲ್ಲ. ಶೈವದಲ್ಲಿ ಹಲವು ಭೇದಗಳಿರುವಂತೆಯೇ, ವೈಷ್ಣವ, ಜೈನ, ಬೌದ್ಧ, ಕ್ರೈಸ್ತ, ಇಸ್ಲಾಂ ಧರ್ಮಗಳಲ್ಲೂ ಹಲವು ಭೇದಗಳಿವೆ. ಇವೆಲ್ಲವೂ ಸೇರಿಯೇ ಭಾರತೀಯ ಧರ್ಮ ರೂಪುಗೊಂಡಿರುವುದು. ಯಾವುದೇ ಒಂದು ನಿರ್ದಿಷ್ಟ ಹೆಸರಿನ ಧರ್ಮಕ್ಕೆ ಭಾರತವನ್ನು ಸೀಮಿತಗೊಳಿಸಲು — ಸೇರ್ಪಡೆ ಮಾಡಲು ಸಾಧ್ಯವಿಲ್ಲ. ಇಲ್ಲಿ ಎಲ್ಲಾ ಧರ್ಮಗಳಿಗೂ ಸಹಭಾಗಿತ್ವವಿದೆ. ಅಂತೆಯೇ ವಾಸ್ತುಕಲೆಯ ವಿಷಯದಲ್ಲಿ ತಾಜ್‌ಮಹಲ್, ಗೋಲ್ ಗುಂಬಜ್, ಚಾವುಂಡರಾಯನ ಬಸದಿ, ಸನ್ನತಿಯ ಸ್ತೂಪ, ಸೇಂಟ್ ಫಿಲೋಮಿನಾ ಚರ್ಚ್ ಇತ್ಯಾದಿಗಳನ್ನು ಮರೆತು ಮುಂದಡಿ ಇಡುವಂತಿಲ್ಲ. ಶಿಲ್ಪಕಲೆಯಲ್ಲಿ ಗೊಮ್ಮಟನನ್ನು ಮರೆಯುವಂತಿಲ್ಲ. ಹೀಗೆ ಸಾಹಿತ್ಯ, ಕಲೆ, ವಾಸ್ತು ಶಿಲ್ಪ. ಸಂಗೀತ, ನೃತ್ಯ ಇತ್ಯಾದಿ ಕ್ಷೇತ್ರಗಳಲ್ಲಿ ಭಾರತೀಯ ಸಂಸ್ಕೃತಿಯು ಮಿಶ್ರಗೊಂಡಿದೆ ಎನ್ನುವುದು ಸತ್ಯ. ಈ ಮಿಶ್ರ ಸಂಸ್ಕೃತಿಯೇ ನಿಜವಾಗಿಯೂ ಭಾರತೀಯ ಸಂಸ್ಕೃತಿ ಎಂದು ಒಪ್ಪಿಕೊಳ್ಳಲು ಅನುಮಾನಗಳೇನೂ ಇರಬೇಕಾಗಿಲ್ಲ.

> ಈಗ ದೊರೆತಿರುವ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಅದನ್ನು ಮೈಗೂಡಿಸಿಕೊಳ್ಳಬೇಕಾಗಿದ್ದರೆ ನಮ್ಮ ಜನಗಳಲ್ಲಿ ಮಾನಸಿಕ ಕ್ರಾಂತಿಯು ಆಗಲೇಬೇಕಾದುದನ್ನು ಕುರಿತು ಭಿನ್ನಾಭಿಪ್ರಾಯಗಳಿಲ್ಲ. ಆದರೆ ಆ ಕ್ರಾಂತಿಯನ್ನುಂಟುಮಾಡುವ ಬಗೆ ಯಾವುದೆಂಬುದನ್ನು ಕುರಿತು ಮಾತ್ರ ಇನ್ನೂ ಸಾಕಷ್ಟು ವಿಚಾರ, ಚರ್ಚೆಗಳು ಆಗಿಲ್ಲ.
>
> * * *
>
> ವಿಚಾರ - ವಿಮರ್ಶೆಗಳಿಂದ ತಿಳುವಳಿಕೆಯು ಬಂದ ಮೇಲೆಯೂ, ಮನುಷ್ಯನು ಹಿಂದಿನಿಂದ ಬಂದ ಸಂಪ್ರದಾಯಗಳನ್ನು, ಅವು ಒಳ್ಳೆಯವಲ್ಲವೆಂದು ಅರಿತರೂ, ಒಮ್ಮೆಲೇ ಅದನ್ನು ಬದಲಿಸಲು ಸಮರ್ಥನಾಗುವುದಿಲ್ಲ. ಬದಲಾವಣೆಗೆ ಬುದ್ಧಿಯು ಸಿದ್ಧವಾದರೂ ಭಾವನೆಯು ಅಡ್ಡ ಬರುತ್ತದೆ.
>
> *– ಶಂಬಾ ಜೋಶಿ*

ಡಾ|| ಎಚ್. ಎಸ್. ಗೋಪಾಲ ರಾವ್
ಸ್ವಸ್ತಿಶ್ರೀ ಸ್ಕಂದ, ಅರಸಿನ ಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿ [illegible]



# ತಾವು ಯಾರು ಅಂಕಲ್

ಇದೊಂದು ಕಿಲ್ಲಿ ಅನುಭವ.

ಇದು ನಡೆದದ್ದು ಸುಮಾರು ನಲವತ್ತು ವರ್ಷಗಳ ಹಿಂದೆ.

ಆಗ ತಾನೆ ಆ ಊರಿಗೆ ಹೊಸದಾಗಿ ಇಂಜಿನಿಯರಿಂಗ್ ಕಾಲೇಜು ಬಂದಿತ್ತು. ಕಾಲೇಜಿನಲ್ಲಿ ಯಾವುದೇ ಸಭೆ, ಸಮಾರಂಭ ನಡೆಯಲಿ ಊರಿನ ಗಣ್ಯರನ್ನು ಆಹ್ವಾನಿಸುವುದು ಪದ್ಧತಿ.

ಒಂದು ಸಮಾರಂಭ. ಸಮಯ ಮೀರಿದರೂ ಗಣ್ಯರೊಬ್ಬರು ಬಂದಿರಲಿಲ್ಲ. ಅವರಿಗೆ ಫೋನು ಮಾಡುವಂತೆ ನಮ್ಮ ಕಾಲೇಜಿನ ಪ್ರಾಂಶುಪಾಲರು ಆಗ್ಗೆ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿದ್ದ ನನಗೆ ತಿಳಿಸಿದರು.

ಹಳ್ಳಿಯಿಂದ ಬಂದಿದ್ದ ಹುಡುಗ ನಾನು. ಅದುವರೆವಿಗೆ ಫೋನ್‌ನಲ್ಲಿ ಮಾತನಾಡುವುದು ಹಾಗಿರಲಿ, ಫೋನನ್ನೇ ಮುಟ್ಟಿರಲಿಲ್ಲ. ದಿಗಿಲಾಯಿತು. ಪ್ರಾಂಶುಪಾಲರಿಗೆ 'ಫೋನ್ ಮಾಡಲು ನನಗೆ ಭಯ' ಅಂತ ಹೇಳುವ ಹಾಗಿಲ್ಲ. ಟೆಲಿಫೋನ್ ಇದ್ದ ಕೊಠಡಿಗೆ ಹೋದೆ. ಇದ್ದಕ್ಕಿದ್ದಂತೆ ವಿದ್ಯುತ್ ಸಂಪರ್ಕ ಕಡಿದುಹೋಯಿತು. ಬದುಕಿದೆಯಾ ಬಡಜೀವವೆ ಅಂದುಕೊಳ್ಳುತ್ತಾ ಹೊರಕ್ಕೆ ಬಂದೆ.

'ಸಿಕ್ಕಿದ್ದರೇನ್ರೀ ?'

'ಇಲ್ಲ ಸಾರ್, ಫೋನ್ ಮಾಡೋಕೆ ಆಗಲಿಲ್ಲ!'

'ಯಾಕ್ರಿ ?'

'ಪವರ್ ಇಲ್ಲ ಸಾರ್'

ಪ್ರಾಂಶುಪಾಲರು ದುರುಗುಟ್ಟಿಕೊಂಡು ನೋಡಿದರು.

ಅವರ ದುರುಗುಟ್ಟುವಿಕೆಗೆ ಅರ್ಥ ತಿಳಿದದ್ದು ಬಹಳ ದಿವಸಗಳ ನಂತರ: ವಿದ್ಯುತ್ ಸಂಪರ್ಕಕ್ಕೂ ಟೆಲಿಫೋನಿಗೂ ಸಂಬಂಧ ಇಲ್ಲ!

ಅವತ್ತಿನಿಂದ ನನಗೆ ಟೆಲಿಫೋನು ಅಂದರೆ ಅಲರ್ಜಿ.

ಹೆಂಡತಿ, ಮಕ್ಕಳಿಗೆ ?

ಅದು ಪ್ರತಿಷ್ಠೆಯ ಪ್ರಶ್ನೆ.

ಮನೆಯಲ್ಲಿ ಟೆಲಿಫೋನ್ ಇಲ್ಲ ಅನ್ನುವುದು ಅವರಿಗೆ ಅವಮಾನವಂತೆ !

ಅವರ ಮಾತಿಗೆ ತಲೆ ಬಾಗದೆ ಅನ್ಯ ಮಾರ್ಗ ಇರಲಿಲ್ಲ. ಟೆಲಿಫೋನಿಗೆ ಶರಣಾದೆ.

ಟೆಲಿಫೋನನ್ನು ಬಳಸಲು ಪ್ರಾರಂಭಿಸಿದ ಮೇಲೆ ಅದಕ್ಕೂ ಒಂದು ಭಾಷೆ ಇದೆ ಎಂಬ ಸತ್ಯದ ಅರಿವಾಯ್ತು.

ಟೆಲಿಗ್ರಾಫಿಕ್ ಲಾಂಗ್ವೇಜ್ ಅಂತ ಗೊತ್ತು. ಟೆಲಿಫೋನಿಕ್ ಲಾಂಗ್ವೇಜ್ ಯಾವುದು ಅಂತೀರಾ ?

ನಿಮ್ಮ ಮನೆಯಲ್ಲಿ ಟೆಲಿಫೋನ್ ಇದೆಯೆ ?

ಇದ್ದರೆ ನನ್ನ ಮಾತಿನ ಅರ್ಥ ನಿಮಗೆ ಆಗಿರಬೇಕು.

ಬಹಳ ಮುಖ್ಯವಾದ ವಿಷಯ. ಅದನ್ನು ತಿಳಿಸಬೇಕು. ಫೋನಾಯಿಸುತ್ತೀರಿ.

'ನೀವು ಸಂಪರ್ಕಿಸಬಯಸುವ ದೂರವಾಣಿ ಸದ್ಯದಲ್ಲಿ ದುರಸ್ತಿಯಲ್ಲಿದೆ' – ಅಂತ ಮಧುರವಾಗಿ ಉಲಿಯುತ್ತೆ.

ನಿಮಗೆ ಹೇಗಾಗಬೇಡ ?

ಹತಾಶರಾಗಬೇಡಿ. ಇದು ಸರ್ಕಾರಿ ಕಚೇರಿಯ ಗುಮಾಸ್ತನ ಉತ್ತರ ಇದ್ದ ಹಾಗೆ. 'ಫೈಲ್ ಇಲ್ಲ' ಅಂತಾನೆ. ಹಿಂದೆಲ್ಲ ಟೇಬಲ್ ಕೆಳಗೆ ಲಂಚ ಕೊಡ್ತಿದ್ದರಂತೆ. ಈಗ ಅವರು ಪ್ರಗತಿ ಸಾಧಿಸಿದ್ದಾರಂತೆ. ಟೇಬಲ್ ಮೇಲೇ ಕೈ ಒಡ್ಡುತ್ತಾರಂತೆ. ನೀವು ದಕ್ಷಿಣೆ ನೀಡುತ್ತೀರಿ, ಇಲ್ಲದ ಫೈಲು ಕ್ಷಣಮಾತ್ರದಲ್ಲಿ ಪ್ರತ್ಯಕ್ಷ ಆಗುತ್ತೆ. ಹಾಗೆಯೇ ಇದೂನೂವೆ.

ಈ ಧ್ವನಿ ಮುದ್ರಿತ ಹೇಳಿಕೆಗೆ ನೀವು ಕಿಂಚಿತ್ತೂ ಬೆಲೆ ಕೊಡಬೇಕಾಗಿಲ್ಲ. ಮತ್ತೆ ಪ್ರಯತ್ನಿಸಿ. ರಿಂಗ್ ಆಗುತ್ತೆ !

ಇದು ಟೆಲಿಫೋನಿಕ್ ಲಾಂಗ್ವೇಜ್.

ಯಾವುದೋ ಒಂದು ಕೆಲಸ ಆಗಬೇಕು. ಯಾರೋ ಒಬ್ಬರಿಗೆ ರಿಂಗಣಿಸುತ್ತೀರಿ.

'ಹಲೋ'

'.... ಇದಾರಾ ?'

'ಮಾತಾಡ್ತಾ ಇದೀನಿ'

ಆತನ ಹತ್ತಿರ ನಿಮ್ಮ ಕೆಲಸದ ಬಗ್ಗೆ ಹೇಳ್ತೀರಿ. ಅವನೂ ಆಶ್ವಾಸನೆ ನೀಡುತ್ತಾನೆ. ಪ್ರಾಮಾಣಿಕ ಪ್ರಯತ್ನವನ್ನೂ ಮಾಡ್ತಾನೆ.

ಕೆಲಸ ಆಗುತ್ತೆ ಅಂತೀರಾ ?

ಖಂಡಿತಾ ಇಲ್ಲ. ಏಕೆಂದರೆ ಸಮಾಜದಲ್ಲಿ ಆತನ ಅಂತಸ್ತು ಕೆಳಸ್ತರದಲ್ಲಿದೆ. ಆತನ ಮಾತಿಗೂ ಯಾರೂ ಕಿಲುಬು ಕಾಸಿನ ಬೆಲೆಯನ್ನೂ ನೀಡುವುದಿಲ್ಲ. ಮೇಲುಸ್ತರದವರಾರೂ ನೇರವಾಗಿ ಮೊದಲಬಾರಿಗೆ ಟೆಲಿಫೋನ್ ಎತ್ತಿಕೊಳ್ಳುವುದಿಲ್ಲ !

'ಹಲೋ'

'..... ಇದಾರಾ ?'

'ಇದಾರೆ, ತಾವು ಯಾರು ಮಾತಾಡ್ತಿರೋದು ?'

ತಿಳಿಸುತ್ತೀರಿ. ಸ್ವಲ್ಪ ಸಮಯದ ನಂತರ ಆ ಕಡೆಯಿಂದ ಉತ್ತರ ಬರುತ್ತೆ : 'ಇಲ್ಲ', ಅಂಕಲ್, ಈಗ ತಾನೆ ಹೊರಗೆ ಹೋದರಂತೆ'

ಇದರ ಅರ್ಥ ಏನು ?

ಆ ಮನುಷ್ಯ ಮನೆಯಲ್ಲಿ ಇದ್ದಾನೆ. ಆದರೆ ನಿಮ್ಮ ಜೊತೆ ಮಾತನಾಡಲು ಆತನಿಗೆ ಇಷ್ಟ ಇಲ್ಲ.

'ಹಲೋ'

'..... ಇದಾರಾ ?'

'ನೋಡ್ತೀನಿ ಅಂಕಲ್, ತಾವು ಯಾರು ?'

ಇವರು ನೋಡಿ, ಸಾಮಾಜಿಕವಾಗಿ ಮೇಲಿನ ಸ್ತರದಲ್ಲಿರುವವರು. ಮೊದಲೇ ನಿಮ್ಮ ಜಾತಕ ನೋಡ್ತಾರೆ. ಇಷ್ಟವಾದರೆ ಬಂದು ಮಾತನಾಡುತ್ತಾರೆ. ಅನಿಷ್ಟವಾದರೆ ಬೆಣ್ಣೆಯಲ್ಲಿ ಕೂದಲು ತೆಗೆದ ಹಾಗೆ 'ಇಲ್ಲ' ಅನ್ನಿಸಿಕೊಳ್ತಾರೆ.

'ಹಲೋ'

'..... ಇದಾರಾ ?'

'ನೋಡ್ತೀನಿ ಅಂಕಲ್, ನೀವು ಯಾರು ?'

ಹೇಳುತ್ತೀರಿ. ಆ ಕಡೆಯಿಂದ ಸ್ವಲ್ಪ ತಡೆದು ಉತ್ತರ ಬರುತ್ತೆ :

'ಬಾತ್ ರೂಂಗೆ ಹೋಗಿದಾರೆ, ಒಂದು ಹತ್ತು ನಿಮಿಷ ಬಿಟ್ಟು ರಿಂಗ್ ಮಾಡಿ'

ಹೇಳಿದಂತೆ ಮಾಡುತ್ತೀರಿ. ವ್ಯಕ್ತಿ ಬಾತ್ ರೂಮಿನಲ್ಲೇ ಇದೆ. ಮತ್ತೆ ಫೋನಾಯಿಸುತ್ತೀರಿ.

'ಇಲ್ಲ ಅಂಕಲ್, ಈಗ ತಾನೆ ಹೊರಕ್ಕೆ ಹೋದ್ರು.'

'ನಾನು ಫೋನ್ ಮಾಡಿದ್ದು ಹೇಳಲಿಲ್ಲ ವೇನಮ್ಮ ?'

'ಸಾರಿ ಅಂಕಲ್ ಮರೆತುಬಿಟ್ಟೆ.'

ಇದರ ಅರ್ಥ ಏನು ಗೊತ್ತೆ ?

ನೀವು ಫೋನ್ ಮಾಡಿದ್ದ ವಿಷಯವನ್ನು ಮನೆ ಕೆಲಸದ ಹುಡುಗಿ ಯಜಮಾನನಿಗೆ ತಿಳಿಸಿರುತ್ತಾಳೆ. ಅವನು ನಿಮ್ಮ ಬಗ್ಗೆ ಕನಿಷ್ಠವಾಗಿ ಮಾತನಾಡಿ ಹೋಗಿರ್‍ತಾನೆ !

ಎಚ್. ಎಲ್. ಕೇಶವಮೂರ್ತಿ
ನಂ ೧೨, ಪಂಪ್ ಹೌಸ್ ಎದುರು, ಮಂಡ್ಯ - ೫೭೧ ೪೦೧

# ಸಂಗೀತದಲ್ಲಿ ಹೊಸತು ಇಂದು ಮತ್ತು ನಾಳೆ

ಪ್ರಾಣಿ, ಹಸುಳೆ, ಹಾವು, ಹೀಗೆ ಎಲ್ಲರೂ ಆಸ್ವಾದಿಸುವ ಸಂಗೀತ ಏಕಮುಖವಾದುದಲ್ಲ - ವಿಕಾಸದ ಹಾದಿಯಲ್ಲಿ ಅದು ಅನೇಕ ಹಂತಗಳನ್ನು ದಾಟಿಬಂದಿದೆ. ಮುಂದೇನು ಎಂಬ ಉತ್ಸುಕತೆ ಸಹಜವಾದದ್ದು. ಮಹಾಮಹೋಪಾಧ್ಯಾಯ ರಾಷ್ಟ್ರಭೂಷಣ ಡಾ|| ರಾ. ಸತ್ಯನಾರಾಯಣ ಅವರು ತಮ್ಮ ಎಪ್ಪತ್ತು ವರ್ಷಗಳ ಅನುಭವದ ನಿಕಶದಲ್ಲಿಟ್ಟು ಅದನ್ನು ಪರೀಕ್ಷಿಸಿದ್ದಾರೆ. ಎಫ್. ಆರ್. ಎ. ಎಸ್., ಎಫ್. ಎ. ಎಸ್. ಐ., ಎಫ್. ಎ. ಎಂ. ಆರ್., ಮುಂತಾದ ಅವರ ಫೆಲೋಷಿಪ್‌ಗಳು ಅವರ ವ್ಯಾಪಕ, ಸರ್ವಾಂಗೀಣ ಆಸಕ್ತಿ, ಪ್ರತಿಭೆ ಮತ್ತು ಕ್ರಿಯಾವಂತಿಕೆಯ ದ್ಯೋತಕಗಳಾಗಿವೆ. ನಮ್ಮ ರಾಜ್ಯದ ಶ್ರೇಷ್ಠ ಕಲಾವಿದರು ಹಾಗೂ ಶಾಸ್ತ್ರವೇತ್ತರು ಅವರು.

ಕ್ರಿ. ಶ. ೧೯೯೯ನೇ ಇಸವಿಯು ಮುಗಿಯುತ್ತಿದ್ದಂತೆ ಪ್ರಚಾರ ಮಾಧ್ಯಮಗಳು ಪ್ರವಾದಿಯ ಸೋಗಿನಲ್ಲಿ ಜಗತ್ತಿನಲ್ಲೆಲ್ಲ ಅಭೂತಪೂರ್ವ ದಾಂಧಲೆಯನ್ನೆಬ್ಬಿಸಿ ಅಬ್ಬರಿಸಿದವು. ಹೊಸ ಸಹಸ್ರಮಾನವು ಕ್ರಿಸ್ತಶಕೆಯಲ್ಲಿ ಉದಯಿಸಿದ್ದಂತೆ - ಡಿಸೆಂಬರ್ ಮಧ್ಯರಾತ್ರಿಯ ನಂತರ ಒಂದು ಪವಾಡವೋ ಅನಾಹುತವೋ ಜರುಗಿ - ಜನವರಿ ೧ರ ಸೂರ್ಯೋದಯದಂದು ಭೂಮಿಯು ನರಕವೋ ಸ್ವರ್ಗವೋ ಆಗಲಿದೆಯೆಂದು ನಂಬಿಸಲೆಳಸಿದರು. ಹೊಸ ಸಹಸ್ರಮಾನದಲ್ಲಿ ಆಗಲಿರುವ ಅದ್ಭುತಗಳ ಕಣಿ ಹೇಳಿದರು. ಕಾಲಮಾನದಲ್ಲಿ ಮೂರು ಸೊನ್ನೆಗಳು ಒಂದು ಸಂವತ್ಸರದಲ್ಲಿ ಬರುವುದು ಒಂದು ಸಾವಿರ ವರ್ಷಗಳಿಗೆ ಒಮ್ಮೆ ಮಾತ್ರ ಬರುವಂತಹ ಚಮತ್ಕಾರವೇನೋ ನಿಜ. ಕ್ರಿಸ್ತೋದಯದ ನಂತರ ೧-೧-೨೦೦೦ ಎಂಬ ಚಮತ್ಕಾರವು ತೋರಿಬಂದ ಮಾತ್ರಕ್ಕೆ ಜಗತ್ತು ಸಂಪೂರ್ಣವಾಗಿ, ಹಠಾತ್ತನೆ ಬದಲಾಯಿಸಿಬಿಡುವುದೆಂಬ ಮುಗ್ಧ ನಂಬಿಕೆಯನ್ನು ಕ್ರಿಶ್ಚಿಯನ್ನರು ತಳೆದು ಇತರರ ಮೇಲೂ ಹೊರಿಸಿದರು. ಭಾರತದಲ್ಲಿ ಕ್ರಿಶ್ಚಿಯನ್ನರು ಅಲ್ಪಸಂಖ್ಯಾತರು. ಆದರೂ ಅದು ಈ ಅಬ್ಬರಕ್ಕೆ ಮಣಿದು ಗತಾನುಗತಿ ನ್ಯಾಯದಿಂದ ಒಪ್ಪಿಕೊಂಡಿತು. ೧-೧-೨೦೦೦ ದಿನಾಂಕದಲ್ಲಾಗಲಿ ನಂತರದಲ್ಲಾಗಲಿ ಅಂತಹದೇನೂ ಆಗಲಿಲ್ಲ. ಹಿಂದೂಗಳಿಗೇ ಹೀಗೆ ನಂಬಲು ತಮ್ಮ ಸಂಸ್ಕೃತಿಯಲ್ಲೇ ಅವಕಾಶಗಳಿಲ್ಲವೆಂದಲ್ಲ. ಕಳೆದ ಪ್ರಮಾಥಿ ಸಂವತ್ಸರದ ಯುಗಾದಿಯಂದು ನಾವು ಕಲಿಯುಗದ ೫೧ನೆಯ ಶತಮಾನಕ್ಕೆ ಕಾಲಿಟ್ಟೆವು. ಇದೊಂದು ಸಾಧನೆಯೆಂದಾದರೆ, ಕ್ರಿಸ್ತಶಕೆಗಿಂತ ನಮ್ಮ ಕಾಲಗಣನೆಯು ಪ್ರಾಚೀನ ಎಂದು ಹೆಮ್ಮೆಪಟ್ಟುಕೊಳ್ಳಬಹುದು. ಹಾಗೆ ನೋಡಿದರೆ ನಮ್ಮ ಪುರಾಣಗಳ ಕಾಲಗಣನೆಯ ಪ್ರಕಾರ ಈ ವೈವಸ್ವತಮನ್ವಂತರದ ಈ ಕಲಿಯುಗವು ಮುಗಿದು ಕೃತಯುಗವು ಮರಳಬೇಕಾದರೆ ಇನ್ನೂ ೪,೨೬,೯೦೦ ವರ್ಷಗಳು ಕಳೆಯಬೇಕು. ಆಗ ಜಗತ್ ಪ್ರಳಯವಾಗಿ ಹೊಸ ಸೃಷ್ಟಿ ಮೂಡಿಬರುವುದಂತೆ. ಆಗ ನಾವು ಬದುಕಿದ್ದರೆ ಪ್ರಳಯವಾಗುತ್ತದೋ ಇಲ್ಲವೋ ನೋಡಬಹುದು. ಪ್ರಳಯವಾದರೂ ಹೊಸ ಸೃಷ್ಟಿ ಮೂಡುತ್ತದೋ ಇಲ್ಲವೋ ಎಂಬುದು ಗೊತ್ತಾಗುವಂತಿಲ್ಲ.

ಹೀಗಾಗಿ, ಇಪ್ಪತ್ತೊಂದನೆಯ ಶತಮಾನದಲ್ಲಿ ನಮ್ಮ ಸಂಗೀತ ಹೇಗೆ ಆಗಬಹುದು ಎಂದು ಊಹಿಸಲಿರುವ ನಾನು ಪ್ರವಾದಿಯೂ ಅಲ್ಲ, ಜ್ಯೋತಿಷಿಯೂ ಅಲ್ಲ, ಹವಾಮಾನ ವರದಿಕಾರನೂ ಅಲ್ಲ; ಪೌರಾಣಿಕನೂ ಅಲ್ಲ. ಆದರೆ ಅವರು ನುಡಿಯುವ ಭವಿಷ್ಯೋಕ್ತಿಗಳಿಗಿಂತ ನನ್ನದು ಕಳಪೆಯಂತೂ ಆಗಲಾರದು. ಏಕೆಂದರೆ ನನ್ನ ಮಾತುಗಳಿಗೆ ಅನುಭವದ ಪ್ರಾಮಾಣ್ಯವಿದೆ; ಕೆಲವು ಮಾತುಗಳಲ್ಲಿ ಊಹೆ, ಕೆಲವದರಲ್ಲಿ ಆಸೆ, ಕೆಲವದರಲ್ಲಿ ಭರವಸೆ, ಮತ್ತೆ ಕೆಲವದರಲ್ಲಿ ನಿರೀಕ್ಷೆ ಇವೂ ಇರುತ್ತವೆ. ಸುಮಾರು ಎಪ್ಪತ್ತು ವರ್ಷಗಳ ಅನುಭವದಲ್ಲಿ ನಾನು ಕಂಡು ಕೇಳಿದ್ದು, ಕಂಡು ಕೇಳುತ್ತಿರುವುದು, ಚಿಂತನ ಮಂಥನಗಳನ್ನು ನಡೆಸಿದ್ದು ಇವೇ ಈ ಮಾತುಗಳಿಗೆ ಆಧಾರ.

ಅಲ್ಲದೆ, ಹೊಸತು - ಅದರಿಂದ ನಾಳೆಯ ನೆಮ್ಮದಿ ನಮ್ಮದು ಎಂಬ ಈ ಪತ್ರಿಕೆಯ ಆಸೆ-ಭರವಸೆಗಳು ನನಗೂ ಸಮ್ಮತವೇ; ಹೊಸತು ಎಂದರೆ ಹಳೆಯದರಲ್ಲಿ ಹೊಸ ಚಿಗುರು, ನೆನ್ನೆಯವರೆಗೆ ಇರದಿದ್ದ ನಾವೀನ್ಯ, ನಾಳೆಯನ್ನು ಮುಂಗಾಣುವುದು ಎಂದೆಲ್ಲ ಸೇರುತ್ತದೆ. ನೆಮ್ಮದಿ ಎಂದರೆ ತೃಪ್ತಿ, ಸಮಾಧಾನ, ಸುಖ, ಶಾಂತಿ, ನಿಶ್ಚಿಂತೆ ಇತ್ಯಾದಿ ಅರ್ಥಗಳಿವೆ. ನಮ್ಮದು ಎನ್ನುವುದು ವ್ಯಕ್ತಿಯನ್ನೂ ಸಮುದಾಯವನ್ನೂ ಒಳಗೊಳ್ಳುತ್ತದೆ. ನಮ್ಮ ಸಂಗೀತಕ್ಕೆ ಈ ಅರ್ಥಗಳನ್ನೆಲ್ಲ ಹೊಂದಿಸಲು ಸಾಧ್ಯವಿದೆಯೆ ? ಸಂಗೀತ ಎಂದರೆ ಶಾಸ್ತ್ರೀಯ ಸಂಗೀತ ಎಂಬುದು ನನ್ನ ಮುಖ್ಯಾರ್ಥ. ಆದರೆ ಈ ವಿಷಯದಲ್ಲಿ ನನಗೆ ಮಡಿವಂತಿಕೆಯೇನೂ ಇಲ್ಲ. ಸಂಗೀತದ ವಿವಿಧ ಪ್ರಕಾರಗಳ ಸಮಷ್ಟಿಯನ್ನು ಈ ಲೇಖನದ ಶೀರ್ಷಿಕೆಯಲ್ಲಿ ನಾನು ಇಂಗಿತಗೊಳಿಸಿದ್ದೇನೆ.

ಮುಂದಿನ ಶತಮಾನದ ವಿಸ್ತಾರದಲ್ಲಿ ನಮ್ಮ ಸಂಗೀತದಲ್ಲಿ ಆಗಬಹುದಾದ ಮಾರ್ಪಾಡುಗಳನ್ನು ಎರಡು ರೀತಿಯಾಗಿ ವಿಂಗಡಿಸಬಹುದು : ಸ್ವರೂಪಾತ್ಮಕ ಮತ್ತು ಆಂತರಂಗಿಕ.

**೧. ಸ್ವರೂಪಾತ್ಮಕ ಮಾರ್ಪಾಡುಗಳು**

೧. ಭಾರತೀಯ ಸಂಗೀತವು ಏಕಸ್ವರ ಶ್ರೇಣಿಯದು; ವಾದ್ಯಮೇಳ, ಭಾರತೀಯ ಜಾಜ್, ಪಾಪ್ ಮುಂತಾದವುಗಳ ಬಹುಸ್ವರ ಶ್ರೇಣಿಯ ಬಳಕೆಯು (ಪಾಶ್ಚಿಮಾತ್ಯ ಸಿಂಫೋನಿ ಸಂಗೀತದ ಅನುಕರಣೆಯಲ್ಲಿ) ಅಷ್ಟಿಷ್ಟು ಕಂಡುಬರುತ್ತಿದೆ. ಇದು ನಮ್ಮ ಸಂಗೀತದ ಸ್ವರೂಪಕ್ಕೆ ಸಹಜವಾದುದಲ್ಲ. ಇದರ ಪ್ರಯೋಜನವು ಆಲಂಕಾರಿಕವೇ ಹೊರತು ಮೌಲಿಕವಲ್ಲ. ಇದನ್ನು ನಮ್ಮ ಸಂಗೀತವು ಅರಗಿಸಿಕೊಂಡು ತನ್ನದಾಗಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ.

೨. ಭಾರತೀಯ ಸಂಗೀತ ಸಮಷ್ಟಿಯು ಮಿಕ್ಕೆಲ್ಲ ಸಂಗೀತ ಪದ್ಧತಿಗಳಿಗಿಂತ ರಾಗ, ತಾಳ, ಗೇಯಪ್ರಬಂಧ ಮತ್ತು ವಾದ್ಯ ಎಂಬ ನಾಲ್ಕು ಅಂಗಗಳಲ್ಲಿ ಭಿನ್ನವಾದುದು, ವೈಶಿಷ್ಟ್ಯಪೂರ್ಣವಾದುದು. ಇವು ಎಷ್ಟೊಂದು ಆಳವಾಗಿ ಬೇರೂರಿವೆಯೆಂದರೆ ಇವುಗಳಿಲ್ಲದೆ ಭಾರತೀಯ ಸಂಗೀತವನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಇವು ನಮ್ಮ ಸಂಗೀತದ ಅಂತರಂಗ ಬಹಿರಂಗಗಳನ್ನು ನಿರ್ಧರಿಸುವ ಅಡಿಪಾಯಗಳು. ಇವು ಕಡೆಯಪಕ್ಷ ಎರಡು ಸಾವಿರ ವರ್ಷಗಳಿಂದ ಸ್ಥಿರವಾಗಿ, ಬದಲಾಯಿಸದೆ ಉಳಿದಿವೆ. ಅನ್ಯ ಸಂಸ್ಕೃತಿಗಳೊಡನೆ ವಿನಿಮಯವನ್ನು ಬಹು ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದರೂ, ಪಡೆದುಕೊಂಡಿದ್ದನ್ನೆಲ್ಲ ಅರಗಿಸಿಕೊಳ್ಳುವ, ತನ್ನದಾಗಿಸಿಕೊಳ್ಳುವ ಶಕ್ತಿಯನ್ನು ಉಳಿಸಿಕೊಂಡಿವೆ. ಇಂದಿಗೂ ಈ ಮಾತು ನಿಜ. ತಬಲ, ಸಿತಾರ್, ರಬಾಬ್, ಪಿಟೀಲು, ಕ್ಲಾರಿಯೊನೆಟ್, ಸ್ಯಾಕ್ಸೋಫೋನ್, ಮ್ಯಾಂಡಲಿನ್ ಮುಂತಾದ ವಾದ್ಯಗಳೂ, ಕವ್ವಾಲಿ, ಗಜ್ಜಲ್, ಠುಮ್ರಿ, ಟಪ್ಪಗಳಂತಹ ಪ್ರಬಂಧಗಳೂ, ಹಿಜಾಜ್, ಇರಾಕ್, ಹುಸೇನಿ, ಕಾಪಿ, ನವರೋಜ್‌ಗಳಂತಹ ರಾಗಗಳೂ, ಸೂಲ್‌ಫಾಕ್, ಕೇರವಾ ಮುಂತಾದ ತಾಳಗಳೂ ಇವಕ್ಕೆ ಸಾಕ್ಷಿ. ಈ ಶಕ್ತಿಯನ್ನು ನಮ್ಮ ಸಂಗೀತವು ಸದ್ಯದಲ್ಲಿಯೇ ಕಳೆದುಕೊಳ್ಳುವ ಚಿಹ್ನೆಗಳಿಲ್ಲ. ಆದರೆ. 'ಶಾಸ್ತ್ರೀಯ' ಸಂಗೀತವು ತನ್ನ ಬಿಗಿ, ಅನಮ್ಯತೆಗಳನ್ನು ಸ್ವಲ್ಪ ಸ್ವಲ್ಪವಾಗಿ ತಗ್ಗಿಸಿಕೊಂಡು ಹೆಚ್ಚು ಹೆಚ್ಚು ಶ್ರೋತೃಗಳನ್ನು ಆಕರ್ಷಿಸಿಕೊಳ್ಳುವ ಸಂಭವವು ಹೆಚ್ಚುತ್ತಿದೆ. ಇದಕ್ಕೆ ಸಮಸಾಮಯಿಕ ಪ್ರಜ್ಞೆ, ಸಂಪ್ರದಾಯ - ನವೋದಯಗಳ ನಡುವೆ ನಷ್ಟವಿಲ್ಲದ ರಾಜಿ, ತನ್ನದೇ

ಡಾ|| ರಾ. ಸತ್ಯನಾರಾಯಣ

ಸ್ವಾಭಾವಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಹೊಸ ತಂತ್ರಗಳ ನಿರ್ಮಾಣ, ಇತ್ಯಾದಿಗಳನ್ನು ಉಂಟುಮಾಡಲು ಬೇಕಾದ ದೂರದೃಷ್ಟಿ, ಸ್ವಯಮರ್ಪಿತ ನಾಯಕತ್ವ, ಹೊಸತು - ಹಳತುಗಳ ನಡುವೆ ಸೇತುಬಂಧನ — ಇವುಗಳ ಅಗತ್ಯವಿದೆ. ಇಪ್ಪತ್ತೊಂದನೆಯ ಶತಮಾನದ ಮೊದಲನೆಯ ಪಾದದಲ್ಲಿ ಇದರ ಬೀಜ ಸ್ಥಾಪನೆಯೂ ಎರಡನೆಯದರಲ್ಲಿ ಮೊಳಕೆಯೂ ಮೂರು-ನಾಲ್ಕನೆಯವುಗಳಲ್ಲಿ ಹೂ ಹಣ್ಣುಗಳೂ ಆಗಬಹುದು.

೩. ಇಂದಿನ ಸಮಾಜವು ತನ್ನ ಭಂಗಿಯನ್ನು ಕ್ಷಣಕ್ಷಣಕ್ಕೂ ಬದಲಾಯಿಸುತ್ತಾ ನಾಗಾಲೋಟದಲ್ಲಿ ಮುನ್ನಡೆಯುತ್ತಿದೆ; ಈ ವೇಗವು ಹಿಂದೆಂದೂ ಇರಲಿಲ್ಲ. ಸಾಮಾಜಿಕ-ಸಾಂಸ್ಕೃತಿಕ ಗತಿಶೀಲತೆ, ತಾಂತ್ರಿಕ ಪ್ರಗತಿ, ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್‌ಗಳು ಸ್ಫೋಟಕ ವೇಗದಲ್ಲಿ ಧಾವಿಸಿ ಬರುತ್ತವೆ. ಇವು ಅಂತರಂಗ ಜೀವನ ಮತ್ತು ಬಹಿರಂಗ ಜೀವನಗಳ ಸಮರಸಕ್ಕೆ ಸವಾಲಾಗಿವೆ. ಸಂಪರ್ಕಸಾಧನಗಳು ಮತ್ತು ನವೋನವ ಪ್ರಭಾವಗಳಿಗೆ ನಮ್ಮನ್ನು ತೆರೆದಿಟ್ಟುಕೊಳ್ಳಲು ಇರುವ ಅಸಂಖ್ಯ ಅವಕಾಶಗಳು – ಇವುಗಳಿಂದಾಗಿ ವಿಶ್ವವು ಒಂದು ಸಣ್ಣ ಹಳ್ಳಿಯಷ್ಟು ಕುಗ್ಗಿದೆ; ಅಂತರಂಗದ ಸಮಸ್ಥಿತಿ ನೆಮ್ಮದಿಗಳನ್ನು ಕಾಪಾಡಿಕೊಳ್ಳುವುದು ಮಾನವನಿಗೆ ಹೆಚ್ಚು ಹೆಚ್ಚು ಕಷ್ಟವಾಗುತ್ತಿದೆ. ಆದುದರಿಂದ ಜನಾಂಗೀಯ ಮತ್ತು ಸಾಂಸ್ಕೃತಿಕ ತನ್ನತನವನ್ನು ಉಳಿಸಿಕೊಳ್ಳುವುದು ಕಷ್ಟತರವಾಗುತ್ತಿದೆ. ಸಂಗೀತವು ಒಂದು ಮಾನವ ಸಮುದಾಯದ ಸಾಮೂಹಿಕ ಪ್ರಜ್ಞೆಯ ಸಾಂಸ್ಕೃತಿಕ ಅಭಿವ್ಯಕ್ತಿ. ಆದುದರಿಂದ ಇವೆಲ್ಲ ಪ್ರಭಾವ, ಪ್ರವೃತ್ತಿಗಳನ್ನು ಹೀರಿಕೊಂಡು ಬದಲಾಗುವುದು ಸ್ವಾಭಾವಿಕ. ಇಂದು ಎಲೆಕ್ಟ್ರಾನಿಕ್ ಸಂಗೀತ ಮತ್ತು ಕಂಪ್ಯೂಟರ್ ಸಂಗೀತಗಳು ಅಸಹಜವೆಂದು ಎನ್ನಿಸುವುದೇ ಇಲ್ಲ. ಹೀಗಾಗಿ, ನಮ್ಮ ಮುಂದೆ ನಿಲ್ಲುವ ಪ್ರಶ್ನೆ ಇದು: ಭಾರತೀಯ ಸಂಗೀತಕ್ಕೆ ಸಾಕಷ್ಟು ಅಂತರಂಗೀಯ ಸಂಪನ್ಮೂಲಗಳೂ ಶಕ್ತಿಯೂ ಇದ್ದು ತಾಂತ್ರಿಕ ಪ್ರಗತಿ ಹಾಗೂ ಗಣಕಯಂತ್ರದ ಸಾಧ್ಯತೆಗಳನ್ನು ತನ್ನ ಆಶೋತ್ತರಗಳು, ಆದರ್ಶಗಳು, ಹುರುಪು, ಹಿರಿಮೆಗಳನ್ನು ಹೆಚ್ಚಿಸಿಕೊಳ್ಳುವ ಸಾಧನಗಳನ್ನಾಗಿ ಬಳಸಿಕೊಳ್ಳುವ ಸಾಮರ್ಥ್ಯವಿದೆಯೆ ಅಥವಾ ಇವುಗಳ ಒತ್ತಡಕ್ಕೆ ಶರಣಾಗಿ ತನ್ನತನವನ್ನು ಒತ್ತೆಯಿಟ್ಟುಕೊಳ್ಳುವುದೆ ? ಭಾರತೀಯ ಸಂಗೀತದ ದೀರ್ಘ ಚರಿತ್ರೆಯು ಅದರ ಸುದೃಢವಾದ ಚೇಗನ್ನೂ, ಶಕ್ತಿಯನ್ನೂ, ಜೀರ್ಣಶಕ್ತಿಯನ್ನೂ ಮತ್ತೆ ಮತ್ತೆ ತೋರಿಸಿಕೊಟ್ಟಿದೆ.

೪. ಈ ಪ್ರಶ್ನೆಗೆ ಇನ್ನೂ ಒಂದು ಮುಖವಿದೆ: ಬೇರೆ ಸಂಗೀತ ಪದ್ಧತಿಗಳಲ್ಲಿ ಹೀರಿಹೋಗಿ ಭಾರತೀಯ ಸಂಗೀತವು ಸ್ವಂತಿಕೆಯಿಲ್ಲದ, ವರ್ಣ ವಿಹೀನವಾದ ಏಕೈಕ ವಿಶ್ವ ಸಂಗೀತವಾಗಿಬಿಡುವುದರ ಸಾಧ್ಯತೆಯು ಸದ್ಯಕ್ಕೆ ದೂರವಿದೆ, ನಿಜ. ಆದರೆ ಇಂದು ಕರಗಿ ಮುದ್ದೆಯಾಗುವ 'ಫ್ಯೂಶನ್' **(Fusion)** ಸಂಗೀತಕ್ಕಾಗಿ ಒತ್ತಾಯದ ಕರೆ ಎದ್ದಿದೆ - ಕರ್ನಾಟಕ ಸಂಗೀತ - ಹಿಂದೂಸ್ತಾನೀ ಸಂಗೀತಗಳು ಕರಗಿ ಒಂದೇ ಏರಕವಾಗುವುದು, ಭಾರತೀಯ ಸಂಗೀತವೂ ಪಾಶ್ಚಿಮಾತ್ಯ ಸಂಗೀತವೂ ಕರಗಿ ಏಕೀಭವಿಸುವುದು ಇತ್ಯಾದಿ. ಈ ನಿಟ್ಟಿನಲ್ಲಿ ಅಷ್ಟಿಷ್ಟು ಪ್ರಯತ್ನವೂ ನಡೆದಿದೆ: ಪಾಶ್ಚಿಮಾತ್ಯ ಸಂಗೀತ ರಚನಕಾರರು ತಮ್ಮ ರಚನೆಗಳಲ್ಲಿ ಭಾರತೀಯ ಮತ್ತಿತರ ಸಂಗೀತ ಪದ್ಧತಿಗಳ ಅಲ್ಪಸ್ವಲ್ಪ ಸಾಮಗ್ರಿಯನ್ನು ಸೇರಿಸಿಕೊಳ್ಳುತ್ತಿದ್ದಾರೆ. ಭಾರತದಲ್ಲಿ ಕೆಲವು ಉತ್ಸಾಹಿಗಳು ಪಾಶ್ಚಿಮಾತ್ಯ ಸಂಗೀತದ ಕೆಲವು ಶೈಲಿಗಳು, ನುಡಿಗಟ್ಟುಗಳು ಮತ್ತು ಬಂಧಗಳನ್ನು ಭಾರತೀಯ ಸಂಗೀತಕ್ಕೆ ಆಮದುಮಾಡಿಕೊಳ್ಳಲೆಳಸುತ್ತಿದ್ದಾರೆ. ಇವಿನ್ನೂ ಎಳಸು, ಪ್ರಯೋಗ ಮಾತ್ರಗಳು; ಸಾಮಾನ್ಯಶ್ರೋತೃವಿನ ಅರಿವಿನ ಅಂಚಿನಲ್ಲಿರುವಂತಹವು. ಅವು ವೇದಿಕೆಯ ಕೇಂದ್ರಕ್ಕಾಗಲಿ ಸಾಮಾನ್ಯಶ್ರೋತೃವಿನ ಗಮನ ಕೇಂದ್ರಕ್ಕಾಗಲಿ ಬರುವ ಸಾಧ್ಯತೆಯು ಮುಂದಿನ ಕೆಲವು ದಶಕಗಳಲ್ಲಿ ಕಡಿಮೆಯೇ ಎನ್ನಬೇಕು. ಆದರೆ ಇಂತಹ ಪ್ರಯೋಗಗಳು ಇಪ್ಪತ್ತೊಂದನೆಯ ಶತಮಾನದ ಮೊದಲೆರಡು ಪಾದಗಳಲ್ಲಿ ದಟ್ಟವಾಗಬಹುದು. ಆದರೆ ತನ್ನ ಮೂಲಸ್ವಭಾವಕ್ಕೆ ಹೊಂದಿಕೊಳ್ಳದ ಆಧುನಿಕ ಮುಖರಾಗಗಳನ್ನು ಹಚ್ಚಿಕೊಳ್ಳದಿರುವ ಸಂಭವವೇ ಹೆಚ್ಚು.

೫. ಹೀಗಿದ್ದರೂ ಮುಂಬರುವ ದಿನಗಳ ಬಗೆಗೆ ನನ್ನದೊಂದು ಕನಸಿದೆ - ಆಸೆ ಅಥವಾ ಭರವಸೆ ಎಂದು ಬೇಕಾದರೂ ಹೇಳಬಹುದು. ಭಾರತೀಯ ಸಂಗೀತಕ್ಕೆ ನೃತ್ಯ, ಚಿತ್ರ ಮತ್ತು ಶಿಲ್ಪಗಳಂತಹ ಇತರ ಕಲಾಪ್ರಕಾರಗಳೊಡನೆ ನಿಕಟ ಮೈತ್ರಿಯಿದೆ. ಅಲ್ಲದೆ ಇಂದ್ರಿಯಾಂತರ ಸಾಹಚರ್ಯದ ಅನುಭವದ, ಎಂದರೆ ಸ್ವರವನ್ನು ನೋಡುವ, ಬಣ್ಣವನ್ನು ಕೇಳುವ ಸುಪ್ತಶಕ್ತಿಯು ಅದರಲ್ಲಿ ಅಡಗಿದೆ. ಇದು ನಿಜ ಮತ್ತು ಮಿಥ್ಯೆ ಎಂಬ ಎರಡು ಪ್ರಕಾರಗಳಲ್ಲಿ ಗೋಚರಿಸುತ್ತದೆ. ಪರಾಮಾನಸ ಶಾಸ್ತ್ರದಲ್ಲಿ ಇದಕ್ಕೆ ಸಿನಿಸ್ತೀಸಿಯ ಎಂಬ ಹೆಸರಿದೆ. ಇದರ ಬಗೆಗೆ ವಿದೇಶಗಳ ಪ್ರಯೋಗಶಾಲೆಗಳಲ್ಲಿ ಮಾನಸ, ದೈಹಿಕ ಹಾಗೂ ನರಜಾಲೀಯ ಸಂಶೋಧನೆಗಳು ನಡೆಯುತ್ತಿವೆ. ಕಣ್ಣು ಮತ್ತು ಕಿವಿಗಳು ಮಾತ್ರವಲ್ಲದೆ ವಾಸನೆ, ರುಚಿ, ಸ್ಪರ್ಶ ಎಂಬ ಇತರ ಇಂದ್ರಿಯಾನುಭವಗಳ ಸಾಹಚರ್ಯಕ್ಕೂ ಈ ಪ್ರಯೋಗಗಳನ್ನು ವಿಸ್ತರಿಸಲಾಗುತ್ತಿದೆ. ಮಿದುಳಿಗೆ ಬೇರೆ ಬೇರೆ ಇಂದ್ರಿಯಗಳ ಸಂವೇದನೆಗಳನ್ನು ಒಟ್ಟಿಗೆ ಗ್ರಹಿಸಿ ಅವುಗಳನ್ನು ಅರ್ಥಪೂರ್ಣವಾದ, ಅಖಂಡವಾದ ಒಂದೇ ಅನುಭವವನ್ನಾಗಿ ವ್ಯವಸ್ಥೆಗೊಳಿಸುವ ಸಾಮರ್ಥ್ಯವಿದೆ. ಮಿದುಳಿನ ಇಂದ್ರಿಯದ ಅನುಭವವನ್ನು ಅರ್ಥಯಿಸುವ ನರಕೋಶಗಳು ರಕ್ತಗತವಾದ ಗ್ಲೂಕೋಸ್ ಸಕ್ಕರೆಯನ್ನು ತೆಗೆದುಕೊಂಡು ವಿಶ್ಲೇಷಿಸುವ ಹಂತಗಳ ಪೈಕಿ ಒಂದರಲ್ಲಿ ಈ ಅನುಭವ ಸಂಯೋಜನೆಯು ಆಗುತ್ತದೆಂದು ಸಂಶೋಧಕರು ಹೇಳುತ್ತಾರೆ. ಇಪ್ಪತ್ತೊಂದನೆಯ ಶತಮಾನದಲ್ಲಿ ಭಾರತೀಯ ಸಂಗೀತದ ನಾದಲಯಗಳ ಸೌಂದರ್ಯ ವೈವಿಧ್ಯವನ್ನು ಮಾತ್ರವಲ್ಲದೆ ಅದರ ಬಣ್ಣಗಳು, ವಾಸನೆಗಳು, ರುಚಿಗಳು, ಸ್ಪರ್ಶಗಳು ಇವುಗಳ ಮೇಳಗಳನ್ನೂ ಆಯಾ ಶ್ರೋತೃವಿನ, ವೈಯಕ್ತಿಕ ಸಂಸ್ಕಾರ, ಅಭಿರುಚಿಗಳಿಗೆ ಅನುಗುಣವಾಗಿ ಸಮೀಕರಿಸಿಕೊಂಡು ಬಿತ್ತರಿಸಲು ಸಾಧ್ಯವಾಗಬಹುದೆ ? ಇದರಿಂದ ಸಕಲೇಂದ್ರಿಯ ಸಂವೇದನೆಗಳು ಸಂಯೋಜನೆಗೊಂಡು ಸಮಗ್ರವೂ ಅಖಂಡವೂ ಆಗಿರುವ ಸೌಂದರ್ಯಾಸ್ವಾದವು ದೊರೆಯಬಹುದೆ ? ಎಲ್ಲ ಲಲಿತಕಲೆಗಳ ಅನುಭವವೂ ಹೀಗೆ ಜಡೆಯಾಗಿ ಹೆಣೆದುಕೊಂಡು ಸಕಲ ಸಂವೇದನ ಸಂಯೋಜನೆಯಿಂದ ಸಂಕೀರ್ಣ ರಸಾನುಭೂತಿಯು ಉದಯಿಸುವುದು ಸಂಭಾವ್ಯವೆನ್ನಿಸುತ್ತದೆ.

**೨. ಸಂಗೀತದ ಅಂತರಂಗದಲ್ಲಿ ನಿರೀಕ್ಷೆಗಳು, ಆಶೋತ್ತರಗಳು**

ಈಗ ನಮ್ಮ ಸಂಗೀತಪದ್ಧತಿಯ ಒಳಗಿರುವ ಕೆಲವು ವಿಷಯಗಳನ್ನು ಪರಿಶೀಲಿಸಬಹುದು:

೧. ಇವುಗಳಲ್ಲಿ ಮೊತ್ತಮೊದಲನೆಯದು ಮಾಧ್ಯಮ. ಸುಶಾರೀರಕ್ಕಾಗಿ ಅದೃಷ್ಟವನ್ನೋ ಆಕಸ್ಮಿಕವನ್ನೋ ಅವಲಂಬಿಸುವುದರ ಬದಲು ಕರ್ನಾಟಕ ಸಂಗೀತ ಗಾಯಕರು, ಸುವ್ಯವಸ್ಥಿತವಾದ ಕಂಠ ಶಿಕ್ಷಣವು ಬಹು ಮುಖ್ಯವೂ ಅಗತ್ಯವೂ ಹೌದೆಂಬುದನ್ನು ಮನಗಾಣುತ್ತಾರೆಂದು ಆಶಿಸಬಹುದು. ಇದರಿಂದ ಕರ್ನಾಟಕ ಸಂಗೀತರಸಿಕರ ಪ್ರೀತಿಯನ್ನೂ ಸಂಖ್ಯೆಯನ್ನೂ ಹೆಚ್ಚುಮಾಡಿಕೊಳ್ಳುವುದರ ಜೊತೆಗೆ ಹಿಂದೂಸ್ತಾನೀ ಮತ್ತು ಪಾಶ್ಚಿಮಾತ್ಯ ಸಂಗೀತರಸಿಕರ ಸಹನೆ, ಗೌರವ, ಸ್ವೀಕೃತಿ ಮತ್ತು ಆಕರ್ಷಣೆಗಳನ್ನು ಸಂಪಾದಿಸಿಕೊಳ್ಳಬಹುದು; ಕಡೆಯ ಪಕ್ಷ, ಅವರ ಅವಜ್ಞೆಯನ್ನು ಕಡಿಮೆ ಮಾಡಿಕೊಳ್ಳಬಹುದು.

೨. ಇನ್ನೊಂದು ಮುಖ್ಯ ಅವಶ್ಯಕತೆಯೆಂದರೆ ಸಂಗೀತ ಕಛೇರಿಯ ಸಭಾಂಗಣಗಳು. ಗಾಯಕರ ಮತ್ತು ಸಂಗೀತವಾದ್ಯಗಳ ನಾದಗುಣಗಳು ಸ್ವಾಭಾವಿಕವಾಗಿ, ಧ್ವನಿವರ್ಧನದ ಅಗತ್ಯವಿಲ್ಲದೆ, ಪ್ರತಿಯೊಬ್ಬ ಸಭ್ಯ ರಸಿಕನನ್ನೂ ಮುಟ್ಟುವಂತಹ ಸಭಾಂಗಣಗಳು. ಇವು ಬೆರಳೆಣಿಕೆಯಷ್ಟಿವೆ: ಎಲ್ಲ ಕಲಾವಿದರಿಗೂ ಎಲ್ಲ ಶ್ರೋತೃ

ಗಳಿಗೂ ದೊರೆಯುವಂತೆಯೂ ಇಲ್ಲ. ಕಟ್ಟಡ ವಿಜ್ಞಾನ, ನಾದ ವಿಜ್ಞಾನ, ಗಾಯಕ-ವಾದಕ- ಶ್ರೋತೃಗಳ ಸಮಾವೇಶದಿಂದ ಇಂತಹ ಕಛೇರಿ ಸಭಾಂಗಣಗಳನ್ನು ನಿರ್ಮಿಸಬೇಕು. ಸಂಸ್ಕೃತಿ ಪ್ರೇಮಿಗಳಾದ ಕೈಗಾರಿಕೋದ್ಯಮಿಗಳು ಸಮಾಜಸೇವೆಯೆಂದು ತಮ್ಮನ್ನು ಇದರಲ್ಲಿ ತೊಡಗಿಸಿಕೊಂಡರೆ ಈ ಕೊರತೆಯು ಸ್ವಲ್ಪವಾದರೂ ನೀಗಬಹುದು. ನಾದ ವೈಜ್ಞಾನಿಕವಾಗಿ ರಚಿತವಾದ ಶ್ರೋತೃಮಿತ್ರ ಸಭಾಂಗಣಗಳು ಅಪರೂಪವಾಗಿರುವ ಇಂದು ಧ್ವನಿವರ್ಧಕಗಳ ಬಳಕೆ ಅನಿವಾರ್ಯವಾಗಿದೆ, ಅವುಗಳ ಗುಣಮಟ್ಟವು ಕಡಿಮೆಯಾದಷ್ಟೂ ನಾದಗುಣದ ವಿಕೃತಿಯು ಹೆಚ್ಚಾಗುವುದೂ ಸಹಜವೇ ಆಗಿದೆ; ಧ್ವನಿಮುದ್ರಣಗಳಲ್ಲಿ ಕಂಠಧ್ವನಿಗಳನ್ನು ಕೃತಕವಾಗಿ 'ಸಿಹಿ'ಗೊಳಿಸುವುದೂ ನಡೆಯುತ್ತಲೇ ಇರುತ್ತದೆ. ಇದರಿಂದಾಗಿ ಗಾಯಕರು ವೈಜ್ಞಾನಿಕವಾದ ಶಾರೀರ ಶಿಕ್ಷಣದಿಂದ ತಮ್ಮ ಧ್ವನಿಗಳನ್ನು ಸಂಸ್ಕಾರಗೊಳಿಸಿಕೊಳ್ಳುವುದಕ್ಕೂ ತಮ್ಮ ಶಾರೀರದ ಸಹಜ ಸಂಪನ್ಮೂಲಗಳನ್ನು ಸಂವರ್ಧಿಸಿಕೊಳ್ಳಲೂ ಅಡಚಣೆಯುಂಟಾಗುತ್ತದೆ. ತಮ್ಮ ತಮ್ಮ ಧ್ವನಿಗುಣಗಳಿಗೂ ತಮ್ಮ ತಜ್ಞತೆಯ ಅಥವಾ ಆಯ್ಕೆಯ ಗೇಯಪ್ರಕಾರದ ಅವಶ್ಯಕತೆಗಳಿಗೂ ತಕ್ಕಂತೆ ಶಾರೀರಸಿದ್ಧತೆಯನ್ನು ಮಾಡಿಕೊಳ್ಳುವ ಶುಭದಿನಗಳು ಈ ತಾಂತ್ರಿಕಯುಗದಲ್ಲಿ ಬೇಗ ಬರಬಹುದೆಂದು ಆಶಿಸಬಹುದು.

೩. ಇಂದು ನಮ್ಮ ಸಂಗೀತದಲ್ಲಿ ಬಳಕೆಯಾಗುತ್ತಿರುವ ವಾದ್ಯ ಪ್ರಪಂಚಕ್ಕೆ ಬೇರೆ ಬೇರೆ ಸಂಗೀತ ಪದ್ಧತಿಗಳಿಂದ ಅನೇಕ ವಾದ್ಯಗಳು ಬಂದು ಸೇರಿಕೊಳ್ಳುವುದನ್ನೂ ಅವುಗಳನ್ನು ನಮ್ಮ ಸಂಗೀತಕ್ಕೆ ಬೇಕಾಗುವ ತಂತ್ರಗಳನ್ನು ಅಳವಡಿಸಿಕೊಳ್ಳುವ ಪ್ರತಿಭೆಯನ್ನು ಇಂದಿನ ಯುವಜನಾಂಗವು ಪಡೆಯುತ್ತದೆಂದೂ, ಇದರಿಂದ ಸಂಗೀತಾಭಿರುಚಿ, ಆಸ್ವಾದಗಳ ಕ್ಷಿತಿಜಗಳು ವಿಸ್ತರಿಸುವುವೆಂದೂ ನಿರೀಕ್ಷಿಸಬಹುದು.

೪. ಜಾನಪದ ಸಂಗೀತದಿಂದ ಶಾಸ್ತ್ರೀಯ ಸಂಗೀತವು ಎರವಲು ತೆಗೆದುಕೊಂಡು ಅದನ್ನು ಪರಿಷ್ಕರಿಸಿ ತನ್ನನ್ನು ವಿಸ್ತಾರಗೊಳಿಸಿಕೊಳ್ಳುವುದೆಂದು ನಿರೀಕ್ಷಿಸಬಹುದು; ಆದರೆ ಜಾನಪದವೆಂಬ ಹೆಸರಿನಲ್ಲಿ ಅದರ ಅಣಕವೂ ನಾಗರೀಕರಣವೂ ಆಗುವುದು ತಪ್ಪಬೇಕು. ನಿಜವಾದ ಜಾನಪದ ಸಂಗೀತವನ್ನು ಕಲಿಸುವ ಏರ್ಪಾಡು ವ್ಯವಸ್ಥಿತವಾಗಿ, ವ್ಯಾಪಕವಾಗಿ ಆಗಬೇಕಾಗಿದೆ. ಇದನ್ನೂ ಜಾನಪದ ವಾದ್ಯಗಳ ನಿರ್ಮಾಣ, ಸಂಗ್ರಹ, ವಿತರಣ ಇತ್ಯಾದಿಗಳನ್ನೂ ಮಾಡುವ ಕೇಂದ್ರಗಳು ಗ್ರಾಮೀಣ ಪ್ರದೇಶಗಳಲ್ಲಿ ಆಗಬೇಕು. ಅಂತೆಯೇ ಜಾನಪದ ಸಂಗೀತವನ್ನು ಕುರಿತ ವೈಜ್ಞಾನಿಕ ಸಂಶೋಧನೆಗೆ ಪ್ರೋತ್ಸಾಹವು ವಿಶ್ವವಿದ್ಯಾನಿಲಯಗಳಂತಹ ಉನ್ನತ ಶಿಕ್ಷಣಸಂಸ್ಥೆಗಳಲ್ಲಿ ದೊರೆಯಬೇಕು. ಇಂದು ಇದರ ಶುಭಚಿಹ್ನೆಗಳಿವೆ; ಮುಂದಿನ ದಿನಗಳಲ್ಲಿ ಇವೆಲ್ಲ ಆಗುವ ಸೂಚನೆಗಳಿವೆ. ಇದೆಲ್ಲ ಪ್ರಾಂತೀಯಮಟ್ಟಗಳಲ್ಲಿ ನಡೆದು ಇಂತಹ ಪ್ರಯತ್ನಗಳು ರಾಷ್ಟ್ರೀಯ ಮಟ್ಟದಲ್ಲಿ ಸಂಘಟಿತವೂ ಕೇಂದ್ರೀಕೃತವೂ ಆಗಬೇಕಾಗಿದೆ.

೫. ಸಂಗೀತವಾದ್ಯಗಳಲ್ಲಿ ರಚನಾಸಾಮಗ್ರಿ, ವಾದನೀಯ ಪ್ರಕಾರಗಳು, ವಾದನ ವಿಧಾನಗಳು, ನಾದಶಾಸ್ತ್ರೀಯ ವಿಜ್ಞಾನ ಇತ್ಯಾದಿಗಳು ಮುಂಬರುವ ದಶಕಗಳಲ್ಲಿ ಪ್ರಗತಿಯನ್ನು ಹೊಂದುವುವು. ಇವಕ್ಕೆ ಅನುಗುಣವಾಗಿ ಸಂಗೀತವಾದ್ಯಗಳ ನಾದವ್ಯಾಪ್ತಿ, ನಾದಗುಣ ಮತ್ತು ವಾದನಪಾಂಡಿತ್ಯಗಳೂ ಬೆಳೆಯುವುವು. ಹೊಸ ಸಂಗೀತವಾದ್ಯಗಳ ಸೃಷ್ಟಿಯೂ ಆದೀತು. ವಿಶೇಷವಾಗಿ, ಇಂದು ಸಂಗೀತವಾದ್ಯಗಳ ತಾಂತ್ರಿಕ [illegible] ನಾದಗುಣದ ಮಟ್ಟವೂ ತಯಾರಿಕೆಯ ವೈಜ್ಞಾನಿಕತೆ ಮತ್ತು [illegible] ಅದೃಷ್ಟ ಅಥವಾ ತಯಾರಕನ ಖಯಾಲಿಯನ್ನು ಆಶ್ರಯಿಸಿವೆ. ಇವುಗಳಲ್ಲಿ ಸ್ವತಃ ವಾದಕನ ಅಭಿಪ್ರಾಯ, ಇಷ್ಟಾನಿಷ್ಟಗಳು, ಬೇಕು ಬೇಡಗಳನ್ನು ತಿಳಿದುಕೊಂಡು ತಯಾರಿಕೆಯಲ್ಲಿ ತೊಡಗುವುದರ ಬದಲು ಪರಂಪರೆ ಎಂಬ ಅಪ್ಪನು ನೆಟ್ಟು ಬೆಳೆಸಿದ ಆಲದ ಮರಕ್ಕೆ ನೇತುಹಾಕಿಕೊಳ್ಳುವುದೇ ರೂಢಿಯಾಗಿದೆ. ಇದರಿಂದಾಗಿ ವಾದ್ಯಗಳ ತಯಾರಿಕೆಯು ಒಂದು ಕೈಗಾರಿಕೆಯಾಗಿದೆಯೇ ಹೊರತು ವೈಯಕ್ತಿಕ ಅಗತ್ಯಗಳನ್ನು ಪೂರೈಸುವ ಉದ್ಯಮವಾಗಿಲ್ಲ; ತಯಾರಿಕೆಯಲ್ಲಿ ಮತ್ತು ದುರಸ್ತಿನಲ್ಲಿ ಪ್ರಾಯೋಗಿಕ ಮತ್ತು ತಾಂತ್ರಿಕ ಚಲಾಂಶಗಳನ್ನೆಲ್ಲ ಕಂಡುಹಿಡಿದು, ಸಂಚಯಿಸಿ ಇಷ್ಟಾಂಶದೊಡನೆ ಗಣಿತ ಸಮೀಕರಣವನ್ನು ಏರ್ಪಡಿಸುವುದು ಇಂದಿನ ತುರ್ತು ಅಗತ್ಯಗಳಲ್ಲಿ ಒಂದು.



೬. ನಮ್ಮ ಸಂಗೀತ ಪದ್ಧತಿಯ ಇನ್ನೊಂದು ಮುಖ್ಯ ಅವಶ್ಯಕತೆಯು ಅದರ ಲೇಖನವಿಧಾನವನ್ನು ಕುರಿತದ್ದು. ಈಗಿರುವ ಸ್ವರಲಿಪಿ ಪದ್ಧತಿಯು ಕರಾರುವಾಕ್ಕಾಗಿ, ಸಮರ್ಥವಾಗಿ, ಯಥಾವತ್ತಾಗಿ ನಿರೂಪಿಸಲು ಅಸಮರ್ಥವಾಗಿದೆ ಎಂಬ ಹಳೆಯ ಮಾತನ್ನು ಇಲ್ಲಿ ಪುನರುಚ್ಚರಿಸುತ್ತಿಲ್ಲ. ಪ್ರತಿಯೊಂದು ಸಂಗೀತವಾದ್ಯಕ್ಕೂ - ತಂತಿ, ಚರ್ಮ ಮತ್ತು ಗಾಳಿ ವಾದ್ಯಗಳನ್ನು ಒಳಗೊಂಡಂತೆ - ಅದರ ವಾದನವಿಧಾನ, ತಂತ್ರ ಮುಂತಾದವುಗಳನ್ನು ಯಥಾವತ್ತಾಗಿ ಪ್ರತಿಬಿಂಬಿಸುವಂತಹ ಹಸ್ತವ್ಯಾಪಾರಗಳನ್ನೂ ಉಸಿರಿನ ತಂತ್ರಗಳನ್ನೂ ಬರೆದಿಟ್ಟು, ಇದಕ್ಕೆ ಪರಸ್ಪರವಾದ ಧ್ವನಿಗಳನ್ನೂ ಕ್ರಿಯೆಗಳನ್ನೂ, ವಿಲಂಬಗತಿಯ ('ಸ್ಲೋ ಮೋಷನ್') ವಿಡಿಯೋ ಮುದ್ರಣಗಳೊಡನೆ ಗುರುಸಾನ್ನಿಧ್ಯವಿರುವ ಮತ್ತು ಅದಿರದ ಶಿಕ್ಷಣಕ್ಕೆ ಅನುಕೂಲವಾಗಿ ತಯಾರಿಸುವುದರ ಅಗತ್ಯವನ್ನು ಇಲ್ಲಿ ಒತ್ತಿಹೇಳುತ್ತಿದ್ದೇನೆ. ಮೃದಂಗದಂತೆ ಎರಡು ಚರ್ಮಮುಖಗಳಿರುವ ವಾದ್ಯಗಳನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು. ಒಂದೊಂದು ಚರ್ಮಮುಖವನ್ನೂ ಆರೆಕಾಲುಗಳಿಂದಾದ ಸಣ್ಣ ಸಣ್ಣ ಪ್ರದೇಶಗಳನ್ನಾಗಿ (ರೇಡಿಯಲ್ ಸೆಕ್ಟರ್) ವಿಂಗಡಿಸಿ ಅವುಗಳಲ್ಲಿ ಪ್ರತಿಯೊಂದನ್ನೂ ಬೇರೆ ಸಂಖ್ಯೆ ಅಥವಾ ಇತರ ಸಂಜ್ಞೆಯಿಂದ ಸೂಚಿಸಬೇಕು; ಪ್ರತಿಯೊಂದು ಕೈಯಿನ ಮಣಿಕಟ್ಟು, ಅಂಗೈ ಮತ್ತು ಬೆರಳುಗಳನ್ನೂ ಹೀಗೆಯೇ ವಿಂಗಡಿಸಿ ಸೂಚಿಸಬೇಕು; ಇವೆರಡರ ನಡುವೆ ಯಾವುದು ಯಾವುದನ್ನು ಹೇಗೆ ಎಷ್ಟು ಸ್ಪರ್ಶಿಸುತ್ತದೆಂಬುದನ್ನೂ ಅದರಿಂದ ಉದ್ಭವವಾಗುವ ಶಬ್ದದ (ಸೊಲ್ಲು, ಪಾಟ) ಜೊತೆಗೆ ಏಕೈಕವಾಗಿ ಸಂಬಂಧಿಸಿ ಅದರ ಕಾಲಪ್ರಮಾಣವನ್ನು ಸೂಚಿಸುವ ವಿಧಾನವನ್ನೂ ಕಂಡುಹಿಡಿಯಬೇಕು. ಈ ರೀತಿಯಲ್ಲಿ ವಾದನದ ಪ್ರತಿಯೊಂದು ಖಂಡದ ನಕ್ಷೆಯನ್ನೂ ತಯಾರಿಸಿ ಸಂಯೋಜಿಸಬೇಕು. ಇದು ಬಹುವಾದ ಶ್ರಮವನ್ನೂ ತಾಳ್ಮೆಯನ್ನೂ ಅಪೇಕ್ಷಿಸುತ್ತದೆ, ಆದರೆ ಶಿಕ್ಷಣಕ್ಕೆ ಅಮೂಲ್ಯವಾದ ಸಹಕಾರಿಯಾಗಬಲ್ಲದು. ಲಯವಾದ್ಯಗಳಲ್ಲಿ ಈ ಪ್ರಯತ್ನವನ್ನು ಕೈಗೊಂಡಾಗ ಒಂದು ಸಮಸ್ಯೆಯು ಎದುರಾಗುತ್ತದೆ; ಏನೆಂದರೆ ಒಬ್ಬನೇ ವಾದಕನು ತನ್ನ ಪರಂಪರೆಗೆ ಅನುಸಾರವಾಗಿ ಒಂದೇ ಪಾಟಾಕ್ಷರವನ್ನು ಬೇರೆ ಬೇರೆ ಚರ್ಮಮುಖದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಹಸ್ತವ್ಯಾಪಾರಗಳಿಂದ ಉಂಟಾದಂತೆ ತಿಳಿಯುತ್ತಾನೆ; ಹಲವು ವೇಳೆ ಅವನು ಅದಕ್ಕೆ ಪರಸ್ಪರವಾಗಿ ಉಚ್ಚರಿಸುವ ಪಾಟಶಬ್ದಕ್ಕೂ ವಾಸ್ತವವಾಗಿ ಉಂಟಾಗುವ ಶಬ್ದಕ್ಕೂ ಹೊಂದಾಣಿಕೆ ಇರುವುದಿಲ್ಲ; ಒಂದೇ ಪ್ರದೇಶದಲ್ಲಿ ಅದೇ ಅಥವಾ ಬೇರೆ ಹಸ್ತವ್ಯಾಪಾರಗಳಿಂದ ಹೊರಟ ಶಬ್ದವನ್ನು ಸಂದರ್ಭಾನುಸಾರವಾಗಿ ಬೇರೆ ಬೇರೆಯೇ ಆಗಿ ಉಚ್ಚರಿಸುತ್ತಾನೆ; ಇವೆಲ್ಲ ಬೇರೆ ಬೇರೆ ಗುರುಪರಂಪರೆಗಳಿಗೆ ಬೇರೆ ಬೇರೆಯೇ ಆಗಿದ್ದು ಆಯಾ ಶೈಲಿ ವೈಶಿಷ್ಟ್ಯದ ಸೂಚಕಗಳಾಗಿರುತ್ತವೆ. ಇಂತಹ ಸಂಕೀರ್ಣಪರಿಸ್ಥಿತಿಯಲ್ಲಿ ಸರ್ವಸಮ್ಮತವಾದ ಏಕೈಕ ಲೇಖನ ಪದ್ಧತಿಯನ್ನು ಕಂಡುಹಿಡಿಯುವುದು ದುಸ್ಸಾಧ್ಯವೇ ಸರಿ. ಅಂತಹ ಸರ್ವಸಮ್ಮತಿಯು ದೊರೆಯುವವರೆಗೆ ಒಂದೊಂದು ಶೈಲಿಗೂ ಪ್ರತ್ಯೇಕವಾದ ವಿಧಾನವನ್ನು ಏರ್ಪಡಿಸಿಕೊಳ್ಳಲಡ್ಡಿಯಿಲ್ಲ. ತಬಲವನ್ನು ಕುರಿತಂತೆ ಈ ಕೆಲಸವನ್ನು ಕೆಲವು ಪಾಶ್ಚಿಮಾತ್ಯ ವಿದ್ವಾಂಸರು ಈಗಾಗಲೇ ಶ್ರೇಷ್ಠರೀತಿಯಲ್ಲಿ ಮಾಡಿದ್ದಾರೆ.

೭. ಸಂಗೀತಶಿಕ್ಷಣದಲ್ಲಿ ಗುರುಕುಲಪದ್ಧತಿಯ ಯುಗವು ಮರಳಿಬರಲಾರದು ಎಂಬಷ್ಟು ಮುಗಿಯುತ್ತ ಬಂದಿದೆ; ಅದನ್ನು ಉಳಿಸಿಕೊಳ್ಳುವ ಕೆಲವು ಶ್ರದ್ಧಾಪೂರ್ಣ ಪ್ರಯತ್ನಗಳು ಅಪವಾದರೂಪದಲ್ಲಿವೆ. ಇಂದು ಸಂಸ್ಥೆಗಳ ಮೂಲಕವಾದ ಸಂಗೀತ

ಶಿಕ್ಷಣವು ಸ್ಥಿರವಾಗಿ ನಿಂತಿದೆ. ಗುರುಕುಲದ ಶ್ರೇಷ್ಠಾಂಶಗಳನ್ನು ಅರಗಿಸಿಕೊಂಡು ಅದರ ದುರ್ಬಲಾಂಶಗಳನ್ನು ಕೈಬಿಟ್ಟು ತನ್ನಲ್ಲಿರುವ ಉತ್ಕೃಷ್ಟಾಂಶಗಳನ್ನು ಬಲಪಡಿಸಿಕೊಂಡು ಹಾನಿಕರವಾದವುಗಳನ್ನು ದೂರಮಾಡುವ, ಆತ್ಮ ಪರೀಕ್ಷಣದ ಅವಶ್ಯಕತೆ ಬಂದಿದೆ. ನಮ್ಮ ಸಾಂಸ್ಕೃತಿಕ ಸಂಪ್ರದಾಯವನ್ನು ಆಧುನಿಕ ಆಶೋತ್ತರ ಮತ್ತು ಧ್ಯೇಯಗಳೊಡನೆ ಸಮರಸವಾಗಿಸಿಕೊಂಡು ಸಂಗೀತಶಿಕ್ಷಣಕ್ಕೆ ಮೂಲಭೂತವಾದ ತತ್ತ್ವಜಿಜ್ಞಾಸೆ, ಧ್ಯೇಯಗಳು-ಉದ್ದೇಶಗಳು, ವಿಧಾನಗಳು-ಶಿಕ್ಷಣ ಪರಿಕರಗಳು, ಸಹಜ ಪ್ರವೃತ್ತಿ ಮತ್ತು ಕಲಿಕೆಗಳ ಮಾಪನ, ಕಲಿಕೆಯಲ್ಲಿ ಅಸಹಜಪ್ರವೃತ್ತಿಗಳು, ಸಾಮಾನ್ಯಶಿಕ್ಷಣದಲ್ಲಿ ಸಂಗೀತದ ಸ್ಥಾನ, ಕಲಾಂತರೀಯ ಹಾಗೂ ಕಲಾಂತಸ್ಥ ಆಯಾಮಗಳು ಮುಂತಾದ ಕಲ್ಪನಾ ಬುನಾದಿಯನ್ನು ಇನ್ನೂ ನಿರ್ಮಿಸಬೇಕಾಗಿದೆ. ಪ್ರಾಥಮಿಕ, ಪ್ರೌಢ, ಪದವಿಪೂರ್ವ, ವಿಶ್ವವಿದ್ಯಾನಿಲಯಗಳ ಮಟ್ಟಗಳಲ್ಲಿ ಸಂಗೀತಶಿಕ್ಷಣದ ಉದ್ದೇಶಗಳು ಮತ್ತು ವ್ಯಾಪ್ತಿಗಳು ಮುಂತಾದವನ್ನು ಸ್ಪಷ್ಟವಾಗಿ ನಿರೂಪಿಸಿಕೊಂಡು ರೂಢಿಸಬೇಕಾಗಿದೆ. ಇಂದು ನೀಡುತ್ತಿರುವ ಸಂಗೀತಶಿಕ್ಷಣವನ್ನು ಹಲವು ದಿಕ್ಕುಗಳಲ್ಲಿ ವಿಸ್ತರಿಸಿ ಸಂಗೀತ ಮತ್ತು ಸಮಾಜಶಾಸ್ತ್ರ, ವಯಸ್ಕರ ಸಂಗೀತಶಿಕ್ಷಣ, ಅನೌಪಚಾರಿಕ ಸಂಗೀತಶಿಕ್ಷಣ, ದೂರ ಸಂಗೀತಶಿಕ್ಷಣ, ಸಂಗೀತದ ವಾಗ್ಗೇಯರಚನೆ, ಸಂಗೀತವಿಮರ್ಶೆ, ಸಂಗೀತಶಾಸ್ತ್ರ, ಸಂಗೀತಸಂಶೋಧನೆ ಇತ್ಯಾದಿ ಇತ್ಯಾದಿ ಹಲವು ವಿಷಯಗಳನ್ನು ಪಠ್ಯಕ್ರಮಗಳನ್ನಾಗಿ ಸೇರಿಸಬೇಕಾಗಿದೆ. ಈ ನಿಟ್ಟಿನಲ್ಲಿ ಅಧಿಕ ಪ್ರಗತಿಯನ್ನು ಮುಂಬರುವ ದಶಕಗಳಲ್ಲಿ ನಿರೀಕ್ಷಿಸಬಹುದು.

೮. ಕರ್ನಾಟಕ ಸಂಗೀತ ಮತ್ತು ಹಿಂದೂಸ್ಥಾನೀ ಸಂಗೀತಗಳೆರಡರಲ್ಲಿಯೂ ಆಧುನಿಕ ಸಂಗೀತ ಕಛೇರಿಯು ಸುಮಾರು ಒಂದು ಶತಮಾನದಷ್ಟು ಹಿಂದಿನದು. ಅದು ಎರಡರಲ್ಲೂ ನಿಂತಲ್ಲಿ ನಿಂತು ವೇದಿಕೆಯಲ್ಲೂ ಮಾಧ್ಯಮಗಳಲ್ಲೂ ತನ್ನ ಗೇಯ ಸಾಮಗ್ರಿಗಳಲ್ಲೂ ಸಂಪ್ರದಾಯಗಳಲ್ಲೂ ಅದೇತನದಿಂದಲೂ ಅನಮ್ಯತೆಯಿಂದಲೂ ಹಳಸಲು ತೊಡಗಿದೆ. ಶಾಸ್ತ್ರೀಯ ಮತ್ತಿತರ ಸಂಗೀತಪ್ರಕಾರಗಳಲ್ಲಿ ವಾಗ್ಗೇಯಕಾರತ್ವವು ಒಂದು ನಿಲುಕೊನೆಯನ್ನು ಮುಟ್ಟಿರುವುದು ಇದರ ಕಾರಣಗಳಲ್ಲಿ ಒಂದು. ಸಂಗೀತ ನಿರ್ಮಿತಿಯಲ್ಲಿ ಸೃಜನಶೀಲತೆಯೂ ನವೀನತೆಯೂ ಕಾಂತಿಹೀನವಾಗಿಬಿಟ್ಟು ಕಂದಾಚಾರಕ್ಕೆ ಹಾಗೂ ಕಟ್ಟಳೆಗೆ ಇಳಿಯುತ್ತಿದೆ; ಹುರುಪು, ಸ್ಫೂರ್ತಿ, ಅಂತಃಸ್ಫುರಣಗಳ ಜಾಗವನ್ನು ಮುಕ್ಕರಿಕೆಯು ತುಂಬಲೆಳಸುತ್ತಿದೆ. ಇದು ವೇದಿಕೆಯ ಕಛೇರಿಗಳ ಗುಣಮಟ್ಟದ ಮೇಲೆ ಪ್ರಭಾವ ಬೀರುವುದು ಸ್ವಾಭಾವಿಕ. ಜನಸಂಖ್ಯೆ ಸ್ಫೋಟಕ್ಕೂ ಬೆಳೆಯುತ್ತಿರುವ ರಸಿಕಶ್ರೋತೃಗಳ ಸಂಖ್ಯೆಗೂ ಅಧಿಕವಾಗುತ್ತಿರುವ ಸಂಗೀತ ಕಲೆಗಾರರ ಸಂಖ್ಯೆಗೂ ತಕ್ಕ ಪ್ರಮಾಣದಲ್ಲಿ ಸಂಗೀತ ಕಛೇರಿಗಳನ್ನೂ ನಿಯತಕಾಲಿಕವಾದ ಸಂಗೀತ ಕಛೇರಿಗಳನ್ನೂ ಏರ್ಪಡಿಸಲು ಸಂಗೀತ ಸಭೆಗಳಿಗೂ ಸಂಸ್ಥೆಗಳಿಗೂ ಸಾಧ್ಯವಾಗುತ್ತಿಲ್ಲ. ಸಭಾಂಗಣಗಳ ಅಭಾವವೂ ಒಂದು ಕಾರಣ. ಸಭಾ ಕಛೇರಿಗಳಲ್ಲಿ ಭಾಗವಹಿಸಲು ವ್ಯಯವಾಗುವ ದೂರ, ಹಣ, ಶ್ರಮ ಮುಂತಾದವುಗಳು ದೂರದರ್ಶನ, ಟೇಪ್‌ರಿಕಾರ್ಡರ್, ರೇಡಿಯೋ ಮುಂತಾದ ಸಾಧನಗಳನ್ನೇ ಸಾಮಾನ್ಯ ರಸಿಕನು ಅವಲಂಬಿಸುವಂತೆ ಮಾಡುತ್ತಿವೆ. ಇವುಗಳ ಮುಖ್ಯ ಆಕರ್ಷಣೆಯೆಂದರೆ ಕುಳಿತಲ್ಲೇ, ಆರಾಮವಾಗಿ, ಅನೌಪಚಾರಿಕವಾಗಿ ತನಗೆ ಬೇಕಾದ ಸಂಗೀತವನ್ನು ತನಗೆ ಬೇಕಾದಷ್ಟು, ಬೇಕಾದ ಅವಧಿಯಲ್ಲಿ, ಎಷ್ಟು ಸಲ ಬೇಕಾದರೂ ಕೇಳಬಹುದು. ಅಂತಹ ಸಂಗೀತವು ದುಬಾರಿಯಲ್ಲ. ನೇರವಾಗಿ ಸಂಗೀತಗಾರನ ಜೀವಂತ ಕಛೇರಿಯನ್ನು ಕೇಳಲಾಗದಿರುವುದು ಒಂದು ಅಲ್ಪತ್ಯಾಗ, ಎಂಬ ಭಾವನೆ ಇತ್ಯಾದಿ. ಸಂಗೀತಗಾರರಲ್ಲಿ, ಸಂಗೀತದ ಸಾಮಗ್ರಿಗಳಲ್ಲಿ ವೈವಿಧ್ಯವೂ ಆಕರ್ಷಕತೆಯೂ ಗಣನೀಯವಾಗಿ ಹೆಚ್ಚಾಗದಿದ್ದರೆ, ನಗರದ ವಿವಿಧ ಭಾಗಗಳಲ್ಲಿ ಸಂಗೀತ ಸಭಾಂಗಣಗಳನ್ನು ನಿರ್ಮಿಸದಿದ್ದರೆ, ಹೊಸಮುಖ, ಹೊಸರಕ್ತಗಳಿಗೆ ಪ್ರೋತ್ಸಾಹವು ಗಣನೀಯ ಪ್ರಮಾಣದಲ್ಲಿ ದೊರೆಯದಿದ್ದರೆ ಶ್ರೋತೃವಿಗೆ ಮನೆಯಲ್ಲೇ ಸಂಗೀತವನ್ನು ಆಸ್ವಾದಿಸುವ ಪ್ರವೃತ್ತಿಯು ಮುಂದಿನ ದಶಕಗಳಲ್ಲಿ ಹೆಚ್ಚಲಿದೆ.



೯. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪ್ರಜಾಸತ್ತಾತ್ಮಕತೆಯು ಸಂಗೀತವನ್ನು ವ್ಯಾಪಿಸಿ ಸಂಗೀತಶ್ರವಣದಲ್ಲಿ ಶೈಲಿ, ವಾಗ್ಗೇಯಕಾರ ಮತ್ತು ಪ್ರಯೋಕ್ತೃಗಳ ಅಪಾರ ವೈವಿಧ್ಯವನ್ನು ಸಾಮಾನ್ಯಶ್ರೋತೃವಿಗೆ ಸಾಧ್ಯಮಾಡಿಕೊಟ್ಟಿದೆ. ಹೀಗಾಗಿದ್ದು ತಾಂತ್ರಿಕ ಪ್ರಗತಿಯಿಂದ. ಇದು ಸಾಮಾನ್ಯವಾಗಿ ಒಳ್ಳೆಯದೇ. ಇದರಿಂದಾಗಿ ಸಂಗೀತದ, ಸಂಗೀತ ವಿದ್ವಾಂಸರ, ಶ್ರೋತೃಗಳ ಪ್ರಮಾಣವು ಅಭೂತಪೂರ್ವವಾಗಿ, ಆಸ್ಫೋಟಕ ವೇಗದಲ್ಲಿ ಹೆಚ್ಚುತ್ತಿದೆ. ಸಂಗೀತವು ರಾಜಾಸ್ಥಾನ ಮತ್ತು ದೇವಸ್ಥಾನಗಳಿಂದ ಶ್ರೀಸಾಮಾನ್ಯನ ಮನೆಬಾಗಿಲಿಗೆ ಬಂದಿದೆ. ಆದರೆ ರಾಜಕಾರಣಿ ನಾಯಕರಲ್ಲಿ ಪೂರ್ವಸಿದ್ಧತೆ, ದೂರದೃಷ್ಟಿ, ಯೋಜನೆ, ನೀತಿನಿರೂಪಣೆ, ಆಡಳಿತಜಾಣ್ಮೆ ಮತ್ತು ಸರ್ಕಾರವನ್ನು ನಡೆಸುವ ಕಲೆ - ಇವುಗಳ ಅಭಾವದಿಂದಾಗಿ ಪ್ರಜಾಪ್ರಭುತ್ವವು ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ಶೋಚನೀಯವಾಗಿ ಕುಸಿದಿದೆ; ಶ್ರೀಸಾಮಾನ್ಯನು ಇದರಿಂದ ಜರ್ಜರಿತನಾಗಿದ್ದಾನೆ. ಇದು ಕಲೆಗಳ ವಿಷಯದಲ್ಲಿಯೂ - ವಿಶೇಷವಾಗಿ ಸಂಗೀತದ ವಿಷಯದಲ್ಲಿ - ನಿಜ. ಇಪ್ಪತ್ತನೆಯ ಶತಮಾನದ ಮೂರನೆಯ ಪಾದದಲ್ಲಿ ಹೊಸದಾಗಿ ದೊರೆತ ಪ್ರಜಾಪ್ರಭುತ್ವದ ವಿಷಯದಲ್ಲಿ ಉತ್ಸಾಹ, ನೆಮ್ಮದಿಯ ಭ್ರಮೆಗಳಿದ್ದರೂ ಅವು ನಾಲ್ಕನೆಯ ಪಾದದಲ್ಲಿ ನಿರಸನಗೊಂಡವು. ಇದಕ್ಕೆ ಮುಖ್ಯ ಕಾರಣಗಳೆಂದರೆ ಗಾತ್ರದ ಜೊತೆಗೆ ಗುಣವು ಬೆಳೆಯದಿದ್ದುದು, ಕಳೆಯನ್ನು ಕೀಳದ ಬೇನೆ, ನಿಜವಾದ ಪ್ರತಿಭೆ ಮತ್ತು ಉತ್ಕೃಷ್ಟ ಸಾಮರ್ಥ್ಯವುಳ್ಳ ಕಲೆಗಾರನನ್ನು ಹಿಂದೂಡಿ ಅಲ್ಪಗುಣ ಅಲ್ಪ ಪ್ರತಿಭೆಗಳನ್ನುಳ್ಳ, 'ರಾಜಕೀಯ' ಮಾಡುವ ಕಲೆಗಾರನು ಅಬ್ಬರಿಸಿ ಆಕ್ರಮಿಸಿಕೊಂಡುದು, ಸರ್ಕಾರದ ಮಂದದೃಷ್ಟಿಯ ನೀತಿಗಳು ಮತ್ತು ಸ್ಪಷ್ಟ ಸಾಂಸ್ಕೃತಿಕ ನೀತಿಯನ್ನು ನಿರೂಪಿಸಿಕೊಳ್ಳದಿರುವುದು, ಆಡಳಿತವರ್ಗದ ಭ್ರಷ್ಟಾಚಾರ ಮತ್ತು ಸ್ವಜನಪಕ್ಷಪಾತ ಇತ್ಯಾದಿಗಳು. ಇಪ್ಪತ್ತೊಂದನೆಯ ಶತಮಾನವು ಕಲೆಯಲ್ಲಿ ಪ್ರಜಾಸತ್ತೆಯೆಂದರೆ ಎಲ್ಲರಿಗೂ ಸಮಾನಾವಕಾಶಗಳು, ಆದರೆ ಶ್ರೇಷ್ಠತೆಗೆ ಪ್ರೋತ್ಸಾಹ ಎಂಬ ತತ್ತ್ವವನ್ನು ಅನುಷ್ಠಾನಕ್ಕೆ ತರುವುದೇ ಎಂಬುದನ್ನು ಕಾದು ನೋಡಬೇಕಾಗಿದೆ.

೧೦. ಇದು ಕಂಪ್ಯೂಟರ್‌ಗಳ, ಇನ್‌ಫರ್ಮೇಶನ್ ಟೆಕ್ನಾಲಜಿಯ ಯುಗ. ಇವು ವ್ಯಕ್ತಿಜೀವನದ ಹಾಗೂ ಸಾಮುದಾಯಿಕ ಜೀವನದ ಎಲ್ಲ ಕ್ಷೇತ್ರಗಳನ್ನೂ ಪ್ರವೇಶಿಸಿ ಜೀವನ ವಿಧಿ ವಿಧಾನಗಳನ್ನೇ ಕ್ರಾಂತಿಕಾರಕವಾಗಿ ಬದಲಾಯಿಸಿವೆ. ಸಂಗೀತ ಕ್ಷೇತ್ರವು ಇವುಗಳ ಪೂರ್ಣಪ್ರಯೋಜನವನ್ನು ಇನ್ನೂ ಪಡೆದುಕೊಳ್ಳಬೇಕಾಗಿದೆ. ಸಂಗೀತದ ಶಿಕ್ಷಣ, ಅಭ್ಯಾಸ, ಪ್ರಯೋಗ, ಶಾಸ್ತ್ರ, ವಾದ್ಯಸೃಷ್ಟಿ, ಸಂಶೋಧನೆ, ದೂರಶಿಕ್ಷಣ, ಇತಿಹಾಸ, ಹೊಸಸೃಷ್ಟಿಯ ಪ್ರಯೋಗಶೀಲತೆ - ಹೀಗೆ ಅದೆಷ್ಟೋ ವಿಧದಲ್ಲಿ ಇದನ್ನು ಬಳಸಿಕೊಂಡು ಸಂಗೀತವು ಮುನ್ನಡೆಯಬಹುದಾಗಿದೆ. ಇಡೀ ಪ್ರಪಂಚಕ್ಕೆ ಐಟಿ ತಜ್ಞರನ್ನು ರಫ್ತು ಮಾಡುವ ನಮ್ಮ ಸಿಲಿಕಾನ್ ಕಣಿವೆಯಲ್ಲಿ ಸಂಗೀತಗಾರರೂ ಐಟಿ ತಜ್ಞರೂ ತುಂಬಿತುಳುಕುತ್ತಿದ್ದಾರೆ; ಇವುಗಳೆರಡರಲ್ಲೂ ಸವ್ಯಸಾಚಿಗಳಾದ ಯುವ ಪೀಳಿಗೆಯ ನವೋದಯವಾಗಬೇಕಾಗಿದೆ.

ಕಾಲವು ನಿರವಧಿಯಾದುದು; ಮಾನವ ವಿಕಾಸದಲ್ಲಿ ಒಂದು ಶತಮಾನವು ಒಂದು ಪರಮಾಣು ಕಣ. ನಮ್ಮೀ ಕಲಿಯುಗವು ಮುಗಿಯಬೇಕಾದರೆ ಇನ್ನೂ ೪,೨೬,೦೦೦ ವರ್ಷಗಳನ್ನು ಪಯಣಿಸಬೇಕಾಗಿದೆ. ಆದರೆ ಮಾನವಜೀವಿತವು ಹ್ರಸ್ವ. ಶತಮಾನವು ಅದರ ಗರಿಷ್ಠ ಅವಧಿ.

ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ, ಜೀವೇಮ ಶರದಃ ಶತಂ, ಪಶ್ಯೇಮ ಶರದಃ ಶತಂ ಎಂಬ ಆಸೆ ನಮ್ಮದು; ನಾಳೆಯ ನೆಮ್ಮದಿಗಾಗಿ ಹೊಸತು ಎಂಬ ಆಸೆ ನಮ್ಮದು.

ಡಾ|| ರಾ. ಸತ್ಯನಾರಾಯಣ
ತ್ರಯೀ ಲಕ್ಷ್ಮೀ, ೯ನೇ ಕ್ರಾಸ್, ಜಯನಗರ, ಮೈಸೂರು - ೫೭೦೦೧೪

# ಭಾರತವೋ ಹಿಂದುಸ್ಥಾನವೋ ? ದೇಶದ ಕುರಿತು ಎರಡು ವ್ಯಾಖ್ಯೆಗಳು

ಜಿ. ರಾಜಶೇಖರ

*ಕಳೆದ ಎರಡು ಶತಮಾನಗಳಲ್ಲಿ ಈ ದೇಶದಲ್ಲಿ ನಡೆದ ಸಾಮಾಜಿಕ ಸುಧಾರಣೆಯ ಚಳುವಳಿಗಳು, ಜಾತಿ ವಿರೋಧಿ ಚಳುವಳಿಗಳು, ದಲಿತರ ಹೋರಾಟಗಳು ಮತ್ತು ಈ ದೇಶದ ಸ್ವಾತಂತ್ರ್ಯ ಹೋರಾಟ-ಇವೆಲ್ಲದರ ಆಳದಲ್ಲಿದ್ದ ತುಡಿತ ಸ್ವಾತಂತ್ರ್ಯ ಮತ್ತು ಸಮಾನತೆಗಳ ಹಂಬಲ. ಸ್ವಾತಂತ್ರ್ಯಾನಂತರ ಈ ದೇಶ ಆಳವಡಿಸಿಕೊಂಡ ಸಂವಿಧಾನ ಕೂಡ ಈ ಹಂಬಲದ ಸಾಕಾರ ಸ್ವರೂಪ. ಈಗ ಅಧಿಕಾರಕ್ಕೆ ಏರಿರುವ ಬಿ.ಜೆ.ಪಿ. ಈ ಸಂವಿಧಾನವನ್ನೇ ಬದಲಾಯಿಸಹೊರಟಿದೆ. ಆದರ ಹಿಂದಿರುವ ಹಿಂದುತ್ವದ ಉದ್ದೇಶಗಳನ್ನು ಊಹಿಸುವುದು ಕಷ್ಟವಲ್ಲ.*

**ಭಾ**ರತದ ವಿದೇಶಾಂಗ ವ್ಯವಹಾರಗಳ ಮಂತ್ರಿ ಜಸವಂತ ಸಿಂಗ್ ಇತ್ತೀಚೆಗೆ, ''ಸ್ವತಂತ್ರ ಭಾರತದ ಮೊದಲ ವರ್ಷಗಳನ್ನು, ವ್ಯರ್ಥವಾಗಿ ಕಳೆದ ವರ್ಷಗಳು'' ಎಂದು ಕರೆದರಂತೆ. ಜಸವಂತ ಸಿಂಗ್ ಬಿ.ಜೆ.ಪಿ.ಯ ನಾಯಕರಲ್ಲಿ ಒಬ್ಬರು. ಅವರ ಪಕ್ಷ ಕೇಂದ್ರದಲ್ಲಿ ಎರಡನೆಯ ಬಾರಿ ಅಧಿಕಾರಕ್ಕೆ ಬಂದ ಮೇಲೆ ಮಾಡಿದ ಒಂದು ಘನಂದಾರಿ ಕೆಲಸವೆಂದರೆ ಅಣುಬಾಂಬ್ ಸ್ಫೋಟಿಸಿದ್ದು. ಇದರಿಂದ ಸಿಟ್ಟಿಗೆದ್ದ ಅಮೆರಿಕವನ್ನು ಸಂಪ್ರೀತಗೊಳಿಸುವ ಜವಾಬ್ದಾರಿ ಜಸವಂತ ಸಿಂಗ್‌ರದ್ದಾಗಿತ್ತು. ಅದಕ್ಕೆ ಸಂಬಂಧಿಸಿದ ಹಾಗೆ ದೇಶಭಕ್ತರ ಪಕ್ಷದ ಈ ಮಹಾನ್ ದೇಶಭಕ್ತ, ಅಮೆರಿಕದ ವಿದೇಶಾಂಗ ಕಾರ್ಯದರ್ಶಿಯಿಂದ ಹಿಡಿದು ಅಂಡರ್‌ಸೆಕ್ರೆಟರಿಯವರೆಗೆ ಅನೇಕರ ಎದುರು ಹಲ್ಲುಕಿರಿದು ಹಸ್ತ ತೊಸೆಯುತ್ತಿರುವ ಚಿತ್ರಗಳನ್ನು ನಾವು ನೋಡಿದ್ದೇವೆ. ಸ್ವತಂತ್ರ ಭಾರತದ ಮೊದಲ ವರ್ಷಗಳಲ್ಲಿ ಅವು ಎಷ್ಟೇ ವ್ಯರ್ಥವಾಗಿರಲಿ ಈ ದೇಶದ ಯಾವ ಅಧಿಕಾರಸ್ಥ ರಾಜಕಾರಣಿಯೂ ಅಮೆರಿಕದ ಅಂಡರ್‌ಸೆಕ್ರೆಟರಿಗಳ ಎದುರು ವಿನೀತರಾಗಿ ನಿಂತದ್ದಿಲ್ಲ. ಬದಲಾಗಿ ಭಾರತ, ಅಮೆರಿಕದ ಸಾಮ್ರಾಜ್ಯಶಾಹಿಯ ವಿರುದ್ಧ ಜಗತ್ತಿನ ಬಡದೇಶಗಳ ಹೋರಾಟದ ಮುಂಚೂಣಿಯಲ್ಲಿತ್ತು. ಆದರೆ ಜಸವಂತ ಸಿಂಗ್ ಪ್ರಕಾರ ಅವು ವ್ಯರ್ಥವಾಗಿ ಕಳೆದ ದಶಕಗಳು; ಹಾಗಾದರೆ ಭಾರತ ಕ್ರಿಯಾಶೀಲವಾಗತೊಡಗಿದ್ದು ಎಂದಿನಿಂದ ? ಅರ್ಥ ವ್ಯವಸ್ಥೆಯಲ್ಲಿ ಖಾಸಗೀಕರಣ ಮತ್ತು ರಾಜಕೀಯದಲ್ಲಿ ಹಿಂದುತ್ವದ ಶಕ್ತಿಗಳು ವಿಜೃಂಭಿಸತೊಡಗಿದ ೯೦ರ ದಶಕದಲ್ಲಿ ಅಥವಾ ಇನ್ನೂ ನಿಖರವಾಗಿ ಹೇಳ ಬೇಕೆಂದರೆ ಹಿಂದುತ್ವದ ಪರಿವಾರ ದೆಹಲಿಯ ಗಾದಿಯನ್ನೇರಿದ ಕಳೆದ ಈ ಎರಡು ವರ್ಷಗಳಲ್ಲಿ, ಹೀಗೆ ನಮ್ಮನ್ನು ನಂಬಿಸುತ್ತಿರುವವರಲ್ಲಿ ಬಿ.ಜೆ.ಪಿ. ನಾಯಕರ ಜೊತೆ ಭಾರತದ ಬಹುತೇಕ ಇಂಗ್ಲಿಷ್ ಪತ್ರಿಕೆ ಮತ್ತು ಟಿ.ವಿ. ಚಾನೆಲ್ಲುಗಳವರು ಸೇರಿದ್ದಾರೆ. ಸ್ವತಂತ್ರ ಭಾರತದ ಮೊದಲ ವರ್ಷಗಳಲ್ಲಿ ದೇಶದ ಅರ್ಥ ವ್ಯವಸ್ಥೆಯ ಮೇಲೆ ಸರಕಾರದ ಬಿಗಿ ಹಿಡಿತವಿತ್ತು; ಸರಕಾರದ ಕಣ್ಣು ತಪ್ಪಿಸಿ ಇಲ್ಲಿ ಏನೂ ನಡೆಯುವಂತಿರಲಿಲ್ಲ; ಇದರಿಂದಾಗಿ, ಆರ್ಥಿಕ ಅಭಿವೃದ್ಧಿ ಸ್ಥಗಿತಗೊಂಡಿತು. – ಇದು ನೆಹರೂರವರ ಸಮಾಜವಾದದ ದುಷ್ಪರಿಣಾಮ ಎಂದು ಮುಂತಾಗಿ ಇವರೆಲ್ಲ ಈಗ ಕತೆ ಕಟ್ಟಿ ಹೇಳುತ್ತಿದ್ದಾರೆ. ಆದರೆ ನೆಹರೂ ಅಧಿಕಾರಾವಧಿಯ ಸರಕಾರದ ಧೋರಣೆಗಳ ವಿವರಗಳನ್ನು ಗಮನವಿಟ್ಟು ನೋಡಿದರೆ, ಇವರು ಆರೋಪಿಸುವ 'ಸರಕಾರದ ಬಿಗಿ ಹಿಡಿತಕ್ಕೆ' ಯಾವ ಉದಾಹರಣೆಯೂ ದೊರಕುವುದಿಲ್ಲ. ಪ್ರಜೆಗಳು ಖಾಸಗಿ ಆಸ್ತಿ ಮತ್ತು ನೆಲ ಹೊಂದಿರುವುದನ್ನಾಗಲೀ, ಉದ್ಯಮಿಗಳು ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುವುದನ್ನಾಗಲೀ, ನೆಹರೂ ಸರಕಾರ ನಿಯಂತ್ರಿಸಿರಲಿಲ್ಲ. ಖಾಸಗಿ ಬಂಡವಾಳಗಾರರು ತಮ್ಮ ಆಸ್ತಿ ಪಾಸ್ತಿ ಹೆಚ್ಚಿಸಿಕೊಳ್ಳುವುದಕ್ಕೂ ಸರಕಾರ ಅಡ್ಡಬಂದಿರಲಿಲ್ಲ. ವಾಸ್ತವವಾಗಿ ಈ ದೇಶದ ಟಾಟಾ, ಬಿರ್ಲಾ, ಗೊಯೆಂಕಾ, ಸೊಮಾನಿ, ಜೈನ್, ಬಜಾಜ್, ಗೋದ್ರೆಜ್, ಕೊಠಾರಿ, ಕಿರ್ಲೋಸ್ಕರ್ ಮುಂತಾದ ಭಾರಿ ಬಂಡವಾಳಶಾಹಿ ಮನೆತನಗಳು ತಮ್ಮ ಆಸ್ತಿಯನ್ನು ಹಲವು ಪಟ್ಟು ಜಾಸ್ತಿ ಪಡಿಸಿಕೊಂಡದ್ದು ಈ ಕಾಲಾವಧಿಯಲ್ಲಿಯೇ. ಅದು ಒತ್ತಟ್ಟಿಗಿರಲಿ, ಸ್ವತಂತ್ರ ಭಾರತದ ಆಳುವ ವರ್ಗ, ಆ ದಿನಗಳಲ್ಲಿ ರೈತರು ಮತ್ತು ಕಾರ್ಮಿಕರ ಬಗ್ಗೆ ಉದಾರವಾಗಿತ್ತೆ ? ಈ ಪ್ರಶ್ನೆಯೇ ಒಂದು ಜೋಕ್‌ನ ಹಾಗೆ ಕೇಳಿಸುತ್ತದೆ. ನೆಹರೂ ಯುಗದ ಆರ್ಥಿಕ ಧೋರಣೆಗಳನ್ನು ಒಂದು ವಾಕ್ಯದಲ್ಲಿ ಹೇಳುವುದಾದರೆ ಅದು, ''ಶ್ರೀಮಂತರನ್ನು ಇನ್ನಷ್ಟು ಶ್ರೀಮಂತಗೊಳಿಸುವುದು ಮತ್ತು ಬಡವರನ್ನು ಇನ್ನಷ್ಟು ಬಡವರನ್ನಾಗಿಸುವುದು.'' ಈ ಮಾತಿನ ಸತ್ಯ ಆಗಲೂ ಕಣ್ಣಿಗೆ ಹೊಡೆದು ಕಾಣುವಂತಿತ್ತು. ಈಗ ಈ ಪರಿಸ್ಥಿತಿ ಇನ್ನಷ್ಟು ವಿಷಮಗೊಂಡಿದ್ದರೂ ಈ ಮಾತು ಮಾತ್ರ ನಮ್ಮ ವಿದ್ವತ್ ವಲಯಗಳಲ್ಲಿ ಮೊದಲಿನಷ್ಟು ಚಲಾವಣೆಯಲ್ಲಿಲ್ಲ. ಶ್ರೀಮಂತರು ಇನ್ನಷ್ಟು ಶ್ರೀಮಂತರಾಗುವುದು ಮತ್ತು ಬಡವರು ತಮ್ಮ ಕೊನೆಯ ತುತ್ತನ್ನೂ ಕೂಡ ಕಳೆದುಕೊಂಡಿರುವುದು ನೈತಿಕವಾಗಿ ಅಸಹನೀಯ ಎಂದು ಈಗ ನಮ್ಮ ಮಾಧ್ಯಮಗಳ ಬುದ್ಧಿವಂತರಿಗೆ ಅನ್ನಿಸುತ್ತಿಲ್ಲ. ಬಡವರೇ ಈಗ ಅವರಿಗೆ ನಿವಾರಿಸಿಕೊಳ್ಳಬೇಕಾದ ಸಮಸ್ಯೆ; ಬಡತನವಲ್ಲ.

ನೆಹರೂ ಅಧಿಕಾರಾವಧಿಯಲ್ಲಿ ಸರಕಾರ ದೇಶದ ಅರ್ಥ ವ್ಯವಸ್ಥೆಯ ಒಳಗೆ ಪ್ರವೇಶಿಸಿದ ರೀತಿ ಕೂಡ ಖಾಸಗೀ ಬಂಡವಾಳಶಾಹಿಗೆ ಅನುಕೂಲಕರವಾಗಿತ್ತೇ ಹೊರತು, ಮೊಟಕುಗೊಳಿಸುವಂತಹದ್ದಾಗಿರಲಿಲ್ಲ. ವಸ್ತುಗಳು ಮತ್ತು ಸೇವೆಗಳ ಉತ್ಪಾದನೆಯ ಯಾವ ಉದ್ಯಮಗಳಲ್ಲಿ ಖಾಸಗಿ ಬಂಡವಾಳಶಾಹಿಗಳಿಗೆ ಹಣ ಹೂಡಲು ಸಾಧ್ಯವಿರಲಿಲ್ಲವೋ (ಅವಶ್ಯವಿರುವ ಬಂಡವಾಳದ ಅಗಾಧ ಪ್ರಮಾಣದಿಂದಾಗಿ), ಯಾವ ಉದ್ಯಮಗಳಲ್ಲಿ ಲಾಭ ತೀರ ಕಡಿಮೆ ಅಥವಾ ದೀರ್ಘಕಾಲದ ನಂತರ ಬರುವಂತಹದ್ದೋ, ಅಂತಹ ಉದ್ಯಮಗಳಲ್ಲಿ ಮಾತ್ರ ಸರಕಾರ ಹಣ ಹಾಕಿತು. ಉದಾ : ಸಾರಿಗೆ ಸಂಪರ್ಕ, ಉಕ್ಕು, ಬೃಹತ್ ಎಂಜನಿಯರಿಂಗ್, ಅಣುಶಕ್ತಿ, ಸಾರ್ವಜನಿಕ ಆರೋಗ್ಯ ಮತ್ತು ಶಿಕ್ಷಣ ಇತ್ಯಾದಿ. ಈ ಎಲ್ಲ ವಸ್ತು ಮತ್ತು ಸೇವೆಗಳ ಉತ್ಪಾದನೆ, ದೇಶದ ಖಾಸಗಿ ಬಂಡವಾಳಶಾಹಿಯ ಬೆಳವಣಿಗೆಗೆ ಅಗತ್ಯವಾಗಿತ್ತು. ಆದರೆ ಅವುಗಳಲ್ಲಿ ತಮ್ಮ ಬಂಡವಾಳ ಹೂಡಲು ಬಂಡವಾಳಶಾಹಿಗಳು ಸಿದ್ಧರಿರಲಿಲ್ಲ. ಸರಕಾರ, ಅಂತಹ ಉದ್ಯಮಗಳನ್ನು ಸ್ಥಾಪಿಸುವ ಹೊಣೆಯನ್ನು ತಾನೇ ಹೊತ್ತಿತು. ಕೈಗಾರಿಕಾ ಕ್ಷೇತ್ರದ ಹಾಗೆ ಕೃಷಿಯಲ್ಲಿಯೂ ಸರಕಾರ ಉಳ್ಳವರ ಪರವಾದ ಧೋರಣೆಯನ್ನೇ ಅನುಸರಿಸಿತು. 'ಉಳುವವನಿಗೇ ಭೂಮಿ' ಎಂಬುದು ಸ್ವಾತಂತ್ರ್ಯ ಹೋರಾಟದ ಪ್ರಾರಂಭದಿಂದಲೂ ಕಾಂಗ್ರೆಸ್‌ನ ಧ್ಯೇಯವಾಕ್ಯವಾಗಿದ್ದರೂ, ಆ ಪಕ್ಷ ಭೂಮಾಲಿಕರ ಹಿತಾಸಕ್ತಿಗಳನ್ನೇ ರಕ್ಷಿಸಿತು. ಕೃಷಿ ಭೂಮಿಯ ಹಂಚಿಕೆಗಾಗಲೀ, ಸಮಾನತೆಗಾಗಲೀ ಕೇಂದ್ರ ಮತ್ತು ರಾಜ್ಯಗಳ ಕಾಂಗ್ರೆಸ್ ಸರಕಾರಗಳು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಇವತ್ತಿನವರೆಗೆ ಎಡಪಕ್ಷಗಳು ಅಧಿಕಾರದಲ್ಲಿರುವ ಕೇರಳ ಮತ್ತು ಪಶ್ಚಿಮ ಬಂಗಾಳಗಳನ್ನು ಹೊರತುಪಡಿಸಿ, ದೇಶದ ಯಾವ

ರಾಜ್ಯವೂ ಭೂ ಸುಧಾರಣೆಯನ್ನು ಕಾರ್ಯಗತಗೊಳಿಸಿಲ್ಲ. ಕರ್ನಾಟಕದಲ್ಲಿ ದೇವರಾಜ ಅರಸು ಮುಖ್ಯಮಂತ್ರಿಯಾಗಿದ್ದಾಗ ಜಾರಿಗೆ ಬಂದ ಭೂ ಸುಧಾರಣಾ ಶಾಸನ ಈ ಮಾತಿಗೆ ಒಂದು ಸಣ್ಣ ಅಪವಾದ. ಆದರೆ ಉಳಿದ ರಾಜ್ಯಗಳ ಮಟ್ಟಿಗೆ ಕಾಗದದ ಮೇಲೆ ಕೂಡ ಇಂತಹ ಒಂದು ಶಾಸನ ಇಲ್ಲ.

ಕಾಂಗ್ರೆಸ್‌ನ ಮೊದಲ ವರ್ಷಗಳ ಈ ಆರ್ಥಿಕ ಧೋರಣೆಗಳ ಪರಿಣಾಮವಾಗಿ ಬಡವರು ಇನ್ನಷ್ಟು ಬಡವರಾದರು ; ಅವರ ಸಂಖ್ಯೆಯೂ ವಿಪರೀತ ಹೆಚ್ಚಾಯಿತು. ೧೯೫೧ರಲ್ಲಿ ಬಡತನದ ರೇಖೆಗಿಂತ ಕೆಳಗಿದ್ದವರು ೧೭ ಕೋಟಿಯಾದರೆ ೧೯೬೩-೬೪ರಲ್ಲಿ ಅವರ ಸಂಖ್ಯೆ ೩೨ ಕೋಟಿಯಷ್ಟಾಗಿತ್ತು. ದೇಶದ ಪ್ರಜೆಗಳಲ್ಲಿ ಮೂರನೆ ಒಂದು ಭಾಗದಷ್ಟು ಜನ ಅಪೌಷ್ಟಿಕತೆಯಿಂದ ನರಳುತ್ತಿದ್ದರೆ, ಅರ್ಧದಷ್ಟು ಜನ ಅಕ್ಷರ ವಂಚಿತರು; ಬಹುತೇಕ ಹಳ್ಳಿಗಳಲ್ಲಿ ಕುಡಿಯುವ ನೀರು, ಕನಿಷ್ಠ ಆರೋಗ್ಯ ಸೌಲಭ್ಯ, ಪ್ರಾಥಮಿಕ ಶಾಲೆ – ಮುಂತಾದ ಯಾವ ಸೌಲಭ್ಯವೂ ಇಲ್ಲ. ಸ್ವಾತಂತ್ರ್ಯ ಬರುವಾಗ ಭಾರತ ಜಗತ್ತಿನ ಅತ್ಯಂತ ಹಿಂದುಳಿದ ದೇಶಗಳಲ್ಲಿ ಒಂದಾಗಿತ್ತು. ಈಗಲೂ ಅದು ತನ್ನ ಆ ಸ್ಥಾನವನ್ನು ಉಳಿಸಿಕೊಂಡಿದೆ. ಆದರೆ ಜಸವಂತ್ ಸಿಂಗ್‌ರಿಗಾಗಲೀ, ಅವರ ಪಕ್ಷಕ್ಕಾಗಲೀ ಕಾಂಗ್ರೆಸ್‌ನ ಆಳ್ವಿಕೆಯ ಈ ಪರಿಣಾಮಗಳ ಬಗ್ಗೆ ಚಿಂತೆ ಇಲ್ಲ. ಸಮಾನತೆ ಮತ್ತು ಬಡವರಿಗೆ ನ್ಯಾಯ ಬಿ.ಜೆ.ಪಿ.ಗೆ ಯಾವತ್ತೂ ಆದರ್ಶವಾಗಿರಲಿಲ್ಲ. ಈ ದೇಶದ ಬಂಡವಾಳಶಾಹಿಗಳು, ಭೂ ಮಾಲಕರು, ವರ್ತಕರು ಮತ್ತು ನಾನಾ ವಿಧದಲ್ಲಿ ಶ್ರೀಮಂತರಾದವರು – ಇವರು ಯಾರಿಗೂ ಯಾವ ರೀತಿಯಲ್ಲೂ ಕಿಂಚಿತ್ತೂ ತೊಂದರೆ ಆಗದ ಆ ವರ್ಷಗಳನ್ನು ಜಸವಂತ್ ಸಿಂಗ್ ಯಾಕೆ 'ವ್ಯರ್ಥವಾಗಿ ಕಳೆದ ವರ್ಷಗಳು' ಎಂದು ಕರೆದರು ? ಆ ಕಾಲದ ರಾಜಕೀಯದ ಯಾವ ಅಂಶಗಳು ಅವರಿಗೆ ಸರಕಾರದ 'ಅತಿಕ್ರಮಣ' ಎಂದು ಕಂಡವು ? ಇನ್ನೂ ಸರಳವಾಗಿ ಕೇಳುವುದಾದರೆ, ನೆಹರೂ ಸರಕಾರದ ಯಾವ ಧೋರಣೆಗಳು ಬಿ.ಜೆ.ಪಿ.ಗೆ ಈಗ ಅಪಥ್ಯ ಎನ್ನಿಸುತ್ತಿವೆ ?

ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ನಾವು ನಮ್ಮ ಸ್ವಾತಂತ್ರ್ಯ ಚಳುವಳಿಯ ಸ್ವರೂಪವನ್ನು ವಿವೇಚಿಸಬೇಕು. ಈ ಚಳುವಳಿಯಲ್ಲಿ ಬಿ.ಜೆ.ಪಿ.ಯ ಈ ಮೊದಲಿನ ಅವತಾರ ಜನಸಂಘವಾಗಲಿ, ಆರ್. ಎಸ್. ಎಸ್. ಆಗಲಿ, ಯಾವ ಪಾತ್ರವನ್ನೂ ವಹಿಸಿರಲಿಲ್ಲ. ಚಳುವಳಿಯ ಬಗ್ಗೆ ಆರ್. ಎಸ್. ಎಸ್. ತಟಸ್ಥವಾಗಿಯೂ ಇರಲಿಲ್ಲ; ಅದು ಬ್ರಿಟಿಷರ ಪರವಾಗಿಯೇ ಇತ್ತು. ಸ್ವಾತಂತ್ರ್ಯದ ಚಳುವಳಿಯಲ್ಲಿ ದೇಶದ ಬಡಜನತೆ, ಒಂದು ದೊಡ್ಡ ಪ್ರವಾಹದ ಹಾಗೆ ಸೇರಿಕೊಂಡದ್ದರಿಂದ ಆರ್. ಎಸ್. ಎಸ್. ನಾಯಕರಿಗೆ ಆತಂಕವಾಗಿತ್ತು. ಬ್ರಿಟಿಷರು ದೇಶ ಬಿಟ್ಟು ಹೋದ ಮೇಲೆ ಪ್ರಭುತ್ವ ಈ ಬಡಜನರ ಕೈ ಸೇರಿದರೆ ಏನು ಗತಿ ಎಂಬ ಪ್ರತಿಷ್ಠಿತ ಜಾತಿ ವರ್ಗಗಳ ಆತಂಕ ಅದು. ಭಾರತದ ಸ್ವಾತಂತ್ರ್ಯ ಚಳುವಳಿ, ಬ್ರಿಟಿಷರಿಂದ ಅಧಿಕಾರ ಕಸಿದುಕೊಳ್ಳುವ ಒಂದು ರಾಜಕೀಯ ಚಳುವಳಿಯಷ್ಟೇ ಆಗಿರಲಿಲ್ಲ. ಚಳುವಳಿಯ ನಾಯಕತ್ವ ವಹಿಸಿದ ಗಾಂಧೀಜಿಯವರ ವಿಶಿಷ್ಟ ವ್ಯಕ್ತಿತ್ವದಿಂದಾಗಿ, ಅದು ಈ ದೇಶವನ್ನು ಜಾತಿ ಶೋಷಣೆ, ಅಸ್ಪೃಶ್ಯತೆ, ಪಾಳೆಯಗಾರಿ ಪದ್ಧತಿ ಮತ್ತು ಲಿಂಗ ಅಸಮಾನತೆಗಳಿಂದ ಮುಕ್ತಗೊಳಿಸುವ ಒಂದು ಸಾಮಾಜಿಕ ಚಳುವಳಿಯೂ ಆಗಿತ್ತು. ಕಳೆದ ಎರಡು ಶತಮಾನಗಳ ಭಾರತದ ಚರಿತ್ರೆ ಸಮಾಜ ಸುಧಾರಣಾ ಚಳುವಳಿ ಮತ್ತು ಸ್ವಾತಂತ್ರ್ಯ ಹೋರಾಟಗಳ ಚರಿತ್ರೆ. ಅಂದರೆ ಈ ಪುರಾತನ ದೇಶ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳ ಆಧುನಿಕ ಮೌಲ್ಯಗಳನ್ನು ತನ್ನದಾಗಿಸಿಕೊಳ್ಳಲು ಜನತೆ ನಡೆಸಿದ ಹೋರಾಟದ ಚರಿತ್ರೆ. ಆರ್. ಎಸ್. ಎಸ್.; ಎಂದೂ ಈ ಸಾಮಾಜಿಕ ವಿಮೋಚನೆಯ ಹೋರಾಟದ ಪರವಾಗಿ ಇರಲಿಲ್ಲ; ಅದು ಸಾಧ್ಯವೂ ಇರಲಿಲ್ಲ. ಈ ಹೋರಾಟಕ್ಕೆ ಒಂದು ಪ್ರತಿಕ್ರಿಯೆಯಾಗಿ, ದಿಗಿಲುಗೊಂಡ ಮೇಲುಜಾತಿ ಮತ್ತು ಮೇಲುವರ್ಗಗಳ ವಿರೋಧದ ಪ್ರತಿಕ್ರಿಯೆಯಾಗಿ ಹುಟ್ಟಿಕೊಂಡ ಸಂಘಟನೆ ಆರ್. ಎಸ್. ಎಸ್. ಕಾಂಗ್ರೆಸ್ ಮತ್ತು ಅದರ

ನಾಯಕ ಗಾಂಧೀಜಿಯವರ ಸಾಮಾಜಿಕ ದೃಷ್ಟಿಕೋನವನ್ನು ಆರ್.ಎಸ್.ಎಸ್. ಒಂದು ಸವಾಲಾಗಿಯೇ ಮೊದಲಿನಿಂದ ಪರಿಗಣಿಸಿತ್ತು. ಸ್ವಾತಂತ್ರ್ಯಪೂರ್ವದ ಕಾಂಗ್ರೆಸ್, ಆದರ್ಶದ ಮಟ್ಟದಲ್ಲಾದರೂ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳನ್ನು ಮೌಲ್ಯಗಳಾಗಿ ಸ್ವೀಕರಿಸಿತ್ತು. ಹಾಗಾಗಿಯೇ ಕಾಂಗ್ರೆಸ್‌ಗೆ, ಒಂದು ನಿಟ್ಟಿನಲ್ಲಿ ದಲಿತರ ನಾಯಕ ಅಂಬೇಡ್ಕರ್ ಜೊತೆ; ಇನ್ನೊಂದು ನಿಟ್ಟಿನಲ್ಲಿ ಎಡಪಂಥೀಯರ ಜೊತೆ ಸಂವಾದ, ಜಗಳ, ಸಂಧಾನಗಳ ಸಂಬಂಧ ಸಾಧ್ಯವಿತ್ತು. ಆದರೆ ಆರ್.ಎಸ್.ಎಸ್. ಗೂ ಕಾಂಗ್ರೆಸ್‌ಗೂ ನಡುವೆ ಇಂತಹ ವೈಚಾರಿಕ ಮುಖಾಮುಖಿಗೆ ಒಂದು ಸಮಾನ ನೆಲೆಯೇ ಇರಲಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಆರ್.ಎಸ್.ಎಸ್. ಯಾಕೆ ಬ್ರಿಟಿಷರ ಜೊತೆ ಕೈಜೋಡಿಸಿತು ಎಂಬುದಕ್ಕೆ ಕಾರಣ ಇಲ್ಲಿದೆ.

ಕಾಂಗ್ರೆಸ್ ನಾಯಕತ್ವದ ಸ್ವಾತಂತ್ರ್ಯ ಚಳುವಳಿಗೆ ಸಾಮಾಜಿಕ ಬದಲಾವಣೆ ಮತ್ತು ರಾಜಕೀಯ ಅಧಿಕಾರ- ಈ ಎರಡು ಉದ್ದೇಶಗಳು ಇದ್ದುದರಿಂದ, ಅದು ಜನತೆಯ ಮುಂದೆ ಭಾರತ ದೇಶದ ಒಂದು ಹೊಸ ಕಲ್ಪನೆಯನ್ನು ಅಥವಾ ಐಜಾಜ್ ಅಹ್ಮದ್ ಅವರ ಮಾತಿನಲ್ಲಿ ಹೇಳುವುದಾದರೆ, "The Idea of India" ವನ್ನು ಇಡುವುದು ಸಾಧ್ಯವಾಯಿತು. ದೇಶದ ಎಲ್ಲ ಪ್ರಜೆಗಳಿಗೂ, ಜಾತಿ ಮತ ಧರ್ಮ ಮತ್ತು ಲಿಂಗ ಭೇದಗಳನ್ನು ಪರಿಗಣಿಸದೆ ಸಮಾನ ಹಕ್ಕು ಮತ್ತು ಸ್ವಾತಂತ್ರ್ಯಗಳು ಇರುವ, ಸರಕಾರದ ನಿರ್ವಹಣೆಯಲ್ಲಿ ಕಾನೂನಿನ ಆಳ್ವಿಕೆ, ಧರ್ಮನಿರಪೇಕ್ಷತೆ ಮತ್ತು ಪ್ರಜಾಪ್ರಭುತ್ವಗಳನ್ನು ಅಳವಡಿಸಿಕೊಂಡಿರುವ ಒಂದು ಹೊಸ ಭಾರತದ ಕಲ್ಪನೆ ಅದು. ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವದ ಆದರ್ಶಗಳ ಹಾಗೆಯೇ, ಭಾರತದ ಈ ಕಲ್ಪನೆ ಕೂಡ ಸಂಪೂರ್ಣವಾಗಿ ಆಧುನಿಕವಾದದ್ದು. ಪರಂಪರಾಗತ ಭಾರತವನ್ನು ವರ್ಣಿಸುವ ''ಜಂಬೂದ್ವೀಪೇ ಭರತ ಖಂಡೇ'' ಎಂಬ ಮಾತಾಗಲೀ, ''ಆಸೇತು ಹಿಮಾಚಲ'' ಎಂಬ ನುಡಿಗಟ್ಟಾಗಲೀ, ಭಾರತ ಎಂಬ **ರಾಷ್ಟ್ರದ** ಕಲ್ಪನೆಯನ್ನು ಒಳಗೊಂಡಿಲ್ಲ. ಈ ದೇಶದ ಬಹುಸಂಖ್ಯಾಕ ಹಿಂದುಗಳ ಪವಿತ್ರ ಕ್ಷೇತ್ರಗಳು ಉತ್ತರದ ಬದರಿ ಕೇದಾರಗಳಿಂದ ಹಿಡಿದು ದಕ್ಷಿಣದ ರಾಮೇಶ್ವರದವರೆಗೆ ಹರಡಿ ಕೊಂಡಿವೆ ಎಂಬುದು ಕೂಡ ಆಧುನಿಕ ರಾಷ್ಟ್ರವೊಂದರ ತಳಹದಿ ಆಗಲಾರದು. ವ್ಯಾಟಿಕನ್ ಮತ್ತು ಜೆರೂಸಲೆಂಗಳನ್ನು ಪವಿತ್ರ ಕ್ಷೇತ್ರಗಳು ಎಂದು ಭಾವಿಸುವ ಕ್ರಿಶ್ಚಿಯನ್ನರು, ಜಗತ್ತಿನ ನೂರಾರು ದೇಶಗಳಲ್ಲಿ ಹರಿದು ಹಂಚಿಹೋಗಿದ್ದಾರೆ. ಮೆಕ್ಕಾ-ಮದೀನಾಗಳನ್ನು ಪವಿತ್ರ ಎಂದು ಭಾವಿಸುವ ಮುಸ್ಲಿಮರು, ಭೌಗೋಳಿಕವಾಗಿ ಒಂದೇ ಘಟಕವಾಗಿರುವ ಮಧ್ಯ ಪ್ರಾಚ್ಯದಲ್ಲಿಯೇ ಹಲವು ರಾಷ್ಟ್ರಗಳ ಪ್ರಜೆಗಳಾಗಿದ್ದಾರೆ. ಹಿಂದುಗಳ ಪವಿತ್ರ ವಲಯವಾಗಿ (sacred geography) ಭಾರತ ಒಂದು ಪ್ರಾಚೀನ ರಾಷ್ಟ್ರವಾದರೂ - ಆರ್.ಎಸ್.ಎಸ್.ನ ಸಿದ್ಧಾಂತಕ್ಕೆ ಇದು ಮೂಲಾಧಾರವಾಗಿರುವಂತಹದ್ದು - ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವದ ಆದರ್ಶಗಳನ್ನು ಹೊಂದಿರುವ ಒಂದು ಪ್ರಜಾಪ್ರಭುತ್ವವಾಗಿ ಭಾರತ ಒಂದು ಆಧುನಿಕ ರಾಷ್ಟ್ರ ಮತ್ತು ಒಂದು ಆಧುನಿಕ ವಿಚಾರ. ನಾವು ಐದು ಸಾವಿರ ವರ್ಷಗಳ ಭಾರತದ ಸಂಸ್ಕೃತಿಯ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳಬಹುದು; ಸಿಂಧೂ ನದಿ ಕೊಳ್ಳದ ಮುದ್ರೆಗಳ ಭಾಷೆ ವೇದಪೂರ್ವದ ಸಂಸ್ಕೃತ ಎಂದು ಸಹ ವಾದಿಸಬಹುದು. ಹೀಗೆ ವಾದಿಸುವುದು ಈಗ ಕೆಲವು ವಲಯಗಳಲ್ಲಿ ಪಾಂಡಿತ್ಯ ಮಾತ್ರವಲ್ಲ ದೇಶಭಕ್ತಿ ಸಹ. ಆದರೆ ಇಷ್ಟು ದೀರ್ಘಕಾಲದ ಭಾರತದ ಚರಿತ್ರೆಯಲ್ಲಿ ಎಂದಾದರೂ ಜಾತಿ ಜಾತಿಗಳ ನಡುವೆ ಸಮಾನತೆ ಮತ್ತು ಸ್ತ್ರೀ ಪುರುಷರ ಸಮಾನತೆಗಳನ್ನು ಆದರ್ಶವಾಗಿ ಸ್ವೀಕರಿಸಿದ್ದಿದೆಯೆ ? ಕ್ರಿ.ಪೂ ೫ ನೆಯ ಶತಮಾನದಲ್ಲಿ ಬುದ್ಧ ಮತ್ತು ಕ್ರಿ.ಶ. ೧೨ನೆಯ ಶತಮಾನದಲ್ಲಿ ಕರ್ನಾಟಕದ ವಚನಕಾರರನ್ನು ಬಿಟ್ಟರೆ, ಸಮಾನತೆಯನ್ನು ಒಂದು ಆದರ್ಶವಾಗಿ ಸಹ ಈ ದೇಶದ ಪ್ರತಿಷ್ಠಿತ ವರ್ಗಗಳು ಪರಿಗಣಿಸಿರಲಿಲ್ಲ.

ಆದರೆ ಅಧಿಕಾರವನ್ನು ಇಡಿಯಾಗಿ ತನ್ನದಾಗಿಸಿ ಕೊಳ್ಳುವ ಹಿಂದುತ್ವದ ಮಹತ್ವಾಕಾಂಕ್ಷೆಗೆ ಈಗ ದೊಡ್ಡ ತೊಡಕಾಗಿರುವುದು ಈ ದೇಶದ ಪ್ರಜಾಪ್ರಭುತ್ವ ಮತ್ತು ಅದರ ಸಂಸ್ಥೆಗಳು. ನಮ್ಮ ಪ್ರಜಾಪ್ರಭುತ್ವ ದೇಶದ ಎಲ್ಲ ಪ್ರಜೆಗಳನ್ನೂ, ಅವರ ಜಾತಿ ಮತ ಭಾಷೆಗಳು ಯಾವುದೇ ಇರಲಿ, ಸಮಾನರು ಎಂದು ಪರಿಗಣಿಸುತ್ತದೆ. ಅದೇ ವೇಳೆಗೆ ಅದು ದೇಶದ ಎಲ್ಲ ಪ್ರಜೆಗಳಿಗೂ ತಮ್ಮ ತಮ್ಮ ಮತಧರ್ಮಗಳನ್ನು ಅನುಸರಿಸುವ ಸ್ವಾತಂತ್ರ್ಯವನ್ನೂ ಕೊಟ್ಟಿದೆ. ಈ ದೇಶದ ಸಂವಿಧಾನ, ದೇಶದ ಪ್ರಜೆಗಳಲ್ಲಿ ಸ್ವಕೀಯರು ಮತ್ತು ಪರಕೀಯರು ಎಂಬ ಭೇದ ಕಲ್ಪಿಸುವುದಿಲ್ಲ. ಆದರೆ ಹಿಂದುತ್ವ, ಈ ದೇಶದ ಹಿಂದುಗಳು ಮಾತ್ರ ಇಲ್ಲಿ ಹಕ್ಕಿನಿಂದ ಪ್ರಜೆಗಳು; ಉಳಿದ ಮತಧರ್ಮಗಳವರು - ಮುಖ್ಯವಾಗಿ ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು – ಹಿಂದು ಸಂಸ್ಕೃತಿಗೆ ತಲೆಬಾಗಿದರೆ ಮಾತ್ರ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬಹುದು ಎಂದು ಪ್ರತಿಪಾದಿಸುತ್ತದೆ. ಹಿಂದುತ್ವದ ಸಿದ್ಧಾಂತ ಮತ್ತು ಅದರ ರಾಜಕೀಯ ಕಾರ್ಯಕ್ರಮ – ಎರಡೂ ಈ ಪ್ರತಿಪಾದನೆಗೆ ಅನುಗುಣವಾಗಿಯೇ ಇದೆ. ಪರಧರ್ಮಗಳ ಬಗ್ಗೆ ಹಿಂದುಗಳಲ್ಲಿ ಭಯ ಭೀತಿಯ ಭಾವನೆಯನ್ನು ಕೆರಳಿಸಿ, ಅವರನ್ನು ಒಂದುಗೂಡಿಸುವುದು ಹಿಂದುತ್ವದ ಕಾರ್ಯತಂತ್ರ. ಈ ತಂತ್ರದಲ್ಲಿ ಅವರು ಸಾಕಷ್ಟು ಯಶಸ್ವಿಯಾಗಿದ್ದರೂ, ಅವರು ಬಯಸುವ ಆಕ್ರಮಣಶೀಲ ಒಗ್ಗಟ್ಟನ್ನು ಹಿಂದುಗಳಲ್ಲಿ ಮೂಡಿಸುವುದರಲ್ಲಿ ಅವರು ಪೂರ್ಣ ಸಫಲರಾಗಿಲ್ಲ. ಚುನಾವಣೆಗಳಲ್ಲಿ ಬಿ.ಜೆ.ಪಿ. ಶೇಕಡಾ ೩೦ಕ್ಕಿಂತ ಜಾಸ್ತಿ ಮತಗಳನ್ನು ಇದುವರೆಗೆ ಗಳಿಸಿಲ್ಲ. ಹಿಂದುಗಳಲ್ಲಿಯೇ ಬಹುಸಂಖ್ಯಾತರು ಈಗಲೂ ಬಿ.ಜೆ.ಪಿ. ಪರವಾಗಿಲ್ಲ. ಪ್ರಜಾಸತ್ತಾತ್ಮಕ ವಿಧಾನಗಳಲ್ಲಿಯೇ ಬಿ.ಜೆ.ಪಿ. ಅಧಿಕಾರಕ್ಕೇರಿದ್ದರೂ, ಅದು ಬೇರೆಯವರೊಡನೆ ಅಧಿಕಾರ ಹಂಚಿಕೊಳ್ಳುವುದು ಅನಿವಾರ್ಯವಾಗಿದೆ. ಪ್ರಜಾಪ್ರಭುತ್ವದ ಆಟದ ನಿಯಮಗಳು ಅವರ ಪರವಾಗಿಲ್ಲ. ಹಾಗಾಗಿ ಅವರು ಈಗ ನಿಯಮಗಳನ್ನೇ ಬದಲಾಯಿಸಹೊರಟಿದ್ದಾರೆ. ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಮೊಟಕು ಗೊಳಿಸಿದರೆ ಮಾತ್ರ ಅವರು ಅಧಿಕಾರವನ್ನು ಇಡಿಯಾಗಿ ವಶಪಡಿಸಿಕೊಳ್ಳಲು ಸಾಧ್ಯವಾಗುತ್ತದೆ.

ಆದರೆ ಹಿಂದುತ್ವದ ಹಾದಿಯಲ್ಲಿ ತೊಡಕಾಗಿರುವವರು ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು ಮಾತ್ರವಲ್ಲ, ಸಂಘಟಿತ ಕಾರ್ಮಿಕರನ್ನು ಅದು ನಿವಾರಿಸಿಕೊಳ್ಳ ಬೇಕಾಗಿದೆ. ಈ ದೇಶದ ಅರ್ಥ ವ್ಯವಸ್ಥೆ, ಶಿಕ್ಷಣ, ಸಂಸ್ಕೃತಿ, ಮಾಧ್ಯಮ, ಮನರಂಜನೆ - ಎಲ್ಲದರ ಮೇಲೂ ಅಂತರರಾಷ್ಟ್ರೀಯ ಬಂಡವಾಳದ ಹಿಡಿತ ಬಿಗಿಯಾಗುತ್ತಿರುವ ಕಾಲಘಟ್ಟದಲ್ಲಿ ಬಿ.ಜೆ.ಪಿ. ಅಧಿಕಾರಕ್ಕೇರಿದೆ. ಆ ಪಕ್ಷ ಸೈದ್ಧಾಂತಿಕವಾಗಿ ಸಹ ಯಾವತ್ತೂ ಅಂತರರಾಷ್ಟ್ರೀಯ ಬಂಡವಾಳವನ್ನು ವಿರೋಧಿಸಿಲ್ಲ; ಅದು ಅಂತರರಾಷ್ಟ್ರೀಯ ಬಂಡವಾಳ ಶಾಹಿಯೊಡನೆ ಶಾಮೀಲಾಗಿದೆ. ಅಮೇರಿಕದ ಕೆಳಹಂತದ ಅಧಿಕಾರಿಗಳ ಎದುರು ಕೂಡ ಬೆನ್ನುಬಗ್ಗಿಸಿ, ಹಲ್ಲು ಕಿರಿದು ನಿಲ್ಲುವುದಕ್ಕೆ ಬಿ.ಜೆ.ಪಿ. ನಾಯಕರಿಗೆ ಶ್ರಮವೇನೂ ಆಗುವುದಿಲ್ಲ. ಅದು ಅವರ ಸಹಜ ಸ್ವಭಾವ. ಈ ದೇಶದ ಕೈಗಾರಿಕಾ ಕ್ಷೇತ್ರ ಮತ್ತು ಮಾರುಕಟ್ಟೆಗಳನ್ನು ಅಂತರರಾಷ್ಟ್ರೀಯ ಬಂಡವಾಳಶಾಹಿಗೆ ತೆರವು ಮಾಡಿಕೊಡುವ ಜವಾಬ್ದಾರಿಯನ್ನು ಈಗ ಬಿ.ಜೆ.ಪಿ. ಕಾಂಗ್ರೆಸ್ಸಿನಿಂದ ವಹಿಸಿಕೊಂಡಿದೆ. ಆದರೆ ೧೯೯೧ರಲ್ಲಿ ಕಾಂಗ್ರೆಸ್‌ನ ಪಿ. ವಿ. ನರಸಿಂಹರಾವ್ ಮಂತ್ರಿಮಂಡಲ ದಲ್ಲಿ ಅರ್ಥಮಂತ್ರಿಯಾಗಿದ್ದ ಮನಮೋಹನ್ ಸಿಂಗ್ ಜಾರಿಗೆ ತಂದ ಖಾಸಗೀಕರಣ ಮತ್ತು ಜಾಗತೀಕರಣದ ಕಾರ್ಯಕ್ರಮವನ್ನು ಬಿ.ಜೆ.ಪಿ. ಮುಂದುವರಿಸಿಕೊಂಡು ಹೋಗಬೇಕಾದರೆ, ಅದು ಕಾರ್ಮಿಕರು ಮತ್ತು ರೈತರ ಹೋರಾಟದ ಹಕ್ಕುಗಳನ್ನು ದಮನಿಸಲೇಬೇಕಾಗುತ್ತದೆ. ಆದರೆ ಈ ಬಗ್ಗೆಯೂ ಬಿ.ಜೆ.ಪಿ.ಗೆ ಸೈದ್ಧಾಂತಿಕ ವಿರೋಧವೇನೂ ಇಲ್ಲ. ದುಡಿಯುವ ಜನತೆಯ ಸಂಘಟನೆಗಳನ್ನು ಬಿ.ಜೆ.ಪಿ. ಮೊದಲಿನಿಂದಲೂ 'ದೇಶ ದ್ರೋಹಿಗಳ ಅಕ್ರಮ ಕೂಟ' ಎಂದೇ ಭಾವಿಸಿದೆ. ಹೀಗಾಗಿ ಬಂಡವಾಳಶಾಹಿ ಶಕ್ತಿಗಳಿಗೆ ಮತ್ತು ಅಮೇರಿಕದ ಸಾಮ್ರಾಜ್ಯಶಾಹಿಗೆ ಭಾರತದಲ್ಲಿ ಕಾಂಗ್ರೆಸ್‌ಗಿಂತ ಬಿ.ಜೆ.ಪಿ.ಯೇ ಹೆಚ್ಚು ವಿಶ್ವಾಸಾರ್ಹ ಮಿತ್ರನಾಗಿದೆ.

ಕಳೆದ ೫೦ ವರ್ಷಗಳ ದೇಶದ ರಾಜಕೀಯದಲ್ಲಿ - ಜನಸಂಘ [illegible] ಸ್ವತಂತ್ರವಾಗಿ ಕಳೆದ [illegible]

> ಸೂರ್ಯ ಒಂದು ಗ್ರಹವಲ್ಲ, ನಕ್ಷತ್ರ. ಆಕಾಶಕಾಯಗಳಿಂದ ಉತ್ಪನ್ನವಾಗುವ ಬೆಳಕು ವ್ಯೋಮದಲ್ಲಿ ಹಾದು ಭೂಮಿಗೆ ಬರಲು ಸಾಕಷ್ಟು ಸಮಯ ತಗಲುತ್ತದೆ. ಮಗುವೊಂದು ಭೂಮಿಯಲ್ಲಿ ಜನಿಸಿದಾಗ ಗ್ರಹತಾರೆಗಳ ಸ್ಥಾನ, ರಾಶಿ ಏನಿದ್ದರೂ ವ್ಯಕ್ತಿನಿಷ್ಠ, ವಸ್ತುನಿಷ್ಠವಲ್ಲ.
>
> *- ಡಾ|| ಕೋವೂರ್*

ಎಂದು ಹೀಗಳೆದ ಕಾಲಾವಧಿಯ ರಾಜಕೀಯವನ್ನು - ಒಟ್ಟಂದದಲ್ಲಿ ಗಮನಿಸಿದಾಗ, ಬಿ.ಜೆ.ಪಿ. ಕಾಂಗ್ರೆಸ್ ಸರಕಾರದ ಕೆಲವು ಧೋರಣೆಗಳನ್ನು ಕಾಂಗ್ರೆಸ್‌ಗಿಂತ ಹೆಚ್ಚು ಉಮೇದಿನಲ್ಲಿ ಮುಂದುವರಿಸಿಕೊಂಡು ಹೋಗಿರುವುದು ಮತ್ತು ಕಾಂಗ್ರೆಸ್ ಪಕ್ಷದ ಕೆಲವು ಆದರ್ಶಗಳನ್ನು ತುಳಿದುಹಾಕಿರುವುದನ್ನು ಕಾಣಬಹುದು. ಕಾಂಗ್ರೆಸ್‌ನ ಮನಮೋಹನ್ ಸಿಂಗ್ ರೂಪಿಸಿದ ಆರ್ಥಿಕ ಧೋರಣೆಗಳನ್ನು ಬಿ.ಜೆ.ಪಿ.ಯ ಯಶವಂತ ಸಿನ್ಹ ಈಗ ಮುಂದುವರಿಸಿಕೊಂಡು ಜೋರಾಗಿ ಹೋಗುತ್ತಿದ್ದಾರೆ. ಮನಮೋಹನ್ ಸಿಂಗ್‌ರ ಖಾಸಗೀಕರಣ ಮತ್ತು ಜಾಗತೀಕರಣಗಳ ಉತ್ಸಾಹಕ್ಕೆ ಕಡಿವಾಣ ಹಾಕಲು ಕಾಂಗ್ರೆಸ್ ಪಕ್ಷದೊಳಗೆ ಕೆಲವರಾದರೂ ಇದ್ದರು. ಯಶವಂತ ಸಿನ್ಹರಿಗೆ ಅಂತಹ ತೊಡಕು ಯಾವುದೂ ಇಲ್ಲ. ಅವರ ಪಕ್ಷದ ಒಂದು ಸಂಘಟನೆ ಸ್ವದೇಶಿ ಜಾಗರಣ ಮಂಚ್ ಜಾಗತೀಕರಣದ ವಿರುದ್ಧ ಕೊಡುತ್ತಿರುವ ಹೇಳಿಕೆಗಳು, ಪ್ರದರ್ಶನಗಳು ಆಟಕ್ಕುಂಟು, ಲೆಕ್ಕಕ್ಕಿಲ್ಲ. ಸಮಾಜವಾದದ ಘೋಷಣೆ ಕೂಗುತ್ತಲೇ ಕಮ್ಯುನಿಸ್ಟರನ್ನು ತುಳಿದುಹಾಕಲು ಕಾಂಗ್ರೆಸ್ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಕೇರಳ ಮತ್ತು ಪ. ಬಂಗಾಳಗಳಲ್ಲಿ ಕಮ್ಯುನಿಸ್ಟರ ನಾಯಕತ್ವದ ಎಡರಂಗ ಸರಕಾರಗಳನ್ನು ಪ್ರಜಾಸತ್ತೆಯ ನಿಯಮಗಳನ್ನೆಲ್ಲ ಧಿಕ್ಕರಿಸಿ ಕಾಂಗ್ರೆಸ್ ಹಿಂದೆ ಅನೇಕ ಬಾರಿ ವಜಾಗೊಳಿಸಿದೆ. ಈ ಎರಡು ರಾಜ್ಯಗಳ ಈಗಿನ ಎಡರಂಗ ಸರಕಾರಗಳ ಬಗ್ಗೆ ಬಿ.ಜೆ.ಪಿ. ಅನುಸರಿಸುತ್ತಿರುವ ಧೋರಣೆ ಕೂಡ ಅದೇ. ಈ ಸರಕಾರಗಳನ್ನು ವಜಾಗೊಳಿಸಲು ಅದು ಕೂಡ ತುದಿಗಾಲಿನ ಮೇಲೆ ನಿಂತಿದೆ. ಒಟ್ಟಿನಲ್ಲಿ ದುಡಿಯುವ ಜನರ ರಾಜಕೀಯದ ದಮನ ಮತ್ತು ಬಂಡವಾಳ ಶಾಹಿಯ ತುಷ್ಟೀಕರಣ - ಪರಸ್ಪರ ಸಂಬಂಧವಿರುವ ಈ ಎರಡು ಧೋರಣೆಗಳಲ್ಲಿ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ನಾಯಕತ್ವದ ಸರಕಾರಗಳ ನಡುವೆ ಒಂದು ಸಾತತ್ಯವಿದೆ.

೧೯೪೭ರ ನಂತರ ದೇಶದಲ್ಲಿ ನೆಲೆಗೊಂಡ ಪ್ರಜಾಪ್ರಭುತ್ವ, ದೇಶದ ಜನರಿಗೆ ಸಂವಿಧಾನ ಕೊಡಮಾಡಿದ ಹಕ್ಕುಗಳು, ಕಾನೂನಿನ ಆಳ್ವಿಕೆ, ಧರ್ಮ ನಿರಪೇಕ್ಷತೆ ಮುಂತಾದವು ಈಗ ಆಳುವ ಪಕ್ಷಕ್ಕೆ ಅಪಥ್ಯವಾಗಿವೆ. ಪ್ರಜಾಪ್ರಭುತ್ವದ ಈ ಚೌಕಟ್ಟನ್ನು ಇರಿಸಿಕೊಂಡು ತಮ್ಮ ಕನಸಿನ ಹಿಂದುಸ್ತಾನವನ್ನು - ಪ್ರಜೆಗಳಾಗಿ ಹಿಂದುಗಳಿಗೆ ಮಾತ್ರ ಹಕ್ಕುಗಳಿರುವ, ಆದರೆ ಜಾಗತಿಕ ಬಂಡವಾಳಶಾಹಿಗೆ ದೇಶದ ಮಾರುಕಟ್ಟೆಯ ಒಳಗೆ ಮುಕ್ತ ಪ್ರವೇಶವಿರುವ ಹಿಂದುಸ್ತಾನವನ್ನು - ಕಟ್ಟಲು ಅಸಾಧ್ಯ ಎಂದು ಬಿ.ಜೆ.ಪಿ.ಗೆ ಮಾತ್ರವಲ್ಲ, ಈ ದೇಶದ ಆಳುವ ವರ್ಗಕ್ಕೆ ಸಹ ಮನವರಿಕೆಯಾಗಿದೆ. ಶ್ರೀಮತಿ ಇಂದಿರಾ ಗಾಂಧಿಯವರ ಕಾಲದಲ್ಲೇ ಜನತೆಯ ಹಕ್ಕುಗಳ ಬಗ್ಗೆ ಅಸಹನೆ, ಆಳುವವರಲ್ಲಿ ಕಾಣಿಸಿಕೊಳ್ಳತೊಡಗಿತ್ತು. ರೈಲ್ವೇ ಮುಷ್ಕರದ ದಮನ, ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟರ ಮೇಲೆ ಹಲ್ಲೆ ಮತ್ತು ಇಂದಿರಾಗಾಂಧಿ ಜಾರಿಗೊಳಿಸಿದ ತುರ್ತು ಪರಿಸ್ಥಿತಿಗಳಲ್ಲಿ ಈ ಅಸಹನೆ ವ್ಯಕ್ತವಾಗಿತ್ತು. ಅಂದರೆ ಕಾಂಗ್ರೆಸ್ ಪಕ್ಷವೇ ಸ್ವಾತಂತ್ರ್ಯ ಪೂರ್ವದ ತನ್ನ ಧ್ಯೇಯ ಆದರ್ಶಗಳಿಂದ ದೂರ ಸರಿದಿತ್ತು. ೧೯೪೭ರ ಮೊದಲ ಕಾಂಗ್ರೆಸ್ ಪಕ್ಷವನ್ನು ೧೯೪೭ರ ನಂತರದ ಅಧಿಕಾರಾರೂಢ ಕಾಂಗ್ರೆಸ್ ಜೊತೆ ಜೋಡಿಸುವ ತತ್ವಗಳ ಕೊಂಡಿ ಇಂದಿರಾ ಗಾಂಧಿಯವರ ಕಾಲದಲ್ಲೇ ಕಳಚಿಬಿದ್ದಿತ್ತು; ಧೋರಣೆಗಳ ಸಾತತ್ಯವೂ ಮುರಿದುಬಿದ್ದಿತ್ತು. ಬಿ.ಜೆ.ಪಿ. ಈಗ ಕಾಂಗ್ರೆಸ್‌ನ ಧೋರಣೆಗಳ ಗುಣಾತ್ಮಕ ಅಂಶಗಳನ್ನು ಮಾತ್ರವಲ್ಲ, ನಮ್ಮ ಪ್ರಜಾಪ್ರಭುತ್ವದ ಸ್ವರೂಪವನ್ನೇ ನಾಶಪಡಿಸಲು ಹೊರಟಿದೆ. ಕಾಂಗ್ರೆಸ್‌ಗೆ ಈ ಬಗ್ಗೆ ವಿಶೇಷವಾದ ಆತಂಕವೇನೂ ಇರುವ ಹಾಗೆ ಕಾಣಿಸುತ್ತಿಲ್ಲ. ಹಾಗಾಗಿ ಸ್ವಾತಂತ್ರ್ಯ ಚಳುವಳಿಯ ಆದರ್ಶಗಳನ್ನು ಮತ್ತು ಅದು ಒಳಗೊಂಡ ರಾಷ್ಟ್ರದ ಕಲ್ಪನೆಯನ್ನು ರಕ್ಷಿಸುವ ಜವಾಬ್ದಾರಿ ಈಗ ಎಡಪಕ್ಷಗಳದ್ದಾಗಿದೆ. ರಷ್ಯದಲ್ಲಿ ಕಮ್ಯುನಿಸ್ಟ್ ಆಳ್ವಿಕೆ ಕೊನೆಗೊಂಡದ್ದರಿಂದ ಭಾರತದಲ್ಲೂ ಕಮ್ಯುನಿಸ್ಟರ ಕತೆ ಮುಗಿಯಿತು, ಅವರಿಗೆ ಇಲ್ಲಿ ಇನ್ನೇನೂ ಕೆಲಸವಿಲ್ಲವೆಂದು ಈಗ ನಮ್ಮ ಮಾಧ್ಯಮಗಳು ಪ್ರಚಾರ ಮಾಡುತ್ತಿವೆ. ಫ್ಯಾಸಿಸ್ಟ್ ಶಕ್ತಿಗಳ ಜೊತೆ ಕೈಜೋಡಿಸಿರುವ ಬಂಡವಾಳಶಾಹಿಯ ವಿರುದ್ಧ ಜನ ಯಾವ ಹೋರಾಟವನ್ನೂ ಮಾಡದೆ ತಮ್ಮ ಕಷ್ಟಗಳನ್ನು ಮೌನವಾಗಿ ಅನುಭವಿಸಬೇಕು ಎನ್ನುವುದು ಈ ಮಾಧ್ಯಮಗಳ ಅಪೇಕ್ಷೆಯಾಗಿದೆ. ಪಂದ್ಯದಲ್ಲಿ ಒಂದು ತಂಡ ಆಟದ ಕಣಕ್ಕೆ ಬಾರದೆ ಇನ್ನೊಂದು ತಂಡಕ್ಕೆ 'ವಾಕ್ ಓವರ್' ಕೊಡುವಂತೆ, ಬಿ.ಜೆ.ಪಿ.ಗೆ ಈ ದೇಶದ ಪ್ರಭುತ್ವವನ್ನು ಬಿಟ್ಟುಕೊಡಬೇಕು ಎಂಬುದು ಇವರ ನಿಜವಾದ ಇಂಗಿತ. ಎಡ ಪಕ್ಷಗಳು ಇರುವವರೆಗೆ ಬಿ.ಜೆ.ಪಿ.ಗೆ ಇಂತಹ ವಾಕ್ ಓವರ್ ಸಿಗುವುದಿಲ್ಲ.

ಜಿ. ರಾಜಶೇಖರ
ಎಲ್.ಐ.ಸಿ. ಆಫ್ ಇಂಡಿಯಾ, ಡಿವಿಜನಲ್ ಆಫೀಸ್
'ಜೀವನ ಕೃಷ್ಣ', ಅಜ್ಜರಕಾಡು, ಉಡುಪಿ - ೫೭೬ ೧೦೧



# ಮಳೆಯ ಬೇಸಾಯದಲ್ಲಿ ಪ್ರಗತಿ ಸಾಧ್ಯವೇ ?

**ಡಾ|| ಆರ್. ದ್ವಾರಕೀನಾಥ್**

**ಕ**ರ್ನಾಟಕ ರಾಜ್ಯವು ಒಂದು ಮೇಡು ಭೂಮಿ. ದಕ್ಷಿಣ ಭಾರತದ ಪ್ರಸ್ಥಭೂಮಿಯಲ್ಲಿ ಪಶ್ಚಿಮ ಭಾಗಕ್ಕೆ ಇದ್ದು, ಇದರ ಪೂರ್ವ ರಾಜ್ಯಗಳಿಗಿಂತ ಎತ್ತರದ ಪ್ರದೇಶವಾಗಿದೆ. ಆದುದರಿಂದ ರಾಜ್ಯಕ್ಕೆ ಒದಗುವ ಬಹು ಭಾಗದ ಮಳೆಯ ನೀರು ಪೂರ್ವ ರಾಜ್ಯಗಳಿಗೆ ಹರಿದುಹೋಗುತ್ತದೆ. ಕರಾವಳಿ, ಪಶ್ಚಿಮಘಟ್ಟ ಮತ್ತು ಮಲೆನಾಡಿನಲ್ಲಿ ಸಾಕಷ್ಟು ಮಳೆಯಾದರೂ ಬಯಲು ಸೀಮೆಯಲ್ಲಿ ಮಳೆಯ ಕೊರತೆಯು ಹೆಚ್ಚಾಗಿದೆ. ಪರಿಣಾಮವಾಗಿ ಕರ್ನಾಟಕದಲ್ಲಿ ಸುಮಾರು ಶೇ. ೭೨ ರಷ್ಟು ಬೇಸಾಯದ ಭೂಮಿಯು ಮಳೆಯನ್ನೇ ಅವಲಂಬಿಸಿರುತ್ತದೆ.

ರಾಜ್ಯವನ್ನು ಮಣ್ಣು ಮತ್ತು ಹವಾಗುಣದ ಆಧಾರದ ಮೇಲೆ ಹತ್ತು ಕೃಷಿ ವಲಯಗಳನ್ನಾಗಿ ವಿಂಗಡಿಸಲಾಗಿದೆ. ಇದರಲ್ಲಿ ದೊಡ್ಡದಾದ ಐದು ವಲಯಗಳು; ಪ್ರಮುಖವಾಗಿ ಗುಲ್ಬರ್ಗ, ಬಿಜಾಪುರ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು, ಬೆಂಗಳೂರು, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳು ಈ ವಿಭಾಗಗಳಿಗೆ ಸೇರಿರುತ್ತವೆ. ಎಲ್ಲರಿಗೂ ತಿಳಿದಿರುವಂತೆ ರಾಜ್ಯದಲ್ಲಿ ಮಳೆಯ ಬೇಸಾಯವು ಹಸಿರುಕ್ರಾಂತಿ ಯಿಂದ ಹೆಚ್ಚು ಲಾಭವನ್ನು ಪಡೆಯಲಿಲ್ಲ. ಆದುದರಿಂದ, ಇಂದಿಗೂ ಮಳೆಯ ಬೇಸಾಯವು ಹಿಂದುಳಿದ ಬೇಸಾಯವೇ ಆಗಿದೆ. ಉತ್ಪಾದನೆಯ ಅನಿಶ್ಚಿತತೆ, ಆದಾಯದ ಕೊರತೆ, ನಿರುದ್ಯೋಗ ಮತ್ತು ಬಡತನ ಇವು ಈ ಪ್ರದೇಶಗಳಲ್ಲಿ ಎದ್ದು ಕಾಣುತ್ತವೆ. ಬೇಸಾಯವನ್ನೇ ಜೀವನಾಧಾರವಾಗಿವುಳ್ಳ ಗ್ರಾಮ ಕುಟುಂಬಗಳ ಏಳಿಗೆಯ ದೃಷ್ಟಿಯಿಂದ ಬೇಸಾಯವನ್ನು ಉತ್ತಮಪಡಿಸದೆ ಅನ್ಯಥಾ ಮಾರ್ಗವು ಇದುವರೆವಿಗೂ ಕಂಡಿಲ್ಲ.

**ಮಳೆಯ ಬೇಸಾಯವು ಹಿಂದುಳಿದಿರುವುದು ಏಕೆ ?**

ಮಳೆಯ ಬೇಸಾಯದಲ್ಲಿ ಬೆಳೆಯು ಕೆಡಲು ಕೆಲವು ಮೂಲ ಕಾರಣಗಳಿವೆ. ಮೊದಲನೆಯದು ಬಿತ್ತನೆಯಾದ ಮೇಲೆ ಮಳೆಯು ಹಿಂತೆಗೆದರೆ ಮಣ್ಣಿನಲ್ಲಿ ಉಂಟಾಗುವ ತೇವದ ಕೊರತೆ. ಇದರಿಂದ ಬೆಳೆಯು ಭಾಗಶಃ ಕೆಡಬಹುದು ಅಥವಾ ಪೂರ್ಣವಾಗಿ ನಾಶವಾಗಬಹುದು. ಈ ತೇವದ ಕೊರತೆಯು ಪದೇ ಪದೇ ಒದಗುವ ತೊಂದರೆ. ಎರಡನೆಯದು, ತೇವದ ಕೊರತೆ ಇಲ್ಲದಿದ್ದರೂ, ಭೂಮಿಯಲ್ಲಿ ಸಾಕಷ್ಟು ಸಸ್ಯಾಹಾರದ ಕೊರತೆಯಿಂದ ಬೆಳೆಯ ಇಳುವರಿಯು ಸಾಕಷ್ಟು ಬರದೆ ಇರುವುದು. ಇದರಿಂದಲೂ ಮಳೆಯ ಬೇಸಾಯವು ಸಾಕಷ್ಟು ಲಾಭದಾಯಕವಾಗಿ ಇರಲಾರದು. ಈ ಕೊರತೆಯು ಆಗಾಗ ಸಂಭವಿಸುತ್ತದೆ. ಮೂರನೆಯದಾಗಿ, ತೇವದ ಕೊರತೆಯಾಗಲೀ ಸಸ್ಯಾಹಾರದ ಕೊರತೆಯಾಗಲೀ ಇಲ್ಲದಿದ್ದಾಗ, ಅಂತಹ ಅವಕಾಶವನ್ನು ಯಶಸ್ವಿಯಾಗಿ ಉಪಯೋಗಿಸಿಕೊಳ್ಳಲು ಸಮರ್ಥವಲ್ಲದ ತಳಿಗಳ ಬಳಕೆ. ಹೀಗಾಗಿ, ಮಳೆಯ ಬೇಸಾಯದಲ್ಲಿ ಕಂಡುಬರುವ ಬಹುಮುಖ್ಯ ಅಡಚಣೆಗಳು ಅಂದರೆ ತೇವದ ಕೊರತೆ, ಸಸ್ಯಾಹಾರದ ಕೊರತೆ ಮತ್ತು ಉತ್ತಮ ತಳಿಗಳ ಕೊರತೆ. ಈ ಕೊರತೆಗಳನ್ನು ಸಮರ್ಥ ರೀತಿಯಲ್ಲಿ ಪರಿಹರಿಸಿಕೊಂಡ ಹೊರತು ಮಳೆಯ ಬೇಸಾಯದಲ್ಲಿ ಯಶಸ್ಸನ್ನು ಕಾಣುವುದು ಕಷ್ಟಸಾಧ್ಯ.

ಈ ಮೂರು ಕೊರತೆಗಳಲ್ಲಿ ಮಳೆಯ ಬೇಸಾಯದಲ್ಲಿ ಆಗಾಗ ಉಂಟಾಗುವ ತೇವದ ಕೊರತೆಯು ಬಹು ದೊಡ್ಡ ಸಮಸ್ಯೆ. ಇದನ್ನು ನಿರ್ವಹಿಸಿದರೆ ಈ ಬಗೆಯ ಬೇಸಾಯದಲ್ಲಿ ಒಂದು ಹೆಜ್ಜೆ ಮುಂದು ಹೋಗಲು ಸಾಧ್ಯವಾಗುತ್ತದೆ. ಬೇಸಾಯ ಭೂಮಿಯಲ್ಲಿ ತೇವದ ಕೊರತೆಯು ಉಂಟಾಗಲು ನಿಸರ್ಗ ಸಹಜ ಕಾರಣಗಳು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದದು ರೈತರ ಭೂ ಬಳಕೆಯ ಪದ್ಧತಿಗಳು (Land use practices). ಸಂಕ್ಷೇಪವಾಗಿ ಮಾನವ ನಿರ್ಮಿತ ಈ ಸನ್ನಿವೇಶಕ್ಕೆ ಮೂಲವಾದ ಅಂಶಗಳನ್ನು ನಾವು ಮನಗಾಣುವುದು ಅಗತ್ಯ.

ಸ್ವಾತಂತ್ರ್ಯದ ದಿನಗಳಲ್ಲಿ ಆಹಾರ ಕೊರತೆಯು ಪ್ರಮುಖವಾಗಿದ್ದು, ವ್ಯವಸಾಯ ಭೂಮಿಯನ್ನು ವಿಸ್ತರಿಸಬೇಕಾದ ಪ್ರಮೇಯವು ಒದಗಿಬಂತು. ಈ ಸಮಯದಲ್ಲಿ ಗಿಡಗಂಟಿಗಳನ್ನು ತೆಗೆದು, ಬೇಸಾಯಕ್ಕೆ ಅಷ್ಟೇನೂ ಯೋಗ್ಯವಲ್ಲದ ಭೂಮಿಯನ್ನು ಬಿತ್ತನೆ ಮಾಡಬೇಕಾಗಿ ಬಂದಿತು. ಹೀಗಾಗಿ, ಆಳವಿಲ್ಲದ, ಮಣ್ಣಿನ ಗುಣದಲ್ಲಿ ಕಡಿಮೆ ಇದ್ದ ಹಾಗೂ ನೀರನ್ನು ಸಂಗ್ರಹಿಸಿಕೊಳ್ಳುವ ಹೆಚ್ಚು ಶಕ್ತಿಯಿಲ್ಲದ ಭೂಮಿಯನ್ನು ವ್ಯವಸಾಯದಲ್ಲಿ ತೊಡಗಿಸಿಕೊಳ್ಳಬೇಕಾಯಿತು. ಈ ಭೂ ಭಾಗಗಳು ನೈಸರ್ಗಿಕವಾಗಿ ಆಳವಾದ ಬೇರನ್ನುಳ್ಳ ಮತ್ತು ನೀರನ್ನಾಗಲೀ, ಸಸ್ಯಾಹಾರವನ್ನಾಗಲೀ ಹೆಚ್ಚಿಗೆ ಬೇಡದ ಗಿಡಗಂಟೆಗಳಿಗೆ ಮಾತ್ರ ಸೂಕ್ತವಾದ ಭೂಮಿ. ನಾವು ಹಸಿರುಕ್ರಾಂತಿಯ ನಂತರ ನಮ್ಮ ಆಹಾರ ಉತ್ಪಾದನೆಯು ಸಾಕಷ್ಟು ಸಾಧನೆಯಾದ ಮೇಲೆ ಇಂತಹ ಭೂ ಭಾಗಗಳನ್ನು ಗಿಡಗಂಟೆಗಳಿಗೆ ಮರಳಿ ಕೊಡದೇ ಹೋದದ್ದು ನಮ್ಮ ಒಂದು ದೊಡ್ಡ ತಪ್ಪು.

ವ್ಯವಸಾಯವು ಚೆನ್ನಾಗಿರಬೇಕಾದರೆ, ಸುಸ್ಥಿರವಾಗಿರ ಬೇಕಾಗಿದ್ದರೆ, ಪರಿಸರದಲ್ಲಿ ಸಸ್ಯ ಕವಚದಿಂದ ಕೂಡಿದ ಭೂ ಭಾಗವು ಸಾಕಷ್ಟು ಇರಬೇಕು. ಜನಸಂಖ್ಯೆಯು ಬೆಳೆದಂತೆ ಭೂ-ಹೀನ ಗ್ರಾಮ ಸಂಸಾರಗಳು ಇಂತಹ ಭೂ ಭಾಗದಲ್ಲಿ ಇದ್ದ ಗಿಡಗಂಟೆಗಳನ್ನು ಮೇವಿಗಾಗಿ ಹಾಗೂ ಉರವಲುಗಾಗಿ ಮಿತಿಮೀರಿ ಬಳಸಿದ್ದಕ್ಕಾಗಿ ಬೇಸಾಯ ಭೂಮಿಯ ಪರಿಸರವು ಇಂದು ಬಹಳಷ್ಟು ಬಯಲಾಗಿದೆ, ಬರಡಾಗಿದೆ. ಇದರ ಮೊದಲನೆಯ ಪರಿಣಾಮ ಮಳೆಯ ಹೊಡೆತಕ್ಕೆ ಮತ್ತು ಗಾಳಿಯ ರಭಸಕ್ಕೆ ವ್ಯವಸಾಯ ಭೂಮಿಯ ಆದಿಯಾಗಿ ಎಲ್ಲಾ ಪ್ರದೇಶದಲ್ಲಿ ಮೇಲ್ಮಣ್ಣು ಕೊಚ್ಚಿ ಹೋಗುತ್ತದೆ. ಒಂದು ಅಂದಾಜಿನಂತೆ ಕಳೆದ ಐದು ದಶಕಗಳಲ್ಲಿ ಸುಮಾರು ೬ ರಿಂದ ೧೨ ಅಂಗುಲ ಮೇಲು ಮಣ್ಣನ್ನು ನಾವು ಈ ರೀತಿ ಕಳೆದುಕೊಂಡಿದ್ದೇವೆ.

ಇದಾದನಂತರ ಉಳಿದಿರುವ ಬೇಸಾಯ ಭೂಮಿಯಲ್ಲಿ ಮರಳಿನ ಅಂಶವೇ ಹೆಚ್ಚಾಗಿ ಮಣ್ಣಿನ ಆಳವು ಕಡಿಮೆಯಾಗಿ ನೀರನ್ನು ಸಂಗ್ರಹಿಸುವ ಶಕ್ತಿ ಹಾಗೂ ಸಸ್ಯಾಹಾರವನ್ನು ಒದಗಿಸುವ ಸಾಮರ್ಥ್ಯವು ಇಂತಹ ಭೂಮಿಯಲ್ಲಿ ಅರ್ಧಕ್ಕರ್ಧ ಕಡಿಮೆ ಯಾಗುತ್ತದೆ. ಮಳೆಯ ಆಶ್ರಯದಲ್ಲಿ ಬೆಳೆಗಳು ಕೆಡುವುದಕ್ಕೆ ಇದೊಂದು ಪ್ರಮುಖವಾದ ಕಾರಣ.

ಬೇಸಾಯ ಭೂಮಿಯ ಸುತ್ತಮುತ್ತ ಸಾಕಷ್ಟು ಸಸ್ಯ ಸಂಪತ್ತು ಇಲ್ಲದಿದ್ದಲ್ಲಿ ಬೇರೆ ರೀತಿಯಲ್ಲಿಯೂ ಬೆಳೆಭೂಮಿಗೆ ಆಘಾತವಾಗುತ್ತದೆ. ಪರಿಸರದಲ್ಲಿ ಸಸ್ಯ ಸಮೃದ್ಧಿಯು ಸಾಕಷ್ಟು ಇದ್ದಲ್ಲಿ ಗಾಳಿಯಲ್ಲಿ ತೇವಾಂಶವು ಹೆಚ್ಚಾಗಿರುತ್ತದೆ. ಇದರಿಂದ ಇದ್ದ ಬೆಳೆಗೂ [illegible] ಮತ್ತು ಭೂಮಿಯಲ್ಲಿ ಇರುವ ತೇವವು [illegible] ನಿಧಾನ. ಇದರಂತೆಯೇ ಪರಿಸರದಲ್ಲಿ ಸಸ್ಯ [illegible]

*ನಮ್ಮ ರಾಜ್ಯದ ಕೃಷಿ ನೀತಿಯನ್ನು ವಿಶ್ಲೇಷಣೆ ಮಾಡುತ್ತಾ ಒಬ್ಬ ತಜ್ಞರು ಒಮ್ಮೆ ಹೀಗೆಂದಿದ್ದರು: ಯಾವ ನೀತಿಯೂ ಇಲ್ಲದ್ದೇ ನಮ್ಮ ನೀತಿ. ಬಹುಶಃ ಈಚಿನ ದಶಕಗಳಿಗೆ ಈ ಮಾತು ಅನ್ವಯಿಸುವುದಿಲ್ಲ. ಜಾಗತೀಕರಣದ ಹಿನ್ನೆಲೆ ಯಲ್ಲಂತೂ ನಮ್ಮ ನೀತಿಯನ್ನು ವಿಶ್ವ ವ್ಯಾಪಾರ ಸಂಸ್ಥೆಯೇ ನಿಗದಿಗೊಳಿಸುತ್ತದೇನೋ ಎಂಬ ಶಂಕೆ ಇದೆ. ರಾಜ್ಯದ ಕೃಷಿ ನೀತಿಯನ್ನು ಸುಭದ್ರ ಅಡಿಪಾಯದ ಮೇಲೆ ರೂಪಿಸಲು ಶ್ರಮಿಸಿ ದವರಲ್ಲಿ ಡಾ|| ದ್ವಾರಕೀನಾಥ್ ಒಬ್ಬರು. ರಾಜ್ಯದ ಕೃಷಿ ನಿರ್ದೇಶಕರಾಗಿ ಮತ್ತು ಕೃಷಿ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ಅವರು ಈ ಕ್ಷೇತ್ರವನ್ನು ಚೆನ್ನಾಗಿ ತಿಳಿದಿದ್ದಾರೆ ಮತ್ತು ಹೇಗೆ ಉನ್ನತಮಟ್ಟಕ್ಕೇರಿಸಬಹು ದೆಂಬುದರ ಬಗ್ಗೆ ಸ್ಪಷ್ಟ ನಿಲುವನ್ನು ತಾಳಿದ್ದಾರೆ. ರಾಜ್ಯ ಸರ್ಕಾರವು ನೇಮಿಸಿರುವ ಕೃಷಿ ಆಯೋಗದ ಅಧ್ಯಕ್ಷರಾಗಿ ಈಗ ಅವರು ಕೃಷಿಯ ಮುನ್ನಡೆಗೆ ಯೋಜನೆಗಳನ್ನು ರೂಪಿಸುತ್ತಿದ್ದಾರೆ.*

ಸಾಕಷ್ಟು ಇದ್ದಾಗ ಗಾಳಿಯು ಬೀಸುವ ರಭಸವು ಹಾಗೂ ಬಿಸಿಲಿನ ಧಗೆಯು ಕಡಿಮೆಯಾಗಿ, ಬೇಸಾಯ ಭೂಮಿಯು ಶೀಘ್ರವಾಗಿ ಒಣಗುವುದಿಲ್ಲ. ಆದುದರಿಂದ ಇಂದು ಎಂಟು ಹತ್ತು ದಿನಗಳಲ್ಲಿ ಮಳೆಯು ಬಾರದಿದ್ದಲ್ಲಿ ಒಣಗಿಹೋಗುವ ಬೆಳೆಯು, ಈ ಹಿಂದೆ ಅಷ್ಟು ಬೇಗ ಒಣಗುತ್ತಿರಲಿಲ್ಲ. ಈ ರೀತಿಯಾಗಿ ಮಳೆಯ ಬೇಸಾಯದಲ್ಲಿ ಬೆಳೆಯ ಸುಸ್ಥಿರತೆಯು ಇಂದಿನ ದಿನಗಳಲ್ಲಿ ಬಹಳಷ್ಟು ಕಡಿಮೆ ಆಗುತ್ತಿದೆ.

ಮತ್ತೊಂದು ಮುಖ್ಯ ವಿಚಾರವೆಂದರೆ, ಮಣ್ಣಿನಲ್ಲಿ ಸಾವಯವ ಅಂಶವು ಹೆಚ್ಚಾಗಿದ್ದಲ್ಲಿ, ಭೂಮಿಯಲ್ಲಿ ನೀರಿನ ಸಂಗ್ರಹಣೆ ಮತ್ತು ನಿಧಾನವಾಗಿ ತೇವದ ಆರುವಿಕೆಯು ಸಾಧ್ಯವಾಗುತ್ತದೆ. ಆದರೆ, ಈಗಿನ ಸನ್ನಿವೇಶದಲ್ಲಿ, ಪರಿಸರದಲ್ಲಿ ಸಸ್ಯ ಸಮೃದ್ಧಿಯು ಕಡಿಮೆಯಾಗಿರುವುದರಿಂದಲೂ ಮತ್ತು ರೈತರು ದನದ ಗೊಬ್ಬರದ ಬಳಕೆಯನ್ನು ಕಡಿಮೆ ಮಾಡಿರುವುದರಿಂದಲೂ ಮಳೆಯ ಬೇಸಾಯದಲ್ಲಿ ಬೆಳೆಗಳು ಬೇಗ ಹಾಳಾಗುತ್ತವೆ. ಹಾಗೆಯೇ ಮಣ್ಣಿನಲ್ಲಿ ಸಾವಯವ ಅಂಶವು ಕಡಿಮೆಯಾದಲ್ಲಿ ಬೆಳೆಗಳಿಗೆ ಸಸ್ಯಾಹಾರದ ಒದಗಣೆಯು ಕಡಿಮೆಯಾಗುತ್ತದೆ. ಹೀಗಾಗಿ ಮಳೆಯ ಬೇಸಾಯವು ಅಸ್ಥಿರವಾಗಲು ಕಾರಣವಾಗುತ್ತದೆ.

ಇನ್ನು ಎರಡನೆಯ ಅಂಶವೆಂದರೆ, ಮಣ್ಣಿನಲ್ಲಿ ಬೆಳೆಗಳಿಗೆ ಬೇಕಾಗುವ ಆಹಾರಾಂಶವು ಸಾಕಷ್ಟು ಇಲ್ಲದೇ ಇರುವುದು. ಭೂಮಿಯ ಕೊಚ್ಚಣೆಯಿಂದ ಮೇಲ್ಮಣ್ಣು ಹರಿದು ಹೋಗುವುದು, ಉಳಿದ ಮಣ್ಣಿನಲ್ಲಿ ಸಾಕಷ್ಟು ಸಾವಯವ ಪದಾರ್ಥಗಳು ಇಲ್ಲದಿರುವುದು ಬೇಸಾಯ ಭೂಮಿಯಲ್ಲಿ ಸಸ್ಯಾಹಾರದ ಕೊರತೆಗೆ ಕಾರಣವಾಗುತ್ತದೆ. ಆದುದರಿಂದ ಕೆಲವೊಂದು ವೇಳೆ ಬೇಸಾಯ ಭೂಮಿಯಲ್ಲಿ ತೇವದ ಕೊರತೆ ಇಲ್ಲದಿದ್ದಾಗಲೂ ಬೆಳೆಯ ಇಳುವರಿ ಸಾಕಷ್ಟು ಬಾರದೇ ಇರುವುದಕ್ಕೆ ಈ ಸಸ್ಯಾಹಾರ ಕೊರತೆಯೇ ಮುಖ್ಯ ಅಡಚಣೆ.

ಮೂರನೆಯ ಅಂಶವೆಂದರೆ ಸಮರ್ಥ ತಳಿಗಳು. ಈ ಬಗ್ಗೆ ಹೇಳುವುದಾದರೆ, ಮಳೆಯ ಬೇಸಾಯದಲ್ಲಿ ಪ್ರಮುಖವಾದ ಜೋಳ, ರಾಗಿ ಮತ್ತು ಸಜ್ಜೆಗಳಲ್ಲಿ ಅಧಿಕ

ಇಳುವರಿ ತಳಿಗಳು ಕರ್ನಾಟಕದಲ್ಲಿ ರೈತರಿಗೆ ಈಗಾಗಲೇ ಒದಗಿವೆ. ಆದುದರಿಂದ ಈ ವಿಚಾರದಲ್ಲಿ ದೊಡ್ಡ ಕೊರತೆಯು ನಮ್ಮ ರಾಜ್ಯದಲ್ಲಿ ಕಾಣುವುದಿಲ್ಲ. ಆದರೆ, ಈ ಉತ್ತಮ ತಳಿಗಳು ಸಾಕಷ್ಟು ಇಳುವರಿಯನ್ನು ಕೊಡಬೇಕಾದರೆ ಮಳೆಯ ಬೇಸಾಯದಲ್ಲಿ ತೇವದ ಕೊರತೆಯನ್ನೂ ಸಸ್ಯಾಹಾರದ ಕೊರತೆಯನ್ನೂ ಸಮರ್ಥವಾಗಿ ನಾವು ಪರಿಹರಿಸಿಕೊಳ್ಳಬೇಕು.

**ಮಳೆಯ ಬೇಸಾಯವನ್ನು ಉತ್ತಮಪಡಿಸುವ ವಿಧಾನಗಳು**

ಈಗಿರುವ ಪರಿಸ್ಥಿತಿಯಲ್ಲಿ ಮಳೆಯ ಬೇಸಾಯದಲ್ಲಿ ಉತ್ತಮವಾದ ಸಾಧನೆಯನ್ನು ಮಾಡಬೇಕಾದರೆ ಪ್ರಮುಖವಾಗಿ ನಾಲ್ಕು ಕ್ರಮಗಳು ಅನಿವಾರ್ಯ.

ಮೊದಲನೆಯದಾಗಿ, ನಾವು ಬಿತ್ತಿದ ಉತ್ತಮ ತಳಿಗಳು ಸಾಕಷ್ಟು ಇಳುವರಿಯನ್ನು ಕೊಡಬೇಕಾದರೆ, ಕ್ರಮಬದ್ಧವಾಗಿ, ಉತ್ತಮ ಸಾಗುವಳಿಯ ಕ್ರಮಗಳನ್ನು ರೈತರು ಅನುಸರಿಸಬೇಕಾಗುತ್ತದೆ. ಇದರಲ್ಲಿ ಸಾಂಪ್ರದಾಯಕ ಬೇಸಾಯಗಳ ಪರಿಸ್ಥಿತಿಯಲ್ಲಿ ಇರುವಂತಹ ಉತ್ತಮ ಕ್ರಮಗಳನ್ನು ಕೈಬಿಡಬಾರದು. ಅವುಗಳ ಜೊತೆಗೆ ಉತ್ತಮವಾದ ಆಧುನಿಕ ಕ್ರಮಗಳನ್ನು ಕೂಡಿಸಿಕೊಳ್ಳಬೇಕಾಗುತ್ತದೆ. ಸಾಕಷ್ಟು ದನದ ಗೊಬ್ಬರದ ಬಳಕೆ, ಬೆಳೆಗಳ ಪರಿವರ್ತನೆ, ಸಕಾಲ ಬೇಸಾಯ ಮುಂತಾದವುಗಳು ಇಲ್ಲಿ ಅನುಕೂಲವಾದ ಕ್ರಮಗಳು.

. ನಮ್ಮ ಇಂದಿನ ಬೇಸಾಯ ಪದ್ಧತಿಯಲ್ಲಿ ಹಿಡುವಳಿಯಲ್ಲಿ ಮಳೆಯ ನೀರಿನ ಸಂಗ್ರಹಣೆಗೆ ಎಷ್ಟು ಗಮನವನ್ನು ಕೊಡಬೇಕೋ ಅಷ್ಟು ಗಮನವನ್ನು ನಾವು ಕೊಡುತ್ತಿಲ್ಲವೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಹಿಡುವಳಿಯಲ್ಲಿ ಸೂಕ್ತವಾದ ಸ್ಥಳಗಳಲ್ಲಿ ಒಡ್ಡುಗಳನ್ನು ಹಾಕುವುದು, ಇಳಿಜಾರಿಗೆ ಅಡ್ಡಲಾಗಿ ಬೇಸಾಯ ಮಾಡುವುದು, ಚಿಕ್ಕ ಬೇರಿನ ಪೈರಿನ ಜೊತೆಗೆ ಆಳ ಬೇರಿನ ಪೈರಿನ ಸಾಲನ್ನು ಕೂಡಿಸುವುದು, ಇಂತಹ ಅಂಶಗಳಿಗೆ ಗಮನವನ್ನು ಕೊಟ್ಟಲ್ಲಿ ಹಿಡುವಳಿಯಲ್ಲಿ ಒಟ್ಟಾರೆ ಇಳುವರಿಯನ್ನು ಹೆಚ್ಚಿಸುವುದು ಸಾಧ್ಯವಿದೆ. ಹೆಚ್ಚು ಮಳೆಯಾದ ಕಾಲದಲ್ಲಿ ನೀರು ಹರಿದು ಹೋಗುವ ದಾರಿಗಳಲ್ಲಿ ತಡೆಗಳನ್ನು, ಒಡ್ಡುಗಳನ್ನು ಹಾಗೂ ಹೊಂಡಗಳನ್ನು ನಿರ್ಮಿಸುವುದು ಒಂದು ಉತ್ತಮ ಬೇಸಾಯ ಪದ್ಧತಿ. ಈ ದಿಸೆಯಲ್ಲಿ ನಾವು ಸಾಕಷ್ಟು ಪ್ರಯತ್ನವನ್ನು ಮಾಡಬೇಕಾಗಿದೆ.

ಮೂರನೆಯದು ಅಂದರೆ, ಪ್ರತಿ ರೈತರು ತಮ್ಮ ಹಿಡುವಳಿಯಲ್ಲಿ ಅನುಕೂಲವಾದ ಗಿಡಮರಗಳನ್ನು ಗುಂಪಿನಲ್ಲಿ ಆಗಲಿ ಬದುಗಳ ಮೇಲಾಗಲೀ ಬೆಳೆಸಿಕೊಳ್ಳುವುದು. ಈ ಸಂಗ್ರಹವು ಮೇವು, ಉರುವಲು, ಹಸಿರೆಲೆಗೊಬ್ಬರ ಮುಂತಾದವುಗಳಿಗೆ ಅನುಕೂಲಕರವಾಗಿರಬೇಕು. ಇದರಿಂದ ಪರಿಸರವು ಉತ್ತಮವಾಗುವುದಲ್ಲದೆ ಇದ್ದ ಬೆಳೆಗೂ ಅನುಕೂಲ ವಾಗುತ್ತದೆ. ಅದರಲ್ಲಿಯೂ ಹಿಡುವಳಿಯಲ್ಲಿ ಹೆಚ್ಚು ಫಲವತ್ತಲ್ಲದ ಭಾಗದಲ್ಲಿ ಈ ವೃಕ್ಷ ಫಸಲನ್ನು **(tree crops)** ಉಂಟುಮಾಡಿಕೊಳ್ಳುವುದು ಉತ್ತಮ. ಈಗಿರುವಂತೆ ರೈತರ ಹಿಡುವಳಿಗಳು ಸಂಪೂರ್ಣವಾಗಿ ವೃಕ್ಷಹೀನವಾಗಿರುವುದರಿಂದ ಒಟ್ಟಾರೆ ರೈತರಿಗೆ ನಷ್ಟವೇ ಹೊರತು ಲಾಭವಿಲ್ಲ.

ಇನ್ನು ನಾಲ್ಕನೇ ಅಂಶವೆಂದರೆ, ಇಡೀ ಗ್ರಾಮಕ್ಕೆ ಸೇರಿದ ಭೂ ಭಾಗದಲ್ಲಿ ಮೊದಲಿಗೆ ಸಾಕಷ್ಟು ವೃಕ್ಷ ಸಂಪತ್ತು ಇದ್ದದ್ದನ್ನು ಎಲ್ಲರೂ ನೆನಪಿಸಿಕೊಳ್ಳಬಹುದು. ಕಾಲಕ್ರಮೇಣ, ನಾನಾ ಕಾರಣಗಳಿಗಾಗಿ ಗಿಡಗಂಟೆ, ಕಾಡು ಹಾಗೂ ತೋಪುಗಳನ್ನು ನಾವು ನಾಶ ಮಾಡಿದ್ದೇವೆ. ಇದರಿಂದ ಕೆಲವರಿಗೆ ಲಾಭವಾಗಿದ್ದರೂ ದೀರ್ಘಾವಧಿಯಲ್ಲಿ ಮಳೆಯ ಬೇಸಾಯ ಮತ್ತು ಒಟ್ಟಾರೆ ಗ್ರಾಮಜೀವನದ ಹಿತಕ್ಕೆ ಧಕ್ಕೆಯೇ ಉಂಟಾಗಿದೆ. ಆದುದರಿಂದ, ಗ್ರಾಮದ ಭೂ ಭಾಗದಲ್ಲಿ ಕನಿಷ್ಠ ಪಕ್ಷ ಮೂರನೇ ಒಂದು ಭಾಗದಲ್ಲಿ ವೃಕ್ಷ ಸಂಪತ್ತನ್ನು ಬೆಳೆಸಿಕೊಳ್ಳುವುದು ಇಡೀ ಗ್ರಾಮದ ಹೊಣೆಯಾಗುತ್ತದೆ. ಇಂತಹ ಭೂ ಬಳಕೆಯ ವಿಧಾನ ದಿಂದ ಸಾವಯವ ಗೊಬ್ಬರ, ಮೇವು, ಉರವಲು ಇತ್ಯಾದಿ ಅನುಕೂಲಗಳು ದೊರೆಯುವುದಲ್ಲದೆ ಗ್ರಾಮ ಜೀವನಕ್ಕೆ ಒಂದು ಸೌಖ್ಯವು ಉಂಟಾಗುತ್ತದೆ.

ಈ ಹಿನ್ನೆಲೆಯಲ್ಲಿ ಮಳೆಯ ಬೇಸಾಯವನ್ನು ಉಳಿಸಿಕೊಳ್ಳುವ ಮತ್ತು ಬೆಳೆಸಿಕೊಳ್ಳುವ ಪುನರಾಲೋಚನೆಯನ್ನು ನಾವು ಮಾಡಿದಾಗ ಕೆಲವು ಅಂಶಗಳು ಎದ್ದು ಕಾಣುತ್ತವೆ.

೧. ಬೇಸಾಯಕ್ಕೆ ಹೆಚ್ಚು ಅನುಕೂಲವಾದ ಭೂ ಭಾಗದಲ್ಲಿ ಉತ್ತಮವಾದ ಬೇಸಾಯ ಕ್ರಮಗಳನ್ನು ಅನುಸರಿಸಿ ಇಳುವರಿಯನ್ನು ಹೆಚ್ಚುಮಾಡಿಕೊಳ್ಳಬೇಕು. ಅಲ್ಲದೇ ಬೆಳೆಗಳ ಪರಿವರ್ತನೆ, ಮಿಶ್ರ ಬೆಳೆಗಳ ಅನುಸರಣೆ ಮೊದಲಾದ ಹಿಂದಿನ ಪದ್ಧತಿಗಳನ್ನು ಬಳಸಿಕೊಳ್ಳಬೇಕು.

೨. ಋತು ಫಸಲಿಗೆ ಅನುಕೂಲವಲ್ಲದ ಹಿಡುವಳಿಯ ಭೂ ಭಾಗವನ್ನು ವೃಕ್ಷ ಫಸಲಿಗೆ ವಿನಿಯೋಗಿಸಿಕೊಳ್ಳಬೇಕು. ಇದರಿಂದ ಬೇಸಾಯ ಭೂಮಿಗೆ ಹೆಚ್ಚು ಅನುಕೂಲವಾದ ಆಶ್ರಯವು ಒದಗುತ್ತದೆ.

೩. ಹಿಡುವಳಿಗಳಲ್ಲಿ ಹಾಗೂ ಗ್ರಾಮ ಭೂಮಿಯ ಬೀಳು ಭಾಗಗಳಲ್ಲಿ ವೃಕ್ಷ ಸಂಪತ್ತನ್ನು ಪ್ರಯತ್ನ ಪೂರ್ವಕವಾಗಿ ಬೆಳೆಸಿಕೊಳ್ಳುವುದು; ಇದರಿಂದ ಬೇಸಾಯದ ಪರಿಸರವು ಉತ್ತಮಗೊಳ್ಳುತ್ತದೆ.

೪. ಹಿಡುವಳಿಯ ಭೂಮಿಯಲ್ಲಿ ಹಾಗೂ ಗ್ರಾಮದ ಇತರ ಭೂ ಭಾಗಗಳಲ್ಲಿ ಹರಿದುಹೋಗುವ ನೀರನ್ನು ಸಂಗ್ರಹಣೆ ಮಾಡಲು ಸೂಕ್ತ ಕ್ರಮಗಳನ್ನು ಅನುಸರಿಸಿ ಭೂಮಿಯ ಮೇಲೆ ನೀರಿನ ಸಂಗ್ರಹಣೆ ಯನ್ನು ಸಾಧಿಸುವುದರ ಜೊತೆಗೆ ಅಂತರ್ಜಲವನ್ನು ವೃದ್ಧಿ ಮಾಡಿಕೊಳ್ಳಬೇಕು.

ಇವೆಲ್ಲವೂ ಒಂದೇ ದಿನದಲ್ಲಿ ಸಾಧಿಸಬಹುದಾದ ಕಾರ್ಯಗಳಲ್ಲ. ಪ್ರತಿ ರೈತನೂ ತನ್ನ ಹಿಡುವಳಿಯಲ್ಲಿ ಸುಧಾರಣೆಗಳನ್ನು ಮಾಡಿಕೊಳ್ಳುವುದರ ಜೊತೆಗೆ ಇಡೀ ಗ್ರಾಮದ ಸಮುದಾಯವು ಈ ವಿಚಾರಗಳಿಗೆ ಸಾಕಷ್ಟು ಗಮನವನ್ನೂ, ಪ್ರಯತ್ನವನ್ನೂ ತೊಡಗಿಸಿದರೆ ಈ ಸುಸ್ಥಿತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಇಲ್ಲಿ ಎತ್ತಿ ಹೇಳಬೇಕಾದ ಮಾತೆಂದರೆ, ಮಳೆಯ ಬೇಸಾಯವನ್ನು ಉತ್ತಮಪಡಿಸಿಕೊಳ್ಳಬೇಕಾದರೆ ಒಂದು ಹೊಸ ಭೂಬಳಕೆ ವಿಧಾನ (Land use pattern) ವನ್ನು ಅಳವಡಿಸಿಕೊಂಡು ಹಿಡುವಳಿಯ ಅಭಿವೃದ್ಧಿಗೆ ಸಂಬಂಧಪಟ್ಟ ರೈತರು ಗ್ರಾಮ ಭೂಭಾಗದಲ್ಲಿ ರೈತ ಸಮುದಾಯಗಳು, ಸಹಯೋಗದಿಂದ ಪ್ರಯತ್ನಪಟ್ಟು ದುಡಿದು, ಸಾಧಿಸಬೇಕಾಗಿದೆ.

ಡಾ|| ಆರ್. ದ್ವಾರಕೀನಾಥ್
ಅಧ್ಯಕ್ಷರು, ಕೃಷಿ ಆಯೋಗ, ಕರ್ನಾಟಕ ಸರ್ಕಾರ

## ಕೊರಡುಗಳು

ಹಿಂದೊಮ್ಮೆ ಹಸಿರು ಹೊನ್ನಿಗೆ ಹೆಸರಾಗಿದ್ದ
ವನವಿಸ್ತೀರ್ಣದಲ್ಲಿಂದು
ಎಲ್ಲೆಲ್ಲೂ
ಒಣ ಕೊರಡುಗಳೇ ರಾರಾಜಿಸುತ್ತಿವೆ;
ಮೂಗಿಲ್ಲದ ಮೂಗ ಮೇಲಕೆ ಮಾಡಿ
ವಿಜೃಂಭಿಸುತ್ತಿವೆ.



ಹೆತ್ತು ಹೊತ್ತ ನೆಲದಿ ಬೇರುಬಿಡದೆ
ಅತಂತ್ರ ಗತಿಯನ್ನಪ್ಪಿವೆ.
ಅಂತರಂಗದ ತೇವಿಗೆರವಾಗಿವೆ.
ನೆತ್ತಿಯ ಮೇಲಿನಾಕಾಶದತ್ತ ಮುಖಮಾಡಿ
ಚಿಗುರದೆ, ಬರಡಾಗಿವೆ.
ಕೆಲಬಲದ ಪಶು-ಪಕ್ಷಿ ಸಂಕುಲವ
ಅಂತಃಕರಣ ಸೂಸಿ ಆಹ್ವಾನಿಸದೆ,
ಹಸಿರು ತೋರಣ ಕಟ್ಟಿ ಸ್ವಾಗತಿಸದೆ,
ಹೂ-ಹಣ್ಣು ತಟ್ಟೆಯಲಿಟ್ಟು ಸತ್ಕರಿಸದೆ
ಹೃದಯ ಹೀನವಾಗಿವೆ.
ಅಜುಬಾಜೂದಲ್ಲಿ ಹುಲ್ಲುಕಡ್ಡಿಯೂ
ತಲೆಯೆತ್ತದಂತೆ ಅಟ್ಟಹಾಸಗೈಯುತ್ತಿವೆ.
ಕಾಲಪುರುಷನ ಕೈಬೆರಳಿನ ಕತ್ತರಿಯಲಿ ಸಿಕ್ಕಿ
'ಪಾಸಿಂಗ್ ಶೋ' ಆಗಿವೆ !

ಎಂ. ಅಕಬರ ಅಲಿ
೧೫, ಕಾಮಾಕ್ಷಿ ಆಸ್ಪತ್ರೆ ಹಿಂಭಾಗ, ಕುವೆಂಪುನಗರ, ಮೈಸೂರು - ೫೭೦೦೨೩




# ಮಾರ್ಕ್ಸ್‌ವಾದದ ಮುಂದಿರುವ ಸವಾಲುಗಳು

**ಕೆ. ಎಲ್. ಗೋಪಾಲಕೃಷ್ಣರಾವ್**

**ಮಾರ್ಕ್ಸ್‌ವಾದ** ಕಳೆದ ಶತಮಾನದ ಅತ್ಯಂತ ಪ್ರಭಾವಶಾಲೀ ವಿಚಾರಧಾರೆಗಳಲ್ಲೊಂದು. ಚಾರ್ಲಿ ಚಾಪ್ಲಿನ್, ಪಾಲ್ ರೋಬ್ಸನ್, ಜೋಲಿಯೋ ಕ್ಯೂರಿ, ಜೆ. ಬಿ. ಎಸ್. ಹಾಲ್ಡೇನ್, ಜೆ. ಡಿ. ಬರ್ನಾಲ್ ಮುಂತಾದ ಅನೇಕ ಪ್ರತಿಭಾನ್ವಿತ ಕಲಾವಿದರು, ವಿಜ್ಞಾನಿಗಳು ಅದರ ಪ್ರಭಾವಕ್ಕೊಳಗಾಗಿದ್ದರು. ಹಾಗೆ ನೋಡಿದರೆ ಕಳೆದ ಶತಮಾನದಲ್ಲಿ ಭಾರತವನ್ನು ಒಳಗೊಂಡಂತೆ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲೂ ಅದರಿಂದ ಪ್ರಭಾವಿತರಾಗದಿದ್ದ ಬುದ್ಧಿಜೀವಿಗಳೇ ಇರಲಿಲ್ಲವೆನ್ನಬಹುದು. ಆದರೆ ಅದೇ ಶತಮಾನದ ಕೊನೆಯ ಭಾಗದಲ್ಲಿ ಸೋವಿಯತ್ ಒಕ್ಕೂಟದ ಪತನಾನಂತರ ಮಾರ್ಕ್ಸ್‌ವಾದದ ಮುಂದೆ ಅನೇಕ ಸವಾಲುಗಳು ಎದ್ದುನಿಂತಿವೆ. ಮಾರ್ಕ್ಸ್‌ವಾದದ ಥಥ್ಯತೆಯನ್ನೇ ಪ್ರಶ್ನಿಸಲಾಗುತ್ತಿದೆ. ಹಾಗಾಗಿ ಇದನ್ನು ಕೂಲಂಕಷವಾಗಿ ವಿವೇಚಿಸುವುದು ಅವಶ್ಯ. ಮೊದಲು ಮಾರ್ಕ್ಸ್‌ವಾದ ಎಂದರೇನು ಎಂಬುದನ್ನು ಪರಿಶೀಲಿಸೋಣ.

**ಹೊಸ ಜಾಗತಿಕ ಮನೋಧರ್ಮ...**

ಮಾರ್ಕ್ಸ್ ಹಾಗೂ ಎಂಗೆಲ್ಸ್‌ರು 'ಕಮ್ಯುನಿಸ್ಟ್ ಲೀಗ್'ನ ದ್ವಿತೀಯ ಮಹಾಧಿವೇಶನದ ಕೇಳಿಕೆಯಂತೆ ೧೮೪೮ರಲ್ಲಿ ರಚಿಸಿ ಪ್ರಕಟಿಸಿದ, ಮಾರ್ಕ್ಸ್‌ವಾದದ ಹಾಗೂ ವೈಜ್ಞಾನಿಕ ಕಮ್ಯುನಿಸಂನ ಮೊದಲ ನೀತಿಸೂಚಕ ಕೃತಿ ಎನಿಸಿದ, 'ಕಮ್ಯುನಿಸ್ಟ್ ಪಾರ್ಟಿಯ ಪ್ರಣಾಳಿಕೆ'ಯು ಮಾರ್ಕ್ಸ್‌ವಾದದ ಸಾರವನ್ನು, ಅದರ ಗುರಿಯನ್ನು ಸುಸ್ಪಷ್ಟವಾಗಿ ವಿಶದೀಕರಿಸಿತು : ಬೂರ್ಷ್ವಾಸಿಯನ್ನು ಅಧಿಕಾರದಿಂದ ಕಿತ್ತೊಗೆಯುವುದು, ಶ್ರಮಜೀವಿವರ್ಗದ ಸರ್ವಾಧಿಕಾರವನ್ನು ಸ್ಥಾಪಿಸುವುದು, ವರ್ಗವೈರದ ಮೇಲೆ ಆಧರಿಸಿದ ಹಳೆಯ ಬೂರ್ಷ್ವಾ ಸಮಾಜವನ್ನು ನಾಶಗೊಳಿಸುವುದು, ವರ್ಗಗಳಿಲ್ಲದ, ಉತ್ಪಾದನಾ ವ್ಯವಸ್ಥೆಯಲ್ಲಿ ಖಾಸಗಿ ಒಡೆತನವಿಲ್ಲದ ಒಂದು ಹೊಸ ಸಮಾಜವನ್ನು ಸ್ಥಾಪಿಸುವುದು.

ಇದು ಮೊದಲ ನೋಟಕ್ಕೇ ಕಾಣುವಂತೆ ಒಂದು ಹೊಸ ಜಾಗತಿಕ ಮನೋಧರ್ಮವಾಗಿದ್ದಿತು. ಅದಕ್ಕೆ ಮುನ್ನವೂ ಅನೇಕ ತತ್ತ್ವಜ್ಞಾನಿಗಳೂ ಸಮಾಜಶಾಸ್ತ್ರಜ್ಞರೂ ಸರ್ವಜನ ಹಿತಸಾಧನೆಯ ಸಮಾಜವಾದೀ ವಿಚಾರಗಳನ್ನು ಮುಂದಿಟ್ಟಿದ್ದರು. ಆದರೆ ಅವೆಲ್ಲ ಅಸಾಧ್ಯಾದರ್ಶವಾದಿ ಕಲ್ಪನೆಗಳಷ್ಟೇ ಆಗಿದ್ದವು. ಅವು ಬಂಡವಾಳವಾದವನ್ನು ಟೀಕಿಸಿದವು, ಖಂಡಿಸಿದವು, ಅದನ್ನು ನಾಶಗೊಳಿಸುವ ಹಾಗೂ ಉತ್ತಮ ವ್ಯವಸ್ಥೆ ಸ್ಥಾಪಿಸುವ ಕನಸು ಕಂಡವು. ಆದರೆ ಸಮಾಜ ಬೆಳವಣಿಗೆಯ ಅಡಿಪಾಯದಲ್ಲಿದ್ದ ನಿಯಮಗಳನ್ನು ಪತ್ತೆಹಚ್ಚಲಾಗದೆ, ನವ ಸಮಾಜ ನಿರ್ಮಿಸಬಲ್ಲಂಥ ಸಾಮಾಜಿಕ ಶಕ್ತಿಯನ್ನು ಗುರುತಿಸಲಾಗದೆ, ಕೇವಲ ಸಹೃದ್ಭಾವನೆಯ ಆಶೋತ್ತರಗಳಿಗಷ್ಟೆ ಅವು ತಮ್ಮನ್ನು ಸೀಮಿತ ಗೊಳಿಸಿಕೊಂಡಿದ್ದವು. ಮಾರ್ಕ್ಸ್ ಮತ್ತು ಎಂಗೆಲ್ಸ್‌ರಷ್ಟೆ ಮೊತ್ತ ಮೊದಲ ಬಾರಿಗೆ ಮಾನವ ಸಮಾಜ ಉದಯವಾದಂದಿನಿಂದ ಅದರ ವಿಕಾಸದ ವೈಜ್ಞಾನಿಕ ಅಧ್ಯಯನ ನಡೆಸಿ, ಪ್ರತಿಯೊಂದು ಸಮಾಜದಲ್ಲಿದ್ದ ಮೂಲ ವೈರುಧ್ಯಗಳನ್ನು ವಿಶ್ಲೇಷಿಸಿ, ಹೇಗೆ ಉತ್ಪಾದಕ ಶಕ್ತಿಗಳ ಹಾಗೂ ಉತ್ಪಾದನಾ ಸಂಬಂಧಗಳ ನಡುವಿನ ಘರ್ಷಣೆಯು ಹೊಸ ಸಮಾಜದ ಉದಯಕ್ಕೆ ಕಾರಣವಾಗುತ್ತದೆಂಬುದನ್ನು ತೋರಿಸಿಕೊಟ್ಟರು. ಖಾಸಗಿ ಆಸ್ತಿಯ ಹುಟ್ಟಿನೊಂದಿಗೆ ಆರಂಭವಾದ ವರ್ಗ ಹೋರಾಟದ ಆದಿಯಲ್ಲಿದ್ದ ಗುಲಾಮ-ಒಡೆಯ ಹಾಗೂ ಗುಲಾಮ ಸಮಾಜವು ಹೇಗೆ ಸಾಮಂತ ಪ್ರಭು ಹಾಗೂ ಜೀತದಾಳುಗಳ ಸಾಮಂತಶಾಹಿ ಸಮಾಜಕ್ಕೆ, ಅನಂತರ ಆ ಸಮಾಜವು ಬೂರ್ಷ್ವಾಸೀ ಹಾಗೂ ಶ್ರಮಜೀವಿಗಳ ಪ್ರಸಕ್ತ ಬೂರ್ಷ್ವಾ ಸಮಾಜಕ್ಕೆ, ದಾರಿ ಬಿಟ್ಟುಕೊಟ್ಟವೆಂಬುದನ್ನು ತಿಳಿಸಿ, ಕೊನೆಗೆ ಆಧುನಿಕ ಕೈಗಾರಿಕೆಯ ವಿಶೇಷ ಉತ್ಪನ್ನವಾದ ಹಾಗೂ ಕ್ರಾಂತಿಕಾರಿ ಸಾಮಾಜಿಕ ಶಕ್ತಿಯಾಗಿ ಬೆಳೆದ ಶ್ರಮಜೀವಿ ವರ್ಗವು (ಇದೊಂದೆ ನಿರ್ಭಿಡೆಯಿಂದ ಹೋರಾಡಬಲ್ಲ ಶಕ್ತಿಯೆಂದು ಮಾರ್ಕ್ಸ್ ಭಾವಿಸಿದ್ದರು; ಏಕೆಂದರೆ, ಶ್ರಮಜೀವಿಯ ಬಳಿ ಶ್ರಮಶಕ್ತಿ ಬಿಟ್ಟು ಬೇರೇನೂ ಆಸ್ತಿ ಇರಲಿಲ್ಲ) ಅಧಿಕಾರವನ್ನು ತನ್ನ ಕೈಗೆ ತೆಗೆದುಕೊಂಡು ವರ್ಗರಹಿತ ಶೋಷಣೆರಹಿತ ಸಮಾಜವನ್ನು ನಿರ್ಮಿಸುವುದು ಖಂಡಿತ ಹಾಗೂ ಅನಿವಾರ್ಯ ಎಂಬುದನ್ನು ಸುಸಂಗತವಾಗಿ ಸ್ಪಷ್ಟಪಡಿಸಿದರು. ಹೀಗೆ ಮಾರ್ಕ್ಸ್‌ವಾದವು ಜಗತ್ತನ್ನು ಪರಿವರ್ತಿಸುವ ಒಂದು ಸುಸಂಯೋಜಿತ ಕಾರ್ಯಕ್ರಮವಾಗಿದ್ದಿತು, ಹೊಸ ಜಾಗತಿಕ ಮನೋಧರ್ಮದ, ಸುಸಂಬದ್ಧ ಭೌತಿಕವಾದದ ಹಾಗೂ ಒಬ್ಬೊಬ್ಬರ ಸ್ವತಂತ್ರ ಬೆಳವಣಿಗೆಯೂ ಎಲ್ಲರ ಸ್ವತಂತ್ರ ಬೆಳವಣಿಗೆಗೆ ಉಪಾಧಿಯಾದಂಥ ಸಮಾಜ ವಿಕಾಸಗೊಳ್ಳುವ ರೂಪುರೇಷೆ ನೀಡಿತು.

ಈ ಹೊಸ ಮನೋಧರ್ಮದ ಬಗೆಗೆ ಮಾರ್ಕ್ಸ್‌ರವರ ಮಾತುಗಳಲ್ಲೇ ಹೇಳುವುದಾದರೆ, ''ನಾನು ಮಾಡಿದ ಹೊಸತಾದುದೆಂದರೆ ಈ ಕೆಳಗಿನದನ್ನು ತೋರಿಸಿಕೊಟ್ಟಿದ್ದು : (೧) ವರ್ಗಗಳ ಅಸ್ತಿತ್ವವು ಕೇವಲ ಉತ್ಪಾದನೆಯ ಬೆಳವಣಿಗೆಯಲ್ಲಿನ ನಿರ್ದಿಷ್ಟ ಚಾರಿತ್ರಿಕ ಮಜಲುಗಳೊಂದಿಗೆ ಸಂಬಂಧಿತವಾಗಿದೆ; (೨) ವರ್ಗ ಹೋರಾಟವು ಅವಶ್ಯವಾಗಿಯೇ ಶ್ರಮಜೀವಿ ವರ್ಗದ ಸರ್ವಾಧಿಕಾರದತ್ತ ಕರೆದೊಯ್ಯುತ್ತದೆ; (೩) ಈ ಸರ್ವಾಧಿಕಾರವೇ ಎಲ್ಲ ವರ್ಗಗಳನ್ನು ತೊಡೆದುಹಾಕುವುದಕ್ಕೆ ಮತ್ತು ವರ್ಗರಹಿತ ಸಮಾಜವನ್ನು ಸ್ಥಾಪಿಸುವುದಕ್ಕೆ ಸಾಧನವಾಗಿರುತ್ತದೆ.''

೧೮೪೮ರ ಫ್ರಾನ್ಸ್ ಕ್ರಾಂತಿಯಲ್ಲಿ ಸ್ವತಃ ಭಾಗವಹಿಸಿ ಮಾರ್ಕ್ಸ್ ಹಾಗೂ ಎಂಗೆಲ್ಸ್‌ರು ತಮ್ಮ ಸಿದ್ಧಾಂತವನ್ನು ಆಚರಣೆಯಲ್ಲಿ ಪರೀಕ್ಷಿಸಿ, ಕಟ್ಟುನಿಟ್ಟಾದ ವೈಜ್ಞಾನಿಕ ಆಧಾರದ ಮೇಲೆ ಕ್ರಾಂತಿಕಾರಿ ವ್ಯೂಹ ಮತ್ತು ತಂತ್ರಗಳನ್ನು ರೂಪಿಸಿಕೊಟ್ಟರು. ಅವರ ಈ ವಿಚಾರನಿಷ್ಠೆ ಹಾಗೂ ಪ್ರಾಮಾಣಿಕ ಚಿಂತನೆಯೇ ಜಗತ್ತಿನ ಬುದ್ಧಿಜೀವಿಗಳನ್ನು ಅವರತ್ತ ಆಕರ್ಷಿಸಿದುದು. 'ಕಮ್ಯುನಿಸ್ಟ್ ಪ್ರಣಾಳಿಕೆ' ರಚಿತವಾದ ಕಾಲದಲ್ಲಿ 'ಕಮ್ಯುನಿಸ್ಟ್ ಲೀಗ್'ನಲ್ಲಿ ೪೦೦ ಮಂದಿ ಸದಸ್ಯರಷ್ಟೇ ಇದ್ದರೆ, ೧೯೧೭ರ ರಷ್ಯನ್ ಅಕ್ಟೋಬರ್ ಕ್ರಾಂತಿಯ ವೇಳೆಗೆ ಈ ಸಂಖ್ಯೆ ೨೦ ಮಿಲಿಯನ್ನೂ ಹೆಚ್ಚಿ ಜಗತ್ತಿನಾದ್ಯಂತ ನೂರಕ್ಕೂ ಹೆಚ್ಚು ಕಮ್ಯುನಿಸ್ಟ್ ಪಾರ್ಟಿಗಳು ಕ್ರಿಯಾಶೀಲವಾಗಿ ಕೆಲಸ ಮಾಡುತ್ತಿದ್ದವು.

**ಮಾರ್ಕ್ಸ್‌ವಾದದ ಮೂರು ಅಂಗಭಾಗಗಳು...**

ಮಾರ್ಕ್ಸ್‌ವಾದಿ ಬೋಧನೆಯಲ್ಲಿ ಮೂರು ಅಂಗಭಾಗಗಳು ಎದ್ದು ಕಾಣುತ್ತವೆ.




ಮೊದಲನೆಯದು ದ್ವಂದ್ವಾತ್ಮಕ ಹಾಗೂ ಐತಿಹಾಸಿಕ ಭೌತಿಕವಾದದ ತತ್ತ್ವಶಾಸ್ತ್ರ ಚಿಂತನೆ. ಇದು ಅವರ ವೈಜ್ಞಾನಿಕ ಜಾಗತಿಕ ಮನೋಧರ್ಮಕ್ಕೆ ದಾರ್ಶನಿಕ ಸಮರ್ಥನೆಯಾಗಿದೆ. ಮಾರ್ಕ್ಸ್‌ರವರಿಗೆ ಮುನ್ನ ಕ್ಯಾಂಟ್ ಹಾಗೂ ಹೆಗೆಲ್‌ರೇನೊ ದ್ವಂದ್ವಾತ್ಮಕ ತರ್ಕವನ್ನು ವಿಕಾಸಗೊಳಿಸಿದ್ದರು, ಆದರೆ ಅದು ಭಾವನಾವಾದಿ ಯಾಗಿದ್ದಿತು, 'ವಿಶ್ವಚೇತನ'ವೊಂದು ಬೆಳವಣಿಗೆಯನ್ನು ಉಂಟುಮಾಡುತ್ತದೆಂದು ಅದು ಭಾವಿಸಿದ್ದಿತು. ಮಾರ್ಕ್ಸ್ ಮತ್ತು ಎಂಗೆಲ್ಸ್‌ರು ಪ್ರಕೃತಿ ವಿಜ್ಞಾನಗಳ ತೀರ್ಮಾನವನ್ನು ಆಧರಿಸಿಕೊಂಡು, ಸಮಾಜವು ಅರಾಜಕವಾಗಿ ಸ್ವೇಚ್ಛೆಯಾಗಿ ವಿಕಾಸಗೊಳ್ಳುವುದಿಲ್ಲ, ಆದರೆ ನಿರ್ವಿಕಲ್ಪವಾದ ನಿಯಮಗಳಿಗೆ ಅನುಗುಣವಾಗಿ ವಿಕಾಸಗೊಳ್ಳುತ್ತದೆ ಮತ್ತು ಇದರಲ್ಲಿ ಜನಸಮೂಹಗಳ ಪಾತ್ರವೇ ನಿರ್ಧಾರಕ, ಎಂದು ಪ್ರತಿಪಾದಿಸಿದರು.

ಮಾರ್ಕ್ಸ್‌ವಾದದ ಎರಡನೆಯ ಅಂಗಭಾಗವೆಂದರೆ - ರಾಜಕೀಯ ಅರ್ಥಶಾಸ್ತ್ರ ಉತ್ಪಾದಕ ಶಕ್ತಿಗಳೂ ಉತ್ಪಾದನಾ ಸಂಬಂಧಗಳೂ ಒಟ್ಟಿಗೆ ಸೇರಿ ಉತ್ಪಾದನಾ ವಿಧಾನವನ್ನು ರೂಪಿಸುತ್ತವೆ ಅನ್ನುವುದು ಇದರ ಮೂಲತತ್ತ್ವ. ಉತ್ಪಾದನಾ ವಿಧಾನವು ಸಮಾಜದ ಅಸ್ಥಿಪಂಜರ. ಇತರೆಲ್ಲ ಸಾಮಾಜಿಕ ವಿದ್ಯಮಾನಗಳೂ ಸಂಬಂಧಗಳೂ ಸಂಸ್ಥೆಗಳೂ ಅದಕ್ಕೆ ರಕ್ತ ಮಾಂಸ ತುಂಬಿ ಒಂದು ಜೀವಂತ ಸಮಷ್ಟಿಯನ್ನು, ನಿರ್ದಿಷ್ಟ ಸಾಮಾಜಿಕ ಪದ್ಧತಿಯನ್ನು, ನಿರ್ದಿಷ್ಟ ಸಾಮಾಜಿಕ ಆರ್ಥಿಕ ಸಂರಚನೆಯನ್ನು ರೂಪಿಸುತ್ತವೆ ಇತಿಹಾಸದಲ್ಲಿ ಐದು ಇಂತಹ ಸಂರಚನೆಗಳಿವೆ: ಆದಿಕಾಲದ ಸಮುದಾಯ ಸಮಾಜ, ಗುಲಾಮಗಿರಿ ಸಮಾಜ, ಸಾಮಂತಶಾಹಿ ಸಮಾಜ, ಬೂರ್ಜ್ವಾ (ಬಂಡವಾಳಶಾಹಿ) ಸಮಾಜ, ಕೊನೆಯದಾಗಿ ಕಮ್ಯುನಿಸ್ಟ್ ಸಮಾಜ. [illegible] ವಿಕಾಸಗೊಳ್ಳಲು ಹಳೆಯ ಸಮಾಜದಲ್ಲಿನ ಉತ್ಪಾದಕ ಶಕ್ತಿಗಳು ಬೆಳೆಯುತ್ತಾ ಹೋದಂತೆ ಅವುಗಳಿಗೂ, ಹಳೆಯ ಸಮಾಜದಲ್ಲಿ ಹಾಗೆಯೇ ಉಳಿದ ಉತ್ಪಾದನಾ ಸಂಬಂಧಗಳಿಗೂ ನಡುವೆ ಘರ್ಷಣೆ ಉಂಟಾಗಿ ಅದು ಸಾಮಾಜಿಕ ಕ್ರಾಂತಿಗೆ ಆಗುಮಾಡಿಕೊಡುವುದೇ ಮುಖ್ಯ ಕಾರಣ.

ಇದೇ ನಿಯಮವನ್ನನುಸರಿಸಿ ಬಂಡವಾಳವಾದಿ ಸಮಾಜದಲ್ಲೂ (ಇದರಲ್ಲಿ ಉತ್ಪಾದನೆಯೇನೋ ಸಾಮಾಜಿಕ ಸ್ವರೂಪ ಪಡೆದಿರುತ್ತದೆ, ಆದರೆ ಉತ್ಪನ್ನಗಳನ್ನು ಖಾಸಗಿ ಬಂಡವಾಳಗಾರನೇ ಸ್ವಾಧೀನಪಡಿಸಿಕೊಳ್ಳುವ ಹಿಂದಿನ ಪದ್ಧತಿಯೇ ಉಳಿದಿರುತ್ತದೆ) ಶ್ರಮಜೀವಿ ವರ್ಗದ ನೇತೃತ್ವದಲ್ಲಿ ಕ್ರಾಂತಿ ಉಂಟಾಗಿ, ವರ್ಗರಹಿತ ಶೋಷಣೆರಹಿತ (ಅಂದರೆ ಕಾರ್ಮಿಕ ವರ್ಗವು ಸೃಜಿಸುವ ಮಿಗುತಾಯ ಮೌಲ್ಯವನ್ನು ಕಾರ್ಖಾನೆ ಒಡೆಯನೇ ಕಬಳಿಸಲು ಅವಕಾಶವಿಲ್ಲದ) ಸಮಾಜವಾದಿ ಸಮಾಜ ಸ್ಥಾಪನೆಗೊಂಡು (ಈ ಸಮಾಜದಲ್ಲಿ ಪ್ರತಿಯೊಬ್ಬರೂ ಉದ್ಯೋಗ ಪಡೆದು ತಮ್ಮ ಶಕ್ತಿಗನುಗುಣವಾಗಿ ಕಾರ್ಯ ನಿರ್ವಹಿಸಿ ತಮ್ಮ ಕಾರ್ಯಕ್ಕನುಗುಣವಾಗಿ ಪ್ರತಿಫಲ ಪಡೆಯುತ್ತಾರೆ) ಅನಂತರ ಅದು ಮತ್ತಷ್ಟು ವಿಕಾಸಗೊಂಡು ಭೌತಿಕ ಹಾಗೂ ಬೌದ್ಧಿಕ ಶ್ರಮಗಳ ನಡುವಿನ ವ್ಯತ್ಯಾಸ ಕಣ್ಮರೆಯಾಗಿ ಕಮ್ಯುನಿಸ್ಟ್ ಸಮಾಜ ಸ್ಥಾಪನೆಯಾಗುತ್ತದೆ (ಈ ಸಮಾಜದಲ್ಲಿ ಪ್ರತಿಯೊಬ್ಬರೂ ತಮ್ಮ ಶಕ್ತಿಗನುಗುಣವಾಗಿ ಕಾರ್ಯ ನಿರ್ವಹಿಸಿ ತಮ್ಮ ಅವಶ್ಯಕತೆಗಳೆಲ್ಲ ಪೂರೈಕೆಗೊಳ್ಳುವಂತೆ ಪ್ರತಿಫಲ ಪಡೆಯುತ್ತಾರೆ) ಎಂಬುದು ಮಾರ್ಕ್ಸ್‌ವಾದದ ಮೂರನೆಯ ಅಂಗಭಾಗ. ಇದೇ ಅದರ ಅಂತಿಮಗುರಿ.

**ಪ್ರಪ್ರಥಮ ಪ್ರಯೋಗ...**

ಈ ಮೊದಲೇ ತಿಳಿಸಿರುವಂತೆ ಮಾರ್ಕ್ಸ್‌ರವರಿಗೂ ಮುನ್ನವೇ ಸಮಾಜವಾದ ನಿರ್ಮಾಣದ ಬಗೆಗೆ ಅನೇಕ ಯೋಜನೆಗಳು ಪ್ರಕಟಗೊಂಡಿದ್ದವು. ಆದರೆ ಅವೆಲ್ಲ ಅಸಾಧ್ಯಾದರ್ಶ ಯೋಜನೆಗಳಾಗಿದ್ದವು. ೧೫೧೬ರಲ್ಲಿ ಇಂಗ್ಲೆಂಡಿನಲ್ಲಿ ಪ್ರಕಟಗೊಂಡ ಥಾಮಸ್ ಮೋರ್‌ರ 'ಯುಟೋಪಿಯ', ಫ್ರೆಂಚ್ ಇತಿಹಾಸಕಾರ ಸೇನ್ ಸಿಮೋನ್ (೧೭೬೦-೧೮೨೫)ರ ಬೋಧನೆಗಳು, ಫಾರ್ಲ್ ಫೂರ್ಯೆ (೧೭೭೨-೧೮೩೭)ರವರ ವಿಚಾರಗಳು, ರಾಬರ್ಟ್ ಓವನ್ (೧೭೭೧-೧೮೫೮)ರ ಯೋಜನೆಗಳು - ಇವೆಲ್ಲವೂ ಬೂರ್ಜ್ವಾ ಪದ್ಧತಿಯನ್ನು ತೀವ್ರವಾಗಿ ಟೀಕಿಸಿ ಅದರ ನ್ಯೂನತೆಗಳನ್ನು ಬಯಲುಮಾಡಿದವು. ಆದರೆ ಅವು ಆದರ್ಶವಾಗಿ ಇರಿಸಿಕೊಂಡ ಸಮಾಜದಲ್ಲಿ ಖಾಸಗಿ ಆಸ್ತಿ ಹಾಗೂ ಅಸಮಾನತೆಗಳು ಉಳಿದೇ ಇದ್ದವು.

ಆದರೆ ಮಾರ್ಕ್ಸ್ ಹಾಗೂ ಎಂಗೆಲ್ಸ್‌ರು ಪ್ರತಿಪಾದಿಸಿದ ವೈಜ್ಞಾನಿಕ ಸಮಾಜವಾದವನ್ನು ಕಾರ್ಯರೂಪಕ್ಕೆ ತರಲು ನಡೆಸಿದ ಪ್ರಪ್ರಥಮ ಯಶಸ್ವೀ ಯತ್ನವೆಂದರೆ - ೧೯೧೭ರಲ್ಲಿ ರಷ್ಯದಲ್ಲಿ ಲೆನಿನರ ಮಾರ್ಗದರ್ಶನದಲ್ಲಿ ಜರುಗಿದ ಅಕ್ಟೋಬರ್ ಸಮಾಜವಾದೀ ಮಹಾಕ್ರಾಂತಿ. ನಿಜ, ಇದಕ್ಕೂ ಮೊದಲು ೧೮೭೧ರಲ್ಲಿ 'ಪ್ಯಾರಿಸ್ ಕಮ್ಯೂನ್' ಎಂಬ ಫ್ರೆಂಚ್ ಶ್ರಮಜೀವಿವರ್ಗ ಕ್ರಾಂತಿ ಜರುಗಿದ್ದಿತು. ಆದರೆ ಅದು ಅಲ್ಪಾಯುವಾಗಿದ್ದಿತು (೭೨ ದಿನಗಳವರೆಗಷ್ಟೆ ಇದ್ದಿತು). ಮತ್ತೆ ಪ್ಯಾರಿಸ್‌ಗಷ್ಟೇ ಸೀಮಿತವಾಗಿದ್ದಿತು. ಅಲ್ಲಿ ಶ್ರಮಜೀವಿವರ್ಗ ತನ್ನ ಕೈಗೆ ಬಂದ ಆಡಳಿತವನ್ನು ದೃಢಗೊಳಿಸಿಕೊಳ್ಳದೆ ಬೂರ್ಜ್ವಾಸೀಯ ಪ್ರತಿಕ್ರಾಂತಿಗೆ ಆಹುತಿಯಾಯಿತು. ಹಾಗಾಗಿ ರಷ್ಯದ ಅಕ್ಟೋಬರ್ ಸಮಾಜವಾದಿ ಮಹಾಕ್ರಾಂತಿಯನ್ನಷ್ಟೇ ಪ್ರಥಮ ಯಶಸ್ವೀ ಶ್ರಮಜೀವಿವರ್ಗ ಕ್ರಾಂತಿ ಎನ್ನಬಹುದು. ಅದು ಜಾಗತಿಕ ಇತಿಹಾಸದಲ್ಲಿ ಒಂದು ತಿರುಗು ಬಿಂದುವಾಗಿದ್ದಿತು. ಅಧಿಕಾರ ಸೂತ್ರ ಹಿಡಿದ ಶ್ರಮಜೀವಿವರ್ಗ ಜಾರಿಗೆ ತಂದ ಮೊದಲ ಆರ್ಥಿಕ ಕಾರ್ಯಕ್ರಮವೆಂದರೆ - ಬ್ಯಾಂಕುಗಳು, ಸಾರಿಗೆ ಹಾಗೂ ವಿಸ್ತೃತ ಪ್ರಮಾಣದ ಉದ್ಯಮಗಳನ್ನು ರಾಷ್ಟ್ರೀಕರಿಸಿದುದು. ಹೀಗೆ ಅದು ಆರ್ಥಿಕತೆಯ ಪ್ರಧಾನ ಆಕರಗಳನ್ನು ತನ್ನ ವಶಪಡಿಸಿಕೊಂಡಿತು. ಉಳಿದ ಉದ್ಯಮಗಳ ಮೇಲೆ ಕಾರ್ಮಿಕ ನಿಯಂತ್ರಣವನ್ನು ಜಾರಿಗೆ ತಂದಿತು. ಭೂ ಮಾಲಿಕತ್ವವನ್ನು ರದ್ದುಗೊಳಿಸಿ ರೈತರನ್ನು ಸಾಮೂಹಿಕ ಕೃಷಿ ಕ್ಷೇತ್ರಗಳಲ್ಲಿ ಒಂದುಗೂಡಿಸಿತು. ಉದ್ಯಮಗಳಿಗೆ ನಿರಂತರ ಉತ್ಪಾದನೆಯನ್ನೂ ಕಾರ್ಮಿಕರಿಗೆ ನಿರಂತರ ನೌಕರಿಯನ್ನೂ ಖಚಿತಪಡಿಸಿತು. ಶ್ರಮಿಕರ ಶಿಸ್ತು, ಕಾರ್ಯ ಕೌಶಲ ಹಾಗೂ ದಕ್ಷತೆಯನ್ನು ಹೆಚ್ಚಿಸಲು ಸಮಾಜವಾದಿ ಸ್ಪರ್ಧೆಯನ್ನು ಆಚರಣೆಗೆ ತಂದಿತು. ಶ್ರಮಜೀವಿವರ್ಗದ ಮೇಲ್ವಿಚಾರಣೆಯಲ್ಲಿ ಬೂರ್ಜ್ವಾತಜ್ಞರ ಅನುಭವ, ಸಾಮರ್ಥ್ಯ ಹಾಗೂ ಜ್ಞಾನಗಳನ್ನೂ ಸೂಕ್ತವಾಗಿ ಬಳಸಿಕೊಳ್ಳಲಾಯಿತು.

ಬಂಡವಾಳಶಾಹಿ ದೇಶಗಳಿಂದ ಸುತ್ತುವರಿಯಲ್ಪಟ್ಟು ನಿರಂತರವಾಗಿ ಬಾಹ್ಯ ಸಶಸ್ತ್ರದಾಳಿ ಹಾಗೂ ಪ್ರಚೋದಕ ಕೃತ್ಯಗಳಿಗೆ ಗುರಿಯಾಗಿದ್ದರೂ ಸೋವಿಯತ್‌ಗಳ

ಮಹಾಧಿವೇಶನ ಶಾಂತಿ ಕುರಿತ ಶಾಸನವೊಂದನ್ನು ಅಂಗೀಕರಿಸಿತು. ಪ್ರಥಮ ಜಾಗತಿಕ ಯುದ್ಧದ ಪರಿಣಾಮಗಳು ಸ್ವಲ್ಪಮಟ್ಟಿಗೆ ಕೊನೆಗಂಡನಂತರ ದೇಶ ಸಂಪೂರ್ಣವಾಗಿ ಸಮಾಜವಾದದ ನಿರ್ಮಾಣದ ಕಡೆಗೆ ಗಮನ ಹರಿಸಿತು. ಇದಕ್ಕಾಗಿ ಲೆನಿನ್ 'ನವ ಆರ್ಥಿಕ ನೀತಿ'ಯೊಂದನ್ನು ಪ್ರಕಟಿಸಿದರು. ಅನಂತರದ 'ಗೋಯೆಲ್ರೋ'ಯೋಜನೆ ಸಮಾಜವಾದದ ವಸ್ತುಬುನಾದಿ ನಿರ್ಮಿಸಿತು. ಇಡೀ ಜನರ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಪಂಚವಾರ್ಷಿಕ ಯೋಜನೆಗಳ ಮೂಲಕ ದೇಶದ ಆರ್ಥಿಕತೆಯ ವ್ಯವಸ್ಥಿತ ಬೆಳವಣಿಗೆಯನ್ನು ಆಗುಮಾಡಲಾಯಿತು. ಸೋವಿಯೆತ್ ರಷ್ಯದ ಈ ವಿಧಾನವೇ ಭಾರತದಲ್ಲೂ ಸ್ವಾತಂತ್ರ್ಯಾನಂತರ ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೆ ತರಲು ನೆಹರೂರವರನ್ನು ಪ್ರೇರಿಸಿತೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ.

ಬೃಹತ್ ಪ್ರಮಾಣದ ಕೈಗಾರಿಕೀಕರಣಕ್ಕೆ ಅಗತ್ಯವಾದ ಭಾರಿ ವಿದ್ಯುದಾಗರಗಳನ್ನೂ ಯಂತ್ರಸ್ಥಾವರಗಳನ್ನೂ ನಿರ್ಮಿಸಿ ಕಾರ್ಮಿಕ ಜನರ ಜೀವನ ಪರಿಸ್ಥಿತಿಯನ್ನು ಸುಧಾರಿಸಲಾಯಿತು. ಅದೇ ರೀತಿ ಗ್ರಾಮಾಂತರಗಳಲ್ಲಿ, ಸಹಕಾರೀ ಸೂತ್ರಗಳ ಆಧಾರದ ಮೇಲೆ ಸಾಮೂಹಿಕ ಕೃಷಿ ಕ್ಷೇತ್ರಗಳನ್ನು ಸ್ಥಾಪಿಸಿ ರೈತರ ಬಾಳನ್ನು ಹಸನುಗೊಳಿಸಲಾಯಿತು. ಇವಕ್ಕೆ ಪೂರಕವಾಗುವಂತೆ ಭಾರಿ ಪ್ರಮಾಣದಲ್ಲಿ ಶಾಲಾ ಕಾಲೇಜುಗಳನ್ನೂ ಸಾಂಸ್ಕೃತಿಕ ಹಾಗೂ ಸಂಶೋಧನಾ ಕೇಂದ್ರಗಳನ್ನೂ ಸ್ಥಾಪಿಸಿ ದೇಶದಲ್ಲಿ ಸಾಂಸ್ಕೃತಿಕ ಕ್ರಾಂತಿಯನ್ನು ಉಂಟುಮಾಡಲಾಯಿತು. ಎಲ್ಲಕ್ಕೂ ಮಿಗಿಲಾಗಿ ಜನರ ಸಾಮಾನ್ಯ ಅನುದಿನದ ಅಗತ್ಯಗಳ ಪೂರೈಕೆಯ ಕಡೆಗೆ ಪ್ರಥಮ ಆದ್ಯತೆ ನೀಡಲಾಯಿತು.

*ಅನ್ನವನು ಕೊಡು ಮೊದಲು;*
*ಬಟ್ಟೆಯನು ಕೊಡು ಉಡಲು;*
*ಕಟ್ಟಿಕೊಡು ಮನೆಗಳನು; ಬಳಿಕ ನೀನು*
*ಕವಿಯಾಗಿ ಬಾ, ನೀತಿವಿದನಾಗಿ ಬಾ, ಶಾಸ್ತ್ರಿಯಾಗಿ*
*ಧಾರ್ಮಿಕನಾಗಿ ಮನುಜತೆಯನು*
*ಕಲಿಸು ಬಾ, ಇವನದನು ಕಲಿಯಬಲ್ಲ!*
*ಇದು ಮೊದಲು ಆಮೇಲೆ ಉಳಿದುದೆಲ್ಲ!*

ಎಂಬ ಕವಿ ಅಡಿಗರ ಮಾತು ಇಲ್ಲಿ ನೆನಪಿಗೆ ಬರುತ್ತದೆ.

ಇವೆಲ್ಲವುಗಳ ಫಲವಾಗಿ ೧೯೬೦ರ ವೇಳೆಗೆ ಸೋವಿಯೆತ್ ಒಕ್ಕೂಟವು ಕೈಗಾರಿಕೆಯಲ್ಲೂ ಕೃಷಿಯಲ್ಲೂ ಉನ್ನತಾಭಿವೃದ್ಧಿಗೊಂಡ, ತಾಂತ್ರಿಕವಾಗಿ ಸುಸಜ್ಜಿತವಾದ ಆರ್ಥಿಕತೆಯನ್ನು ಪಡೆದಿದ್ದಿತು. ೧೯೭೭ರಲ್ಲಿ ಅದರ ಕೈಗಾರಿಕೋತ್ಪಾದನೆ ಜಗತ್ತಿನ ಅತ್ಯಂತ ಪ್ರಬಲ ಬಂಡವಾಳಶಾಹಿ ರಾಷ್ಟ್ರ ಅಮೆರಿಕದ ಕೈಗಾರಿಕೋತ್ಪಾದನೆಯ ಶೇ. ೮೦ರಷ್ಟಕ್ಕೆ ಏರಿದ್ದಿತು. ಕಾರ್ಮಿಕರ ಹಾಗೂ ಕೃಷಿಕರ ವೈಯಕ್ತಿಕ ಆದಾಯ ಹೆಚ್ಚುವುದರ ಜೊತೆಗೆ 'ಸಾಮಾಜಿಕ ಬಳಕೆ ನಿಧಿ'ಯ ಪ್ರಮಾಣವೂ ಹೆಚ್ಚಿ ಅದರ ನೆರವಿನಿಂದ ದೇಶದಾದ್ಯಂತ ಸರ್ವರಿಗೂ ಉಚಿತ ಪ್ರೌಢ-ವಿಶೇಷ ಪ್ರೌಢ ಹಾಗೂ ಉನ್ನತ ವಿದ್ಯಾಭ್ಯಾಸ, ಉಚಿತ ವೈದ್ಯಕೀಯ ನೆರವು, ಆರೋಗ್ಯ ಸಂರಕ್ಷಣೆ, ನಿವೃತ್ತಿ ವೇತನ, ವಿದ್ಯಾರ್ಥಿ ವೇತನ, ಆರೋಗ್ಯಧಾಮ ಹಾಗೂ ವಿಶ್ರಾಂತಿಗೃಹಗಳಲ್ಲಿ ಸರ್ವರಿಗೂ ಸಮಾನ ಸ್ಥಳಾವಕಾಶ - ಇವೆಲ್ಲವನ್ನೂ ವ್ಯವಸ್ಥೆಗೊಳಿಸಲಾಯಿತು.

ಇದು ಸಾಧ್ಯವಾಗಲು ದೇಶವು ವಿಶೇಷವಾಗಿ ಶ್ರಮಿಸುತ್ತಿದ್ದ ಕಾಲದಲ್ಲಿ – ೨೦ರ ದಶಕದಲ್ಲಿ – ಅಲ್ಲಿಗೆ ಭೇಟಿ ನೀಡಿದ ಜವಾಹರಲಾಲ ನೆಹರೂರವರೂ, ಅನಂತರ ಅಲ್ಲಿಗೆ ಹೋಗಿಬಂದ ರವೀಂದ್ರನಾಥ ಟಾಗೋರರೂ ಇವೆಲ್ಲವನ್ನೂ ಆಸಕ್ತಿಯಿಂದ ಗಮನಿಸಿ, ಮುಕ್ತಕಂಠದಿಂದ ಹೊಗಳಿ ಲೇಖನಗಳನ್ನು ಬರೆದಿರುವುದುಂಟು.

**ಮಹಾಪತನ..**

ಹೀಗೆ ೭೦ಕ್ಕೂ ಹೆಚ್ಚು ವರ್ಷಗಳ ಕಾಲ ಏಕಪ್ರಕಾರವಾಗಿ ಬೆಳೆಯುತ್ತ ಹೋಗಿ, ಜಗತ್ತಿನ ಅತ್ಯಂತ ಪ್ರಬಲ ರಾಷ್ಟ್ರ ಅಮೆರಿಕಾಕ್ಕೆ ಸವಾಲು ಒಡ್ಡುವಂತೆ ಶಕ್ತಿವರ್ಧಿಸಿಕೊಂಡ ದೇಶ, ದ್ವಿತೀಯ ಜಾಗತಿಕ ಯುದ್ಧದಲ್ಲಿ ಪಾಶ್ಚಾತ್ಯ ರಾಷ್ಟ್ರಗಳನ್ನು ಬಗ್ಗು ಬಡಿದು ವಿಜಯಾಟ್ಟಹಾಸದಿಂದ ಮೆರೆಯುತ್ತಿದ್ದ ಹಿಟ್ಲರನಿಗೆ ಮಾಸ್ಕೋ ಬಳಿ ಮೊತ್ತಮೊದಲ ಸೋಲಿನ ರುಚಿ ಉಣಿಸಿ ವೋಲ್ಗೋಗ್ರಾಡ್‌ನಲ್ಲಿ ಅವನನ್ನು ನಿರ್ಧಾರಕವಾಗಿ ಪರಾಭವಗೊಳಿಸಿ ಜಗತ್ತನ್ನು ನಾಜೀ ದುರಾಕ್ರಮಣದಿಂದ ಪಾರುಮಾಡಿದಂಥ ದೇಶ, ೧೯೯೧ರಲ್ಲಿ ಇದ್ದಕ್ಕಿದ್ದಂತೆ ಮಹಾ ಪತನಗೊಂಡು ಛಿದ್ರವಿಚ್ಛಿದ್ರವಾದುದು ಜಗತ್ತಿನ ಪುರೋಗಾಮಿ ಜನತೆಯನ್ನು ದಿಙ್ಮೂಢಗೊಳಿಸಿತು. ಬಂಡವಾಳವಾದಿ ಸಮಾಜದ ದುರ್ಲಕ್ಷಣಗಳೆಲ್ಲ – ಖಾಸಗಿ ಆಸ್ತಿ ಜಮಾವಣೆ, ಮಾನವನಿಂದ ಮಾನವನ ಶೋಷಣೆ, ಬಡತನ, ಹಸಿವು, ನಿರುದ್ಯೋಗ, ಸಾಂಸ್ಕೃತಿಕ ಅಧಃಪತನ ಇತ್ಯಾದಿಗಳೆಲ್ಲ – ಅಲ್ಲಿ ಪುನಃ ಕಾಣಿಸಿಕೊಳ್ಳತೊಡಗಿ ಸಾಮಾನ್ಯ ಜನ ತತ್ತರಿಸತೊಡಗಿದ್ದಾರೆ. ಅಭಿವೃದ್ಧಿಶೀಲ ದೇಶಗಳಿಗೆ ಆದರ್ಶಪ್ರಾಯವಾಗಿದ್ದ ಸ್ಫೂರ್ತಿಯ ಸೆಲೆಯಾಗಿದ್ದ ಹಾಗೂ ಅವುಗಳಿಗೆ ಸಾಮ್ರಾಜ್ಯಶಾಹಿ ದೇಶಗಳ ಕುತಂತ್ರಗಳ ವಿರುದ್ಧ ರಕ್ಷಾಕವಚದಂತಿದ್ದ ದೇಶ (ಕಾಶ್ಮೀರ ಸಮಸ್ಯೆಯೂ ಸಂಬಂಧಿಸಿದಂತೆ ಎಲ್ಲ ಅಂತರರಾಷ್ಟ್ರೀಯ ವ್ಯವಹಾರಗಳಲ್ಲೂ ಅದು ಭಾರತಕ್ಕೆ ಸುದೃಢವಾಗಿ ಹಾಗೂ ಅವಿರತವಾಗಿ ಬೆಂಬಲ ನೀಡುತ್ತ ಬಂದಿದ್ದುದನ್ನು, ಬರುತ್ತಿರುವುದನ್ನು, ಮರೆಯುವುದಾದರೂ ಹೇಗೆ?), ಅಮೆರಿಕಾಕ್ಕೆ ಸಿಂಹಸ್ವಪ್ನವಾಗಿದ್ದ ದೇಶ, ಈಗ ಮೂಲೆಗುಂಪಾಗಿ ಅನಾದರಣೆಗೆ ಒಳಗಾಗಿದೆ. ಆರ್ಥಿಕ ವ್ಯವಸ್ಥೆ ಕುಸಿದುಬಿದ್ದು ದೇಶ ದಾರುಣ ಸ್ಥಿತಿ ತಲುಪಿದೆ.

ಹಿಂದೊಮ್ಮೆ ಬಂಡವಾಳವಾದ ಹಾಗೂ ಸಮಾಜವಾದಗಳ ನಡುವಿನ ಪೈಪೋಟಿಯನ್ನು ಉಲ್ಲೇಖಿಸುತ್ತ ಮಾಜಿ ಸೋವಿಯೆತ್ ಪ್ರಧಾನಿ ನಿಕಿತಾ ಖ್ರುಶ್ಚೋವ್‌ರವರು "ಈ ಸ್ಪರ್ಧೆಯಲ್ಲಿ ಬಂಡವಾಳವಾದ ಸೋಲುವುದು ಖಂಡಿತ, ಏಕೆಂದರೆ ಅದರ ಒಂದು ಕಾಲು ಕುಂಟು" ಎಂದಿದ್ದರು. ಅದೇ ರೀತಿ ಇನ್ನು ಕೆಲವರು "ಬಂಡವಾಳವಾದ ಕುಸಿಯುವುದು ಖಂಡಿತ, ಏಕೆಂದರೆ ಅದರ ಅಧಿರಚನೆ ಎಷ್ಟೇ ಮನಮೋಹಕವಾಗಿದ್ದರೂ ಅದರ ಅಡಿಪಾಯ ಮಣ್ಣಿನದು" ಎಂದು ನುಡಿದಿದ್ದರು. ಆದರೆ ಈಗ ರಷ್ಯದ ದಯನೀಯ ಸ್ಥಿತಿಯನ್ನು ಕಂಡಾಗ ಮೇಲಿನ ಮಾತುಗಳು

**೧. ಹೆಗೆಲ್‌ರು**

- *ಚಿಂತನೆಯಲ್ಲಿ **ದ್ವಂದ್ವಾತ್ಮಕ**ವಾಗಿದ್ದರು.*

*(ಅಂದರೆ, ನಿಸರ್ಗ – ಅಂತೆಯೇ ಮಾನವ ಸಮಾಜ – ನಿರಂತರ ಚಲನಶೀಲ – ಆಂತರಿಕ ವೈರುಧ್ಯಗಳ ಘರ್ಷಣೆಯ ಫಲವಾಗಿ ನಿರಂತರ ಪರಿವರ್ತನಶೀಲ, ಎಂಬುದನ್ನೇ ತಮ್ಮ ಚಿಂತನೆಯ, ತರ್ಕದ, ಮೂಲಾಧಾರವನ್ನಾಗಿ ಇರಿಸಿಕೊಂಡಿದ್ದರು)*

- *ಆದರೆ ನಂಬಿಕೆಯಲ್ಲಿ **ಭಾವನಾವಾದಿ**ಯಾಗಿದ್ದರು.*

*(ಅಂದರೆ, ವಾಸ್ತವಿಕತೆ - ಅಂತೆಯೇ ಅಸ್ತಿತ್ವ – 'ಸಾರ್ವತ್ರಿಕ ವಿಚಾರ' ವೊಂದರ ಅಥವಾ 'ಪ್ರಜ್ಞೆ'ಯೊಂದರ – ದೈವಿಕತೆಯ – ಮೂರ್ತಸ್ವರೂಪ ಎಂದು ನಂಬಿದ್ದರು).*

**೨. ಫೋಯೆರ್‌ಬಾಹ್‌ರು**

- *ಚಿಂತನೆಯಲ್ಲಿ **ಅ-ದ್ವಂದ್ವಾತ್ಮಕ**ವಾಗಿದ್ದರು.*

*(ಅಂದರೆ ನಿಸರ್ಗ – ಅಂತೆಯೇ ಮಾನವ ಸಮಾಜ – ನಿಶ್ಚಲ, ಸಂಘರ್ಷರಹಿತ, ಅಪರಿವರ್ತನೀಯ, ಬದಲಾವಣೆ ಏನಿದ್ದರೂ ಪ್ರಮಾಣಾತ್ಮಕ, ಗುಣಾತ್ಮಕವಲ್ಲ, ಎಂಬುದನ್ನೇ ತಮ್ಮ ಚಿಂತನೆಯ, ತರ್ಕದ, ಮೂಲಾಧಾರವನ್ನಾಗಿ ಇರಿಸಿಕೊಂಡಿದ್ದರು).*

- *ಆದರೆ ನಂಬಿಕೆಯಲ್ಲಿ **ಭೌತಿಕವಾದಿ**ಯಾಗಿದ್ದರು.*

*(ಅಂದರೆ ವಸ್ತುವೇ ಪ್ರಧಾನ, ಪ್ರಜ್ಞೆ – ಚಿಂತನೆ – ಗೌಣ. ಭೌತಿಕ ವಿಜ್ಞಾನಗಳೇ ಎಲ್ಲಕ್ಕೂ ಮೂಲಾಧಾರ ಎಂದು ನಂಬಿದ್ದರು).*

**೩. ಮಾರ್ಕ್ಸ್‌ರವರು**

*ಮೇಲಿನ ಇಬ್ಬರಲ್ಲೂ ಇದ್ದ ಉತ್ತಮಾಂಶಗಳನ್ನು ಒಂದುಗೂಡಿಸಿ – ಇಲ್ಲಿ ಇಲ್ಲ, ಅವನ್ನು ಉತ್ತಮಗೊಳಿಸಿ, ತಿದ್ದಿ, ಶ್ರೀಮಂತಗೊಳಿಸಿ – ತಮ್ಮದೇ [illegible] ಅದ್ವಿತೀಯ ಮಾದರಿಯೊಂದನ್ನು – **ದ್ವಂದ್ವಾತ್ಮಕ ಭೌತಿಕವಾದ**ವನ್ನು –*

*(ಅಂದರೆ ಧರ್ಮಾಧಾರಿತ ಭಾವನಾವಾದಕ್ಕೆ [illegible]ವಾದ, ನೈಸರ್ಗಿಕ ವಿದ್ಯಮಾನಗಳನ್ನು ಅರ್ಥಮಾಡಿಕೊಳ್ಳುವ ಮತ್ತು [illegible] [illegible] ವಿಧಾನವನ್ನು, ವೈಜ್ಞಾನಿಕ ವ್ಯಾಖ್ಯಾನವನ್ನು) ಅನುಷ್ಠಾನಕ್ಕೆ [illegible].*

> *ಸಮಾಜವಾದಿ ಸಮಾಜದ ನಿರ್ಮಾಣಕ್ಕೆ ಹಾದಿ ಇಂಥದ್ದೇ ಎಂಬುದರ ವಿವರ ಪೂರ್ಣವಾಗಿ ಮಾರ್ಕ್ಸ್‌ರವರಿಗೆ ತಿಳಿದಿತ್ತು ಅಥವಾ ಮಾರ್ಕ್ಸ್‌ವಾದಿಗಳಿಗೆ ತಿಳಿದಿದೆ ಎಂದು ನಾವು ಹೇಳುವುದಿಲ್ಲ. ಅಂಥ ತಿಳುವಳಿಕೆ ಅವಿವೇಕವಾಗುತ್ತದೆ. ನಮಗೆ ತಿಳಿದಿರುವುದು ಆ ಹಾದಿಗಿರುವ ದಿಶೆ ಮತ್ತು ಆ ಹಾದಿಯನ್ನು ಅನುಸರಿಸುವ ವರ್ಗಗಳು ಯಾವುವು ಎಂಬುದು. ಅದರ ಪ್ರಾಯೋಗಿಕ ವಿವರಗಳು ಬೆಳಕಿಗೆ ಬರುವುದು ಲಕ್ಷಾಂತರ ಜನಸಮೂಹಗಳ ಅನುಭವದಿಂದ, ಅವರು ತಮ್ಮ ಕೈಗೆ ಅಧಿಕಾರ ಪಡೆದುಕೊಂಡಾಗ.*
>
> *- ವಿ. ಐ. ಲೆನಿನ್*

ತಿರುಗುಮುರುಗಾಗಿವೆಯೇ ಎಂದೂ, ಏನೇ ಆದರೂ ಜನಮನದ ಅಂತರಾಳದಲ್ಲಿ ಬೇರೂರಿದ ಸಂಪ್ರದಾಯ ಮತ್ತು ಸ್ವಭಾವಗಳನ್ನು ಬದಲಿಸುವುದು ಸಾಧ್ಯವಿಲ್ಲವೇನೋ ಎಂದೂ, ಕೆಲವರಲ್ಲಿ ಸಂಶಯ ಮೂಡುವುದು ಸಹಜವೇ.

ಇದಕ್ಕೆ ಕಾರಣವೇನು ? ಯಾವ ವಿಚಾರಧಾರೆಯನ್ನು ಆಧರಿಸಿ ಸೋವಿಯೆತ್ ಒಕ್ಕೂಟದ ನಿರ್ಮಾಣವಾಗಿದ್ದಿತೋ ಅದರ – ಮಾರ್ಕ್ಸ್‌ವಾದಿ ವಿಚಾರಧಾರೆಯ – ವೈಫಲ್ಯವೇನಾದರೂ ಇದಕ್ಕೆ ಕಾರಣವೆ ?

**ಮಾರ್ಕ್ಸ್‌ವಾದ – ಕ್ರಿಯೆಗೆ ಮಾರ್ಗಸೂಚಿ...**

ಮಾರ್ಕ್ಸ್‌ವಾದದ ವೈಫಲ್ಯವೇ ಅದಕ್ಕೆ ಕಾರಣವೆಂದು ಮಾರ್ಕ್ಸ್‌ವಾದದ ವಿರೋಧಿಗಳು ವಿಜೃಂಭಣೆಯಿಂದ ಘೋಷಿಸುತ್ತಿದ್ದಾರೆ. ಆದರೆ ಇಂಥ ಆರೋಪ ಹುರುಳಿಲ್ಲದ್ದೆಂದು ಸೋವಿಯೆತ್ ನಿರ್ಮಾಣ ಹಾಗೂ ಬೆಳವಣಿಗೆಗಳನ್ನು ನಿಕಟವಾಗಿ ವೀಕ್ಷಿಸಿದ, ಅಭ್ಯಸಿಸಿದ, ಯಾರಿಗೇ ಆಗಲಿ ತಿಳಿದೀತು. ಮಾರ್ಕ್ಸ್‌ವಾದವೇನೂ ಯಾವುದೇ ರೀತಿಯ ಕಟ್ಟುನಿಟ್ಟಾದ ಚೌಕಟ್ಟನ್ನು ಹಾಕಿಕೊಟ್ಟು ಈ ಚೌಕಟ್ಟಿನಲ್ಲಿ ನಡೆದರಷ್ಟೇ ಅದು ಮಾರ್ಕ್ಸ್‌ವಾದ, ಇಲ್ಲದಿದ್ದರೆ ಅಲ್ಲ, ಎಂದೇನೂ ತಿಳಿಸುವುದಿಲ್ಲ. ಮಾರ್ಕ್ಸ್‌ವಾದವು ಕ್ರಿಯೆಗೆ ಒಂದು ಮಾರ್ಗಸೂಚಿಯಷ್ಟೇ. ಒಂದೊಂದು ದೇಶವೂ ತನ್ನ ಆಂತರಿಕ ಸ್ಥಿತಿಗತಿಗಳನ್ನು ಗಮನಕ್ಕೆ ತಂದುಕೊಂಡು, ಅದಕ್ಕನುಗುಣವಾಗಿ ಮಾರ್ಪಾಟುಗಳನ್ನು ಮಾಡಿಕೊಂಡು, ಮಾರ್ಕ್ಸ್‌ವಾದ ತೋರಿದ ದಿಶೆಯಲ್ಲಿ ಮುಂದೆ ಸಾಗಬೇಕೆಂಬುದೇ ಎಲ್ಲ ಮಾರ್ಕ್ಸ್‌ವಾದಿಗಳ ತಿಳಿವಳಿಕೆ. ಹೀಗೆ ಹೋಗುವಾಗ ತಪ್ಪುಗಳಾದಲ್ಲಿ ಅದಕ್ಕಾಗಿ ಮಾರ್ಕ್ಸ್‌ವಾದವನ್ನೇ ಅಲ್ಲಗಳೆಯಬೇಕಾಗಿಲ್ಲ. ಇಂದು ಜಗತ್ತಿನಲ್ಲಿ ಮಾರ್ಕ್ಸ್‌ವಾದ ತಿಳಿಸಿರುವಂಥ ಬಂಡವಾಳಶಾಹಿ ದೇಶಗಳಲ್ಲಿನ ಅಂತರ್‌ವೈರುದ್ಧ್ಯಗಳು ಕಡಿಮೆಯಾಗಿವೆಯೆ ? ಎಷ್ಟು ಮಾತ್ರವೂ ಇಲ್ಲ. ಎಷ್ಟೇ ಜಂಭ ಕೊಚ್ಚಿಕೊಂಡರೂ ಆ ದೇಶಗಳಲ್ಲಿ ಆರ್ಥಿಕ ಮುಗ್ಗಟ್ಟುಗಳು ಮೊದಮೊದಲು ಸಾಮಾನ್ಯವಾಗಿ ಹತ್ತು ವರ್ಷಗಳಿಗೊಮ್ಮೆ ಭುಗಿಲೇಳುತ್ತಿದ್ದುದು ಈಗ ಇನ್ನೂ ಅಲ್ಪಾವಧಿಗಳಲ್ಲೇ ಉಂಟಾಗುವ ಸೂಚನೆಗಳಿವೆ. (ಇಂದು ಈ ಜಗತ್ತು ಎದುರಿಸುತ್ತಿರುವ ತೈಲ ಮುಗ್ಗಟ್ಟು ಇದಕ್ಕೆ ಒಂದು ಸೂಚನೆಯಲ್ಲವೇ ?) ಅಲ್ಲದೆ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣಗಳ ನೀತಿಯನ್ನು ಎಲ್ಲ ದೇಶಗಳ ಮೇಲೂ ಹೊರಿಸುತ್ತ ಸಾಮ್ರಾಜ್ಯಶಾಹಿ ದೇಶಗಳು ತಮ್ಮ ಆರ್ಥಿಕ ಹಾಗೂ ಸಾಂಸ್ಕೃತಿಕ ದುರಾಕ್ರಮಣವನ್ನು ಮುಂದುವರಿಸು ತ್ತಿರುವುದು ಮಹಾನ್ ಜಾಗತಿಕ ವಿಸ್ಫೋಟಕ್ಕೆ ಕಾರಣವಾಗುವುದು ಖಂಡಿತ.

ದ್ವಿತೀಯ ಜಾಗತಿಕ ಯುದ್ಧಾನಂತರ ಸಂಪೂರ್ಣವಾಗಿ ನಾಶಗೊಂಡಿದ್ದ ಜಪಾನ್, ಜರ್ಮನಿ ದೇಶಗಳು ಅತ್ಯಲ್ಪ ಕಾಲದಲ್ಲೇ ಪುನಶ್ಚೇತನಗೊಂಡುದನ್ನು ಉದಾಹರಣೆಯಾಗಿ ನೀಡಿ ಬಂಡವಾಳವಾದವನ್ನು ಸಮರ್ಥಿಸಿದವರೇ ಇಂದು 'ಆರ್ಥಿಕ ಪವಾಡ'ಗಳೆನಿಸಿಕೊಂಡ ಆ ದೇಶಗಳಷ್ಟೇ ಅಲ್ಲ, ಫ್ರಾನ್ಸ್, ಇಟಲಿ, ಇಂಗ್ಲೆಂಡ್ ದೇಶಗಳೂ ಹಿಂದೆಂದೂ ಕೇಳರಿಯದಿದ್ದಂಥ ಮಹಾಪ್ರಮಾಣದ ನಿರುದ್ಯೋಗ ಮತ್ತಿತರ ಭೀಕರ ಆರ್ಥಿಕ ಬಿಕ್ಕಟ್ಟಿಗೆ ಸಿಕ್ಕಿ ತತ್ತರಿಸುತ್ತಿರುವುದನ್ನು ಕಾಣುತ್ತಿದ್ದಾರೆ. ಇದರಿಂದ, ಬಂಡವಾಳವಾದ ಮಹಾಸ್ಫೋಟಕ್ಕೆ [illegible]




ಮೊಳಗಿಸುತ್ತಿದ್ದರೂ ಅದಕ್ಕೆ ಭವಿಷ್ಯವಿಲ್ಲವೆಂಬುದು ಸುಸ್ಪಷ್ಟ. ಇದನ್ನೇ ಅಲ್ಲವೇ ಮಾರ್ಕ್ಸ್‌ವಾದ ಮುನ್ಸೂಚಿಸಿರುವುದು ?

**ಸೋವಿಯೆತ್ ಮಾದರಿ ಬಂಡವಾಳವಾದ...**

ಸೋವಿಯೆತ್ ಮಹಾಪತನಕ್ಕೆ ಮತ್ತೊಂದು ಪಂಗಡದ ವಿವರಣೆ ಹೀಗಿದೆ: ಸೋವಿಯೆತ್ ಒಕ್ಕೂಟದಲ್ಲಿ ನಿರ್ಮಾಣವಾದುದು ಎಷ್ಟು ಮಾತ್ರವೂ ಸಮಾಜವಾದವಲ್ಲ - ಅದರಲ್ಲೂ ಸ್ಟಾಲಿನ್ ಆಡಳಿತಕ್ಕೆ ಬಂದನಂತರ. ಅಲ್ಲಿ ನಿರ್ಮಾಣವಾದುದು ಬಂಡವಾಳವಾದವೇ - ಸೋವಿಯೆತ್ ಮಾದರಿಯ ಬಂಡವಾಳವಾದ ! ಇಲ್ಲದಿದ್ದರೆ ಅದು ೧೯೫೬ರಲ್ಲಿ ಹಂಗೇರಿಯ ಮೇಲೆ ಹೇಗೆ ಆಕ್ರಮಣ ನಡೆಸಬಹುದಿತ್ತು ? ಆದ್ದರಿಂದ ಸೋವಿಯೆತ್ ಪತನ ಮಾರ್ಕ್ಸ್‌ವಾದದ ವೈಫಲ್ಯವಲ್ಲ, ಆದರೆ ಮಾರ್ಕ್ಸ್‌ವಾದದ ಸೋಗಿನಲ್ಲಿ ನಡೆದ ಬಂಡವಾಳವಾದದ ವೈಫಲ್ಯವೇ. ಬಂಡವಾಳಶಾಹಿ ಸಮಾಜದಲ್ಲಿ ಕಾರ್ಮಿಕರ ಮಿಗುತಾಯ ಮೌಲ್ಯವನ್ನು ಬಿಡಿ ಬಂಡವಾಳಗಾರರು ಲಪಟಾಯಿಸಿದಲ್ಲಿ, ಸೋವಿಯೆತ್ ಒಕ್ಕೂಟದಲ್ಲಿ ರಾಜ್ಯ ಲಪಟಾಯಿಸುತ್ತಿದ್ದಿತು. ಆದ್ದರಿಂದ ಅದು ರಾಜ್ಯ ಬಂಡವಾಳವಲ್ಲದೆ ಬೇರೇನೂ ಆಗಿರಲಿಲ್ಲ... ಹೀಗೆಂದು ವಾದಿಸುತ್ತಾ ಹಂಗೇರಿ-ಮೂಲದ ಇಸ್ಟ್‌ವಾನ್ ಮೇಜ್‌ರೋ ಎಂಬ ಲೇಖಕರೊಬ್ಬರು ''ಬಂಡವಾಳದ ಆಚೆ'' ಎಂಬ ಎರಡು ಸಂಪುಟಗಳ ಉದ್ಗ್ರಂಥವನ್ನೇ ರಚಿಸಿದ್ದಾರೆ.

ನಿಜ, ಸೋವಿಯೆತ್ ಸಮಾಜದಲ್ಲಿ ಕಾರ್ಮಿಕ ತಾನು ನೀಡಿದ ಶ್ರಮದ ಮೌಲ್ಯವನ್ನು ವೇತನ ರೀತಿಯಲ್ಲಿ ಪೂರ್ಣವಾಗಿ ಹಿಂದಕ್ಕೆ ಪಡೆಯುತ್ತಿರಲಿಲ್ಲ. ಆದರೆ ಅವನಿಂದ ಲಭಿಸುತ್ತಿದ್ದ ಮಿಗುತಾಯ ಮೌಲ್ಯವನ್ನು 'ಸಾಮಾಜಿಕ ಬಳಕೆ ನಿಧಿ'ಗಳನ್ನಾಗಿ ಪರಿವರ್ತಿಸಲಾಗುತ್ತಿತ್ತು. ಸಾರ್ವಜನಿಕ ಒಡೆತನದ ಈ ನಿಧಿಗಳನ್ನು ಬಳಸಿಕೊಂಡು ಇಡೀ ಜನರಿಗೆ ಉಚಿತ ವಿದ್ಯಾಭ್ಯಾಸ (ಶಾಲಾ ವ್ಯಾಸಂಗವಷ್ಟೇ ಅಲ್ಲ, ವಿಶ್ವವಿದ್ಯಾಲಯ ವ್ಯಾಸಂಗವೂ ಸಂಪೂರ್ಣವಾಗಿ ಉಚಿತವಾಗಿದ್ದಿತಷ್ಟೇ ಅಲ್ಲ, ನಿರಂತರವಾಗಿ ಉತ್ತೀರ್ಣರಾಗುತ್ತ ಚೆನ್ನಾಗಿ ಅಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿಗಳೆಲ್ಲರಿಗೂ ವಿದ್ಯಾರ್ಥಿ ವೇತನಗಳನ್ನು ನೀಡಲಾಗುತ್ತಿತ್ತು. ಹಾಗಾಗಿ ವಿದ್ಯಾರ್ಥಿಗಳು ಆರ್ಥಿಕ ತೊಂದರೆಗಳಿಲ್ಲದೆ ವ್ಯಾಸಂಗದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಅವಕಾಶ ಪಡೆದಿದ್ದರು. ಹಾಗಾಗಿಯೇ ಸೋವಿಯೆತ್ ಒಕ್ಕೂಟದ ಎಲ್ಲ ರಾಜ್ಯಗಳಲ್ಲೂ ವೈಜ್ಞಾನಿಕ, ತಾಂತ್ರಿಕ ಹಾಗೂ ಕೈಗಾರಿಕಾಭಿವೃದ್ಧಿ ಅತ್ಯಲ್ಪ ಕಾಲದಲ್ಲೇ ಮುಂದುವರಿದ ಬಂಡವಾಳಶಾಹಿ ದೇಶಗಳಲ್ಲಿನ ಮಟ್ಟವನ್ನೂ ಮೀರಿ ಮುಂದುವರಿಯಲು ಸಾಧ್ಯವಾಗಿದ್ದಿತು), **ಉಚಿತ ಆರೋಗ್ಯ ಸೇವಾ ಸೌಲಭ್ಯ** (ಅತ್ಯಂತ ದುಬಾರಿಯ ಶಸ್ತ್ರ ಚಿಕಿತ್ಸಾ ಸೌಲಭ್ಯವೂ ಸಹ ಎಲ್ಲ ವರ್ಗಗಳ ಜನರಿಗೂ ಸಂಪೂರ್ಣವಾಗಿ ಉಚಿತವಾಗಿದ್ದಿತು - ಔಷಧಿಗಳಿಗಾಗಿಯಷ್ಟೇ ಅಲ್ಪ ಪ್ರಮಾಣದ ಹಣ ನೀಡಬೇಕಾಗಿದ್ದಿತು), **ಅತ್ಯಲ್ಪ ವೆಚ್ಚದ ವಸತಿ ಸೌಲಭ್ಯ** (ಎಲ್ಲರಿಗೂ ಎಲ್ಲ ರೀತಿಯ ಸೌಲಭ್ಯಗಳೂ – ಚಳಿಗಾಲದ ಶಾಖ ವ್ಯವಸ್ಥೆ, ಅತ್ಯಲ್ಪ ದರದಲ್ಲಿ ಅಡುಗೆ-ಅನಿಲ ಹಾಗೂ ವಿದ್ಯುತ್ ಪೂರೈಕೆ ಇತ್ಯಾದಿ - ಇರುವ ಗೃಹವಿಭಾಗಗಳನ್ನು ದೇಶದ ಸಮಸ್ತ ಜನರಿಗೂ ಅವರ ಕುಟುಂಬದ ಗಾತ್ರಕ್ಕನುಗುಣವಾಗಿ ನಿಕೃಷ್ಟವೆನಿಸುವಷ್ಟು ಕಡಿಮೆ ಬಾಡಿಗೆ ವಿಧಿಸಿ ಒದಗಿಸಲಾಗಿದ್ದಿತು), **ಅತ್ಯಂತ ಅಗ್ಗದ ಸಾರ್ವಜನಿಕ ಸಾರಿಗೆ ಸೌಲಭ್ಯ** (ಕೇವಲ ಐದು ಕೋಪೆಕ್ ಕೊಟ್ಟು ಆಟೋ ಬಸ್‌ನಲ್ಲಾಗಲೀ ಭೂಗರ್ಭರೈಲಿನಲ್ಲಾಗಲೀ ಎಷ್ಟು ದೂರ ಬೇಕಾದರೂ, ಎಷ್ಟು ಹೊತ್ತು ಬೇಕಾದರೂ ಪ್ರಯಾಣಿಸಬಹುದಿತ್ತು. ವಿದ್ಯುಚ್ಚಾಲಿತ ಟ್ರಾಲಿಬಸ್‌ನಲ್ಲಿ ಈ ದರ ಕೇವಲ ಮೂರು ಕೋಪೆಕ್, ಟ್ರಾಂನಲ್ಲಿ ಎರಡು ಕೋಪೆಕ್ ಆಗಿದ್ದಿತು. ಐದು ರೂಬಲ್ ಕೊಟ್ಟು 'ಇದಿನಿ' ಎನ್ನುವ ಪಾಸ್ ಕೊಂಡಲ್ಲಿ ಮನೆಯ ಯಾರು ಬೇಕಾದರೂ ಯಾವ ಮಾರ್ಗದಲ್ಲೇ ಯಾವುದೇ ಸಾರಿಗೆ ಸೌಲಭ್ಯವನ್ನು ಇಡೀ ತಿಂಗಳು ದಿನದಲ್ಲಿ ಎಷ್ಟು ಸಾರಿ ಬೇಕಾದರೂ ಬಳಸಬಹುದಿದ್ದಿತು), **ಅಗ್ಗ ದರದಲ್ಲಿ ಮನರಂಜನೆ**

**ಇಡೀ ಜಗತ್ತಿನಲ್ಲಿ ಬಡತನವನ್ನು ಹೋಗಲಾಡಿಸಿ, ಕೋಟ್ಯನುಕೋಟಿ ಭಾಗ್ಯಹೀನ ಜನರ ಕೈಗೆ ರಾಜಕೀಯ ಅಧಿಕಾರ ದೊರಕಿಸಿಕೊಟ್ಟು ಅವರ ಬಾಳನ್ನು ಹಸನುಗೊಳಿಸಲು, ವರ್ಗರಹಿತ ಶೋಷಣೆರಹಿತ ಸಮಾಜವಾದಿ ಸಮಾಜ ನಿರ್ಮಿಸಲು ಸುಸಂಗತವಾದ, ಕಾರ್ಯಸಾಧುವಾದ, ವೈಜ್ಞಾನಿಕವಾದ ವಿಧಾನವೊಂದನ್ನು ಕಂಡುಹಿಡಿದ ಮಾರ್ಕ್ಸ್ ರವರೇ ತಮ್ಮ ಸ್ವಂತ ಜೀವನವನ್ನು ಹೇಗೆ ನಡೆಸುತ್ತಿದ್ದರು ?**

**ಇದಕ್ಕೆ ಉತ್ತರವನ್ನು ಅವರು ೧೮೫೨ರ ಸೆಪ್ಟೆಂಬರ್ ೮ ರಂದು ತಮ್ಮ ಸನ್ಮಿತ್ರ ಎಂಗೆಲ್ಸ್‌ರಿಗೆ ಬರೆದ ಪತ್ರವೊಂದರಿಂದ ತಿಳಿಯಬಹುದು.**

*"…. ನಾನು ಎಂದಿನಂತೆ ಬಡತನದ ಬೇಗೆಯಲ್ಲಿ ಸಿಕ್ಕಿಬಿದ್ದು ತೊಳಲಾಡುತ್ತಿರುವಾಗಲೂ ಅದರ ಬಗೆಗೆ ಎಷ್ಟು ಮಾತ್ರವೂ ತಲೆಕೆಡಿಸಿಕೊಂಡಿಲ್ಲವೆಂಬುದನ್ನು ನೀವು ನನ್ನ ಪತ್ರಗಳಿಂದ ತಿಳಿದಿರಬಹುದು…… ನನ್ನ ಮನೆ ಒಂದು ಆಸ್ಪತ್ರೆಯಾಗಿಬಿಟ್ಟಿದೆ. ವಾತಾವರಣ ತುಂಬ ಹದಗೆಟ್ಟು ನನ್ನ ಮನಸ್ಸು ಕದಡಿ ಕಲ್ಲೋಲವಾಗಿದೆ…… ನನ್ನ ಪತ್ನಿ ಹಾಯಿಲೆ ಮಲಗಿದ್ದಾಳೆ. ಜೆನ್ನಿಚೆನ್ ಕೂಡ ರೋಗಿಷ್ಟೆ. ಲೆಂಚೆನ್‌ಳೂ ಯಾವುದೋ ರೀತಿಯ ನರರೋಗದಿಂದ ನರಳುತ್ತಿದ್ದಾಳೆ. ವೈದ್ಯರನ್ನು ಕರೆಯೋಣವೆಂದರೆ ಔಷಧಿಗೆ ಕೊಡಲು ನನ್ನ ಬಳಿ ಕಾಸಿಲ್ಲ….. ಈಗ ೮-೧೦ ದಿನಗಳಿಂದ ನಾವು ಕೇವಲ ಬ್ರೆಡ್-ಆಲೂಗೆಡ್ಡೆ ತಿಂದು ಜೀವಿಸುತ್ತಿದ್ದೇವೆ. ಇಂದು ಅದಕ್ಕೂ ಬರ ಬರಬಹುದೆಂಬ ಶಂಕೆ ಇದೆ…….. ನಾನು 'ದಾನಾ' ಪತ್ರಿಕೆಗೆ ಲೇಖನ ಬರೆಯಲಾಗಿಲ್ಲ, ಏಕೆಂದರೆ, ಪತ್ರಿಕೆ ಕೊಂಡು ಓದಲು ನನ್ನ ಬಳಿ ಬಿಡಿಗಾಸೂ ಇಲ್ಲ……. ಅಷ್ಟೇ ಅಲ್ಲ, ನನ್ನ ಮುಂದೆ ಬೇಕರಿಯವನ, ಹಾಲಿನವನ, ಸಾಮಾನು ಅಂಗಡಿಯವನ, ಬಿಲ್ಲುಗಳು ಪೇರಿಸಿ ಬಿದ್ದಿವೆ. ಇವನ್ನೆಲ್ಲ ತೀರಿಸುವುದೆಂತು? ಕಳೆದ ೮-೧೦ ದಿನಗಳಲ್ಲಿ ನಾವು ಜೀವ ತೊರೆಯುವುದನ್ನು ತಪ್ಪಿಸುವುದು ತೀರ ಅವಶ್ಯ ಎಂದು ಕಂಡುಬಂದುದರಿಂದ ನಾನು ಕೆಲವರಿಂದ ಅಷ್ಟಿಷ್ಟು ಪುಡಿಹಣ ಸಾಲ ಪಡೆದಿದ್ದೇನೆ. ಮರು ಪಾವತಿ ಮಾಡುವುದೆಂತು?……..''*

ಹಾಗೂ ರಜಾ ಕಾಲದ ವಿಹಾರ ಸೌಲಭ್ಯ - ಇವೆಲ್ಲವನ್ನೂ ಒದಗಿಸಲಾಗಿದ್ದಿತು. ಇಂತಹ ಸೌಲಭ್ಯಗಳು ಯಾವುದೇ ವಿಕಸಿತ ಬಂಡವಾಳಶಾಹಿ ಸಮಾಜದಲ್ಲೂ ಊಹಾತೀತವೆನಿಸಿದ್ದವು.

ಹಾಗಾಗಿ ಕಾರ್ಮಿಕ ಸೋವಿಯೆತ್ ಒಕ್ಕೂಟದಲ್ಲಿ ತನ್ನ ಶ್ರಮದ ಪೂರ್ಣಮೌಲ್ಯವನ್ನು ಹಣದ ರೂಪದಲ್ಲಿ ಹಿಂದಕ್ಕೆ ಪಡೆಯದಿದ್ದರೂ, ಮೇಲೆ ತಿಳಿಸಿದ ಸೌಲಭ್ಯಗಳನ್ನೆಲ್ಲ ಉಚಿತವಾಗಿ ಇಲ್ಲವೇ ಅತ್ಯಂತ ಕಡಿಮೆ ವೆಚ್ಚದಲ್ಲಿ ಪಡೆಯುತ್ತಿದ್ದುದರಿಂದಲೂ ಉತ್ಪಾದನಾ ವ್ಯವಸ್ಥೆಯಲ್ಲಿ ಖಾಸಗಿ ಒಡೆತನ ಸಂಪೂರ್ಣವಾಗಿ ರದ್ದಾಗಿದ್ದುದರಿಂದಲೂ, ಸಾಮಾನುಗಳ ಬೆಲೆಗಳು ೫೦ಂಕ್ಕೂ ಹೆಚ್ಚು ವರ್ಷಗಳಿಂದ ಬಿಡಿಗಾಸಿನಷ್ಟೂ ಹೆಚ್ಚದಿದ್ದುದರಿಂದಲೂ ಅಲ್ಲಿದ್ದ ವ್ಯವಸ್ಥೆ ಬಂಡವಾಳಶಾಹಿ ವ್ಯವಸ್ಥೆಯೇ ಎಂದು ಹೇಳುವುದು ತಾತ್ವಿಕವಾಗಿಯೂ ಎಷ್ಟು ಉಚಿತ, ಎನಿಸದೆ ಇರದು.

**ಅಧಿಕಾರಶಾಹಿಯ ದುರಾಡಳಿತ…**

ಆದರೆ ಒಂದು ತಪ್ಪು ಮಾಡಲಾಯಿತು. ಅದೆಂದರೆ - ಇವೆಲ್ಲದರ ಇಡೀ ವ್ಯವಸ್ಥಾಪನೆ ಹಾಗೂ ನಿರ್ವಹಣೆಯನ್ನು ಇಡಿಯಾಗಿ ಅಧಿಕಾರಶಾಹಿಗೆ ವಹಿಸಿಕೊಡಲಾಯಿತು. ಮತ್ತು ಅದರ ಮೇಲೆ ರಾಜ್ಯದ ಹಾಗೂ ರಾಜಕೀಯ ನಾಯಕರ ನಿಯಂತ್ರಣ ಆರಂಭದಲ್ಲಿ ಸಾಕಷ್ಟಿದ್ದರೂ ಅನಂತರ ಅದು ಸಡಿಲಗೊಂಡಿತು. ಇದರಿಂದಾಗಿ ಭ್ರಷ್ಟಾಚಾರ ಸ್ವಜನಪಕ್ಷಪಾತಗಳು ಸಾಕಷ್ಟು ತಲೆ ಎತ್ತಿಕೊಂಡವು. ಅಧಿಕಾರಶಾಹಿ ಎಷ್ಟು ಪ್ರಬಲವಾಗಿ ಬೆಳೆಯಿತೆಂದರೆ ದೊಡ್ಡ ದೊಡ್ಡ ನಾಯಕರೂ ಅದರ ಕಪಿಮುಷ್ಟಿಯಲ್ಲಿ ಸಿಕ್ಕಿಬಿದ್ದರು. ಅವರ ಪ್ರಭಾವದಲ್ಲಿ ಅನೇಕ 'ಮಾಫಿಯಾ'ಗಳು ಬೆಳೆದು, ಅದರಿಂದ ಸಾಮಾನ್ಯ ಜನರಿಗೆ ತುಂಬ ಕಿರುಕುಳ ಉಂಟಾಯಿತು. ಜನರು ಹಿಂದಿನ ಸೋವಿಯೆತ್ ವ್ಯವಸ್ಥೆಗೆ ಬಲವಾಗಿ ನಿಂತು ಬೆಂಬಲ ಕೊಡದಿದ್ದುದಕ್ಕೆ ಬಹುಶಃ ಇದೂ ಒಂದು ಕಾರಣವೆನ್ನಬಹುದು.

**ವ್ಯೂಹ ತಂತ್ರಗಳ ವೈಫಲ್ಯ**

ಸೋವಿಯೆತ್ ಒಕ್ಕೂಟದಲ್ಲಿ ಸಮಾಜವಾದಿ ನಿರ್ಮಾಣಕಾರ್ಯ ಮಾನವ ಇತಿಹಾಸದಲ್ಲೇ ಪ್ರಪ್ರಥಮ ಯತ್ನವಾಗಿದ್ದುದರಿಂದ ಅದಕ್ಕೆ ತಾನು ಅನುಸರಿಸಲು ಯಾವುದೇ ಮಾದರಿ ಇರಲಿಲ್ಲ. ಆದ್ದರಿಂದ ಎಷ್ಟೇ ಎಚ್ಚರಿಕೆಯಿಂದಿದ್ದರೂ ಅಡ್ಡದಾರಿ ಹಿಡಿಯುವುದು, ತಪ್ಪು ಮಾಡುವುದು ಸಹಜವೇ ಆಗಿದ್ದಿತು, ಅದೂ ಬಂಡವಾಳವಾದಿ ರಾಜ್ಯಗಳಿಂದ ಸುತ್ತುವರಿಯಲ್ಪಟ್ಟಿದ್ದಾಗ - ಎಂದು ಮತ್ತೆ ಕೆಲವರು ವಿವರಣೆ ನೀಡುತ್ತಾರೆ. ಅವರ ವಾದ ಹೀಗಿದೆ:

ರಷ್ಯದಲ್ಲಿ ಶ್ರಮಜೀವಿ ವರ್ಗದಿಂದ ಕ್ರಾಂತಿಯಾಗಿ ಸಮಾಜವಾದಿ ನಿರ್ಮಾಣ ಕಾರ್ಯ ಪ್ರಾರಂಭವಾದಾಗ ಅದನ್ನು ಹುಟ್ಟಿನಲ್ಲೇ ಹೊಸಕಿ ಹಾಕಲು ಸಾಮ್ರಾಜ್ಯಶಾಹಿ ದೇಶಗಳು ಶತಾಯಗತಾಯ ಯತ್ನಿಸಿದವು. ಚರ್ಚಿಲ್ ಮಹಾಶಯ ಅವಕಾಶ ಸಿಕ್ಕಿದಾಗಲೆಲ್ಲ ಹೀಗೆಯೇ ಬುಸುಗುಟ್ಟುತ್ತಿದ್ದ. ಹಾಗಾಗಿ ನವಜಾತ ಸಮಾಜವಾದಿ ರಾಜ್ಯ ತನ್ನನ್ನು ಈ ಕುತಂತ್ರಗಳಿಂದ ಪಾರುಮಾಡಿಕೊಳ್ಳಲು ತನ್ನ ದೇಶದ ಸುತ್ತ ಒಂದು ರಕ್ಷಾ ಕವಚವನ್ನು – ಪಾಶ್ಚಿಮಾತ್ಯರು ಹೇಳುವಂತಹ ಉಕ್ಕಿನ ಪರದೆಯನ್ನು – ನಿರ್ಮಿಸಿ ಕೊಳ್ಳುವುದು ಅವಶ್ಯವಾಗಿದ್ದಿತು. ಆ ದೇಶಕ್ಕೂ ಹೊರ ದೇಶಗಳಿಗೂ ನಡುವೆ ನೇರ ಸಂಪರ್ಕ ಇರದಂತಾಗಿದ್ದಿತು.

ಆದರೆ ದ್ವಿತೀಯ ಮಹಾಯುದ್ಧಾನಂತರ ಸೋವಿಯೆತ್ ಒಕ್ಕೂಟವು ಹಿಟ್ಲರನನ್ನು ಸದೆಬಡಿದು ತಾನೊಂದು ಮಹಾನ್ ಶಕ್ತಿಶಾಲೀ ರಾಷ್ಟ್ರ ಎಂದು ತೋರಿಸಿ ಕೊಂಡನಂತರ, ತನ್ನ ಸುತ್ತಲಿನ ಕವಚವನ್ನು ಸ್ವಲ್ಪ ಸಡಿಲಿಸಬಹುದಿತ್ತು. ಹೊರದೇಶಗಳೊಂದಿಗೆ, ಸಾಮ್ರಾಜ್ಯಶಾಹಿ ದೇಶಗಳೊಂದಿಗೂ ಸಹ, ನೇರ ಸಂಪರ್ಕ ಏರ್ಪಡಿಸಿಕೊಳ್ಳಬಹುದಿತ್ತು. ಇದರಿಂದ ಜನರಲ್ಲಿ ತಾವು ಬೇರ್ಪಟ್ಟಿದ್ದಂಥ ಭಾವನೆ ತೊಲಗುತ್ತಿತ್ತು. ವ್ಯಾಪಾರ ವಹಿವಾಟುಗಳನ್ನು ವಿಸ್ತರಿಸಿ ಸೋವಿಯೆತ್ ಪದಾರ್ಥಗಳು ಪಾಶ್ಚಿಮಾತ್ಯ ಮಾರುಕಟ್ಟೆಗಳಲ್ಲೂ ಪಾಶ್ಚಿಮಾತ್ಯ ಪದಾರ್ಥಗಳು ಸೋವಿಯೆತ್ ಮಾರುಕಟ್ಟೆಯಲ್ಲೂ ದೊರೆಯುವಂತೆ ಮಾಡಿದ್ದರೆ, ಜನರಲ್ಲಿ ತಮಗೆ ಹೊರ ದೇಶಗಳ ಪದಾರ್ಥಗಳು ಲಭ್ಯವೇ ಇಲ್ಲವಲ್ಲ ಎಂಬಂಥ ಕಹಿ ಭಾವನೆ ಇಲ್ಲದಂತಾಗುತ್ತಿತ್ತು. ಅಲ್ಲದೆ ಸೋವಿಯೆತ್ ಜನರಿಗೆ ಹೊರದೇಶ ಸಂಚಾರ ಸುಲಭ ಮಾಡಿಕೊಟ್ಟಿದ್ದರೆ ಅವರು ಅಲ್ಲಿನ ಥಳಕು ಹಾಗೂ ಬಾಹ್ಯ ಆಕರ್ಷಣೆಗೆ ಮಾರುಹೋಗದೆ ಅಲ್ಲಿನ ಹುಳುಕುಗಳನ್ನು ತಾವೇ ಕಣ್ಣಾರೆ ಕಾಣುವುದು ಸಾಧ್ಯವಾಗುತ್ತಿದ್ದಿತು. ಕೊಡು-ಕೊಳ್ಳುಗಳ ಮೂಲಕ ಜನಜೀವನ ಮತ್ತಷ್ಟು ಹಸನುಗೊಳ್ಳುತ್ತಿತ್ತು. ಜೊತೆಗೆ ಆರ್ಥಿಕ ವ್ಯವಸ್ಥೆಯಲ್ಲೂ ಸುಧಾರಣೆ ಉಂಟಾಗುತ್ತಿದ್ದಿತು. ಬಂಡವಾಳವಾದದಲ್ಲಿ ಎಷ್ಟೇ ಲೋಪ ದೋಷಗಳಿದ್ದರೂ ನಿರ್ವಹಣೆ ಹಾಗೂ ವ್ಯವಸ್ಥಾಪನೆಯಲ್ಲೂ ಕಾರ್ಯದಕ್ಷತೆಯಲ್ಲೂ ಅದರದು ಮೇಲುಗೈಯೇ. ಇದನ್ನು ರಷ್ಯ ಕಲಿಯಬಹುದಿತ್ತು. ಹೊರ ಜಗತ್ತಿನಲ್ಲಿ ಆಧುನಿಕ ತಂತ್ರಜ್ಞಾನದಲ್ಲುಂಟಾಗಿರುವ ಕ್ರಾಂತಿಯ ಫಲಗಳನ್ನು ರಷ್ಯವೂ ಸವಿಯಬಹುದಿತ್ತು. ಅಂತಹ ಫಲಗಳನ್ನು ಸಾಮಾನ್ಯ ಜನಜೀವನದಲ್ಲೂ ಅನ್ವಯಕ್ಕೆ ತರುವಂಥ ರೀತಿನೀತಿಗಳನ್ನು ಕಲಿಯಬಹುದಿದ್ದಿತು.




ಇದನ್ನು ರಷ್ಯ ತನ್ನ ಸುತ್ತಲಿನ ಪರದೆಯನ್ನು ಹಿಂದೆಯೇ ಎಚ್ಚರಿಕೆಯಿಂದ, ನಿಧಾನವಾಗಿ ಸರಿಸತೊಡಗಿದ್ದಲ್ಲಿ, ದೇಶದೊಳಗೆ ಜನರಿಗೆ ಹೆಚ್ಚಿನ ವ್ಯಕ್ತಿ ಸ್ವಾತಂತ್ರ್ಯ ನೀಡಿ ಅವರು ಸರಾಗವಾಗಿ ಉಸಿರಾಡುವಂತೆ ಮಾಡಿದ್ದಲ್ಲಿ, ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಆಚರಣೆಗೆ ತಂದಿದ್ದಲ್ಲಿ, ಈ ಪತನ ಉಂಟಾಗುತ್ತಿರಲಿಲ್ಲವೇನೋ. ಅಂತಹ ಎಚ್ಚರಿಕೆ ತಪ್ಪಿದ್ದೇ ಈ ಮಹಾ ದುರಂತಕ್ಕೆ ಕಾರಣವಾಯಿತೆನ್ನ ಬಹುದು, ಎಂಬುದು ಇವರ ವಾದ.

ಇಷ್ಟು ಕೆಲವು ವಿದ್ವಾಂಸರು ಎತ್ತಿ ತೋರಿಸುವ

ಮತ್ತೊಂದು ಲೋಪವೆಂದರೆ - ಸೋವಿಯೆತ್ ಒಕ್ಕೂಟದಲ್ಲಿ ಉತ್ಪಾದನಾ ವ್ಯವಸ್ಥೆಯಲ್ಲಿ ಗುಣಕ್ಕೆ ಹೆಚ್ಚಿನ ಗಮನ ನೀಡದೆ ಕೇವಲ ಪ್ರಮಾಣಕ್ಕೇ ಒತ್ತುಕೊಟ್ಟುದು. ಪಂಚವಾರ್ಷಿಕ ಹಾಗೂ ಪ್ರತಿವಾರ್ಷಿಕ ಯೋಜನೆಗಳಲ್ಲಿ ಗೊತ್ತುಗುರಿಗಳನ್ನು ಜನರ ಭಾಗವಹಿಸುವಿಕೆ ಇಲ್ಲದೆಯೇ, ಯಾಂತ್ರಿಕವಾಗಿ ಮೇಲಿನಿಂದ ಅವರ ಮೇಲೆ ಹೊರಿಸಿ, ಆ ಲಕ್ಷ್ಯಾಂಕಗಳನ್ನು ಪೂರೈಸುವುದರ ಕಡೆಗಷ್ಟೇ ಗಮನ ನೀಡಲಾಯಿತು. ವಸ್ತುಗಳ ಹಾಗೂ ಕಾರ್ಯದ ಗುಣವನ್ನು ನಿರ್ಲಕ್ಷಿಸಲಾಯಿತು. ಜೊತೆಗೆ ಬಾಹ್ಯ ಪ್ರಪಂಚದ ವಸ್ತುಗಳ ಹಾಗೂ ಕಾರ್ಯರೀತಿಯ ಪರಿಚಯವೂ ಇರದಿದ್ದುದರ ಪರಿಣಾಮವಾಗಿ ಉತ್ಪಾದನೆಯು ಪ್ರಮಾಣಾತ್ಮಕ ಗುರಿಯನ್ನು ಈಡೇರಿಸಿದ್ದರೂ ಗುಣಾತ್ಮಕವಾಗಿ ಹಿಂದೆಯೇ ಬಿದ್ದಿರುತ್ತಿದ್ದಿತು. ಜನರಲ್ಲಿ ನಿರಾಶೆ, ಭ್ರಮನಿರಸನ ಉಂಟಾಗುವುದಕ್ಕೆ ಇದೂ ಒಂದು ಕಾರಣ, ಎನ್ನುತ್ತಾರೆ ಇವರು.

**ಆಶಾ ಜ್ಯೋತಿ...**

ಏನೇ ಆಗಲಿ ಒಂದಂತೂ ಈಗ ಸ್ಪಷ್ಟವಾಗಿದೆ. ಗೋರ್ಬಚೋವ್ ಹಾಗೂ ಯೆಲ್‌ತ್ಸಿನ್‌ರಂಥ ಸೋವಿಯೆತ್ ನಾಯಕರು ಸಾಮ್ರಾಜ್ಯಶಾಹಿ ದೇಶಗಳ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣಗಳ ಘೋಷಣೆಗೆ ಮಾರು ಹೋಗಿ, ತಮ್ಮ ದೇಶದ ಆರ್ಥಿಕತೆಯನ್ನು ಮಾರುಕಟ್ಟೆ ಆರ್ಥಿಕತೆಯನ್ನಾಗಿ ಪರಿವರ್ತಿಸುವ ಯತ್ನದಲ್ಲಿ ಹಿಂದಿನ ಎಲ್ಲ ಸಾಧನೆಗಳನ್ನೂ ನಶ್ವರಗೊಳಿಸಿ ಮತ್ತೆ ಬಂಡವಾಳಶಾಹಿ ವ್ಯವಸ್ಥೆಯನ್ನೇ ಜಾರಿಗೆ ತರಲು ಹವಣಿಸಿ, ಅದರಲ್ಲೂ ವಿಫಲರಾಗಿದ್ದಾರೆ. ಇಂದು ಅಲ್ಲಿ ಬಂಡವಾಳವಾದವೂ ಪೂರ್ಣವಾಗಿ ಸ್ಥಾಪಿತವಾಗಿಲ್ಲ. ಹಾಗಾದರೂ ಆಗಿದ್ದರೆ ಕಾರ್ಮಿಕರಿಗೆ ಕನಿಷ್ಠಪಕ್ಷ ವೇತನವಾದರೂ ಲಭಿಸುತ್ತಿತ್ತು. ಇಂದು ಅಲ್ಲಿ ಆರ್ಥಿಕ ಅರಾಜಕತೆ ಹಾಗೂ ಅಸಂದಿಗ್ಧತೆಗಳು ತಾಂಡವವಾಡುತ್ತಿವೆ. ಸಾಮಾನ್ಯ ಜನ ಹೇಳ ತೀರದಷ್ಟು ಸಂಕಷ್ಟ ಅನುಭವಿಸುತ್ತಿದ್ದಾರೆ. ಮತ್ತೊಂದು ಕ್ರಾಂತಿಗೆ ಆಸ್ಪದ ಕೊಡುವಂತ ಪರಿಸ್ಥಿತಿಗಳು ಅಲ್ಲಿ ಉಂಟಾಗುತ್ತಿವೆಯೇ ಎಂದೂ ಕೆಲವರು ಆಶ್ಚರ್ಯಪಡುವಂತಾಗಿದೆ.

ಆದರೆ ಅಲ್ಲೂ ಮತ್ತಿತರ ಮಾಜಿ ಸಮಾಜವಾದಿ ದೇಶಗಳಲ್ಲೂ, ಜಗತ್ತಿನ ಇತರ ದೇಶಗಳಲ್ಲೂ ಕಮ್ಯುನಿಸ್ಟ್ ವಿಚಾರಧಾರೆಯೇನೂ ಸಂಪೂರ್ಣವಾಗಿ ಬತ್ತಿಹೋಗಿಲ್ಲ. ಸೂಕ್ತ ಸಮಯದಲ್ಲಿ ಅದು ಮತ್ತೆ ವಿಜೃಂಭಿಸುವ ಎಲ್ಲ ಸೂಚನೆಗಳೂ ಇವೆ. ಅಲ್ಲದೆ ಜಗತ್ತಿನಲ್ಲಿಂದು ಕ್ಯೂಬ ಮತ್ತು ಚೀಣ ದೇಶಗಳು ಇನ್ನೂ ಮಾರ್ಕ್ಸ್‌ವಾದವನ್ನೇ ಆಧಾರವಾಗಿರಿಸಿಕೊಂಡು ತಮ್ಮ ದೇಶಗಳಲ್ಲಿ ನವ ಸಮಾಜ ನಿರ್ಮಾಣ ಕಾರ್ಯದಲ್ಲಿ ತೊಡಗಿವೆ. ಇವು ಸೋವಿಯೆತ್ ಒಕ್ಕೂಟದ ಮಹಾ ಪತನದಿಂದ ಪಾಠ ಕಲಿತು, ಅದರ ತಪ್ಪುಗಳನ್ನು ನಿವಾರಿಸಿಕೊಂಡು ಮುಂದುವರಿದಲ್ಲಿ ತಮ್ಮ ಗುರಿ ಸಾಧಿಸುವುದರಲ್ಲಿ ಸಂಶಯವಿಲ್ಲ. ಇವು ಆಂತರಿಕವಾಗಿ ಜಾಗತೀಕರಣ ಹಾಗೂ ಉದಾರೀಕರಣಗಳ ಸಲ್ಲಕ್ಷಣಗಳನ್ನಷ್ಟೇ ಬಳಸಿಕೊಂಡು ಬಹು ಎಚ್ಚರಿಕೆಯಿಂದ ಅವಶ್ಯ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಾಗಿದೆ, ಆರ್ಥಿಕತೆಯನ್ನು ಬಲಗೊಳಿಸಬೇಕಾಗಿದೆ; ದೇಶದೊಳಗೆ ಜನರಿಗೆ ನಿರ್ದಿಷ್ಟ ಇತಿಮಿತಿಗಳೊಳಗೆ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಒದಗಿಸಬೇಕಾಗಿದೆ.

ಅಂತರರಾಷ್ಟ್ರೀಯವಾಗಿ ಇವು ಎಲ್ಲ ದೇಶಗಳೊಂದಿಗೂ, ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿ ದೇಶಗಳೊಂದಿಗೂ ಸಹ, ಸ್ನೇಹ ಸಂಬಂಧಗಳನ್ನು ಬೆಳೆಸಿಕೊಳ್ಳುವಾಗಲೇ, ತಮ್ಮೆಲ್ಲ ಪೂರ್ವಗ್ರಹ ಪೀಡಿತ ಭಾವನೆಗಳನ್ನೂ ಮಡಿವಂತಿಕೆಯನ್ನೂ ಬಿಟ್ಟುಕೊಟ್ಟು ಸ್ವಲ್ಪ ಔದಾರ್ಯದ ಭಾವನೆ ಬೆಳೆಸಿಕೊಂಡು, ರಷ್ಯ ಹಾಗೂ ಭಾರತಗಳೊಂದಿಗೆ ನಿಕಟ ವಿಶ್ವಾಸಯುತ ಬಾಂಧವ್ಯ ಏರ್ಪಡಿಸಿಕೊಳ್ಳುವುದು ಅವಶ್ಯವಾಗಿದೆ. ಹೀಗೆ ಮಾಡಿದಲ್ಲಿ ಈ ರಾಷ್ಟ್ರಗಳು ಇಂದು ಮಾರ್ಕ್ಸ್‌ವಾದ ಎದುರಿಸುತ್ತಿರುವ ಸವಾಲುಗಳಿಗೆ ಸರಿಯಾದ ಉತ್ತರ ನೀಡಬಲ್ಲ ಆಶಾಜ್ಯೋತಿಗಳಾಗಿ ಬೆಳಗಬಲ್ಲವು.

**ಕೆ. ಎಲ್. ಗೋಪಾಲಕೃಷ್ಣರಾವ್**
ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

## ಇದು ಮೊದಲು

ಹಸಿದಿಹುದು ಹೊಟ್ಟೆ, ಕೊಡು ಅನ್ನವನು. ನನ್ನ ತನು;
ಕೋಡುತಿದೆ ಚಳಿಗೆ; ಕೊಡು ಬಟ್ಟೆಗಳನ್ನು
ಗಾಳಿ ಬೆಳಕಿನ ಗೋರಿಯಲ್ಲಿ ಹೂತಿರುವೆನಿದೊ;
ಕೊಡು ನನಗೆ ಸುವಿಶಾಲ ವಸತಿಗಳನ್ನು
ಇದು ಮೊದಲು ಆಮೇಲೆ ಉಳಿದುದೆಲ್ಲ!
ಅದುವರೆಗೆ ಉಳಿದೆಲ್ಲ ಮಾತು ಹೊಲ್ಲ!

ನನ್ನ ಬೆವರನು ಹೀರಿ ಹೀರಿ ಬೆಳೆದಿದೆ ಜಗದ
ಸಿರಿಯ ಸಸಿ; ಅದರ ಫಲವೆಲ್ಲ ನಿನಗೆ !
ನಗುವ ತೋಟದ ಹೊರಗೆ ಕೊಳೆ ಚರಂಡಿಯ ಮರೆಗೆ
ನಾರುವೆನು ನಾನು - ಕ್ರಿಮಿ, ನಿನ್ನ ಹಗೆ,
ದಯೆಯ ಮಂಜನು ಸುರಿದು ನನ್ನ ಮನಕೆ
ನೀನೆ ತಲೆದೂಗುತಿಹೆ ನಿನ್ನ ಗುಣಕೆ !

ಧರ್ಮಶಾಸ್ತ್ರ, ಕಲೆಯು, ನೀತಿಧರ್ಮದ ಬಲೆಯು
ಹೆಣೆದು ಕರೆಯುವೆ ನನ್ನ ನಿನ್ನ ಬಳಿಗೆ;

ನಿನ್ನ ಮಾತಿಗೆ ಮರುಳುನೊಣ ನಾನು ಈವರೆಗೆ;
ಬರುವ ಕಾಲವೆ ಬೇರೆ ನೋಡು ಹೊರಗೆ
ಜೇಡನನ್ನೂ ನೊಣೆವ ಅತಿ ಪ್ರಚಂಡ,
ಕಾಣದೇ ಅಲ್ಲಿ ಆ ತಂಡ, ತಂಡ ?

ಒಡೆಯುತಿರೆ ಹಣತೆ ಹೊಸ ಬತ್ತಿ ಹೊಸೆಯುವೆ; ಬತ್ತಿ
ಹೋಗುತಿವೆ ಸೆಲೆ ಕಣ್ಣ ನೀರ ಕರೆವೆ !

ಉರಿವೊಲೆಯ ಮೇಲೆ ಹೂಮಾಲೆ ತೂಗುವೆ; ಕಾಲು
ಕುಸಿದವಗೆ ಶಿಖರವನು ಹಾಡುತಿರುವೆ !
ನನ್ನ ಮನದೊಳದೇನ ಕಾಂಬೆ ನೀನು ?
ಹಸಿದ ಹುಲಿ ! ಹೂಂಕಾರ ಕೇಳದೇನು ?

ಹೊಟ್ಟೆಯಲಿ ಹುಟ್ಟಿದೀ ಬೆಂಕಿ ವಿಲಯಾಗ್ನಿ ಸಮ
ಏರುತಿದೆ ಎದೆಗೆ, ಮನುಜತೆಯು ಚಿತೆಗೆ !
ಕಟ್ಟುಕಟ್ಟಳೆಯೆಲ್ಲ ಇದಕೆ ಕಟ್ಟಿಗೆಯಾಗಿ
ಸುಟ್ಟೀತು ಮನುಕುಲವೆ ಇದರ ಹತಿಗೆ.
ನಿನ್ನ ನಂದನ ಬೂದಿಯಾಗದಂತೆ
ನನ್ನದನು ಕೊಡು ನಾನು ತಣಿಯುವಂತೆ.

ನ್ಯಾಯ ಅನ್ಯಾಯ ಸತ್ಯಾಸತ್ಯಗಳ ಅರಿವು
ಸುಟ್ಟು ಹೋಗಿದೆ ನೋಡು, ಹಸಿವೆಯಲ್ಲಿ !
ನಾನು ಪಶು, ಶುದ್ಧ ಪಶು ! ಹೊಟ್ಟೆ ತುಂಬಲಿ; ಬಳಿಕ
ಬಂದೇನು ನಾನೂನು ನಿನ್ನ ಕೂಡ
ನಿನ್ನ ಕನಸಿನ ನೂಲುದಾರಿಯಲ್ಲಿ;
ಏರೇನು ನಾ ಮುಗಿಲನೇಣಿಯಲ್ಲಿ !

ಸುತ್ತಮುತ್ತಲು ನನ್ನ ಬಳಸಿಹುವು ದೀನತೆಯ
ಹೀನತೆಯ ಗೋಡೆಗಳು ಬಾನೆತ್ತರ;
ಅದರಾಚೆ ಚೆಲುವೊಲವು ರಸವು ಸಂಸ್ಕೃತಿ ನಲವು
ನಲಿವುವೆಂದರೆ, ನೋಡು, ಇದೆ ಉತ್ತರ :-
ಒಡೆದು ಬೀಳಲಿ ಮೊದಲು ಕೋಟೆಯೆಲ್ಲ;
ಇದು ಮೊದಲು ಆಮೇಲೆ ಉಳಿದುದೆಲ್ಲ !

ಅನ್ನವನು ಕೊಡು ಮೊದಲು, ಬಟ್ಟೆಯನು ಕೊಡು
ಉಡಲು,
ಕಟ್ಟಿಕೊಡು ಮನೆಗಳಸು; ಬಳಿಕ ನೀನು
ಕವಿಯಾಗಿ ಬಾ, ನೀತಿವಿದನಾಗಿ ಬಾ, ಶಾಸ್ತ್ರಿ-
ಯಾಗಿ ಧಾರ್ಮಿಕನಾಗಿ ಮನುಜತೆಯನು
ಕಲಿಸು ಬಾ, ಇವನದನು ಕಲಿಯಬಲ್ಲ !
ಇದು ಮೊದಲು ಆಮೇಲೆ ಉಳಿದುದೆಲ್ಲ !

**- ಗೋಪಾಲಕೃಷ್ಣ ಅಡಿಗ**
**(ಸಮಗ್ರ ಕಾವ್ಯ : ೧೯೩೭-೧೯೭೬)**
ಸಾಕ್ಷಿ ಪ್ರಕಾಶನ, ಬೆಂಗಳೂರು - ೫೬೦ ೦೪೧

ಎಚ್ ಎಮ್ ಟಿ
ಬಹುಮಾನಿತ ಲೇಖನ




''**ಲೇ,** ಈ ಮನಸ್ಸು ಅಂಬೋದು ಏನೇ ?''

ಖಾಲಿ ಚಮಚವನ್ನು ಕೈಲಿ ಹಿಡಿದು ಅದರ ತುದಿಯನ್ನೇ ಅನ್ಯಮನಸ್ಕಳಾಗಿ ದಿಟ್ಟಿಸುತ್ತಾ ಆತ್ಮಚಿಂತಾಭಾರದಲ್ಲಿ ಮೆಲ್ಲನುಸುರಿದಳು ಭಾನು.

''ಅದು ಬ್ರಹ್ಮ ವಸ್ತು.... ಘನತತ್ತ್ವ. ಹೀಗೆಲ್ಲ ಈರುಳ್ಳಿಯಂಥ ಪ್ರತಿಸೃಷ್ಟಿಗಳನ್ನು ಮೇಯುತ್ತಾ ಮಥಿಸತಕ್ಕ ವಿಚಾರವಲ್ಲ. ನೀನು ಮೊದಲು ಗಲ್ಲಕ್ಕೆ ಹತ್ತಿರುವ ಸಾಸಿನ ಹನಿಯನ್ನು ಒರೆಸಿಕೋ !'' ಅನು ಗದರಿದಳು.

''ನೀನೇ ಒರೆಸಿಬಿಡೇ...'' ಅವಳ ಮುಖದ ಮುಂದೆ ಗಲ್ಲ ಚಾಚಿ ಹಲ್ಲು ಗಿಂಜಿದಳು. ''ಸರ್ರೋಯ್ತು.... 'ಗಂಜಿ ಕುಡಿಯೋನಿಗೆ ಮೀಸೆ ಹಿಡಿಯೋರೊಬ್ರು !' ಅಂದ್ಹಾಗೆ..'' ಮುದ್ದಾಗಿ ಬಯ್ಯುತ್ತಲೇ ಅನು ಅವಳ ಗಲ್ಲವೊರೆಸಿದಳು.

''ಏನಾದರಾಗಲಿ. ಅದ್ವೈತ ಸಿದ್ಧಾಂತವನ್ನು ಯಾವಾಗಲೂ ಮನ್ನಿಸೋಕೆ ಆಗೊಲ್ಲ. ಯಾಕೇಂದ್ರೆ ಮನಸ್ಸು ಒಂದೇ ಒಂದು ಖಂಡಿತ ಅಲ್ಲ. ಅದು ಎರಡೇ ಇರಬೇಕು. ಇಲ್ಲದಿದ್ರೆ ಆಗಾಗ ನಮ್ಮನ್ನು ಕಾಡಿಪೀಡಿಸೋ ದ್ವಂದ್ವಗಳು ಎಲ್ಲಿಂದ ಹುಟ್ಟಿಕೊಳ್ತಾ ಇದ್ವು ?'' ಸೆಕೆ ನಿವಾರಿಸಿಕೊಳ್ಳಲು ಫ್ಯಾನಿನೆಡೆ ಮುಖವೊಡ್ಡಿ ಕೂತ ಸುಶಿಯ ಕಡೆಯಿಂದ ಅಪ್ಪಣೆ ಹೊರಟಿತು.

''ಸುಮ್ನೆ ಯಾಕ್ರೆ ತಲೆ... ಅಲ್ಲ, ಮನಸ್ಸು ಕೆಡಿಸ್ಕೋತೀರಿ ? ಸಿಂಪಲ್ಲಾಗಿ ಒಂದು ವಿಷ್ಯ ತಿಳಕೊಳ್ಳಿ. ಮನಸ್ಸೆಂಬುದು ಚಿಂತನಶೀಲವಾದದ್ದು ಮತ್ತು ಸಚೇತನವಾದದ್ದು. ಇದನ್ನು ಮರೆತ ದಿನ ಖಿನ್ನತೆ, ನಿರಾಶೆ ತಪ್ಪಿದ್ದಲ್ಲ. ಆತ್ಮ ಚೈತನ್ಯದ ಕಲ್ಪನೆಯೇ ಪುಳಕ ಹುಟ್ಟಿಸುವಂಥದ್ದು....'' ಅನು ಅಂದಳು.

"I am in agreement with you, dear lady !" ತಿನ್ನುವುದರಲ್ಲಿ ಯಾವಾಗಲೂ ಕಡೆಯ ಸ್ಥಾನವನ್ನು ಪಡೆದುಕೊಳ್ಳುವ ರಜನಿ ನಿಧಾನವಾಗಿ ಬಿಸಿನೀರಿನ ಬಟ್ಟಲಿನಲ್ಲಿ ಬೆರಳುಗಳನ್ನದ್ದುತ್ತಾ ಮುದದಿಂದ ಹೇಳಿದಳು. ''ಪರಂಪರೆಯ ಪರಿಮಿತಿಗಳನ್ನು ಕೂಡ ದಾಟಿಬಿಡಬಹುದಾದ ಅದ್ಭುತ ಮನಸ್ಸಿನ ಅಪರಿಮಿತ ಶಕ್ತಿಯೇ ಇದೆ.... ಸಿಂಹ ಪರಾಕ್ರಮಿಗಳು ನಾವು !''

''ಅಹಾ ! ವಿವೇಕಾನಂದರ ಮೊಮ್ಮಗಳು !''



''ಅವರು ಒಪ್ಪಿದರೆ ಖಂಡಿತ ಆಗಲಿ !'' ಅಂದಳು ರಜನಿ.

''ಅಂದ್ಹಾಗೆ, ಮನೋ ಸಂಸ್ಕಾರಕ್ಕೂ ವಿದ್ಯೆಗೂ ಸಂಬಂಧ ಹೇಗೆ ? ಅವು ನಿಜವಾಗಿ ಪರಸ್ಪರ ಪೂರಕವೇ ?'' ಇದುವರೆಗೂ ಮೌನವಾಗಿದ್ದ ರತ್ನ ಇದ್ದಕ್ಕಿದ್ದಂತೆ ಒಂದು ಯಕ್ಷಪ್ರಶ್ನೆಯನ್ನೆಸೆದು ಉತ್ತರ ನಿರೀಕ್ಷಿಸುತ್ತಾ ಅಲರ್ಟ್ ಆಗಿ ಕೂತುಬಿಟ್ಟಳು.

''ಲೇ, ಭಾನು, ಅಡಿಗೆ ಮನೆಗೆ ಹೋಗಿ ಇವತ್ತು ರೊಟ್ಟಿಗೆ ಏನು ಹಾಕಿದ್ರು ಕೇಳಿಕೊಂಡು ಬಾರೇ.... ಉಂಡ ಭಾರದಲ್ಲೂ ಇಂತಿಂಥ ತರ್ಕ ಜಿಜ್ಞಾಸೆಗಳು ಹುಟ್ಟುತ್ತಾ ಇವೆ ಅಂದರೆ, ತಿಂದ ಅನ್ನದಲ್ಲೇ ಎಲ್ಲೋ ಆಧ್ಯಾತ್ಮದ ಬೀಜ ಸೇರಿಬಿಟ್ಟಿರಬೇಕು'' ಅನು ಆಜ್ಞಾಪಿಸಿದಳು. ''ತಮಾಷೆ ಮಾಡಬೇಡ್ವೇ.... ತುಂಬಾ ದಿನದಿಂದ ನನ್ನ ಮನಸ್ಸನ್ನ ಕಾಡ್ತಾ ಇರೋ ಪ್ರಶ್ನೆ ಇದು... ಸಂದರ್ಭ ಬಂತಲ್ಲ, ಕೇಳ್ದೆ ಅಷ್ಟೇ !'' ಪರ್ಸನ್ನು ಅಚ್ಚುಕಟ್ಟಾಗಿ ಮುಚ್ಚಿ ಹದವಾಗಿ ಹೆದೆಯೇರಿಸುತ್ತಾ ರತ್ನ ಹೇಳಿದಳು.

ಭಾನು ಈ ಸವಾಲನ್ನು ಸೀರಿಯಸ್ಸಾಗಿ ತೆಗೆದುಕೊಂಡಳು. ತಲೆಯೆತ್ತಿ ಯೋಚಿಸುತ್ತಾ ಸಾವಕಾಶವಾಗಿ ಹೇಳಿದಳು – ''ವಿದ್ಯೆಯ ಸಂಸ್ಕಾರ ಮನಸ್ಸಿಗೆ ಮೆರುಗು ಕೊಡೋದು ಹೌದು. ಆದ್ರೂ ವಿದ್ಯೆಯ ಸಂಸರ್ಗವೇ ಇಲ್ಲದ ಅದೆಷ್ಟೋ ಚೇತನಗಳು ತಮ್ಮ ಸಹಜ ಸತ್ತ್ವದಿಂದಲೇ ಪ್ರಕಾಶಿಸಿಬಿಡಬಲ್ಲವು.'' ''ಸಾಧ್ಯವೇ ಇಲ್ಲ,'' ಸುಶೀ ಉಗ್ರವಾಗಿ ಪ್ರತಿಭಟಿಸಿಬಿಟ್ಟಳು. ''ವಿದ್ಯೆಯ ಗಂಧವಿಲ್ಲದ ಮನಸ್ಸು ಬೂದಿ ಮುಚ್ಚಿದ ಕೆಂಡದಂತೆ. ಬೂದಿಯ ಮಾಲಿನ್ಯ ಕಳೆದು ಕೆಂಡ ಪ್ರಜ್ವಲಿಸಬೇಕಾದರೆ ಜ್ಞಾನದ ಗಾಳಿ ಅಲ್ಲಿ ಹಾಯಲೇಬೇಕು. ವಿದ್ಯೆಯಿಲ್ಲದ ಮನುಷ್ಯರು ಸಂಸ್ಕಾರವಂತರಾಗೋದು ಸಾಧ್ಯವೇ ಇಲ್ಲ.''

''ಎಲೆ ಮರುಳೇ, ಸರಿಯಾಗಿ ಕೇಳು. ವಿದ್ಯೆಯಿಂದ ವಂಚಿತರಾದರೂ ಹೃದಯದಿಂದ ಸಂಸ್ಕಾರವಂತರಾಗಿರೋ ಎಷ್ಟೋ ಸರಳ ಜೀವಿಗಳನ್ನ ನಾನೇ ಕಂಡಿದ್ದೀನಿ. ಅವರ ಅನುಭವವೇ ಅವರ ವಿದ್ಯೆ... ಅಂತರಂಗ ಪಾಕವೇ ಅವರ ಅರಿವು,'' ಭಾನು ನಿಧಾನವಾಗಿ ವಿವರಿಸಿದಳು.

''ಪ್ರೂವ್ ಮಾಡುತ್ತೀಯಾ ?'' ಸುಶಿಯ ಸವಾಲಿಗೆ ''ಸಮಯ ಬರಲಿ.'' ಅಂದಳು ಭಾನು ನೆಮ್ಮದಿಯಿಂದ.

ಇದಾದ ಒಂದೇ ವಾರದೊಳಗೆ ಮತ್ತೆ ಲಲಿತೆ ಅಮೆರಿಕೆಯಿಂದ ಬಂದಳು. ಲಲಿತೆಯೆಂದರೆ ಲವಲವಿಕೆ. ತನ್ನ ಸರಸ ಸುಭಗ ಮಾತುಕತೆಗಳಿಂದ ಗುಂಪಿನಲ್ಲಿ ಕೋಲಾಹಲವುಂಟುಮಾಡಿಬಿಡುತ್ತಾಳೆ. ''ಈ ಸಾರಿ ಮನೆಮನೆ ಭೇಟಿ ಸಾಧ್ಯ ಇಲ್ಲ ಕಣ್ರೇ... ಎಲ್ಲ ಒಟ್ಗೆ ಒಂದ್ಕಡೆ ಸೇರಿಬಿಡೋಣ.'' ಮೊದಲೇ ಫೋನಲ್ಲಿ ಹೇಳಿಬಿಟ್ಟಳು.

''ಲಾಲ್ ಬಾಗ್ ಹಾಗಾದ್ರೆ !'' ಭಾನು ಸಡಗರಿಸಿದಳು.

''ಯಾವ ಸೀಮೆ ಹುಡುಗಿಯೇ ಇದು ? ಬೆಂಗ್ಳೂರು ಅಂದ್ರೆ ಲಾಲ್ ಬಾಗ್ ಅಂತಲೇ ಇವಳ ಡಿಕ್ಷನರಿ ! ಹೋಗ್ಲಿ, ಅಲ್ಲೇ ಗ್ಲಾಸ್ ಹೌಸ್ ಪಕ್ಕ ಟೆಂಟ್ ಹಾಕ್ಕೊಂಡ್ ಬಿಡೇ....''

''ಯಾರೇನೇ ಹೇಳ್... ಲಾಲ್ ಬಾಗು ನನ್ನ ವೀಕ್ ನೆಸ್ಸು, ಪ್ಯಾಷನ್ನು

ಭಾರತಿ ಕಾಸರಗೋಡು

ಸಸ್ಯಶ್ಯಾಮಲೆ.... ಚೈತನ್ಯ ಚಿಮ್ಮಿಸುವ ಪ್ರಾಣವಾಯು! ಮರಗಳಿಂದ ಉದುರಿರುವ ಬೂರುಗದ ಹೂ, ಮುತ್ತುಗದ ಹೂಗಳನ್ನು ಹೆಕ್ಕಿಕೊಳ್ಳುತ್ತಾ, ಮೃದುವಾಗಿ ಕೆನ್ನೆಗೆ ತಾಗಿಸಿಕೊಳ್ಳುತ್ತಾ ಸುಳಿದಾಡುವುದು ಎಷ್ಟೊಂದು ಆಪ್ಯಾಯಮಾನ!'' ಭಾನು ಪರವಶಳಾಗಿಬಿಟ್ಟಳು. ''ನೋಡ್ರೇ, ಈ ಮಗು ಉದ್ಯಾನವನದಲ್ಲಿ ಹೂ ಆರಿಸಿಕೊಂಡು ಆಟವಾಡುತ್ತದಂತೆ! ತಾನೇ ಮಕ್ಕಳ ತಾಯಿ ಅನ್ನೋ ವಿಷ್ಯ ನೆನಪೇ ಇಲ್ವೇನೋ ಪಾಪ!'' ಭಾನುವನ್ನು ಚುಡಾಯಿಸುವುದೆಂದರೆ ಸುಶೀಗೆ ಯಾವಾಗಲೂ ಹಿಗ್ಗು. ಅವಳ ಮಾತಿಗೆ ಒಂದು ಸಾಕ್ರೆಟೀಸನ ನಗೆಯನ್ನು ಹೊರಡಿಸಿಬಿಟ್ಟಳು ಭಾನು. ''ಮಕ್ಕಳನ್ನು ಹೆತ್ತುಬಿಟ್ಟ ಮಾತ್ರಕ್ಕೆ ಜೀವನ ಮುಗಿದುಹೋಗಲಿಲ್ಲ. ನಮ್ಮ ಮಕ್ಕಳಾಟಿಕೆ ನಾವ್ಯಾಕ್ರೆ ಬಿಡ್ಬೇಕೂ? ಸಂಸಾರದ ಪಾಡಿಗೆ ಸಂಸಾರ. ನನ್ನ ಜೀವನ ನನಗೆ. This is my philosophy of life!''

ಗೊತ್ತಾದ ದಿವಸ ಲಾಲ್‌ಬಾಗಿನ ಹಸಿರಿನ ನಡುವೆ ಹೊಳೆಯುತ್ತ ಬಂದಳು ಲಲಿತೆ. ಬೆಳಗಿನ ಆಹ್ಲಾದಕರ ವಾತಾವರಣ. ಕೆಂಪುತೋಟದ ಪ್ರಶಾಂತ ಪರಿಸರದಲ್ಲಿ ಪ್ರಕೃತಿ ಭಿನ್ನ ಸ್ವರೂಪಳಾಗಿ ಕಂಗೊಳಿಸುತ್ತಿದ್ದಳು. ಎಲ್ಲೆ ಕಾಣದ ಸೌಂದರ್ಯ ಆಕೆಯದು. ಮಡಿಲ ಎಳೆ ಬಿಸಿಲು ಹದವಾಗಿತ್ತು, ಹಿತವಾಗಿತ್ತು. ಗರಿಕೆ ತುದಿಗಳ ಎಷ್ಟೋ ಮುತ್ತು ಮಣಿಗಳು ಇನ್ನೂ ಕರಗಿಯೇ ಇರಲಿಲ್ಲ. ಬಗೆಬಗೆಯ ಬಣ್ಣದ ಹೂಗಳ ಪರಾಗಸುಗಂಧ ಅಮಲೇರಿಸುವಂತಿತ್ತು. ಕೆನೆಬಣ್ಣದ ಜರಿಸೀರೆಯುಟ್ಟ ಚೆಲುವೆ ಲಲಿತೆ ಅಲ್ಲಿ ವನ ಕನ್ಯೆಯ ಹಾಗೆ ಬಳುಬಳುಕಿ ಬಂದಳು. ತನಗಾಗಿ ಕಾಯುತ್ತಿದ್ದ ಗೆಳತಿಯರ ಹಿಂಡನ್ನು ಕಂಡು ವದನಾರವಿಂದ ಅರೆಬಿರಿದ ದಾಳಿಂಬೆಯಾಯ್ತು.... ಕಣ್ಣು ವಿಕಸಿತ ಕೆಂದಾವರೆಯಾಯ್ತು.

ಹೂವಿನ ಗಡಿಯಾರದ ಪಕ್ಕ ನೆಲದ ಮೇಲೆ ಗುಂಡಾಗಿ ಕೂತ ಗೆಳತಿಯರು ವಿಷಾದ, ದುಗುಡ, ಕುಲುಕುಲು ನಗುಗಳ ನಡುವೆಯೇ ತಮ್ಮ ತಮ್ಮ ನೋವು - ನಲಿವುಗಳನ್ನು ಹಂಚಿಕೊಂಡು ಹಗುರಾದರು. ''ನೀ ಏನೇ ಹೇಳು. ಸೂಕ್ಷ್ಮ ಮನಸ್ಸಿನೋರಿಗೇ ದುಃಖ ಜಾಸ್ತಿ,'' ರಜನಿ ಅಂದಳು. ''ಕಟ್ಟುಪಾಡುಗಳನ್ನು ಬಿಡಲಾರದವರಿಗೆ ಕೂಡ!'' ಸುಶೀ ಕೂಡಲೇ ಸೇರಿಸಿದಳು. ''ಲೇಖಕಿಯೊಬ್ಬರು ಅಂದಂತೆ ಪ್ರತಿಕ್ಷಣ ನಮ್ಮ ಮನಸ್ಸನ್ನು ನಾವೇ ಕೊಂದುಕೊಂಡು ಅದರ ಗೋರಿಯ ಮೇಲೆ ಕನಸಿನ ಹೂಗಳನ್ನು ಅರ್ಪಿಸಿಬಿಡಬೇಕು.''

''ಅಂಥ ಹತಾಶೆಯೇನೂ ಬೇಡ.'' ಗೆಳತಿಯನ್ನು ಸಂತೈಸಿದಳು ಆಶಾವಾದಿ ಅನು. ''ಈ ಮಾತು ಪರಮ ಸತ್ಯವೂ ಅಲ್ಲ, ಶಾಶ್ವತ ಸತ್ಯವೂ ಅಲ್ಲ. ನಮ್ಮ ಮನಸ್ಸು ಸ್ವಾಭಾವಿಕವಾಗಿ ಸ್ವಚ್ಛಂದವಾಗಿ ನಲಿದಾಡಿಬಿಡಬಹುದಾದ ಸುಲಭ ಸಂದರ್ಭಗಳು - ಸಂಕಷ್ಟಗಳ ನಡುನಡುವೆಯೇ - ಆಗಾಗ ಏರ್ಪಡುತ್ತಲೇ ಇರುತ್ತವೆ. ಇಂಥ ಸಮತೋಲನ ಸೃಷ್ಟಿಯ ಉಪಕಾರ.'' ''ಹಾಗೆ ತೊಳಲಾಟಗಳಿಗೆ ವಿಪರೀತ ಪ್ರಾಮುಖ್ಯತೆ ಕೊಡಬೇಕಂತಲೂ ಇಲ್ಲ. ತಳಮಳಗಳು ಒಳಗೊಳಗೇ ಕುದ್ದುಕುದ್ದು ಜೀವವನ್ನು ಹಿಂಸೆ ಮಾಡುತ್ತಿರುವ ಕ್ಲಿಷ್ಟ ಸಂದರ್ಭದಲ್ಲಿಯೇ ಹಠಾತ್ತನೆ ಒಂದು ಸುಮುಹೂರ್ತದಲ್ಲಿ



ಹೇಳಿದ್ರ, ಕೇಳಲಿಲ್ಲ ಡಾಕ್ಟ್ರೇ.... ಮಗುವಿನ 'ಸ್ಕೂಲ್ ಬ್ಯಾಗ್' ಎತ್ತಲಿಕ್ಕ ಹೋಗಿ ಬೆನ್ನು ನೋವು, ಕೈ ನೋವೆಲ್ಲ ಮಾಡ್ಕೊಂಡಿದ್ದಾರೆ....!!

ಇನ್ನಿದೆಲ್ಲವನ್ನು ಭರಿಸಲಾಗದ ಮನಸ್ಸು ಈ ಎಲ್ಲ ಮರ್ಮಭೇದಕ ಸಂಕಟಗಳ ಪರಿಧಿಯನ್ನು ಒಮ್ಮಿಂದೊಮ್ಮೆ ಮೀರಿ ತನ್ನ ತಾನೇ ತೊಳೆದುಕೊಂಡುಬಿಡುತ್ತದೆ. ಕಾಡುವ ಈ ಯಾತನೆ ಶಾಶ್ವತವಲ್ಲ.... ನೆಲ ಕಚ್ಚಿಸುವ ಈ ಹತಾಶೆ ಶಾಶ್ವತವಲ್ಲ.... ಈ ಗಳಿಗೆಯಂತಲ್ಲವೇ ಅಲ್ಲ ಮರುಗಳಿಗೆ!.... ಮುಂದೇನೋ ಒಳಿತು ಕಾದಿದೆ!! ಅನ್ನುವ ಹೊಸ ಭರವಸೆ ಥಟ್ಟನೆ ಮಿಂಚಿ, ಬೇರೆ ಹೊಸ ಆಸೆಗಳನ್ನೇ ಅದು ಹುಟ್ಟುಹಾಕಿಬಿಡುತ್ತದೆ. ಚೈತನ್ಯ ತಾನು ತಾನೇ ಹೊಳೆದು ಜೀವ ನಿಸೂರಾಗಿಬಿಡುತ್ತದೆ.'' ರಜನಿ ಅಂತರ್ಮುಖಿಯಾದಾಗ ಅವಳ ಭಾಷೆಗೆ ಭಾಷಣದ ಮೆರುಗು ಬರುವುದುಂಟು. ''ರಜನಿಯ ಮಾತು ಸರಿ. ವಿಪರೀತ ಕೊರಗು ಹಚ್ಚಿಕೊಂಡು ಅದು ತನ್ನ ಪ್ರಭಾವಾನ ಶರೀರದ ಮೇಲೆ ಕೂಡ ತೋರಿಸಿಬಿಡೋಷ್ಟು ಅದನ್ನು ಬೆಳೆಸಿಬಿಡಬಾರದು. ಆದಷ್ಟೂ ಸಣ್ಣ ಸಣ್ಣ ಸಂಗತಿಗಳಲ್ಲಿ ದೊರೆಯೋ ಸಂತೋಷದ ಎಳೆಗಳನ್ನು ಹೆಕ್ಕಿ ಪರವಶರಾಗಿಬಿಡಬೇಕು. ಇಂಥ ಪ್ರಸನ್ನತೆ ದೊಡ್ಡ ದೊಡ್ಡ ದುಃಖಗಳನ್ನು ಸಹಿಸೋಕೆ ಬಲ ಕೊಡುತ್ತೆ. ಹಳೆ ನೆನಪುಗಳನ್ನು ಕೆದಕಿ ಮುದಗೊಳಿಸುವ ಯಾವುದೋ ಕವನದ ಸಾಲು, ತುಂತುರಲ್ಲಿ ನೆನೆದು ತೂಗುವ ಚೆಂಗುಲಾಬಿ, ಶುಭ್ರ ಮಂದಾಸನದ ಹಿನ್ನೆಲೆಯಲ್ಲಿ ತೊಳಗಿ ಬೆಳಗುವ ನಂದಾದೀಪ. ಹೀಗೆ ಆನಂದದ ಸೆಲೆಗಳನ್ನು ನಮ್ಮ ವೈಯಕ್ತಿಕ ಮಿತಿಗಳಲ್ಲೇ ಕಂಡುಕೊಳ್ಳೋ ಸಾಮರ್ಥ್ಯ ನಮ್ಮ ಅಳವಿನಲ್ಲೇ ಇದೆ'' ಅಂದಳು ಅನು.

''ಒಟ್ಟಾರೆ ನಮ್ಮ ಬದುಕು ಹಸನಾಗಲು ಎಂಥದೋ compromise ಬೇಕು. ಅದನ್ನು ಅವರವರೇ ಕಂಡುಕೋಬೇಕು.'' ರತ್ನ ಉಪಸಂಹಾರ ನಿಪುಣೆ.

ಈ ಗೆಳತಿಯರ ಗುಂಪಿನಿಂದ ಸ್ವಲ್ಪವೇ ದೂರದಲ್ಲಿ ವಯಸ್ಸಾದ ಜೋಡಿಯೊಂದು ಕೂತಿತ್ತು. ಆತ ಪಾರ್ಕಿನಲ್ಲಿ ಕಸಗುಡಿಸುವವ. ಸಾಕಷ್ಟು ಸವೆದು ಹೋಗಿದ್ದ ಉದ್ದನೆ ಕಸಬರಿಗೆಯನ್ನು ಪಕ್ಕವೇ ಇಟ್ಟುಕೊಂಡು ಊಟಕ್ಕೆ ಕೂತಿದ್ದ. ಸರಸ ಸಂಭಾಷಣೆಗಳ ನಡುವೆ ಆ ವೃದ್ಧ ದಂಪತಿಗಳ ಊಟ ಸಾಗಿತ್ತು.

ಇತ್ತ ಇವರೆಲ್ಲರ ಸಭೆ ಮುಕ್ತಾಯವಾಗುವ ಸಮಯ. ಲಲಿತೆ ಪದ್ಮಳನ್ನು ನೆನಪು ಮಾಡಿಕೊಂಡು ''ಇತ್ತೀಚೆಗೇನಾದ್ರೂ ಅವಳನ್ನು ನೋಡಿದ್ರೇನ್ರೇ?'' ಎಂದು ಕೇಳಿದಳು. ''ಇಲ್ಲಮ್ಮ. ಹೋದ್ವರ್ಷ ಯಾವಾಗಲೋ ನೋಡಿದ್ದು.... ಆದ್ರೂ ತೀರಾ ಹೊಟ್ಟೆ ಉರಿಯೋಷ್ಟು ಸೋತುಹೋಗಿದಾಳೆ.... ಮುಖವೆಲ್ಲ ಕಂಗಾಲಾಗಿಬಿಟ್ಟಿದೆ.'' ರಜನಿ ಅಂದಳು. ''ಅವಳಿಗೆ ತುಂಬಾ ಸಂಸಾರ ತಾಪತ್ರಯ ಕಣ್ರೇ ಪಾಪ! ಅದಿಕ್ಕೇ ಅಷ್ಟೊಂದು ನಲುಗಿಹೋಗಿರೋದು.'' ಸುಶೀ ಸಹಾನುಭೂತಿಯಿಂದ ಹೇಳಿದಳು.

ಭಾನು ತಕ್ಷಣ ನೆಟ್ಟಗೆ ಕೂತು ''ಹಾಗೆ ನೋಡಿದ್ರೆ ನಾನು ಕೂಡ ಒಟ್ಟು ಕುಟುಂಬದಲ್ಲಿದ್ದಷ್ಟು ದಿನ ತೀರಾ ಭಂಗಪಟ್ಟಿದೀನಮ್ಮ! ಎಂಥ ಚೋದ್ಯ! ನನ್ನ ಇರಸರಿಕೆ, ಆಸಕ್ತಿ - ಆಲೋಚನೆಗಳು ಕೂಡ ಅವರೆಲ್ಲರ ಲೇವಡಿಗೆ ಗುರಿಯಾಗಿಬಿಡ್ತಾ ಇತ್ತು.... ಬೇಕಾದ್ರೆ ಮೂಲೆಗೆ ಹೋಗಿ ಮುಸುಕು ಹಾಕಿ ಅತ್ತುಬಿಡೋಷ್ಟು! ಹಾಗಂತ ನಾನೇನಾದ್ರೂ ಕಂಗೆಟ್ಟು ಹೋಗಿದೀನಾ?'' ಕಣ್ಣರಳಿಸಿದಳು. ಸುಶೀ ಅವಳ ಪಕ್ಕಕ್ಕೆ ಜರುಗಿ ಮುದ್ದಿನಿಂದ ಒಂದು ಮೊಟ್ಟಿ ''ನಿನ್ನ ವಿಷ್ಯ ಬಿಡು... ಶುದ್ಧ ಎಳೆ ನಿಂಬೆ!.... ಈ ಪೆದ್ದು ಮೂತಿ ಕಂಡರೆ ಮಕ್ಕಳ ತಾಯಿ ಅಂತ ಹೇಳೋದು ಹಾಗಿರಲಿ, ಮದ್ವೆ ಆಗಿದೆ ಅನ್ನೋದನ್ನ ಕೂಡ ಪ್ರಮಾಣ ಮಾಡಿ ಹೇಳ್ಬೇಕು ಯಾರಾದ್ರೂ!'' ಅಂದಳು ಅಭಿಮಾನದಿಂದ.

ಇಷ್ಟು ಹೊತ್ತಿಗೆ ಊಟ ಮುಗಿಸಿದ್ದ ಮುದುಕ ಸಾವಕಾಶವಾಗಿ ಅವರ ಗುಂಪಿನೆಡೆಗೆ ಬಂದ. ಭಾನುವನ್ನೇ ಸ್ವಲ್ಪ ಹೊತ್ತು ನೋಡಿ, ನಗುನಗುತ್ತ ನುಡಿದ - ''ಅವರವರ ಆತುಮದ ದೀಪ ಇದ್ದಂಗಲ್ವಾವ್ವ ಅವರವರ ಮೊಕ ಬಾವ? ಒಳಗಿನ ಜೋತಿ ಸುದ್ದವಾಗಿದ್ದಸ್ಟೂ ಅದರ ಬೆಳಕು ಜೀವದ ಮ್ಯಾಗೆ ವೊಳೆದು ತೋರಕಿಲ್ವಾ ಏಳಿ?''

ಇಷ್ಟು ಹೇಳಿದವನೇ ನೆಲದ ಮೇಲೆ ಬಿದ್ದಿದ್ದ ತನ್ನ ಆಯುಧವನ್ನು ಮೆಲ್ಲಗೆ ಬಾಗಿ ಕೈಗೆತ್ತಿಕೊಂಡು ನಿಧಾನವಾಗಿ ನಡೆದುಹೋಗಿ ಮರಗಳ ಕೆಳಗೆ ಬಿದ್ದಿದ್ದ ಒಣ ಹೂಗಳನ್ನು ಗುಡಿಸಿ ಗುಡಿಸಿ ಸ್ವಚ್ಛಗೊಳಿಸತೊಡಗಿದ.

ಭಾನು ಮೆಲ್ಲಗೆ ಸುಶಿಯೆಡೆಗೆ ಮುಖ ಹೊರಳಿಸಿದಳು. ''ಹಾಗೆ ನೋಡ ಬೇಡ್ವೇ.... ಅರ್ಥ ಆಯ್ತು....'' ಹೊದ್ದಿದ್ದ ಪಿಂಕ್ ದಾವಣಿಯನ್ನೇ ಚಂದದ ಗುಲಾಬಿ ಮುಖಕ್ಕೆ ಅವಕುಂಠನ ಮಾಡಿಕೊಂಡುಬಿಟ್ಟಳು ಅವಳು.

ಭಾರತಿ ಕಾಸರಗೋಡು
೮೩, ೨ನೇ ಮಹಡಿ, ೫ನೇ 'ಬಿ' ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು –

# ಹೊಸ ವರ್ಷದ ಶುಭಾಶಯಗಳು

## ನಮ್ಮ ಹೆಮ್ಮೆಯ ಪ್ರಕಟಣೆಗಳು



















ಶ್ರೀ ಗಣೇಶ
ಜನೇವರಿ 2001




ಶ್ರೀ ಗೌರಿ ಗಣೇಶ
ಜನೇವರಿ 2001

ಕರ್ನಾಟಕದಲ್ಲೆಲ್ಲ ಮನೆಮಾತಾಗಿರುವ
ವೈಶಿಷ್ಟ್ಯಪೂರ್ಣ ಶಬ್ದಕೋಶಗಳು
ಹಾಗೂ ಪಂಚಾಂಗಗಳು




## ಸಂಕೇಶ್ವರ ಪ್ರಿಂಟರ್ಸ್ ಪ್ರೈ. ಲಿ.

ಆಫ್‌ಸೆಟ್ ಮುದ್ರಕರು ಮತ್ತು ಪ್ರಕಾಶಕರು
ಗದಗ -582 101
Fax : 08372-37040 ☎ : 37165, 36004

**ಶಾಖೆಗಳು**

ಹುಬ್ಬಳ್ಳಿ ✆ 266142
ಬೆಂಗಳೂರು ✆ 2203946

# ಭಾರತೀಯ ತತ್ವಜ್ಞಾನ: ಆಶಯ ಮತ್ತು ವಾಸ್ತವ

*ಭಾರತೀಯ ಸಂಸ್ಕೃತಿ, ಭಾರತೀಯ ತತ್ವಜ್ಞಾನಗಳೆಂದರೆ ಇಂದು ಸುಶಿಕ್ಷಿತ ಮಧ್ಯಮವರ್ಗ ಹಾಗೂ ರಾಜಕೀಯಪಕ್ಷಗಳು ಪರವಶವಾಗಿಬಿಡುತ್ತವೆ. ಈಗೀಗ ನವಸಾಕ್ಷರ ಮಧ್ಯಮವರ್ಗ ಕೂಡ 'ಭಾರತೀಯತೆ'ಯ ಮೋಡಿಗೊಳಗಾಗುತ್ತಿದೆ. ಸಮಾಜವಾದಿ ಚಿಂತನೆಯಿಂದ ತಮ್ಮ ಪ್ರಜ್ಞೆಯನ್ನು ಕಾಯ್ದುಕೊಂಡವರನ್ನು ಬಿಟ್ಟು ಉಳಿದೆಲ್ಲ ರಾಜಕೀಯ ವ್ಯಕ್ತಿಗಳು, ಸಾಹಿತಿಗಳು, ಹಾಗೂ ಮಠಾಧಿಪತಿಗಳು ನಮ್ಮ ಸಂಸ್ಕೃತಿ-ತತ್ವಜ್ಞಾನಗಳನ್ನು ಮಂತ್ರದಂಡದಂತೆ ಬಳಸಿಕೊಳ್ಳುತ್ತಾರೆ. ಇದಕ್ಕೆ ಪತ್ರಿಕಾರಂಗ ಕೂಡ ಹೊರತಾಗಿಲ್ಲ. ಇದರ ಪರವಾಗಿ ಆಕಾಶ ನೋಡುತ್ತ ಮಾತನಾಡುವವರೆಲ್ಲ 'ಭಾರತೀಯ ಸಂತ' (ಸಂಸ್ಕೃತಿ + ತತ್ವಜ್ಞಾನ) ಪದವಿಗೆ ಏರತೊಡಗುತ್ತಾರೆ. ಇದರ ಪರಿಣಾಮ, ಯಾವುದೇ ಎರಡು ಗುಂಪುಗಳ ನಡುವಿನ, ದುಡಿಸುವವರ ಮತ್ತು ದುಡಿಯುವವರ ನಡುವಿನ, ಘರ್ಷಣೆಗಳಿಗೆ ಮತೀಯ ಸಂಘರ್ಷದ ಬಣ್ಣ ಬಂದು ಸಮಸ್ಯೆಯ ಸ್ವರೂಪವೇ ಬದಲಾಗಿಬಿಡುತ್ತದೆ. ಆದ್ದರಿಂದ, ಭಾರತೀಯ ತತ್ವಜ್ಞಾನವು ಯಾವ ಆಶಯದೊಡನೆ ಆರಂಭವಾಗಿತ್ತು ಮತ್ತು ವಾಸ್ತವವಾಗಿ ಇದು ಯಾವ ರೀತಿಯ ಐತಿಹಾಸಿಕ ಬೆಳವಣಿಗೆಯನ್ನು ಪಡೆಯಿತು ಎಂದು ವಿಶ್ಲೇಷಿಸುವುದು ಎಲ್ಲ ಕಾಲಕ್ಕೂ ಸೂಕ್ತವಾದ ಎಚ್ಚರಿಕೆಯ ಕೆಲಸವಾಗುತ್ತದೆ.*

**ಭಾ**ರತದಲ್ಲಿ ಕ್ರಿ.ಶ. ೧೦ನೆಯ ಶತಮಾನದವರೆಗೆ ನಡೆದ ಸುಮಾರು ಮೂರು ಸಾವಿರ ವರ್ಷಗಳಷ್ಟು ದೀರ್ಘವಾದ ಯೋಚನಾಲಹರಿಯನ್ನೇ ನಾವೀಗ ಭಾರತೀಯ ತತ್ವಜ್ಞಾನ ಎಂದು ಕರೆಯುವುದು. ಯಾವುದೇ ಒಂದು ವಿಚಾರಧಾರೆಯು ಆ ಸಮಾಜದ ಆರ್ಥಿಕ ವ್ಯವಸ್ಥೆಯಿಂದ ಪ್ರೇರಣೆ ಪಡೆಯಬೇಕಾದದ್ದು ಸಹಜ. ಆರ್ಥಿಕ ವ್ಯವಸ್ಥೆಯ ಒಂದು ಸುಸಂಬದ್ಧ ಕಲ್ಪನೆಯಿಲ್ಲದ ವೈದಿಕ ಯುಗದ ಆರಂಭದ ಕಾಲದಲ್ಲಿ ಕೂಡ ಅವರ ಚಿಂತನೆ ತಮ್ಮ ಬದುಕಿನ ಮುಖ್ಯ ಸಮಸ್ಯೆಗಳ ಸುತ್ತ ಮಾತ್ರ ಹರಡಿಕೊಂಡಿತ್ತು. ಆದರೆ ವೈದಿಕ ಯುಗದ ಆದಿಮ ಚಿಂತನೆಯನ್ನು ಕೂಡ ಒಳಗಾಗಿಸಿಕೊಂಡ ಭಾರತೀಯ ತತ್ವಜ್ಞಾನವು ಕ್ರಮೇಣ ಬೆರಳೆಣಿಕೆಯಷ್ಟು ಜನರ ಅವಾಸ್ತವಿಕ ಬೌದ್ಧಿಕ ಕ್ರೀಡೆಯಾಗಿ ಆಳುವ ವರ್ಗಗಳ ನಿರಂಕುಶತೆಗೆ ಬೆಂಬಲವಾಗಿ ನಿಂತಿತು. ಇದು ಈ ದೇಶದ ದುರಂತಗಳಲ್ಲಿ ಒಂದು.

ಈ ನೆಲದಲ್ಲಿ ಸಾಂಖ್ಯ, ವೈಶೇಷಿಕ, ಲೋಕಾಯತ, ಜೈನ, ಬೌದ್ಧ ಮತ್ತು ವೇದಾಂತ ತತ್ವಜ್ಞಾನಗಳು ಹುಟ್ಟಿ ಬೆಳೆದವು. ಆದರೆ ಭಾರತೀಯ ತತ್ವಜ್ಞಾನವೆಂದರೆ ಇವುಗಳಲ್ಲಿ ಯಾವುದು ? ಅಥವಾ, ಇವೆಲ್ಲವುಗಳ ಮೊತ್ತವನ್ನೇ ಹಾಗೆ ಕರೆಯಲಾಗುತ್ತದೆಯೆ ? ಇವುಗಳಲ್ಲಿ ಸಾಂಖ್ಯ ಹಾಗೂ ವೈಶೇಷಿಕ ದರ್ಶನಗಳಂತೂ ಸ್ವತಂತ್ರವಾಗಿ ಭಾರತೀಯ ತತ್ವಜ್ಞಾನದ ಪಟ್ಟಕ್ಕೆ ಏರಲೇ ಇಲ್ಲ. ಏಕೆಂದರೆ ಕ್ರಿ.ಶ. ಐದನೆಯ ಶತಮಾನದ ವೇಳೆಗೇ ಇವು ನಾಮಾವಶೇಷವಾದವು. ಆದರೆ ಈ ದರ್ಶನಗಳ ಕೆಲವು ಮುಖ್ಯ ಆಲೋಚನೆಗಳು ವೇದಾಂತ ದರ್ಶನದಲ್ಲಿ ಮುಂದುವರೆದವು. ಜೈನ ಹಾಗೂ ಬೌದ್ಧ ವಿಚಾರಧಾರೆಗಳು ಅ-ಹಿಂದು ತತ್ವಜ್ಞಾನಗಳಾಗಿದ್ದರಿಂದ ಭಾರತೀಯ ತಾತ್ವಿಕ ಪರಂಪರೆಯ ಹೊರಗೇ ಉಳಿದವು. ಆದರೆ ಇವುಗಳ ತರ್ಕಶುದ್ಧಿಯು ವೇದಾಂತ ದರ್ಶನದ ಗಮನ ಸೆಳೆಯಿತು. ಲೋಕಾಯತ ಚಿಂತನೆಗಳು ನಿರಂತರವಾಗಿ ವಿತಂಡವಾದವೆಂದು ನಿಂದೆಗೊಳಗಾಗಿ ಯಾವ 'ಶಿಷ್ಟ'ರ ಆದರಕ್ಕೂ ಪಾತ್ರವಾಗಲಿಲ್ಲ. ಭಾರತೀಯ ದರ್ಶನಗಳ ಸೆಣಸಾಟದ ಇತಿಹಾಸ ಬಹಳ ದೀರ್ಘವಾದುದು. ಈ ಸಂಗೀತ ಖುರ್ಚಿಯ ಆಟದಲ್ಲಿ ಕೊನೆಗೆ ಗೆದ್ದು ವಿಜೃಂಭಿಸಿದ್ದು ವೇದಾಂತ ಮಾತ್ರ. ಶಂಕರಾಚಾರ್ಯರು ವೇದಾಂತದ ವಾಗ್ವಾದ ವಲಯದಲ್ಲಿ ಕಾಲಿರಿಸಿದಾಗಿನಿಂದ, ಅಲ್ಲ, ಅವತರಿಸಿದಾಗಿನಿಂದ, ವೇದಾಂತವೊಂದೇ ಭಾರತೀಯ ವಿಚಾರಧಾರೆಯ, ಈ ನೆಲದ ಅಪೂರ್ವವಾದ ತತ್ವಜ್ಞಾನದ, ಸಾರ್ವಭೌಮ ಎನ್ನಿಸಿಕೊಂಡಿತು. ವೇದಾಂತವೇ ನಮ್ಮ ಆಧ್ಯಾತ್ಮಿಕ ವಿಚಾರಧಾರೆಯ ಮೂಲ ಪ್ರೇರಣೆ. ಸಾಮಾಜಿಕ ವ್ಯವಸ್ಥೆಯ ನಡುವಿನಿಂದ ಹಾಗೂ ವಾಸ್ತವಿಕತೆಯೊಡನೆ ತಾರ್ಕಿಕ ಸಂಬಂಧ ಪಡೆದು ಮೂಡಿಬರದಿದ್ದರೂ ಕೂಡ ವೇದಾಂತದ ಆಧ್ಯಾತ್ಮಿಕ ವಿಚಾರಲಹರಿಯು ಭಾರತೀಯರ ಸಾಮಾಜಿಕ ವರ್ತನೆ ಮತ್ತು ಪರಿವರ್ತನೆಗಳ ಮೇಲೆ ನೇರವಾದ ಹಿಡಿತ ಸಾಧಿಸಿತು. ಇಂದಿಗೂ ಕೂಡ ಈ ದೇಶದ ಸಾಮಾನ್ಯ ಮನುಷ್ಯನ ಚಿಂತನೆಯಲ್ಲಿ ಹೇಗೋ ಹಾಗೆಯೇ ಅತ್ಯಂತ ಆಧುನಿಕ ಶಿಕ್ಷಣ ಪಡೆದ ಮನುಷ್ಯನ ಮೇಲೂ ಕೂಡ ಆಧ್ಯಾತ್ಮವಾದದ ಪ್ರಭಾವವು ಗಾಢವಾಗಿಯೇ ಇದೆ. ಈ ಮಾನಸಿಕ ದಾಸ್ಯದಿಂದ ಬಿಡಿಸಿಕೊಳ್ಳುವ ಯೋಚನೆಯೇ ಇಂದೂ ಕೂಡ ಪಾಪದ ಸಂಕೇತವಾಗಿ ಕಾಣುತ್ತದೆ.

ಆದರೆ ವೇದಗಳ ಕಾಲ ಹೀಗಿರಲಿಲ್ಲ. ಅವರ ಆಲೋಚನೆಗಳು ಅವೈಜ್ಞಾನಿಕ ಹಾಗೂ ದುರ್ಬಲ ಮನಸ್ಸಿನವಾಗಿದ್ದವೆಂದು ಇಂದು ತೋರುತ್ತವೆಯಾದರೂ ಅವರು ಬದುಕನ್ನು ನೋಡುವ ರೀತಿ ಸರಳವಾಗಿತ್ತು ; ತಮ್ಮ ಅರಿವಿಗೆ ನಿಲುಕದ ದ್ವಂದ್ವಗಳನ್ನು ನಿವಾರಿಸಿಕೊಳ್ಳಲು ಅವರು ಮುಗ್ಧವಾಗಿ ಚಿಂತಿಸುತ್ತಿದ್ದರು. ಜನ್ಮಾಂತರಕ್ಕಿಂತ ಈ ಜನ್ಮ, ಆಧ್ಯಾತ್ಮಿಕತೆಗಿಂತ ವಾಸ್ತವಿಕ ಸಮಸ್ಯೆಗಳು ಹಾಗೂ ಭೌತಿಕ ನೆಮ್ಮದಿ ವೇದಕಾಲದ ಆರ್ಯರಿಗೆ ಮುಖ್ಯವಾಗಿದ್ದವು. ತಮ್ಮ ಗಣ ಸಮಾಜ ವ್ಯವಸ್ಥೆ, ಪ್ರಕೃತಿ, ಸಂತಾನ, ಹಾಗೂ ಪಶು ಸಮೃದ್ಧಿ ಯಾವಾಗಲೂ ಅವರ ಗಮನದಲ್ಲಿರುತ್ತಿದ್ದವು. ಇವುಗಳನ್ನು ಅವಲಂಬಿಸಿ ಅಂದಿನ ಆರ್ಯರ ಕೆಲವು ಸಾಮಾನ್ಯ ನಿಯಮಗಳು ನಿರ್ಧರಿಸಲ್ಪಡುತ್ತಿದ್ದವು. ಅವರ ಬಳಿ ಲೌಕಿಕ ಸಂಪತ್ತು ಇರಲಿಲ್ಲ; ಬದುಕು ಕಷ್ಟದ್ದಾಗಿತ್ತು. ''ಸಹನಾವವತು ಸಹನೌ ಭುನಕ್ತು'' ಎನ್ನುವ ಮಾದರಿಯಲ್ಲಿ ಅಂದಿನ ಜೀವನ ಕ್ರಮ ಸಾಂಘಿಕವಾಗಿತ್ತು. ಅವರು ಋಕ್ಕುಗಳ ದ್ರಷ್ಟಾರರಾದ ಋಷಿಗಳು. ಆದರೂ ಕುಟುಂಬ ವ್ಯವಸ್ಥೆಯನ್ನು ಬಿಟ್ಟು ಕಾಡಿಗೆ ಓಡುವ ಅಂತರ್ಮುಖಿಗಳಾಗಿರಲಿಲ್ಲ. ಆಗ ಅವರಿಗೆ ಇನ್ನೂ ಬ್ರಹ್ಮಜ್ಞಾನದ ಕಲ್ಪನೆ ಹೊಳೆದಿರಲಿಲ್ಲ. ಅವರು ಯಥಾರ್ಥವಾದಿಗಳಾಗಿದ್ದರು. ಅಂದಿನ ಆರ್ಯರಿಗೆ ಮಳೆ, ಮೋಡ, ನಕ್ಷತ್ರಗಳು, ಸೂರ್ಯ-ಚಂದ್ರ, ವನಸ್ಪತಿ, ರಾತ್ರಿ, ಹೀಗೆ ಇವೆಲ್ಲ ಅಸೀಮ ಶಕ್ತಿಯ ದೇವತೆಗಳಾದವು. ಅಂದಿನ ಆರ್ಯರ ಎಲ್ಲ ಕಲ್ಪನೆಗಳೂ ಅಜ್ಞಾನದಿಂದ ಹುಟ್ಟಿದ್ದವಾದರೂ ಅವರು ಚಾತುರ್ವರ್ಣ್ಯದ ಭೇದ-ಭಾವವುಳ್ಳ ಸಮಾಜವ್ಯವಸ್ಥೆಯನ್ನು ಕಟ್ಟಿಕೊಂಡಿರಲಿಲ್ಲ. ಪಶುವಿಗಾಗಿ, ಸಂತತಿಗಾಗಿ, ಅನ್ನಕ್ಕಾಗಿ ಮಾತ್ರ ಆರ್ಯರು ದೇವರಿಗೆ ಶರಣಾಗುತ್ತಿದ್ದರು ಹೊರತಾಗಿ ಮೋಕ್ಷಕ್ಕಾಗಿ ಅಲ್ಲ.

ಬಹುಶಃ ಆರ್ಯರು ತಮ್ಮ ಸಾಮುದಾಯಿಕ ಸೊತ್ತಿನ ರಕ್ಷಣೆಗಾಗಿ ಯಜ್ಞ-ಯಾಗಗಳಲ್ಲಿ ಮುಳುಗಿ ಕ್ರಮೇಣ ಇದನ್ನೇ ಸಂಕೀರ್ಣಗೊಳಿಸಿ ಕರ್ಮಠರಾಗಿ ಬದಲಾಗಿರಬೇಕು. ಪಶುಪಾಲನೆಯ ಹೊರತಾಗಿ ಬೇಸಾಯ, ಬೇಸಾಯದಿಂದಾಗಿ ಒಂದೆಡೆ ಗ್ರಾಮಗಳಾಗಿ ನೆಲೆಸುವುದು ಆರಂಭವಾಯಿತು. ಹೊಸ ಕಸುಬುಗಳ ಜೊತೆಗೆ ಕಸುಬಿಗೆ ತಕ್ಕದಾದ ಶ್ರಮವಿಭಜನೆ ಮಾಡಲಾಯಿತು. ಉತ್ಪಾದನೆಯ ಪ್ರಕ್ರಿಯೆ ವಿಸ್ತಾರಗೊಂಡು ಅದರ ನಿರ್ವಹಣೆ ಹಾಗೂ ರಕ್ಷಣೆ ದೊಡ್ಡದಾಗಿ ಕಾಣಿಸಿರಬೇಕು. ಇದೇ ಅವರ ರಾಜ್ಯ ವ್ಯವಸ್ಥೆಗೆ ಮೂಲವಾಯಿತು. ಇವೆಲ್ಲ ನಡೆದದ್ದು ವೇದಕಾಲದಿಂದ ಉಪನಿಷತ್ತಿನ ಕಾಲದವರೆಗಿನ ನಡುಗಾಲದಲ್ಲಿ. ಆಗಲೇ ಪೌರೋಹಿತ್ಯ ಹಾಗೂ ರಕ್ಷಣೆಯ ಹೊಣೆಗಳು ದೊಡ್ಡ ವೃತ್ತಿಯಾಗಿ ಮಾರ್ಪಟ್ಟವು. ಇದರ ಪರಿಣಾಮ ಊಹೆಗೆ

ಆರ್. ಡಿ. ಹೆಗಡೆ ಆಲ್ಮನೆ

ಮೀರಿದ್ದಾಯಿತು. ಗಣಪ್ರಧಾನ ಸಮಾಜದ ಸೊತ್ತುಗಳು ಹಂಚಿಕೆಯಾಗತೊಡಗಿದವು. ಖಾಸಗಿ ಸಂಪತ್ತಿನ ಶೇಖರಣೆಗೆ ಹೀಗೆ ಅವಕಾಶ ಸಿಕ್ಕಿದ್ದರಿಂದ ಅಧಿಕಾರವು ಕೂಡ ಕೆಲವೇ ಜನರಲ್ಲಿ ಕೇಂದ್ರೀಕೃತವಾಗ ತೊಡಗಿತೆನ್ನುವುದು ಎಲ್ಲರಿಗೂ ತಿಳಿದಿರುವ ಚರಿತ್ರೆ.

ಆದರೆ ಈ ತನಕ ಆರ್ಯರ ವಿಚಾರಧಾರೆ ಎಂದು ಕರೆಯಬಹುದಾದ ಚಿಂತನೆಗಳು ಹುಟ್ಟಿರಲಿಲ್ಲ. ವಿಶ್ವದ ಕುರಿತು ಅವರಿಗನಿಸಿದ್ದು ಹೆಚ್ಚಿನ ಪಾಲು ವಿಸ್ಮಯ ಮಾತ್ರ. ಅಂದರೆ ಭಾರತೀಯ ತತ್ವಜ್ಞಾನದ ಆವಿಷ್ಕಾರವು ಈ ತನಕ ಆಗಿರಲಿಲ್ಲ. ಆದರೆ ಅನೇಕಾರ್ಥದಲ್ಲಿ, ಕರ್ಮಠ ವೈದಿಕ ಕ್ರಿಯೆಗೆ ಪ್ರತಿಕ್ರಿಯೆಯಾಗಿ ಉಪನಿಷತ್ತುಗಳು ಕಾಣಿಸಿಕೊಂಡವು. ಈಶಾವಾಸ್ಯ ಉಪನಿಷತ್ತಿನಲ್ಲಿಯೇ ಈ ಪ್ರತಿಕ್ರಿಯೆಯ ಗುರುತುಗಳು ಸಿಗುತ್ತವೆ. 'ಮಾಗೃಧಃ ಕಸ್ಯಸ್ವಿದ್ಧನಂ' (ಯಾರ ಸಂಪತ್ತನ್ನೂ ಬಯಸಬೇಡ) ಎನ್ನುವ ಸರಳ ನೀತಿವಾಕ್ಯಗಳು ಪ್ರಕಟವಾದವು. ಈಶಾವಾಸ್ಯದ ನೇರ ನುಡಿ ಅಚ್ಚರಿ ಹುಟ್ಟಿಸುತ್ತದೆ. ಬದುಕಿನ ವಾಸ್ತವಗಳು, ಕಠೋರ ಸತ್ಯಗಳು ಪರಸ್ಪರ ಘಟ್ಟಿಸಿಕೊಂಡಾಗ ಈಶಾವಾಸ್ಯದಂತಹ ಪರಿಹಾರ ಚಟುವಟಿಕೆಗಳು ಚುರುಕಾಗುತ್ತವೆ. ಆದರೆ ಈ ಮೊಟ್ಟ ಮೊದಲನೆಯ ಉಪನಿಷತ್ತು ಭಾವನಾತ್ಮಕವಾಗಿ ಭೌತಿಕ ನೆಮ್ಮದಿಗೆ ಸ್ಪಂದಿಸಿದಷ್ಟು ಮುಂದಿನ ಉಪನಿಷತ್ತುಗಳು ಸ್ಪಂದಿಸುವುದಿಲ್ಲ. ಈ ನಡುವೆ ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಗಗಳು ಪ್ರಬಲವಾಗುತ್ತ ಸಾಗಿದ್ದವು. ಕಾಲಾನಂತರದಲ್ಲಿ ಎಂದೋ ವೇದಗಳ ನಡುವೆ ತಂದಿಡಲಾದ ವರ್ಣವ್ಯವಸ್ಥೆಯನ್ನು ಪ್ರಚೋದಿಸುವ ಪುರುಷಸೂಕ್ತವು ಎಲ್ಲ ಶೋಷಕ ವರ್ಗದವರಿಗೆ ಮತ್ತು ಉತ್ತಮವರ್ಣದವರಿಗೆ ಆಪ್ಯಾಯಮಾನವಾಗಿ ಕಂಡಿತು. ಶೂದ್ರರನ್ನೂ ಅಂತ್ಯಜರನ್ನೂ ಸತತವಾಗಿ ತುಳಿತದಲ್ಲಿಡುವ ಕೆಲಸ ಇದರಿಂದ ಚುರುಕುಗೊಂಡಿತು. ಇದೆಲ್ಲ ಕಠೋಪನಿಷತ್ತಿನ ವೇದಾಂತದಲ್ಲಿ, ಅದು ಪ್ರಸ್ತಾಪಿಸುವ ಜನ್ಮ - ಜನ್ಮಾಂತರದ, ಪಾಪ - ಪುಣ್ಯಗಳ ಲೇವಾದೇವಿಯಲ್ಲಿ ಗೋಚರವಾಗುತ್ತದೆ.

ಉಪನಿಷತ್ತಿನ ಋಷಿಗಳು ಆಳುವ ವರ್ಗ ಮತ್ತು ಪುರೋಹಿತ ವರ್ಗದವರಿಗಿಂತ ಭಿನ್ನವಾದ ಮನಸ್ಸಿನವರಾಗಿದ್ದರು. ವೇದಾಂತದ ಆರಂಭಿಕ ಹೆಜ್ಜೆಗಳನ್ನು ತೋರಿಸಿಕೊಟ್ಟ ಕಠ ಉಪನಿಷತ್ತಿನ ಋಷಿ ಕೂಡ ಇದಕ್ಕೆ ಅಪವಾದವಲ್ಲ. ಇವರಿಗೆ ಬದುಕಿನ ರಹಸ್ಯವನ್ನು ಹಾಗೂ ಸೃಷ್ಟಿಯ ವಿಸ್ಮಯಗಳನ್ನು ತಿಳಿಯಬೇಕಿತ್ತು. ತಮ್ಮ ಪೂರ್ವಜರಂತೆ ಯಾಗಗಳಲ್ಲಿ ತೃಪ್ತಿಕಾಣದೆ ವನವಾಸಕ್ಕೆ ತೆರಳಿದರು; ತಪಸ್ಸನ್ನಾಚರಿಸುತ್ತ ಉಪವಾಸ ಕುಳಿತು ಮನಸ್ಸನ್ನು ತರಬೇತುಗೊಳಿಸುತ್ತ ದೇಹವನ್ನು ದಂಡಿಸಿದರು. ಆದರೆ ಇವರ ಸತ್ಯಾನ್ವೇಷಣೆ ಭೌತಿಕ ಸಂಗತಿಗಳ ಮೂಲಕ ಆರಂಭವಾಗಿರಲಿಲ್ಲ. ಧ್ಯಾನ-ಕಲ್ಪನೆಗಳನ್ನು ಇವರು ನೆರವಿಗೆ ಪಡೆದರು. ಇವರು ಕಂಡುಕೊಂಡ ಉತ್ತರಗಳನ್ನು ಭೌತಿಕ ಸಂಗತಿಗಳ ಮೂಲಕ ಪರಿಶೀಲಿಸುವುದು ಅಸಾಧ್ಯವಾಗಿತ್ತು. ಅದು ಭಾವನಾತ್ಮಕವಾದ ಆದರ್ಶ ವಾದವಾಗಿ ಬೆಳೆದುನಿಂತಿತು. ಓಂಕಾರದಿಂದ, ಅನಾದಿ ಚೇತನವೊಂದರಿಂದ ಈ ಚರಾಚರ ಜಗತ್ತಿನ ಸೃಷ್ಟಿಯಾಯಿತು ಎನ್ನುವ ತೀರ್ಮಾನ ಅವರಿಗೆ ನೆಮ್ಮದಿ ತಂದಿತು. ಇದು ಅಲ್ಲಿಗೇ ನಿಂತಿದ್ದರೆ ಇದೊಂದು ವೈಚಾರಿಕ ದುರಂತವಾಗಿ ಮಾತ್ರ ಮುಗಿಯುತ್ತಿತ್ತು. ''ಯಾವ ದೇವತೆಗೆ ಹವಿಸ್ಸನ್ನು ನೀಡಲಿ !'' (ಕಸ್ಮೈ ದೇವಾಯ ಹವಿಷಾ ವಿಧೇಮ !) ಎನ್ನುವ ಅಚ್ಚರಿಯ ಮಾತನ್ನು ಮರೆತು, ''ಒಂದೇ ಸತ್ಯ, ತಿಳಿದವರು ಅದನ್ನೇ ಅನೇಕ ರೀತಿ ಬಣ್ಣಿಸುವರು'' (ಏಕಂ ಸದ್ವಿಪ್ರಾ ಬಹುಧಾ ವದಂತಿ) ಎನ್ನುವ ವಿವೇಕವನ್ನು ದೂರ ಸರಿಸಿ ಏಕದೇವತಾವಾದವನ್ನು ಮಂಡಿಸಿದ ಈ ಬುದ್ಧಿವಂತರು ಪುನರ್ಜನ್ಮ, ಕರ್ಮಸಿದ್ಧಾಂತ, ಅಮರತ್ವ-ಮೋಕ್ಷಗಳನ್ನೂ ಕಲ್ಪನೆ ಮಾಡಿದರು. ಇವುಗಳನ್ನೇ ಆಧಾರವಾಗಿ ಮಾಡಿಕೊಂಡ ಸ್ವಧರ್ಮದಂತಹ ಅತ್ಯಂತ ಅಪಾಯಕಾರಿ ವೈಚಾರಿಕತೆಗೆ ಮುಂದೆ ಭಗವದ್ಗೀತೆಯ ಕಾಲದಲ್ಲಿ, ಪುರಾಣ-ಸ್ಮೃತಿ ಸಾಹಿತ್ಯಗಳಲ್ಲಿ ಜೀವ ತುಂಬಲಾಯಿತು. ಸುಂದರವಾದ ರಥವನ್ನೂ ರಚಿಸಿದವನೇ ಸುಂದರವಾದ ಋಕ್ಕುಗಳನ್ನೂ ರಚಿಸಲಿ ಎಂದು ಆಶಿಸುತ್ತಿದ್ದ ವೇದಕಾಲದ ಆರ್ಯರ ಸಂತತಿಯಿಂದ ಉಪನಿಷತ್ ಕಾಲವನ್ನು ದಾಟುವ ಹೊತ್ತಿಗೆ ನಾಲ್ಕು ವರ್ಣದವರು ತಮ್ಮ ತಮ್ಮ ಧರ್ಮ ಅಂದರೆ ಕರ್ತವ್ಯಗಳನ್ನು ಮಾಡಿಕೊಂಡಿರಲಿ ಎನ್ನುವ ಸಿದ್ಧಾಂತದ ಸ್ಥಾಪನೆಯಾಯಿತು. ಆದರೂ ಉಪನಿಷತ್ತುಗಳು ತಮ್ಮ ಆಧ್ಯಾತ್ಮವಾದದಲ್ಲಿ ಚಾತುರ್ವರ್ಣ್ಯ, ಸ್ವಧರ್ಮ ಹಾಗೂ ಸಾಮಾಜಿಕ ಲಕ್ಷ್ಮಣರೇಖೆಗಳ ಕುರಿತು ನೇರವಾಗಿ ಹೇಳಿರಲಿಲ್ಲ. ಸಂಶೋಧಕ ಮನಸ್ಸು, ಲವಲವಿಕೆ, ನಿಷ್ಕಪಟ ತೀರ್ಮಾನಗಳು ಅಲ್ಲಿ ಸ್ಪಷ್ಟವಾಗಿದ್ದವು. ಸಹಬಾಳ್ವೆಯೇ ದೊಡ್ಡದೆಂದ ಕೇನ ಉಪನಿಷತ್ತು, ಧಾರ್ಮಿಕ ಶ್ರದ್ಧೆಯೇ ಇಹಲೋಕದ ಜೀವನಕ್ಕೆ ದೊಡ್ಡ ಪ್ರೇರಣೆ ಎನ್ನುವ ಛಾಂದೋಗ್ಯ ಉಪನಿಷತ್ತು - ಇವುಗಳವರೆಗೆ ವೇದಕಾಲೀನ ಆರ್ಯರ ಆಶಯಗಳು ಸ್ಥೂಲವಾಗಿ ಮುಂದುವರೆದಿದ್ದವು. ಅವರ ದೃಷ್ಟಿಯಲ್ಲಿ, ಮನುಷ್ಯನಿಗೆ ನಿಜವಾದ ಸುಖ ಧರ್ಮದ ಮೂಲಕವೇ ಸಿಗಬೇಕಿತ್ತು. ಇದು ನಮಗೆ ಭ್ರಾಮಕ ಮಾತಾಗಿ ತೋರಬಹುದಾದರೂ ಅವರು ಸಮಾಜದ ಹಿತಶತ್ರುಗಳಂತೆ ಎಂದೂ ವರ್ತಿಸಿರಲಿಲ್ಲ.

ಈ ಎಲ್ಲ ಉತ್ತಮ ಆಶಯಗಳನ್ನು ಕ್ರೋಡೀಕರಿಸಿಯೇ ಭಾರತೀಯ ತತ್ವಜ್ಞಾನ ನಿರ್ಮಾಣವಾಯಿತು, ನಿಜ. ಆದರೆ ಉಪನಿಷತ್ಕಾಲದ ಅಂಚಿನಲ್ಲಿ ಭಾರತೀಯ ತತ್ವಜ್ಞಾನಿಗಳು ಸಮುದಾಯವನ್ನು ಮೌಢ್ಯದಲ್ಲಿಟ್ಟು ದಿಕ್ಕು ತಪ್ಪಿಸುವ ಆಧ್ಯಾತ್ಮವಾದದ ಬಗ್ಗೆ ಮಾತನಾಡಲಾರಂಭಿಸಿದರು. ಇದರಲ್ಲಿ ಹೃದಯ ಪರಿವರ್ತನೆಯ, ಸಮಾಜಮುಖಿಯಾದ ಮಾನವತಾವಾದವಿರಲಿಲ್ಲ; ವೈಯಕ್ತಿಕ ಬಿಡುಗಡೆಯ ಆಧ್ಯಾತ್ಮವಾದವಾಗಿತ್ತು. ಆಧ್ಯಾತ್ಮವಾದವು ಪುರೋಹಿತರ ಮತ್ತು ಕ್ಷತ್ರಿಯರ ಕೈಯಲ್ಲಿ ಸೇರಿ ಸಾಮಾಜಿಕ ವ್ಯವಸ್ಥೆಯನ್ನು ನಿರ್ದೇಶಿಸತೊಡಗಿತು. ಆಧ್ಯಾತ್ಮವಾದಕ್ಕೆ ಇದರಿಂದ ಧರ್ಮಶಾಸ್ತ್ರದ ಸ್ವರೂಪ ಬಂದಿತು ಎಂದು ಹೇಳುವುದೇ ಹೆಚ್ಚು ಸಮಂಜಸವಾದ ವಿವರಣೆಯಾದೀತು. ಖಾಸಗೀ ಸೊತ್ತಿನ ಆರಾಧಕರ ಕೈಯಲ್ಲಿ ಸಿಕ್ಕಿಬಿದ್ದ ಧರ್ಮದ ಅಧಃಪತನ ಇದು. ಆರ್ಯರ ಸದುದ್ದೇಶ ಆಶಯಗಳು ಕುರೂಪಗೊಳ್ಳತೊಡಗಿದ್ದು ಹೀಗೆ.

ಇದನ್ನು ಹೀಗೂ ವಿವರಿಸಬಹುದು : ಬೃಹದಾರಣ್ಯಕ ಉಪನಿಷತ್ತಿನ ಅತ್ಯಾಕರ್ಷಕ ಕಾಲವು ಮುಗಿಯುವ ಹೊತ್ತಿಗೆ ಅದಾಗಲೇ ಭಾರತೀಯ ಸಮಾಜದ ವಾಸ್ತವ ಸ್ಥಿತಿಯು ಬದಲಾಗುತ್ತ ಸಾಗಿತ್ತು. ಬ್ರಹ್ಮ ಮತ್ತು ಆತ್ಮ ಒಂದೇ ಅನ್ನುವ ವೇದಾಂತ ದರ್ಶನವನ್ನು ಜಗ್ಗಿ ಹಿಗ್ಗಿಸಿ ಆತ್ಮವು ಬ್ರಹ್ಮದಲ್ಲಿ ಲೀನವಾಗುವ ಮೋಕ್ಷವೇ ಭಾರತೀಯರ ತತ್ವಜ್ಞಾನದ ಶೃಂಗಸ್ಥಿತಿ ಎನ್ನುವ ಸ್ಥಿತಿ ಉದ್ಭವವಾಯಿತು. ಮೋಕ್ಷಕ್ಕೆ ಪುಣ್ಯ ಸಂಚಯವೇ ಮೆಟ್ಟಿಲು; ಆದರೆ ಪುಣ್ಯದ ಕಲ್ಪನೆಯಲ್ಲಿ ಚಾತುರ್ವರ್ಣ್ಯದ ದೋಷಗಳ ವಿಮರ್ಶೆ ಸೇರಲಿಲ್ಲ. ಬದಲಾಗಿ ''ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ'' (ಸ್ವಕರ್ಮ - ಸ್ವಧರ್ಮಗಳಲ್ಲಿ ತೊಡಗಿರುವವನು ಬದುಕಿನ ಗುರಿಯನ್ನು ತಲುಪುತ್ತಾನೆ) ಎಂದು ಗೀತೆ ಬೋಧಿಸಿತು. ಈ ಮನಮೋಹಕ ಆದರ್ಶವು ಒಂದೇ ಬಾರಿಗೆ ಎರಡು ಗುರಿ ಸಾಧಿಸಿತು. ಒಂದು, ಇದು ಪ್ರತಿಯೊಬ್ಬ ಧರ್ಮಭೀರುವಿನ



ಎದುರಿಗೆ ಅವನ ಆದರ್ಶವನ್ನು ತಂದು ನಿಲ್ಲಿಸಿತು; ಎರಡು, ದುಡಿಯುವ ವರ್ಗವು ಆಳುವ ವರ್ಗದ ತಂಟೆಗೆ ಬರದಂತೆ ಮಾಡಿ ಸಾಮಂತಶಾಹಿಯ ಪಟ್ಟವನ್ನು ಸ್ಥಿರಗೊಳಿಸಿತು. ಸ್ಮೃತಿ, ಪುರಾಣಗಳು, ಮನುಧರ್ಮಶಾಸ್ತ್ರ, ಭಗವದ್ಗೀತೆ - ಇವೆಲ್ಲ ನಡೆದು ಬಂದ ದಾರಿ ಇದೇ. ಮಾತು ಮಾತಿಗೆ ವೇದಪ್ರಮಾಣ ಎನ್ನಲಾಯಿತು; ವೇದಗಳು ಅಪೌರುಷೇಯ ಎನ್ನಲಾಯಿತು; ವೇದಕಾಲೀನ ಆರ್ಯರ, ಉಪನಿಷತ್ತಿನ ಋಷಿಗಳ, ಆಶಯವನ್ನೇ ಸ್ಮೃತಿ-ಪುರಾಣ-ಧರ್ಮಶಾಸ್ತ್ರಗಳು ಹಾಗೂ ಗೀತೆ ಸಾರುತ್ತವೆ ಎನ್ನುವ ಭ್ರಮೆ ಹುಟ್ಟಿಸಲಾಯಿತು. ಗೀತೆಯಲ್ಲಿ ಸ್ವತಃ ಭಗವಂತನೇ ''ಚಾತುರ್ವರ್ಣ್ಯಂ ಮಯಾ ಸೃಷ್ಟಂ'' (ಚಾತುರ್ವರ್ಣ್ಯ ಸಮಾಜ ವ್ಯವಸ್ಥೆ ನನ್ನಿಂದ ಸೃಷ್ಟಿಸಲ್ಪಟ್ಟಿತು) ಎಂದಮೇಲೆ ಕೇಳುವುದೇನು ? ''ಸ್ವಧರ್ಮೇ ನಿಧನಂ ಶ್ರೇಯಃ'' ಎನ್ನುವ ಮಾತು ಲೋಕಮಾನ್ಯವಾಯಿತು. ವೇದವೇ ತನಗೆ ಪ್ರಮಾಣ ಎಂದು ಕೂಗಿ ಹೇಳುವ ಮನುಸ್ಮೃತಿಯ ಸಾಧನೆಯೆಂದರೆ ಸ್ತ್ರೀಯನ್ನು ಲೈಂಗಿಕವಾಗಿ ಶೋಷಣೆಗೆ ಒಳಪಡಿಸುವುದು, ಹಾಗೂ ಸಾಮಾಜಿಕ ಅಸಮತೆಯನ್ನು ಬಲಪಡಿಸುವುದು. ಪುನರ್ಜನ್ಮ, ಮೋಕ್ಷ, ಸ್ವರ್ಗ-ನರಕ, ಕರ್ಮಸಿದ್ಧಾಂತ ಗಳೊಡನೆ ಆಧ್ಯಾತ್ಮಿಕ ವಿಚಾರಧಾರೆಯನ್ನು ಗಂಟುಹಾಕಿ ಜನರ ಸಾಮಾಜಿಕ - ಧಾರ್ಮಿಕ ಗುಲಾಮಗಿರಿಯನ್ನು ಶಾಶ್ವತಗೊಳಿಸಿದ ಇತಿಹಾಸ ಇದು. ಪುರಾಣಗಳು 'ರಾಜನೇ ಪ್ರತ್ಯಕ್ಷ ದೇವತೆ' ಎನ್ನುವ ತುತ್ತೂರಿ ಊದಿದವು. ಹೀಗೆ ಭಾರತೀಯ ತತ್ವಜ್ಞಾನದ ಆಶಯವನ್ನೇ ಬಂಡವಾಳ ಮಾಡಿಕೊಂಡು ಜನದ್ರೋಹದ ಕೆಲಸ ನಿರಾತಂಕವಾಗಿ ಸಾಗಿತು. ಇದನ್ನು ವಿರೋಧಿಸಿದ ಬೌದ್ಧರು, ಜೈನರು ಸಹ ಕೊನೆಗೆ ಇವರಂತೆಯೇ ವಿರೋಧಾಭಾಸಗಳ ಧಾರ್ಮಿಕರಾದರು. ಅತ್ತ ಲೋಕಾಯತರು, ರಾಜಾಶ್ರಯವಿಲ್ಲದೆ ತಮ್ಮ ಧ್ವನಿ ಕಳೆದುಕೊಂಡರು. ಕ್ಷತ್ರಿಯರ ಪರವಾಗಿ ಮಾತಿನ ವರಸೆ ತೋರಿಸತೊಡಗಿದ ಪುರೋಹಿತಶಾಹಿಯ ದ್ವಂದ್ವ - ಕುಟಿಲೋಪಾಯಗಳು ಮುಚ್ಚು-ಮರೆ ಗಳಿಲ್ಲದೆ ಮುಂದುವರೆದವು. ಗುಪ್ತರ ಸುವರ್ಣಯುಗವೆಂದು ಚರಿತ್ರೆಕಾರರು ಬಣ್ಣಿಸುವ ಅವಧಿ ನಿಜವಾಗಿಯೂ ಸಾಮಂತಶಾಹಿ ದೌರ್ಜನ್ಯದ ಪರಾಕಾಷ್ಠೆ ಯಾಗಿತ್ತು. ಅಂದಿನ ವಿಚಾರಲಹರಿ ನಿರ್ಲಜ್ಜವಾಗಿದ್ದಕ್ಕೆ ಕೌಟಿಲ್ಯನ ಅರ್ಥಶಾಸ್ತ್ರವೇ ಉದಾಹರಣೆ : ''ರಾಜ್ಯಕರ್ತರು ಬೇರೆ ಬೇರೆ ಭ್ರಾಮಕ ಹಾಗೂ ಅಂಧಶ್ರದ್ಧೆಯ ಕಲ್ಪನೆಗಳನ್ನೂ ಅವುಗಳ ಮೇಲೆ ನೆಲೆಗೊಂಡಂಥ ಆಚಾರಗಳನ್ನೂ ಪ್ರಜೆಗಳಲ್ಲಿ ಬೆಳೆಸಿ ಭದ್ರಪಡಿಸಬೇಕು. ಆದರೆ ಸ್ವತಃ ರಾಜ್ಯಕರ್ತರು ಅವುಗಳಲ್ಲಿ ನಂಬಿಕೆ ಇರಿಸಬಾರದು'' *(ಎಸ್. ಜಿ. ಸರದೇಸಾಯಿ : ಭಾರತೀಯ ತತ್ವಜ್ಞಾನ, ಪು. ೧೯೨). ಇಂತಹ ಹತ್ತಾರು ನಿರ್ದೇಶನಗಳು ಕೌಟಿಲ್ಯನಲ್ಲಿವೆ.*

ಇವೆಲ್ಲ ಯಶಸ್ವಿಯಾಗಲು ಅಂದಿನ ಸಮಾಜದ ಆರ್ಥಿಕ ಸ್ಥಿತಿಯೇ ಕಾರಣ. ಬಹುಸಂಖ್ಯಾತ ಶೂದ್ರರೂ ಮಹಿಳೆಯರೂ ವಿದ್ಯೆಯಿಂದ ವಂಚಿತರಾಗಿದ್ದುದು ಇದಕ್ಕೆ ಅನುಕೂಲವಾಗಿತ್ತು. ಯಾವುದೇ ಹೊಸ ಸಿದ್ಧಾಂತದಿಂದ ಸಮಾಜದಲ್ಲಿ ಉತ್ಪಾದನಾಕ್ರಿಯೆ ಚುರುಕುಗೊಂಡರೆ, ಅದರಿಂದ ದುಡಿಯುವ ವರ್ಗದ ಹಸಿವು ಅಲ್ಪವಾದರೂ ದೂರವಾಗುತ್ತದೆ. ಅಲ್ಲಿರುವ ಸಾಮಾಜಿಕ ತಾರತಮ್ಯ, ಶೋಷಣೆಗಳು ಆರ್ಥಿಕ ಸ್ಥಿತಿಯಲ್ಲಿ ಉಂಟಾದ ಅಲ್ಪಸ್ವಲ್ಪ ಪರಿವರ್ತನೆಯಿಂದಾಗಿ ಸಹನೀಯವಾಗಿ ಬಿಡುತ್ತವೆ. ಅಂತಹ ಸಿದ್ಧಾಂತಗಳನ್ನು ವೈಚಾರಿಕತೆಯ ಒರೆಗಲ್ಲಿಗೆ ಹಚ್ಚಿನೋಡುವ ಧೀಮಂತರು ಈ ದೇಶದಲ್ಲಿ ಲೋಕಾಯತರನ್ನು ಬಿಟ್ಟರೆ ಇನ್ನಾರೂ ಇರಲಿಲ್ಲ. ಏಕೆಂದರೆ ಭಾರತೀಯ ತತ್ವಜ್ಞಾನವು ಒಳ್ಳೆಯ ಸಮಾಜ ಸುಧಾರಕರನ್ನು ಸೃಷ್ಟಿ ಮಾಡಲೇ ಇಲ್ಲ; ಕೆಲವು ಉತ್ತಮ ಧಾರ್ಮಿಕ ವ್ಯಕ್ತಿಗಳು ಇದರಿಂದ ಹುಟ್ಟಿಕೊಂಡಿದ್ದು ಮಾತ್ರ ನಿಜ. ಆದ್ದರಿಂದ ಚಾತುರ್ವರ್ಣ್ಯ ವ್ಯವಸ್ಥೆಗೂ ಆಧ್ಯಾತ್ಮಿಕ ವಿಚಾರಧಾರೆಗೂ ಇರುವ ಸಂಬಂಧ ಉದ್ದೇಶಪೂರ್ಣವಾಗಿತ್ತು. ಇದನ್ನೇ ಭಾರತೀಯ ಸಂಸ್ಕೃತಿ, ಹಿಂದೂ ಸಂಸ್ಕೃತಿ ಎಂದು ಹಾಡಿ ಹೊಗಳುವ ಕೆಲಸ ಆರಂಭವಾಯಿತು. ಇದಕ್ಕೆ ಯಾರನ್ನಾದರೂ ಅಪರಾಧಿಯನ್ನಾಗಿ ಪರಿಗಣಿಸಬೇಕೆಂದಿದ್ದರೆ ಭಗವದ್ಗೀತೆಯನ್ನೇ ಪರಿಗಣಿಸಬೇಕು. ಇದಕ್ಕೆ ಶಂಕರಾಚಾರ್ಯರ ಕೊಡುಗೆಯೂ ಕಡಿಮೆಯಿಲ್ಲ. ಆಧ್ಯಾತ್ಮಿಕವಾಗಿ ಜಗತ್ತನ್ನು ಮಾಯೆ-ಮಿಥ್ಯೆ ಎಂದೆಲ್ಲ ಕರೆಯುವ ಶಂಕರಾಚಾರ್ಯರಿಗೆ ವ್ಯಾವಹಾರಿಕವಾಗಿ ಈ ಸಮಾಜದ ಚಾತುರ್ವರ್ಣ್ಯ ವ್ಯವಸ್ಥೆ ಸಹಜವಾದದ್ದು ನಿಜ, ಎಂದು ತೋರುತ್ತದೆ. ಹೀಗೆ ಆಲೋಚನೆಗೆ ವಿರುದ್ಧವಾಗಿ ಆಚರಿಸುವುದು ಆಧ್ಯಾತ್ಮ



ವಾದಿಗಳಿಗೆ ಸುಲಭ. ''ಈ ಜಗತ್ತನ್ನು ದ್ವೇಷಿಸುವ ಭಗವದ್ಗೀತೆಯೇ, ನಾನು ನಿನ್ನನ್ನು ಸದಾ ಧ್ಯಾನಿಸುವೆ'' (ಅಂಬ ತ್ವಾಂ ಅನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಂ) ಎಂದು ಹಾಡುವ ಗೀತೆಯ ಭಕ್ತರು ಮರುಕ್ಷಣದಲ್ಲಿ ಜಿದ್ದಿನಿಂದ, ಛಲ-ಆಕ್ರೋಶಗಳಿಂದ ಮತೀಯ ವಾದ-ವಿವಾದಗಳಲ್ಲಿ ಧುಮುಕುತ್ತಾರೆ. ಕ್ರಿ.ಶ. ೧೦ನೆಯ ಶತಮಾನದ ನಂತರದ ಚರಿತ್ರೆಯನ್ನು ಅವಲೋಕಿಸಿದರೆ ಈ ದೇಶಕ್ಕೆ ಈ ತತ್ವಜ್ಞಾನಿಗಳ ಕೊಡುಗೆ ಸೊನ್ನೆ. ಮಧ್ವ ರಾಮಾನುಜರು ಬಂದರೂ ಕೂಡ ಟೀಕಾಚಾರ್ಯರಾಗಿ ಮಠಗಳ ಸಂಸ್ಥಾಪಕರಾಗಿ ಪ್ರಸಿದ್ಧರಾದದ್ದೇ ಇವರ ಸಾಧನೆ. ದ್ವೈತಾದ್ವೈತ ಕೋಲಾಹಲದ ಹೊರತಾಗಿ ಈ ಸಾವಿರ ವರ್ಷಗಳಲ್ಲಿ ಈ ಕ್ಷೇತ್ರದಲ್ಲಿ ಹೊಸ ಬೆಳವಣಿಗೆ ಆಗಲಿಲ್ಲ. ಸಮಾಜದಲ್ಲಿ ಸಮಾನತೆಯ ಮಾತು ದೂರವೇ !

ಭಾರತೀಯ ತತ್ವಜ್ಞಾನ ಮತ್ತು ಆಧುನಿಕತೆ ಇವುಗಳ ನಡುವೆಯಾದರೂ ಎಂತಹ ಬೆಸುಗೆ ! ವಾಸ್ತವವಾಗಿ ಈ ಲೇಖನದ ಉದ್ದೇಶವೇ ಆಧ್ಯಾತ್ಮವಾದಿಗಳ ಹಾಸ್ಯಾಸ್ಪದ ನಡವಳಿಕೆಗಳನ್ನು ನೆನಪಿಸುವುದು. ನವ ಆಧ್ಯಾತ್ಮವಾದಿಗಳಾದ ಇಂದಿನವರಿಗೆ ಕೂಡ ತಮ್ಮ ನಂಬಿಕೆಗಳ ಪರಿಶೀಲನೆ ಬೇಕಿಲ್ಲ. ಆಧ್ಯಾತ್ಮವಾದವು ಕೇವಲ ಪಲಾಯನವಾದ; ಇದರಲ್ಲಿ ಜೀವನದ ಸೊಬಗನ್ನಾಗಲೀ ಸಮಸ್ಯೆಯನ್ನಾಗಲೀ ನೋಡುವ ವಿವೇಕವಿಲ್ಲ ಎಂದರೆ ಈ ನವ ಆಧ್ಯಾತ್ಮವಾದಿಗಳು ಕೆಂಗಣ್ಣರಾಗುತ್ತಾರೆ. ಈ ಕಂದಾಚಾರಿಗಳ ಬೌದ್ಧಿಕ ದಾಸ್ಯಕ್ಕೆ ಕಾರಣಗಳು ಒಂದೆರಡಲ್ಲ. ಮೊದಲನೆಯದಾಗಿ, ತನ್ನ ಸಮಸ್ಯೆಗಳನ್ನು ವಾಸ್ತವಿಕ ದೃಷ್ಟಿಕೋನದಿಂದ ವಿಶ್ಲೇಷಿಸುವ ಪ್ರವೃತ್ತಿ ಇವರಲ್ಲಿ ದುರ್ಬಲವಾಗಿರುತ್ತದೆ. ಎರಡನೆಯದಾಗಿ, ವೈಜ್ಞಾನಿಕವಾಗಿಯೂ ತಮ್ಮ ಮೂಢನಂಬಿಕೆಗಳನ್ನು ಸಮರ್ಥಿಸುವುದು. ಆಧ್ಯಾತ್ಮಿಕ ದೃಷ್ಟಿಯಿಂದಲಾದರೂ ಅಸಮಾನತೆಯನ್ನು ಬಿಟ್ಟುಬಿಡುವ ಉದಾರವಾದಿ ಮನಸ್ಸಿನ ಕೊರತೆ. ತನ್ನ ಅಸ್ತಿತ್ವಕ್ಕೆ ಸಂಬಂಧಿಸಿದ ಭೌತಿಕ ಕಾರಣಗಳನ್ನೂ ಕೂಡ ಇವನು ನಂಬುವುದಿಲ್ಲ; ಎಲ್ಲದಕ್ಕೂ ದೈವೇಚ್ಛೆ ಎನ್ನುತ್ತ ಮೇಕೆಗಣ್ಣು ಮಾಡಿಕೊಂಡು ಭಾವುಕನಾಗಿ ವರ್ತಿಸುತ್ತಾನೆ. ಪ್ರತ್ಯಕ್ಷ ಮತ್ತು ಅನುಮಾನ ಪ್ರಮಾಣಗಳ ಬಗ್ಗೆ ಸಂದೇಹ ತಾಳುತ್ತ ಶಾಬ್ದ ಮತ್ತು ಉಪಮಾನಗಳೇ ದೊಡ್ಡದೆನ್ನುವ ಹಠ. ಹಣೆಗೆ ವಿಭೂತಿ ಲೇಪಿಸಿಕೊಳ್ಳುವುದಕ್ಕೆ ಕೂಡ ವೈಜ್ಞಾನಿಕ ಕಾರಣ ಕೊಡುವಷ್ಟು ಮೊಂಡುತನ ಬೆಳೆಸಿಕೊಂಡ ಸುಶಿಕ್ಷಿತ ಆಧ್ಯಾತ್ಮವಾದಿಗಳು ಬೌದ್ಧಿಕವಾಗಿ ನರಕದಲ್ಲುಳಿದು ಸ್ವರ್ಗದ ಕನಸು ಕಾಣುತ್ತಾರೆ.

ಎಲ್ಲಕ್ಕಿಂತ ಮಿಗಿಲಾಗಿ, ಇಂದಿಗೂ ಸಹ, ಆಧ್ಯಾತ್ಮವಾದಿಗಳು ಆಧ್ಯಾತ್ಮಿಕ

ವಿಚಾರಧಾರೆಯ ಮಿತಿಯನ್ನು ಒಪ್ಪಿಕೊಳ್ಳುವುದಿಲ್ಲ. ಆಧ್ಯಾತ್ಮವಾದದ ವಿಚಾರಲಹರಿಗೂ ವಾಸ್ತವಿಕತೆಗೂ ನಡುವೆ ಸಂಬಂಧವಿಲ್ಲ ಎನ್ನುವುದಕ್ಕೆ ನೂರಾರು ಉದಾಹರಣೆ ಕೊಡಬಹುದು. ಮಾತಿನಲ್ಲಿ ಭೂತದಯೆಯ ಪ್ರಚಾರಕರಾದ ಇವರು ಅಲ್ಪಸಂಖ್ಯಾತರ ಮೇಲೆ, ಅಂತ್ಯಜರ ಮೇಲೆ ನಿರಂತರವಾದ ಆಕ್ರಮಣಗಳನ್ನು ಪ್ರಚೋದಿಸುತ್ತಾರೆ. ಕಂಪ್ಯೂಟರ್ ಯುಗದ ಫಲಾನುಭವಿಗಳಲ್ಲಿ ಮೊದಲಿಗರಾದ ಇಂದಿನ ಪುರೋಹಿತ ವರ್ಗ ಹಾಗೂ ಬಂಡವಾಳಶಾಹಿಗಳು ಕಾಲಕಾಲಕ್ಕೆ ಪೂಜೆ-ಯಾಗಗಳನ್ನು ಸಾರ್ವಜನಿಕವಾಗಿ ಅದ್ದೂರಿಯಿಂದ ಆಚರಿಸುತ್ತ ಕಂದಾಚಾರದ ಬೇರಿಗೆ ನೀರೆರೆಯುವುದು ಇಂದು ಸಾಮಾನ್ಯ ದೃಶ್ಯ. ಕಾವ್ಯಪುರುಷನಾಗಿ ನಿಜವೆನ್ನಿಸಿಕೊಂಡ ರಾಮಾಯಣದ ರಾಮನನ್ನು ಐತಿಹಾಸಿಕ ವ್ಯಕ್ತಿಯೆಂದು ಒಪ್ಪಿಕೊಳ್ಳುವಂತೆ ಮಾಡಲು ದೇವಾಲಯ ಕಟ್ಟುವ ಹುಚ್ಚು ಮನಸ್ಸಿನಿಂದ ಸಾವಿರಾರು ಜನರ ಬಲಿ ತೆಗೆದುಕೊಂಡರೂ ಅದನ್ನು ಸಮರ್ಥಿಸುವ ಸಮದರ್ಶಿ ಪಂಡಿತರು ಈ ಆಧ್ಯಾತ್ಮವಾದಿಗಳು ! ಭಾರತೀಯ ತತ್ವಜ್ಞಾನವು ಕೇವಲ ವಾದವೇ ಹೊರತಾಗಿ ವಿಜ್ಞಾನದ ಸಿದ್ಧಾಂತವಲ್ಲ ಎಂದರೆ ಒಪ್ಪದೆ ಇವರು ಇದನ್ನು ವಿಜ್ಞಾನಕ್ಕೆ ಸಮಾನವಾದ ಆಧ್ಯಾತ್ಮಿಕ ವಿಜ್ಞಾನ ಎಂದು ಭಾವಿಸುತ್ತಾರೆ. ಸಾಮಾನ್ಯ ಜನರು ದುಡಿಯುತ್ತ ನೆಮ್ಮದಿಯಿಂದಿದ್ದಾರೆ; ಅವರ ಮನಸ್ಸನ್ನು ಕೆಡಿಸಬೇಡಿ (ನ ಬುದ್ಧಿಭೇದಂ ಜನಯೇತ್ ಅಜ್ಞಾನಾಂ ಕರ್ಮಸಂಗಿನಾಂ) ಎನ್ನುವ ಭಗವದ್ಗೀತೆಯ ವಾಕ್ಯ ಇವರಿಗೆ ಸಮ್ಮತ. ವರ್ಗವ್ಯವಸ್ಥೆಯು ವರ್ಣವ್ಯವಸ್ಥೆಯಂತೆ ದೈವೀಸೃಷ್ಟಿ. ಐಶ್ವರ್ಯ ಬಡತನಗಳು ಮನುಷ್ಯನಿಗೆ ದೈವ ನಿಯಮಗಳು. ಹೀಗಾಗಿ ಈ ಸಮಾಜದಲ್ಲಿ ಹೊಸ ಚಿಂತನೆಯನ್ನು ಬಿತ್ತುವುದು ಅವರಿಗೆ ದೈವದ್ರೋಹವಾಗಿ ತೋರುತ್ತದೆ. ಖಗೋಲದ ಅರಿವಿದ್ದರೂ ರಾಹುಕಾಲವನ್ನು ಆಚರಿಸುವ ಹಿಂದೂ ವಿಜ್ಞಾನಿಗಳು ಈ ದೇಶದಲ್ಲಿ ಅಪರೂಪವಲ್ಲ. ದೂರದರ್ಶನದಂತಹ ಸಮೂಹ ಮಾಧ್ಯಮವು ಈ ದೇಶದ ಜನತೆಯ ಮೇಲೆ ಮಂಕುಬೂದಿ ಎರಚುತ್ತದೆ. ಪುರಾಣಗಳ ಕಟ್ಟುಕತೆಗಳನ್ನು ಹೊಸದಾಗಿ ಹೊಸೆದು ಪ್ರತಿದಿನ ಕಾರ್ಯಕ್ರಮಗಳನ್ನೂ ಧಾರಾವಾಹಿಗಳನ್ನೂ ದೂರದರ್ಶನ ಪ್ರಸಾರ ಮಾಡುತ್ತದೆ. ಸಮಾಜವು ಪ್ರತಿಗಾಮಿಯಾಗಿ, ದುಡಿಯುವ ವರ್ಗ ನಿರಕ್ಷರಿಯಾಗಿ ಮುಂದುವರಿದರೆ ಅಧಿಕಾರದ ಕೇಂದ್ರ ಸುರಕ್ಷಿತವಾಗಿರುತ್ತದೆ ಎನ್ನುವುದು ಕೆಟ್ಟ ರಾಜಕೀಯವನ್ನೇ ಬಂಡವಾಳ ಮಾಡಿಕೊಂಡವರಿಗೆ ಗೊತ್ತಿದೆ.

ಭಾರತೀಯ ತತ್ವಜ್ಞಾನದ ಕರ್ತಾರರು ಎಷ್ಟೇ ಉನ್ನತ ಆಶಯಗಳನ್ನು ಮುಂದಿಟ್ಟರೂ ಕೂಡ ಅವುಗಳನ್ನು ಸಾಮುದಾಯಿಕ ನೆಲೆಯಲ್ಲಿ ಆಚರಣೆಗೆ ತರಲು ಎಂದೂ ಯೋಚಿಸದೆ ತಪ್ಪೆಸಗಿದ್ದಾರೆ ಎನ್ನದೆ ವಿಧಿಯಿಲ್ಲ. ಹಾಗೆ ಮಾಡಿದ್ದರೆ ಭಾರತೀಯ ತತ್ವಜ್ಞಾನದಲ್ಲಿ ವೇದಾಂತದ ಆಧ್ಯಾತ್ಮವಾದಕ್ಕೆ ಅವಕಾಶವಿರುತ್ತಿರಲಿಲ್ಲ. ಗಾಂಧೀಜಿಯೊಬ್ಬರ ಹೊರತಾಗಿ ಸಮಗ್ರತೆಯ ದೃಷ್ಟಿಯಿಂದ ಈ ಸಮಸ್ಯೆಯನ್ನು ಬೇರೆ ಯಾರೂ ಪರಿಶೀಲಿಸಲಿಲ್ಲ. ಆದುದರಿಂದ, ಹಿಂದೂ ಧರ್ಮದ ದ್ವಂದ್ವಮಾನ ಆದರ್ಶಗಳನ್ನು ಮಾನವತಾವಾದಿ ನೆಲೆಯಲ್ಲಿ ಸಮನ್ವಯಗೊಳಿಸಿ ಆಚರಣೆಗೆ ತರುವ ಪ್ರಯತ್ನವೇನಾದರೂ ನಡೆದಿದ್ದರೆ ಅದು ಗಾಂಧಿಯುಗದಲ್ಲಿ ಮಾತ್ರ. ಆದರೆ ಈಗ ಮತ್ತೆ ಆಧ್ಯಾತ್ಮಿಕವಾದಿಗಳ ರಾಷ್ಟ್ರೀಯ ವಿಚಾರಧಾರೆಯೊಂದು ಕಾಣಿಸಿಕೊಂಡು ದೇಶ ಕನಸುಗಳತ್ತ ಹೊರಳುತ್ತಿದೆ, ಸಮನ್ವಯವಾದಿಗಳ ಧ್ವನಿ ಕ್ಷೀಣವಾಗಿದೆ. ಇದೀಗ ಎಚ್ಚರದಿಂದಿರಬೇಕಾದ ಸಮಯ.

**ಆರ್. ಡಿ. ಹೆಗಡೆ ಆಲ್ಮನೆ**
ಪ್ರಾಂಶುಪಾಲರು
ಅಂಚೆ : ಕಾನಗೋಡ - ೫೮೧೪೫೦ ಸಿರ್ಸಿ, ಉ.ಕ. ಜಿಲ್ಲೆ

# ಪಂಡಿತರ ಪ್ರಾಮಾಣಿಕತೆ

ಪ್ರೊ॥ ಜಿ. ಶ್ರೀನಿವಾಸನ್

ಅದು 'ಎಮರ್ಜೆನ್ಸಿ' ಇದ್ದ ಕಾಲ. ಅದರ ಬಿಸಿ ಎಲ್ಲಾ ಆಫೀಸುಗಳಲ್ಲೂ ತಟ್ಟಿತ್ತು. ಇದರಿಂದ ಸಾಕಷ್ಟು ಊಹಾಪೋಹಗಳೂ, ಜೋಕುಗಳೂ ಹುಟ್ಟಿಕೊಂಡಿದ್ದವು. ಅದರ ಒಂದು ಪ್ರಕರಣ ಇಲ್ಲಿದೆ.

ಮೈಸೂರಿನ ಪ್ರಾಚ್ಯ ಸಂಶೋಧನಾ ಗ್ರಂಥಾಲಯವೂ 'ಎಮರ್ಜೆನ್ಸಿ'ಗೆ ಹೊರತಾಗಿರಲಿಲ್ಲ. ಅದರಲ್ಲಿದ್ದವರು ಒಬ್ಬ ಲೈಬ್ರರಿಯನ್, ನಾಲ್ವರು ಗುಮಾಸ್ತರು, ಒಬ್ಬರು ಪಂಡಿತರು, ಒಬ್ಬ ಜವಾನ, ಅಷ್ಟೇ. ಇನ್ನು ಕೆಲವು ಸಹಾಯಕ ಸಂಶೋಧಕರೂ ಇದ್ದರು. ಪಂಡಿತರು ೫೪ ವರ್ಷದ ತಿರುವೆಂಗಡಾಚಾರ್ಯರು. ಅವರನ್ನು ಎಲ್ಲರೂ



ಪಂಡಿತರೆಂದೇ ಕರೆಯುತ್ತಿದ್ದುದು. ಒಳ್ಳೆಯ ಕೆಂಪಗಿನ, ಎತ್ತರವಾದ ವ್ಯಕ್ತಿ, ಕಚ್ಚೆ ಪಂಚೆ, ತ್ರಿನಾಮಧಾರಿಗಳಾಗಿ, ಶಾಲು ಹೊದ್ದು ಬರುತ್ತಿದ್ದರು ಅವರು. ಒಂದರ್ಥದಲ್ಲಿ 'ಶಾಲುರಾಜ' ಅವರು. ಏಕೆಂದರೆ, ಅವರ ಬಳಿ ಅನೇಕ 'ಸ್ವಾಮಿ'ಗಳಿಂದ ಪ್ರದಾನವಾಗಿ ಪಡೆದುಕೊಂಡಿದ್ದ ಶಾಲುಗಳಿದ್ದವು. ಒಂದೊಂದು ದಿನ ಒಂದೊಂದು ಶಾಲುವಿನಲ್ಲಿ ಪ್ರತ್ಯಕ್ಷರಾಗುತ್ತಿದ್ದರು. ಒಳಗೆ ಯಾವುದೇ ಶರ್ಟ್ ಇಲ್ಲದ್ದರಿಂದ, ಶಾಲುವೇ ಕೋಟಿನಂತೆ ಅವರಿಗೆ.

ಆ ದಿನಗಳಲ್ಲಿ ಪ್ರತಿಯೊಂದು ಆಫೀಸಿನಲ್ಲೂ ಒಂದು 'ಮೂವ್‌ಮೆಂಟ್ ರಿಜಿಸ್ಟರ್' ಇರಿಸಲಾಗಿತ್ತು. ಆಫೀಸಿನಲ್ಲಿ ಕೆಲಸ ಮಾಡುವವರು ಪ್ರತಿಯೊಬ್ಬರೂ ಕೆಲಸದ ವೇಳೆಯಲ್ಲಿ ತಮ್ಮ ಸೀಟಿನಿಂದ ಎಲ್ಲಿಗಾದರೂ ಹೋಗಬೇಕಾದರೆ, ಆ 'ರಿಜಿಸ್ಟರ್'ನಲ್ಲಿ ತಮ್ಮ ಹೆಸರು, ಹೋಗುವ ಉದ್ದೇಶ, ಬರುವ ಕಾಲಗಳನ್ನು ಕಡ್ಡಾಯವಾಗಿ ನಮೂದಿಸಬೇಕಾಗಿತ್ತು. ಅಂತಹ 'ರಿಜಿಸ್ಟರ್' ಒಂದನ್ನು ಗ್ರಂಥಾಲಯದಲ್ಲೂ ಇರಿಸಲಾಗಿತ್ತು.

ಒಂದು ಮಧ್ಯಾಹ್ನ, ಗ್ರಂಥಾಲಯವೂ ಸೇರಿದಂತೆ ಇತರ ವಿದ್ಯಾಸಂಸ್ಥೆಗಳ ಮುಖ್ಯಸ್ಥರೊಬ್ಬರು ತಮ್ಮ ಕಾರಿನಲ್ಲಿ ಎಲ್ಲಿಗೋ ಹೋಗುತ್ತಿದ್ದವರು, ಗ್ರಂಥಾಲಯವನ್ನು ಕಂಡೊಡನೆ, ಕಾರನ್ನು ನಿಲ್ಲಿಸಿ ಅದರ ಒಳಹೊಕ್ಕರು.

ಲೈಬ್ರರಿಯನ್ ಮುನಿಗಂಗಯ್ಯನವರು ಎದ್ದುನಿಂತು ಕೈ ಮುಗಿದರು. ಬಂದಿದ್ದ ಸಾಹೇಬ್ರು ದರ್ಪದಿಂದ 'ಮೂವ್‌ಮೆಂಟ್ ರಿಜಿಸ್ಟರ್' ಕೊಡಿ ಎಂದರು.

ಲಗುಬಗನೆ ಅದನ್ನು ಅವರ ಕೈಗಿತ್ತರು ಮುನಿಗಂಗಯ್ಯ.

ಸಾಹೇಬ್ರು ಆ ದಿನದ ಹಾಳೆಯನ್ನು ಮಾತ್ರವಲ್ಲದೆ, ಹಿಂದಿನ ನಾಲ್ಕೈದು ದಿನಗಳ ಹಾಳೆಗಳನ್ನೂ ಮಗುಚಿ ಹಾಕಿದರು. ಅವರ ಕಣ್ಣಿಗೆ ಮತ್ತೆ ಮತ್ತೆ ಕಣ್ಣಿಗೆ ಬೀಳುತ್ತಿದ್ದುದು 'ರೀಸೆಸ್' ಎನ್ನುವ ಪದ. ಅದನ್ನು ಒಂದೇ ದಿನದ ಹಾಳೆಯಲ್ಲಿ ಐದಾರು ಸಲ ಬರೆದದ್ದನ್ನು ಕಂಡರು ಅವರು. ಬರೆದದ್ದು ಯಾರೆಂದು ನೋಡಿದರೆ 'ತಿರುವೆಂಗಡಾಚಾರ್' !

''ಏನ್ರೀ ಇದು, ರಿಜಿಸ್ಟರ್ ತುಂಬ 'ರೀಸೆಸ್' ತುಂಬಿದೆ ? ಯಾರ್ರೀ ಈ ತಿರುವೆಂಗಡಾಚಾರ್ ?'' ಎಂದು ಸಿಟ್ಟಿನಿಂದಲೇ ಸಾಹೇಬ್ರು ಮುನಿಗಂಗಯ್ಯನವರನ್ನು ಪ್ರಶ್ನಿಸಿದರು.

''ನಮ್ಮಲ್ಲಿ 'ಪಂಡಿತರು' ಸಾರ್'' ಎಂದು ಉತ್ತರಿಸಿದರು ಅವರು.

''ಕರೆಸಿರಿ ಅವರನ್ನ'' ಎಂದು ಆಜ್ಞೆ ಹೊರಬಿತ್ತು.

ಹತ್ತಿರವೇ ಬಿಳಿ ಷರಾಯಿ, ಕ್ಲೋಸ್ ಕಾಲರ್ ಕೋಟು, ತಲೆಗೆ ರುಮಾಲು ಸುತ್ತಿ ನಿಂತಿದ್ದ ಜವಾನ ಕರಿಯಪ್ಪ ಓಡುತ್ತಾ ಹೋಗಿ ಪಂಡಿತರನ್ನು ಕರೆತಂದ.

ಪಂಡಿತರು ಗಾಬರಿಯಾಗಿದ್ದರು. ಕನ್ನಡದ ಪದವನ್ನು ಬಳಸಿದರೆ 'ಅಶ್ಲೀಲ'ವಾಗಿ ಕಾಣಬಹುದೆಂದು ಇಂಗ್ಲಿಷ್‌ನಲ್ಲಿ 'ರೀಸೆಸ್' ಎಂಬ ಪದವನ್ನೇ ಬಳಸಿದ್ದರು ಅವರು. ಆದರೂ ಅವರನ್ನು ಕರೆಸಿದರೆ ಅವರಿಗೆ ಭಯವಾಗುವುದಿಲ್ಲವೇ ? ಅವರ ವೇಷ, ವಯಸ್ಸುಗಳನ್ನು ಗಮನಿಸಿದ ಸಾಹೇಬ್ರಿಗೆ ಬಂದಿದ್ದ ಕೋಪ ಮನಸ್ಸಿನಲ್ಲಿಯೇ ಇಂಗಿಹೋಯಿತು. ಸ್ವಭಾವತಃ ಹಾಸ್ಯಪ್ರಿಯರಾಗಿದ್ದ ಅವರು ''ಏನ್ರೀ, ನೀವೇನು ಕೆಲಸದ ಮಧ್ಯೆ 'ರೀಸೆಸ್' ಮಾಡ್ತೀರೋ, 'ರೀಸೆಸ್' ಮಧ್ಯೆ ಕೆಲಸ ಮಾಡ್ತೀರೋ ?'' ಎಂದು ಹೇಳಿ ತಮ್ಮ ಜೋಕಿಗೆ ತಾವೇ ಗಟ್ಟಿಯಾಗಿ ನಕ್ಕರು.

ಜೀವನದಲ್ಲಿ ಎಲ್ಲಾ ವಿಷಯಗಳಲ್ಲಿಯೂ ಪುಕ್ಕಲಾಗಿದ್ದ ಪಂಡಿತರಿಗೆ ಆ ಕುತರ್ಕ ಪ್ರಶ್ನೆಯನ್ನು ಕೇಳಿದೊಡನೆ ಧೈರ್ಯವು ಬಂದುಬಿಟ್ಟಿತು. ಅವರ ಜಾಯಮಾನವೇ ಹಾಗೆ. ನಿಜ ಜೀವನದಲ್ಲಿ ಒಂದು ಇಲಿಗೂ ಹೆದರುತ್ತಿದ್ದ ಅವರು, ತಮ್ಮ 'ನಿಷ್ಠೆ'ಯ ಬಗ್ಗೆ ಪ್ರಶ್ನೆಯು ಎದುರಾದಾಗ 'ಹುಲಿ'ಯಾಗಿಬಿಡುತ್ತಿದ್ದರು.

ಸೆಟೆದು ನಿಂತು ''ಯಾವುದರ ಮಧ್ಯೆ ಯಾವುದು ಬಂದರೇನು ಸ್ವಾಮಿ? ಮುಖ್ಯವಾದ್ದು ಕೆಲಸ ಸ್ವಾಮಿ.

'ರೀಸೆಸ್' ಅಲ್ಲ. ನಾನು ಕಳೆದ ಮೂರು ತಿಂಗಳಿಂದ ಮಾಡಿರುವ ಸಂಶೋಧನೆಯನ್ನು ನೋಡಿದರೆ ತಮಗೇ ಅದು ವೇದ್ಯವಾಗುತ್ತದೆ'' ಎಂದವರೇ ತಮ್ಮ ಸೀಟಿಗೆ ಧಾವಿಸಿ ಅಲ್ಲಿದ್ದ ಐದಾರು ಕೆ.ಜಿ.ಗಳಷ್ಟು ಕೈಬರಹದ ಕಡತಗಳನ್ನು ಹೊರಲಾರದೆ ಹೊತ್ತುತಂದು ''ದಯವಿಟ್ಟು ಇದೆಲ್ಲವನ್ನೂ ಪರಾಂಬರಿಸಬೇಕು. ಇದು ನನ್ನ ಪ್ರಾರ್ಥನೆ'' ಎಂದು ಕೈ ಮುಗಿದರು.

ಏನೋ ಒಂದು ಸಲ ಗ್ರಂಥಾಲಯವನ್ನು ಪ್ರವೇಶಿಸಿ ಹೋಗೋಣವೆಂದು ಬಂದಿದ್ದ ಸಾಹೇಬ್ರು, ಇಷ್ಟೊಂದು ಮೋಡಿ ಅಕ್ಷರಗಳಲ್ಲಿ ಬರೆದಿದ್ದ ಕಡತಗಳನ್ನು 'ಪರಾಂಬರಿಸುವ ಶಿಕ್ಷೆ'ಗೆ ತಮ್ಮನ್ನು ತಾವು ಗುರಿಪಡಿಸಿಕೊಳ್ಳಲು ಸಿದ್ಧರಿರಲಿಲ್ಲ.

''ಈಗ ನಿಮ್ಮಲ್ಲೇ ಇರಲಿ, ಆಮೇಲೆ ತರಿಸಿಕೊಳ್ಳುತ್ತೇನೆ'' ಎಂದು ಆತುರವಾಗಿ ಕಾರು ಹತ್ತಿ ಹೊರಟುಬಿಟ್ಟರು.

'ಉಸ್ಸಪ್ಪಾ'! ಎಂದು ಸೀಟಿನಲ್ಲಿ ಕೂತರು ಮುನಿಗಂಗಯ್ಯನವರು. ಅವರಿಗೆ ನಿಜವಾಗಿಯೂ 'ಮುನಿಸು' ಬಂದಿತ್ತು. ತಮ್ಮ ಮೇಲೆಯೇ ಆ 'ಮುನಿಸು', ತಾವು ರಿಜಿಸ್ಟರನ್ನು ಮುಂಚೆಯೇ ಸರಿಯಾಗಿ ಗಮನಿಸಿರಲಿಲ್ಲವೆಂದು. ಪಂಡಿತರನ್ನು ಕಂಡರೆ ಅವರಿಗೂ ಗೌರವ. ತಮ್ಮ ಮುನಿಸನ್ನು ಇನ್ನು ಯಾರ ಮೇಲಾದರೂ ತೀರಿಸಬೇಕಲ್ಲವೇ ? ಅದಕ್ಕಾಗಿ ಕರಿಯಪ್ಪನನ್ನು ಕರೆದರು. ತಮಾಷೆಯಾಗಿ ಮಾತನಾಡುವುದರಲ್ಲಿ ಅವರೇನೂ ಸಾಹೇಬ್ರಿಗೆ ಕಡಿಮೆ ಇರಲಿಲ್ಲ.

''ಇನ್ನು ಮೇಲೇನಾದರೂ ಹೀಗಾದರೆ, ನಿನ್ನ ಕೈಗಳೆರಡನ್ನೂ 'ಕರಕರ' ಅಂತ ಕತ್ತರಿಸುತ್ತೇನೆ'' ಎಂದರು ಕರಿಯಪ್ಪನೊಡನೆ.

ಅವರನ್ನು ಚೆನ್ನಾಗಿ ಅರಿತಿದ್ದ ಕರಿಯಪ್ಪ ''ಅಯ್ಯೋ, ಹಾಗೆಲ್ಲಾದರೂ ಮಾಡೀರಿ ಸಾರ್ ! ಕೈ ಇಲ್ಲದಿದ್ದರೆ ಪೇಟ ಇಟ್ಟುಕೊಳ್ಳೋಕೆ ಆಗೋಲ್ಲ. ಅದಿಲ್ಲದೆ ಹೋದ್ರೆ, ನನ್ನ ಕೆಲಸ ಹೋಗುತ್ತೆ'' ಎಂದ. (ಆ ದಿನಗಳಲ್ಲಿ ಜವಾನರಿಗೆ ಪೇಟ ಕಡ್ಡಾಯವಾಗಿತ್ತು)

''ಸರಿ, ನಿನ್ನ ಕೈಗಳಿರಬೇಕಾದರೆ ಇವತ್ತು ಆಗದಂತೆ ನೋಡಿಕೊಳ್ಳಬೇಕು'' ಎಂದು ಆಜ್ಞಾಪಿಸಿದರು ಮುನಿಗಂಗಯ್ಯ.

''ಆಗಲಿ ಸಾರ್, ಅದಕ್ಕೇನಂತೆ ? 'ಲೆಟ್ರೀನ್' ಬೀಗ ಹಾಕಿಬಿಡ್ತೀನಿ. ಪಂಡಿತರು ಹೋಗೋ ಹಾಗೇ ಇಲ್ಲ, ಹಾಗೆ ಮಾಡಿಬಿಡ್ತೀನಿ'' ಎಂದ, ಆಶ್ವಾಸನೆ ಕೊಡುವಂತೆ.

''ಅಯ್ಯೋ, ನಿನ್ನ ಬುದ್ಧಿಗಿಷ್ಟು! ಹಾಗೆಲ್ಲಾದರೂ ಮಾಡೀಯಾ ! ಹಾಗೆ ಮಾಡಿದ್ರೆ ಲೈಬ್ರರಿಯೆಲ್ಲಾ ಗಬ್ಬೆದ್ದು ಹೋಗುತ್ತೆ, ಅಷ್ಟೇ'' ಎಂದರು ಮುನಿಗಂಗಯ್ಯ.

ಪಂಡಿತರ ಸ್ಥಿತಿ ಗೊತ್ತಿದ್ದ ಕರಿಯಪ್ಪನಿಗೆ ಅವರ ಮಾತು ನಿಜವೆನಿಸಿತು. ಆದರೆ ಮತ್ತೇನು ಮಾಡುವುದೆಂದು ತೋಚಲಿಲ್ಲ. ಬಂದ 'ಕಷ್ಟ'ವೆಲ್ಲಾ ರಿಜಿಸ್ಟರ್‌ನಿಂದ ಅಲ್ಲವೇ ? ತಕ್ಷಣವೇ ಹೊಳೆಯಿತು ಪರಿಹಾರ ಅವನಿಗೆ.

''ನೀವೇನೂ ಯೋಚನೆ ಮಾಡಬೇಡಿ ಸಾರ್. ನಾಳೆಯಿಂದ ರಿಜಿಸ್ಟರನ್ನು ನನ್ನ ತಾವೆ ಮಡುಕ್ಕೊಂಡಿರ್ತೀನಿ. ಪಂಡಿತರು ನನ್ನ ಹತ್ತಿರ ಕೂಡ ಸುಳಿಯೋಲ್ಲ. ಯಾಕೆಂದರೆ ನನ್ನತಾವ 'ಗಬ್ಬು' ಬೀಡಿ ವಾಸನೆ ಅಂತಾರೆ. ಅವರ ನಶ್ಯದ ವಾಸನೆ ಮಾತ್ರ ಅವರಿಗೆ 'ಘಮಘಮ' ಅಂತ ಇರುತ್ತೆ'' ಎಂದ.

''ಇದರಿಂದ ಪಂಡಿತರು ರಿಜಿಸ್ಟರ್‌ನಲ್ಲಿ ಬರೆಯೋದೇನೋ ತಪ್ಪುತ್ತೆ. ಆದರೆ ಅವರ 'ರೀಸೆಸ್'ಗೆ ಏನು ಮಾಡೋದು ?'' ಎಂದು ಕೇಳಿದರು ಮುನಿಗಂಗಯ್ಯ.

''ಮಾಡೋದೇನು ? ತಡಕೊಳ್ಳೋಕೆ ಆಗುತ್ತಾ ? ರಿಜಿಸ್ಟರ್‌ನಲ್ಲಿ ಬರೀದೇನೆ ಹೋಗ್ತಾರೆ ಬಿಡಿ'' ಎಂದ ಕರಿಯಪ್ಪ.

ಪಂಡಿತರ 'ಪ್ರಾಮಾಣಿಕತೆ ಸಮಸ್ಯೆ'ಗೆ ಅವನ ಸಲಹೆಯೇ ಸರಿಯೆನಿಸಿತು ಲೈಬ್ರರಿಯನ್ ಮುನಿಗಂಗಯ್ಯನವರಿಗೆ. ''ಸದ್ಯ ಹೋಗಲಿ ಬಿಡು. ಎಷ್ಟು ಸಲ ಬೇಕಾದ್ರೂ ಹೋಗಲಿ. ಅಲ್ಲಿಯೇ ಬೇಕಾದ್ರೂ ಕೂತಿರಲಿ. ರಿಜಿಸ್ಟರ್‌ನಲ್ಲಿ ಮಾತ್ರ ಬರೀದಿದ್ರೆ ಸಾಕು'' ಎಂದು ಸಮಾಧಾನದ ನಿಟ್ಟುಸಿರುಬಿಟ್ಟರು ಅವರು.

**ಪ್ರೊ|| ಜಿ. ಶ್ರೀನಿವಾಸನ್**
೨೩೬೪, ೧ನೇ ಮಹಡಿ, ೧೨ನೇ ಮುಖ್ಯರಸ್ತೆ, 'ಎ' ಬ್ಲಾಕ್, ೨ನೇ ಹಂತ
ಸುಬ್ರಹ್ಮಣ್ಯನಗರ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

# ಪರಿಸರ ವ್ಯವಸ್ಥೆಯಾಗಿ ಭಾರತದ ಮಳೆ ಆಧಾರಿತ ಕೃಷಿ

**ಕೃಷಿ** ಕಾರ್ಯ ಅಥವಾ ಬೆಳೆ ಸಾಗುವಳಿ ಭಾರತದಲ್ಲಿ ಕೊನೆಯ ಪಕ್ಷ ೫೦೦೦ ವರ್ಷಗಳ ಹಿಂದೆಯೇ, ಅಂದರೆ ಸುಮಾರು ಕ್ರಿ.ಪೂ. ೩೦೦೦ದಷ್ಟು ಹಿಂದೆಯೇ ಪ್ರಾರಂಭವಾಯಿತೆಂದು ಹೇಳಲಾಗುತ್ತದೆ (ಜಾನ್ ರೀಡರ್, Man on Earth : A Celebration of Mankind; **ಇಳೆಯ ಮೇಲೆ ಮಾನವ : ಮಾನವ ಕುಲದ ಒಂದು ಮಹೋತ್ಸವ**, ಹಾರ್ಪರ್ ರೋ, ೧೯೯೦ : ೧೮೩). ಆದರೂ ಯುರೋಪಿನಲ್ಲಿ ಹಾಗೂ ಅಮೇರಿಕದಲ್ಲಿ ಅಥವಾ ಚೀನದಲ್ಲಿಯೇ ಆಗಲಿ ಸಾಧಿಸಿರುವ ಬೆಳೆಗಳ ಇಳುವರಿಗೆ ಹೋಲಿಸಿದಲ್ಲಿ ಭಾರತದಲ್ಲಿ ಇಳುವರಿ ತೀರ ಕಡಿಮೆ ಎಂದೇ ಹೇಳಬೇಕು. ಇದಕ್ಕೆ ನಾವು ನಾಚುವುದೂ ಉಂಟು. ಆದರೆ ಜಗತ್ತಿನ ಹೆಚ್ಚಿನ ದೇಶಗಳಲ್ಲಿ ಕೃಷಿಕಾರ್ಯ ಭಾರತದ ಕೃಷಿಕಾರ್ಯದ ಅರ್ಧದಷ್ಟು ಕೂಡ ಪ್ರಾಚೀನವಾದುದಲ್ಲ. ಚೀನವಷ್ಟೆ ಇದಕ್ಕೆ ಅಪವಾದವಿರಬಹುದು. ನಮ್ಮ ಕೃಷಿ ಅನೇಕ ಶತಮಾನಗಳಿಂದ ತೀವ್ರತರ ಸಾಗುವಳಿ ನಡೆಸಿಕೊಂಡು ಬಂದಿದೆ. ಆದರೂ ಅದು ಭೂಮಿಯನ್ನು ಮರಳುಗಾಡನ್ನಾಗಿ ಪರಿವರ್ತಿಸದಿರುವುದು ಗಮನಾರ್ಹ ಅಂಶ. ಅದೂ ಕೃಷಿಕಾರ್ಯವನ್ನು ಬೇಸಾಯ ಮಾಡಲು ಕಷ್ಟವಾದಂಥ ಪ್ರದೇಶಗಳಲ್ಲೇ ಹೆಚ್ಚಾಗಿ ನಡೆಸಿಕೊಂಡು ಬಂದಿರುವಾಗ! ಅದೇ ಚೀನಾದಲ್ಲಿ ಯಾವತ್ತೂ ಕೃಷಿಕಾರ್ಯವನ್ನು ಹೆಚ್ಚು ಅನುಕೂಲಕರ ಪ್ರದೇಶಗಳಲ್ಲೇ – ನೀರಾವರಿ ಸೌಕರ್ಯವಿರುವ ಪ್ರದೇಶಗಳಲ್ಲೇ – ನಡೆಸಿಕೊಂಡು ಬರಲಾಗುತ್ತಿದೆ. ಭಾರತದಲ್ಲಿ ಕೃಷಿಕಾರ್ಯವನ್ನು ನಾಡಿನ ಭೂ ಪ್ರದೇಶದ ಶೇ. ೫೫ರಷ್ಟು ಭಾಗದಲ್ಲಿ ನಡೆಸಿಕೊಂಡು ಬರಲಾಗುತ್ತಿದ್ದರೆ, ಚೀನಾದಲ್ಲಿ ಇದು ಶೇ. ೧೦ಕ್ಕೂ ಕಡಿಮೆ. ಅಮೇರಿಕಾದಲ್ಲಿ ಶೇ. ೨೨ರಷ್ಟು ಅಷ್ಟೆ. ಈ ವಿಷಯದಲ್ಲಿ ಬಾಂಗ್ಲಾದೇಶವಷ್ಟೆ ಭಾರತವನ್ನು ಮೀರಿಸುತ್ತದೆ. ಅಲ್ಲಿ ನಾಡಿನ ಭೂಗೋಳಿಕ ಪ್ರದೇಶದ ಮೂರನೇ ಎರಡಕ್ಕೂ ಹೆಚ್ಚು ಭಾಗದಲ್ಲಿ ಸಾಗುವಳಿ ನಡೆಯುತ್ತಿದೆ. ಆದರೆ ಬಾಂಗ್ಲಾದೇಶವು ಎಷ್ಟೇ ಆಗಲಿ ಭಾರತೀಯ ಉಪಖಂಡದ ಒಂದು ಭಾಗವಷ್ಟೆ.

ಇದಕ್ಕೂ ಹೆಚ್ಚಿನ ಗಮನ ಸೆಳೆಯುವ ಅಂಶವೆಂದರೆ – ಭಾರತದಲ್ಲಿ ಇಂದೂ ಕೃಷಿಕಾರ್ಯ ಮಳೆ ಬೀಳುವ ಪ್ರದೇಶಗಳಲ್ಲಷ್ಟೆ ಹೆಚ್ಚಾಗಿ ನಡೆಯುತ್ತಿರುವುದು. ನೀರಾವರಿ ಸೌಕರ್ಯವನ್ನು ಬಳಸಿಕೊಂಡು ನಡೆಸುವ ಕೃಷಿಕಾರ್ಯ ಈಗಲೂ ಕೇವಲ ಶೇ. ೩೭ರಷ್ಟು ಭಾಗದಲ್ಲಷ್ಟೆ ವ್ಯಾಪಿಸಿದೆ. ೧೯೭೦-೭೧ರಷ್ಟು ಈಚೆಗಿನ ಕಾಲದಲ್ಲೂ ಈ ಪ್ರಮಾಣ (ಬೆಳೆ ಬಿತ್ತಿದ ನಿವ್ವಳ ಕ್ಷೇತ್ರಕ್ಕೆ ಹೋಲಿಸಿದಂತೆ ನಿವ್ವಳ ನೀರಾವರಿ ಕೃಷಿ ಪ್ರಮಾಣವು) ಶೇ. ೨೨ರಷ್ಟು ಅಷ್ಟೆ ಆಗಿದ್ದಿತು. ೨೦ನೆಯ ಶತಮಾನದ ಕೊನೆಯ ದಶಕದಲ್ಲೂ ಒಟ್ಟು ಕೃಷಿ ಉತ್ಪನ್ನದ ಶೇ. ೫೦ಕ್ಕೂ ಕಡಿಮೆ ಇಲ್ಲದಷ್ಟು ಉತ್ಪನ್ನ ಅರೆ ಶುಷ್ಕ ಪ್ರದೇಶಗಳಲ್ಲಿನ ಮಳೆ ಆಧಾರಿತ ಕೃಷಿಯೇ ಒದಗಿಸುತ್ತಿದ್ದಿತು. ಸುಮಾರು ೫೦ ಶತಮಾನಗಳಷ್ಟು ದೀರ್ಘ ಸಾಗುವಳಿಯ ಇತಿಹಾಸ ಹೊಂದಿದ್ದರೂ ಭಾರತದಲ್ಲಿ ಕೃಷಿಕಾರ್ಯವು ಇಂದಿಗೂ ಸುಸ್ಥಿರವೆಂದು, ಚೇತರಿಕೆ ಉಳ್ಳದ್ದೆಂದು ಸಾಧಿಸಿಕೊಂಡು ಬಂದಿರುವುದು, ಪ್ರಸಕ್ತ ಮಟ್ಟಗಳಿಗೂ ತಕ್ಕಂತೆ ಫಸಲು ಉತ್ಪಾದಿಸುತ್ತಲೇ ಬರುತ್ತಿರುವುದು, ಜನಸಂಖ್ಯೆಯ ಶೇ. ೭೦ರಷ್ಟು ಭಾಗದವರಿಗೆ ಜೀವನೋಪಾಯ ಒದಗಿಸಿಕೊಂಡು ಬಂದಿರುವುದು, ಶತಕೋಟಿಯಷ್ಟು ಜನರಿಗೆ ಅನ್ನಾಹಾರ ಒದಗಿಸುತ್ತಿರುವುದು, ನಿಜಕ್ಕೂ ಗಮನಾರ್ಹವೇ ಸರಿ. ನಿಜ, ಹಿಂದೆ ಕ್ಷಾಮ ಡಾಮರಗಳೂ ಇದ್ದವು ಮತ್ತು ಈಗಲೂ ಜಲಾಭಾವ ಅನಾವೃಷ್ಟಿಗಳು ಕಾಡುತ್ತಿವೆ. ಆದರೆ ಅಮರ್ತ್ಯ ಸೇನ್‌ರವರು ತೋರಿಸಿಕೊಟ್ಟಿರುವಂತೆ, ಗತಕಾಲದಲ್ಲಿ ಕ್ಷಾಮಡಾಮರಗಳು ಆಹಾರ ಸರಬರಾಜಿನ ಅಭಾವದಿಂದ ಅಷ್ಟಾಗಿ ಆಗಲಿಲ್ಲ. ಆದರೆ ಅವ್ಯವಸ್ಥೆ ಹಾಗೂ ಸರಕಾರೀ ಅನಾದರಗಳ ಕಾರಣದಿಂದಾಗಿ ಆದವು. ಹಾಗಾಗಿಯೂ ನಮ್ಮ ಪ್ರಜಾಸತ್ತೆಯ ಸುತ್ತ್ಯಾರ್ಹ ಕಾರಣದಿಂದಾಗಿ ಜಲಾಭಾವದ ಫಲವಾಗಿ ಉಂಟಾಗುವ ಉಪವಾಸ-ಸಾವುಗಳು ಕಣ್ಮರೆಯಾಗಿವೆ ಅಥವಾ ಕೊನೆಯ ಪಕ್ಷ ತುಂಬ ಅಪರೂಪವಾಗಿವೆ ಎಂದೇ ಹೇಳಬೇಕು.

> *ಗೋಮಾಳಗಳೂ ಕೆರೆಗಳೂ ಒಳಗೊಂಡಂತೆ ಎಲ್ಲ ರೀತಿಯ ಸಾರ್ವಜನಿಕ ಒಡೆತನದ ಸಂಪನ್ಮೂಲಗಳ ಪ್ರಮಾಣದಲ್ಲಿ ಇಳಿತಾಯವಾದುದೇ ಬಹುಶಃ ಸೂಕ್ಷ್ಮ ಮಟ್ಟದಲ್ಲಿ ಆಧುನಿಕ ಆರ್ಥಿಕ ಬೆಳವಣಿಗೆಯ ಮೇಲೆ ತುಂಬ ಅಹಿತ ಪರಿಣಾಮ ಬೀರಿದೆಯೆಂದು ಹೇಳಬಹುದು. ಜೈವಿಕ ಪದಾರ್ಥಗಳ ಲಭ್ಯವನ್ನೂ (ಕೆರೆಗಳಿಂದ) ನೀರಿನ ಲಭ್ಯವನ್ನೂ ಅದು ಹೆಚ್ಚು ಅನಿಶ್ಚಿತಗೊಳಿಸಿತು ಮತ್ತು ಅವುಗಳನ್ನೇ ಅವಲಂಬಿಸಿ ಇರಲಾಗದಂತೆ ಮಾಡಿತು. ಇಡೀ ಸಮುದಾಯ ಅಂಗೀಕರಿಸಿದ್ದ ಹಾಗೂ ಅನುಸರಿಸುತ್ತಿದ್ದ ಪರಿಸರ ವ್ಯವಸ್ಥೆಯು ಇದ್ದಕ್ಕಿದ್ದಂತೆ ತುಂಬ ಬಿಡಿ ವ್ಯಕ್ತಿಗಳ ಇಷ್ಟಾನಿಷ್ಟಗಳನ್ನು ಅವಲಂಬಿಸುವಂತಾಯಿತು.*

ಭಾರತದಲ್ಲಿ ಮಳೆ - ಆಧಾರಿತ ಕೃಷಿಯು ತನ್ನ ವ್ಯವಸ್ಥೆಯಲ್ಲಿ ಇಂತಹ ಪರಿಸರ ಸಮತೋಲನವನ್ನು ಸಾಧಿಸುವುದು ಹೇಗೆ ಸಾಧ್ಯವಾಯಿತು ? ಹಿಂದಿನಿಂದ ಬಂದ ಅಭ್ಯಾಸಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ, ಬೆಳೆಸುವುದರ ಮೂಲಕ ಅದು ಅನೇಕ ಶತಮಾನಗಳಿಂದ ವಿಕಾಸಗೊಂಡು ಬಂದಿತು. ಅದು ಬಲವಾಗಿ ಬೇರೂರಿದ ಜನರ ಪರಂಪರೆಯ ಆಚಾರ ಮತ್ತು ಸಂಸ್ಕೃತಿಗಳ ಒಂದು ಭಾಗವಾಗಿ ಬೆಳೆಯಿತು. ಅನೇಕ ಶತಮಾನಗಳಿಂದ ವರ್ಷ ವರ್ಷವೂ ಸಾಗುವಳಿ ಮಾಡಿಕೊಂಡು ಬಂದರೂ ಮಣ್ಣಿನ ಉತ್ಪಾದಕತೆಯನ್ನು ಉಳಿಸಿಕೊಂಡು ಬರುವುದು; ವಿಪತ್ಕಾಲಗಳಲ್ಲೂ ಜನ ಜಾನುವಾರುಗಳಿಗೆ ಜೀವದಿಂದಿದ್ದುಕೊಂಡಿರಲು ಸೌಲಭ್ಯ ಮಾಡಿಕೊಡುವುದು; ಯುಗಯುಗಾಂತರಗಳ ಸುದೀರ್ಘ ಕಾಲಗಳವರೆಗೆ ಕೃಷಿಯನ್ನು ಚೈತನ್ಯ ಪೂರ್ಣವಾಗಿ ತಾಖತ್ತು ಉಳ್ಳದ್ದನ್ನಾಗಿ ಮಾಡುವುದು, ಇದೇ ಕೃಷಿ ಅನುಸರಿಸಿದ ವ್ಯೂಹೋಪಾಯಗಳ ಮುಖ್ಯ ಅಂಶವಾಗಿದ್ದಿತು. ನಿಜ, ಹೀಗೆ ಹೊಂದಿಕೊಂಡು ಹೋಗುವ ವರ್ತನೆಯ ಗುರಿ ಬೆಳವಣಿಗೆಯೇ ಅಷ್ಟಾಗಿ ಆಗಿರಲಿಲ್ಲ. ಏಕೆಂದರೆ, ಬೆಳವಣಿಗೆಯು ಈಚಿಗಿನ ಗುರಿಯಾಗಿದೆ, ವಿದ್ಯಮಾನವಾಗಿದೆ. ಈ ಬೆಳವಣಿಗೆಯ ಹಾಗೂ ಅದರ ಪ್ರಭಾವ ಪರಿಣಾಮಗಳ ಪ್ರಶ್ನೆಯನ್ನು ನಾವು ಮುಂದೆ ಎತ್ತಿಕೊಳ್ಳೋಣ. ಏಕೆಂದರೆ ಮೊದಲು ಪ್ರಕೃತಿಗೂ ಶುಷ್ಕ ಭೂಮಿಗಳಲ್ಲಿ ವಾಸಿಸುವ ಜನ ಸಮುದಾಯಗಳಿಗೂ ನಡುವಿನ ನಿರಂತರ ಕ್ರಿಯೆ ಪ್ರತಿಕ್ರಿಯೆಗಳ ಪರಿಣಾಮವಾಗಿ ಶತ ಶತಮಾನಗಳಿಂದ ವಿಕಾಸಗೊಂಡು ಬಂದಿರುವ ಪರಿಸರ ವ್ಯವಸ್ಥೆಯನ್ನು ನಾವು ಅರ್ಥಮಾಡಿಕೊಳ್ಳಬೇಕು. ಅನಂತರವಷ್ಟೆ ಬೆಳವಣಿಗೆಯು ಪರಿಸರ ವ್ಯವಸ್ಥೆಯ ಮೇಲೆ ಎಂತಹ ಪರಿಣಾಮ ಉಂಟುಮಾಡಬಲ್ಲುದು ಎಂಬುದನ್ನು ತಿಳಿದುಕೊಳ್ಳಲು ಸಾಧ್ಯ. ಆಗಷ್ಟೆ ನಾವು ವರ್ತನೆಯ ಒಂದು ಸರಿ ಹೊಂದಬಹುದಾದಂಥ ವಿನ್ಯಾಸವನ್ನು, ಸ್ಥಿರ ಅಭಿವರ್ಧನೆಯನ್ನು ಸಾಧಿಸಬಲ್ಲಂಥ ವಿನ್ಯಾಸವನ್ನು ವಿಕಾಸಗೊಳಿಸಲು ಸಾಧ್ಯವಾಗುತ್ತದೆ. ಹ್ರಸ್ವಕಾಲಿಕ ಗಳಿಕೆಗಳ ಸಲುವಾಗಿ ಮೂಲ ಪರಿಸರ ವ್ಯವಸ್ಥೆಯನ್ನೇ ಭಂಗಗೊಳಿಸುವಂಥ, ನಾಶಗೊಳಿಸುವಂಥ ಯಾವುದೇ ಅಭಿವರ್ಧನೆಯೂ ಸ್ಥಿರವಾಗಿರಲಾರದು, ಉಳಿಯಲಾರದು.

ಶತ ಶತಮಾನಗಳಿಂದ ಉಪಯೋಗಿಸುತ್ತ ಬಂದರೂ ಭೂಮಿಯು ತನ್ನ ಉತ್ಪಾದಕತೆಯನ್ನು ಉಳಿಸಿಕೊಂಡೇ ಇರುವಂತೆ ಮೊದಲು ಮಣ್ಣಿನ ಸುಸ್ಥಿರ ಬಳಕೆಯ ಒಂದು ಸಂಕೀರ್ಣ ಹಾಗೂ ಕುಶಲ ವ್ಯೂಹೋಪಾಯವನ್ನು ಹಿಂದೆ ವಿಕಾಸಗೊಳಿಸಲಾಗಿದ್ದಿತು. ಅದು ಸರದಿ ಉಳುಮೆ, ಬೆಳೆ-ವೈವಿಧ್ಯೀಕರಣ ಹಾಗೂ ಮಣ್ಣಿನ ಸಾರ ಪುನಃಪೂರಣ ಮಾಡುವ ಜೈವಿಕ ಗೊಬ್ಬರ ಬಳಕೆ, ಇವುಗಳ ಮೇಲೆ ಆಧರಿಸಿದ್ದಿತು. ಮಣ್ಣು ಅಷ್ಟು ಫಲವತ್ತಾಗಿರದಿದ್ದ ಕಡೆಗಳಲ್ಲಿ ಹಿಡುವಳಿಯ ವಿವಿಧ ಭಾಗಗಳಲ್ಲಿ ಸರದಿಯಲ್ಲಿ ವರ್ಷ ಬಿಟ್ಟು ವರ್ಷ ಉಳುಮೆ ಮಾಡುವ ವಿಧಾನವನ್ನು ಅನುಸರಿಸಲಾಗುತ್ತಿತ್ತು. ಹಾಗಾಗಿ ಒಂದೊಂದು ಭಾಗವೂ ಕೊನೆಯ ಪಕ್ಷ ಎರಡು-ಮೂರು ವರ್ಷಗಳಲ್ಲೊಮ್ಮೆ ಉಳುಮೆಯಿಂದ ರಜೆ

**ಪ್ರೊ॥ ಎಂ. ವಿ. ನಾಡಕರ್ಣಿ**

ಅನುಭವಿಸುತ್ತಿದ್ದಿತು. ಇದರಿಂದ ಮಣ್ಣಿನ ಫಲವತ್ತತೆಯನ್ನು ಉಳಿಸಿಕೊಳ್ಳಲು ಸಹಾಯವಾಗುತ್ತಿತ್ತು. ಎಲ್ಲಿ ಭೂಮಿ ಹೆಚ್ಚು ಫಲವತ್ತಾಗಿದ್ದಿತೋ ಅಲ್ಲಿ ಋತುಗಳಿಗೆ ಅನುಗುಣವಾಗಿ ವ್ಯವಸಾಯ ಮಾಡಲಾಗುತ್ತಿದ್ದಿತು. ಇದರ ಜೊತೆಗೆ ಪರ್ಯಾಯ ಬೆಳೆ ಪದ್ಧತಿಯನ್ನು ವಿವೇಕಯುತವಾಗಿ ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಬೇಸಗೆಯ ಮಳೆಯಲ್ಲಿ ಭತ್ತ, ಜೋಳಗಳಂಥ ಧಾನ್ಯಗಳನ್ನು ಬೆಳೆಯಲಾಗುತ್ತಿದ್ದಿತು. ಇವುಗಳ ಜೊತೆಗೆ ಮಧ್ಯೆ ಮಧ್ಯೆ ಸಾಲುಗಳಲ್ಲಿ ದ್ವಿದಳ ಧಾನ್ಯಗಳ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಇದಾದನಂತರ ಆ ಪ್ರದೇಶಗಳಲ್ಲಿ ಗೋಧಿ, ಕಡಲೆಯಂಥ ಚಳಿಗಾಲದ ಬೆಳೆಗಳನ್ನು ಬೆಳೆಯಲಾಗುತ್ತಿದ್ದಿತು. ಇವು ಹೆಚ್ಚು ಗಡಸಾಗಿದ್ದು ಮಳೆಗಾಲದ ನಂತರ ಮಣ್ಣಿನ ಮೇಲ್ಮೈನ ಮೇಲೆ ಉಳಿದಿದ್ದ ತೇವವನ್ನೇ ಬಳಸಿಕೊಂಡು ಬೆಳೆಯುತ್ತಿದ್ದವು. ತೊಗರಿ ಹಾಗೂ ಕಡಲೆಗಳಂಥ ದ್ವಿದಳ ಧಾನ್ಯಗಳು ಸಾರಜನಕವನ್ನು (ನೈಟ್ರೋಜನ್) ಮಣ್ಣಿಗೆ ಒದಗಿಸುತ್ತಿದ್ದವು ಅನ್ನುವುದನ್ನು ರೈತರು ತಿಳಿದಿಲ್ಲದೆ ಇರಬಹುದು. ಆದರೆ ಉಳಿದ ಬೆಳೆಗಳಿಂದ ಖಾಲಿ ಮಾಡಲಾದ ಮಣ್ಣಿನ ಫಲವತ್ತತೆಯನ್ನು ಅವು ತುಂಬಿಕೊಡುತ್ತಿದ್ದವು ಅನ್ನುವುದನ್ನಂತೂ ಅವರು ತಿಳಿದಿದ್ದರು. ಬೇಳೆಗಳೂ ಧಾನ್ಯಗಳೂ ಪರಸ್ಪರ ಪೂರಕವಾಗಿದ್ದವೆಂಬುದನ್ನು ಅವರು ತಿಳಿದಿದ್ದರು. ಸಮೃದ್ಧ ಸುಗ್ಗಿ ಖಚಿತವಿಲ್ಲದಿದ್ದಾಗ ಬದುಕುಳಿಯುವ ಹಾಗೂ ಮಣ್ಣಿನ ಫಲವತ್ತತೆ ಬರಿದಾಗುವುದನ್ನು ತಪ್ಪಿಸುವ ವ್ಯೂಹೋಪಾಯವಾಗಿ ಅವರು ಬೆಳೆ ವೈವಿಧ್ಯೀಕರಣವನ್ನು ಪಟ್ಟು ಹಿಡಿದು ಅನುಸರಿಸುತ್ತಿದ್ದರು. ಈ ಪ್ರಕ್ರಿಯೆಯಲ್ಲಿ ಅವರು ಅನೇಕ ಮಾದರಿಯ ಕಾಳು, ಬೇಳೆಗಳನ್ನು ಪ್ರೀತಿಯಿಂದ ಬೆಳೆಸಿ ಉಳಿಸುತ್ತಿದ್ದರು. ಇಂಥ ವೈವಿಧ್ಯತೆ ವಿಭಿನ್ನತೆಗಳನ್ನು ಬೇರಾವ ದೇಶದಲ್ಲೂ ಸುಲಭವಾಗಿ ಕಾಣಲಾಗದು. ದಾನ ನೀಡುವಾಗ ಬೇರೆಲ್ಲ ವಸ್ತುಗಳ ಜೊತೆಗೆ ನವಧಾನ್ಯಗಳು ಇರಲೇಬೇಕು, ಇಲ್ಲದಿದ್ದರೆ ಪುಣ್ಯ ಅಥವಾ ಶ್ರೇಷ್ಠತೆ ಲಭಿಸುವುದಿಲ್ಲ ಎಂದು ಹಿಂದೂ ಮತಧರ್ಮಕ್ರಿಯೆಗಳು ಒತ್ತಿ ಹೇಳುತ್ತವೆ. ರೈತರು ಹೀಗೆ ತುಂಬ ವೈವಿಧ್ಯಮಯವಾದ ಬೆಳೆಗಳನ್ನು ಬೆಳೆದಾಗ ಜನರ ಆಹಾರ ಸೇವನೆಯೂ ಅಷ್ಟೇ ವೈವಿಧ್ಯಪೂರ್ಣ ವಸ್ತುಗಳಿಂದ ಕೂಡಿದ್ದಿತು. ಅವು ಉತ್ತಮ ಆರೋಗ್ಯಕ್ಕೆ ಅವಶ್ಯವಾದಷ್ಟು ಪ್ರಮಾಣಗಳಲ್ಲಿ ಕ್ಯಾಲೋರಿಗಳ, ಪ್ರೋಟಿನ್‌ಗಳ, ಖನಿಜಗಳ ಹಾಗೂ ವೈಟಮಿನ್‌ಗಳ ಪೌಷ್ಟಿಕ ಸಮತೋಲ ಒದಗಿಸುತ್ತಿದ್ದವು. ಭೂಮಿಯ ಫಲವತ್ತತೆಯನ್ನು ಕಾಪಾಡಿಕೊಳ್ಳುವುದರಲ್ಲಿ ಗೋವುಗಳ ಸಾಕಣೆಯೂ ಒಂದು ಮುಖ್ಯಾಂಶವಾಗಿದ್ದಿತು. ಅವು ಪ್ರಾಸಂಗಿಕವಾಗಿ ರೈತರಿಗೆ ಹಾಲಿನ ರೂಪದಲ್ಲಿ ಪೌಷ್ಟಿಕ ಆಹಾರವನ್ನು ಒದಗಿಸುತ್ತಿದ್ದವು. ಕೊಟ್ಟಿಗೆಗಳಿಂದಷ್ಟೆ ಅಲ್ಲ, ರಸ್ತೆಗಳಿಂದಲೂ ಗೋಮಾಳ ಹುಲ್ಲುಗಾವಲುಗಳಿಂದಲೂ ಹೊಲಗದ್ದೆಗಳಿಂದಲೂ ದನಗಳ ಸಗಣಿಯನ್ನು ಸಂಗ್ರಹಿಸಿ ಗುಂಡಿಗಳಲ್ಲಿ ತುಂಬಿಡಲಾಗುತ್ತಿತ್ತು. ಮಣ್ಣಿನ ಪೌಷ್ಟಿಕಾಂಶಗಳು ಸಮೃದ್ಧವಾಗಿರುವಂತೆ ಹೊಂಗೆಯಂಥ ಮರದೆಲೆಗಳನ್ನೂ ಜೈವಿಕ ಕಸ ಕಡ್ಡಿಗಳನ್ನೂ ತೋಟಗಳಿಂದ ಸಂಗ್ರಹಿಸಿ ಸಗಣಿಯೊಂದಿಗೆ ಬೆರೆಸಿಡಲಾಗುತ್ತಿತ್ತು. ವರ್ಷವರ್ಷಗಳಿಂದ ಎಚ್ಚರಿಕೆಯಿಂದ ಆಯ್ದ ಅಂಥ ಮರಗಳನ್ನು ಹೊಲಗದ್ದೆಗಳ ಅಂಚುಗಳಲ್ಲೂ ಊರೊಟ್ಟಿನ ಜಮೀನುಗಳಲ್ಲೂ ಬೆಳೆಯಲಾಗುತ್ತಿತ್ತು. ಹೊಂಗೆ ಹಾಗೂ ಬೇವುಗಳಂಥ ಮರಗಳು ಅವರಿಗೆ ಎಣ್ಣೆ ಬೀಜಗಳನ್ನೂ ಒದಗಿಸುತ್ತಿದ್ದವು. ಎಣ್ಣೆ ತೆಗೆದ ನಂತರ ಉಳಿದ ಹಿಂಡಿಗಳನ್ನು ಮತ್ತೆ ತಿನ್ನಬಲ್ಲಂಥವಾದರೆ ದನಕರುಗಳಿಗೆ ಮೇವಾಗಿಯೋ ಇಲ್ಲವೇ ಹೊಲಗಳಿಗೆ ಗೊಬ್ಬರವಾಗಿಯೋ ಬಳಸಲಾಗುತ್ತಿತ್ತು. ಈ ರೀತಿ ತಯಾರಾದ ಮಿಶ್ರಗೊಬ್ಬರವನ್ನು ಮತ್ತೆ ಬೀಜ ಬಿತ್ತುವ ಮುನ್ನ ಜಮೀನುಗಳ ಮೇಲೆ ಎಚ್ಚರಿಕೆಯಿಂದ ಹರಡಿ ಆಮೇಲೆ ಮಣ್ಣಿನ ಒಳಕ್ಕೆ ಹೋಗುವಂತೆ ನೇಗಿಲು ಹೊಡೆಯಲಾಗುತ್ತಿತ್ತು.

ಗಂಜಲವನ್ನು ವ್ಯರ್ಥಮಾಡುತ್ತಿರಲಿಲ್ಲ. ಅದನ್ನು ಕೊಟ್ಟಿಗೆಗಳಲ್ಲಿ ಅಚ್ಚುಕಟ್ಟಾಗಿ ಸಂಗ್ರಹಿಸಿ ಅನಂತರ ಹತ್ತಿರದಲ್ಲೇ ಇದ್ದ ಬೆರಕೆಗೊಬ್ಬರದ ಗುಂಡಿಗಳಿಗೆ ಹರಿಬಿಡಲಾಗುತ್ತಿತ್ತು. ಹೊಲವನ್ನು ಎತ್ತುಗಳ ಸಹಾಯದಿಂದ ಅವಶ್ಯವಿದ್ದಷ್ಟು ಆಳದವರೆಗಷ್ಟೆ – ಬಿದ್ದ ಮಳೆಯ ನೀರನ್ನು ಗರಿಷ್ಠ ಪ್ರಮಾಣದಲ್ಲಿ ಹೀರಿಕೊಳ್ಳಲು ಹಾಗೂ ಮಣ್ಣನ್ನು ಕೃಷಿಯೋಗ್ಯಗೊಳಿಸಲು ಸಾಲುವಷ್ಟು ಆಳದವರೆಗಷ್ಟೆ – ಉಳಲಾಗುತ್ತಿದ್ದಿತು. ಮಿಶ್ರಗೊಬ್ಬರದ ಎಲೆ, ಕಡ್ಡಿ ಮೊದಲಾದ ಜೈವಿಕ ಪದಾರ್ಥಗಳು ಮಣ್ಣಿನ ತೇವವನ್ನು ದೀರ್ಘ ಕಾಲ ಉಳಿಸಿಕೊಂಡಿರಲು ಸಹಾಯ ಮಾಡುತ್ತಿದ್ದವು. ಹಳ್ಳಿಗರು ಚಿಕ್ಕಪುಟ್ಟ ಮೆಲುಕು ಪ್ರಾಣಿಗಳನ್ನೂ – ವಿಶೇಷವಾಗಿ ಮೇಕೆ, ಕುರಿಗಳನ್ನು ಸಾಕುತ್ತಿದ್ದರು. ಅದನ್ನು ರಾತ್ರಿ ವೇಳೆಗಳಲ್ಲಿ ಹೊಲಗದ್ದೆಗಳಲ್ಲಿ ಕೂಡಿಡಲಾಗುತ್ತಿತ್ತು. ಅವು ಹಾಕುತ್ತಿದ್ದ ಹಿಕ್ಕೆಗಳಿಗೆ ಹೆಚ್ಚಿನ ಮಹತ್ವ ನೀಡಲಾಗಿತ್ತು. ಸ್ವಂತದ ಕುರಿ, ಮೇಕೆಗಳು ಇಲ್ಲದಿದ್ದಾಗ ರೈತರು ತಮ್ಮ ಹೊಲಗಳಲ್ಲಿ ಅವನ್ನು ಬಿಡುವಂತೆ ಅಲೆಮಾರಿಗಳನ್ನೂ ಸಂಚಾರೀ ಪಶುಪಾಲಕರನ್ನೂ ಕೇಳಿಕೊಳ್ಳುತ್ತಿದ್ದರು ಮತ್ತು ಅದಕ್ಕಾಗಿ ಅವರಿಗೆ ಶುಲ್ಕ ನೀಡುತ್ತಿದ್ದರು. ಹೀಗೆ ರೈತರು ಕೃಷಿಗಾರಿಕೆಯನ್ನು ಅನೇಕ ಪೂರಕ ಅಂಶಗಳನ್ನುಳ್ಳ ಒಂದು ಸಮಗ್ರ ಉದ್ಯಮವನ್ನಾಗಿ ಕಂಡುಕೊಂಡಿದ್ದರು ಮತ್ತು ಒಂದೊಂದು ಅಂಶವನ್ನೂ ಪೂರ್ಣವಾಗಿ ಬಳಸಿಕೊಳ್ಳುತ್ತಿದ್ದರು.

ಈ ರೀತಿ ಕೃಷಿಗಾರಿಕೆಯಲ್ಲಿ, ಪರಿಸರ ಸಂರಕ್ಷಣೆಯಲ್ಲಿ ದನಕರುಗಳನ್ನು ಅವಲಂಬಿಸುತ್ತಿದ್ದುದೇ ಹಿಂದೂ ಪರಂಪರೆಯಲ್ಲಿ ಎತ್ತು, ಹಸುಗಳ ಬಗೆಗೆ ಗೌರವ ಹಾಗೂ ಪೂಜ್ಯ ಭಾವನೆ ಮೂಡಿರುವುದಕ್ಕೆ ಕಾರಣವೆನ್ನಬಹುದು. ರೀಡಿಂಗ್ ಎಂಬಾತ ವಿನೋದದಿಂದ ಹೀಗೆ ಹೇಳಿದ್ದಾನೆ : ''ದನದ ಮಾಂಸ ತಿನ್ನುವ ಬ್ರಿಟಿಷರಿಗೆ ಚೆನ್ನಾಗಿ ಸುಟ್ಟ ಒಂದು ದೊಡ್ಡ ದನದ ಮಾಂಸದ ತುಂಡಿನ ವಿಚಾರ ಮನಸ್ಸಿನಲ್ಲಿ ಹೊಳೆದರೆ ಸಾಕು ನಾಲಿಗೆಯಲ್ಲಿ ನೀರೂರುತ್ತದೆ. ಹಾಗಾಗಿ ಅವರಿಗೆ ಐರೋಪ್ಯ ನಾಗರಿಕತೆಯನ್ನು ಭಾರತದ ಮೇಲೆ ಹೊರಿಸುವ ಯತ್ನದಲ್ಲಿ ಅಡ್ಡಿಬರುತ್ತಿದ್ದ ಅನೇಕ ಹಿಂದೂ ಧಾರ್ಮಿಕ ಹಾಗೂ ಕಂದಾಚಾರ ಪದ್ಧತಿಗಳ ಮಧ್ಯೆ

ಗೋಪೂಜೆ ಅತ್ಯಂತ ಮೂರ್ಖತನದ್ದೆಂದೇ ಕಂಡುಬರುತ್ತಿದ್ದಿತು'' (ರೀಡಿಂಗ್, ೧೯೯೦ : ೧೮೮). ಭಾರತದಲ್ಲಿ ಹಸುಗಳ ಬಗೆಗೆ ಇರುವ ಪೂಜ್ಯಭಾವನೆಗೆ ಪಾರಂಪರಿಕ ಧಾರ್ಮಿಕ ನಂಬಿಕೆಯೇ ಮೂಲ ಕಾರಣವೆಂದು ತಪ್ಪಾಗಿ ಭಾವಿಸಲಾಗಿದ್ದಿತು. ಆದರೆ ೧೯೬೬ರಲ್ಲಿ 'ಕರೆಂಟ್ ಆಂತ್ರಪಾಲಜಿ' ಪತ್ರಿಕೆಯು (ಸಂ. ೭:೫೧-೯) ಪ್ರಕಟಿಸಿದ ''ಭಾರತದ ಪವಿತ್ರ ಪಶುಗಳ ಸಾಂಸ್ಕೃತಿಕ ಪರಿಸರ ವ್ಯವಸ್ಥೆ'' ಎಂಬ ಮಾರ್ವಿನ್ ಹ್ಯಾರಿಸ್‌ರ ಪ್ರಬಂಧವು ಈ ಸಮಸ್ಯೆಯ ಕುರಿತು ಬುದ್ಧಿಜೀವಿಗಳ ಮಧ್ಯೆ ಹೆಚ್ಚು ಉತ್ತಮ ತಿಳಿವಳಿಕೆ (ಈ ತಿಳಿವಳಿಕೆ ರೈತರ ಮಧ್ಯೆ ಆಗಲೇ ಇದ್ದಿತೆನ್ನಿ) ಮೂಡಿಸಲು ಸಹಕಾರಿಯಾಯಿತು.

ಹ್ಯಾರಿಸ್‌ರು ಈ ಪ್ರಬಂಧವನ್ನು ಕಾರ್ಯಾರ್ಥಕ ಮನೋಭಾವದಿಂದ ಬರೆದು, ಜನರಿಗೂ ಜಾನುವಾರುಗಳಿಗೂ ನಡುವೆ ಪ್ರಯೋಜನವಾಗುವಂಥ ಸಹಜೀವನ ಸಂಬಂಧ ಇದ್ದುದೇ ಗೋವಿನ ಬಗೆಗಿನ ಪೂಜ್ಯಭಾವನೆಗೆ ಕಾರಣವೆಂದು ಸ್ಪಷ್ಟಪಡಿಸಿದ್ದರು. ಭಾರತದಲ್ಲಿ ಜನರಿಗೂ ಜಾನುವಾರುಗಳಿಗೂ ನಡುವೆ ಬದುಕುಳಿಯುವ ಪೈಪೋಟಿ ಇದ್ದಿತೆಂದು ಅನೇಕ ಬುದ್ಧಿಜೀವಿಗಳ ನಂಬಿಕೆಯನ್ನು ಅಲ್ಲಗಳೆದು ಅವರು ಅಂತಹ ಸ್ಪರ್ಧೆಯ ಪ್ರಶ್ನೆಯೇ ಉದ್ಭವಿಸದೆಂದು ತಿಳಿಸಿದರು. ನಿಜವಾಗಿ ಹೇಳುವುದಾದರೆ, ಪ್ರತಿಯೊಂದು ಕೃಷಿ ಕುಟುಂಬಕ್ಕೂ ತನ್ನದೇ ಎತ್ತುಗಳನ್ನು ಹೊಂದಿರುವ ಆವಶ್ಯಕತೆ ಇದ್ದುದನ್ನು ಪರಿಗಣಿಸಿದರೆ ದನಕರುಗಳ ಸಂಖ್ಯೆಯಲ್ಲಿ ಕೊರತೆ ಇದ್ದಿತೆಂದೇ ಹ್ಯಾರಿಸ್ ತೀರ್ಮಾನಕ್ಕೆ ಬರುತ್ತಾರೆ. ಸಕಾಲದಲ್ಲಿ ಬೀಜ ಬಿತ್ತಲೋಸುಗ ಮಳೆಗಾಲ ಆರಂಭವಾಗುತ್ತಿದ್ದಂತೆಯೇ ಉಳುಮೆ ಕಾರ್ಯ ಮುಗಿಸಲು ಸುಸ್ಥಿತಿಯಲ್ಲಿದ್ದ ರೈತರು ತಮ್ಮವೇ ಎತ್ತುಗಳನ್ನು ಹೊಂದಿರುವುದಕ್ಕೆ ಆದ್ಯತೆ ನೀಡಿದ್ದರು. ಇತರರಿಂದ ಬಾಡಿಗೆಗೆ ಪಡೆಯುವುದೆಂದರೆ ತಡವಾಗುತ್ತಿತ್ತು. ಎತ್ತುಗಳ ಉಳುವ ಸಾಮರ್ಥ್ಯಕ್ಕೆ ಹೋಲಿಸಿದಲ್ಲಿ ಹೊಲಗಳ ಗಾತ್ರ ಚಿಕ್ಕದಾಗಿದ್ದನ್ನು ಗಮನಕ್ಕೆ ತಂದುಕೊಂಡಲ್ಲಿ, ಎತ್ತುಗಳ ಸಂಖ್ಯೆ ಹೆಚ್ಚಿದ್ದಿತೆಂದು ಕಂಡರೂ ಮಳೆಯ ಪ್ರಯೋಜನ ಪಡೆದುಕೊಳ್ಳಲು ಉಳುಮೆ ಹಾಗೂ ಬಿತ್ತನೆ ಕಾರ್ಯಗಳನ್ನು ಮಳೆಗಾಲಕ್ಕೆ ಮುನ್ನವೇ ಪೂರ್ಣವಾಗಿ ಪೂರೈಸುವ ಅಗತ್ಯವಿದ್ದುದನ್ನು ಗಮನಕ್ಕೆ ತಂದುಕೊಂಡಾಗ ಅದು ನಿಜಕ್ಕೂ ಹಾಗಿರಲಿಲ್ಲವೆಂದೇ ಹೇಳಬಹುದು (ರೀಡರ್, ೧೯೯೦ : ೧೯೯೧).

ರೈತರು ದವಸ ಧಾನ್ಯಗಳನ್ನು ದಾಸ್ತಾನು ಮಾಡಿಡಲೂ ಅತ್ಯಂತ ವಿಶ್ವಾಸಾರ್ಹ ವಿಧಾನಗಳನ್ನು ವಿಕಾಸಗೊಳಿಸಿಕೊಂಡಿದ್ದರು. ಇದಕ್ಕಾಗಿ ಅವರು ವಿಶೇಷ ಕಟ್ಟಡಗಳನ್ನು ನಿರ್ಮಿಸಹೋಗದೆ ಮುಕ್ತವಾಗಿ ಲಭ್ಯವಿದ್ದ ಹಾಗೂ ಅಗ್ಗದ ನೈಸರ್ಗಿಕ ಸಾಮಾನುಗಳನ್ನೇ ಬಳಸಿಕೊಂಡರು. ಉದಾಹರಣೆಗೆ, ಅಕ್ಕಿಯನ್ನು ತುಂಬಿಡುತ್ತಿದ್ದ ಮೂಡೆಗಳು. ಇವುಗಳನ್ನು ನಿಸರ್ಗದಲ್ಲೇ ಸುಲಭವಾಗಿ ಸಿಗುತ್ತಿದ್ದ ಬಿದಿರಿನಿಂದ ತಯಾರಿಸುತ್ತಿದ್ದರು. ಗಾಳಿಯಾಗಲೀ, ಕ್ರಿಮಿಗಳಾಗಲೀ ಒಳ ನುಸಿಯಲು ಅವಕಾಶವಿರದಂತೆ ರಚಿಸಲಾಗುತ್ತಿದ್ದ ಈ ಮೂಡೆಗಳು ನಿಜಕ್ಕೂ ಅತ್ಯಂತ ಜಾಣ್ಮೆಯ ಸಾಧನಗಳಾಗಿದ್ದವು. ಇದೇ ರೀತಿ

## ಹಳೆ ಮನೆ - ಹೊಸ ನಡಿಗೆ

ಗೆಳತಿ ನಾವಿಬ್ಬರು ನಿಂತನೆಲ - ನೆಲೆ
ಒಂದೇ ಆಗಿದ್ದರೂ ಹೊರಟೆವಲ್ಲ
ವಿರುದ್ಧ ದಿಕ್ಕಿನಲ್ಲಿ ಬದುಕ ಅರಸಿ,
ಒಂದೇ ಮನ - ಮನೆ ಹೃದಯ
ತಲೆಯ ಒಳಗೆ ಹೊರಗೆ ಒಂದಾಗದ
ಹೊಂದಾಣಿಕೆಗೆ ಬಾರದ ನಾವುಗಳು
ತಿಳಿದೇ ಹೊರಟಿದ್ದೇವು ಪರಸ್ಪರ
ಬೆನ್ನು ತಿರುಗಿಸಿ ವೈರಿಗಳಾಗದೆ.
ನೀನು ಕಾಲಿನಿಂದ ನಡೆದ
ಹಾದಿಯ ಸವೆತ ನಾನು
ಹೃದಯದಿಂದ ಅಳೆದ ಹಾದಿಯ
ಲೆಕ್ಕ ಸಿಗಲೇ ಇಲ್ಲ ಕೊನೆಗೂ.
ಸ್ವಾಭಿಮಾನ, ಸ್ವಾತಂತ್ರ್ಯ, ದುಡಿಮೆ
ನನ್ನದು ಗೂಡು ನನ್ನದೇ ಬದುಕೆಂದು
ಚರಿತ್ರೆಯ ಪುಟ ತಿರುಗಿಸಿ
ನಿನ್ನ ನೀ ಹುಡುಕಲು ಹೊರಟ
ಬೆರಳ ತುದಿಯ ಭೂಗೋಲ
ಗಿಮಿಗಿಮಿ ಸುತ್ತಿ ಕಣ್ಣು ಕತ್ತಲಾಗಿಸಿತೆ
ಬವಳಿ ಬಂದು ನಡೆದ ನಿನ್ನ ಹಾದಿಯ
ಗುರಿಗಮ್ಯತೆ ಸಿಕ್ಕಿತೆ ಕೊನೆಗಾದರು.
ಗಂಡನ ಸೇವೆ ಮೋಕ್ಷಕ್ಕೆ ಹಾದಿ
ಮಕ್ಕಳು ಮರಿ ಗರತಿ ಗೌರವದ ನನ್ನ
ಮನೆಯೊಳಗಿನ ಪಯಣವೆಲ್ಲ
ಬೆಕ್ಕು ಮಜ್ಜಿಗೆಯ ಕಂಬ ಸುತ್ತಿದಂತೆ-
ಹೆಜ್ಜೆ ಗುರುತುಗಳೆಲ್ಲ ಒಲೆಯೊಳಗಿನ ಕುಳ್ಳುಬೂದಿ
ನಡೆದು ನಡೆದು ಬಸವಳಿದ
ನನ್ನೊಳಗಿನ ನಾನು ಅಂದುಕೊಳ್ಳುತ್ತೇನೆ
ನೀ ಆಯ್ದುಕೊಂಡ ಹಾದಿ ನಿನ್ನ ಗತಿಕಾಣಿಸಿರಬಹುದು.



ನೀನು ಮತಿವಂತೆ - ಅರಿವಿನ ಬೆಳಕಲ್ಲಿ
ನಡೆಯುವ ಹಾದಿಯ ದಿಕ್ಕುದೆಸೆ ಅಳೆದ ಧೀಮಂತೆ
ಸಿಕ್ಕಿರಬಹುದು ಬದುಕಿನ ಅರ್ಥ ನಿನಗಾದರು.
ನಡೆದೇ ನಡೆದೆವು ನನ್ನ ನಾ ಮರೆತು ನಿನ್ನ ನೀ ಮರೆತು
ಬಂದು ಸೇರಿದೆವು ನೋಡು ನಾವು ಅಂದು
ಕೊಳ್ಳಲಾರದ ಕೊನೆಯ ಬಿಂದುವಿಗೆ.
ಜಗತ್ತು ಗುಂಡಗಿದೆ ಎಂಬುದೆಲ್ಲ ನೆನಪಿಸಿ
ಕಾಲ ತಂದು ಸೇರಿಸಿತು ನೋಡು
ಮತ್ತೆ ಅದೇ ಜಗಕೆ.
ಗಣಪನದು ನನ್ನೊಳಗಿನ ನಡಿಗೆ
ನಿನ್ನ ಹೊರಗಿನ ದುಡಿಮೆ ನವಿಲೇರಿದವನದು
ಸಿಕ್ಕ ಸತ್ಯ ಕೊನೆಗೂ ಅದೇ ಹಳೇ ಮನೆಯಲ್ಲವೆ ?

- ಮಲ್ಲಿಕಾ ಘಂಟಿ

ಅವರು ಸುತ್ತಮುತ್ತಲಿನ ವಾತಾವರಣ ಪರಿಸ್ಥಿತಿಗೆ ತಕ್ಕಂತೆ ನೆಲದಡಿ ಹಾಗೂ ನೆಲದ ಮೇಲೆ ಧಾನ್ಯ ದಾಸ್ತಾನು ಮಾಡಿಡುವ ವಿಧಾನಗಳನ್ನು ವಿಕಾಸಗೊಳಿಸಿಕೊಂಡಿದ್ದರು. ಉತ್ತಮ ಹವಾಗುಣ ವರ್ಷಗಳಲ್ಲಿ ಹೀಗೆ ದಾಸ್ತಾನು ಮಾಡುತ್ತಿದ್ದ ಮಿಗುತಾಯ ಧಾನ್ಯವು ಜಲಾಭಾವ ಹಾಗೂ ಕ್ಷಾಮಗಳ ವರ್ಷಗಳಲ್ಲಿ ಬಳಸುವುದಕ್ಕೆ ಒದಗಿಬರುತ್ತಿದ್ದಿತು. ಬಡವರಿಗೆ ವಿಶೇಷವಾಗಿ ಧಾನ್ಯ ಕೊರತೆಯ ವರ್ಷಗಳಲ್ಲಿ ಉಚಿತವಾಗಿ ಊಟ ಒದಗಿಸುವ ಅನ್ನದಾನದಂಥ ಕಾರ್ಯವನ್ನು ಬಹಳ ಪುಣ್ಯದ ಕೆಲಸವೆಂದು ಭಾವಿಸಲಾಗಿತ್ತು. ಹೀಗಾಗಿ ಉಳುಮೆ ಭೂಮಿ ಇಲ್ಲದಂಥ ಜನರೂ ಅನಾವೃಷ್ಟಿ ಕಾಲಗಳಲ್ಲಿ ಬದುಕಿ ಉಳಿಯಲು ಸಾಧ್ಯವಾಗಿದ್ದಿತು. ಭೂಹೀನ ಬಡಜನರು ಶ್ರೀಮಂತರ ಔದಾರ್ಯವನ್ನು ಅವಲಂಬಿಸಿರುವಂತಹ ಪದ್ಧತಿ ಇಂದು ಆಕ್ಷೇಪಣಾರ್ಹವಾಗಿರಬಹುದು. ಆದರೆ ಆ ಹಿಂದಿನ ಕಾಲಗಳಲ್ಲಿ ಅದು ತನ್ನದೇ ರೀತಿಯಲ್ಲಿ ನ್ಯಾಯಸಮ್ಮತವಾಗಿದ್ದಿತು.

ಮಳೆಯ ಹೆಚ್ಚಿನ ನೀರನ್ನು ದಾಸ್ತಾನು ಮಾಡಿಡಲು ಕೆರೆಕೊಳಗಳನ್ನು ನಿರ್ಮಿಸುವ ವ್ಯವಸ್ಥೆಯನ್ನು ತುಂಬ ಎಚ್ಚರಿಕೆಯಿಂದ ಹಾಗೂ ಸಮರ್ಪಣ ಭಾವದಿಂದ ವಿಕಾಸಗೊಳಿಸಲಾಗಿದ್ದಿತು. ಅನೇಕ ಅರೆ-ಶುಷ್ಕ ಪ್ರದೇಶಗಳಲ್ಲಿ ಕೆರೆಗಳ ಸರಣಿಯನ್ನು ಮೇಲ್ಮಟ್ಟದಿಂದ ಕೆಳಗಿನ ಮಟ್ಟದವರೆಗೆ ಎಚ್ಚರಿಕೆಯಿಂದ ನಿರ್ಮಿಸಲಾಗುತ್ತಿದ್ದಿತು. ಹಾಗಾಗಿ ಮಳೆಗಾಲದ ಹೆಚ್ಚಿನ ನೀರು ಮೇಲ್ಮಟ್ಟದ ಕೆರೆಗಳಿಂದ ಕೆಳಮಟ್ಟದ ಕೆರೆಗಳಿಗೆ ಹರಿದುಹೋಗುತ್ತಿದ್ದಿತು. ಈ ಕೆರೆಗಳಿಂದ ಕಾಲಕಾಲಕ್ಕೆ ಹೂಳು ಎತ್ತಲು ಸ್ಥಳೀಯ ಸಮುದಾಯಗಳು ತಮ್ಮವೇ ವ್ಯವಸ್ಥೆ ಏರ್ಪಡಿಸಿಕೊಂಡಿದ್ದವು. ಈ ಕೆರೆಗಳ ನೀರನ್ನು ಕುಡಿಯಲೂ ನೀರಾವರಿಗಾಗಿಯೂ ಸಮಪ್ರಮಾಣದಲ್ಲಿ ಹಂಚಲಾಗುತ್ತಿತ್ತು. ಕೆರೆಗಳನ್ನು ನಿರ್ಮಿಸುವುದನ್ನು ಅತ್ಯಂತ ಉನ್ನತ ಮಟ್ಟದ ಪುಣ್ಯ ಅಥವಾ ಶ್ರೇಷ್ಠತೆಯನ್ನು ಗಳಿಸಿಕೊಡುವ ಕಾರ್ಯವೆಂದು ಭಾವಿಸಲಾಗಿದ್ದಿತು. ಹಾಗಾಗಿ ಶ್ರೀಮಂತರಾದ ಹಾಗೂ

ಯಶಸ್ಸು ಗಳಿಸಿದ ವೇಶ್ಯೆಯರು ತಮ್ಮ ಪಾಪ ವಿಮೋಚನೆಗಾಗಿ ಕೆರೆ ಕುಂಟೆಗಳನ್ನು ನಿರ್ಮಿಸುತ್ತಿದ್ದರು. ಅನೇಕ ಅರೆ - ಶುಷ್ಕ ಪ್ರದೇಶದ ಹಳ್ಳಿಗಳಲ್ಲಿ 'ಸೂಳೆಕೆರೆ'ಗಳೆಂಬ ಹೆಸರಿನ ಕೆರೆ ಕೊಳಗಳು ಈಗಲೂ ಕಂಡುಬರುತ್ತವೆ. ಅಂತಹ ಸೂಳೆಯರು ಅತ್ಯಂತ ಹೆಚ್ಚಿನ ಗೌರವಕ್ಕೂ ಪಾತ್ರರಾಗಿದ್ದರು.

ಸಾರ್ವಜನಿಕವಾಗಿ ಎಲ್ಲರಿಗೂ ಸೇರಿದ ಹುಲ್ಲುಗಾವಲುಗಳೂ ಮಳೆ-ಆಧಾರಿತ ಕೃಷಿಯ ಪರಿಸರ ವ್ಯವಸ್ಥೆಯ ಅವಿಭಾಜ್ಯ ಭಾಗಗಳಾಗಿದ್ದವು. ಅವು ದನಕರುಗಳಿಗೆ ಮೇವು ಒದಗಿಸುತ್ತಿದ್ದವು. ಇದರಿಂದ ಭೂರಹಿತ ಜನರೂ ಪ್ರಾಣಿ ಸಾಕಣೆಯಲ್ಲಿ ತೊಡಗಬಹುದಿದ್ದಿತು. ಈ ಸಾರ್ವಜನಿಕ ಗೋಮಾಳಗಳು ರೈತರಿಗೆ ಹಸುರು ಗೊಬ್ಬರದ ಆಕರವೂ ಆಗಿದ್ದವು. ಅಲ್ಲದೆ ಅವು ರೈತರಿಗೂ ಇತರರಿಗೂ ಕಟ್ಟಿಗೆ ಮತ್ತಿತರ ಅವಶ್ಯ ಜೈವಮೂಲ ಸಾಮಗ್ರಿಗಳನ್ನು ಒದಗಿಸುತ್ತಿದ್ದವು.

ಇಂಥ ಪರಿಸರ ವ್ಯವಸ್ಥೆಯ ಚೌಕಟ್ಟಿನಲ್ಲೇ ಕೃಷಿ ಉತ್ಪಾದನೆಯ ಅಧಿಕಾಧಿಕ ಹೆಚ್ಚಳವೂ ಆದಾಯದಲ್ಲಿ ಹೆಚ್ಚಳವೂ ಜರುಗಬೇಕಾಗಿದೆ. ಖುಷ್ಕಿ ಭೂಮಿಗಳಲ್ಲಿ ಇದುವರೆವಿಗೂ ಜರುಗಿರುವ ಕೃಷಿ ವಿಕಾಸದಲ್ಲಿ ಒಳ್ಳೆಯ ಹಾಗೂ ಕೆಡಕು ಲಕ್ಷಣಗಳೆರಡೂ ಇವೆ. ಉತ್ಪನ್ನ ಹಾಗೂ ಹಣಕ್ಕೆ ಸಂಬಂಧಿಸಿ ಆಗಿರುವ ಬದಲಾವಣೆಯೂ ಒಂದು ಮುಖ್ಯ ಅಂಶವಾಗಿದೆ. ಪಾರಂಪರಿಕ ಪದ್ಧತಿಯಲ್ಲಿ ರೈತರ ಉಳುಮೆ ಕಾರ್ಯಕ್ಕೆ ಹಣದ ಆವಶ್ಯಕತೆಯೇನೂ ಇರಲಿಲ್ಲ. ಎಲ್ಲವೂ ಉಚಿತವಾಗಿ ಲಭ್ಯವಾಗುತ್ತಿದ್ದಿತು ಮತ್ತು ರೈತನು ಫಸಲನ್ನು ಹಣದ ಬಳಕೆಯ ಪ್ರಮೇಯವಿಲ್ಲದೆಯೇ ಸಂಗ್ರಹಿಸಿಕೊಳ್ಳುತ್ತಿದ್ದ. ಆಧುನಿಕ ಪದ್ಧತಿಯಲ್ಲಾದರೋ ಕೃಷಿಕಾರ್ಯಕ್ಕೆ ಅವಶ್ಯವಾದ ಅನೇಕ ವಸ್ತುಗಳನ್ನು ಹೊರಗಿನಿಂದ ಪಡೆದುಕೊಳ್ಳಬೇಕಾಗುತ್ತದೆ. ಇದಕ್ಕೆ ಹಣದ ಆವಶ್ಯಕತೆ ಬೀಳುತ್ತದೆ. ಇದು ರೈತನನ್ನು ಹಿಂದೆಂದಿಗಿಂತಲೂ ಹೆಚ್ಚಾಗಿ ಮಾರುಕಟ್ಟೆ ಶಕ್ತಿಗಳ ಹಿಡಿತಕ್ಕೆ ತಳ್ಳುತ್ತದೆ. ಅಲ್ಲದೆ ಇದು ಕೃಷಿಕಾರ್ಯದ ಖರ್ಚುಗಳನ್ನು ಹೆಚ್ಚಿಸುತ್ತದೆ. ಹೊಸ ಕೃಷಿ ತಂತ್ರಗಳ ಬಳಕೆಯಿಂದ ಆದಾಯ ಸಾಕಷ್ಟು ಹೆಚ್ಚಿದ್ದಾಗ ರೈತರು ಇದನ್ನು ಅಷ್ಟಾಗಿ ಗಣನೆಗೆ ತಂದುಕೊಳ್ಳುವುದಿಲ್ಲ. ಆದಾಯದಲ್ಲಿ ಹೆಚ್ಚಳವು ಅಧಿಕ ವೆಚ್ಚವನ್ನು ಸರಿ ತುಂಬಿಸುತ್ತದೆ ಮತ್ತು ಮಾರುಕಟ್ಟೆಯ ಏರುಪೇರುಗಳಿಂದ ರೈತನನ್ನು ಮುಕ್ತಗೊಳಿಸುತ್ತದೆ. ಆದರೆ ಎಲ್ಲ ರೈತರೂ, ಅದರಲ್ಲೂ ಆರಂಭ ಘಟ್ಟದಲ್ಲಿ ಅಷ್ಟು ಧೈರ್ಯಶಾಲಿಗಳಾಗಲೀ, ಕುಶಲಿಗಳಾಗಲಿ ಇರಲಾರರಷ್ಟೆ. ಹೆಚ್ಚು ಉತ್ತಮ ಸಂಪನ್ಮೂಲಗಳುಳ್ಳ ರೈತರಷ್ಟೆ ನವೀನ ವಿಧಾನಗಳನ್ನು ಅನುಷ್ಠಾನಕ್ಕೆ ತರುವ ಧೈರ್ಯ ಮಾಡಬಲ್ಲರು. ಇತರರು ಅವರನ್ನು ಕ್ರಮೇಣ ಅನುಸರಿಸಬಹುದಷ್ಟೆ.

ಇಂತಹ ವ್ಯಕ್ತಿಗತ ವರ್ತನೆ ಸರ್ವಜನರ ಒಳಿತನ್ನೇನೂ ಗಣನೆಗೆ ತಂದುಕೊಳ್ಳುವುದಿಲ್ಲವಷ್ಟೆ. ಅದೃಷ್ಟವಶಾತ್ ಕಳೆದ ಎರಡು ದಶಕಗಳಿಂದ ಅರಣ್ಯೀಕರಣದ ಮೂಲಕ ಮತ್ತು ಕೆಲವು ಸ್ಥಳಗಳಲ್ಲಿ ಕೆರೆಗಳನ್ನು ಪುನರುಜ್ಜೀವನ ಗೊಳಿಸುವ ಮೂಲಕವೂ ಹಳೆಯ ಸಾರ್ವಜನಿಕ ಆಸ್ತಿ ಸಂಪನ್ಮೂಲಗಳ ವ್ಯವಸ್ಥೆಯನ್ನು ಮತ್ತೆ ಜೀವಂತಗೊಳಿಸಲು ವಿಸ್ತೃತ ಯತ್ನ ಮಾಡಲಾಗುತ್ತಿದೆ. ಬಿದ್ದ ಮಳೆನೀರನ್ನು ಕೆರೆಕೊಳಗಳಲ್ಲಿ ಸಂಗ್ರಹ ಮಾಡಲೋಸುಗ ಜಲಾನಯನ ಭೂಮಿಗಳನ್ನು ಖುಷ್ಕಿ ಭೂಮಿ ವಿಕಾಸದ ಒಂದು ವ್ಯೂಹೋಪಾಯವಾಗಿ ಬೆಳೆಸುತ್ತಿರುವುದು ಒಂದು ಉತ್ತೇಜಕ ಅಂಶವಾಗಿದೆ. ಇದು ಪರಿಸರ ವ್ಯವಸ್ಥೆಯ ಸಂರಕ್ಷಣೆಗೆ ಹಾಗೂ ಯುಕ್ತ ಬಳಕೆಗೆ ಅನುಗುಣವಾಗಿಯೇ ಇದೆ. ಈ ವ್ಯೂಹೋಪಾಯದ ಫಲವಾಗಿ ಮಳೆ-ಆಧಾರಿತ ಪ್ರದೇಶಗಳಲ್ಲಿ ಭೂ ಹಾಗೂ ಜಲ ಸಂಪನ್ಮೂಲಗಳ ಸುಧಾರಣೆಗೆ ಅಧಿಕೋತ್ತೇಜನ ಲಭಿಸಿದೆ. ಜಲಸಂಪನ್ಮೂಲಗಳ ಸುಧಾರಣೆ ಎಂದರೆ ದೊಡ್ಡ ದೊಡ್ಡ ನೀರಾವರಿ ಯೋಜನೆಗಳ ನಿರ್ಮಾಣ ಎಂದಷ್ಟೇ ಅರ್ಥವಲ್ಲ. ಬಿದ್ದ ಮಳೆ ನೀರನ್ನು ಕೃಷಿಕಾರ್ಯಕ್ಕೆ ಬಳಸುವುದು, ನೀರನ್ನು ಮಿತವಾಗಿ ಬಳಸುವುದು. ಭೂಮಿಯ ಒಂದು ಏಕಮಾನಕ್ಕಲ್ಲ ಆದರೆ ನೀರಿನ ಒಂದು ಏಕಮಾನಕ್ಕೆ ಲಭಿಸುವ ಬೆಳೆಯ ಪ್ರಮಾಣವನ್ನು ಹೆಚ್ಚಿಸುವುದು- ಇವೆಲ್ಲವೂ ಅದರಲ್ಲಿ ಸೇರಿವೆ. ಅರೆ - ಶುಷ್ಕ ಪ್ರದೇಶಗಳಲ್ಲಿ ನೀರಿನ ಅಭಾವವಿರುವುದರಿಂದ ಉತ್ಪಾದನೆಯ ಒಂದು ಅಂಶವಾಗಿ ಭೂಮಿಗಿಂತ ನೀರೇ ಹೆಚ್ಚು ಮೌಲ್ಯದ್ದಾಗಿರುತ್ತದೆ. ಜಲಾನಯನ (ಉಬ್ಬು) ಭೂಮಿಗಳನ್ನು ನಿರ್ಮಿಸುವ ಯೋಜನೆಯಲ್ಲಿ ಭೂ ಹಾಗೂ ಜಲ ಸಂರಕ್ಷಣೆಯನ್ನು ಒಂದು ಮೂಲಭೂತ ಅಂಗಭಾಗವನ್ನಾಗಿ ಕೈಗೆತ್ತಿಕೊಳ್ಳಲಾಗಿದೆ. ಬಂಜರು ಭೂಮಿಯನ್ನೂ ಇದರಲ್ಲಿ ಸೇರಿಸಲಾಗಿದೆ. ಪರಿಣಾಮವಾಗಿ ಫಲದಾಯಕ ಆಚರಣೆಗಳೂ, ಆಸಕ್ತಿಗಳೂ ಮೂಡಿವೆ. ಆದರೆ ಈ ಚಳವಳಿ ಇನ್ನೂ ವಿಸ್ತೃತವಾಗಿ ವ್ಯಾಪಿಸಬೇಕಾಗಿದೆ. ಹಾಗಾದರಷ್ಟೆ ಚಾರಿತ್ರಿಕವಾಗಿ ಸಾರ್ವಜನಿಕ ಆಸ್ತಿ ಸಂಪನ್ಮೂಲಗಳಲ್ಲುಂಟಾಗಿರುವ ಇಳಿತಾಯವನ್ನೂ ಒಟ್ಟಿನಲ್ಲಿ ಅರೆ - ಶುಷ್ಕ ಪ್ರದೇಶಗಳಲ್ಲಿನ ಪರಿಸರ ವ್ಯವಸ್ಥೆಯಲ್ಲಿನ ಇಳಿತಾಯವನ್ನೂ ಹೋಗಲಾಡಿಸಲು ಸಾಧ್ಯವಾಗುತ್ತದೆ.

ಉನ್ನತ ಇಳುವರಿ ನೀಡುವ ಬೀಜಗಳನ್ನು ಬಳಸಿ ಕೃಷಿಕಾರ್ಯ ನಡೆಸುವ ಹಾಗೂ ಹೊಸ ಮಾದರಿಯ ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಬಳಸುವ ಹೊಸ ತಂತ್ರಕಲೆಯನ್ನು ಮಳೆ-ಆಧಾರಿತ ಕೃಷಿ ಪ್ರದೇಶಗಳಲ್ಲಿ ಜಾರಿಗೆ ತಂದುದು ಮಿಶ್ರ-ಫಲಿತಾಂಶಗಳನ್ನು ನೀಡಿದೆ. ಇಳುವರಿ ಅಸ್ಥಿರ ಆಗಿದ್ದ ಪ್ರದೇಶಗಳಲ್ಲಿ ಈ ಹೊಸ ತಂತ್ರ ಕಲೆ ಕೃಷಿ ಉತ್ಪಾದನೆ ಹೆಚ್ಚುವುದಕ್ಕೇನೋ ಪ್ರೋತ್ಸಾಹ ನೀಡಿತು. ಆದರೆ ಇಳುವರಿಗಳ ಅನಿಶ್ಚಿತತೆಯನ್ನು ಹೆಚ್ಚಿಸಿತು. ಹಿಂದೆ ಜೈವಿಕ ಗೊಬ್ಬರಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದ ಸ್ಥಳಗಳಲ್ಲಿ ಅವುಗಳ ಬದಲು ಹೊಸ ರಾಸಾಯನಿಕ ಗೊಬ್ಬರಗಳನ್ನು ಬಳಸಿದ ಕಡೆಗಳಲ್ಲಿ ಇಂತಹ ಅನಿಶ್ಚಿತತೆ ಹೆಚ್ಚಾಗಿ ಗೋಚರಕ್ಕೆ ಬಂದಿತು. ಹೊಸ, ಬೇಗ ಫಸಲು ನೀಡುವ ಬೀಜ ತಳಿ ಮಾದರಿಗಳನ್ನು ಬಳಸಿದುದು ಇಳುವರಿಯ ಪ್ರಮಾಣವನ್ನೇನೋ ತೀವ್ರವಾಗಿ ಹೆಚ್ಚಿಸಿತು, ಆದರೆ ಮಣ್ಣಿನ ಫಲವತ್ತತೆ ಕಡಿಮೆ ಆಯಿತು. ಅದರಲ್ಲೂ ಮಣ್ಣಿಗೆ ಹೆಚ್ಚಿನ ಪುಷ್ಟಿ ನೀಡುವ ರಾಸಾಯನಿಕಗಳನ್ನು, ನಿರ್ದಿಷ್ಟವಾಗಿ ಸೂಕ್ಷ್ಮ - ಪುಷ್ಟಿಕಾರಿಗಳನ್ನು ಸಾಕಷ್ಟು ಹೆಚ್ಚು ಪ್ರಮಾಣಗಳಲ್ಲಿ ಬಳಸದಿದ್ದ ಕಡೆ ಇದು ಹೆಚ್ಚು ಗೋಚರಕ್ಕೆ ಬಂದಿತು. ಹೊಸ ಮಾದರಿಗಳು ಕೊನೆಯ ಪಕ್ಷ ಆರಂಭ ಘಟ್ಟಗಳಲ್ಲಿ ಮಣ್ಣಿನ ಫಲವತ್ತತೆಯನ್ನು ಕಾಪಾಡುವ ಉದ್ದೇಶದಿಂದ ಬಹಳ ಹಿಂದಿನ ಕಾಲದಿಂದ ಅನುಸರಿಸಿಕೊಂಡು ಬಂದಿದ್ದ ಸರದಿ-ಬೆಳೆ ಪದ್ಧತಿಯ ಮೇಲೆ ದುಷ್ಪರಿಣಾಮ ಬೀರಿದವು. ಹಿಂದೆ ಇಡೀ ಕೃಷಿ ಹಿಡುವಳಿಯನ್ನು ಗಮನದಲ್ಲಿಟ್ಟುಕೊಂಡು ವ್ಯವಸಾಯ ಮಾಡುತ್ತಿದ್ದ ಕಡೆ ಈಗ ಕೇವಲ ಬಿಡಿ ಬೆಳೆಗಳ ಕಡೆಗೆ ಗಮನ ಹರಿಸಲಾಯಿತು. ಕ್ರಿಮಿನಾಶಕಗಳೂ ತಮ್ಮವೇ ದುಷ್ಪರಿಣಾಮ ಉಂಟುಮಾಡಿದವು. ಅವು ಪರಾಗಸ್ಪರ್ಶ ಕ್ರಿಯೆಗೆ ಕಾರಣವಾಗಿದ್ದ ಪಕ್ಷಿ ಪ್ರಾಣಿಗಳ ಸಂಖ್ಯೆಯನ್ನಷ್ಟೆ ಅಲ್ಲ, ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುತ್ತಿದ್ದ ಎರೆಹುಳುಗಳಂಥ ಕ್ರಿಮಿಗಳ ಸಂಖ್ಯೆಯನ್ನು ಕಡಿಮೆ ಮಾಡಿದವು. ಗೊಬ್ಬರಗಳನ್ನೂ, ಕ್ರಿಮಿನಾಶಕಗಳನ್ನೂ ಬೇಹುಷಾರಿನಿಂದ ಬಳಸಿದುದು ನೆಲದ ಮೇಲಿನ ಹಾಗೂ ನೆಲದಡಿಯ ನೀರಿನ ಗುಣಕ್ಕೂ ಬಾಧೆ ಉಂಟುಮಾಡಿತು.

ಕೃಷಿಯು ನಮ್ಮ ಹೆಚ್ಚುತ್ತಿರುವ ಜನಸಂಖ್ಯೆಗೆ ಸಾಕಷ್ಟು ಆಹಾರ ಒದಗಿಸುತ್ತಲೇ ಹೋಗಬೇಕಾದರೆ ನಾವು ಹಿಂದಿನಂತೆ ಸ್ಥಿರತೆ ಹಾಗೂ ಉಳಿಕೆಗಳ ಕಡೆಗಷ್ಟೆ ಗಮನ ನೀಡುತ್ತ ಹೋದರೆ ಸಾಲದು. ನಾವು ಹೆಚ್ಚುವರಿಯನ್ನೂ ಸಾಧಿಸಬೇಕು. ಆದಾಗ್ಯೂ ಮೂಲ ಪರಿಸರ ವ್ಯವಸ್ಥೆಯನ್ನು ಏರುಪೇರು ಮಾಡಿದಲ್ಲಿ ಯಾವ ಹೆಚ್ಚುವರಿಯನ್ನೂ ಸಾಧಿಸಲಾಗದು. ಕೃಷಿ ವಿಜ್ಞಾನಿಗಳು ನಮ್ಮ ಹಿಂದಿನ ರೈತರಲ್ಲಿದ್ದ ಬುದ್ಧಿವಂತಿಕೆಯನ್ನು ಅರ್ಥಮಾಡಿಕೊಂಡು ಅದನ್ನು ಮೆಚ್ಚುವಷ್ಟು ವಿನಯ ತೋರಬೇಕು. ಪರಿಸರ ವ್ಯವಸ್ಥೆಯೊಂದಿಗೆ ಸರಿ ಹೊಂದಿಕೊಂಡು ಹೋಗುವಂಥ ರೀತಿಯಲ್ಲಿ ಹೊಸ ತಂತ್ರಕಲೆಗಳನ್ನು ಜಾರಿಗೆ ತರುವಂಥ ಕುಶಲತೆಯನ್ನೂ ತೋರಬೇಕು. ಆಗಷ್ಟೆ ಉದ್ದಿಷ್ಟ ಗುರಿ ಮುಟ್ಟಲು ಸಾಧ್ಯವಾಗುವುದು.




ಪ್ರೊ.॥ ಎಂ. ವಿ. ನಾಡಕರ್ಣಿ
ಕುಲಪತಿಗಳು, ಗುಲ್ಬರ್ಗ ವಿಶ್ವವಿದ್ಯಾಲಯ, ಗುಲ್ಬರ್ಗ




(೧೮೪೫-೧೯೦೪)

## ಕಝುಕಸ್ಥಾನದ ಮಹಾಕವಿ
# ಅಬಾಯಿ ಕುನನ್‌ಬಾಯೇವ್

ಹಿಂದೆ ರಶಿಯನ್ ಸಾಮ್ರಾಜ್ಯದ ಭಾಗವಾಗಿದ್ದು ಇಂದು ಸ್ವತಂತ್ರ ಗಣರಾಜ್ಯವಾಗಿರುವ ಕಝುಕಸ್ಥಾನದ ಶ್ರೇಷ್ಠ ಕವಿ, ಸಂಗೀತ ರಚಯಿತ, ಅನುವಾದಕ, ತತ್ವಜ್ಞಾನಿ, ರಾಜಕೀಯ-ಸಾಮಾಜಿಕ ಕಾರ್ಯಕರ್ತ ಅಬಾಯಿ. ೧೯೯೫ರಲ್ಲಿ ಯುನೆಸ್ಕೊ ಈ ಕವಿಯ ೧೫೦ನೆಯ ಜಯಂತಿ ಉತ್ಸವವನ್ನು ಜಗತ್ತಿನಾದ್ಯಂತ ಆಚರಿಸಿತು.

ವಿಚಾರ ಮತ್ತು ಭಾವನೆಗಳ ಬೆಸುಗೆಯನ್ನು, ಮನಸ್ಸು ಮತ್ತು ಹೃದಯದ ನಡುವಿನ ಹೊಕ್ಕು-ಬಳಕೆಯನ್ನು, ವೈಯಕ್ತಿಕ ಅನುಭವ- ಚರಿತ್ರೆ, ತತ್ತ್ವಜ್ಞಾನ-ಧರ್ಮ, ನೈತಿಕತೆ-ಮನೋವಿಜ್ಞಾನಗಳ ಸಂಗಮವನ್ನು ಇವನ ಸೃಜನಶೀಲ ಕೃತಿಗಳಲ್ಲಿ ವಿಮರ್ಶಕರು ಕಂಡುಕೊಂಡಿದ್ದಾರೆ. ಜನತೆಯ ಜೀವನದಲ್ಲಿ ಬೆಳಕು ಹರಿಸಿದ ಈ ಮಹಾಕವಿ ಹಾಗೂ ಮಹಾ ಮಾನವನ, ಪ್ರವಾದಿ ಹಾಗೂ ಚಿಂತಕನ ಸಂಕಷ್ಟಮಯ ಜೀವನದ ಫಲ ಅವನ ಕೃತಿಗಳು.

ಕಝುಕ್ ಕಾವ್ಯವನ್ನು ತತ್ತ್ವಜ್ಞಾನದಿಂದ ಶ್ರೀಮಂತಗೊಳಿಸಿದ ಮೊದಲ ಕವಿ. ಹಿಂದಿನ ರಾಷ್ಟ್ರೀಯ ಭಾವನೆಗಳನ್ನು ಜಾಗ್ರತಗೊಳಿಸಿ, ನೈಜವಾದ ಜಾನಪದ ಸಂಪ್ರದಾಯಗಳನ್ನು ಪುನರುತ್ಥಾನಗೊಳಿಸಿದ್ದರಿಂದ ಕಝುಕ್ ಸಮಾಜದಲ್ಲಿ ವಿಚಾರಗಳ ಹೊಸತನವನ್ನು ತರಲು ಅವನಿಗೆ ಸಾಧ್ಯವಾಯಿತು. ೧೯ನೆ ಶತಮಾನ ಮುಗಿವ ಹೊತ್ತಿಗೇ ಅಬಾಯಿಯ ಕಲೆ ೨೦ನೇ ಶತಮಾನದ ಕಾವ್ಯದ ಭಾವಸತ್ವಾವಾದದ ಎತ್ತರವನ್ನು ಅದು ತಲುಪಿತ್ತು. ಪ್ರಾಮಾಣಿಕವಾದ ವಿಶ್ವಾಸ ಕಳೆದುಕೊಳ್ಳದ ವ್ಯಕ್ತಿತ್ವದ ಮುದ್ರೆ ಪಡೆದ ಇವನ ಕಾವ್ಯ ಅನಾಥ ಪ್ರಜ್ಞೆಯಿಂದ ದೂರವಾಗಿ ಯಾವಾಗಲೂ ಜನತೆಯ ಪರವಾಗಿದ್ದಿತು. ಅವನ ದೃಷ್ಟಿಯಲ್ಲಿ ಅವರೇ ಕಲೆಯ ಆಧಾರ, ಜಗತ್ತಿನಲ್ಲಿ ಆಧ್ಯಾತ್ಮಿಕತೆಯನ್ನು ಅವರೇ ಉಳಿಸಿಕೊಳ್ಳಬಲ್ಲರು.

ಅಬಾಯಿಯ ಕಾವ್ಯ ಇಂಪಾಗಿರುವಂತೆಯೇ ರಹಸ್ಯಾತ್ಮಕವೂ ಆಗಿದೆ. ಶಕ್ತಿಯುತವಾದ ಜೀವ ಚೈತನ್ಯದ ಧಾರೆ ಅವನ ಕವನಗಳು. ಅಲ್ಲಿ ಅಂತರಾಳದ ಸಹಜತೆ ಹಾಗೂ ಪಾಪ ವಿಮೋಚನೆಯ ಬಗೆಗೆ ತೀರದ ದಾಹದ ಅಭಿವ್ಯಕ್ತಿ ಒಡೆದುಕಾಣುತ್ತದೆ. ಹಾಗೆಯೇ ಅನಿರೀಕ್ಷಿತವಾದ ಹೃದಯ ಹಿಂಡುವ ಅಂತಸ್ಸಾಕ್ಷಿಯ ಧ್ವನಿ, ಮನುಕುಲದ ಬಡತನ ಹಾಗೂ ದುಃಖದ ಬಗೆಗಿನ ಅವನ ಅನುಕಂಪ ಓದುಗನ ಮನಸ್ಸನ್ನು ಆಘಾತಗೊಳಿಸಿಬಿಡಬಲ್ಲುದು. ಯಾವುದೇ ದೊಡ್ಡ ಕವಿಯಂತೆ ಅಬಾಯಿ ಜಗತ್ತನ್ನು ತನ್ನೊಳಗೆ ಸೆಳೆದುಕೊಂಡನು ಮತ್ತು ಅಂತರಂಗದಲ್ಲಿಯೇ ತನ್ನ ಜಗತ್ತನ್ನು ಸೃಷ್ಟಿಸಿದನು.

೧೯೪೦ರ ಪ್ರಾರಂಭದ ಹೊತ್ತಿಗೆ ಕಝುಕಸ್ಥಾನದ ಬುದ್ಧಿಜೀವಿಗಳು ಅಬಾಯಿಯ ಕಾವ್ಯದ ತಿರುಳನ್ನು ಕಂಡುಕೊಂಡು ಪ್ರಶಂಸಿಸತೊಡಗಿದರು, ಜಾಗತಿಕ ಮಟ್ಟದ ಕವಿಯಾಗಿ ಅವನ ವೈಶಿಷ್ಟ್ಯವನ್ನು ಅರಿತುಕೊಂಡರು. ಆ ಕಾವ್ಯದಲ್ಲಿ ಹೊಸ ಭವಿಷ್ಯದ ಬೀಜಗಳಿದ್ದವು. ಸಾಮ್ರಾಜ್ಯಶಾಹಿಯ ಹಿಂಸೆಯ ಪದರುಗಳಿಂದ ಅವು ಆಗಲೇ ಮೊಳಕೆಯೊಡೆಯತೊಡಗಿದ್ದವು.

(ಆಧಾರ : **Abai Book of Words**
ಅಬಾಯಿ ಕಾವ್ಯದ ಇಂಗ್ಲಿಷ್ ಅನುವಾದ **Richard Mckane**)

*ಅಬಾಯಿಯ ನಾಲ್ಕು ಕವಿತೆಗಳ ಭಾವಾನುವಾದವನ್ನು ಮುಂದೆ ಕೊಡಲಾಗಿದೆ.*

**ಚೆನ್ನವೀರ ಕಣವಿ**

---

## ನನ್ನ ಕವಿತೆ

ವಿನೋದಕ್ಕಾಗಿ ನಾನು ಕವಿತೆ ಬರೆಯುವುದಿಲ್ಲ,
ಕಥೆ-ಕಟ್ಟುಕಥೆಗಳನ್ನು ಒಟ್ಟುಗೂಡಿಸಲೂ ಅಲ್ಲ,
ಸಂವೇದನಶೀಲ ಹೃದಯದ, ದಾಕ್ಷಿಣ್ಯಪರ ನಾಲಗೆಯ
ಯುವಕರಿಗೆ ಉದಾಹರಣೆ ಕೊಡಲು ಬರೆಯುತ್ತೇನೆ.
ಈ ನುಡಿಗಳ ಕೊಡುಗೆ ಮಡ್ಡ ತಲೆಯವರಿಗಲ್ಲ
ವಿವೇಕಿಗಳಿಗೆ, ಸ್ವಚ್ಛಮನಸ್ಸಿನ ಅನ್ವೇಷಕರಿಗೆ.

ನೇರವಾಗಿ ಬನ್ನಿ, ದಾರಿ ತಪ್ಪಿಸಬೇಡಿ, ಅಡ್ಡದಾರಿಗಳನ್ನೂ
ಹುಡುಕಬೇಡಿ. ಹೊರಗೆ ನಿಂತು ತಿರುಳನ್ನು ಗುರುತಿಸಲಾರಿರಿ.
ಮೊದಮೊದಲು ನನ್ನ ಮಾತು ವಿಚಿತ್ರವೆನಿಸಬಹುದು,
ಯಾಕೆಂದರೆ ನೀವು ಬೆಳೆಯುವಾಗ ಇಂಥ ನುಡಿ ನಿಮ್ಮ ಕಿವಿಯ
ಮೇಲೆ ಬಿದ್ದಿಲ್ಲ. ಹೇಳಿದ್ದನ್ನು ಸರಿಯಾಗಿ ಗ್ರಹಿಸದಿರುವ
ಜನವನ್ನು ನೋಡಿ ನನಗೆ ಸೋಜಿಗವೆನಿಸುತ್ತದೆ.
ಕೇವಲ ಹೊಸ ಶಬ್ದಗಳಿಗಾಗಿ ಅವರು ಒತ್ತಾಯಪಡಿಸುತ್ತಾರೆ.

ಹಜರತ್ *ಅಲಿ ಮತ್ತು ಡ್ರೇಗನ್‌ದ ಪುರಾಣಕಥೆಯನ್ನು ಬಿಟ್ಟು
ನಾನು ನನ್ನ ಕತೆಯನ್ನು ಹೇಳಿದ್ದೇನೆ.
ಬಂಗಾರದ ಗದ್ದವಿದ್ದರೂ ಅದರಲ್ಲಿ ಸೌಂದರ್ಯವಿಲ್ಲ.
ಸಾವನ್ನು ಸಮೀಪಿಸುತ್ತಿರುವ ಮುಪ್ಪನ್ನು ನಾನು
ಹೀಯಾಳಿಸುವುದಿಲ್ಲ
ಕಾಕೇಸಸ್‌ನ ಕುದುರೆ ಸವಾರರನ್ನು ಅವಮಾನಗೊಳಿಸುವುದಿಲ್ಲ
ನನ್ನ ಶಬ್ದಗಳು ಸಾಕಷ್ಟು ವರ್ಣರಂಜಿತವಲ್ಲವೆಂದು
ಮುಖ ತಿರುಗಿಸಬೇಡಿ.
ಹೇಗಾದರೂ ಮಾಡಿ ನೀವೇ ಮನವರಿಕೆ ಮಾಡಿಕೊಳ್ಳಿ:
ಯಾವ ಮಾತು ಹೆಚ್ಚು ಬೆಲೆ ಬಾಳುವಂಥದೊ
ಅದು ಹೆಚ್ಚು ಆಳವೂ ಆಗಿರುತ್ತದೆ.

* ಮುಸ್ಲಿಂ ಪುರೋಹಿತ

## ಮನುಷ್ಯ...

ಮನುಷ್ಯ ಮಲ ತುಂಬಿದ ಗೋಣಿಚೀಲ
ನೀನು ಸತ್ತಾಗ ಅದಕ್ಕಿಂತಲೂ ಹೊಲಸು ನಾರುತ್ತೀ.
ನೀನು ದುರಹಂಕಾರಿ, ಯಾಕೆಂದರೆ ನನಗಿಂತಲೂ
ನೀನು ಉಚ್ಚ ಎಂದು ಭಾವಿಸಿರುವ
ನಿನ್ನ ಅಜ್ಞಾನಾಂಧಕಾರದ ಸ್ಪಷ್ಟ ಸೂಚನೆಯಿದು.

ನಿನ್ನೆ ನೀನೊಂದು ಮಗು, ಈಗ ಇಳಿವಯಸ್ಸಿನ ಮುದುಕ.
ಒಂದೇ ಸ್ಥಿತಿಯಲ್ಲಿ ನೀನಿರುವುದು ಸಾಧ್ಯವಿಲ್ಲ -
ಎಂಬುದರ ಅರಿವು ನಿನಗೀಗ ಆಗಿದೆ.
ಮಾನವ ಜೀವಿಗಳನ್ನು ಪ್ರೀತಿಸು,
ಅಲ್ಲಾಹ್‌ನ ರಹಸ್ಯವನ್ನು ಅನುಭವಿಸು
ಇದಕ್ಕಿಂತ ಮೋಹಕವಾದದ್ದು ಜೀವನದಲ್ಲಿ
ಏನಿರಬಲ್ಲದು ?




'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು, ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯ ಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞರ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿಮಾಡುವ ವ್ಯಾಪಾರಿ ಸಂಸ್ಥೆಯಲ್ಲ. ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.

## ಪುಸ್ತಕಗಳ ಪಟ್ಟಿ

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

1. ಕರ್ವಾಲೋ — 66-00
2. ಕಿರಗೂರಿನ ಗಯ್ಯಾಳಿಗಳು — 50-00
3. ಚಿದಂಬರ ರಹಸ್ಯ — 81-00
4. ಪರಿಸರದ ಕತೆ — 60-00
5. ಸಹಜ ಕೃಷಿ — 36-00
6. ಮಿಸ್ಸಿಂಗ್ ಲಿಂಕ್ — 50-00
7. ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ — 72-00
8. ಜುಗಾರಿ ಕ್ರಾಸ್ — 81-00
9. ಏರೋಪ್ಲೇನ್ ಚಿಟ್ಟೆ ಹಾಗೂ ಇತರ ಕತೆಗಳು — 43-00
10. ಫ್ಲೈಯಿಂಗ್ ಸಾಸರ್ಸ್ ಭಾಗ-1,2 — ತಲಾ 45-00
11. ಕಾಡಿನ ಕತೆಗಳು 1,2,3,4 — ತಲಾ 45-00
12. ಮಿಂಚುಳ್ಳಿ — 72-00
13. ಹೆಜ್ಜೆ ಮೂಡದ ಹಾದಿ — 57-00
14. ಹಕ್ಕಿ ಪುಕ್ಕ — 260-00
15. ರುದ್ರಪ್ರಯಾಗದ ಭಯಾನಕ ನರಭಕ್ಷಕ — 72-00
16. ಅಣ್ಣನ ನೆನಪು — 96-00
17. ಅಬಚೂರಿನ ಪೋಸ್ಟಾಫೀಸು — 50-00
18. ಹುಲಿಯೂರಿನ ಸರಹದ್ದು ಮತ್ತು ನಿಗೂಢ ಮನುಷ್ಯರು — 60-00

**ಶ್ರೀ ಪೂರ್ಣಚಂದ್ರ ತೇಜಸ್ವಿ, ಪ್ರದೀಪ ಕೆಂಜಿಗೆ**

19. ವಿಸ್ಮಯ 1, 2, 3 — ತಲಾ 45-00

**ಶ್ರೀ ಪ್ರದೀಪ ಕೆಂಜಿಗೆ**

20. ಬರ್ಮುಡಾ ಟ್ರ್ಯಾಂಗಲ್ — 43-00
21. ಅದ್ಭುತ ಯಾನ — 60-00

**ಶ್ರೀ ಕೃಪಾಕರ ಸೇನಾನಿ**

22. ಸೆರೆಯಲ್ಲಿ ಕಳೆದ 14 ದಿನಗಳು — 93-00

**ಶ್ರೀ ಚಿದಾನಂದ**

23. ಒಂದೇ ದಿನದಲ್ಲಿ ಕಂಪ್ಯೂಟರ್ ಕಲಿಯಿರಿ — 45-00

**ಶ್ರೀ ಚದುರಂಗ**

24. ಹೆಜ್ಜಾಲ — 104-00
25. ಮೃಗಯಾ — 42-00

**ಶ್ರೀ ಎಂ. ಶಿವಕುಮಾರ್**

26. ಸೈಕಲ್‌ವಾಲ — 40-00
27. ಯೋಗಿ ಮತ್ತು ಅಪ್ಸರೆ — 66-00

**ಶ್ರೀ ಶ್ರೀಕೃಷ್ಣ ಆಲನಹಳ್ಳಿ**

28. ಗೋಡೆ — 66-00

**ಶ್ರೀ ಬಿ.ಪಿ. ಬಸವರಾಜು**

29. ಭೂಕಂಪದ ಅಂತರಂಗ — 40-00

**ವಿದ್ವಾನ್ ಶ್ರೀ ಕೋಳಂಬೆ ಪುಟ್ಟಣ್ಣ ಗೌಡರು**

30. ಅಚ್ಚಗನ್ನಡ ನುಡಿಕೋಶ — 360-00

**ಶ್ರೀ ನರೇಂದ್ರ ರೈ ದೇರ್ಲ**

31. ಸಾವಯವ ಕೃಷಿ — 36-00

**ಶ್ರೀ ಪೂರ್ಣಚಂದ್ರ ತೇಜಸ್ವಿ, ಶ್ರೀ ಬೆಳವಾಡಿ**

32. ನಡೆಯುವ ಕಡ್ಡಿ ಹಾರುವ ಎಲೆ — 45-00

ಶ್ರೀ ಪೂರ್ಣಚಂದ್ರ ತೇಜಸ್ವಿಯವರ ಮಿಲನಿಯಂ ಸರಣಿಯ ಹದಿನಾರು ಪುಸ್ತಕಗಳು (ಒಟ್ಟು ರೂ. 720-00)

ಲಾರಾ ಇಂಗಲ್ಸ್ ವೈಲ್ಡರ್‌ರವರ ಒಂಬತ್ತು ಜನಪ್ರಿಯ ಕಾದಂಬರಿಗಳು (ಒಟ್ಟು ರೂ. 636-00)

ಅರಣ್ಯ ಪಾಲಕ ಶ್ರೀ ಕೆ. ಎಂ. ಚಿಣ್ಣಪ್ಪನವರ ಆತ್ಮಕತೆ 'ಕಾಡಿನೊಳಗೊಂದು ಜೀವ' 3 ಭಾಗಗಳಲ್ಲಿ ತಲಾ ರೂ. 45.

*ವಿವರಗಳಿಗೆ*

**ಪುಸ್ತಕ ಪ್ರಕಾಶನ**

91, 9ನೇ ಮೇನ್, ಸರಸ್ವತಿಪುರಂ, ಮೈಸೂರು - 570 009

ಫೋನ್ : 0821-545774 bnsrama@blr.vsnl.net.in

*ಪೋಸ್ಟ್ ಮುಖಾಂತರ ವ್ಯವಹರಿಸುವವರಿಗೆ*

**ಪುಸ್ತಕ ಪ್ರಕಾಶನ**

ಪೋಸ್ಟ್ ಬಾಕ್ಸ್ 58, ಮೂಡಿಗೆರೆ

ಚಿಕ್ಕಮಗಳೂರು ಜಿಲ್ಲೆ - 577132 ptejasvi@blr.vsnl.net.in

## ಓ ಕಝುಕ್ ಜನವೆ

ಓ ಕಝುಕ್ ಜನವೆ, ನನ್ನ ಬಡಜನತೆಯೆ
ನಿಮ್ಮ ಮೀಸೆಗಳನ್ನು ಬೇಕಾದಷ್ಟು ಬೆಳೆಯಲು ಬಿಡುತ್ತೀರಿ.
ಒಳ್ಳೆಯದು - ಕೆಟ್ಟದುದರ ಭೇದವರಿಯದ್ದರಿಂದ
ನಿಮ್ಮ ಒಂದು ಕಪಾಳದ ಮೇಲೆ ರಕ್ತ
ಇನ್ನೊಂದರ ಮೇಲೆ ಚರಬಿ ಇದೆ.

ನೀವು ದಯಾಪರರು, ಆತಿಥ್ಯಪ್ರಿಯರು ಎಂಬುದು ಸರಿ.
ಆದರೂ ನಿಮ್ಮದು ಕೂಲಿಯ ಮನೋಧರ್ಮ,
ನೀವು ಮುಖ ಬದಲಾಯಿಸುತ್ತೀರಿ.
ಉಳಿದವರ ಬಗ್ಗೆ ನಿಮಗೆ ಲಕ್ಷ್ಯವೇ ಇಲ್ಲ. ನಿಮ್ಮ
ಸ್ವಂತದ್ದರಲ್ಲಿಯೇ ನೀವು ಮುಳುಗಿಬಿಡುತ್ತೀರಿ.
ನಿಮ್ಮ ನಾಲಗೆಗೆ ಹರಟೆ ಹೊಡೆಯುವುದೇ ಒಂದು ಉದ್ಯೋಗ,
ಸ್ವಂತ ಒಳಿತಿನ ಬಗ್ಗೆ ನಿಮ್ಮ ಶಕ್ತಿಯನ್ನು ತೋರಿಸಲಾರಿರಿ,
ರಾತ್ರಿಯಲ್ಲಿ ನಿದ್ರಾಭಂಗ, ಹಗಲಿನ ನಗುವನ್ನೇ ಮರೆತು
ಬಿಟ್ಟಿದ್ದೀರಿ.

ಬಲಹೀನರನ್ನು ಹೊಟ್ಟೆಕಿಚ್ಚು ಕಚ್ಚಿ ಹಾಕುತ್ತದೆ,
ನಾಳೆ ಇಂದಿಗಿಂತ ಭಿನ್ನವಾಗಿರುತ್ತದೆ.
ಯಾರಾಗಲಿ ಹಳೆಯ ದೊಂಬಿಜನ ನಿಮ್ಮನ್ನು
ಅಂಕೆಯಲ್ಲಿಡಲು ಪ್ರಯತ್ನಿಸುತ್ತಾರೆ.
ಜನತೆಯ ಮುಖವನ್ನೇ ಅವರು ಅಂದಗೆಡಿಸಿಬಿಟ್ಟದ್ದಾರೆ.



ನಿಮ್ಮ ಸಂಕಲ್ಪ ಶಕ್ತಿ ನಿಮ್ಮಿಂದ ತೊಲಗಿಹೋಗಿದ್ದರೆ
ನಿಮ್ಮನ್ನು ನೀವು ತಿದ್ದಿಕೊಂಡಿರುವುದು ನನಗಿನ್ನೂ ಸಂಶಯವೆ.

ನಿಮಗೆ ಹತ್ತಿರವಾದವರು ತೀರ ಕ್ಷುಲ್ಲಕ ಸಂಗತಿಗೂ
ಅಸಂತೋಷಗೊಂಡಿದ್ದರೆ, ಅವರ ನ್ಯಾಯವಾದ ತೀರ್ಪನ್ನು
ದೇವರು ಒಯ್ದುಬಿಟ್ಟಿದ್ದಾನೆಂದೇ ತಿಳಿಯಬೇಕು.
ಐಕ್ಯವಿಲ್ಲ, ಒಡಂಬಡಿಕೆಯಿಲ್ಲ, ಹೃದಯದಲ್ಲಿ ಸತ್ಯವಿಲ್ಲ,
ಇದರಿಂದ ನಿಮ್ಮ ಸಮುದಾಯ ಹಿಮದಂತೆ ಕರಗಿಹೋಗುತ್ತದೆ.
ನಿಮ್ಮ ಬುದ್ಧಿ ಶಕ್ತಿ ಹಾಗೂ ಒಳ್ಳೆಯತನವನ್ನು ಅಳೆದು ನೋಡಿ
ಪ್ರತಿಸ್ಪರ್ಧೆ ನಿಮ್ಮ ಶಕ್ತಿಯನ್ನೇ ಹ್ರಾಸಗೊಳಿಸಿದೆ.
ನಿಮ್ಮ ದೋಷವನ್ನು ಹೊರಹಾಕದೆ ಒಳಗೇ ಉಳಿಸಿಕೊಂಡರೆ
ಎಲ್ಲದರಲ್ಲೂ ಸದಾ ನಿಮ್ಮ ತುಚ್ಛತನವೇ ಒಡೆದುಕಾಣುತ್ತದೆ.
ನಿಮ್ಮಲ್ಲಿ ನಾಲ್ವತ್ತು ಜನಕ್ಕಾದರೂ ಬಂಡಿಯನ್ನು ಬೆಟ್ಟದ ಮೇಲೆ
ಎಳೆದೊಯ್ಯಲು ಸಾಧ್ಯವಾಗದೆ ಹೋದರೆ
ಎಲ್ಲಿ ಸಮಾಧಾನವನ್ನು ಕಂಡುಕೊಳ್ಳುವುದು ? ಯಾವುದರಲ್ಲಿ ನಂಬಿಗೆ
ಇಡುವುದು ?
ಸಮರ್ಥ ಚೈತನ್ಯವಿಲ್ಲದೆ, ಶ್ರದ್ಧೆಯಿಲ್ಲದೆ, ಅರ್ಥಹೀನ ಚಂಚಲತೆಯಿಂದ
ನಿಮ್ಮ ಉಪಯೋಗಕ್ಕೆ ಉಳಿಯುವುದು ಖಾಲಿ ತಮಾಷೆಯಲ್ಲದೆ ಮತ್ತೇನು ?
ಒಂದು ವೇಳೆ ಯಾರಿಗಾದರೂ ಬುದ್ಧಿ ಹೇಳುವ ಪಾಳಿ ಬಂದರೆ
ಗೋಪ್ಯವಾಗಿ ಕಿವಿಮಾತು ಹೇಳುವುದರ ಹೊರತು
ಅವರಿಗೂ ಬೇರೆ ದಾರಿಯಿಲ್ಲ.

## ಮಾಗಿಕಾಲ

ಬಿಳಿಬಟ್ಟೆ, ಶಕ್ತಿಶಾಲಿ, ನರೆತ ಗಡ್ಡ -
ಯಾರ ಭಿಡೆಯಿಲ್ಲದೆ ನಡೆದು ಹೋಗುತ್ತಾನೆ ಮೂಕನಂತೆ, ಕುರುಡನಂತೆ,
ಗಂಟು ಮೋರೆ, ಅದಕ್ಕೆ ಹಿಮಧೂಳಿಯ ಹೊದಿಕೆ
ಕಿರುಗುಡುವ ಹೆಜ್ಜೆಯಿಕ್ಕುತ್ತ ಮುನ್ನಡೆದು-
ಇಷ್ಟರಲ್ಲಿಯೆ ಅವನು ಒಳಗೆ ಬರುತ್ತಾನೆ.
ಉಸಿರಾಡಿದರೆ ಹಿಮದ ಮೋಡದ ಮುಸುಕು.
ಬಹಳ ಹಿಂದೆಯೇ ಅಗಲಿಹೋದ ಬಂಧುವಿನಂತೆ
ಒಮ್ಮೆಲೆ ಆಗಮಿಸಿ ಗಾಬರಿಗೊಳಿಸಿಬಿಟ್ಟ,
ಅಲೆಮಾರಿ ಮೋಡವನ್ನು ಬಿಗಿಹಿಡಿದು
ಹ್ಯಾಟ್ ಮಾಡಿಕೊಂಡಿದ್ದ;



ಕೆಂಚನೆಯ ಮುಖದಲ್ಲಿ ಆರೋಗ್ಯದ ಕಾಂತಿಯಿತ್ತು.
ಕಪ್ಪು ಮೋಡದಂತಿದ್ದ ಹುಬ್ಬುಗಳ ಕೆಳಗೆ ಕಣ್ಣು ತೀಕ್ಷ್ಣವಾಗಿದ್ದವು,
ಅವನು ತಲೆ ಕೊಡವಿದರೆ ಹಿಮವು ದೂರ ಸಿಡಿದು ಬೀಳುತ್ತಿತ್ತು.
ರಭಸದ ಹಿಮಗಾಳಿಯಂತೆ ಕೋಪದಿಂದ ಕೂಗಿದ,
ಡೇರೆಗಳ ಆರುಗೋಡೆಗಳೂ ನಡುಗಿದವು.
ಕೆಲವು ಕಿಡಿಗೇಡಿ ಯುವಕರು ಮಾತ್ರ ಅವನೊಡನೆ
ಹುಡುಗಾಟದ ಸಾಹಸ ಮಾಡಬಹುದಾಗಿದ್ದಿತು,
ಮುಖವೆಲ್ಲ ಹಿಮದಿಂದ ಸೆಡೆತು, ಅವರೂ ಕೂಡಲೆ ಹಿಂದಿರುಗಿದರು,
ಎಲುಬಿನವರೆಗೂ ಚಳಿ ನುಗ್ಗಿತ್ತು.
ಉಣ್ಣೇ ಸಮೇತ ಕುರಿಚರ್ಮದ ಎರಡು ಕೋಟು ಹೊದ್ದ ಕುರುಬನೂ ಕೂಡ
ರಭಸದ ಹಿಮಗಾಳಿಗೆ ಕಾಲರಿನಲ್ಲಿ ಮುಖ ಮುಚ್ಚಿಕೊಂಡು ಮರಳಿದ.
ಅಂಥ ಬಿರುಗಾಳಿಯಲ್ಲಿಯೇ ಕುದುರೆಗಳ ಹಿಂಡು
ಬೆಂಗಾಡಿನಲ್ಲಿ ತಿರುಗಾಡಿದವು. ಗೊರಸುಗಳು
ಕಷ್ಟಪಟ್ಟು ಮಂಜುಗಡ್ಡೆಯನ್ನೊಡೆದು ಹೊರಬರುತ್ತಿದ್ದವು.
ಅರಚುತ್ತಿದ್ದುದು ಮಾಗಿಯ ಗಾಳಿಯೊ, ಇಲ್ಲ ತೋಳವೋ ?
ಕುರುಬರು ಕುರಿಹಿಂಡನ್ನು ಹೊಸಹುಲ್ಲುಗಾವಲಿಗೆ ಹೊಡೆದುಕೊಂಡು
ಹೋಗುತ್ತಿದ್ದರು ಕುತೂಹಲದಿಂದ ಮುಂದೆ ನೋಡುತ್ತ,
ನಿದ್ದೆಗೇಡಿನಿಂದ ನೀನೇನೂ ಸಾಯುವುದಿಲ್ಲ, ಶಕ್ತಿ ತಂದುಕೊ,
ಬರ್ಫದ ಗಟ್ಟಿ ಪದರನ್ನು ಒಡೆದು ಹಾಕು,
ಹೊಸ ಹುಲ್ಲುಗಾವಲು ನಿನಗೆ ಸಿಗುವಂತೆ ದೇವರು ದಯ ತೋರುತ್ತಾನೆ.
ಕುದುರೆಗಳನ್ನು ತೋಳಗಳ ಬಾಯಿಗೆ ಈಡು ಮಾಡುವುದಕ್ಕಿಂತ
ಬಡವರಿಗೆ ಕೊಡುವುದು ಒಳ್ಳೆಯದು.
ಅಪಾಯಕಾರಿಯಾದ ಈ ಕೇಡಿ ಮುದಿಯನನ್ನು
ಬರಿಗೈಯಿಂದ ಆಚೆಗೆ ಕಳಿಸಿರಿ.

ಅನುವಾದ : ಚೆನ್ನವೀರ ಕಣವಿ

ತಂತಿ : ಕಾಜುಕೋರ್ಪ್

ದೂರವಾಣಿ : 457724
457227
456581




# ಕರ್ನಾಟಕ ಗೇರು ಅಭಿವೃದ್ಧಿ ನಿಗಮ ನಿಯಮಿತ

(ಕರ್ನಾಟಕ ಸರ್ಕಾರದ ಒಂದು ಉದ್ಯಮ)

**ಕೃಷ್ಣಾ ಟವರ್ಸ್, ಲೇಡಿ ಹಿಲ್, ಮಂಗಳೂರು - 575 006**

## ಕರ್ನಾಟಕ ಜನತೆಗೆ ಸಂತೋಷದ ಸುದ್ದಿ

ಕರ್ನಾಟಕ ಗೇರು ಅಭಿವೃದ್ಧಿ ನಿಗಮದ ವತಿಯಿಂದ ಪ್ರತಿ ವರ್ಷ ಡಿಸೆಂಬರ್ : ಜನವರಿ ಮಾಹೆಯಲ್ಲಿ ಏರ್ಪಡಿಸುವ ಗೇರು ನೆಡುತೋಪಿನ ಫಸಲಿನ ಮಾರಾಟದಲ್ಲಿ ಭಾಗವಹಿಸಿ ನಿಮಗೆ, ರಾಜ್ಯಕ್ಕೆ ಹಾಗೂ ದೇಶಕ್ಕೆ ಅಭಿವೃದ್ಧಿ ತನ್ನಿ.

ನಿಗಮದಿಂದ ರೂ. 12ರ ಕ್ರಯದಲ್ಲಿ ಉತ್ತಮ ತಳಿಯ ಗೇರು ಕಸಿಗಿಡ ಹಾಗೂ ಅತ್ಯಾಧುನಿಕ ತಾಂತ್ರಿಕ ತರಬೇತಿ ಪಡೆದು ಹೆಚ್ಚು ಗೇರು ಗಿಡಗಳನ್ನು ಬೆಳೆದು ನಿಮ್ಮ ಉತ್ಪಾದನೆ ಮತ್ತು ಆದಾಯ ಹೆಚ್ಚಿಸಿ, ದೇಶಕ್ಕೆ ಅಭಿವೃದ್ಧಿ ಹಾಗೂ ವಿದೇಶಿ ವಿನಿಮಯವನ್ನು ಹೆಚ್ಚಿಸಿ.

### *ನಿಮಗಿದು ಗೊತ್ತೇ ?*

1. ಗೇರು ಬೆಳೆಯನ್ನು ಜಾನುವಾರುಗಳು ತಿಂದು ನಾಶ ಮಾಡುವುದಿಲ್ಲ.
2. ಗೇರು ಫಸಲು ಮಾರಾಟ ಮಾಡಲು ಕಷ್ಟವಿಲ್ಲ.
3. ಗೇರು ಬೀಜವನ್ನು ಒಂದು ವರ್ಷ ಸಂಗ್ರಹಣೆ ಮಾಡಿ, ಮಾರಾಟ ಬೆಲೆ ಜಾಸ್ತಿಯಾದ ಸಮಯದಲ್ಲಿ ಮಾರಾಟ ಮಾಡಿ ಹೆಚ್ಚು ಲಾಭ ಗಳಿಸಬಹುದು.
4. ಇದು ಕೇವಲ ಕೊಂಕಣ ತೀರದ ಬೆಳೆ ಮಾತ್ರ ಅಲ್ಲ.
5. ನೀರಾವರಿ ಹಾಗೂ ಗೊಬ್ಬರ ಬಳಸಿದಲ್ಲಿ ಉತ್ಪಾದನೆಯನ್ನು ಇಮ್ಮಡಿ ಮಾಡಬಹುದು.

*ಉತ್ತಮ ತಳಿಯ ಗೇರು ಸಸಿಗಳು ಬೇಕಿದ್ದಲ್ಲಿ ನಿಗಮದ ಮೇದಿನಡ್ಕ, ಕೆರೆವಾಸೆ, ಒಳಾಲು, ಕೊರ್ಗಿ, ಬಾದರ್ ಹಾಗೂ ಹೊನ್ನಾಲಿ ನರ್ಸರಿಗಳಿಗೆ ಭೇಟಿ ಕೊಡಿರಿ. ಹಾಗೂ ಹೆಚ್ಚಿನ ಮಾಹಿತಿಗಾಗಿ ನಿಗಮದ ಕೇಂದ್ರ ಕಛೇರಿ ಹಾಗೂ ವಿಭಾಗೀಯ ಕಛೇರಿಯ ವಿಳಾಸ ಈ ಕೆಳಗಿನಂತಿವೆ.*

1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ, ಕೃಷ್ಣಾ ಟವರ್ಸ್, ಲೇಡಿ ಹಿಲ್, ಮಂಗಳೂರು - 575 006.
2. ವಿಭಾಗೀಯ ವ್ಯವಸ್ಥಾಪಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ, ಮೂಡಬಿದ್ರೆ ವಿಭಾಗ, ಮೂಡಬಿದ್ರೆ - 574 227 ✆ 08258 - 60512
3. ವಿಭಾಗೀಯ ವ್ಯವಸ್ಥಾಪಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ, ಕುಮಟಾ ವಿಭಾಗ, ಇಂಡಸ್ಟ್ರಿಯಲ್ ಎಸ್ಟೇಟ್ ಹತ್ತಿರ, ಹೆಗಡೆ ರೋಡ್, ಕುಮಟಾ - 581 343. ✆ 08386 - 22344
4. ವಿಭಾಗೀಯ ವ್ಯವಸ್ಥಾಪಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ, ಪುತ್ತೂರು ವಿಭಾಗ, ಚಿಕ್ಕಮಡ್ನೂರು ಅಂಚೆ, ಪುತ್ತೂರು - 574 203. ✆ 08251 - 20683
5. ವಿಭಾಗೀಯ ವ್ಯವಸ್ಥಾಪಕರು, ಕರ್ನಾಟಕ ಗೇರು ಅಭಿವೃದ್ಧಿ ನಿಗಮ, ಕುಂದಾಪುರ ವಿಭಾಗ, ಹೊಸಾಡು ಅಂಚೆ, ಗುಜ್ಜಾಡಿ, ಕುಂದಾಪುರ - 576 247. ✆ 08254 - 48036

# ಹೊಸ ದೈವತ್ವ

*'ಆಡು ಹೋದ ದಾರಿಯಲ್ಲಿ ಆನೆಯೆಂದೂ ಹೋಗದು...' ಎಂಬ ಆಡುಮಾತು ತುಕ್ರ ಭಂಡಾರಿಗೆ ಇಂದು ಏಕ್‌ದಂ ಸತ್ಯವೆನಿಸಿತು. ಐಸಂ ಬ್ಯಾರ್ದಿಯೇನಾದರೂ ಈ ಆಪತ್ಕಾಲದ 'ದಾರಿ'ಯನ್ನು ಕೇರಿ ಮಂದಿ ತೋರಿದ 'ದಾರಿ'ಯಲ್ಲೇ ಕ್ರಮಿಸಿದ್ದರೆ ಗತಿಯೇನಾಗುತ್ತಿತ್ತು! ಆಕೆ ತೋರಿದ ದಾರಿ - ಮನುಷ್ಯತ್ವದ ದಾರಿ ಎಂಬುದು ತುಕ್ರ ಭಂಡಾರಿಗೆ ಮನದಟ್ಟಾಗಿ ಆಂವ ಪಶ್ಚಾತ್ತಾಪದಿಂದ ಮರಗಟ್ಟಿಯೇ ಹೋದಂತಾಗಿದ್ದ. ಇದು ಆತನೊಬ್ಬನ ಅನಿಸಿಕೆಯಲ್ಲ - ಮೈದಿನ್ ಬ್ಯಾರಿಯ ಚಪ್ಪರಕ್ಕೆ ಬೆಂಕಿ ಹಚ್ಚಿದ ಕೇರಿಯ ಎಲ್ಲರ ಹೃದಯದ ಮಾತೂ ಕೂಡ ಅದೇ ಆಗಿತ್ತು.*

**ಎಚ್. ನಾಗವೇಣಿ**

**ಮೈದಿನ್** ಬ್ಯಾರಿಯವರ ಶವಯಾತ್ರೆ ಇನ್ನೆರಡು ಗಳಿಗೆಯಲ್ಲಿ ಹೊರಡಲಿದೆಯಂತೆ. ಈ ಸುದ್ದಿ ಹರಡಿ ತಾಸೆರಡು ಕಳೆದಿದ್ದರೂ ಇನ್ನೂ ಶವಯಾತ್ರೆ ಮಾತ್ರ ಹೊರಟಿರಲಿಲ್ಲ. ಕೇರಿಮಂದಿ, ಅನ್ನನೀರು ಮೂಸದೆ ಮುಂಜಾನೆಯಿಂದಲೇ ಹೆಣದ ಮೆರವಣಿಗೆ ನೋಡಲು ಓಣಿಯ ಬಾಯಲ್ಲಿ, ಬೀದಿಯ ಅಕ್ಕಪಕ್ಕದಲ್ಲಿ, ಮರಗಿಡಗಳ ನೆರಳ ತಂಪಲ್ಲಿ ಬಂದು ಕಾದಿದ್ದಾರೆ. ಅವರೆಲ್ಲರೂ ಕಾಯುತ್ತಿರುವ ಆ ಒಂದೊಂದು ಗಳಿಗೆಯೂ ಯುಗವೊಂದರಂತೆ ಭಾಸವಾಗುತ್ತಿರುವ ಆ ಹೊತ್ತಲ್ಲಿ...

... ಇತ್ತ ವಾಸು ಮೈಲಿಯ ಗುಡಿಸಲಲ್ಲಿ ತನ್ನ ಮೈಗೇನೂ ಸುಖವಿಲ್ಲ ಎಂದು ಹೊದ್ದು ಮಲಗಿದ್ದ ತುಂಬು ಬಸುರಿ ಸುಂದರಿಗೆ ಇದ್ದಕ್ಕಿದ್ದಂತೆ ಸಣ್ಣದಾಗಿ ಹೆರಿಗೆ ನೋವು ಕಾಣಿಸಿಕೊಂಡಿತ್ತು.

ಮಗುವಿನ ತಲೆನೀರು ಒಡೆಯಿತೇನೋ...? ಸುಂದರಿಯ ಸೀರೆ ಒದ್ದೆಯಾದೊಡನೆ ಭಯದಿಂದ ಆಕೆಯ ಸಣ್ಣ ಜೀವವೊಂದು ಹಾರಿದಂತಾಯ್ತು! ಗುಡಿಸಲಲ್ಲಿ ನರಪಿಳ್ಳೆ ಇಲ್ಲದಿರುವ ಇಂತಾ ಹೊತ್ತಲ್ಲಿ... ಹೀಗೆ ಇದ್ದಕ್ಕಿದ್ದಂತೆ 'ನೆತ್ತಿ ಮೇಲೆ ಎಳೆನಾಗರ ಕಂಡಂತೆ' ಹೆರಿಗೆ ನೋವು ಕಾಣಿಸಿಕೊಂಡರೆ ಜೀವ ಹೇಗಾಗಬೇಡ!

ಚೊಚ್ಚಲ ಹೆರಿಗೆ ಬೇರೆ! ಭಯದಿಂದ ಆಕೆಯ ಜೀವ ತತ್ತರಿಸುತ್ತಿರುವ ಆ ಕ್ಷಣದಿಂದಲೇ ಆ ಎಳೆಯ ನೋವು ನಿಧಾನಕ್ಕೆ ಬಲಿಯತೊಡಗಿದೆ; ಮೇಲಿಂದ ಮೇಲೆ ಏರಿ ಬರತೊಡಗಿದೆ.

'ಅಯ್ಯಪ್ಪ... ಯಾರಿಗೂ ಬೇಡಪ್ಪ ಈ ನೋವು... ನಂಗಂತೂ ತಿನ್ಲಿಕ್ಕಾಗದಪ್ಪ' ಎಂದು ಆಕೆ ಅವುಡುಗಚ್ಚಿ ಮುಖಹಿಂಡಿ ಚೀರಾಡುತ್ತಿರುವಾಗಲೆ ಆ ನೋವು ತಟ್ಟನೆ ಮಾಯವಾಗುವ ನಾಟಕವಾಡುತ್ತಿತ್ತು.

'ಅಬ್ಬಾ... ಬದುಕಿದೆ' ಎಂದು ಆಕೆ ನೋವಿಲ್ಲದ ಆ ಅರೆಗಳಿಗೆಯಲ್ಲಿ ದೀರ್ಘವಾದ ನಿಟ್ಟುಸಿರು ತೆಗೆಯುವಷ್ಟರಲ್ಲಿ ಮತ್ತೆ ಕಾಣಿಸಿಕೊಳ್ಳುತ್ತಿತ್ತು. ಅದೇ ನೋವು. ಈ ಹೆರಿಗೆ ನೋವೆ ಹಾಗೆ. ಪ್ರೇಮಿಗಳ ಮುನಿಸಿನಂತೆ, ಹಸುಳೆಯ ಮುಂಗೋಪದಂತೆ ಯಾವಾಗ ಬರುತ್ತೋ... ಯಾವಾಗ ಅಡಗುತ್ತೋ ಹೇಳ್ಲಿಕ್ಕಾಗದು.

ಒತ್ತರಿಸಿ... ಒತ್ತರಿಸಿ ಏರಿ ಬರುವ ನೋವಿಗೆ... ಕೆಲವೊಂದು ಗಳಿಗೆ ಇದ್ದಕ್ಕಿದ್ದಂತೆ ಮರುಕವೂ ಉಕ್ಕುವುದುಂಟೇನೋ! 'ಏಯ್ ಹೆಣ್ಣೆ, ಒಂದಿಷ್ಟು ಹೊತ್ತು ನೀ ಸುಧಾರಿಸು...' ಎಂದು ಗಳಿಗೆ ಮಾತ್ರವೆ ಆಕೆಯನ್ನು ಆಕೆಯ ಪಾಡಿಗೆ ಬಿಟ್ಟು ಮತ್ತರೆಗಳಿಗೆಯಲ್ಲಿ ಎಲ್ಲಿಂದಲೋ ರಂಗಸ್ಥಳಕ್ಕೆ ನುಗ್ಗಿ ಬರುವ ಮಹಿಷಾಸುರನ ವೇಷದಂತೆ ದಿಗಿಣ ತೆಗೆದು ನುಗ್ಗಿ ಬರುವುದಿದೆ.

ಈ ಸುಂದರಿ ಹೆರಿಗೆ ನೋವಿನ ಬಗ್ಗೆ ಅಲ್ಲಿ ಇಲ್ಲಿ ಕೇಳಿ ತಿಳಿದಿದ್ದಾಳಷ್ಟೆ. ಇದೀಗ ಕಣ್ಣೀರಿಳಿಸುತ್ತಾ ನೋವುಣ್ಣುತ್ತಿರುವ ಪಾಡು ಯಾವ ವೈರಿಗೂ ಬೇಡ. ಆಕೆಯೂ ಎಷ್ಟೆಂದು ಅವುಡುಗಚ್ಚಿ ನೋವು ಸಹಿಸಿ ಕೊಂಡಾಳು? ಅದೇನು ಅವುಡಿನೊಳಗೇ ಇಟ್ಟು ಅನುಭವಿಸುವಂತಾ ನೋವೇ? ಬಾಯ್ಬಿಟ್ಟು ಚೀರಾಡತೊಡಗಿದರೂ ಆಕೆಯ ನೋವಂತು ಇನಿತೂ ಕಮ್ಮಿಯಾಗಲಿಲ್ಲ. ಬದಲಿಗೆ ಇನ್ನಷ್ಟು ಬಲಗೊಳ್ಳತೊಡಗಿತು.

ತಾಯಿ ಈ ಪರಿಯಲ್ಲಿ ಜೀವ ಹಿಂಡಿಕೊಳ್ಳುತ್ತಿದ್ದರೂ ಆ ಒಳಗಿನ ಎಳೆಜೀವಕ್ಕಂತೂ ಹೊರ ಬರುವ



ಆತುರವಿಲ್ಲವೇನೋ ? ಜಗತ್ತಿನ ಬೆಳಕು ಕಾಣುವ ಕಾತರವಿಲ್ಲವೇನೊ ? ಅಮ್ಮನ ಭವಿಷ್ಯವೇ ತಾನು - ಈಗಲೇ ಒಂದಿಷ್ಟು ಕಾಡಿಸಿ - ನೋವುಣಿಸುವ ಆಸೆಯೇನೊ - ಆ ಹಸಿಮುದ್ದೆಗೆ. ನೋವು ಕ್ಷಣದಿಂದ ಕ್ಷಣಕ್ಕೆ ತೀವ್ರಗೊಳ್ಳತೊಡಗಿತ್ತು.

ಎಲ್ಲಿಂದಲೋ... ಸೊಂಟದ ನಡುವಿನಿಂದಲೋ, ಬೆನ್ನ ಹುರಿಯಿಂದಲೋ ಅಥವಾ ಹೊಕ್ಕುಳ ಬುಡದಿಂದಲೋ ಏಳುವ ಆ ನೋವಿನಲೆ, ದೂರದ ಕಡಲ ಒಡಲಲ್ಲಿ ಮೌನವಾಗಿ ಏಳುವ ಕಡಲ ತೆರೆಗಳಂತೆ ಸದ್ದಿಲ್ಲದೆ ಎದ್ದು ಆ ತೆರೆಗಳು ಹೇಗೆ ನಿಧಾನಕ್ಕೆ ಅಲೆ ಅಲೆಯಾಗಿ ತೇಲಿಬಂದು ಬಲವಾಗಿ ಕಡಲಕರೆಗೆ ಅಪ್ಪಳಿಸುತ್ತದೋ ಹಾಗೆಯೇ, ಈ ನೋವಿನಲೆಗಳೂ ಅಮ್ಮನ ಮುಖನೋಡಲು ಕಾತರಿಸುತ್ತಿದ್ದ ಮಗುವಿನತ್ತ ರಭಸದಿಂದ ಅಪ್ಪಳಿಸುತ್ತಾ, ಜಗದ ಬೆಳಕಿನ ಹೊನಲಿಗದನ್ನು ದಬ್ಬುವ ಕ್ರಿಯೆಯಂತೂ ಸುಂದರಿಗೆ ಜೀವ ತೆಗೆವ ಪ್ರಕ್ರಿಯೆಯಾಗಿ ಪರಿಣಮಿಸಿತ್ತು.

ಸುಂದರಿಯ ಹೆರಿಗೆ ನೋವು ಕ್ಷಣದಿಂದ ಕ್ಷಣಕ್ಕೆ ಏರುತ್ತಿದೆ. ಅದರ ಜತೆಗೆ ಚೀರಾಟ ನರಳಾಟವೂ ಗುಡಿಸಲ ಚಾವಣಿಯನ್ನು ಭೇದಿಸುವಂತೆ ಕೇಳಿಸುತ್ತಿದೆ. ಅಂಗಳದಲ್ಲಿ ಮಲಗಿದ್ದ ನಾಯಿ ಗುಮ್ಮನಂತೂ ಮೂರ್‍ನಾಲ್ಕು ಬಾರಿ ಎದ್ದುಕೂತು ಒಡತಿಯ ಆ ಪರಿಯ ಚೀರಾಟಕ್ಕೆ ತಲ್ಲಣಿಸುತ್ತಾ ಗುಡಿಸಲ ಒಳಗೆ ಮೂತಿ ಹಾಕಿ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿತು.

ಏನನಿಸಿತೋ ಆ ಮೂಕ ಪ್ರಾಣಿಗೆ. ನೆಟ್ಟಗೆ ಅಂಗಳಕ್ಕೆ ಬಂದು ಬಾನತ್ತ ಮುಖಮಾಡಿ ಊಳಿಡ ತೊಡಗಿತು. ಬರುವವರೆಲ್ಲ ಬರಲಿ... ಒಡತಿಯ ಕಷ್ಟಕ್ಕೊದಗಲಿ ಎಂಬಂತಾ ಭಾವವಿರುವ ಆ ಊಳಾಟದ 'ಒಳಸುದ್ದಿ'ಯನ್ನು ಕೇಳಿಸಿಕೊಳ್ಳಲು ಯಾರಾದರೂ ಇದ್ದರೆ ತಾನೆ ? ಇರಬೇಕಾದವರೆಲ್ಲ ಮ್ಯೊದಿನ್ ಬ್ಯಾರಿಯವರ ಅಂತಿಮಯಾತ್ರೆಯನ್ನು ಕಾಣಲು ಓಣಿ ಪಾಲಾಗಿದ್ದಾರೆ.

ಸುಂದರಿಯ ತಾಯಿ ಮೈರೆ ಮೈಲ್ದಿಯೂ ಬೀದಿಯ ಪಕ್ಕದಲ್ಲಿರುವ ಹೆಬ್ಬಲಸಿನ ಮರದಡಿ ಕುಕ್ಕರಗಾಲಲ್ಲಿ ಕೂತು ಶವಪೆಟ್ಟಿಗೆಯ ನಿರೀಕ್ಷೆಯಲ್ಲಿದ್ದಳು. ಬರಿ ಮೌನವಾಗಿದ್ದು ಅದರ ನಿರೀಕ್ಷೆಯಲ್ಲಿದ್ದರೆ ಗುಮ್ಮನ ಊಳಾಟ ಕಿವಿಬೀಳಿಗೆ ತಲಪುತ್ತಿತ್ತೇನೊ ? ಆ ಕಾಯುವಿಕೆ ನಿರೀಕ್ಷೆಯ ನಡು ನಡುವೆ ಮ್ಯೊದಿನ್ ಬ್ಯಾರಿಯವರ ಅಂದಿನ ಅನಿರೀಕ್ಷಿತ ಸಾವಿನ ಸುತ್ತಲೇ ಮಾತುಕತೆ ನಡೆದು... ಮೊನ್ನೆ ಮೊನ್ನೆ ಅವರ ಕುಟುಂಬದೊಡನೆ ತಾವು ನಿಷ್ಠುರ ಕಟ್ಟಿಕೊಂಡದ್ದರ ಬಗ್ಗೆಯೂ ಮಾತು ಹೊರಳಿತ್ತು. ಮಾತಿಗೊಂದು ಮಾತು ಬೆಳೆದು, ಆ ಮಾತಿಗಿನ್ನೊಂದು ಮಾತು ಹುಟ್ಟಿಕೊಳ್ಳುತ್ತಿತ್ತು.

ಅದೆಷ್ಟೋ ವರ್ಷಗಳಿಂದ ಆ ಮುಸ್ಲಿಂ ಕುಟುಂಬದೊಂದಿಗೆ ಯಾವೊಂದು ಭೇದವಿಲ್ಲದೆ ಅಣ್ಣ-ತಮ್ಮಂದಿರಂತೆ ಸಾಮರಸ್ಯದಿಂದ ಬದುಕು ಸಾಗಿಸುತ್ತಿದ್ದ ಆ ಕೇರಿಯ ಶೂದ್ರಮಂದಿಯು ಎದೆಯೊಳಗೆ ಯಾರೋ ಕಿಡಿಗೇಡಿ ಮನಮುರುಕರು ಜಾತಿ ಮತದ ಭೂತವೊಂದನ್ನು ಹೊಗಿಸಿಬಿಟ್ಟಿದ್ದ ಮೊನ್ನೆ ಮೊನ್ನೆ ಇನ್ನಿಲ್ಲದ ರಾದ್ಧಾಂತಕ್ಕೆ ಎಡೆಮಾಡಿಕೊಟ್ಟಿತ್ತು.

ಸುಮಾರು ಐವತ್ತು ಮನೆಗಳಿರುವ ಆ ಮಾದರಕೇರಿಯಲ್ಲಿರುವುದು ನಾಕೇ ನಾಕು ಮುಸ್ಲಿಂ ಕುಟುಂಬಗಳು. ಮೂರು ಜನಿವಾರಿಗರನ್ನು ಬಿಟ್ಟರೆ ಉಳಿದುವೆಲ್ಲ ಅಬ್ರಾಹ್ಮಣರದ್ದು. ಎಲ್ಲ ಊರುಗಳಲ್ಲಿರುವಂತೆ ಇಲ್ಲೂ ಕೇರಿಮಂದಿಯ ದುಡಿಮೆ ಸುಲಿಯುವುದಕ್ಕೆ ಒಂದು ಗಣಪತಿ ದೇವಸ್ಥಾನವಿದೆ, ಎರಡು ಸಾರಾಯಿ ಅಂಗಡಿಗಳಿವೆ, ಎರಡು ಕಳ್ಳಿನ ಗಡಂಗುಗಳಿವೆ. ಸಣ್ಣಪುಟ್ಟ ಒಂದೆರಡು ಕಿರಾಣಿ ಅಂಗಡಿ, ಗೂಡಂಗಡಿಗಳಂತೂ ಇದ್ದೇ ಇದೆ. ಆದರೆ ಮೂಲಭೂತ ಸೌಕರ್ಯಗಳಿರುವ ಶಾಲೆ ಆಸ್ಪತ್ರೆಗಳಿರುವುದು ಮಾತ್ರ ಪಕ್ಕದೂರು ಬೈಲಹಳ್ಳಿಯಲ್ಲಿ.

ಮಾದರಕೇರಿಯಲ್ಲಿರುವ ಬೆರಳೆಣಿಕೆಯಷ್ಟು ಉಳ್ಳವರು ಶಾಲೆ ಆಸ್ಪತ್ರೆಗೆ ಬೈಲಹಳ್ಳಿಯನ್ನು ಅವಲಂಬಿಸಿದ್ದರೆ, ಹಲವರಿಗಂತು ಇದುವರೆಗೂ ಅದರ ಅವಸರ, ಅವಶ್ಯಕತೆಯೇ ತೋರಿಬಂದದ್ದಿಲ್ಲ. ಮ್ಯೊದಿನ್ ಬ್ಯಾರಿಯ ಕುಟುಂಬವನ್ನೊಳಗೊಂಡಂತೆ ಎಲ್ಲ ಮುಸ್ಲಿಮರು ತಮ್ಮ ಪ್ರಾರ್ಥನೆ, ವ್ಯಾಪಾರ, ಕಾಸುಕಾಣಿಯ ವಹಿವಾಟಿಗೆಲ್ಲ ನಂಬಿಕೊಂಡದ್ದು ಆ ಪಕ್ಕದೂರನ್ನೆ.

ಹೀಗಿರುವಾಗ ಮೊನ್ನೆ ಮೊನ್ನೆ ಮ್ಯೊದಿನ್ ಬ್ಯಾರಿಯವರು ತಮ್ಮ ಸ್ವಜಾತಿ ಬಾಂಧವರೊಡನೆ ಆ ಪಕ್ಕದೂರಿನ ಮಸೀದಿಗೆ ಪ್ರಾರ್ಥನೆಗೆಂದು ಹೋಗಿದ್ದಾಗ ಒಂದು ಘಟನೆ ನಡೆಯಿತಂತೆ. ಮಸೀದಿಯ ಪಕ್ಕದಲ್ಲೇ ಒಂದು ಪುಟ್ಟ ಸುಬ್ರಹ್ಮಣ್ಯ ಗುಡಿ ಎಬ್ಬಿಸುವ ಹುನ್ನಾರ ನಡೆಯುತ್ತಿತ್ತಂತೆ. ಮಸೀದಿಯೊಳಗಿನ ಬಲಿತ ತಲೆಗಳೆಲ್ಲ ಮೌನ ಸಂಯಮ ವಹಿಸಿದ್ದರೂ, ಬಲಿಯದ ಎಳೆ ತಲೆಗಳೆರಡು ಸುಮ್ಮನಿರದೆ ಮಸೀದಿಯೊಳಗಿಂದಲೇ ಅಪಸ್ವರವೊಂದನ್ನು ಎಬ್ಬಿಸಿ ಗಾಳಿಯಲ್ಲಿ ತೇಲಿಬಿಟ್ಟವಂತೆ...!

ಮುಗಿಯಿತು ! ಯಾರೋ ಆ ಕಡೆಯಿಂದ ರಣಕಹಳೆ ಊದಿದರಂತೆ. ಈ ಕಡೆಯಿಂದಲೂ ರಣಭೇರಿ ಮೊಳಗಿತು. ಸಾಕಷ್ಟೆ ಮನೆ ಮನಸ್ಸು ಸುಡುವುದಕ್ಕೆ. ಬೈಲಹಳ್ಳಿ ಹೊತ್ತಿ ಉರಿದು ಸ್ಮಶಾನವಾಯ್ತು. ಹಲವು ತಲೆಗಳು ಉರುಳಿದವು. ಹೊಸಗುಡಿಯಂತೂ ಅರಳಿಯೇ ಅರಳಿತು.

ಪಕ್ಕದೂರಿನ ದ್ವೇಷದ ಹೊಗೆ ಮಾದರಕೇರಿಗೆ ಹರಡಲು ಎಷ್ಟು ಹೊತ್ತು ಬೇಕು ? ಪ್ರೀತಿ-ದ್ವೇಷವೆಂಬುದು ಮೂಡು-ಪಡುವಿನ ಬಿಸಿಲಿದ್ದಂತೆ ಎಂದು ಹಿರಿಯರು ಹೇಳಿದ್ದು ಸುಳ್ಳೇನಲ್ಲ. ದ್ವೇಷವೆಂದರೆ ಮೂಡಣದ ಬಿಸಿಲಂತೆ - ಒಣಗಿಸುವಂತಾ ಖಾರವುಳ್ಳದ್ದು. ಪ್ರೀತಿಯೆಂದರೆ ಪಡುವಣದ ಬಿಸಿಲಂತೆ – ತಣಿಸುವಂತಾ ಗುಣವುಳ್ಳದ್ದು. ಅಂತೆಯೇ ಉಸುರುಗಟ್ಟಿಸಿ ಒಣಗಿಸುವಂತಾ ಆ ದ್ವೇಷದ ಹೊಗೆ ಪಕ್ಕದೂರಿನಿಂದ ಮಾದರಕೇರಿಗೆ ಬೀಸಿ ಬಂದು ನೇರ ಹೊಕ್ಕಿದ್ದು ಮ್ಯೊದಿನ್ ಬ್ಯಾರಿಯವರ ಮನೆಯಂಗಳವನ್ನು.

'ಪಕ್ಕದೂರಿನಲ್ಲಿ ದೇವರ ಗುಡಿ ಕಟ್ಟಲು ಬಿಡುವುದಿಲ್ಲವಂತೆ ಈ ಸಾಬ್ರು' ಎಂಬ ಹುಸಿ ಸುದ್ದಿ ಈ ಕೇರಿ ತುಂಬಾ ಸುತ್ತಿ, ಶೂದ್ರ ಮಂದಿಯ ಮೆದುಳು ಹೊಕ್ಕು ಅವರೆಲ್ಲರ ಪಿತ್ತ ಕೆದರಿಸಿತ್ತು. ದಟ್ಟ ಮಲೆಗೆ ಬಿದ್ದ ಬೆಂಕಿಯನ್ನಾದರೂ ತಣಿಸಬಹುದಂತೆ ಕೆಟ್ಟ ಮನಸ್ಸಿಗೆ ಬಿದ್ದ ಬೆಂಕಿಯನ್ನು ತಣಿಸಲಾದೀತೆ ? ಸ್ವಂತ ವಿವೇಚನೆಯಿಲ್ಲದ ಆ ಮಂದಿಯ ಪಿತ್ತ ಕೆದರುವುದೆಂದರೆ ಹುಚ್ಚನ ಕೈಗೆ ಮಸೆದ ಕತ್ತಿ ಕೊಟ್ಟು ಕಳುಹಿಸಿದಂತೆ. ಕ್ರೋಧತಪ್ತ ಮನಸ್ಸುಗಳು ಹಿಂದೊಮ್ಮೆ ತಾವು ಪರಸ್ಪರ ಸಾಮರಸ್ಯ, ಪ್ರೀತಿಯಿಂದ ಬದುಕಿದ್ದೆವು – ಎಂಬುದನ್ನು ಕ್ಷಣಮಾತ್ರದಲ್ಲಿ ಮರೆತುಬಿಟ್ಟು ದ್ವೇಷ, ಹಠ ಸಾಧಿಸುವಲ್ಲಿ ಸಫಲವಾಗಿದ್ದವು.

ಈ ಮನ ಕಡಿಯುವ ಘಟನೆ ನಡೆದ ವಾರದೊಳಗೆ ಅಂದರೆ ಇಂದು ಮುಂಜಾನೆ ಮ್ಯೊದಿನ್ ಬ್ಯಾರಿಯವರು ಇಹಲೋಕ ತ್ಯಜಿಸಿರುವ ಸುದ್ದಿ ಕೇಳಿ ಕೇರಿಮಂದಿಯೆಲ್ಲ ಜೀವ ಹಿಂಡಿಕೊಂಡು ಹನಿಗಣ್ಣಾಗಿದ್ದಾರೆ. ಅಂದು ಕೊಳ್ಳಿ-ಕೊಡಲಿ ಹಿಡಿದಿದ್ದ ಕೈಗಳೆಲ್ಲ ಇಂದು ಅತ್ತು ಕಣ್ಣೊರಸಿಕೊಳ್ಳುತ್ತಿವೆ.

ಎಂದಿನಂತಾದರೆ, ಇಂದು ಮ್ಯೊದಿನ್ ಬ್ಯಾರಿಯವರ ಸಾವಿನ ಸುದ್ದಿ ಕೇಳಿದೊಡನೆ ಊರ ಶೂದ್ರ ಮಂದಿ ಆಚೀಚೆ ನೋಡದೆ ಆ ಸಾವಿನಂಗಳಕ್ಕೆ ದೌಡಾಯಿಸುತ್ತಿದ್ದರೇನೊ ? ತಮ್ಮ ಪಾಲಿನ ಪ್ರೀತಿ-ಗೌರವ ಸಲ್ಲಿಸಲು ಸಾವಿನ ಮನೆಗೆ ಊದುಬತ್ತಿ - ಲೋಭಾನ ಕೊಂಡೊಯ್ದು ಕಣ್ಣೀರ ತರ್ಪಣ ಬಿಟ್ಟು ಬರುತ್ತಿದ್ದರೇನೊ ? ಆದರೆ ಈಗ ಅತ್ತ ಮುಖ ಹಾಕುವುದಕ್ಕೂ ಮುಖವೆಲ್ಲಿದೆ ?

ಯಾರದ್ದೋ ಮನಮುರುಕರ ಮಾತು ಕೇಳಿ - ಮುತ್ತಿನ ಬೆಲೆಯ ನಂಬಿಕೆಯನ್ನು ಉಪ್ಪಿನ ಬೆಲೆಗೆ ಮಾರಿಕೊಂಡಿರಲ್ಲಾ... ಎಂದು ಆ ಅಂದು ಮೂರ್ಖಾಸಿನ ಕೃತ್ಯ ನಡೆಸಿ ಬಂದಿದ್ದ ಮನೆ ಗಂಡಸರಿಗೆ, ಮನೆಯ ಹೆಂಗಸರೆಲ್ಲ ಇಂದು ಛೀ... ಥೂ... ಎಂದು ಉಗುಳಿ ಛೀಮಾರಿ ಬೇರೆ ಹಾಕಿದ್ದರು.

ಹೌದು, ಯಾವುದಕ್ಕಾದರೂ ಒಂದು ನ್ಯಾಯ-ಕಟ್ಟು ಬೇಡವೆ ? ತಾವು ಮಾಡಿದ್ದೆಷ್ಟು ಸರಿ – ಎಂಬ ಕಠೋರವಾದ ಪಶ್ಚಾತ್ತಾಪದಿಂದ ಬೇಯುತ್ತಾ... ಸ್ಮಶಾನ ವೈರಾಗ್ಯದಲ್ಲಿ ಕುದಿಯುತ್ತಿದ್ದ ಈ ಕೇರಿಮಂದಿ, ಇದೀಗ ಆ 'ಫಕೀರ'ನ ಶವಯಾತ್ರೆಯನ್ನಾದರೂ ಕಣ್ತುಂಬ ನೋಡಿ ಮನಸ್ಸು ಹಗುರ ಮಾಡಿಕೊಳ್ಳುವ ಎಂದು ದಾರಿಯ ಎಡಬಲಗಳಲ್ಲಿ ಕಾದು ನಿಂತಿದ್ದಾರೆ.

ಹಾಗೆಯೇ ಕಾದು ನಿಂತಿರುವ ಆ ಹೊತ್ತಿನಲ್ಲಿ ಅವರೆದೆಯೊಳಗಿನ ಭಾವಗಳು ಮಾತಾಗಿ ಹರಿದಾಡುತ್ತಿರುವಾಗ, ನಾಯಿ ಗುಮ್ಮನ ಊಳಾಟ ಆರಂಭಗೊಂಡಿತ್ತು. ಆದರೆ ಮಾತು ಕವುಚಿರುವ ಮನಗಳಿಗೆ ಹೇಗೆ ಕೇಳಿಸೀತು ?

ಆದರೆ ಗುಮ್ಮ ಸುಮ್ಮನಿರುವವನೆ ! ಅನ್ನದ ಋಣ ! ತನ್ನ ಊಳಾಟಕ್ಕೆ ಯಾವುದೇ ಪ್ರತಿಕ್ರಿಯೆ ಬರದಿದ್ದಾಗ ನೇರ ಓಣಿಯ ಬಾಯತ್ತ ದೌಡಾಯಿಸಿ

ಬೊಗಳತೊಡಗಿದ್ದ. ಮೈರೆ ಮ್ಯೊಲ್ದಿಯ ಪಕ್ಕದಲ್ಲೇ ಆ ಪರಿಯ ಬೊಗಳಾಟ ನಡೆಯುತ್ತಿದ್ದರೂ ಆಕೆಯ ಗ್ಯಾನ ಮಾತಿನ ಸಂತೆಯಲ್ಲಿ ಕಳೆದು ಹೋಗಿತ್ತೇನೊ ?

'ಥೂ... ಇವನನ್ನು ಕುದುಕ ಹೊರ್ಲ್ಲಿ...' ಎಂದು ಗುಮ್ಮನತ್ತ ಒಂದು ಕಲ್ಲೆಸೆದು ಅತ್ತಾಗೆ ಓಡಿಸಿದರೂ ಆತನ ಬೊಗಳಾಟಕ್ಕೆ ನಿಲುಗಡೆ ಉಂಟೇನು ! ಅದು ಮತ್ತಷ್ಟು ಅರ್ಥಪೂರ್ಣವಾಗಿ ಮುಂದರಿದಿತ್ತು. ನಾಯಿಯ ಆ ಪರಿಯ ಬೊಗಳಾಟದಿಂದ ಮೈರೆಯ ಪಿತ್ತ ಕಿತ್ತು ಬಂದಂತಾಗಿ 'ಎಲಾ ನಿಂಗೆ ಭೂತ ಹೊಡಿಲಿ...' ಎಂದು ಒದೆಯಲು ಎದ್ದು ನಿಲ್ಲುವಷ್ಟರಲ್ಲಿ ತನ್ನ ಗುಮ್ಮನ ಬೊಗಳಾಟದ ಪಾಡು-ವೈಖರಿ ಮಾತ್ರ ಇದೀಗ ಎಂದಿನಂತಿಲ್ಲದ್ದು ಆಕೆಯ ಗಮನ ಸೆಳೆದಿತ್ತು. ಅಂತರ್ಯದಲ್ಲೊಂದು ದಿಗಿಲು - ಭಯದ ಸುಳಿ ಎದ್ದಂತಾಗಿ ಒಂದೇ ಉಸುರಿಗೆ ಗುಡಿಸಲತ್ತ ಪರಾರಿಯಾಗಿದ್ದಳು.

ಗುಡಿಸಲೊಳಗೆ ಬಂದು ನೋಡುತ್ತಾಳೇನು...! ಮಗಳು ಸುಂದರಿ ಹಣೆ ತುಂಬ ಬೆವರು ಸುರಿಸಿಕೊಂಡು... ನರಳಾಡುತ್ತಾ ನೋವಿನಿಂದ ಚೀರಾಡುತ್ತಿದ್ದಾಳೆ. ಮೈರೆ ಮ್ಯೊಲ್ದಿಗೆ ಹಿಂಬಾಲವಾಗೇ ಬಂದ ಪಕ್ಕದ ಗುಡಿಸಲ ತುಕ್ರ ಭಂಡಾರಿಯ ಮಗಳು ಸೀತು ಬಸುರಿಯ ವೇದನೆ ದಿಟ್ಟಿಸಲಾಗದೆ, ಒಂದರೆ ಗಳಿಗೆಯೂ ಹಿಂದೆ ಮುಂದೆ ಯೋಚಿಸದೆ ಮ್ಯೊದಿನ್ ಬ್ಯಾರಿಯ ಹೆಂಡತಿ ಐಸಂ ಬ್ಯಾರಿಯವರನ್ನು ಕರೆತರಲು ಮುಂದಾದಳು.

ನಾಕ್ಹೆಜ್ಜೆ ಮುಂದಿಟ್ಟಿದ್ದಾಳಷ್ಟೆ! ತಟ್ಟನೆ ನೆನಪಾದದ್ದು ಮ್ಯೊದಿನ್ ಬ್ಯಾರಿಯವರ ಸಾವು! ಮೊನ್ನೆ ಮೊನ್ನೆ ತಮ್ಮವರು ನಡೆಸಿದ ರಂಪಾಟ, ಮನೆ - ಮನ ಮುರಿವ ಕಾದಾಟ ! ಅರೆ! ತನ್ನ ನೆನಪಿಗೆ ತಾನೇ ಮುನಿದುಕೊಂಡಳು. ಅಲ್ಲಿಗೆ ಹೋಗಲು ತನಗೆಲ್ಲಿದೆ ಮುಖ ? ಉರಿವ ಕೊಳ್ಳಿಯಿಂದ ತಲೆಕೂದಲ ಸಿಕ್ಕು ಬಿಡಿಸಿಕೊಂಡಂತಾಯ್ತಲ್ಲ! ತಾವು ಕೈಯಾರೆ ಮಾಡಿಕೊಂಡ ತಪ್ಪಿಗೆ ಮರುಗಿದಳು ಸೀತು.

ಆ ಬ್ಯಾರಿಗಳ ಸಹಾಯವೆಂದರೆ – ಹಾವಿನ ಹೆಡೆಗಳಿಂದ ಕೆನ್ನೆಯ ತುರಿಸಿದಂತೆ. ಅದರಿಂದ ಅಪಾಯ ಅನಾಹುತವೇ ಹೆಚ್ಚು ಎಂದು ಯಾರ್‍ಯಾರ್‍ದೋ ಹೇಳಿಕೆ ಮಾತು ಕೇಳಿ, ಈ ನಮ್ಮ ಗಂಡಸರು ಆಪತ್ಕಾಲದಲ್ಲಿ ಒದಗಿಬರುವ - ಜೀವಕ್ಕೆ ಜೀವ ಕೊಡುವ ಕುಟುಂಬದವರನ್ನು ಮಾತ್ರ ಎದುರು ಹಾಕಿಕೊಳ್ಳಬಾರದಿತ್ತು ಎಂದು ಸೀತುವಿಗೆ ಬಹಳಷ್ಟು ಅನಿಸಿಬಿಟ್ಟು, ಅದನ್ನು ಮೈರೆ ಮ್ಯೊಲ್ದಿಯಲ್ಲಿ ಹೇಳಿಕೊಂಡಳು ಕೂಡಾ.

ಆ ಕೇರಿಯಲ್ಲಿರುವ ಪ್ರಸೂತಿ ಪ್ರವೀಣೆ ಪದೆತಿ (ಸೂಲಗಿತ್ತಿ) ಎಂದರೆ ಐಸಂ ಬ್ಯಾರ್ದಿ ಒಬ್ಬರೇ. ಈಗಲೂ ಆ ಮುದಿ ಕೈಗಳಿಗೆ ವಿರಾಮವೆಂಬುದಿಲ್ಲ. ಹೊರಜಗತ್ತಿಗೆ ಬರಲು ದಾರಿ ತೋಚದ, ಬೆಳಕಿನ ಹಾದಿ ಕಾಣದ ಎಳೆಜೀವಗಳನ್ನು ಮೃದುವಾಗಿ ಮೆತ್ತಗೆ ಹೊರತಂದು, ಎಂತಾ ಜೀವ ಹಿಂಡುವ ಹೆರಿಗೆಯನ್ನೂ ಸುಸೂತ್ರವಾಗಿ ಮಾಡಿ ಮುಗಿಸುವ ಆಕೆ ಇದುವರೆಗೆ

## ಆತ್ಮ ಶೋಧ

ಹುಡುಕಿದೆ ಹಗಲೆಲ್ಲಾ
ಎಲ್ಲೂ ಸಿಗಲಿಲ್ಲ
ಹಳಬರು ಹೇಳಿದ ಆತ್ಮವು ನನಗೆ
ಎಲ್ಲೂ ಸಿಗಲಿಲ್ಲ.

ಗುಡಿಯಲಿ ಬರಿಕಲ್ಲು
ವೇದ ಪುರಾಣದ ಪೀಠದ ಮೇಲೆ
ಬೆಳೆದಿದೆ ಒಣ ಹುಲ್ಲು.

ಹುಡುಕಿದೆ ಮಗುವಿನ ಕಣ್ಣಿನಲಿ
ಮಸಣದ ಮಣ್ಣಿನಲಿ
ಸಿಗಲಿಲ್ಲ.



ಪರಿಕಿಸಿದೆನು ಚೆಲುವಿನ ಕೆನ್ನೆ
ಒಳಗಡೆ ಬರಿ ಸೊನ್ನೆ.
ಹಾರಿದೆ ಕಣ್ಣೀರಿನ ತಳಕೆ
ಕೇಸುರಿಗಳ ಜೋಲೆಯ ಝಳಕೆ
ಅಲ್ಲಿ
ಹಣವೂ ಸಿಗಲಿಲ್ಲ
ಆತ್ಮದ
ಕಣವೂ ಸಿಗಲಿಲ್ಲ.
ಮತ್ತೆಲ್ಲೂ ಹುಡುಕೇ ಹುಡುಕಿದೆ
ಆತ್ಮವು ಸಿಗಲಿಲ್ಲ.
..........
ಸಿಕ್ಕಿತು ! ಸಿಕ್ಕಿತು ! ಆತ್ಮವು ನಕ್ಕಿತು
ಕಿಟ್ಟೆಲ ಕೋಶದ ನೂರಾ ಐವತ್
ಮೂರನೆ ಪುಟದಲ್ಲಿ !

- ವಿ. ಜಿ. ಭಟ್

ಉಳಿಸಿದ ಜೀವ ಒಂದೇ ಎರಡೇ ? ಲೆಕ್ಕವಿಲ್ಲದಷ್ಟು. ಇದೇ ಮೈರೆ ಮ್ಯೊಲ್ದಿ ತನ್ನ ಚೊಚ್ಚಲ ಹೆರಿಗೆಯಲ್ಲಿ ಇನ್ನೇನು ವೆಂಕಟರಮಣನ ಪಾದ ಸೇರಬೇಕೆನ್ನುವಷ್ಟರಲ್ಲಿ ಆಕೆಯನ್ನು ಬದುಕಿಸಿ ಪುಟ್ಟ ಸುಂದರಿಯನ್ನು 'ಧರೆ'ಗಿಳಿಸಿದವರು ಯಾರು ! ಇದೇ ಐಸಂ ಬ್ಯಾರ್ದಿಯವರು.

ಐಸಂ ಬ್ಯಾರ್ದಿಯವರು ನಂಬಿಕೊಂಡು ಬಂದಿರುವ ಧರ್ಮ ಕರ್ಮದ ಕಟ್ಟುಪಾಡು ಏನಾದರೂ ಇರಲಿ, ಜೀವ ಉಳಿಸುವ ಪುಣ್ಯದ ಕೆಲಸಕ್ಕೆ, ಮನುಷ್ಯತ್ವದ ವಿಚಾರಕ್ಕೆ ಮಾತ್ರ ಎಂದೆಂದೂ ಆ ಕಟ್ಟುಪಾಡುಗಳು ಅಡ್ಡಬರದಂತೆ ನೋಡಿಕೊಂಡವರಾಕೆ. ಮ್ಯೊದಿನ್ ಬ್ಯಾರಿಯವರು ಈ ವಿಚಾರದಲ್ಲಂತೂ ಮಡದಿಯ ಪರ ವಹಿಸಿದವರು. ಬೆಳೆದು ನಿಂತ ಮಕ್ಕಳಿಂದ ಆಗಾಗ್ಗೆ ಅಪಸ್ವರ ಬರುತ್ತಿದ್ದರೂ ಅದನ್ನೆಲ್ಲ ಮ್ಯೊದಿನ್ ಬ್ಯಾರಿಯವರು ಮನುಷ್ಯತ್ವದ ಹೆಸರಿನಿಂದ ತಳ್ಳಿಹಾಕಿದವರು. ಎಂತ ಅಪರಾತ್ರಿಯಲ್ಲಾದರೂ ಧಾವಿಸಿ ಬಂದು, ಆಪತ್ಕಾಲಕ್ಕೆ ಒದಗಿಬರುವ ಈ ಐಸಂ ಬ್ಯಾರ್ದಿಯವರು ಕೇರಿ ಮಂದಿಯ ಜೀವದ ಜೀವ ಕೂಡ ಆಗಿದ್ದವರು. ಆದರೇನು ಧರ್ಮಸೂಕ್ಷ್ಮದ ಎಳೆಯೊಂದು ಅಡ್ಡ ಬಂದಾಗ, ಮನಸ್ಸು ಮೃಗೀಯವಾಗಿ ವಿಕಾರಗೊಂಡು ಕೃತಜ್ಞತೆ - ಮನುಷ್ಯತ್ವವೆಂಬುದು ಅಡ್ಡದಾರಿಗೆ ತೆವಳುತ್ತದೆ ಎಂಬುದು ಆ ಕೇರಿಮಂದಿಗೆ ಹೊಳೆದದ್ದೇ ತೀರಾ ತಡವಾಗಿ. ಅದಕ್ಕಾಗಿ ವಿಷಾದಿಸಿದ್ದು ಕೂಡಾ ಮ್ಯೊದಿನ್ ಸ್ಯಾಬರ ಸಾವಿನ ಸುದ್ದಿ ಕೇಳಿದ ನಂತರವೇ.

ಇದೀಗ ಮೈರೆ ಮ್ಯೊಲ್ದಿಗೆ ಮಗಳ ನರಳಾಟ ಚೀರಾಟ ಕಂಡು ಯಾವೊಂದು ದಿಕ್ಕುದೆಸೆ ತೋಚದಂತಾಯ್ತು! ಕೈ ಬಾಯಿ ಸೋತು ಬಿದ್ದಂತಾಗಿ ಅಳುತ್ತಾ ಕುಸಿದು ಕುಳಿತಳು. ನಿಶ್ಶಕ್ತ ಸ್ಥಿತಿಯಲ್ಲಿ ಕುಸಿದು ಕೂತ ಮೈರೆಯ ಅಸಹಾಯಕತೆ-ನೋವು-ಅಳುವನ್ನು ಮತ್ತೆ ಸೀತುವಿನಿಂದ ದಿಟ್ಟಿಸಲಾಗದೆ 'ಕೆಲಸ ಕೆಟ್ಟಿತು' ಎಂದೆನ್ನುತ್ತಾ ಓಣಿ ಬಾಗಿಲಿಗೆ ಓಡಿ ಹೆರಿಗೆ ಮನೆಯ ಅಪಾಯದ 'ಕಹಳೆ'ಯನ್ನು ಊದಿದ್ದಳು. ಶವಪೆಟ್ಟಿಗೆಯ ನಿರೀಕ್ಷೆಯಲ್ಲಿದ್ದವರಿಗೆಲ್ಲ ಹೆರಿಗೆಯ ಸಂಕಟದ ಸಂಗತಿ ಕೇಳಿ, ಗಂಡು ಹೆಣ್ಣೆಂಬ ಭೇದವಿಲ್ಲದೆ ಮೈರೆ ಮ್ಯೊಲ್ದಿಯ ಅಂಗಳ ಪಾಲಾದರು. ಆತಂಕಗೊಂಡ ಹೆಂಗಸರೆಲ್ಲ ತಮ್ಮ ತಮ್ಮ ಮನೆದೈವಗಳನ್ನು ಅನನ್ಯ ಭಕ್ತಿಯಿಂದ ಮನಸಾರೆ ಪ್ರಾರ್ಥಿಸಿ 'ಈ ಹೆರಿಗೆ ಹೂವೆತ್ತಿದಂತೆ ಸುಲಭವಾಗಲಿ... ಸೇವಂತಿಗೆಯ ದಂಡೆ ಕಳಚಿದಂತೆ ಮಗು ಬಳ್ಳಿ ಕಳಚಿ ಬರಲಿ' ಎಂದು ದೈವಗಳಿಗೆ ಹೂವಿನ ಹರಕೆ ಹೊತ್ತರು. ಎಷ್ಟೆಂದರೂ ಹೆರಿಗೆ ನೋವನ್ನು ತಿಂದು ಆ ನೋವಿನರಿವುಳ್ಳ ಜೀವಗಳಲ್ಲವೇ ಅವು. ಸುಂದರಿಯ ಸುಸೂತ್ರ ಹೆರಿಗೆಗೆ ಎಲ್ಲ ಹೆಣ್ಣು ಮನಸ್ಸುಗಳೂ ಬಸುರಿಯ ಸುತ್ತ ಕೂತೇ ಪ್ರಾರ್ಥನೆ ಸಲ್ಲಿಸಿದವು..

ಯಾರೋ ಒಬ್ಬಾಕೆ ತನ್ನ ಗುಡಿಸಲ ಬಾಗಿಲು ತೊಕ್ಕು, ಬಸುರಿಯ ನೋವು ಒಂದಷ್ಟು [illegible]

ಸಂಬಾರ-ಜೀರಿಗೆಯ ಕಷಾಯ ಮಾಡಿ ತಂದಳು. ಗಾಬರಿ, ಚಡಪಡಿಕೆಯಲ್ಲಿದ್ದ ಸೀತುವೂ ತನ್ನ ಗುಡಿಸಲಿಂದ ಹದಾ ಬಿಸಿ ಮಾಡಿದ ಹರಳೆಣ್ಣೆ ತಂದು ಬಸುರಿಯ ಹೊಕ್ಕಳು ಕಿಬ್ಬೊಟ್ಟೆಗೆ ತಿಕ್ಕುತ್ತಾ ಹೆರಿಗೆ ಕಾಲದ ಸಾಂತ್ವನವನ್ನು ಹೇಳತೊಡಗಿದಳು.

ಯಾರ್‍ಯಾರು ಏನೇನು ಮಸಲತ್ತು ನಡೆಸಿದರೂ... ಊಹೂಂ ಹೆರಿಗೆಯಾಗುತ್ತಿಲ್ಲ. ಆ ಸಂಕಷ್ಟ ಕಾಲದಲ್ಲಿ ಎಲ್ಲರ ಕಣ್ಣೆದುರು ಬರುತ್ತಿದ್ದ 'ದೈವ'ವೆಂದರೆ ಐಸಂ ಬ್ಯಾರ್ದಿ ಒಬ್ಬರೇ. ಕೇರಿ ಗಂಡಸರೂ, ತಮ್ಮ ತಮ್ಮ ಹೆಂಡತಿ-ಮಕ್ಕಳ ಹೆರಿಗೆ ಕಾಲವನ್ನು ಗ್ಯಾನಕ್ಕೆ ತಂದುಕೊಂಡು ಐಸಂ ಬ್ಯಾರ್ದಿಯವರನ್ನು ಜಪಿಸಿ ಕೊಂಡರು. ಯಾರು ಯಾರ ಜಪ ಮಾಡಿದರೇನು ? ಗಳಿಗೆಯೇನು ನಿಲ್ಲುತ್ತದೆಯೆ ? ಅದು ನಿರಂತರವಾಗಿ ಜಾರುತ್ತಿತ್ತು. ಬಸುರಿಯ ಬೇನೆ ಏರುತ್ತಿತ್ತು.

ಬಸುರಿಯ ಚೀರಾಟ ಏರುತ್ತಿದ್ದಂತೆ, ತಾಯಿ ಮೈರೆ ಮ್ಯೊಲ್ದಿಯ ಗೋಳಾಟವೂ ಹೆಚ್ಚತೊಡಗಿತು. ತನಗೆ ಏಕೈಕ ದಿಕ್ಕಾಗಿರುವ ಮಗಳೆಲ್ಲಿ ತನ್ನ ಕೈಬಿಟ್ಟು ಹೋಗುತ್ತಾಳೋ ಎಂಬ ಭಯದಲ್ಲಿ ಆ ಮುದಿ ಜೀವ ನೆರೆದವರೆಲ್ಲರ ಜೀವ ಕಲಕುವಂತೆ ಅಳುವುದನ್ನು ಯಾರಿಂದಾದರೂ ದಿಟ್ಟಿಸಲಾದೀತೆ ?

ಕಳೆದ ಸೋಣದ ಸಂಕ್ರಾಂತಿಯಂದು ಮೈರಿಯ ಗಂಡ ವಾಸೂ ಮ್ಯೊಲಿ ಮತ್ತು ಅಳಿಯ ಚನಿಯ ಮ್ಯೊಲಿ ಇಬ್ಬರೂ ದೋಣಿ ಮಗುಚಿ ಅಳಿವೆ ಪಾಲಾದ ನಂತರ ಆಕೆಗೆ ದಿಕ್ಕಾಗಿ ಉಳಿದವಳೆಂದರೆ ವಿಧವೆ ಮಗಳು ಸುಂದರಿ ಮಾತ್ರ. ಗದ್ದೆ ಕೆಲಸದ ಜತೆ ಬೀಡಿ ಸುರುಟುತ್ತಾ ಈ ಸುಂದರಿ ತಾಯಿಯ ಬದುಕಿಗೆ ಒದಗಿ ಬಂದಿದ್ದಳು.

ಆಸರೆ-ಪ್ರೀತಿ ಎರಡನ್ನೂ ಕಳೆದುಕೊಳ್ಳುವೆನೆಂಬ ದಿಗಿಲು ಆತಂಕ ಗೊಂದಲಗಳಿಂದ ಮೈರೆ ಮ್ಯೊಲಿ ಇದೀಗ ಬಾಯ್ಬೊಟ್ಟು ಅಳುತ್ತಿರುವುದನ್ನು ಯಾರಿಂದ ದಿಟ್ಟಿಸಲಾದೀತು ? ಸೀತುವಿನ ಅಪ್ಪ ತುಕ್ರ ಭಂಡಾರಿಗಂತೂ ಆ ದೃಶ್ಯವನ್ನು ಕೈಕಟ್ಟಿ ನಿಂತು 'ಸವಿಯ'ಲಾಗಲಿಲ್ಲ. ಆದದ್ದಾಗಲಿ... ಐಸಂ ಬ್ಯಾರ್ದಿಯನ್ನು ಕೇಳಿನೋಡುವ... ಈಗಲೇ ಹೊರಟೆ ಎಂದು ಗಟ್ಟಿಮನಸ್ಸು ಮಾಡಿ ಮ್ಯೊದಿನ್ ಬ್ಯಾರಿಯ ಅಂಗಳಕ್ಕೆ ಹೊರಟೇಬಿಟ್ಟ. ನೀನು ಆ ಗುಡ್ಡಕ್ಕೆ ಉರಿ ಹಚ್ಚಿದರೂ... ಅದು ಹುಲ್ಲು ಮೊಳೆಯಿಸುವುದನ್ನು ನಿಲ್ಲಿಸುವುದಿದೆಯೇ...? ಐಸಂ ಬ್ಯಾರ್ದಿಯೂ ಆ ಗುಡ್ಡದಂತೇ ತುಂಬು ಮನಸ್ಸಿನವರು - ಎಂದನ್ನುತ್ತಾ ಅಂಗಳ ಬಿಟ್ಟ ತುಕ್ರ ಭಂಡಾರಿ ಬೀದಿಗೆ ಬರುವಷ್ಟರಲ್ಲಿ ಮ್ಯೊದಿನ್ ಬ್ಯಾರಿಯವರ ಶವಯಾತ್ರೆ ಆ ಬೀದಿಯನ್ನು ದಾಟಿ ಹೋಗಿಯಾಗಿತ್ತು.

ತುಕ್ರ ಭಂಡಾರಿ ಮೆರವಣಿಗೆಯ 'ಬಾಲದ ತುದಿ'ಯನ್ನಷ್ಟೇ ಗಮನಿಸಿ, ಅದೇ ಮ್ಯೊದಿನ್ ಬ್ಯಾರಿಯವರ 'ಜೀವ'ವೆಂದು ಭಕ್ತಿಯಿಂದ ಕಣ್ಮುಚ್ಚಿ ತಲೆಬಾಗಿಸಿದ. ಕಣ್ಣು ಹನಿಸುತ್ತಲೇ ಮ್ಯೊದಿನ್ ಬ್ಯಾರಿಯವರ ಅಂಗಳ ಹೊಗುವಷ್ಟರಲ್ಲಿ ಆತನ ಜೀವ ಬಾಯಿಗೆ ಬಂದಷ್ಟು ಭಯವಾಯಿತು. ''ಇಲಿಯೊಂದು ಹುಲಿಯ ಗವಿಗೆ ನುಗ್ಗಿ ಹುಲಿಯಲ್ಲಿ 'ಏನು ನಾರಾಯಣ' ಎಂದು ಕೇಳಿದಂತಾಯ್ತಲ್ಲ'' ಎಂದು ತನ್ನ ಹುಚ್ಚು ಧೈರ್ಯಕ್ಕೆ ತಾನೇ ಮತ್ತಷ್ಟು ಸಮರ್ಥನೆ ನೀಡಿಕೊಂಡು ಅಂಗಳವೇರಿದ.

ಸಾವಿನ ಮನೆಯಿಡೀ ದುಃಖವೇ ಅಡರಿದೆ. ಮೌನದ ಗವಿಗೆ ಹೊಕ್ಕಂತಾಗಿ ತುಕ್ರ ಭಂಡಾರಿ ತುಸು ಅಂಜಿದ. ಇದೀಗ ಅಂಗಳವೇರುತ್ತಿದ್ದಂತೆ ಆತನ ಎದೆಯೊಳಗೆ ಅದೇನೋ ಭಾವ ಕವಿದಂತಾಗಿ, ಅದು ಭಾರವಾಗತೊಡಗಿತು. ತನ್ನ ಭೂತಕಾಲದ ಅನೇಕಾನೇಕ 'ಅಣಪತ್ಯ'ಗಳಿಗೆ ಈ ಅಂಗಳದ ಅಧಿಪತಿ ಮ್ಯೊದಿನ್ ಬ್ಯಾರಿಯವರು ಹತ್ತಿರದ ಆಪ್ತನಂತೆ ಒದಗಿ ಬಂದ ಹತ್ತು ಹಲವು ಘಟನೆಗಳು ಒಂದರ ಬಾಲ ಹಿಡಿದು ಇನ್ನೊಂದರಂತೆ ಏರಿ ಬಂದೊಡನೆ ಅಂವ ಎದೆ ಕರಗಿಸಿಕೊಂಡು ಅತ್ತೇಬಿಟ್ಟ.

ಆದರೆ ಆ ಅಳುವನ್ನು ಕೇಳುವವರ್‍ಯಾರು, ನೋಡುವವರ್‍ಯಾರು ? ಸಾವಿನ ಮನೆಯಲ್ಲಿ ಎಲ್ಲ ಮನಸ್ಸುಗಳೂ ಶೋಕಿಸುತ್ತಿವೆ. ಕೆಲವು ಜೀವಗಳು ಜೀವ ಹಿಂಡಿಕೊಳ್ಳುತ್ತಾ ಮನೆಯ ಮೂಲೆ ಹಿಡಿದಿವೆ. ಮತ್ತೆ ಕೆಲವರು ಕಣ್ಣು ಮೂಗು ಒರಸಿಕೊಳ್ಳುತ್ತಲೆ ಶವ ದಫನ ಮಾಡಿ ಬರುವ ಗಂಡಸರಿಗೆ ಊಟದ ಏರ್ಪಾಡಲ್ಲಿ ಮುಳುಗಿಹೋಗಿದ್ದಾರೆ. ಇನ್ನು ಮ್ಯೊದಿನ್ ಬ್ಯಾರಿಯವರ

ತಂಗಿ-ಸೊಸೆಯರೆಲ್ಲ ಸೇರಿ ಅತ್ತಿಗೆ ಐಸಂ ಬ್ಯಾರ್ದಿಯವರನ್ನು ಮೀಯಿಸಿ ಕರೆತಂದು, ಮಕ್ಕನೆ (ಬಿಳಿ ಘೋಷ) ತೊಡಿಸಿ ಒಳಕೋಣೆಯಲ್ಲಿ ಕೂರಿಸಿದ್ದಾರೆ. ಜೀವದ ಸಂಗಾತಿಯನ್ನು ಕಳೆದುಕೊಂಡು ಅನಾಥರಾಗಿರುವ ಐಸಂ ಬ್ಯಾರ್ದಿಯವರು ಕಣ್ಣೀರಕೋಡಿ ಹರಿಸುತ್ತಿರುವುದನ್ನು ಯಾರಿಂದ ನೋಡಲಾದೀತು ? ಅವರ ಹೆಣ್ಣುಮಕ್ಕಳು ತಮ್ಮ ಜೀವದಂತಿದ್ದ ಅಪ್ಪನನ್ನು ಕಳೆದುಕೊಂಡು ತಾವೂ ದುಃಖತಪ್ತರಾಗಿದ್ದರೂ ಗೋಳಾಡುತ್ತಿರುವ ತಾಯಿಯನ್ನು ಪರಿಪರಿಯಾಗಿ ಸಂತೈಸತೊಡಗಿದ್ದಾರೆ.

ಐಸಂ ಬ್ಯಾರ್ದಿಯವರು ಮತ್ತೊಮ್ಮೆ ಆ ದೃಶ್ಯವನ್ನು ನೆನಪಿಸಿಕೊಂಡರು. ಎದೆ ಉಕ್ಕಿ ಬಂದಂತಾಯ್ತು ! ಮತ್ತೆ ಅಳು ! ಇಂದು ಮ್ಯೊದಿನ್ ಬ್ಯಾರಿಯವರ ಶವವನ್ನು ಕಫನ್‌ನಿಂದ ಸುತ್ತಿ 'ಜನಾಜಾ' (ಶವಪೆಟ್ಟಿಗೆ)ದಲ್ಲಿಡುವ ಮುನ್ನ ಐಸಂ ಬ್ಯಾರ್ದಿಯವರು ಕೊನೆಯ ಬಾರಿ ಎಂಬಂತೆ ಆ ಮುಖವನ್ನೊಮ್ಮೆ ದಿಟ್ಟಿಸಿದ್ದರು. ಅರವತ್ತು ವರುಷದ ದಾಂಪತ್ಯ ಬದುಕು ತಟ್ಟನೆ ಆಕೆಯ ಎದುರಿಗೆ ಬಂದು ನೆನಪಿನ ಸುರುಳಿ ಬಿಚ್ಚುತ್ತಾ ಹೋಗಿ, ಮನಸ್ಸನ್ನು ಕಲಕಿಬಿಟ್ಟು ಬದುಕಿನ ಬಗ್ಗೆಯೇ ಕಡು ವೈರಾಗ್ಯವನ್ನು ಕವುಚಿಕೊಂಡುಬಿಟ್ಟಿದ್ದರು.

ಇದೀಗ ತುಕ್ರ ಭಂಡಾರಿ ಅಂಗಳ ಹೊಕ್ಕು ಮ್ಯೊದಿನ್ ಬ್ಯಾರಿಯವರ ನೆನಪಿಗಾಗಿ ಕಣ್ಣೀರು ಹನಿಸಿಕೊಳ್ಳುತ್ತಿರುವಾಗ ಒಳಗಡೆ ಹೆಂಗಸರು ಐಸಂ ಬ್ಯಾರ್ದಿಯನ್ನು ಇದ್ದತ್ ಆಚರಣೆಗಾಗಿ ಸಿದ್ಧಗೊಳಿಸುತ್ತಿದ್ದರು. ಇದ್ದತ್ ವಿಧಿಯಂತೆ ನಾಕು ತಿಂಗಳು, ಹತ್ತು ದಿನಗಳ ಕಾಲ ವಿಧವೆ ಪತ್ನಿ ಕತ್ತಲ ಕೋಣೆಯೊಳಗೇ ಇದ್ದು ನಮಾಜು ಮಾಡುತ್ತಾ, ಕುರಾನ್ ಪಠಿಸುತ್ತಾ ಸತ್ತಾತನ ಆತ್ಮಕ್ಕೆ ಸದ್ಗತಿಯನ್ನು ಪ್ರಾರ್ಥಿಸುತ್ತಾ ದಿನಗಳೆಯಬೇಕು. ಆ ಕಾಲದಲ್ಲಿ ಹತ್ತಿರದ ಬಳ್ಳಿಯವರು ಬಂದು ದುಃಖ ಕಳೆಯಬಹುದಷ್ಟೆ.

ತನ್ನ ಜೀವದ ಜೀವ ಮ್ಯೊದಿನ್ ಬ್ಯಾರಿಯವರು ಆ ಫಿರ್‌ದೌಸ್‌ನಲ್ಲಿ ನೆಮ್ಮದಿಯಲ್ಲಿ ಇರುವುದಾದರೆ ನಾಕು ತಿಂಗಳ್ಯಾಕೆ ನಾಕು ವರುಸ ಬೇಕಾದರೂ ಇದ್ದತ್ ಆಚರಿಸುವವರು - ಈ ಐಸಂ ಬ್ಯಾರ್ದಿಯವರು.

ಇದೀಗ ಇದ್ದತ್ ವಿಧಿಯಲ್ಲಿದ್ದ ಐಸಂ ಬ್ಯಾರ್ದಿಯವರ ಮನಸ್ಸಿನ ದುಃಖಕ್ಕೆ, ಮತ್ತಷ್ಟು ದುಃಖ ಬಂದು ಸೇರಿಕೊಂಡಿದ್ದು ತುಕ್ರ ಭಂಡಾರಿ ಹೊತ್ತು ತಂದ ಹೆರಿಗೆ ಸುದ್ದಿಯಿಂದ.

ತಾನೀಗ ಇದ್ದತ್ ವಿಧಿಯಲ್ಲಿರುವಾಗಲೇ ಇಂತಾ ಸುದ್ದಿ ಬರಬೇಕೆ ? ಎಂದು ಹಲುಬುತ್ತಾ ಇನ್ನಷ್ಟು ಗೋಳಾಡಿದರಾಕೆ. ತಾನು ಇಲ್ಲಿ ಗೋಳಾಡಿದರೆ ಅಲ್ಲಿ ಸಾಯುತ್ತಿರುವ ತಾಯಿ ಮಗುವನ್ನು ಬದುಕಿಸಲಾದೀತೆ ? ಎಂಬ ಸತ್ಯವೂ ಐಸಮ್ಮನವರನ್ನು ಕಾಡದಿರಲಿಲ್ಲ. ಮಾನವೀಯ ಅಂತಃಕರಣವೇ ಆಕೆಯ ಮೊದಲ ಆಸ್ತಿಯಾಗಿರುವಾಗ ಇದೀಗ ಆ 'ಸಾವು ಬದುಕಿನ' ಸತ್ಯ ಅವರೊಳಗೆ ಕಣಕಣವಾಗಿ ಇಂಗಿ ಹೋಗುತ್ತಲೇ ಇದ್ದತ್‌ಗಿಂತಲೂ ಆ ಹೆರಿಗೆಯೇ ಮುಖ್ಯವೆನಿಸತೊಡಗಿತ್ತು.

ತನ್ನ ಸಂತಾನಬಳ್ಳಿಯ ಬೀಳುಗಳನ್ನು ಹಾಗೂ ತನ್ನ ಕೆಲವು ಆಪ್ತರನ್ನು ಬಳಿಗೆ ಕರೆದು ತನ್ನೆದೆಯೊಳಗಿನ ದುಃಖದ ಚೀಲದ ಬಾಯಿ ಮುಚ್ಚುತ್ತಾ, ಅಲ್ಲೆಲ್ಲೋ ಮುರುಟಿಹೋಗಲಿರುವ ಜೀವಗಳನ್ನು ಚಿಗುರಿಸುವ ತನ್ನ ನಿರ್ಧಾರವನ್ನು ಪ್ರಕಟಿಸಿದ್ದರು.

ಎಲ್ಲರಿಗೂ ನ್ಯಾಯ ಕಟ್ಟು ಅಂತಾ ಒಂದಿರುತ್ತದೆ. ಅದು ಸಾಂಪ್ರದಾಯಿಕ ಹಾಗೂ ಶಿಸ್ತಿನ ಬದುಕಿನ ಒಡವೆಗಳೇನೋ ಹೌದು ! ಇದೀಗ ತಾನು ಕಟ್ಟುಪಾಡು ಎಂದು ಕುಳಿತರೆ ತನ್ನಿಂದ ಎಂದೆಂದೂ ಸೃಷ್ಟಿಸಲಾಗದ ಜೀವಗಳೆರಡನ್ನೂ ನಿರ್ಜೀವಗೊಳಿಸಿದಂತೆ. ಸಂಪ್ರದಾಯದ ಕಟ್ಟನ್ನು ಎದುರಿಗಿಟ್ಟುಕೊಂಡು ಮತ್ತೊಂದು ಜೀವವನ್ನು ಮುರುಟಿಸುವುದು ಅಮಾನವೀಯವೂ ಹೌದು ಮನಸ್ಸಿನ ವಿಕಾರವೂ ಹೌದು ಎಂದು ಆ ದುಃಖಿತ ಮನಸ್ಸಿಗೆ ತೋಚಿದೊಡನೆ ಆಕೆ ಹೆರಿಗೆ ಮನೆಗೆ ಹೊರಡಲು ಅನುವಾದರು.

ಆಕೆಯ ಸುತ್ತಲೂ ನೆರೆದವರೆಲ್ಲ ಹೆರಿಗೆ ಬೇನೆಯ 'ಸುಖ' ಉಂಡ ಜೀವಗಳೇ ಆಗಿದ್ದರಿಂದ ಈ ನಿರ್ಧಾರದತ್ತ ಯಾವ ರೀತಿಯ ಪ್ರತಿಭಟನೆ ಸಲಹೆಯೂ ತೂರಿ ಬರಲಿಲ್ಲ. ಮೌನವಾಗಿದ್ದು ಆ ಪುಣ್ಯದ ಕೆಲಸಕ್ಕೆ ಒಪ್ಪಿಗೆ ನೀಡಿದ್ದರೂ ಗಂಡಸರು ಮಸೀದಿಯಿಂದ ಬರುವುದರೊಳಗೆ ಆ ಹೆರಿಗೆ ಕೆಲಸ ಮುಗಿದರೆ ಒಳ್ಳೆಯದಿತ್ತು ಎಂದು ಅನಿಸದೆಯೂ ಇರಲಿಲ್ಲ.

ಐಸಂ ಬ್ಯಾರ್ದಿ ತನ್ನ ಮನದ ಶೋಕವನ್ನೆಲ್ಲ 'ಇದ್ದತ್' ಆಚರಿಸುವ ಕೋಣೆಯೊಳಗೇ ಇಟ್ಟು ಬಂದವರಂತೆ, ತೊಟ್ಟಿದ್ದ ಬಿಳಿ ಘೋಷವನ್ನು ಕಳಚಿಟ್ಟು ಮಾಮೂಲು ಕಪ್ಪು ಬುರ್ಖಾ ತೊಟ್ಟು ಅಂಗಳದಲ್ಲಿದ್ದ ತುಕ್ರ ಭಂಡಾರಿಯ ಜತೆ ಅವಸರದಿಂದ ಓಣಿ ಇಳಿಯುವಷ್ಟರಲ್ಲಿ ದೇವರು ಕಂತುವ ಅವಸರದಲ್ಲಿದ್ದರು.

ತನ್ನೊಡನೆ 'ದೈವ'ವೇ ನಡೆದು ಬರುತ್ತಿದೆಯೇನೋ ಎಂಬಂತಾ ಭಾವ ಹೊತ್ತು ಕಾಲು ಹಾಕುತ್ತಿದ್ದ ತುಕ್ರ ಭಂಡಾರಿಯ ಮನಸ್ಸು ಮೂಕವಾಗಿತ್ತೇನೋ... ಎಲ್ಲೂ ಮಾತೇ ಇಲ್ಲ. ಐಸಂ ಬ್ಯಾರ್ದಿಯವರ 'ನಿರ್ಧಾರ'ವೇ ಆತನ ಬಾಯಿ ಮುಚ್ಚಿಸಿರಬೇಕು. ಅಂತೂ ಹೆರಿಗೆ ಮನೆ ಬರುವವರೆಗೂ ಮೌನ ಕದಡಲಿಲ್ಲ.

ಹೆರಿಗೆ ಮನೆಯೆದುರು ಜಮಾಯಿಸಿದ್ದ ಕೇರಿ ಮಂದಿಯನ್ನು ಕವಚಿದ್ದ ಆತಂಕದ ಪೊರೆ ಇದೀಗ ಐಸಂ ಬ್ಯಾರ್ದಿಯವರನ್ನು ಕಂಡೊಡನೆ ಎಲ್ಲಿಗೆ ಕಳಚಿ ಹಾರಿತೋ...? ಆ ಗುಂಡದೊಳಗಿನ ದೈವವೇ ಹೇಳಬೇಕು. ಜನರ ಕಷ್ಟಕ್ಕೆ ಒದಗಿಬರುವ ದೈವಗಳಂತೆ, ತನ್ನ ದುಃಖವನ್ನೆಲ್ಲ ಅದುಮಿಕೊಂಡು ಬಂದ ಈ ತಾಯಿ ನೆರೆದ ಮಂದಿಗೆ ಜುಮಾದಿ ದೈವದಂತೇ ಕಂಡರು. ಮೊನ್ನೆ ಮೊನ್ನೆ ಆಕೆಯ ಕುಟುಂಬವನ್ನೇ ತರಿದು ಹಾಕಬೇಕು ಎಂದು ಹಾರಾಡುತ್ತಿದ್ದ ಈ ಮನಸ್ಸುಗಳು ಇದೀಗ ಅಪರಾಧಿಪ್ರಜ್ಞೆ ಹೊತ್ತು ತಲೆಕವಚಿ ಹಾಕಿಯೇ ಆ ಮುದಿ ಜೀವವನ್ನು ಎದುರ್ಗೊಂಡರು.

ಬದುಕು ಸುಲಭಕ್ಕೆ ಸಾಯುವುದುಂಟೇ - ಎಂದು ಯಾವತ್ತೂ ಅನ್ನುತ್ತಿದ್ದ ಐಸಂ ಬ್ಯಾರ್ದಿಯವರನ್ನು ಇಂದು ಮುಂಜಾನೆಯ 'ಸಾವು' ಎಳ್ಳಷ್ಟೂ ವಿಚಲಿತಗೊಳಿಸಿಲ್ಲ ಎಂಬಂತೆ ಆಕೆ ಹೆರಿಗೆ ಮನೆಗೆ ಹೊಕ್ಕವರೇ ಮಗುವಿಗೆ ಜಗದ ಬೆಳಕನ್ನು ಕಾಣಿಸುವ ಯತ್ನದಲ್ಲಿ ತೊಡಗಿಕೊಂಡರು.

ಇಂತಾ ಯತ್ನದಲ್ಲಿ ಆಕೆಯೆಂದಾದರೂ ಸೋತದ್ದಿದೆಯೆ ! ಮಗುವಿಗೆ ತಾಯಿಯ ಮುಖ ನೋಡುವ ಯೋಗ ಒದಗಿಸಿಕೊಟ್ಟವರೇ ಆ ನೆತ್ತರ ಮುದ್ದೆಗೊಂದು ಮೆಲು ಮುತ್ತು ಕೊಟ್ಟು- ನೇರ ತನ್ನ ದಾರಿ ಹಿಡಿದರು.

ತುಕ್ರ ಭಂಡಾರಿ ಈಗಲೂ ಐಸಂ ಬ್ಯಾರ್ದಿಯವರ ಬಾಲವಾಗಿ ಹಿಂಬಾಲಿಸಿದ್ದಾನೆ. ಸಾಗುವ ದಾರಿಯಲ್ಲೆಲ್ಲೂ ಮೌನದ ಕೋಟೆ ಮುರಿಯಲಿಲ್ಲ. ಕೃತಜ್ಞತೆಯ ಭಾರಕ್ಕೆ ಆ ಮಾತಿನ ಕೋಟೆಯೇ ಹೂತು ಹೋಗಿದ್ದಿರಬೇಕು. 'ಆಡು ಹೋದ ದಾರಿಯಲ್ಲಿ ಆನೆಯೆಂದೂ ಹೋಗದು...' ಎಂಬ ಆಡುಮಾತು ತುಕ್ರ ಭಂಡಾರಿಗೆ ಇಂದು ಏಕ್‌ದಂ ಸತ್ಯವೆನಿಸಿತು. ಐಸಂ ಬ್ಯಾರ್ದಿಯೇನಾದರೂ ಈ ಆಪತ್ಕಾಲದ 'ದಾರಿ'ಯನ್ನು ಕೇರಿ ಮಂದಿ ತೋರಿದ 'ದಾರಿ'ಯಲ್ಲೇ ಕ್ರಮಿಸಿದ್ದರೆ ಗತಿಯೇನಾಗುತ್ತಿತ್ತು ! ಆಕೆ ತೋರಿದ ದಾರಿ - ಮನುಷ್ಯತ್ವದ ದಾರಿ ಎಂಬುದು ತುಕ್ರ ಭಂಡಾರಿಗೆ ಮನದಟ್ಟಾಗಿ ಅಂವ ಪಶ್ಚಾತ್ತಾಪದಿಂದ ಮರಗಟ್ಟಿಯೇ ಹೋದಂತಾಗಿದ್ದ. ಇದು ಆತನೊಬ್ಬನ ಅನಿಸಿಕೆಯಲ್ಲ - ಮ್ಯೊದಿನ್ ಬ್ಯಾರಿಯ ಚಪ್ಪರಕ್ಕೆ ಬೆಂಕಿ ಹಚ್ಚಿದ ಕೇರಿಯ ಎಲ್ಲರ ಹೃದಯದ ಮಾತೂ ಕೂಡ ಅದೇ ಆಗಿತ್ತು.

ಹಾಗೆ ತುಕ್ರ ಭಂಡಾರಿಯೊಂದಿಗೆ ಅಂಗಳವೇರಿ ಬಂದ ಐಸಂ ಬ್ಯಾರ್ದಿಯವರು ಎಂದಿನಂತೆ ಮಾಡಿನೆಡೆಯಿಂದ ಅಡಿಕೆ ಹಾಳೆಯೊಂದನ್ನು ಎಳೆದು ತೆಗೆದು, ಅದನ್ನು ಎದೆಗೊತ್ತಿಕೊಂಡು ಏನೋ ಪ್ರಾರ್ಥಿಸಿ ತುಕ್ರನ ಕೈಯಲ್ಲಿಟ್ಟು 'ಮಗುವಿಗಿದು' ಎಂದು ಹೇಳಿ ನೇರ ನಡೆದದ್ದು ಮೀಯುವ ಮನೆಯತ್ತ. ಸಾವಿನ ಮನೆಯ ಹೆಂಗಸರು ಮೌನವಾಗಿಯೇ ಇದನ್ನೆಲ್ಲ ದಿಟ್ಟಿಸಿದ್ದರು.

ಗಂಡಸರು ಮಸೀದಿಯಿಂದ 'ಕಾರ್ಯ' ಮುಗಿಸಿ ಬರುವಷ್ಟರಲ್ಲಿ ಐಸಂ ಬ್ಯಾರ್ದಿಯವರು ಮಿಂದು ಬಂದೂ ಇದ್ದತ್ ವಿಧಿಗೆ ಒಳಪಡಲು ಆ ಕತ್ತಲ ಕೋಣೆಗೆ ಹೊಕ್ಕಾಗಿತ್ತು. ಜೀವ ದೊಡ್ಡದು... ಬದುಕು ಬಲು ದೊಡ್ಡದು... ಸಂಪ್ರದಾಯ ಅದಕ್ಕಿಂತೇನು ದೊಡ್ಡದಲ್ಲ ಎಂದು ತನ್ನ ಗಂಡ ಯಾವತ್ತೂ ಹೇಳುತ್ತಿದ್ದ ಮಾತುಗಳು ಆ ವಿಧವೆಯ ನೆನಪಿನಾಳದಿಂದ ಎದ್ದು ಬಂದು 'ಅವರ ಆತ್ಮ ಒಪ್ಪುವ ಕೆಲಸ ಮಾಡಿದೆನಲ್ಲಾ' ಎಂಬ ದೀರ್ಘ ನಿಟ್ಟುಸಿರೊಂದನ್ನು ಬಿಟ್ಟಿದ್ದರು.

ಎಚ್. ನಾಗವೇಣಿ
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩೨೭೬

# ಬಂಡವಾಳಶಾಹಿ, ಜಾಗತೀಕರಣ ಮತ್ತು ಕಾರ್ಲ್ ಮಾರ್ಕ್ಸ್

ಮುರಳಿ ಕುಂಬ್ಳೆ

೧೯೯೧ರಲ್ಲಿ ಪೂರ್ವ ಯುರೋಪಿನ ಸಮಾಜವಾದಿ ರಾಷ್ಟ್ರಗಳು ಮತ್ತು ಸೋವಿಯೆತ್ ಒಕ್ಕೂಟ ಕುಸಿದು ಬಿದ್ದದ್ದು ಈಗ ಚರಿತ್ರೆ. ಅಂದಿನ ಸಂದರ್ಭದಲ್ಲಿ ಆ ಘಟನೆಯನ್ನು ಬಂಡವಾಳಶಾಹಿಯ ದಿಗ್ವಿಜಯ ಎಂದು ಬಣ್ಣಿಸಿದ ವಿದ್ವನ್ಮಣಿಗಳಿಗೇನೂ ಕಡಿಮೆ ಇಲ್ಲ. ಭುಗಿಲೆದ್ದ ಭ್ರಮೆ, ಭ್ರಾಂತಿಗಳ ಹುಚ್ಚು ಹೊಳೆ ಹರಿದದ್ದೂ ನಿಜ. ಆದರೆ ಕಳೆದ ಐದಾರು ವರುಷಗಳ ಪ್ರಕ್ಷುಬ್ಧ ಜಾಗತಿಕ ವಾತಾವರಣ ಮತ್ತು ಹಲವಾರು ಅಂತರರಾಷ್ಟ್ರೀಯ ಘಟನೆಗಳು ಸಮಾಜವಾದದ ಅನಿವಾರ್ಯತೆ ಮತ್ತು ಅದರ ಮೂಲ ತತ್ವಗಳಿಗೆ ಇನ್ನೂ ಹೆಚ್ಚು ಸಮರ್ಥನೆಯನ್ನು ತಂದುಕೊಡುತ್ತಿರುವುದಂತೂ ಖಂಡಿತ. ಸೋವಿಯೆತ್ ಒಕ್ಕೂಟ ಪತನವಾದರೇನು, ಮಾನವನ ಏಳಿಗೆಗೆ ಸಮಾಜವಾದವೊಂದೇ ಪರ್ಯಾಯವೆಂದು ಇಂದಿನ ನಮ್ಮೆಲ್ಲರ ಅನುಭವ ಸಾರುತ್ತಿದೆ. ಈ ಮಾತುಗಳನ್ನು ತಾರ್ಕಿಕವಾಗಿ ಅರ್ಥೈಸಲು ಎರಡನೆಯ ಜಾಗತಿಕ ಸಮರದ ನಂತರದ ಅವಧಿಯಲ್ಲಿ ಬಂಡವಾಳಶಾಹಿ ಬೆಳೆದುಬಂದಿರುವ ಹಾದಿಯ ವಿಶ್ಲೇಷಣೆ ಅಗತ್ಯವೆನಿಸುತ್ತದೆ.

**ಬಂಡವಾಳಶಾಹಿಯ ಮೂಲ ಲಕ್ಷಣಗಳು**

ಯುದ್ಧಾನಂತರದ ಬಂಡವಾಳಶಾಹಿಯ ಬೆಳವಣಿಗೆಯನ್ನು ವಿಶ್ಲೇಷಿಸುವ ನಿಟ್ಟಿನಲ್ಲಿ ಅದರ ಕೆಲವು ಮೂಲ ಲಕ್ಷಣಗಳತ್ತ ಗಮನಹರಿಸುವುದು ಸೂಕ್ತ.

ಎಲ್ಲ ಸಾಮಗ್ರಿಗಳ ಉತ್ಪಾದನೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕೇವಲ ವಿನಿಮಯಕ್ಕಾಗಿಯೇ ಸೀಮಿತಗೊಂಡಿರುತ್ತದೆ. ಜನಸಾಮಾನ್ಯರ ಅಗತ್ಯಗಳ ಪೂರೈಕೆ ಯಾವತ್ತಿಗೂ ಅದರ ಆದ್ಯತೆಯಲ್ಲ. ಬಂಡವಾಳವೇ ಆಗಲಿ, ಅದರಿಂದ ಹೊಮ್ಮುವ ವ್ಯವಸ್ಥೆಯಾಗಲಿ ಸದಾ ವಿಸ್ತರಿಸುತ್ತಲೇ ಇರಬೇಕಾಗುತ್ತದೆ. ಇಲ್ಲದಿದ್ದಲ್ಲಿ ಆರ್ಥಿಕ ಬಿಕ್ಕಟ್ಟು ಖಚಿತ. ಇದುವೆ ಅದರ ಮೂಲ ಪ್ರೇರಣೆ ಎನ್ನಬಹುದು. ಅಂತೆಯೇ ಎಗ್ಗಿಲ್ಲದ ಲಾಭ ಗಳಿಕೆ ಕೂಡ. ಇದು ಯಾವತ್ತಿಗೂ ತಣಿಸದ ಹುಚ್ಚು ದಾಹ. ಹಾಗೆ ವಿಸ್ತರಿಸುತ್ತಲೇ ಹೋಗುವ ಪ್ರಕ್ರಿಯೆಯಲ್ಲಿ ಬಂಡವಾಳ ಆಯಾ ರಾಷ್ಟ್ರಗಳ ಸೀಮಾರೇಖೆಗಳನ್ನೂ ಮೀರಿ, ಹೊಸ ನಾಡು, ಹೊಸ ಜನಸಮುದಾಯಗಳನ್ನು ಅರಸುತ್ತದೆ. ಕಮ್ಯುನಿಸ್ಟ್ ಪ್ರಣಾಳಿಕೆಯಲ್ಲಿ ಹೇಳಿರುವಂತೆ ಬಂಡವಾಳ ಈ ನಿಟ್ಟಿನಲ್ಲಿ ಎಲ್ಲ ಅಡೆತಡೆಗಳನ್ನೂ ಕೊಚ್ಚಿಹಾಕಿ ದಾಪುಗಾಲು ಹಾಕುತ್ತದೆ. ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದ ಬಲಿಷ್ಠ ಸಂಸ್ಥೆಗಳು (ಮಿಲಿಟರಿ, ಹಣಕಾಸು, ರಾಜಕೀಯ..... ಇತ್ಯಾದಿ) ಈ ಕಾರ್ಯಾಚರಣೆಗೆ ನೆರವಾಗಿ ನಿಂತಿರುವ ಎಷ್ಟೋ ಘಟನೆಗಳು ನಮ್ಮ ಮುಂದಿವೆ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವಬ್ಯಾಂಕ್ ಮತ್ತು ಇತ್ತೀಚಿನ ವಿಶ್ವವ್ಯಾಪಾರ ಸಂಸ್ಥೆ ಇವುಗಳ ಹುಟ್ಟಿನ ಮೂಲಗಳನ್ನು ಇಲ್ಲಿ ಕಾಣಬಹುದು. ಅನೇಕ ರಾಷ್ಟ್ರಗಳು ಸಾರ್ವಭೌಮತ್ವವನ್ನು ಕಳೆದುಕೊಂಡು ಶೋಷಣೆಗೆ ಗುರಿಯಾಗುವುದು ಈ ಪ್ರಕ್ರಿಯೆಯಲ್ಲಿಯೇ.

*ತನ್ನ ಆರ್ಥಿಕ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳಲು ಬಂಡವಾಳಶಾಹಿಯು ಸಾಮ್ರಾಜ್ಯಶಾಹಿಯಾಗಿ ಬೆಳೆಯುತ್ತದೆಯೆಂದು ಲೆನಿನ್ ವ್ಯಾಖ್ಯಾನಿಸಿದ್ದುದನ್ನು ಬಲ್ಲವರಿಗೆ ಇಂದಿನ ಜಾಗತಿಕ ಬಂಡವಾಳಶಾಹಿಯ ಕುತಂತ್ರಗಳು ಸುಲಭದಲ್ಲಿ ಅರ್ಥವಾಗುತ್ತವೆ. ಬೇರೆಯವರ ದುಡಿಮೆ ಮತ್ತು ಕಚ್ಚಾವಸ್ತುಗಳಿಂದ ಲಾಭ ಪಡೆಯುವುದರ ಜೊತೆಗೆ ಅನಭಿವೃದ್ಧ ರಾಷ್ಟ್ರಗಳ ಮಾರುಕಟ್ಟೆಗಳನ್ನು ತಮ್ಮದನ್ನಾಗಿಸಿಕೊಂಡು ಅಲ್ಲಿಯ ಉತ್ಪಾದನಾ ವ್ಯವಸ್ಥೆಯನ್ನು ನಾಶಪಡಿಸುವುದೂ ಅಂತರರಾಷ್ಟ್ರೀಯ ಬಂಡವಾಳಶಾಹಿ ಜಾಲದ ಒಂದು ತಂತ್ರ. ಎಂದೇ ನಮ್ಮ ಉದ್ದಿಮೆ - ಕೃಷಿಗಳು ಸೊರಗುತ್ತಿವೆ. ಈಗ ಎಚ್ಚರ ವಹಿಸದಿದ್ದರೆ ಪ್ರಪಾತಕ್ಕೆ ಬೀಳುತ್ತೇವೆ. ತಮ್ಮ ವಿಶ್ಲೇಷಣೆಯಿಂದ ಇದನ್ನು ಶ್ರೀ ಮುರಳಿ ಕುಂಬ್ಳೆ ಅವರು ಸ್ಪಷ್ಟಪಡಿಸಿದ್ದಾರೆ. ಅಮೆರಿಕದಲ್ಲಿ ಅಟ್ಲಾಂಟಾದ ಸದರನ್ ಕಂಪೆನಿಯಲ್ಲಿ ಉಚ್ಚಮಟ್ಟದ ಇಂಜಿನಿಯರ್ ಆಗಿರುವ ಶ್ರೀ ಕುಂಬ್ಳೆ 'ಹೊಸತು'ವಿಗಾಗಿಯೇ ಬರೆದ ಈ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿಕೊಟ್ಟಿರುವವರು ಶ್ರೀ ಎಸ್. ಸುರೇಂದ್ರ.*

ಮಾರ್ಕ್ಸ್ ಹೇಳಿದಂತೆ ಬಂಡವಾಳಶಾಹಿಯು ತಂತ್ರಜ್ಞಾನದ ಬಳಕೆಯಿಂದ ಉತ್ಪಾದನಾ ಸಂಬಂಧಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತರುತ್ತದೆ. ಪರಿಣಾಮವಾಗಿ ಶ್ರಮಿಕರ, ಕೂಲಿಗಾರರ ಶೋಷಣೆಯೂ ಹೆಚ್ಚುತ್ತಿರುತ್ತದೆ. ಇಲ್ಲಿ ಉಂಟಾಗುವ ಹಲವು ಆಂತರಿಕ ವೈರುಧ್ಯಗಳಿಂದಾಗಿ ಮತ್ತು ಹೆಚ್ಚಿನ ಲಾಭಗಳಿಕೆಗಾಗಿ ಬಂಡವಾಳವು ಕಡಿಮೆ ವೇತನಕ್ಕೆ ದುಡಿಯಲು ತಯಾರಿರುವ ಕೂಲಿಗಾರರಿರುವ ದೇಶವಿದೇಶಗಳಿಗೆ ವಿಸ್ತರಿಸುತ್ತದೆ. ಬಂಡವಾಳದ ಜಾಗತೀಕರಣದ ಹುಟ್ಟನ್ನು ಇಲ್ಲಿ ಕಾಣಬಹುದು.

**ಬಂಡವಾಳಶಾಹಿಯ ಸುವರ್ಣ ಯುಗ (೧೯೪೮ - ೧೯೭೩)**

ಎರಡನೆಯ ಜಾಗತಿಕ ಯುದ್ಧದ ಪರಿಣಾಮವಾಗಿ ಅನೇಕ ರಾಷ್ಟ್ರಗಳು ಕಠೋರ ಕಷ್ಟ ನಷ್ಟಗಳಿಗೆ ಗುರಿಯಾದವು. ಇದರಿಂದ ೧೯೨೦ ಮತ್ತು ೧೯೩೦ರ ದಶಕಗಳಲ್ಲಿ ಸಂಭವಿಸಿದ ಆರ್ಥಿಕ ಮುಗ್ಗಟ್ಟಿನಿಂದ ಬಂಡವಾಳಶಾಹಿ ರಾಷ್ಟ್ರಗಳು ಚೇತರಿಸಿಕೊಳ್ಳಲು ಸಾಧ್ಯವಾಯಿತು. ಯುದ್ಧಾನಂತರದ ಅವಧಿಯಲ್ಲಿ ಅಮೆರಿಕ, ಪಶ್ಚಿಮ ಯುರೋಪು ಮತ್ತು ಜಪಾನ್‌ಗಳಲ್ಲಿ ಸಾಮಗ್ರಿಗಳ ಉತ್ಪಾದನೆ ಮತ್ತು ಬಳಕೆ ಎರಡೂ ಕ್ಷೇತ್ರಗಳಲ್ಲಿಯೂ ಅಸಾಧಾರಣ ಮಟ್ಟದ ಹೆಚ್ಚುವರಿ ಆಯಿತು. ಇದಕ್ಕೆ ಕಾರಣವಾದ ಕೆಲವು ಮುಖ್ಯ ಅಂಶಗಳನ್ನು ಹೀಗೆ ಗುರುತಿಸಬಹುದು.

೧. ಎಲ್ಲೆಡೆ ಸಂಭವಿಸಿದ ಕಾರ್ಖಾನೆಗಳ ಮತ್ತು ಸಾರ್ವಜನಿಕ ಆಸ್ತಿಪಾಸ್ತಿಗಳ ನಾಶದಿಂದ ಹಣದ ಹೂಡಿಕೆಗಾಗಿ ಹಾತೊರೆಯುತ್ತಿದ್ದ ದೇಶಗಳು ಬಿಕ್ಕಟ್ಟಿನಲ್ಲಿ ಸಿಲುಕಿದ್ದ ಅಮೆರಿಕದ ಬಂಡವಳಿಗರಿಗೆ ಫಲವತ್ತಾದ ನೆಲೆಗಳಂತೆ ಕಂಡುಬಂದುದು ಆಶ್ಚರ್ಯವೇನಲ್ಲ. ಮಾರ್ಷಲ್ ಯೋಜನೆಯು ರೂಪಗೊಂಡಿದ್ದು ಈ ಹಿನ್ನೆಲೆಯಲ್ಲಿ. ಹಣಕಾಸಿನ ಸಂಸ್ಥೆಗಳು ಈ ಸಂದರ್ಭದಲ್ಲಿ ಹೇಗೆ ವರ್ತಿಸಿದವು ಹಾಗೂ ಅವುಗಳ ಮೂಲ ಉದ್ದೇಶಗಳು ಏನಿದ್ದವು ಎಂಬುದನ್ನು ಮರೆಯಲಾಗದು. ಇಷ್ಟಾಗಿ ಜಾಗತಿಕ ಸಮರದಲ್ಲಿ ಅಮೆರಿಕದ ನೇರ ಪಾತ್ರವೇನಿತ್ತು ? ಅಲ್ಲದೆ ಯುದ್ಧದ ಮುಂಚಿನ ಕಾಲಾವಧಿಯಲ್ಲಿಯೇ ಯುರೋಪಿನ ಹಲವು ರಾಷ್ಟ್ರಗಳು ಮತ್ತು ಜಪಾನ್ ಮುಂದುವರೆದ ಬಂಡವಾಳಶಾಹಿ ವ್ಯವಸ್ಥೆಯನ್ನು ಹೊಂದಿದ್ದವು.

೨. ಏಷ್ಯ, ಆಫ್ರಿಕ, ಮಧ್ಯ ಮತ್ತು ದಕ್ಷಿಣ ಅಮೆರಿಕದ ರಾಷ್ಟ್ರಗಳಲ್ಲಿ ಲಭ್ಯವಿದ್ದ ಅಗ್ಗದ ಕಚ್ಚಾವಸ್ತುಗಳು ಬೃಹತ್ ಪ್ರಮಾಣದ ಲಾಭಗಳಿಕೆಗೆ, ಸ್ಥಳೀಯ ಅಗತ್ಯತೆಗೆ ಮತ್ತು ಬಂಡವಾಳ ಶೇಖರಣೆಗೆ ಸಹಾಯಕವಾಯಿತು.

೩. ೧೯೨೦-೧೯೩೦ರ ದಶಕಗಳಲ್ಲಿ ಅಮೆರಿಕದಲ್ಲಿ ಜರುಗಿದ ಹೊಸ ತಾಂತ್ರಿಕ ಆವಿಷ್ಕಾರಗಳು ಉತ್ಪಾದನಾ ಮಟ್ಟವನ್ನು ಇಮ್ಮಡಿಗೊಳಿಸಲು ಅನುವು ಮಾಡಿಕೊಟ್ಟಿತು. ಇದರ ನೇರ ಪರಿಣಾಮವೆಂದರೆ ಸಾಮಗ್ರಿಗಳ ಬೆಲೆ ಕುಸಿತ ಹಾಗೂ ಬಳಕೆ ಮತ್ತು ಲಾಭ ಎರಡೂ ಕ್ಷೇತ್ರಗಳಲ್ಲಿ ಹಿಂದೆಂದೂ ಕಾಣದಷ್ಟು ಹೆಚ್ಚುವರಿ.

೪. ಸಾಲ ಸೌಲಭ್ಯಗಳ ಅಗಾಧ ವಿಸ್ತರಣೆ, ಖಾಸಗಿ ಬಳಕೆ ಮತ್ತು ಬಂಡವಾಳ ಹೂಡಿಕೆಗಳ ಹೊಸ ಅವಕಾಶಗಳ ನಿರ್ಮಾಣ.

ಅದು ಅಮೆರಿಕ ಜಗತ್ತಿನಲ್ಲೆಡೆ ತನ್ನ ಹಿರಿಮೆಯನ್ನು ಗಟ್ಟಿಗೊಳಿಸಿಕೊಳ್ಳುತ್ತಿದ್ದ ಕಾಲ. ೧೯೪೪ರ ಬ್ರೆಟನ್-ವುಡ್ಸ್ ಒಪ್ಪಂದದಿಂದ ಅಮೆರಿಕ ತನ್ನ ಪ್ರಭಾವವನ್ನು ಹೆಚ್ಚು ವಿಸ್ತರಿಸಲು ಸಾಧ್ಯವಾದದ್ದು ಒಂದು ಪ್ರಮುಖ ಬೆಳವಣಿಗೆ. ಅಮೆರಿಕದ ಡಾಲರ್ ಇತರ ರಾಷ್ಟ್ರಗಳ ಹಣಕಾಸು ವ್ಯವಸ್ಥೆಗಳ ಮೇಲೆ ಶಾಶ್ವತ ಪ್ರಭುತ್ವ ಗಳಿಸಿಕೊಳ್ಳಲು ಮೊದಲು ಮಾಡಿದ್ದು ಅಂದಿನಿಂದಲೇ. ತಾರ್ಕಿಕ ಬೆಳವಣಿಗೆಯ ಪರಿಣಾಮದಿಂದಲೇ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವ ಬ್ಯಾಂಕ್ ಮತ್ತು ಗ್ಯಾಟ್ ಅವತರಿಸಿದ್ದು ಎಂದರೆ ತಪ್ಪಾಗಲಾರದು.

> *ಒಬ್ಬನ ಅದೃಷ್ಟ ಅವನು ಹುಟ್ಟಿದ ಗಳಿಗೆಯನ್ನು ಅವಲಂಬಿಸಿದೆಯೇನು ? ಮಗುವಿನ ಜನನ ಒಂದು ಯಾಂತ್ರಿಕ ಘಟನೆ. ಗರ್ಭಧಾರಣೆಯಾದ ೨೮೦ ದಿನಗಳ ನಂತರ ಇದು ಘಟಿಸುತ್ತದೆ. ಈ ಅವಧಿಗೂ ಮುಂಚೆಯೇ ಶಸ್ತ್ರಚಿಕಿತ್ಸೆಯಿಂದ ಜನನ ಸಾಧ್ಯ. ಒಂದು ವೇಳೆ ವ್ಯಕ್ತಿಗಳ ಅದೃಷ್ಟಗಳು ಅವರ ಜನ್ಮ ಸಮಯವನ್ನು ಅವಲಂಬಿಸಿದೆ ಎಂದಾದರೆ ವೈದ್ಯಕೀಯ ವಿಧಾನಗಳಿಂದ ಜನ್ಮ ಕಾಲದ ಮೇಲೆ ಪ್ರಭಾವಬೀರಿ ಶುಭ ಅಥವಾ ಅಶುಭ ಘಳಿಗೆಯಲ್ಲಿ ವ್ಯಕ್ತಿಗಳು ಜನ್ಮವೆತ್ತುವಂತೆ ಮಾಡಿ ಮಾನವನ ಅದೃಷ್ಟವನ್ನು ರೂಪಿಸಬಹುದು. ಹಾಗಿದ್ದರೆ ಪ್ರಸೂತಿ ಶಾಸ್ತ್ರಜ್ಞರಿಗೆ ಉಜ್ವಲ ಭವಿಷ್ಯವಿದೆ.*
>
> **– ಡಾ|| ಕೋವೂರ್**

ಯುದ್ಧಾನಂತರದ ಬೆಳವಣಿಗೆಗಳಿಗೆ ಇನ್ನೊಂದು ಬಹುಮುಖ್ಯ ಆಯಾಮವಿದೆ. ಅದೆಂದರೆ, ಬಂಡವಾಳ ವ್ಯವಸ್ಥೆಗೆ ನೇರ ಸವಾಲು ಒಡ್ಡಿದ ಪಶ್ಚಿಮ ಯೂರೋಪಿನಲ್ಲಿ ಅಂದು ಜನಪ್ರಿಯವಾಗಿದ್ದ ಕಮ್ಯುನಿಸ್ಟ್ ಚಳುವಳಿಗಳು. ಜರ್ಮನಿಯ ಮತ್ತು ಜಪಾನಿನ ಫ್ಯಾಸಿಸಂ ಅನ್ನು ಧೂಳಿಪಟ ಮಾಡಿದ ಕೆಂಪು ಸೈನ್ಯದ ಅಪ್ರತಿಮ ಹೋರಾಟ ಸೋವಿಯೆತ್ ಒಕ್ಕೂಟದ ಘನತೆಯನ್ನು ಮುಗಿಲೆತ್ತರಕ್ಕೇರಿಸಿತ್ತು. ಇದರ ರಾಜಕೀಯ ಪರಿಣಾಮವನ್ನು ಗ್ರಹಿಸಿದ ಅಮೆರಿಕದ ಬಂಡವಾಳಶಾಹಿ ಪಶ್ಚಿಮ ಯುರೋಪ್ ರಾಷ್ಟ್ರಗಳಿಗೆ ಬೃಹತ್ ಪ್ರಮಾಣದಲ್ಲಿ ನೆರವಾಗಲು ಮುಂದೆ ಬಂದದ್ದಕ್ಕೆ ಹಲವಾರು ಒಳ ಅರ್ಥಗಳಿವೆ. ಜೊತೆಜೊತೆಗೆ ಇಟಲಿ ಮತ್ತು ಫ್ರಾನ್ಸ್‌ನಲ್ಲಿ ಅಮೆರಿಕ ನಡೆಸಿದ ರಾಜಕೀಯ ಪಿತೂರಿಯಿಂದಾಗಿ ಅಲ್ಲಿನ ಜನಪ್ರಿಯ ಕಮ್ಯುನಿಸ್ಟ್ ಪಕ್ಷಗಳ ಪ್ರಭಾವಕ್ಕೆ ತೀವ್ರ ಧಕ್ಕೆಯುಂಟಾಯಿತು. ಅಲ್ಲಿನ ಬಂಡವಾಳಶಾಹಿ ಪಕ್ಷಗಳು ಕ್ರಮೇಣ ಚಿಗುರಿಕೊಂಡವು. ಬಹುಶಃ ಆ ಎರಡೂ ದೇಶಗಳಲ್ಲಿ ಕಮ್ಯುನಿಸ್ಟ್ ಪಕ್ಷಗಳು ಅಧಿಕಾರಕ್ಕೆ ಬಂದು ಮುಂದುವರೆದಿದ್ದರೆ ಇಂದಿನ ಜಾಗತಿಕ ವ್ಯವಸ್ಥೆಯ ರಾಜಕೀಯ ರೂಪುರೇಷೆಗಳು ಬೇರೆಯೇ ಆಗಿರುತ್ತಿತ್ತೋ ಏನೋ !

ಯುರೋಪಿನಲ್ಲಿ ಬಂಡವಾಳಶಾಹಿ ಬಲವಾಗಿ ಬೇರೂರುವುದು ಅಂದು ಅಮೆರಿಕದ ಹಿತಾಸಕ್ತಿಗಳಿಗೆ ಬಹಳ ಮುಖ್ಯವಾದ ಅಂಶವಾಗಿತ್ತು. ಸಾಮಗ್ರಿಗಳ ರಫ್ತಿಗೆ ಬದಲಾಗಿ ಆ ದೇಶಗಳಲ್ಲಿ ಹಣ ಹೂಡಿಕೆಯೇ ಸರಿಯಾದ ನೀತಿಯೆಂದು ತೀರ್ಮಾನಿಸಿದ ಅಮೆರಿಕ ಬಂಡವಾಳದ ಹೊಳೆಯನ್ನೇ ಹರಿಸಿತು. ಆ ರಾಷ್ಟ್ರಗಳಲ್ಲಿ ತಯಾರಾದ ವಸ್ತುಗಳಿಗೆ ತನ್ನ ಮಾರುಕಟ್ಟೆಯನ್ನು ತೆರೆದು ಪ್ರೋತ್ಸಾಹಿಸಿತು. ಪರಿಣಾಮವಾಗಿ ಆರ್ಥಿಕ ಏರುಪೇರುಗಳು, ಅಸಮಾನತೆ, ಅನೈತಿಕ ಪೈಪೋಟಿ, ಇದರಿಂದ ಸೃಷ್ಟಿಗೊಂಡ ಆರ್ಥಿಕ ಸಂಬಂಧಗಳಲ್ಲಿನ ಗೊಂದಲಗಳು ಮನಸ್ತಾಪಗಳಿಂದ ಬ್ರೆಟನ್-ವುಡ್ಸ್ ವ್ಯವಸ್ಥೆಯೇ ಅಲುಗಾಡುವಂತಾಗಿದ್ದು ಒಂದು ವಿಪರ್ಯಾಸ.

**ಅಮೆರಿಕದ ಆಂತರಿಕ ಹಿಂಜರಿತ –**
**ನಂತರದ ಆಗುಹೋಗುಗಳು : ೧೯೭೩ – ೧೯೮೫**

ಮುಂದುವರೆದ ಬಂಡವಾಳಶಾಹಿ ರಾಷ್ಟ್ರಗಳಲ್ಲಿನ ಆರ್ಥಿಕ ಬೆಳವಣಿಗೆ ಕ್ಷೀಣಿಸಲು ಪ್ರಾರಂಭವಾದದ್ದು ೧೯೭೦ರ ದಶಕದಲ್ಲಿ. ೧೯೭೪ರ ತೈಲದ ಆಘಾತ ಮುಂಬರಲಿದ್ದ ಆರ್ಥಿಕ ಕಾರ್ಮೋಡಗಳಿಗೆ ನಾಂದಿಯಾಯಿತು. ೧೯೭೩-೭೫ರ ಆರ್ಥಿಕ ಹಿಂಜರಿತ ಅಮೆರಿಕದ ಆತ್ಮವಿಶ್ವಾಸಕ್ಕೆ ದೊಡ್ಡ ಪೆಟ್ಟು. ಆ ನಂತರ ವಿಯಟ್‌ನಾಂ ಯುದ್ಧದಲ್ಲಿ ಮಿಲಿಯಾಂತರ ಡಾಲರುಗಳನ್ನು ಚೆಲ್ಲಿದ ಭೀಕರ ಪರಿಣಾಮವಾಗಿ ಹಣದುಬ್ಬರ. ತತ್ತರಿಸಿದ ಅಲ್ಲಿನ ಆಡಳಿತ ವರ್ಗದ ಪಿತೂರಿಯಿಂದ ಅವತರಿಸಿದ ಹೊಸ ಆರ್ಥಿಕ ರೂಪಕವೆಂದರೆ ಸ್ಟಾಗ್ಫ್ಲೇಷನ್ (stagflation - ಆರ್ಥಿಕ ಸ್ಥಗಿತ ಮತ್ತು Inflation ಹಣದುಬ್ಬರ; ಇವುಗಳ ಜಂಟೀ ಪರಿಣಾಮ). ಕುಸಿಯುತ್ತಿದ್ದ ಉತ್ಪಾದನೆ, ಅಪಾರ ನಷ್ಟ, ಹಣದುಬ್ಬರ ಮುಂತಾದವುಗಳಿಂದ ಆ ರಾಷ್ಟ್ರದ ಆರ್ಥಿಕ ತಜ್ಞರು ಅತೀವ ಗೊಂದಲಕ್ಕೀಡಾದ ಕಾಲವದು. ಇಡೀ ಅಮೆರಿಕ ತಲ್ಲಣಕ್ಕೆ ಸಿಲುಕಿಕೊಂಡ ಸಂದರ್ಭ.

ಗಗನಕ್ಕೇರುತ್ತಿದ್ದ ಬಡ್ಡಿ ದರಗಳು, ಕುಸಿಯುತ್ತಿದ್ದ ಲಾಭದ ಮೊತ್ತ ಇವೇ ಮೊದಲಾದ ಆರ್ಥಿಕ ಸಮಸ್ಯೆಗಳು ಆ ರಾಷ್ಟ್ರದ ಉದ್ದಿಮೆದಾರರು ಹೊರದೇಶಗಳತ್ತ ದೃಷ್ಟಿ ಹಾಯಿಸಲು ಪ್ರಚೋದನೆ ನೀಡಿದ ಅಂಶಗಳು. ಶೇ.೧೧ರಷ್ಟು ನಿರುದ್ಯೋಗ ಮತ್ತು ಜಪಾನ್, ಜರ್ಮನಿಗಳಿಂದ ಆಮದಾಗಿ ಬರುತ್ತಿದ್ದ ವಸ್ತುಗಳಿಂದ ಉಂಟಾದ ಅಲ್ಲೋಲಕಲ್ಲೋಲ ಅಮೆರಿಕದ ಆರ್ಥಿಕ ವ್ಯವಸ್ಥೆಯಲ್ಲಿನ ಒಂದು ಕಪ್ಪು ಚುಕ್ಕೆ. ಅಮೆರಿಕವೇ ಹುಟ್ಟುಹಾಕಿದ್ದ ಜರ್ಮನಿಯ ಮತ್ತು ಜಪಾನಿನ ಬಂಡವಾಳಶಾಹಿ ಅದಕ್ಕೆ ಪೈಪೋಟಿಯಾಗಿ ಸೆಡ್ಡು ಹೊಡೆದು ನಿಂತದ್ದು ಅಂತರರಾಷ್ಟ್ರೀಯ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಗಲು ಕಾರಣವಾಯಿತೆಂದರೆ ತಪ್ಪಾಗಲಾರದು. ಆಗ ಡಾಲರ್‌ಗೆ ಆದ ಮುಖಭಂಗ, ಜಪಾನಿನ ಯೆನ್ ಗಳಿಸಿದ ಮೇಲುಗೈ, ಬಂಡವಾಳಶಾಹಿಯ ಆಂತರಿಕ ವೈರುಧ್ಯವನ್ನು ಅರ್ಥಪೂರ್ಣವಾಗಿ ಪರಿಚಯಿಸುತ್ತವೆ.

**ಜಾಗತೀಕರಣ : ದಕ್ಷಿಣ ಕೊರಿಯ ಮತ್ತಿತರ ರಾಷ್ಟ್ರಗಳಲ್ಲಿನ ಬಿಕ್ಕಟ್ಟು**

ಬಂಡವಾಳಶಾಹಿ ಎಂತಹ ವಿನಾಶಕಾರಿ ಸನ್ನಿವೇಶಗಳನ್ನು ಸೃಷ್ಟಿಸುತ್ತದೆ ಎಂಬುದನ್ನು ಜಗತ್ತಿನ ಅನೇಕ ರಾಷ್ಟ್ರಗಳು ಕಂಡಿವೆ, ಅನುಭವಿಸಿವೆ. ಈಚಿನ ಕೆಲವು ನಿದರ್ಶನಗಳು ಇದಕ್ಕೆ ಸಾಕಷ್ಟು ವಿವರಣೆಯನ್ನು ನೀಡುತ್ತವೆ.

ಜಪಾನ್ ತನ್ನ ಯೆನ್‌ನ ಮೌಲ್ಯವನ್ನು ಹೆಚ್ಚಿಸಿದ ಪರಿಣಾಮವಾಗಿ ಅವರ ಸಾಮಗ್ರಿಗಳ ಬೆಲೆಗಳು ಗಗನಕ್ಕೇರತೊಡಗಿದವು. ಪರಿಣಾಮ ಕೊಳ್ಳುವವರ ಸಂಖ್ಯೆಯ ಕುಸಿತ. ಸರಿ, ಹೆಚ್ಚಿನ ಲಾಭಗಳಿಕೆ ಮತ್ತು ತಮ್ಮ ಮಾರುಕಟ್ಟೆಯ ಅಧಿಕ



*ವಿಶ್ವವ್ಯಾಪಾರ ಸಂಸ್ಥೆಯ ನೀತಿಗಳ ವಿರುದ್ಧ ಸಿಡಿದೆದ್ದ ಪ್ರತಿಭಟನೆ*

ವಿಸ್ತರಣೆಗಾಗಿ ಜಪಾನಿನ ಬಂಡವಾಳಶಾಹಿಗಳ ವಕ್ರದೃಷ್ಟಿ ಆಗ್ನೇಯ ಏಷ್ಯಾದ ರಾಷ್ಟ್ರಗಳತ್ತ ! ಲಾಭಕ್ಕಾಗಿ ವಿಶ್ವಸಂಚಾರ ! ಹೊಸ ಹೊಸ ಮಾರುಕಟ್ಟೆಗಳ ಅನ್ವೇಷಣೆ ! ಅಲ್ಲಿನ ಆರ್ಥಿಕ ವ್ಯವಸ್ಥೆಗಳ ಶೋಷಣೆ ! ಈ ದುರುದ್ದೇಶಗಳಿಂದಲೇ ಇಂದು ಬಂಡವಾಳಶಾಹಿ ತನ್ನ ಉತ್ಪಾದನೆಯನ್ನು ಜಾಗತೀಕರಣಗೊಳಿಸುತ್ತಿದೆ. ಅನೇಕ ಮಾರುಕಟ್ಟೆಗಳನ್ನು ಕಬಳಿಸಿಕೊಂಡದ್ದೂ ಆಗಿದೆ. ಈ ಪ್ರಕ್ರಿಯೆಗೆ ಇನ್ನೊಂದು ಹೆಸರು ವಿಶ್ವ ವ್ಯಾಪಾರ ಸಂಸ್ಥೆ. ಮುಂದುವರೆದ ಬಂಡವಾಳಶಾಹಿ ರಾಷ್ಟ್ರಗಳ ಪ್ರತಿನಿಧಿಯಾಗಿ ಹಿಂದುಳಿದ, ಅಭಿವೃದ್ಧಿಶೀಲ ರಾಷ್ಟ್ರಗಳನ್ನು, ಅಲ್ಲಿನ ಸರಕಾರಗಳನ್ನು ಬಗ್ಗು ಬಡಿದು ಅವರ ರಾಜಕೀಯ-ಆರ್ಥಿಕ ಸ್ವಾಮ್ಯತೆಯನ್ನು ಅರ್ಥಹೀನಗೊಳಿಸುವುದೇ ಈ ಸಂಸ್ಥೆಯ ಮುಖ್ಯ ಉದ್ದೇಶ.

೧೯೮೦-೧೯೯೯ರ ದಶಕಗಳಲ್ಲಿ ಥಾಯ್‌ಲೆಂಡ್, ಇಂಡೋನೇಷ್ಯಾ, ಫಿಲಿಪೈನ್ಸ್, ಮಲೇಶಿಯಾ ಮತ್ತು ದಕ್ಷಿಣ ಕೊರಿಯಗಳಿಗೆ ಹರಿದುಬಂದ ಬಂಡವಾಳ ಆ ರಾಷ್ಟ್ರಗಳು ಹುಚ್ಚು ಕನಸುಗಳನ್ನು ಕಾಣುವಂತೆ ಪ್ರೇರೇಪಿಸಿದವು. ಆರ್ಥಿಕ ಬೆಳವಣಿಗೆಗಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸುವ ಬದಲು ಆ ರಾಷ್ಟ್ರಗಳು ದೂರ ಸಂಪರ್ಕದ ಸಲಕರಣೆಗಳು ಮತ್ತು ಕಂಪ್ಯೂಟರ್‌ಗಳನ್ನು ತಯಾರಿಸುವುದರಿಂದಲೇ ಸ್ವರ್ಗಕ್ಕೆ ಏಣಿಗಳನ್ನು ನಿರ್ಮಿಸತೊಡಗಿದವು. ಉದ್ದೇಶ ? ಎಡೆತಡೆಯಿಲ್ಲದೆ ರಫ್ತು ಮತ್ತು ಲಾಭ ! ಜಪಾನ್ ಮತ್ತು ಪಶ್ಚಿಮ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯೂ ಇಂತಹುದೇ ಉತ್ಪಾದನೆಯನ್ನು ಅವಲಂಬಿಸುತ್ತಿದ್ದರಿಂದ ತೀವ್ರ ಪೈಪೋಟಿ ಉಂಟಾಗಿದ್ದು ಆಶ್ಚರ್ಯವೇನಲ್ಲ. ಇದೆಲ್ಲದರ ಮಧ್ಯೆ ಅಂತರರಾಷ್ಟ್ರೀಯ ಮಾರುಕಟ್ಟೆಗೆ ಚೀಣ ಪ್ರವೇಶಿಸಿದ್ದು, ಈ ಇಡೀ ಚಿತ್ರಣಕ್ಕೆ ಹೊಸ ಆಯಾಮವನ್ನು ಒದಗಿಸಿದ್ದು ಬಹಳ ಕುತೂಹಲಕರ. ಕಡೆಗೆ ಆಗಿದ್ದೇನು ? ಕೊಳ್ಳಲಾರದಷ್ಟು ಉತ್ಪಾದನೆ, ತಿಪ್ಪೆಗೆ ಬಿದ್ದ ರಾಶಿ ರಾಶಿ ವಸ್ತುಗಳು. ಡಾಲರ್ ಹುಚ್ಚಿನಿಂದ ಹಾಗೂ ಬರಿಯ ಸಾಲಗಳನ್ನು ಆಧರಿಸಿ ಆರ್ಥಿಕ ವ್ಯವಸ್ಥೆಯನ್ನೇ ಬದಲಾಯಿಸಲು ಹೊರಟು ಅಮೆರಿಕ ಮತ್ತಿತರ ಬಂಡವಾಳಶಾಹಿ ರಾಷ್ಟ್ರಗಳ ಪಿತೂರಿಗೆ ಬಲಿಪಶುವಾದ ಪೂರ್ವ ಏಷ್ಯಾದ ರಾಷ್ಟ್ರಗಳ ಕತೆ ಇದು. ಅವರ ಆರ್ಥಿಕ ವ್ಯವಸ್ಥೆ ಇಂದು ನೆಲಕಚ್ಚಿ ಕುಳಿತಿದೆ. ಇದರ ಬಿಸಿ ಭಾರತದಂತಹ ದೇಶಗಳಿಗೂ ತಟ್ಟುತ್ತಿದೆ. ಇದನ್ನು ಗ್ರಹಿಸುವ ಇಚ್ಛೆ ಅಲ್ಲಿನ ಸರ್ಕಾರಗಳಿಗಿದೆಯೇ ? ಭಾರತ ಸರ್ಕಾರವಾದರೂ ಕೂಡಲೆ ಎಚ್ಚರ ವಹಿಸುತ್ತದೆಯೆ ?

ಪೂರ್ವ ಏಷ್ಯಾದ ಆರ್ಥಿಕ ವ್ಯವಸ್ಥೆ ೧೯೯೦ರ ದಶಕದಲ್ಲಿ ಸಾಕಷ್ಟು ಮುನ್ನಡೆ ಸಾಧಿಸಿದ ಸಂದರ್ಭದಲ್ಲಿಯೇ ಅಂತರ್‌ಜಾಲ, ದೂರಸಂಪರ್ಕ ಮತ್ತು ಗಣಕಯಂತ್ರಗಳು ಹೇರಳವಾಗಿ ಬಳಕೆಗೆ ಬಂದವು. ಇದನ್ನು ''ಹೊಸಯುಗ'', ''ಹೊಸ ಆರ್ಥಿಕ ವ್ಯವಸ್ಥೆ'' ಎಂದು ಬಣ್ಣಿಸಲಾಯಿತು. ಪೂರ್ವ ಯುರೋಪಿನ ರಾಷ್ಟ್ರಗಳು ಮತ್ತು ರಷ್ಯಗಳಲ್ಲಿ ಬಂಡವಾಳಶಾಹಿ ಹೆಜ್ಜೆ ಇಟ್ಟದ್ದು ಚರಿತ್ರಾರ್ಹ. ಇದಕ್ಕೆ ಪ್ರತಿಕ್ರಿಯೆಯಾಗಿ, ''ಇತಿಹಾಸದ ಒಂದು ಕೊನೆಯ ಘಟ್ಟವನ್ನು ನಾವಿಂದು ವೀಕ್ಷಿಸುತ್ತಿದ್ದೇವೆ. ಮನುಕುಲದ ಸೈದ್ಧಾಂತಿಕ ವಿಕಾಸ ಕೊನೆಯುಸಿರು ಎಳೆಯುತ್ತಿದೆ. ಪಶ್ಚಿಮದ ಉದಾರವಾದಿ ಪ್ರಜಾಪ್ರಭುತ್ವ ವ್ಯವಸ್ಥೆಗಿಂತ ಮಿಗಿಲಾದುದು ಇನ್ನಾವುದೂ ಇಲ್ಲ'', ಎಂದೊಬ್ಬ ಕುಪ್ರಸಿದ್ಧ ಬುದ್ಧಿಜೀವಿ ಘೋಷಿಸಿದ್ದು ಮಾನವೀಯ ಮೌಲ್ಯಗಳಲ್ಲಿ ನಂಬಿಕೆಯುಳ್ಳ ಎಲ್ಲ ಪ್ರಜ್ಞಾವಂತರನ್ನು ಎಚ್ಚರಿಸುವಂತಿದೆ.

ಪಶ್ಚಿಮ ಯುರೋಪು ಮತ್ತು ಅಮೆರಿಕದಲ್ಲಿಯೇ ಷೇರು ಮಾರುಕಟ್ಟೆಯಂತಹ ಅನೈತಿಕ ವ್ಯವಹಾರ ಕುಸಿದು ಹೊಸ ಸಮಸ್ಯೆಗಳಿಗೆ ಎಡೆಮಾಡಿಕೊಟ್ಟಿದೆ. ಇಂಟರ್‌ನೆಟ್ ಎಲ್ಲ ಜಾಗತಿಕ ಸಮಸ್ಯೆಗಳಿಗೂ ಸಿದ್ಧೌಷಧ ಎಂಬ ಘೋಷಣೆಯ ನಿಜಸ್ವರೂಪ ಬಟ್ಟಬಯಲಾಗುತ್ತಿದೆ. ೧೯೯೮ ಮತ್ತು ಇತ್ತೀಚಿನ ಷೇರು ಮಾರುಕಟ್ಟೆಯ ಕುಸಿತ ಬಂಡವಾಳಶಾಹಿಯ ಕ್ರೌರ್ಯವನ್ನು ಸಾರಿ ಹೇಳುತ್ತದೆ.

**ಒಟ್ಟಿನಲ್ಲಿ.....**

ಇಂದು ಮುಂದುವರೆದ ದೇಶಗಳಲ್ಲಿನ ದೂರ ಸಂಪರ್ಕ ಕ್ಷೇತ್ರದಲ್ಲಿ ಅತಿಯಾದ ಬಂಡವಾಳ ಹೂಡುವಿಕೆಯಿಂದಾಗಿ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದೆ. ಬೇರೆ ಕ್ಷೇತ್ರಗಳಿಗೆ ಬಂಡವಾಳ ಎಲ್ಲಿಂದ ಬರಬೇಕು ? ಚೀನವೂ ಸೇರಿದಂತೆ ಪೂರ್ವ-ಏಷ್ಯಾದ ರಾಷ್ಟ್ರಗಳಲ್ಲಿ ಬಿಕ್ಕಟ್ಟು ತೀವ್ರವಾಗುತ್ತಿದೆ. ಇದಕ್ಕೆ ದಕ್ಷಿಣ ಅಮೆರಿಕ ಮತ್ತು ಆಫ್ರಿಕದ ರಾಷ್ಟ್ರಗಳು ಹೊರತಲ್ಲ. ತನ್ನ ಭವಿಷ್ಯವು ಕಂಪ್ಯೂಟರ್ ಸಾಫ್ಟವೇರ್ ಮತ್ತು ಇಂಟರ್‌ನೆಟ್ಟನ್ನೇ ಅವಲಂಬಿಸಿದೆಯೆಂದು ಭಾವಿಸಿರುವ ಭಾರತದ ಆಳುವ ವರ್ಗವೂ ಕೂಡ ಎಚ್ಚೆತ್ತುಕೊಳ್ಳಬೇಕಾದ ಸಂದರ್ಭವಿದು. ಸಮಯಕ್ಕೆ ತಕ್ಕಂತೆ ತನ್ನ ತಂತ್ರಗಳನ್ನು ಬದಲಾಯಿಸಿಕೊಳ್ಳುವ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಹೊಸ ಹೊಸ ಷರತ್ತುಗಳ ಮೂಲಕ ತನ್ನ ಶೋಷಣೆಯ ವಿಧಾನವನ್ನು ಬದಲಾಯಿಸುತ್ತಿದೆ. ದಿವಾಳಿಯಾಗುತ್ತಿರುವ ಅಂತರ ರಾಷ್ಟ್ರೀಯ ಬೃಹತ್ ಖಾಸಗಿ ಸಂಸ್ಥೆಗಳ ಸಾಲದ ಹೊರೆಯನ್ನು ಅಭಿವೃದ್ಧಿಶೀಲ ರಾಷ್ಟ್ರಗಳ ಬಡಜನತೆಗೆ ವರ್ಗಾಯಿಸುತ್ತಿದ್ದಾರೆ. ಒಂದು ಬಗೆಯಲ್ಲಿ, ತಮ್ಮ ಬಿಕ್ಕಟ್ಟನ್ನು ಬೇರೆಡೆ ರವಾನಿಸುವ, ರಫ್ತು ಮಾಡುವ ಪಿತೂರಿಯಿದು. ವಿಶ್ವದ ಅನೇಕ ಕಡೆ ಇದರ ವಿರುದ್ಧ ಜನಸಾಮಾನ್ಯರು ಪ್ರತಿಭಟಿಸುತ್ತಿರುವುದು ಆಶಾದಾಯಕವಾದ ಬೆಳವಣಿಗೆ. ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವ ಬ್ಯಾಂಕ್, ವಿಶ್ವ ವ್ಯಾಪಾರ ಸಂಸ್ಥೆ ಇವುಗಳ ಮೂಲಕ ಸಾಮ್ರಾಜ್ಯಶಾಹಿ ತಮ್ಮನ್ನು ಶೋಷಿಸುತ್ತಿದ್ದಾರೆಂಬ ಅರಿವು ಅನಭಿವೃದ್ಧ ದೇಶಗಳಲ್ಲಿ ಮೂಡಿಬರುತ್ತಿರುವುದು ಅಷ್ಟೇ ಆಶಾದಾಯಕ. ಎಂದರೆ ಒಟ್ಟಿನಲ್ಲಿ ಕಾರ್ಲ್ ಮಾರ್ಕ್ಸ್ ಹೇಳಿದ ಮಾತುಗಳು ಅಕ್ಷರಶಃ ನಿಜವಾಗತೊಡಗಿದೆ. ತಲ್ಲಣ, ಬಿಕ್ಕಟ್ಟುಗಳಲ್ಲಿ ಸಿಲುಕಿ ನರಳುತ್ತಿರುವ ಬಂಡವಾಳಶಾಹಿಯು ಮಾರ್ಕ್ಸ್‌ನ ಸಿದ್ಧಾಂತ ಕೊನೆಯುಸಿರೆಳೆದಿದೆಯೆಂಬ ಪ್ರತಿಪಾದನೆಯನ್ನು ಪ್ರಚಾರ ಮಾಡುತ್ತದೆ; ಆದರೆ ಅದಕ್ಕೆ ಆ ನಂಬಿಕೆ ಇಲ್ಲ ! ಅಮಾನುಷ ಬಂಡವಾಳಶಾಹಿ ವ್ಯವಸ್ಥೆಯ ಬದಲಾವಣೆಯನ್ನು ಬಯಸಿ ಸಿಡಿದೇಳುತ್ತಿರುವ ಶೋಷಿತ ವರ್ಗದ ಹೋರಾಟಗಳು ಅದಕ್ಕೆ ಸಿಂಹಸ್ವಪ್ನವಾಗಿ ಪರಿಣಮಿಸುತ್ತಿರುವುದರಲ್ಲಿ ಸಂದೇಹವೇ ಇಲ್ಲ. ಅಂದು ಯುರೋಪಿಗೆ ಸಾಮ್ಯವಾದವು ಸಿಂಹಸ್ವಪ್ನವಾಗಿತ್ತೆಂದು ಮಾರ್ಕ್ಸ್ ಮತ್ತು ಏಂಗಲ್ಸ್ ತಮ್ಮ ಕಮ್ಯುನಿಸ್ಟ್ ಘೋಷಣಾ ಪತ್ರದಲ್ಲಿ ೧೮೪೮ರಲ್ಲಿ ನುಡಿದರು. ಇಂದು ಇಡೀ ವಿಶ್ವಕ್ಕೆ ಅದು ವ್ಯಾಪಿಸುತ್ತಿದೆ. ಕೊನೆಯ ನಗೆ ನಮ್ಮದು, ಜನತೆಯದು.

**ಮುರಳಿ ಕುಂಬ್ಳೆ**
ಅಟ್ಲಾಂಟಾ, ಅಮೆರಿಕಾ



## ಅಶ್ವಮೇಧ

ಹಣೆಬರಹವನು ಬರೆದು, ಕಣ್ ಪಟ್ಟಿಯನು ಕಟ್ಟಿ
ರಾಜ್ಯಗಳ ಹಣೆಬರಹ ನಿರ್ಧರಿಸಲು
ಅಟ್ಟಿದರು ಕುದುರೆಯನು, ವೀರಪಡೆಜತೆಯಲ್ಲಿ
ಶಸ್ತ್ರ ಸನ್ನದ್ಧ - ಉನ್ಮಾದದಲ್ಲಿ

ಕುದುರೆ ನಡೆಯಿತು ಹಿಡಿದ ಹಾದಿಯಲಿ-ಗುರಿಯೊಂದೆ:
ಮುಕುಟಗಳ ತುಳಿದು ಕೋಶಗಳ ಬಾಚಿ
ಕೆಲಬಲದ ಮನ್ನೆಯರ ನಡುವೆ ಸಾಗುತ್ತ ರಾಜ
ಕನ್ನೆಯರ ಸೆಜ್ಜೆಮನೆಗಟ್ಟಿ, ಮುಂದೆ –

ಗಂಡೆದೆಯ ಬಲ ಇಳಿಸಿ, ಮಹಿಳೆಯರ ಹಣೆಯೊರೆಸಿ
ಮಂದಿಯನು ಮಂದೆಯನ್ನಾಗಿಸುತ್ತ
ವಿಜಯದ ಪತಾಕೆಯನು ಮೇಲೆ ಮೇಲಕ್ಕೆತ್ತಿ
ನೆತ್ತರಿನ ತಿಲಕವನು ಹಣೆಗೆ ಇಡಲು

ಕುದುರೆ ಓಡಿತು ಒಂದೆ ಉಸುರಲ್ಲಿ ರಾಜ್ಯಗಳ
ಕ್ರಮಿಸುತ್ತ ಸೋಲಿರದ ದಾರಿಯಲ್ಲಿ
ವರ್ತುಳದ ಚಲನೆಯಲಿ ಮುಂದೆ ಸಾಗಿದ್ದೆಷ್ಟು
ಉಳಿದದ್ದು ಎಷ್ಟು ಎಂಬುದೂ ಅರಿಯದೆ

ಖುರಪುಟದ ಜತೆಗೆ ಚಲಿಸುವ ಮಂದಿ-ಹಿಂಬದಿಯ
ಧೂಳ ತೆರೆಯಾಚೆ ಕೆಂಪಾದ ಹಾದಿ
ಆರ್ತ ಸ್ವರ ಮೀರುತ್ತ, ಒಳದನಿಯ ತುಳಿಯುತ್ತ
ನಿರ್ದಯೆಯ ಪಥದಲ್ಲಿ ಮುನ್ನಡೆಯುತ

ಸರ್ವೋಚ್ಚ ನಾಯಕನ ಸ್ಥಾನವನಾಕ್ರಮಿಸಿ
ಇಹದ ಭೋಗವನುಂಡು, ಪರಪದಕ್ಕೆ
ಲಗ್ಗೆಯನ್ನಿಕ್ಕುವುದು - ಎಲ್ಲವನು ಗೆಲ್ಲುತ್ತ
ಏಕಮೇವಾದ್ವಿತೀಯನೆನ್ನಿಸುವುದು

ಶತ್ರು, ಮಿತ್ರರು, ಬಂಧು, ಸೋದರರು, ಮಕ್ಕಳು
ಎಲ್ಲರೊಂದೇ -ಗೆಲುವ ಕಾಯಕದಲಿ
ಕರುಣೆಯೆಲ್ಲಿದ್ದೆ ಹಿರಿದ ಖಡ್ಗಕ್ಕೆ ? ಕಣ್ಣೆದುರು
ವಿಜಯ ಪಥ - ಕೊನೆಯಲ್ಲಿ ಹೊಳೆವ ಮುಕುಟ.

ಸರ್ವನಾಶದ ಕೊನೆಗೆ ವಿಜಯವಷ್ಟೇ ಉಳಿದು
ಮೂಳೆರಾಶಿಯ ಮೇಲೆ ಸಿಂಹಾಸನ
ಕೋಟಿ ಸೂರ್ಯರ ತೆರದಿ ಹೊಳೆದಿರಲು, ಕಂಗಳಲಿ
ರಕ್ತದಲಿ ತೋಯ್ದಿರುವ ಧ್ವಜದ ಬಿಂಬ.

ಎಲ್ಲವನು ತುಳಿದು ಓಡಿದ ಕುದುರೆ ತಲುಪಿತದೊ –
ಹಾದಿ ಕೊನೆಯಲಿ ಉರಿವ ಯಜ್ಞಕುಂಡ
ಸಂಬಂಧಗಳ ಕೊಂದ ನರಮೇಧದಂತ್ಯದಲಿ
ನಡೆವುದೊಂದೇ ಮುಂದೆ - ಅಶ್ವಮೇಧ !

**ಸುಬ್ರಾಯ ಚೊಕ್ಕಾಡಿ**
ಚೊಕ್ಕಾಡಿ - ೫೭೪೨೧೨ (ದಕ್ಷಿಣ ಕನ್ನಡ)

## ಭದ್ರತೆ

ಬಂದರೂ ಪ್ರಯೋಜನವಾಗಲಿಲ್ಲ
ಹೊಸ ಸಹಸ್ರಮಾನ
ಬದಲಾಗಲಿಲ್ಲ ಒಂದು ಎರಡು
ಮತ್ತು ಐದರ ನೋಟುಗಳ
ಜಾಯಮಾನ.
ಒಂದೊಂದು ಹೊಸ ನೋಟುಗಳ
ಸಂಗ್ರಹಿಸಿ ಮುಂದಿನ
ಪೀಳಿಗೆಗೆ ಪ್ರದರ್ಶಿಸಲು
ಮಾಡಬೇಕಾಗಿದೆ ಬಲು ಜೋಪಾನ !

ಎನ್. ಶ್ರೀನಿವಾಸ್, ದ್ವಿ. ದ. ಸ.
ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರ,
ವಿ. ಸಿ. ಫಾರಂ, ಮಂಡ್ಯ - ೫೭೧೪೦೫

## ಮಣ್ಣಿನ ಮಕರಂದ

ತೊಡದಿರು ಮತ್ತೆ ಮತ್ತೆ ಪರಿಹಾಸದ ಕ್ರೂರ ಬಾಣ
ಚುಚ್ಚದಿರು ನನ್ನ ಕೋಮಲ ಹೃದಯ,
ಅಳಲಲಿ ಮುದುಡಿ ಮುರುಟಿ ಹೋದವ ನಾನು
ನಾನಲ್ಲ ಪಂಡಿತ, ಶ್ರೀ ಸಾಮಾನ್ಯನು !

ನನಗಿಲ್ಲ ನಿನ್ನಂತೆ ವಾಗ್ದೇವಿಯ ವಾಚಾಳಿತನ
ಕೆಣಕದಿರು ನನ್ನ ವ್ಯಕ್ತಿತ್ವವನು –
ಗಟ್ಟಿ ಮಾಡುವವನಲ್ಲ ನಾನು, ನನಗಿಲ್ಲ ನೆನಪಿನ ಶಕ್ತಿ
ಹಂಗಿಸದಿರು ನೀನು ನನ್ನನ್ನು !

ಅವನು ಹಾಗೆ ಹೇಳಿದ, ಇವನು ಹೀಗೆ ಹೇಳಿದ
ಎಂದು ಬಾಯಿಬಡಿದು ಹಾಡಲಾರೆ
ಇದು ನನ್ನ ಅಭಿಮತ, ನನಗೆ ಅನಿಸುವುದೇ ಹೀಗೆ....
ನೇರ ಹೇಳುವುದೇ ನನ್ನ ಜಾಯಮಾನ.

ನನಗಿಲ್ಲ ನಿನ್ನಂತೆ ಪಾಂಡಿತ್ಯ ವಿದ್ವತ್ತು
ಶಿಷ್ಟ ಭಾಷೆಯ ಸಾವಿರದ ಕರಾಮತ್ತು
ನನ್ನದು ಜಾನಪದ ತಾಯಿ, ಹಳ್ಳಿ ಸೊಗಡು
ಈ ನೆಲದ ನುಡಿಗಟ್ಟು ನನ್ನ ಸಂಪತ್ತು !



ನಾನು ಬದುಕಿದ್ದೇ ಗ್ರಾಮೀಣ ಗಂಧ ಗಾಳಿಯಿಂದ
ನನಗೆ ಬೇಕಿಲ್ಲ ಪೇಟೆ ಅಂದ ಚೆಂದ ;
ನಾನರಿಯೆ ತಾಯಿ ಈ ಶಹರದ ಸುಂದರ ಭಾಷಾ ಛಂದ
ನನ್ನದೇನಿದ್ದರೂ ಮಣ್ಣಿನ ಮಕರಂದ !

**ಪ್ರೊ|| ದೊಡ್ಡರಂಗೇಗೌಡ**
'ಶ್ರೀ ಸನ್ನಿಧಿ', ೯೮/೧, ಎರಡನೇ ಅಡ್ಡರಸ್ತೆ, ಡಾ|| ಮಾಸ್ತಿ ರಸ್ತೆ
ಗವಿಪುರಂ ಬಡಾವಣೆ, ಬೆಂಗಳೂರು -೧೯

# ಶ್ರೀ ರಾಮಾಯಣದರ್ಶನದಲ್ಲಿ ವೈಜ್ಞಾನಿಕ ಹೊಳಹುಗಳು

ಜಿ. ಟಿ. ನಾರಾಯಣರಾವ್

ಸಾಹಿತ್ಯ ಕೃತಿಗಳಲ್ಲಿ ವೈಜ್ಞಾನಿಕ ಅಂಶಗಳು ಅನಾವಶ್ಯಕ, ಅಂತೆಯೇ ವಿಜ್ಞಾನಕೃತಿಗಳಲ್ಲಿ ಸಾಹಿತ್ಯ ಅಂಶಗಳು ವೃಥಾ ಹೊರೆ ಎಂಬ ಒಂದು ಮಿಥ್ಯಾ ಮನೋರೂಪಿಕೆ ನಮ್ಮ ಲೇಖಕ-ವಾಚಕ-ವಿಮರ್ಶಕರಲ್ಲಿರುವುದನ್ನು ಗಮನಿಸಿದ್ದೇನೆ. ಇದು ಆಯಾ ಪ್ರಕಾರಗಳ ಸೀಮಿತ ಜ್ಞಾನದಿಂದ ಮೂಡಿರುವ ಮತ್ತು ಸ್ವಂತ ಅಸಾಮರ್ಥ್ಯವನ್ನು ಮರೆಮಾಚಲು ಮನಸ್ಸು ತೊಡಿಸಿರುವ ಗವಸು ಮಾತ್ರ. ಹಾಗಾದರೆ ನಿಜಸ್ಥಿತಿ ಏನು ?

ನಮ್ಮ ಸಮಸ್ತ ಜ್ಞಾನವಿಜ್ಞಾನ ಕಲಾಪ್ರಕಾರಗಳಿಗೂ ಸ್ಫೂರ್ತಿ ಒದಗಿಸುವ ಸೆಲೆ ನಿಸರ್ಗ. ಮಾನವಮತಿಯು ನಿಸರ್ಗದ ಜೊತೆ ಅಂತರವರ್ತಿಸಿದಾಗ ಕುತೂಹಲ ಮೈದಳೆಯುತ್ತದೆ. ಮುಂದಿನ ಹಂತ ಅನ್ವೇಷಣೆ. ವ್ಯಕ್ತಿಯ ಅರಿವಿಗೆ ಬಾರದೇ ಇದು ಸೌಂದರ್ಯಾನ್ವೇಷಣೆಯಾಗಿ ಮಾರ್ಪಡುವುದೊಂದು ಚೋದ್ಯ.

ಅನ್ವೇಷಣೆಯ ಫಲ ಜ್ಞಾನ, ಸಿದ್ಧಿ ಸೌಂದರ್ಯ, ಮತ್ತು ಪುರುಷಾರ್ಥ ಆನಂದ. ಅನ್ವೇಷಕನ ಮಾನಸಿಕ ಸಂರಚನೆ, ಅಭೀಪ್ಸೆ, ಪ್ರತಿಭೆ, ಅಂತರ್ಬೋಧೆ ಮುಂತಾದವನ್ನು ಅನುಸರಿಸಿ ಈ ಜ್ಞಾನವನ್ನು ವ್ಯಾಪಕವಾಗಿ ಎರಡು ವರ್ಗಗಳಲ್ಲಿ ಅಳವಡಿಸಬಹುದು: ಕಲೆ, ವಿಜ್ಞಾನ.

ಅನ್ವೇಷಣೆಯ ಮಾರ್ಗದಲ್ಲಿ ಜೀವನಾನುಭವ, ಕಲ್ಪನೆ, ಪ್ರತಿಭೆ, ಮುಂತಾದವು ಮುಂಚೂಣಿಯಲ್ಲಿದ್ದರೆ ಕಲೆ ಮೈದಳೆಯುತ್ತದೆ. ಉದಾಹರಣೆಗೆ, ಸಂಗೀತ, ಕಾವ್ಯ, ಚಿತ್ರಣ, ನೃತ್ಯ, ಶಿಲ್ಪ ಮುಂತಾದವು. ಇವನ್ನು ಒಟ್ಟಾಗಿ ಸಾಹಿತ್ಯ ಎನ್ನುವುದುಂಟು. ಅಮೂರ್ತಭಾವಗಳನ್ನು ಯುಕ್ತ ಮಾಧ್ಯಮದ ಮೂಲಕ ಅಭಿವ್ಯಕ್ತಿಸಿ ಸೌಂದರ್ಯ ದರ್ಶಿಸಿ ಆನಂದಲೀನವಾಗುವುದು ಸಾಹಿತ್ಯದ ಉದ್ದೇಶ. ಈ ಆನಂದವನ್ನು ಭೌತಮಾನಕಗಳಿಂದ ಅಳೆಯಲಾರೆವು.

ಹೀಗಲ್ಲದೇ ಅನ್ವೇಷಣೆಯ ದಾರಿಯಲ್ಲಿ ಭೌತವಿಶ್ವದ ಜೊತೆಗಿನ ಒಡನಾಟ, ಪ್ರಯೋಗ, ತರ್ಕ, ಪ್ರತಿಭೆ, ಅಂತರ್ಬೋಧೆ ಮುಂತಾದವು ಅಭಿಪ್ರೇರಕಗಳಾಗಿದ್ದರೆ ಆಗ ವಿಜ್ಞಾನ ರೂಪುಗೊಳ್ಳುತ್ತದೆ. ಖಗೋಳವಿಜ್ಞಾನ, ಗಣಿತ, ಜೀವವಿಜ್ಞಾನ ಇತ್ಯಾದಿ ಬಗೆಗಳು ಈ ತೆರನಾಗಿ ಬೆಳಕಿಗೆ ಬಂದಿವೆ. ಅಧ್ಯಯನ ವಸ್ತು ಅಥವಾ ವಿಷಯ ಅವಲಂಬಿಸಿ ಈ ವಿಭಾಗಗಳಿವೆ. ವ್ಯಕ್ತಿಗೆ ತಾನು ಈ ಬೃಹದ್ವಿಶ್ವದ ಕಿಂಚಿದಂಶವನ್ನಾದರೂ ಅರ್ಥವಿಸಿ ವ್ಯಾಖ್ಯಾನಿಸಲು ಶಕ್ತನಾಗಿದ್ದೇನೆ ಎಂಬ ಕೃತಾರ್ಥ ಭಾವ ಒದಗಿಸುವ ಆನಂದವೇ ವಿಜ್ಞಾನ ಸಾಧನೆಯ ಪರಮ ಫಲ. ಸಾಹಿತ್ಯಮಾರ್ಗದಲ್ಲಿ ಲಭಿಸುವ ಆನಂದಕ್ಕೂ ವಿಜ್ಞಾನಮಾರ್ಗದಲ್ಲಿ ಸಿದ್ಧಿಸುವ ಆನಂದಕ್ಕೂ ಸಾಮಾನ್ಯವಾದದ್ದು ಏನಾದರೂ ಇದೆಯೇ ? ಈ ಮೂಲಭೂತ ಪ್ರಶ್ನೆಗೆ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಉತ್ತರ ಬರೆದಿದ್ದಾರೆ (೧೯೨೧):

''ಎಲ್ಲಿ ಪ್ರಪಂಚ ನಮ್ಮ ವೈಯಕ್ತಿಕ ಆಸೆ ಆಕಾಂಕ್ಷೆಗಳ ರಂಗಭೂಮಿ ಆಗುವುದು ಕೈದಾಗುವುದೊ ಎಲ್ಲಿ ಇದರೆದುರು ಮುಕ್ತ ಜೀವಿಗಳಾಗಿ ಇದನ್ನು ಮೆಚ್ಚುತ್ತ ಪ್ರಶ್ನಿಸುತ್ತ ಮತ್ತು ವೀಕ್ಷಿಸುತ್ತ ನಿಲ್ಲುವೆವೊ ಅಲ್ಲಿ ಕಲೆಯ (ಸಾಹಿತ್ಯ) ಮತ್ತು ವಿಜ್ಞಾನದ ಪ್ರಪಂಚವನ್ನು ಪ್ರವೇಶಿಸಿರುತ್ತೇವೆ. ನೋಡಿದ್ದನ್ನೂ ಅನುಭವಿಸಿದ್ದನ್ನೂ ತರ್ಕಶಾಸ್ತ್ರದ ಪರಿಭಾಷೆಯಲ್ಲಿ ಚಿತ್ರಿಸಿದ್ದಾದರೆ ಆಗ ವಿಜ್ಞಾನದಲ್ಲಿ ಉದ್ಯುಕ್ತರಾಗಿರುತ್ತೇವೆ. ಜಾಗೃತ ಮನಸ್ಸಿಗೆ ಅಪ್ರವೇಶ್ಯವಾಗುವ ಅಂತರ್ಬೋಧೆಯಿಂದ ಅರ್ಥಪೂರ್ಣ ವಾದದ್ದೆಂಬುದಾಗಿ ಪರಿಗಣಿಸಲ್ಪಡುವ ರೂಪಗಳ ಮೂಲಕ ಅದನ್ನು ಸಂವಹನಿಸಿದ್ದಾದರೆ ಆಗ ಕಲೆಯಲ್ಲಿ (ಸಾಹಿತ್ಯದಲ್ಲಿ) ಉದ್ಯುಕ್ತರಾಗಿರುತ್ತೇವೆ. ವೈಯಕ್ತಿಕ ಕಾಳಜಿ ಮತ್ತು ಸಂಕಲ್ಪಗಳಿಗೆ ಅತೀತವಾದ ಆ ಯಾವುದೋ ಒಂದರ ಬಗೆಗಿನ ಸಪ್ರೇಮ ನಿಷ್ಠೆಯೇ ಇವೆರಡಕ್ಕೂ ಸಾಮಾನ್ಯವಾದದ್ದು.''

ಸಾಹಿತ್ಯದಿಂದ ಏನು ಪ್ರಯೋಜನ ಎಂಬ ಪ್ರಶ್ನೆಗೆ ಉತ್ತರ : ಸೌಂದರ್ಯಾನುಭೂತಿ, ಮತ್ತು ಇದರಿಂದ ಪ್ರಾಪ್ತವಾಗುವ ಆನಂದ. ವಿಜ್ಞಾನ ಕುರಿತಂತೆಯೂ ಈ ಉತ್ತರ ಅಷ್ಟೇ ಸಾಧು. ಈ ತೀರ್ಮಾನಕ್ಕೆ ತುಸು ವಿವರಣೆ ಅಗತ್ಯ. ಆ ಮೊದಲು ವಿಜ್ಞಾನಿಯ ದೃಷ್ಟಿಯಲ್ಲಿ ಸೌಂದರ್ಯ ಎಂದರೇನೆಂದು ಪರಿಶೀಲಿಸೋಣ. ಆನ್ರೀ ಪ್ವಾನ್‌ಕ್ವಾರೇ (೧೮೫೪-೧೯೧೨) ಎಂಬ ಗಣಿತ-ಭೌತ ವಿಜ್ಞಾನಿ ವಿವರಣೆ ನೀಡಿದ್ದಾರೆ :

''ನಿಸರ್ಗ ಪ್ರಯೋಜನಕಾರಿ ಎಂಬುದಕ್ಕಾಗಿ ವಿಜ್ಞಾನಿ ಅದನ್ನು ಅಧ್ಯಯನಗೈಯುವುದಿಲ್ಲ; ಅವನು ಅದನ್ನು ಅಧ್ಯಯನಗೈಯುವುದು ಅದರಲ್ಲಿ ಅವನಿಗೆ ಆನಂದ ಲಭಿಸುವುದರಿಂದ; ಅದರಲ್ಲಿ ಅವನಿಗೆ ಆನಂದ ಲಭಿಸುವುದು ಅದು ಸುಂದರವಾಗಿರುವುದರಿಂದ. ನಿಸರ್ಗ ಸುಂದರವಾಗಿರದಿದ್ದರೆ ಅದನ್ನು ತಿಳಿಯುವುದು ನಿಷ್ಪ್ರಯೋಜಕವಾಗಿರುತ್ತಿತ್ತು; ನಿಸರ್ಗವನ್ನು ತಿಳಿಯುವುದು ನಿಷ್ಪ್ರಯೋಜಕವಾಗಿದ್ದರೆ ಬದುಕು ಅರ್ಥಹೀನವಾಗಿರುತ್ತಿತ್ತು. ಇಂದ್ರಿಯಗಳಿಗೆ ಗೋಚರವಾಗುವ ಸುಂದರತೆಯನ್ನು - ಅಂದರೆ ಗುಣಗಳ ಮತ್ತು ತೋರಿಕೆಗಳ ಬಾಹ್ಯ ಸುಂದರತೆಯನ್ನು - ನಾನಿಲ್ಲಿ ಪ್ರಸ್ತಾವಿಸುತ್ತಿಲ್ಲವೆಂಬುದು ಸ್ಪಷ್ಟ; ಆ ಸೌಂದರ್ಯವನ್ನು ಕಡೆಗಣಿಸುವೆನೆಂದಲ್ಲ, ಅದೆಂದೂ ನನ್ನ ಉದ್ದೇಶ ಅಲ್ಲ; ಆದರೆ ಅದಕ್ಕೆ ವಿಜ್ಞಾನದ ಜೊತೆ ಏನೂ ವ್ಯವಹಾರವಿಲ್ಲ; ಬದಲು, ನನ್ನ ಮನಸ್ಸಿನಲ್ಲಿರುವುದು ಭಾಗಗಳ ಸುಸಂಗತ ಮೇಳನದಿಂದ ಲಭಿಸುವ, ಮತ್ತು ಪರಿಶುದ್ಧ ಪ್ರತಿಭೆಗೆ ಗ್ರಾಹ್ಯವಾಗುವ ಆ ಗಹನತರಸೌಂದರ್ಯ.'' *(I mean that profounder beauty which comes from the homogeneous order of the parts, and which a pure intelligence can grasp.)*

ಸೌರವ್ಯೂಹದಲ್ಲಿಯ ಗ್ರಹಗಳ ತೋರ್ಕೆ ಎಡ್ಡ ತಿಡ್ಡ ಚಲನೆಗಳ ತಳರೂಪಿಕೆಯಾದ ಗಣಿತವನ್ನು - ಅಂದರೆ ಗ್ರಹಚಲನ ನಿಯಮಗಳನ್ನು - ಆವಿಷ್ಕರಿಸಿದ ಯೋಹನ್ ಕೆಪ್ಲರ್ (೧೫೭೧-೧೬೩೦) ಉದ್ಗರಿಸಿದ್ದಾರೆ : ''ಸುಂದರತೆಯ ತಳರೂಪಿಕೆ ಗಣಿತ.'' *(Mathematics is the archetype of the beautiful.)* ಇಲ್ಲಿ 'ಸುಂದರತೆ' ಎಂದರೆ ಆಂತರಂಗಿಕ ಶಾಶ್ವತ 'ಸೌಂದರ್ಯ'ದ ಪ್ರಕಟಿತ ರೂಪ ಎಂದರ್ಥ. ಸುಂದರತೆಯು ಇಂದ್ರಿಯಗೋಚರ, ಸೌಂದರ್ಯವಾದರೋ ಭಾವಗಮ್ಯ. ಇದೇ ರೀತಿ *the true* ಎಂದರೆ ಋತ; ಇದು ಇಂದ್ರಿಯಗೋಚರ ವಾಸ್ತವತೆ; *truth* ಎಂದರೆ ಸತ್ಯ, ಇದು ಭಾವಗಮ್ಯ ಶಾಶ್ವತತೆ. ಗಣಿತವಿದ ಹರ್ಮನ್ ವೈಲ್ (೧೮೮೫-೧೯೫೫) ಬರೆದಿದ್ದಾರೆ: ''ನನ್ನ ಕೃತಿ ಸದಾ ಋತವನ್ನು *(the true)* ಸುಂದರತೆ *(the beautiful)* ಜೊತೆ ಸಂಯೋಜಿಸಲು ಪ್ರಯತ್ನಿಸುತ್ತದೆ. ಆದರೆ ಒಂದು ಅಥವಾ ಇನ್ನೊಂದನ್ನು ಆಯುವುದು ಅನಿವಾರ್ಯ ಎಂದಾದಾಗ ನಾನು ಸಾಧಾರಣವಾಗಿ ಸುಂದರತೆಗೆ ಒಲಿಯುತ್ತೇನೆ.''

ಅಂದಮೇಲೆ ಕಲಾವಿದನೂ ವಿಜ್ಞಾನಿಯೂ ಮೂಲತಃ ಸೌಂದರ್ಯಾನ್ವೇಷಕರು ಎನ್ನುವುದು ಸ್ಪಷ್ಟ. ಗುರಿ ಒಂದೇ, ದಾರಿಗಳು ಬೇರೆಬೇರೆ. ಈ ದಾರಿಗಳು ಪರಸ್ಪರ ಪೂರಕ ಪೋಷಕಗಳಾಗಿ ಅಭಿಗಮಿಸುತ್ತಿರಬೇಕಾದದ್ದು ಸಹಜ ಕ್ರಮ. ಆದ್ದರಿಂದ ಒಂದು ಉತ್ಕೃಷ್ಟ ಸಾಹಿತ್ಯ ಕೃತಿಯಲ್ಲಿ ವೈಜ್ಞಾನಿಕಾಂಶಗಳೂ ಅಂತೆಯೇ ಒಂದು ಶ್ರೇಷ್ಠ ವಿಜ್ಞಾನ ಕೃತಿಯಲ್ಲಿ ಸಾಹಿತ್ಯಾಂಶಗಳೂ ಲಕಲಕಿಸುತ್ತಿರಬೇಕು. ಎಲ್ಲಿ ಈ ಸಹಜ ವಿಕಾಸಮಾರ್ಗಕ್ಕೆ ವಿಘ್ನ ಒದಗುವುದೋ ಅಲ್ಲಿ ಎರಡೂ ಸೊರಗುತ್ತವೆ ಎಂಬ ಸಂಗತಿ ಇತಿಹಾಸದ ಅವಲೋಕನದಿಂದ ತಿಳಿದುಬರುತ್ತದೆ. ಎಂದೇ ಈ ಮುಂದಿನ ಸೂಕ್ತಿ : ಸಾಹಿತ್ಯರಹಿತ ವಿಜ್ಞಾನ ಬರಡು, ವಿಜ್ಞಾನರಹಿತ ಸಾಹಿತ್ಯ ಕುರುಡು.

ಸಾಹಿತ್ಯಸಹಿತ ವಿಜ್ಞಾನಕ್ಕೆ ಶ್ರೇಷ್ಠ ನಿದರ್ಶನ ಆರ್. ಎಲ್. ನರಸಿಂಹಯ್ಯನವರ (೧೯೦೦-೭೯) ವಿಜ್ಞಾನ ಕೃತಿಗಳು, ವಿಜ್ಞಾನಸಹಿತ ಸಾಹಿತ್ಯಕ್ಕೆ ಉತ್ಕೃಷ್ಟ ನಿದರ್ಶನ ಕುವೆಂಪು (೧೯೦೪-೯೪) ಅವರ ವಾಙ್ಮಯ.

- ೨ -

ಆಧುನಿಕ ವಿಜ್ಞಾನಯುಗದ ಒಬ್ಬ ಮಹಾಕವಿಯ ರಚನೆಯಲ್ಲಿ ಸಮಕಾಲೀನ ವೈಜ್ಞಾನಿಕ ಪರಿಕಲ್ಪನೆಗಳ ಪ್ರಭಾವವನ್ನು ನಿರೀಕ್ಷಿಸುವುದು ಸಹಜ. ಆದರೆ ಕಾವ್ಯವಸ್ತು

''ಇತಿಹಾಸ ದೃಷ್ಟಿಗಸ್ಪಷ್ಟ ಪ್ರಾಚೀನ'' ಕಾಲದ್ದಾಗಿದ್ದರೆ ಆಗ ಕವಿಗೆ ತನ್ನ ವೈಜ್ಞಾನಿಕ ಜ್ಞಾನವನ್ನು ಕಾವ್ಯದಲ್ಲಿ ಬಳಸಿಕೊಳ್ಳುವಾಗ ಪೂರ್ಣ ಸ್ವಾತಂತ್ರ್ಯವಿರುವುದಿಲ್ಲ. ಉದಾಹರಣೆಗೆ, ರಾಮಾಯಣ ಯುದ್ಧ ವರ್ಣನೆಯಲ್ಲಿ ಆಧುನಿಕ ಅಸ್ತ್ರಗಳ ಇಲ್ಲವೇ ಸಮರ ತಂತ್ರಗಳ ಪ್ರತ್ಯಕ್ಷ ನಿರೂಪಣೆ ಬಂದರೆ ಅದು ಆಭಾಸ ಎನಿಸೀತು. ಈ ಅಲಂಕಾರದೋಷ ನಿವಾರಿಸಲು ವಿಜ್ಞಾನೋಪಮೆಗಳನ್ನೂ ವಿಜ್ಞಾನದ ಪಾರಿಭಾಷಿಕ

## ಹೊಸತಿಗೆ ಹೊಸ ಭಾಷ್ಯ

ಬೆಳ್ಮುಗಿಲ ಸೂರಿನಲಿ ರಶ್ಮಿ ರಾಜ ತೇರಿನಲಿ
ಹೊಂಬಣ್ಣ ಬಳಿಯುತ್ತಾ ಕಿರಣ ರಂಗೋಲಿ ಬರೆಯುತ್ತಾ
ಹೂ ಹಸಿರ ನಗಿಸುತ್ತಾ ನಿಶೆ ಅಂಕ ಮುಗಿಸುತ್ತಾ
ಅತಿತ್ತ ಋಗಮಗಿಸಿ ಬಿಸಿಲ ಕೊಡೆ ಪ್ರಜ್ವಲಿಸಿ
ಹಕ್ಕಿ ಪಕ್ಕಿ ಮೇಳದಲಿ ಲೆಕ್ಕವಿರದ ವೇಗದಲಿ
ಬಾಂದಳದ ಕದ ತೆರೆದು ಬೆಳಬೆಳಗಿ ಬರುವಾಗ-

ಜಾಮೂನು ನುಣುಪಿನ ಇಳೆ ನಾಚಿ ನೀರಾಗಿ
ಹಿಮ ಹರ್ಮ್ಯ ಹಸಿ ಕರಗಿ
ಕೊರೆವ ಚಳಿ ಮರೆಯಾಗಿ–

ಸರ್ವತ್ರಹೊಸತು; ಬಿಟ್ಟಕಣ್ಣೂ ಹೊಸತು
ಕೊಟ್ಟ ನೋಟ ಹೊಸತು; ಹಕ್ಕಿ ಹಾಡೂ ಹೊಸತು !



'ಅಮ್ಮ'ನ ಅರ್ಥ ಹೆಂಡತಿ 'ಸ್ವಾರ್ಥ'
ಮಗನ ಪ್ರೇಮ ಪಾತ್ರ, ಮಗಳ ಓದಿನ ಚಿತ್ರ
ಕವಿಯ ಕವಿತೆಯ ಸೂತ್ರ..... ಎಲ್ಲ ಹೊಸತು !

ಬೆಳ್ಮುಗಿಲಲ್ಲಿ ಬಿಸಿಲ ಕಾವ್ಯ
ಹೂಗಿಡದಲ್ಲಿ ಪಕಳೆ ಪಲ್ಲವಿಸಿದ ಸೌಂದರ್ಯ
ಸೂರ್ಯ ಬರುವ ಗತ್ತಿನಲ್ಲಿನ ಗಾಂಭೀರ್ಯ
ಹಕ್ಕಿಯ ನಾದಮಯ ತೂರ್ಯ
ಹಿಮ ಕರಗಿ ಆವಿಯಾದ ಆಶ್ಚರ್ಯ
ಎಲ್ಲವೂ ಹೊಸತು ನೋಡುವ ಕಣ್ಣಲ್ಲಿ
ಕವಿತೆಯ ಮಾತೂ ಹೊಸತು ಲೇಖನಿಯ ತುದಿಯಲ್ಲಿ !

ಪ್ರೊ॥ ದೊಡ್ಡರಂಗೇಗೌಡ
'ಶ್ರೀ ಸನ್ನಿಧಿ', ೯೮/೧, ಎರಡನೇ ಅಡ್ಡರಸ್ತೆ, ಡಾ॥ ಮಾಸ್ತಿ ರಸ್ತೆ, ಗವಿಪುರಂ
ಬಡಾವಣೆ, ಬೆಂಗಳೂರು -೧೯

ಪದಗಳನ್ನೂ ರಸಸುಖದ ಹದ ಕೆಡದಂತೆ ಬಳಸುವ ಸ್ವಾತಂತ್ರ್ಯ ಕವಿಗುಂಟು; ರಸಸುಖ ವರ್ಧಿಸಿದರೆ ಅತ್ಯುತ್ತಮ. 'ಶ್ರೀ ರಾಮಾಯಣದರ್ಶನ'ದಲ್ಲಿ ಕವಿ ಇದನ್ನು ಹೇಗೆ ಸಾಧಿಸಿದ್ದಾರೆ ಮತ್ತು ಸಮಗ್ರ ಕಾವ್ಯವಸನಕ್ಕೆ ದೃಢತೆ ಸೌಂದರ್ಯಗಳ ಒಪ್ಪವಿತ್ತಿದ್ದಾರೆ ಎಂಬ ಅಧ್ಯಯನ ತುಂಬ ಆಪ್ಯಾಯಮಾನ ಅನುಭವ. ಆಯ್ದ ಕೆಲವು ನಿದರ್ಶನಗಳ ಮೂಲಕ ಈ ಅಂಶವನ್ನು ಸ್ಪಷ್ಟಪಡಿಸಬಯಸುತ್ತೇನೆ. (ಆಸಕ್ತರು ''ಕುವೆಂಪು ಅಭಿನಂದನ ಗ್ರಂಥ ಸಹ್ಯಾದ್ರಿ''ಯಲ್ಲಿ, ೧೯೭೫, ಪ್ರಕಟವಾಗಿರುವ ನನ್ನ ಲೇಖನವನ್ನು ಗಮನಿಸಬಹುದು.)

೧. ಅಯೋಧ್ಯಾಸಂಪುಟ ಸಂಚಿಕೆ ೧ ಸಾಲುಗಳು ೨೪೬-೨೪೯, ಮತ್ತು ಸಂಚಿಕೆ ೩ ಸಾಲುಗಳು ೧೩೧-೧೩೪ ಗಮನಿಸಿ :

*ನೆಲದಲ್ಲಿ ಬಾನಲ್ಲಿ*
*ಕಡಲು ಕಾಡುಗಳಲ್ಲಿ ಪಕ್ಕಿಮಿಗ ಪುಲ್ಗಳಲಿ*
*ಆರ್ಯರಲಿ ಮೇಣ್ ಅನಾರ್ಯರಲಿ, ಕೇಳ್, ವಿಶ್ವಮಂ*
*ಸರ್ವತ್ರ ತುಂಬಿದಂತರ್ಯಾಮಿ ಚೇತನಂ ತಾಂ*
*ಪ್ರೇಮಾತ್ಮವಾಗಿರ್ಪುದು*
*ನೆಯ್ದಾಳುತಿದೆ ಜಗವನೊಂದತಿ ವಿರಾಣ್ಮನಂ*
*ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ*
*ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯ ಭಾವಮಂ*
*ನೀಡಿ*

ಭೌತ ವಿಶ್ವವನ್ನು ಸರ್ವತ್ರ ವ್ಯಾಪಿಸಿ ಅದರ ವರ್ತಮಾನ ವಿನ್ಯಾಸವನ್ನು ರೂಪಿಸಿರುವ ಮತ್ತು ಭವಿಷ್ಯವನ್ನು ನಿರ್ಧರಿಸುವ ಗುರುತ್ವಾಕರ್ಷಣ ಬಲವನ್ನು ಈ ಸಾಲುಗಳಲ್ಲಿಯ ''ಅಂತರ್ಯಾಮಿ ಚೇತನಂ'' ಪ್ರತೀಕಿಸುತ್ತದೆ. ಪ್ರೇಮ ಅಮೂರ್ತವಾಗಿ ವ್ಯಕ್ತಿಗಳನ್ನು ಹೇಗೋ ಹಾಗೆ ಗುರುತ್ವ ಮೂರ್ತವಾಗಿ ವಸ್ತುಗಳನ್ನು ಹತ್ತಿರಕ್ಕೆ ಸೆಳೆಯುವ ಬಲ. ''ನೆಯ್ದಾಳುತಿದೆ'' ಎಂದು ತೊಡಗುವ ಸಾಲುಗಳು ಗುರುತ್ವ ನಿಯಮವನ್ನು ಧ್ವನಿಸುತ್ತವೆ. ಭೂಮಿಯ ಮೇಲೆ ಸ್ವೇಚ್ಛೆಯಂತೆ ಸಂಚರಿಸಬಲ್ಲೆವು ಎಂಬ ಭ್ರಾಂತಿ ನಮ್ಮಲ್ಲಿದೆ. ಆದರೆ ಕಡಿದಾದ ಚಡಾವು ಹತ್ತುವಾಗ ನಮ್ಮ ಸಂಚಾರ ಸ್ವಾತಂತ್ರ್ಯ ಅದೆಷ್ಟು ಸೀಮಿತ ಎಂಬುದು ಅರಿವಿಗೆ ಬರುತ್ತದೆ. ಇನ್ನು ಎತ್ತರಕ್ಕೆ ನೆಗೆದಾಗ, ಹೇಗೆ ಲಾಗ ಹೊಡೆದರೂ ''ಪ್ರೇಮಾತ್ಮವಾಗಿ''ರುವ ನೆಲಕ್ಕೇ ಬೀಳುವುದರಿಂದ, ನಮ್ಮ ಪಾರತಂತ್ರ್ಯದ ಬಿಸಿ ಚೆನ್ನಾಗಿ ಬರೆ ಕಾಸುತ್ತದೆ. ಭೂಮಿಯ ಸಮೀಪತಮ ಆಕಾಶಕಾಯ ಚಂದ್ರನಲ್ಲಿಗೆ ಹೋಗಬೇಕಾದರೂ ನಾವು ಸಾಧಿಸಬೇಕಾದ ಮಹಾವೇಗ ಹಾಗೂ ತಾಂತ್ರಿಕಪ್ರಗತಿ ಯಾವ ಪ್ರಮಾಣದ ವೆಂಬುದನ್ನು ಗಮನಿಸುವಾಗ ನಮ್ಮ ದಾಸ್ಯದ ಪೂರ್ಣ ಅರಿವು ಮೂಡುವುದು. ಹೀಗೆ ಗುರುತ್ವ ನಮಗೆ ''ಇಚ್ಛೆಯಾ ಸ್ವಾತಂತ್ರ್ಯ ಭಾವಮಂ ನೀಡಿ'' ನಮ್ಮನ್ನು ಭೂಮಿಗೆ ''ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿ'' ಹಾಕಿದೆ.

೨. ಅಯೋಧ್ಯಾ ಸಂಪುಟ ಸಂಚಿಕೆ ೨ ಸಾಲುಗಳು ೨೮೫-೨೮೭ ಮತ್ತು ಕಿಷ್ಕಿಂಧಾ ಸಂಪುಟ ಸಾಲುಗಳು ೨೬೩-೨೬೪ ಗಮನಿಸಿ:

*ದಿವ್ಯ ಮಾಯಾಶಿಲ್ಪಿ*
*ಕಲ್ಪನಾ ದೇವಿಯಂ ಕಲ್ಲ ಸೆರೆಯಿಂ*
*ಬಿಡಿಸಿ ಕೃತಿಸಿದನೆನಲ್*
*ಮಿಥ್ಯೆ ಬಿರಿಯಲ್ಕೆ*
*ಸತ್ಯಂ ಪ್ರತ್ಯಕ್ಷಮಪ್ಪಂತೆವೋಲ್*

ಮೊದಲ ಮೂರು ಸಾಲುಗಳ ಹಿನ್ನೆಲೆ ಚಿತ್ರವಿದು : ಶ್ರೀ ರಾಮನ ಪಾದಸ್ಪರ್ಶದಿಂದ ''ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ,'' ಮತ್ತು ಅದರಿಂದ ಉದ್ಭವಿಸಿ ''ರಘುತನೂಜನಡಿದಾವರೆಗೆ ಹಣೆಮಣಿದು ನಿಂದುದೂರ್ವ ತಪಸ್ವಿನೀ ವಿಗ್ರಹಂ.'' ಅಹಲ್ಯೋದ್ಧರಣದ ಈ ಸನ್ನಿವೇಶವನ್ನು ಕವಿ ಇನ್ನೊಂದು ದೃಷ್ಟಿಯಿಂದ ನೋಡುತ್ತ ಮೇಲೆ ಉಲ್ಲೇಖಿಸಿರುವ ಸಾಲುಗಳನ್ನು ಬರೆದಿದ್ದಾರೆ : ಬಂಡೆಯನ್ನು ಕಂಡರಿಸಿದಾಗ ವಿಗ್ರಹ ದೊರೆಯುತ್ತದೆ, ನಿಜ; ವಾಸ್ತವವಾಗಿ ಬಂಡೆಯಲ್ಲಿ ಈ ವಿಗ್ರಹ ಅಂತಃಸ್ಥವಾಗಿತ್ತು, ಶಿಲ್ಪಿ ಶ್ರೇಷ್ಠನೊಬ್ಬನಿಗೆ ಮಾತ್ರ ಇದನ್ನು ಗುರುತಿಸಿ ಅನಾವರಣಿಸುವುದು - ''ಮಿಥ್ಯೆ ಬಿರಿಯಲ್ಕೆ ಸತ್ಯಂ

ಪ್ರತ್ಯಕ್ಷಮಪ್ಪಂತೆವೋಲ್'' - ಸಾಧ್ಯವಾಯಿತು. ಶ್ರೀ ರಾಮನಾದರೂ ಸಲ್ಲಿಸಿದ್ದು ಇದೇ ಕಲಾಕೈಂಕರ್ಯವನ್ನು ಎಂಬುದು ಇಲ್ಲಿಯ ಧ್ವನಿ. ಹೀಗೆ ಮೂಡಿಬಂದ ಕೃತಿಗೆ (ಅಹಲ್ಯೆ) ಶ್ರೀ ರಾಮ ನಿರಪೇಕ್ಷ ಭಕ್ತಿಯಿಂದ ನಮಿಸುತ್ತಾನೆ, ಹೇಗೆಂದರೆ ''ತನ್ನ ಕಾವ್ಯಕೆ ತಾಂ ಮಹಾಕವಿ ಮಣಿಯುವಂತೆ !'' ಸತ್ಯದ ಸಾಕ್ಷಾತ್ಕಾರವಾಗುವ ಸಮಸ್ತ ಕ್ಷೇತ್ರಗಳಿಗೂ ಸಾರ್ವತ್ರಿಕವಾಗಿ ಅನ್ವಯವಾಗುವ ಭಾವವಿದು.

ಉದಾಹರಣೆಗೆ, ಸೌರವ್ಯೂಹದ ಆದಿಯಿಂದಲೂ - ಸುಮಾರು ೫,೦೦೦,೦೦೦,೦೦೦ ವರ್ಷಗಳಷ್ಟು ಭೂತಕಾಲದಲ್ಲಿ - ಭೂಮಿ, ಚಂದ್ರ ಮುಂತಾದ ಗ್ರಹೋಪಗ್ರಹಗಳು ಸೂರ್ಯನನ್ನು ಪರಿಭ್ರಮಿಸುತ್ತಿರುವುದು ವಾಸ್ತವತೆ. ಆದರೆ ಜನ ಕಂಡದ್ದು, ಇಂದಿಗೂ ಕಾಣುವಂತೆ, ಭೂಮಿಯನ್ನು ಪರಿಭ್ರಮಿಸುತ್ತಿರುವ ವಿಶ್ವವನ್ನು. ಆದ್ದರಿಂದ ಅಂದಿನ ವಿಜ್ಞಾನಿಗಳನ್ನೂ ಒಳಗೊಂಡಂತೆ ಸಮಸ್ತರೂ ವಿಶ್ವಕೇಂದ್ರವೆಂದರೆ ಅಚಲವಾಗಿರುವ ನಮ್ಮ ಭೂಮಿಯೇ ಎಂದು ತೀರ್ಮಾನಿಸಿದ್ದರು. ಹೀಗೆ ಸತ್ಯ ''ಕಲ್ಲ ಸೆರೆ''ಯಲ್ಲಿ ಬಂದಿಯಾಗಿತ್ತು. ಇದನ್ನು ವಿಮೋಚನೆಗೊಳಿಸಿ ಸೂರ್ಯಕೇಂದ್ರವಾದವನ್ನು ''ಕೃತಿಸಿದ''ವ, ಆದ್ದರಿಂದ ಭೂಕೇಂದ್ರವಾದವನ್ನು ತರಿದೊಗೆದವ, ನಿಕೊಲಾಸ್ ಕೊಪರ್ನಿಕಸ್ (೧೪೭೩-೧೫೪೩) ಎಂಬ ''ದಿವ್ಯ ಮಾಯಾ ಶಿಲ್ಪಿ''. ಇಂಥ ಒಬ್ಬೊಬ್ಬ ವಿಜ್ಞಾನಿಯೂ ಒಬ್ಬೊಬ್ಬ ಮಹಾಕವಿಯೇ, ಅವನ ಒಂದೊಂದು ಕೃತಿಯೂ ಮಹಾಕಾವ್ಯವೇ.

ತರುವಾಯದ ಎರಡು ಸಾಲುಗಳನ್ನು ಓದುವಾಗ 'ಮಿಥ್ಯೆ'' ಎಂದರೆ ಸುಳ್ಳು ಎಂದು ಅರ್ಥಮಾಡಬಾರದು, ಸತ್ಯಕ್ಕೂ ನಮಗೂ ನಡುವೆ ನಮ್ಮ ಮಿತಜ್ಞಾನ ಅಥವಾ ಅಜ್ಞಾನದ ಕಾರಣವಾಗಿ ಕವಿದಿರುವ ಮಾಯೆಯ ಮುಸುಕೆಂದು ತಿಳಿಯಬೇಕು. ಈಶಾವಾಸ್ಯ ಉಪನಿಷತ್ತಿನಲ್ಲಿಯ ಪ್ರಸಿದ್ಧ ಶ್ಲೋಕವನ್ನೂ ಡಿವಿಜಿ ಯವರ ಅನುವಾದವನ್ನೂ ಗಮನಿಸಬಹುದು :

*ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್*
*ತತ್ತ್ವಂ ಪೂಷನ್ನಪಾವೃಣು ಸತ್ಯ ಧರ್ಮಾಯ ದೃಷ್ಟಯೇ*
*ಹೊನ್ನ ತಟ್ಟೆಯ ಕವಿದು, ಪೋಷಕನೆ ಓ ಸೂರ್ಯ*
*ನಿನ್ನೊಳಿಹ ಸತ್ಯದಾನನವ ಮರೆಯಿಸಿಹೆ*
*ನನ್ನಿಯಿಂ ತೆಗೆಯದನು ಸತ್ಯದೊಳ್ ಮನವನೆಗೆ*
*ಎನ್ನ ಕಣ್ಗದ ತೋರು, ಧರ್ಮಬೀಜವದು.*

ವಿಜ್ಞಾನದಲ್ಲಿ ಮುಸುಕುತೆಗೆದು ನಸುಕು ಹರಿಸುವುದೆಂದರೇನು ? ಆವಿಷ್ಕರಣ ಮುಹೂರ್ತದ ತನಕ ಸಂಗೃಹೀತವಾದ ಮಾಹಿತಿ, ಆ ವೇಳೆಗೆ ಎಲ್ಲಿಂದಲೋ ರಂಗಪ್ರವೇಶಿಸುವ ಒಬ್ಬ ವಿಜ್ಞಾನಸೀಮಾಪುರುಷನಿಗೆ, ಅದಮ್ಯ ಪ್ರೇರಣೆ ನೀಡುತ್ತದೆ. ಆತ ''ನಶ್ವರದ ಹೃದಯ'' ಭೇದಿಸಿ ಸತ್ಯವನ್ನು ಸಾಕ್ಷಾತ್ಕಾರಗೊಳಿಸುತ್ತಾನೆ - ಕೆಪ್ಲರನ ನುಡಿಗಳಲ್ಲಿ ''ಭಗವಂತನ ಗ್ರಂಥ''ದ ಕೆಲವೇ ಸಾಲುಗಳನ್ನಾದರೂ ಸ್ಫುಟವಾಗಿ ಓದುತ್ತಾನೆ.

೩. ಕಿಷ್ಕಿಂಧಾ ಸಂಪುಟ ಸಂಚಿಕೆ ೭ ಸಾಲು ೨೩೮ ಗಮನಿಸಿ :

*ಗ್ರಹದ ನಿಷ್ಠೆಯನೇಕೆ ನಿಷ್ಠೆ ಮಾಡುವೆ ರವಿಗೆ ?*

ರಾವಣ-ಮಂಡೋದರಿ ಸಲ್ಲಾಪದ ಸನ್ನಿವೇಶ. ಇದರ ಒಳದನಿ ವಿಷಾದ. ತಾನು ತನ್ನ ಪತಿಯ ಬಗ್ಗೆ ತಳೆದಿರುವ ನಿಷ್ಠೆಗೆ ಸಂವಾದಿಯಾಗಿ ಪತಿಯಿಂದ ತನಗೆ ಅದೇ ಮಟ್ಟದ ನಿಷ್ಠೆ ವ್ಯಕ್ತವಾದರೆ ಅದೆಂಥ ಪರಮ ಭಾಗ್ಯ ಎಂಬುದು ಮಂಡೋದರಿಯ ಆಶಯ. ಆದರೆ ರಾವಣನ ಬಾಯಿಯಿಂದ ಹೊರಡುವ ಮಾತಿದು. ಸೌರವ್ಯೂಹದಲ್ಲಿ ಸೂರ್ಯನಿಗೂ ಇತರ ಎಲ್ಲ ಕಾಯಗಳಿಗೂ ನಡುವೆ ಇರುವ ಸಂಬಂಧ ಹೇಗಿದೆ ? ಸ್ವಂತ ಅಸ್ತಿತ್ವವನ್ನು ರಕ್ಷಿಸಿಕೊಳ್ಳುವ ಸಲುವಾಗಿಯೇ ಪ್ರತಿಯೊಂದು ಕಾಯವೂ ಸೂರ್ಯನ ಸುತ್ತ ನಿರಂತರವಾಗಿ ಪರಿಭ್ರಮಿಸುತ್ತಲೇ ಇರಬೇಕು. ಆದರೆ ಸೂರ್ಯ ? ಸ್ವಯಂಭು, ಇತರ ಕಾಯಗಳಿಂದ ಅಬಾಧಿತ. ರಾವಣನ ಮಾತಿನ ಅರ್ಥವಿದು.

೪. ಶ್ರೀ ಸಂಪುಟ ಸಂಚಿಕೆ ೧ ಸಾಲುಗಳು ೧೭೭- ೧೮೧, ೨೦೯-೨೧೦ ಮತ್ತು ೨೫೮-೨೬೩ ಗಮನಿಸಿ :

*ಕುಂಭಕರ್ಣನನೆಬ್ಬಿಸುವರೆ ! ಹಾ !*
*ಪ್ರಳಯಫಣಿಯಂ ನಿದ್ದೆಗೆಡಿಪರೆ ! ಅವೇಳೆಯೊಳ್*
*ಹಬ್ಬಗೆಯ್ವರೆ ಜಗವನಾಮಿಳ್ತು ಪೆಬ್ಬುಲಿಗೆ !*
*ಮುಂದೆ ಗತಿ ಏನೆಂತೊ ತಮಗೆಂದು ಗುಜುಗುಜಿಸಿ*
*ನೆರೆದುದು ಜನಂ, ತಂಡತಂಡದಿ ಬೀದಿ ಬೀದಿಯಲಿ !*

ಜೀವಿಶೂನ್ಯ ಭೂಗ್ರಹದಲ್ಲಿ ಜೀವಾಂಕುರ ಬಿರಿಯಲಿದ್ದ ಸನ್ನಿವೇಶವನ್ನು ಕಲ್ಪಿಸಿಕೊಳ್ಳಿ : ಶಂಖ ಊದಿದರು, ಜಾಗಟೆ ಬಾರಿಸಿದರು, ಗಂಟೆ ಹೊಡೆದರು -

*ಕಿವಿನಿಮಿರೆ ದಿಗ್ಗಜಕೆ*
*ಜಗ ಭಯಂಕರವಾಯ್ತು ನಿರ್ಘೋಷ*

ಆಗ ಕುಂಭಕರ್ಣ ಏಳುತ್ತಾನೆ (ಜೀವ ಸಂಚಾರವಾಗುತ್ತದೆ). ಹಂತ ಹಂತವಾಗಿ ಅವನಿಗೆ ಎಚ್ಚರ ಬರುತ್ತದೆ. ಮೊದಲಿನ ಹಂತದಲ್ಲಿ ಆ ಮಬ್ಬಿನಿಂದ ಒಂದು ಸರೀಸೃಪಾಕೃತಿ ತಲೆ ಎತ್ತುತ್ತದೆ. ಅದು ''ಪಿಂಗಾಕ್ಷಿವೆಸರ ಭೂತಿನಿ.'' ಇದಕ್ಕೆ ಬಲಿ ಒಪ್ಪಿಸಿ ಶಾಂತಿ ಮಾಡುತ್ತಾರೆ. ಎರಡನೆಯ ಹಂತದಲ್ಲಿ ''ನಕ್ರಗಳ್ ಮಕರಗಳ್ ಮತ್ಸ್ಯಗಳ್'' ಮೇಲೇಳುತ್ತವೆ. ಇವು ''ಜಲಪಿಶಾಚೋತ್ಕರಂಗಳ್''. ಇವುಗಳಿಗೂ ಬಲಿ ಒಡ್ಡಿ ನಿವಾರಿಸಲಾಯಿತು. ಮೂರನೆಯ ಹಂತದಲ್ಲಿ ''ಮೂಡಿದುವು ಭೀಕರದ ಪಕ್ಷಿರೂಪಗಳಂತೆ ಪ್ರಾಣಿಯಾಕಾರಗಳ್.'' ಇವು ''ಮೃತ್ತಿಕಾದೇವತೆಗಳನುಚರರ್.'' ಸರಿ, ಇವಕ್ಕೂ ಬಲಿಕೊಟ್ಟು ತೃಪ್ತಿಪಡಿಸಿದ್ದಾಯಿತು. ನಾಲ್ಕನೆಯ ಹಂತದಲ್ಲಿ ''ಮೂಡಿದುದು ಸೌಧೋನ್ನತಂ ಸೌಧಗಾತ್ರದೊಳೊಂದು ವಿಗ್ರಹಂ ಪುಂಗವ ಪ್ಲವಂಗದಾ.'' ಕಪಿರೂಪದಲ್ಲಿ ಹೀಗೆ ಮೈದಳೆದದ್ದು ''ಕುಂಭಿಕಾಭೂತಂ.'' ಇದಕ್ಕೆ ಸಮರ್ಪಿಸಿದ ಆಜ್ಯ ಭೋಜ್ಯಗಳೇನು ಸಾಮಾನ್ಯವೇ ? -

*ಇಡಿಯಿಡಿಯ ಕಾಳ್ಪಂದಿಗಳನೆತ್ತಿ ತುಯ್ದೆಸೆಯೆ*
*ಬೀಳಗೊಡದೆಯೆ ಪಿಡಿದುದಾ ಮಹಾ ಮರ್ಕಟಂ !*
*ಪೀರ್ದುದು ಕೊರಳ್ಮುರಿದು ವನವರಾಹನ ರುಧಿರ*
*ಮದಿರೆಯಂ; ಹಿಂಡಿಕೊಂಡುದು ತನ್ನ ಬಾಯ್ಬುಲಕೆ,*
*ತಿಲದಿಂದ ತೈಲಮಂ ಪಿಳಿವ ಗಾಣಿಗನಂತೆ,*
*ನೆಣಮಜ್ಜೆಯಂ !*

ಅಲ್ಲಿಂದ ಮುಂದಕ್ಕೆ ''ಕುಂಭದ್ರೋಣಮೆನೆ ಕರೆದುದು ಮುಸಲಧಾರೆ.'' ಆಗ ಏಳುತ್ತಾನೆ ನಿದ್ರೆ ಮುಗಿದ ಸಾಕ್ಷಾತ್ ಕುಂಭಕರ್ಣ, ''ದೈತ್ಯಭಾಸ್ಕರಂ !'' ''ವಿರಿಂಚಿ ಶಾಪದ ವಿಚಿತ್ರ ಕೃತಿ''ಯಾದ ಕುಂಭಕರ್ಣನನ್ನು ಅವೇಳೆಯಲ್ಲಿ ನಿದ್ರೆಯಿಂದೆಬ್ಬಿಸುವಾಗ ಏನೆಲ್ಲ ಭಯಂಕರ ಘಟನೆಗಳು ಸಂಭವಿಸಬಹುದು ಎಂಬುದನ್ನು ಕವಿ ಇಲ್ಲಿ ವರ್ಣಿಸಿದ್ದಾರೆ. ಇಲ್ಲಿ ವಿಕಾಸಸಿದ್ಧಾಂತ ಸೂತ್ರರೂಪದಲ್ಲಿ ಅನುರಣಿಸುತ್ತದೆ :

ಮೊದಲು ಮಬ್ಬು ಮಬ್ಬಾಗಿದ್ದ ಜೀವಿರಹಿತ ಮಹಾರಾಶಿ. ಕಾಲಾಂತರದಲ್ಲಿ ಸರೀಸೃಪಗಳು ಮೈದಳೆಯುತ್ತವೆ. ವಿಕಾಸವೃಕ್ಷ ಬೆಳೆದು ರೆಂಬೆ ಒಡೆಯುತ್ತದೆ. ನೆಗಳೆ ಮೊಸಳೆ ಮೀನು ಮುಂತಾದ ಜಲಚರಿಗಳು ಅರಳಿ ಭೂಮಿಯನ್ನು ಆಳುತ್ತವೆ. ಮುಂದೆ ಇವುಗಳಿಂದಲೇ ಪಕ್ಷಿಗಳ ವಿಕಾಸವಾಗುತ್ತದೆ. ಆಗ ಕಪಿಮಾನವನ ಉದಯಕ್ಕೆ ಕಾಲ ಸನ್ನಿಹಿತವಾಗುವುದು. ವಿಕಾಸ ಕ್ರಿಯೆಯ ಮುಂದಿನ ಘಟ್ಟದಲ್ಲಿ ಮಾನವನ (ಇಲ್ಲಿ ಕುಂಭಕರ್ಣ) ಆಗಮನವಾಗುತ್ತದೆ.

- ೩ -

ಸಮಾರೋಪವಾಗಿ ಒಂದು ಮಾತು. ಶುದ್ಧ ಸಾಹಿತ್ಯಕೃತಿಯಲ್ಲಿ ವಿಜ್ಞಾನ ಪ್ರತಿಮೆಗಳ ಆವಶ್ಯಕತೆ ಮತ್ತು ಔಚಿತ್ಯ ಏನು ಎಂದು ಪ್ರಶ್ನಿಸುವವರಿಗೆ ನೇರ ಉತ್ತರ : ಕುವೆಂಪು ವಾಙ್ಮಯವನ್ನು ಓದಿ, ಅಲ್ಲಿಯೂ 'ಶ್ರೀ ರಾಮಾಯಣದರ್ಶನ'ವನ್ನು ಆಳವಾಗಿ ಅಭ್ಯಸಿಸಿ. ಇಲ್ಲಿ ಕವಿಯು ವರ್ತಮಾನ ಜೀವನಕ್ಕೆ ಮತ್ತು ಭಾವನೆಗಳಿಗೆ ಮುಕ್ತ ಮನದಿಂದ ಸಂವೇದಿಸಿ ಸಂಗೃಹೀತ ಭಾವಸ್ಪಂದಗಳನ್ನು ಸ್ವಂತ ಪ್ರತಿಭೆಯ ಮೂಸೆಯಲ್ಲಿ ಆಕರ್ಷಕ ಪ್ರತಿಮಾರತ್ನಗಳಾಗಿ ದ್ರವ್ಯಾಂತರಣಗೊಳಿಸಿ (transmutation) ಅವನ್ನು ತಮ್ಮ ಸಾಹಿತ್ಯ ಪ್ರಕಾರಗಳಲ್ಲಿ ಲೀಲಾಜಾಲವಾಗಿ ನೇಯ್ದಿದ್ದಾರೆ. ಯುಗದ ಈ ''ಕವಿ ವಿಭೂತಿಗೆ ನಮೋ ! ಕೃತಿ ವಿಭೂತಿಗೆ ನಮೋ !''

ಜಿ. ಟಿ. ನಾರಾಯಣರಾವ್
೮, 'ಅತ್ರಿ,' ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು

**ಡಾ॥ ಕರೀಗೌಡ ಬೀಚನಹಳ್ಳಿ**

**ಮ**ಗ ಮನೆಗೆ ಬರುತ್ತಿದ್ದಂತೆಯೇ ಅವ್ವ ಮಗನಿಗೆ, ''ನನಗೆ ಈ ಪಟ್ಟದಲ್ಲಿ ಇರೋಕೆ ಆಗಲ್ಲ. ಈ ಕರೆಂಟಲಿ ಬೇಯಿಸೊ ಕೂಳು, ಕಕ್ಕಸ್ ಮನೆ, ಕರೆಂಟಲಿ ಕಾಸಿದ ನೀರು, ಫ್ಯಾನ್ ಗಾಳಿ, ಅದೆಂತದೊ ಹಾಸ್ಗೆ ಇವೆಲ್ಲಾ ನನಗೆ ಕಕರು ಮಕರು ಹಿಡಿಸಿಬಿಟ್ಟಿವೆ. ಒಂದು ವಾರ ಇದ್ದೇ ನನಗೆ ಒಂದು ಯುಗವೇ ತುಂಬಿಸಿದಂಗಾಗಿದೆ. ಮೊದಲು ನನ್ನ ಊರ್‍ಗೆ ಬಸ್ಸು ಹತ್ತಿಸ್ತಿಯಾ ?'' ಎಂದಳು.

''ಯಾಕವ್ವ ಇಷ್ಟು ಬೇಜಾರು ಮಾಡ್ಕೊಳ್ತಾ ಇದ್ದಿ. ಬಂದು ಇನ್ನು ಒಂದು ವಾರ ಕೂಡ ಆಗಲಿಲ್ಲ! ಅಂಗೆ ಬಂದೋಳ ಹಿಂಗೆ ಕಳಿಸಿದರೆ ಜನ ಏನಂದಾರು ? ಎಲ್ಲೋ ಮಗ ಸರಿಯಾಗಿ ನೋಡ್ಕಂಡಿಲ್ಲ ಅಂತ ಅನ್ನಲ್ವೆ ? ಇರವ್ವ ಇನ್ನೊಂದಷ್ಟು ದಿವಸ ಕಳಿಸಿಕೊಡ್ತಿನಿ'' ಅಂದ ಮಗ.

ಅವ್ವ, ''ಜನ ಅಂತಾರೆ ಅಂತ ಇಲ್ಲಿ ನನಗೆ ಇರಕಾಯ್ತಾಯಿಲ್ಲ. ಎಲ್ಲರು ನನ್ನ ಚೆನ್ನಾಗೆ ನೋಡ್ಕೋತಾ ಇದೀರಿ, ಆದ್ರೂ ಇಲ್ಲಿ ನನ್ಗೆ ನೆಮ್ಮದಿ ಇರೋದಿಲ್ಲ. ನನಗೆ ನನ್ನೂರು, ನನ್ನ ಮನೆ, ನಮ್ಮ ಜನ ಅಂತ ಊರಲ್ಲೇ ಇರೋದಿಕ್ಕೆ ಇಷ್ಟ. ಅಲ್ಲೇ ಕಾಲ ತುಂಬಿಸಿ ಕಥೆ ಹಾಕ್ತೀನಿ'' ಎಂದಳು.

ಮಗ ಅವ್ವನನ್ನು ಪಟ್ಟಣಕ್ಕೆ ತನ್ನ ಮನೆಗೆ ಕರೆದುಕೊಂಡು ಬರಲು ಈ ಮೊದಲು ಹಲವಾರು ವರ್ಷಗಳಿಂದ ಪ್ರಯತ್ನಪಟ್ಟಿದ್ದ. ಆತ ಊರಿಗೆ ಹೋದಾಗಲೆಲ್ಲಾ ಅವ್ವನನ್ನು ಬಲವಂತಪಡಿಸಿದ್ದ. ಕೊನೆಗಾಲದಲ್ಲಾದರೂ ಬಂದು ನಾಲ್ಕು ದಿನ ತನ್ನ ಮನೆಯಲ್ಲಿ ಅವಳು ಇದ್ದು ಹೋಗಲಿ ಎಂಬ ಆಸೆಯಿಂದ ಈ ಸಾರಿ ಒತ್ತಾಯ ಮಾಡಿ ಹಳ್ಳಿಯಿಂದ ಕರೆದುಕೊಂಡು ಬಂದಿದ್ದ. ಅಣ್ಣ ತಮ್ಮಂದಿರೆಲ್ಲಾ ಭಾಗವಾದ ಮೇಲೆ ಅವ್ವ ತನ್ನ ಕೊನೆ ಮಗನ ಮನೆಯಲ್ಲಿ ಇದ್ದಳು. ಅವಳು ಹುಟ್ಟಿದಾರಭ್ಯದಿಂದ ಹುಟ್ಟಿದ ಊರು, ಕೊಟ್ಟ ಊರು ಬಿಟ್ಟರೆ, ಮತ್ತೊಂದು ಊರು, ಕೇರಿ, ಪಟ್ಟಣಕ್ಕೆ ಹೋದವಳಲ್ಲ. ಅಪ್ಪ ಅವಳನ್ನು ಮದುವೆ ಮಾಡಿಕೊಂಡಾಗ ಆಕೆಗೆ ಇನ್ನೂ ಚಿಕ್ಕ ವಯಸ್ಸು. ಈಗ ಅವಳಿಗೆ ಎಪ್ಪತ್ತಕ್ಕೂ ಮೀರಿದ ವಯಸ್ಸು. ಕಣ್ಣು ಚೆನ್ನಾಗಿ ಕಾಣುತ್ತವೆ. ತಲೆಕೂದಲು ಅಲ್ಲೊಂದು ಇಲ್ಲೊಂದು ಬೆಳ್ಳಗಾಗಿವೆ. ಒಂದೆರಡು ಹಲ್ಲುಗಳು ಮಾತ್ರ ಬಿದ್ದಿವೆ. ಇರುವ ಹಲ್ಲುಗಳಿಗೆ ಹಲ್ಲು ಕಪ್ಪು ಬಣ್ಣ ತಿಕ್ಕಿರುವುದರಿಂದ ಹಲ್ಲುಗಳೂ ಕರಿಕಲ್ಲಿನಂತಿವೆ. ಮುಖದ ಮೇಲೆ ನೆರಿಗೆ ಮೂಡಿದೆ. ಮೈ ಚರ್ಮವೆಲ್ಲಾ ಸುಕ್ಕುಗಟ್ಟುತ್ತಿದೆ. ಹೆತ್ತ ಎಳೆಂಟು ಮಕ್ಕಳಿಗೆ ಹಾಲುಣಿಸಿದ ಎದೆಗಳು ಜೋತುಬಿದ್ದಿವೆ. ಊರಲ್ಲಿದ್ದಾಗ ಮಾತ್ರ ಯಾವಾಗಲೂ ಒಂದು ಕುಡುಗೋಲನ್ನು ಸೊಂಟದಲ್ಲಿ ಸಿಕ್ಕಿಸಿರುತ್ತಾಳೆ. ಕೈಗಳಲ್ಲಿ ಸವೆದ ಕಡಗ, ಕೊರಳಲ್ಲಿ ಮುಕ್ಕಾದ ತಾಲಿ ಇರುವ ಕರಿಮಣಿಸರ, ಕಿವಿಗಳಲ್ಲಿ ಕೆಂಪುಬಿಚ್ಚೋಲೆ ಮೂಗಲ್ಲಿ ಸವೆದ ಮೂಗುತಿ ಇವಿಷ್ಟು ಅವ್ವನ ಮೈಮೇಲಿನ ಆಭರಣಗಳು ! ಸೊಂಟದಲ್ಲೊಂದು ಎಲೆ ಅಡಿಕೆ ಚೀಲ, ಅದರಲ್ಲೊಂದು ಕುಟಾಣಿ, ಒಂದು ಮಾಸಲು ಕಡ್ಡಿ ಸೀರೆ ಧರಿಸುವ ಅವ್ವ ನೋಡಲು ಶಿಲಾಯುಗದ ಪಳೆಯುಳಿಕೆ ಥರ ಕಾಣುತ್ತಾಳೆ. ಅವಳನ್ನು ಊರಿನಿಂದ ಪಟ್ಟಣಕ್ಕೆ ಕರೆದು ತರಲು ಮಗ ಹೋದಾಗ ಅವಳು, ''ನನಗೆ ಯಾಕೆ ಈ ವಯಸ್ನಲ್ಲಿ ಅಲ್ಲಿಗೆ ಬಾ, ಇಲ್ಲಿಗೆ ಬಾ ಅಂತ ಕಷ್ಟ ಕೊಡ್ತಿಯಾ ?'' ಎಂದು ಪ್ರಶ್ನಿಸುತ್ತಿದ್ದಳು. ಆದರೂ ಆತ ಅವಳನ್ನು ಬಲವಂತ ಮಾಡಿ ಬಸ್ಸಿನಲ್ಲಿ ಕರೆದುಕೊಂಡು ಬರುವಷ್ಟರಲ್ಲಿ ಸಾಕಾಗಿಹೋಗಿದ್ದ.

ಅವ್ವ ಊರಿನಿಂದ ಬರುವಾಗ ಬಸ್ಸಿನಲ್ಲಿ ಉದ್ದಕ್ಕೂ ತಲೆ ತಿರುಗುತ್ತದೆ ಎಂದು ವಾಂತಿ ಮಾಡಿಕೊಂಡೇ ಬಂದಿದ್ದಳು. ಬಂದಮೇಲೆ ಅವಳು ಸುಧಾರಿಸಿಕೊಳ್ಳಲು ಎರಡು ದಿನಗಳೇ ಹಿಡಿದಿದ್ದವು. ಮನೆಯಲ್ಲಿ ಸಮಯಕ್ಕೆ ಸರಿಯಾಗಿ ಊಟ ಮಾಡುವುದು, ಕಾಲ ತುಂಬಿಸುವುದು ಅವಳಿಗೆ ಕಷ್ಟ ಅನ್ನಿಸಿತು. ಪಟ್ಟಣದಲ್ಲಿ ಕೂತಲ್ಲೇ ಕೂತು ಕೈಕಾಲುಗಳು ಮರಗಟ್ಟಿದ್ದವು. ಊರಲ್ಲಿ ಹೊಲಕ್ಕೂ ಮನೆಗೂ ಈ ವಯಸ್ಸಲ್ಲಿ ಕೂಡ ತಿರುಗಾಡುತ್ತಾ ಕಾಲ ಕಳೆಯುತ್ತಿದ್ದವಳಿಗೆ ಉಣ್ಣುವುದು ಮಲಗುವುದರ ಬಗ್ಗೆ ಬೇಸರ ಬರತೊಡಗಿತು. ಮಗ ಬೆಳಿಗ್ಗೆ ಕಚೇರಿಗೆ ಹೋದರೆ ಬರುವುದು ರಾತ್ರಿಗೆ. ಸ್ವಂತ ಮನೆ, ಸೊಸೆ ಮೊಮ್ಮಕ್ಕಳನ್ನು ನೋಡಿಕೊಂಡು ಸಂತೋಷದಿಂದ ಇರಲು ಅವಳಿಗೆ ಆಗಲೇ ಇಲ್ಲ. ಸೊಸೆ ಕೂಡ ಕೆಲವೊಮ್ಮೆ ಅವಳಿಗೆ ಬೇಸರ ಬಾರದಂತೆ ಅದೂ ಇದೂ ವಿಷಯ ಮಾತಾಡುತ್ತಾ ಕಂಪನಿ ಕೊಡುತ್ತಿದ್ದಳು. ಸ್ನಾನ ಮಾಡುವುದನ್ನು, ಕಕ್ಕಸ್ಸಿಗೆ ಹೋಗುವುದನ್ನು, ತಲೆ ಬಾಚಿಕೊಳ್ಳುವುದನ್ನು ಪ್ರತಿದಿನ ಮಾಡಿ ಎಂದು ಹೇಳುತ್ತಿದ್ದಳು. ಅವ್ವ ಹಳ್ಳಿಯಲ್ಲಿ ವಾರಕ್ಕೊಮ್ಮೆ ಸ್ನಾನ ಮಾಡುತ್ತಿದ್ದುದು. ತಲೆ ತುರುಬು ಕೂಡ ಅವತ್ತೆ ಬಿಚ್ಚಿ ಮತ್ತೆ ಒಣಗಿದ ಮೇಲೆ ಕಟ್ಟಿದರೆ ಮುಗಿಯಿತು. ಅಪರೂಪಕ್ಕೊಮ್ಮೆ ಹೇನು ಸೇರಿಕೊಂಡಿದ್ದರೆ ಮೊಮ್ಮಕ್ಕಳಿಂದ ತಲೆ ನೋಡಿಸಿಕೊಳ್ಳುತ್ತಿದ್ದಳು. ಇನ್ನು, ಕಕ್ಕಸಿಗೆ ಬಯಲಿಗೆ ಹೋಗಿ ರೂಢಿಯಾಗಿಬಿಟ್ಟಿತ್ತು. ಒಮ್ಮೆ ಇಲ್ಲಿ ಕಕ್ಕಸ್ಸಿಗೆ ಹೋಗಲು ಹೋಗಿ ಜಾರಿ ಬೀಳುವುದರಲ್ಲಿದ್ದಳು. ಅಷ್ಟರಲ್ಲಿ ಬಾಗಿಲನ್ನು ಆಸರೆಯಾಗಿ ಹಿಡಿದುಕೊಂಡಿದ್ದರಿಂದ ಸ್ವಲ್ಪ ಕೈ ತರಚಿತ್ತು. ಅಂದಿನಿಂದ ಅವಳಿಗೆ ಇಲ್ಲಿ ಕಕ್ಕಸ್ಸಿಗೆ ಹೋಗಲು ಭಯ ! ಕುರ್ಚಿಯಲ್ಲಿ ಕುಳಿತುಕೊಳ್ಳಿ ಎಂದು ಸೊಸೆ ಎಷ್ಟು ಹೇಳಿದರೂ ಅತ್ತೆ ಕೇಳುತ್ತಿರಲಿಲ್ಲ. ''ನನಗೆ ಕುರ್ಚಿ ಯಾಕೆ ? ಈ ನೆಲಾನೆ ಎಷ್ಟು ಚೆಂದಾಗಿದೆ !'' ಎಂದು ಕೈಯಿಂದ ಮೊಸಾಯಿಕ್ ನೆಲವನ್ನು ಸವರುತ್ತಾ ಕೂರುತ್ತಿದ್ದಳು.

ಹೀಗೆ ಆರೇಳು ದಿನವನ್ನು ಅವ್ವ ಕಷ್ಟಪಟ್ಟು ಮಗನ ಮನೆಯಲ್ಲಿ ತುಂಬಿಸಿದ್ದಳು. ಒಂದು ದಿನ ಮನೆಯಲ್ಲೇ ಇದ್ದು ಬೇಸರವಾಗಿ ಹೊರಗೆ ತಿರುಗಾಡಲು ಮನೆಯಿಂದ ಹೊರಟು ಬಹಳ ದೂರ ಬಂದುಬಿಟ್ಟಿದ್ದಳು. ಮಧ್ಯಾಹ್ನ ಊಟದ ಸಮಯವಾದರೂ ಅತ್ತೆ ಬಾರದಿದ್ದನ್ನು ಗಮನಿಸಿದ ಸೊಸೆ ಮನೆಯ ಅಕ್ಕಪಕ್ಕದಲ್ಲೆಲ್ಲಾ ತಡಕಾಡಿದಳು.



ಎಲ್ಲೂ ಅವಳ ಸುಳಿವಿಲ್ಲ. ಗಾಬರಿಯಿಂದ ಗಂಡನಿಗೆ ಫೋನ್ ಮಾಡಿದಳು. ಗಂಡ ಕಚೇರಿಯಿಂದ ಬಂದವನೆ ವಿಷಯ ತಿಳಿದುಕೊಂಡ. ಆದರೂ ಅನುಮಾನದಿಂದ, ''ನೀನೇನಾದರೂ ಅವಳಿಗೆ ಅಂದುಬಿಟ್ಟೆಯಾ ?'' ಎಂದು ಕೇಳಿದ. ಅವಳು ಮಕ್ಕಳ ಮೇಲೆ ಆಣೆ ಮಾಡಿ ಏನೂ ಅನ್ನಲಿಲ್ಲ ಎಂದಳು. ಸ್ಕೂಟರ್ ಹಾಕಿಕೊಂಡು ಒಂದು ಸುತ್ತು ಅಲ್ಲೆಲ್ಲಾ ಸುತ್ತಾಡಿದ. ಹತ್ತಿರದಲ್ಲೆಲ್ಲೂ ಅವ್ವ ಕಾಣಲಿಲ್ಲ. ಇನ್ನೂ ಸ್ವಲ್ಪ ಮುಂದೆ ಹೋದ. ಆ ದಾರಿಯಲ್ಲಿ ಬರುತ್ತಿದ್ದವರೊಬ್ಬರನ್ನು ಅವ್ವನ ಚಹರೆಯನ್ನು ಹೇಳಿ, ಕಂಡಿರಾ ? ಎಂದು ಪ್ರಶ್ನೆ ಮಾಡಿದ. ಅವರು ಇನ್ನೂ ಮುಂದೆ ಯಾರೋ ಮಲಗಿದ್ದಾರೆ ಎಂದು ಹೇಳಿದರು. ಆತ ಇನ್ನೂ ಮುಂದೆ ಹೊರಟ. ಅವನ ಮನೆ ನಗರದ ಹೊರ ವಲಯಕ್ಕೆ ಅಂಟಿಕೊಂಡಿದ್ದರಿಂದ ಅಲ್ಲಲ್ಲಿ ಮರಗಿಡಗಳು ಬೆಳೆದಿದ್ದವು. ಒಂದೆರಡು ಹೊಂಗೆ ಮರಗಳ ಕೆಳಗೆ ಯಾರೋ ಮಲಗಿದಂತೆ ಕಂಡಿತು. ಅಲ್ಲೇ ದೃಷ್ಟಿ ನೆಟ್ಟು ನೋಡುತ್ತಾ ಬಂದ. ತನ್ನವ್ವನನ್ನು ಗುರ್ತಿಸುವಷ್ಟರಲ್ಲಿ ಅವನಿಗೆ ಸಾಕುಬೇಕಾಗಿತ್ತು! ಸುಡುವ ಬಿಸಿಲು, ಇಳಿವ ಬೆವರು, ಅದರ ಜೊತೆ ಎಲ್ಲಿ ಅವ್ವ ಗೊತ್ತಿಲ್ಲದೆ ಎಲ್ಲೆಲ್ಲೋ ಹೋಗಿ ಕಳೆದುಹೋಗಿಬಿಟ್ಟಾಳೆಂಬ ಭಯ ಎಲ್ಲಾ ಸೇರಿ ಮಂಕುಹಿಡಿಸಿಬಿಟ್ಟಿದ್ದವು. ಅವ್ವ ಹೊಂಗೆ ಸೊಪ್ಪನ್ನು ಹಾಸಿಕೊಂಡು ಹಾಯಾಗಿ ಮಲಗಿ ನಿದ್ರೆ ಮಾಡುತ್ತಿದ್ದಳು ! ತಲೆಗೆ ಲೋಳಿಸರ ಕಟ್ಟಿಕೊಂಡು ಬಟ್ಟೆ ಸುತ್ತಿದ್ದಳು. ತಲೆದಸಿಯಲ್ಲಿ ಕುಡುಗೋಲು, ಎಲೆಅಡಿಕೆ ಚೀಲ, ಕುಟಾಣಿಗಳು ಕೂತಿದ್ದವು. ಅವ್ವ ಏನನ್ನೋ ಕನವರಿಸುವುದನ್ನು ಆಲಿಸಿದ.

ಅವ್ವ ಊರಿನಲ್ಲಿದ್ದ ಕಿರಿಸೊಸೆಗೆ ಹೇಳುತ್ತಿದ್ದಳು : ''ಲೇ ಚಿಕ್ಕಿ, ಮಧ್ಯಾಹ್ನಕ್ಕೆ ಒಂದು ಬಿಸಿ ಮುದ್ದೆನು, ಉಪ್ಪನೆಸ್ರುನು ಕೊಟ್ಟು ಕಳಸು. ಅನ್ನ ಹಾಕಬೇಡ. ಅಂಗೆ ಒಂದು ಚೊಂಬು ಬಿಸಿನೀರು ಕಳ್ಸು'' ಎನ್ನುತ್ತಾ ನಿದ್ದೆಯಲ್ಲೇ ಎಮ್ಮೆಯನ್ನು ಗದರಿಸುತ್ತಿದ್ದಳು. ಮಗ ಕೇಳಿಸಿಕೊಳ್ಳುತ್ತಾ ಗಾಬರಿಯಾದ. ಮೆಲ್ಲಗೆ ಅವಳ ತಲೆದಸಿಯಲ್ಲಿ ಕೂತು 'ಅವ್ವಾ, ಅವ್ವಾ' ಎಂದು ಎಚ್ಚರಿಸಿದ. ಅವಳು ಎಚ್ಚೆತ್ತು ಕೂತಳು.

''ಏನವ್ವ ಇದು ನಿನ್ನ ಅವತಾರ ?'' ಎಂದು ಮುಜುಗರದಿಂದ ಕೇಳಿದ. ''ಬಾರೋ, ತಲೆ ಒಡಿತಿತ್ತು. ಇಲ್ಲೇ ಲೋಳಿಸರ ಇತ್ತು ಕನ, ಅದ್ನೆ ಕಿತ್ತು ತಲೆಗೆ ಕಟ್ಟಿದಿನಿ. ತಂಪಾಗಲಿ ಅಂತ'' ಎಂದಳು ತಣ್ಣಗೆ.

ಮಗನಿಗೆ ಅವ್ವನ ಮೇಲೆ ಈಗ ಒಂದು ಕಡೆ ಸಿಟ್ಟು, ಇನ್ನೊಂದು ಕಡೆ ಕರುಣೆ ಎರಡೂ ಒಟ್ಟಿಗೆ ಬಂದು, ''ಯಾಕವ್ವ ಇಲ್ಲಿಗೆ ಬಂದು ಮಲಗಿದ್ದಿ ? ಮನೇಲಿ ಜಾಗ ಇಲ್ವೊ ? ಹಾಸಿಗೆ ಇರಲಿಲ್ಲವೊ ?'' ಎಂದು ಕೇಳಿದ.

''ಈ ಹೊಂಗೆ ನೆರಳು ತಂಪಾಗಿತ್ತು. ಹಿಂಗೇ ಬಂದೋಳು ಇಲ್ಲೇ ಒಂದು ಗಳ್ಗಿ ಕಣ್ಮುಚ್ಚಿದ್ದೆ ಕಣ. ಹಾಳಾದ ಬಿಸ್ಲು ತಲೆ ಸಿಡಿವಂಗೆ ಹೊಡೀತಿತ್ತು. ನೋಡು ಈ ಹೊಂಗೆ ನೆರಳು, ಮನೆಗಿಂತ ಇದೇ ಎಷ್ಟು ಚಂದಾಗದೆ ಅಲ್ವೆ ?'' ಎಂದು ಮಗನ ತಲೆ ಸವರುತ್ತಾ, ''ಈ ವಯಸ್ಸಿಗೇ ನಿನಗೆ ತಲೆ ಕೂದಲೆಲ್ಲಾ ಉದುರಿ ಬರಿ ಬುಂಡೆಯಾಗದಲ್ಲ. ತಲೆಗೆ ಯಾವ ಯಾವುದೋ ಸಾಬೂನು ಎಣ್ಣೆ ಹಾಕಿದ್ರೆ ಇಂಗೇ ಆಗೋದು. ಕೈ ಎಣ್ಣೆ ಅಂತ ಹಾಕೋದಿಲ್ಲ. ಕಣ್ಣುಗಳು ಓದಿ ಓದಿ ಆಗಲೇ ಕಾಣೋದಿಲ್ಲ ಅಂತಿಯಾ. ಕನ್ನಡಕ ಬ್ಯಾರೆ ಹಾಕಂತಿಯಾ. ನಿಮ್ಮಪ್ಪ ಸಾಯೋವರ್ಗೂ ಕಲ್ಲಿದ್ದಂಗಿದ್ದರು. ನಿನ್ನ ನೋಡು ! ಆಗ್ಲೆ ಮುದುಕನ ಕಳೆ ಬಂದಿದೆ'' ಎಂದು ಅವನ ಕಾಲನ್ನು ಮುಟ್ಟಿ ಕಣ್ಣೆಗೊತ್ತಿಕೊಂಡಳು.

''ಏನವ್ವ ಇದೆಲ್ಲಾ? ನೀನೇ ನನ್ನ ಕಾಲು ಮುಟ್ತೀಯಾ?'' ಅಂದ. ''ನೀನು ನಿನ್ನ ಹೆಂಡ್ತಿ ಮಕ್ಕಳು ಎಲ್ಲಾ ಚೆನ್ನಾಗಿ ಬದುಕಿ ಬಾಳಿ. ನನ್ನ ಮಾತ್ರ ಮೊದ್ಲು ಇಲ್ಲಿಂದ ಊರಿಗೆ ಕಳಿಸಿಬಿಡು'' ಎಂದು ಆತನ ಕೈ ಹಿಡಿದುಕೊಂಡು ಮತ್ತೆ ಕಣ್ಣೆಗೊತ್ತಿಕೊಂಡಳು. ಆತ ಅವಳ ಕಾಲು ಮುಟ್ಟಿ ನಮಸ್ಕರಿಸಿದ. ಏಕೊ ಅವನಿಗೆ ಆ ಕ್ಷಣ ದುಃಖ ಒತ್ತರಿಸಿದಂತಾಯಿತು. ತನ್ನವ್ವ ಇನ್ನ ಇಲ್ಲಿ ಇರುವುದಿಲ್ಲವೆಂದು ಅವನಿಗೆ ಖಾತ್ರಿಯಾಯಿತು. ಆಕೆ ಊರಲ್ಲಿ ಬೆಳಿಗ್ಗೆ ಮನೆಯಿಂದ ಹೊಲಗದ್ದೆ ಹತ್ತಿರ ಅಂತ ಹೋದರೆ ಬರುತ್ತಿದ್ದುದು ಸಂಜೆಗೆ. ಆತನ ತಮ್ಮ ಕೂಡ ಅವ್ವನಿಗೆ, ''ಮನೇಲೆ, ಮೊಮ್ಮಕ್ಕಳನ್ನು ಆಡಿಸಿಕೊಂಡು, ಸಣ್ಣಪುಟ್ಟ ಕೆಲಸ ಮಾಡಿಕೊಂಡು ಇರು'' ಅಂತ ಎಷ್ಟು ಹೇಳಿದರೂ ಕೇಳುವುದಿಲ್ಲ ಎಂದು ಊರಿಗೆ ಆತ ಹೋದಾಗ ಹೇಳಿದ್ದು ನೆನಪಾಯಿತು. ತಮ್ಮನ ಹೆಂಡತಿ ಕೂಡ, ''ಹೊತ್ತು ಹೊತ್ತಿಗೆ ಬಿಸಿ ಊಟ ಮಾಡ್ಕೊಂಡು, ಬಿಸ್ನೀರು ಕುಡುಕೊಂಡು ಮನೇಲಿರಿ ಎಂದರೆ ಕೇಳಲ್ಲ. ಹೊಳೆ ಸಾಲಲ್ಲಿರೊ ಹೊಂಗೆ ಮರದಡಿಲಿ ದಿನಾ ಹೋಗಿ, ಅಲ್ಲೇ ಎಮ್ಮೆ ಬುಟ್ಕೊಂಡು ಮಲಗಿದ್ರೆ ಇನ್ನು ಮೊಮ್ಮಕ್ಕಳು ಹೋಗಿ ಎಮ್ಮೆ ಹೊಡ್ಕೊಂಡು ಅಜ್ಜಿನ ಕರಕೊಂಡು ಬರಬೇಕು'' ಎಂದು ಹೇಳಿದ್ದಳು. ಅವ್ವ ಯಾರ ಮಾತನ್ನೂ ಕಿವಿಯ ಮೇಲೆ ಹಾಕಿಕೊಳ್ಳದೆ ತನಗಿಷ್ಟ ಬಂದ ರೀತಿ ತನ್ನ ಪಾಡಿಗೆ ತಾನಿರುತ್ತಿದ್ದಳು.

ಕೂತಿದ್ದ ಅವ್ವನನ್ನು ಮಗ ಏಳಿಸಿಕೊಂಡು ಮನೆ ಕಡೆ ಹೊರಟ. ದಾರಿಯಲ್ಲಿ ನಡೆಯುತ್ತಾ ಅವ್ವ ಮಗನನ್ನು ''ನಾಳೆ ನನ್ನ ಊರ್ಗೆ ಕಳಿಸಿಕೊಡ್ತೀಯೇನೊ ?'' ಎಂದು ಮತ್ತೆ ಕೇಳಿದಳು.

ಆತ, ''ಬೆಳಿಗ್ಗೆ ಬಸ್ಸಿಗೇ ಹೋಗುವ. ನಾನೇ ಊರಿಗೆ ಬಂದು ನಿನ್ನ ಬಿಟ್ಟು ಬರ್ತೀನಿ ಬಾರವ್ವ'' ಎಂದ. ಆಗ ಅವ್ವ ತನ್ನ ಸುಕ್ಕುಗಟ್ಟಿದ ಮುಖದ ನೆರಿಗೆಗಳು ಮಿಂಚುವಂತೆ ಗೆಲುವಾದಳು.



ಡಾ|| ಕರೀಗೌಡ ಬೀಚನಹಳ್ಳಿ
ಪ್ರಾಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದುರ್ಬಲ ವರ್ಗದವರ ದುಸ್ವಪ್ನ ಬಂಡವಾಳಸ್ಥರ ಗಳಿಕೆಯ ಗಣಿ

# ರಾಜ್ಯದ ಶಿಕ್ಷಣ ನೀತಿ

*ಮಾತೆತ್ತಿದರೆ ಜಾಗತೀಕರಣ ಮತ್ತು ಕಂಪ್ಯೂಟರ್ ತಾಂತ್ರಿಕತೆ ಬಗ್ಗೆ ಮಾತನಾಡುವ ಸಚಿವರು ನಮ್ಮಲ್ಲಿ ಹೆಚ್ಚುತ್ತಿದ್ದಾರೆ. ಅವರಿಗೆ ನಮ್ಮ ಶೈಕ್ಷಣಿಕ ವಸ್ತುಸ್ಥಿತಿಯ ಪರಿಚಯ ಕಿಂಚಿತ್ತಾದರೂ ಇದೆಯೇ ಎಂಬ ಅನುಮಾನ ಬರುವುದು ಸಹಜ. ಸಾರ್ವತ್ರಿಕ ಶಿಕ್ಷಣದ ಜವಾಬ್ದಾರಿಯನ್ನು ನಮ್ಮ ದೇಶ ಎಂದಾದರೂ ನಿರ್ವಹಿಸುವ ಯೋಗ್ಯತೆಯನ್ನು ಪಡೆಯಬಹುದೆ? ಇಲ್ಲದಿದ್ದರೆ, ಯಾರಿಗಾಗಿ ಈ ಶಿಕ್ಷಣ ವ್ಯವಸ್ಥೆ?*

*ಇಂತಹ ಪ್ರಶ್ನೆಗಳನ್ನೆತ್ತಿದರೆ ಯಾರ್ಯಾರಿಗೆ ಅಸಮಾಧಾನ ಆಗಿಬಿಡುತ್ತದೋ ಎಂಬ ಅಳುಕು ಅನೇಕ ಬುದ್ಧಿಜೀವಿಗಳದ್ದು, ಶಿಕ್ಷಣ ತಜ್ಞರದ್ದು. ಅಂತಹ ಅಳುಕಿಗೆ ಆಸ್ಪದವನ್ನು ನೀಡದ ಲೇಖಕರು ನೇರವಾಗಿ ಕೆಲವು ಪ್ರಮುಖ ಪ್ರಶ್ನೆಗಳನ್ನಿಲ್ಲಿ ಎತ್ತಿದ್ದಾರೆ.*

**ಎಚ್. ಜಿ. ಸಣ್ಣಗುಡ್ಡಯ್ಯ**

**ಪ್ರ**ಜಾಪ್ರಭುತ್ವ ಸಫಲವಾಗಬೇಕಾದರೆ ಜನರೆಲ್ಲ ವಿದ್ಯಾವಂತರಾಗಬೇಕು. ವಿದ್ಯಾಭ್ಯಾಸಕ್ಕೆ ಅವಕಾಶವಿಲ್ಲದೆ ಜನ ಅವಿದ್ಯಾವಂತರಾಗಿ ಉಳಿದರೆ ಪ್ರಜಾಪ್ರಭುತ್ವದಿಂದ ಕೇವಲ ಮಹತ್ವಾಕಾಂಕ್ಷೆಯ ಸಾಹಸಿಗಳಿಗೆ ಪ್ರಯೋಜನವಾಗುತ್ತದೆ. ಆ ಸ್ಥಿತಿಯಲ್ಲಿ ಅನುಭವಿಸುವ ಪ್ರಜಾಪ್ರಭುತ್ವ ತಲೈಮಲೈ ಕಾಡಿನಲ್ಲಿ ವೀರಪ್ಪನ್ ಸ್ಥಾಪಿಸಿಕೊಂಡಿರುವ ಪ್ರಭುತ್ವವಾಗುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಮೊದಲು ಪ್ರಧಾನಿಯಾದವರು ಪಂಡಿತ್ ಜವಾಹರಲಾಲ್ ನೆಹರು. ಇವರ ಕೈಯಲ್ಲಿ ದೇಶ ಸುರಕ್ಷಿತವಾಗಿದೆ ಎಂದು ಮಹಾತ್ಮಾ ಗಾಂಧಿ ಹೇಳಿದ್ದರಂತೆ. ರಾಷ್ಟ್ರೀಯ ಚಳವಳಿಯ ದಿನಗಳಲ್ಲಿ ದಂಡಿಯಾತ್ರೆ, ಉಪ್ಪಿನ ಸತ್ಯಾಗ್ರಹ ಮುಂತಾದ ಕಾರಣಗಳಿಗಾಗಿ ಗಾಂಧೀಜಿ ಮತ್ತು ಅವರ ಅನುಯಾಯಿಗಳು ಕಾಲ್ನಡಗೆಯಲ್ಲಿ ದೇಶವ್ಯಾಪಿ ಓಡಾಡುತ್ತಿದ್ದರೆಂದು ಕೇಳಿದ್ದೇವೆ. ಆ ಒಂದು ಪರಿಪಾಟಿಯ ದಿನಗಳಲ್ಲಿ ನೆಹರು ಕೂಡ ಈ ದೇಶದಲ್ಲಿ ಅಷ್ಟಿಷ್ಟು ಸಂಚಾರ ಮಾಡಿರಬೇಕು; ಕ್ಷಾಮ, ಪ್ರವಾಹದ ಹಾವಳಿ ಮೊದಲಾದ ವಿಪತ್ತಿನ ದಿನಗಳಲ್ಲಿ ನಮ್ಮ ಜನ ಬೀಳುವ ಕಷ್ಟಗಳನ್ನು ನೋಡಿರಬೇಕು. ನಗರಗಳಲ್ಲಿರುವ ಕೊಂಪೆಗಳನ್ನು, ರಸ್ತೆಗಳ ಮಗ್ಗಲುಗಳಲ್ಲಿ ಬೇರುಬಿಟ್ಟುಕೊಂಡಿದ್ದ ಹಳ್ಳಿಗಳನ್ನು ಅವರು ನೋಡಿರಲಿಲ್ಲವೆಂದು ಹೇಳಲಾಗುವುದಿಲ್ಲ. ಭಾರತದ ಅಂದಿನ ಜನಸಂಖ್ಯೆಯನ್ನು ಬಲ್ಲವನಾಗಿದ್ದ ಯಾವ ಗಣಿತಜ್ಞನೂ ಇಪ್ಪತ್ತನೇ ಶತಮಾನದ ಕೊನೆಯ ಹೊತ್ತಿಗೆ ಅದು ನೂರು ಕೋಟಿಯನ್ನು ಮುಟ್ಟುತ್ತದೆ ಎಂದು ಹೇಳಬಹುದಾಗಿತ್ತು. ಆದರೆ ನೆಹರು ಅವರ ಎದುರು ಆದ್ಯತೆಯ ಮೇರೆಗೆ ಇಂಥ ಕೆಲಸ ಮೊದಲು ಆಗಬೇಕು ಎಂದು ಗಟ್ಟಿಸಿ ಹೇಳುವಂಥ ಬೌದ್ಧಿಕ ಪ್ರಾಜ್ಞರು ಯಾರೂ ಎದ್ದು ನಿಲ್ಲದೆ ಇದ್ದದ್ದು ಒಂದು ಸೋಜಿಗದ ದುರಂತ. ಕಡ್ಡಾಯ ಶಿಕ್ಷಣ ಮತ್ತು ಕಡ್ಡಾಯ ಕುಟುಂಬ ಯೋಜನೆಗಳು ಪ್ರಥಮ ಆದ್ಯತೆಗಳಾಗಬೇಕಾಗಿತ್ತು. ಇದನ್ನು ನಿರ್ಧರಿಸಲು ಬೇಕಾದ ಗಂಭೀರ ವ್ಯವಧಾನ ನೆಹರು ಮಂತ್ರಿಮಂಡಲಕ್ಕೆ ಇಲ್ಲವಾಯಿತು.

ಈಗ ನಾವು ಎದುರಿಸುತ್ತಿರುವ ಬಹಳಷ್ಟು ಸಮಸ್ಯೆಗಳು ಅಧಿಕ ಜನಸಂಖ್ಯೆಯಿಂದ ಮತ್ತು ಅದರ ಅಧಿಕ ಭಾಗ ಅವಿದ್ಯಾವಂತರ ಗಡಣವಾಗಿರುವುದರಿಂದ ಉದ್ಭವಿಸಿದಂಥವು. ಪ್ರಾಥಮಿಕ ವಿದ್ಯಾಭ್ಯಾಸ ಸರ್ಕಾರದ ಜವಾಬ್ದಾರಿಗೆ ಸೇರಿದ್ದು. ಸಂವಿಧಾನದಲ್ಲಿ ಗುರುತಿಸಿದ ಆದರ್ಶಗಳಲ್ಲೊಂದಾದ ಸಮಾನತೆ ವಿದ್ಯಾಭ್ಯಾಸದ ಕ್ಷೇತ್ರದಲ್ಲಿ ಕೈಗೂಡಲಿಲ್ಲ ಎಂದರೆ ಬೇರೆ ಕ್ಷೇತ್ರಗಳಲ್ಲಿ ಅದು ಕೇವಲ ಒಂದು ಹುಸಿ ಘೋಷಣೆಯಾಗಿ ಮಾತ್ರ ಉಳಿಯಬಲ್ಲುದು. ಶಿಕ್ಷಣ ಯೋಗ್ಯವಾದ ಮಕ್ಕಳೆಲ್ಲರೂ ಕುಳಿತು ಕಲಿಯುವುದಕ್ಕೆ ಸಾಕಾಗುವಷ್ಟು ಶಾಲೆಗಳು ದೇಶದಲ್ಲಿ ಇಲ್ಲ. ಇರುವ ಶಾಲೆಗಳು, ಕಟ್ಟಡಗಳು ಮತ್ತು ಅಗತ್ಯವಿರುವ ಶಿಕ್ಷಕರ ನೇಮಕ ಮೊದಲಾದ ನಿರ್ವಹಣೆಯ ಕೆಲಸವೇ ಸರ್ಕಾರಕ್ಕೆ ದುಸ್ತರವಾಗಿದೆ. ಈ ಪರಿಸ್ಥಿತಿಯ ಲಾಭವನ್ನು ಖಾಸಗಿ ಶಿಕ್ಷಣೋದ್ಯೋಗಿಗಳು ಚೆನ್ನಾಗಿ ಪಡೆದುಕೊಳ್ಳುತ್ತಿದ್ದಾರೆ. ಆದರೆ ಅವರುಗಳು ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಬಂಡವಾಳ ಹೂಡಲು ಸಿದ್ಧರಾಗಿಲ್ಲ. ಕಾರಣ ಸ್ಪಷ್ಟವಾಗಿದೆ.

## ಭಾಗ - ೨

ಎಸ್. ಎಸ್. ಎಲ್. ಸಿ.ವರೆಗಿನ ಶಿಕ್ಷಣ ಹೆಣ್ಣು ಮಕ್ಕಳಿಗೆ ಉಚಿತ ಎಂದು ಇತ್ತೀಚೆಗೆ ಕೇಂದ್ರ ಸರ್ಕಾರ ಘೋಷಿಸಿದೆ. ಕರ್ನಾಟಕದಲ್ಲಿ ಪಿ.ಯು. ಶಿಕ್ಷಣವೂ ಕೂಡ ಈಗ ಉಚಿತ ಎಂದು ಹೇಳಲಾಗಿದೆ. ಇದರಿಂದ ಎಲ್ಲ ಹೆಣ್ಣುಮಕ್ಕಳೂ ಪುಕ್ಕಟೆಯಾಗಿ ಪದವಿ ತರಗತಿಗಳವರೆಗೆ ಶಿಕ್ಷಣ ಪಡೆಯಬಲ್ಲರೆಂದು ಯಾರಾದರೂ ಹೇಳಬಹುದೇ? ಮೊನ್ನೆ ನಾನು ನಮ್ಮ ಸಂಬಂಧಿಕರ ವಿದ್ಯಾರ್ಥಿನಿಯೊಬ್ಬಳಿಗೆ ಶಿಕ್ಷಣ ಶುಲ್ಕಕ್ಕಾಗಿ ಮತ್ತು ಕೂಡಲೇ ಕೊಳ್ಳಬೇಕಾಗಿದ್ದ ಪಠ್ಯಪುಸ್ತಕಗಳಿಗಾಗಿ ೫೦೦/-ರೂ.ಗಳ ಹಣ ಸಹಾಯ ಮಾಡಬೇಕಾಯಿತು. ಏಕೆಂದರೆ ಎಸ್. ಎಸ್. ಎಲ್. ಸಿ.ಯ ನಂತರ ಅವಳಿಗೆ ಓದು ಸಾಕು ಎಂದು ತೀರ್ಮಾನಿಸಿದ ಆಕೆಯ ತಂದೆಯ ಮೇಲೆ ಒತ್ತಾಯ ತಂದು ನಾನು ಅವಳ ಓದಿನ ವೆಚ್ಚವನ್ನು ವಹಿಸಿಕೊಳ್ಳುವುದಾಗಿ ವಾಗ್ದಾನ ಮಾಡಿದ್ದೆ. ಪದವಿಪೂರ್ವ ತರಗತಿಯಲ್ಲಿ ಅಭ್ಯಾಸ ಮಾಡುವ ಈಕೆಗೆ ಶಿಕ್ಷಣ ಶುಲ್ಕ ಇಲ್ಲವೆಂದು ಹೇಳಲಾಗಿದೆ. ಆದರೆ ಇತರ ಶುಲ್ಕಗಳು ಸುಮಾರು ೩೦೦ರೂ.ಗಳಷ್ಟು. ಅಷ್ಟನ್ನು ಕೊಡದೆ ಅವಳು ಪ್ರವೇಶ ಪಡೆಯುವಂತಿರಲಿಲ್ಲ. ತದನಂತರ ಕೆಲವು ಸಮಯದ ಮೇಲೆ ಆಕೆಗೆ ಐಚ್ಛಿಕ ವಿಷಯಗಳಿಗಾಗಿ ಒಂದೊಂದು ಹೊಸ ಪುಸ್ತಕ ಕೊಡಿಸಲು ಸುಮಾರು ರೂ. ೩೫೦/- ರಷ್ಟಾಯಿತು. ಇದರ ಮೇಲೆ ಆಕೆಗೆ ಉಡುಪು ಮತ್ತು ಪಾದರಕ್ಷೆಗಳಿಗೆಂದು ಆಕೆ ಅಪೇಕ್ಷಿಸುವಷ್ಟು ಹಣವನ್ನು ನಾನು ಭರಿಸಲಿಲ್ಲ. ಇದು ಒಂದು ಹಳ್ಳಿಯಲ್ಲಿರುವ ಕಿರಿಯ ಕಾಲೇಜಿನ ವಿದ್ಯಾರ್ಥಿನಿಯ ಉದಾಹರಣೆ. ಶಿಕ್ಷಣದ ವೆಚ್ಚವನ್ನು ಬದಿಗಿರಿಸಿ ಮಿಕ್ಕ ವಿಷಯಕ್ಕೆ ಬರೋಣ. ಶಿಕ್ಷಣ ಉಚಿತ ಎಂದು ಘೋಷಿಸಿದರೂ ಎಲ್ಲ ಹೆಣ್ಣುಮಕ್ಕಳೂ ಪ್ರೌಢಶಾಲೆಯ ಶಿಕ್ಷಣವನ್ನಾದರೂ ಪಡೆದೇ ತೀರಬೇಕೆಂಬ ಒಂದು ಪ್ರವರ್ತನೆಯನ್ನು ನಿರ್ಮಿಸುವವರು ಯಾರು? ಎಸ್.ಎಸ್.ಎಲ್.ಸಿ.ಯ ನಂತರ ವಿದ್ಯಾಭ್ಯಾಸವನ್ನು ಮುಂದುವರಿಸುವುದೆಂದರೆ ಅವರು ಸ್ಥಿತಿವಂತರಾದರೂ ಆಗಿರಬೇಕು; ಇಲ್ಲವೆ, ಹಾಗೆ ಮುಂದುವರಿಸಿದ ಹೆಣ್ಣು ಮಕ್ಕಳಿಗೆ ಏನಾದರೊಂದು ನೌಕರಿ (ಸರ್ಕಾರಿ ನೌಕರಿಯಾದರೆ ಇನ್ನೂ ಉತ್ತಮ) ಆದರೂ ಸಿಗುವಂತಿರಬೇಕು. ಅಷ್ಟು ಕಡಿಮೆ ಶಿಕ್ಷಣ ಪಡೆದು ಸಣ್ಣ ನೌಕರಿ ಸಿಕ್ಕಿದರೆ ಸಾಕೆಂದು ಆಸೆಪಡುವವರು ತೀರ ಕೆಳಜಾತಿಗಳ ಮತ್ತು ದುರ್ಬಲವರ್ಗದ ಕುಟುಂಬಗಳಿಂದ ಬಂದವರಾಗಿರುತ್ತಾರೆ. ಮೇಲ್ಜಾತಿಯವರಾಗಿ ಸ್ಥಿತಿವಂತರೂ ಆಗಿದ್ದರೆ ಅವರಿಗೆ ವಿವಾಹಯೋಗ್ಯ ವಯಸ್ಸಿನ ಅನಂತರ ಶಿಕ್ಷಣದ ಅಗತ್ಯವೇ ಇಲ್ಲ ಎಂಬ ಒಂದು ಧೋರಣೆಯೂ ನಮ್ಮ ಕುಟುಂಬಗಳಲ್ಲಿ ಕಂಡುಬರುತ್ತದೆ.

ಇನ್ನು. ಓದನ್ನು ಮುಂದುವರಿಸಬೇಕು ಎಂಬ ಆಸೆ ಇದ್ದು ಜೊತೆಯವರು ಮುಂದಕ್ಕೆ ಹೋಗಿ ತಾವು ಮಾತ್ರ ಆರ್ಥಿಕ ಅನಾನುಕೂಲದ ಕಾರಣ ವಿದ್ಯಾಭ್ಯಾಸವನ್ನು ನಿಲ್ಲಿಸಬೇಕಾಗಿ ಬಂದರೆ ಅದು ತೀರ ಹೀನಾಯ ಸಂಗತಿ ಎಂದೇ ಕಿಂಚಿತ್ ಸ್ವಾಭಿಮಾನ ಇರುವ ಹೆಣ್ಣುಮಕ್ಕಳೂ ಭಾವಿಸುತ್ತಾರೆ. ಆದರೆ ದುರ್ಬಲ ವರ್ಗದ ಬಹುತೇಕ ಕುಟುಂಬಗಳಲ್ಲಿ ತಂದೆ ತಾಯಿಗಳ ಎದುರು ಹಟಮಾಡಿ ನಿಂತು ಮಾತನಾಡಬಲ್ಲ ಮಕ್ಕಳು ಕಡಿಮೆಯೇ. ದೌರ್ಬಲ್ಯ ಅಥವಾ ಆರ್ಥಿಕ ದುಸ್ಥಿತಿ ಮನುಷ್ಯರನ್ನು ಮಾನಸಿಕವಾಗಿಯೂ ದುರ್ಬಲರನ್ನಾಗಿ ಮಾಡುವುದು ಒಂದು ಗಣನೆಗೆ ತೆಗೆದುಕೊಳ್ಳದ ಗಂಭೀರ ಸಮಸ್ಯೆ. ಅದರ ಪರಿಣಾಮಗಳು ಜೀವನದ ಉದ್ದಕ್ಕೂ ಸ್ತ್ರೀ ಪುರುಷರನ್ನು ಬಾಧಿಸುತ್ತವೆ.

ನಮ್ಮ ಊರಿನ ನನ್ನ ಸಂಬಂಧಿಗಳ ಮನೆಯ ಹೆಣ್ಣು ಮಗಳು ಒಬ್ಬಳು ತನ್ನ ಬುದ್ಧಿವಂತಿಕೆಯಿಂದ ನವೋದಯ ಶಾಲೆಗೆ ಆಯ್ಕೆ ಪಡೆದು ಪ್ರೌಢಶಾಲೆ ಮತ್ತು ಪದವಿಪೂರ್ವ ಶಿಕ್ಷಣ ಎರಡನ್ನೂ ಮುಗಿಸಿ ಮನೆಗೆ ಬಂದಳು. ಆಕೆಗೆ ಪಿ.ಯು. ಪರೀಕ್ಷೆಯಲ್ಲಿ ಶೇ. ೫೦ರಷ್ಟು ಅಂಕಗಳು ಬಂದಿದ್ದುವು. ಎಷ್ಟು ಕಡೆ ಪ್ರಯತ್ನ ಮಾಡಿದರೂ ಆಕೆಗೆ ಟಿ.ಸಿ.ಎಚ್. ಮುಂತಾದ ವೃತ್ತಿ ಶಿಕ್ಷಣಕ್ಕೆ ಅವಕಾಶ ಸಿಗಲಿಲ್ಲ. ಆಕೆ ತುಂಬ ನಿರಾಶಳಾದಂತೆ ಕಂಡಿತು. ನಾನು ಆಕೆಯನ್ನು ಕಾಲೇಜು ಶಿಕ್ಷಣಕ್ಕೆ ಕಳಿಸೆಂದು ಆಕೆಯ ತಂದೆಯನ್ನು ಒತ್ತಾಯಿಸಿದೆ. ಊರಿನಿಂದ ತಾಲ್ಲೂಕು ಕೇಂದ್ರದಲ್ಲಿದ್ದ ಸರ್ಕಾರಿ ಕಾಲೇಜು ಒಂದಕ್ಕೆ ಬಸ್ಸಿನಲ್ಲಿ ಹೋಗಿಬರುವ ಅನುಕೂಲವೂ ಇತ್ತು. ಆಕೆಯ ತಂದೆಯದು ಒಂದೇ ಪಟ್ಟು : 'ಡಿಗ್ರಿ ಓದಿದರೆ ಎಲ್ಲಣ್ಣಾ ಕೆಲಸ ಸಿಗುತ್ತೆ, ಕೆಲಸ ಸಿಕ್ಕೋಲ್ಲ. ಅದಕ್ಕೇ, ಓದುವುದು ಬೇಡ. ಓದಿಸಲು ನಮಗೆ ಶಕ್ತಿ ಇಲ್ಲ' ಎಂದು ಒಂದೇ ವಾದ ಮಾಡಿದ. ಅಂಚೆ ತೆರಪಿನ ಶಿಕ್ಷಣಕ್ಕೆ ದಾಖಲು ಮಾಡಲೂ ಆತ ಒಪ್ಪಲಿಲ್ಲ.

ಇನ್ನೊಂದು ಪ್ರಸಂಗದಲ್ಲೂ ನನಗೆ ಇದೇ ಅನುಭವವಾಯಿತು. ನನ್ನ ಚಿಕ್ಕಪ್ಪನ ಮನೆಯ ಹುಡುಗಿಯೊಬ್ಬಳು ಪದವಿಪೂರ್ವ ಶಿಕ್ಷಣವನ್ನು ಪ್ರಥಮ ವರ್ಗದಲ್ಲಿ ಮಾಡಿ ಮುಗಿಸಿದಳು. ಆಕೆ ಅಂಗವಿಕಲೆ ಕೂಡ (ಪುಣ್ಯವಶಾತ್ ಆ ದೋಷ ಅಷ್ಟು ದೊಡ್ಡದಾಗಿರಲಿಲ್ಲ). ಆ ಕಾರಣದಿಂದ ಆಕೆಗೆ ಹಾಸ್ಟೆಲಿನಲ್ಲಿ ಪ್ರವೇಶ ಮತ್ತು ವಿದ್ಯಾರ್ಥಿವೇತನ ಮೊದಲಾದ ಸೌಕರ್ಯಗಳು ಸಿಗುತ್ತಿದ್ದುವು. ಆಕೆಯದೂ ಅದೇ ಕಥೆಯಾಯಿತು. ಟಿ.ಸಿ.ಎಚ್., ಪಾಲಿಟೆಕ್ನಿಕ್ ಮುಂತಾದ ಕಡೆ ಪ್ರವೇಶ ಸಿಗುವಷ್ಟು ಹೆಚ್ಚು ಅಂಕಗಳು ಆಕೆಗೆ ಬಂದಿರಲಿಲ್ಲ. ಹೇಗೋ ಮಾಡಿ ಜಿಲ್ಲಾ ಕೇಂದ್ರಕ್ಕೆ ಬಂದು ಬಿ. ಎ. ತರಗತಿಗೆ ಸೇರಿಕೊಂಡಳು. ಪ್ರಥಮ ವರ್ಷ ಮುಗಿಯಿತು. ಎರಡನೆಯ ವರ್ಷದಲ್ಲಿ ಅರ್ಧ ಕಳೆದಿತ್ತು. ಆಗಲೂ ಆಕೆ ತನ್ನ ತಾಯಿಯನ್ನು ಜೊತೆಗೆ ಕರೆದುಕೊಂಡು ಖಾಸಗಿ ಟಿ.ಸಿ.ಎಚ್. ತರಬೇತಿ ಸಂಸ್ಥೆ ಮುಂತಾದವುಗಳಿಗೆ ಎಡತಾಕುತ್ತಲೇ ಇದ್ದಳು. ಹತ್ತಾರು ಸಾವಿರ ರೂಪಾಯಿಗಳ ಪ್ರವೇಶ ಶುಲ್ಕ ಕೊಡುವುದಕ್ಕೂ ತಯಾರಾಗಿದ್ದಳು. ಟಿ.ಸಿ.ಎಚ್.ನಲ್ಲಿ ಓದಲು ಅವಳಿಗೆ ಅವಕಾಶ ಸಿಗಲಿಲ್ಲ. ಬಿ.ಎ. ಪದವಿಯನ್ನು ನಡುವೆ ನಿಲ್ಲಿಸಿ ಈಗ ಮೋಜಣಿ ತರಬೇತಿಗಾಗಿ ಜೆ.ಓ.ಸಿ. (ವೃತ್ತಿ ತರಬೇತಿ ಶಿಕ್ಷಣ)ಗೆ ಸೇರಿಕೊಂಡಿದ್ದಾಳೆ. ಅದು ಪದವಿಯೂ ಅಲ್ಲ, ಒಂದು ಡಿಪ್ಲೊಮ ಕೂಡ ಅಲ್ಲ. ಒಟ್ಟಿನಲ್ಲಿ ಪದವೀಧರೆಯಾಗುವ ಆಸೆಯಾಗಲಿ ಮುಂದೆ ಉನ್ನತ ಶಿಕ್ಷಣದ ನಂತರ ತನಗೆ ಉತ್ತಮ ಭವಿಷ್ಯ ಕಾದಿರಬಹುದೆಂಬ ಬಗೆಗೆ ಭರವಸೆಯಾಗಲಿ ಅವಳಿಗೆ ಉಳಿದಿಲ್ಲ. ಬಹಳ ಜನಕ್ಕೆ ಹೆಚ್ಚು ದಿನ ಓದಲು (ಉದಾ : ಬಿ.ಎ.; ಬಿ.ಎಸ್‌ಸಿ.; ಎಂ.ಎ.; ಎಂ.ಎಸ್‌ಸಿ. ಇತ್ಯಾದಿ) ಬೇಕಾದ ತಾಳ್ಮೆಯೇ ಇಲ್ಲ. ಉದ್ಯೋಗ ಸಂಪಾದಿಸುವ ವಿಷಯದಲ್ಲಿ ಅವರ ಆತುರ ಮೇರೆ ಮೀರಿದೆ. ಟಿ.ಸಿ.ಎಚ್. ಮುಂತಾದ ಸಂಕ್ಷಿಪ್ತ ತರಬೇತಿ ವಿಷಯಗಳು ಉನ್ನತ ಶಿಕ್ಷಣಕ್ಕೆ ಹೋಗಲು ಸಾಧ್ಯವಿಲ್ಲದ ದುರ್ಬಲ ವರ್ಗದವರಿಗೆ ಕ್ಷಿಪ್ರವಾಗಿ ಉದ್ಯೋಗಕ್ಕೆ ಸಹಾಯ ಮಾಡುವ ಶಿಕ್ಷಣವೆಂದು ನಂಬಲಾಗಿತ್ತು. ಅದು ಹೋಗಿ ಈಗ ಅಧಿಕವಾಗಿ ಪ್ರವೇಶ ಧನ ಕೊಡಬಲ್ಲವರಿಗೆ ಮಾತ್ರ ಟಿ.ಸಿ.ಎಚ್. ಶಿಕ್ಷಣ ಎಂದು ಪ್ರಚುರವಾಗಿಹೋಗಿದೆ. ಟಿ.ಸಿ.ಎಚ್. ಶಿಕ್ಷಣಕ್ಕೆ ಎಪ್ಪತ್ತರಿಂದ ಎಂಬತ್ತು ಸಾವಿರ ರೂ; ಬಿ.ಎಡ್. ಶಿಕ್ಷಣಕ್ಕೆ ಒಂದು ಲಕ್ಷದಷ್ಟು ಪ್ರವೇಶ ಧನ ಕೊಟ್ಟು ಓದಬೇಕಾದ ಅಭೂತಪೂರ್ವ ಪರಿಸ್ಥಿತಿ ಬಂದಿದೆ. ಈ ಪ್ರವೇಶ ಧನವನ್ನು ಕೇಳುವವರು ಖಾಸಗಿ ವಿದ್ಯಾಸಂಸ್ಥೆಗಳವರು ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಇಷ್ಟೊಂದು ಪ್ರವೇಶ ಧನವನ್ನು ವಸೂಲು ಮಾಡಿ ಶಿಕ್ಷಣ ಕೊಡಲು ಸರ್ಕಾರ ಖಾಸಗಿ ಸಂಸ್ಥೆಗಳಿಗೆ ಅವಕಾಶ ಕೊಟ್ಟದ್ದು ಅತ್ಯಂತ ಬೇಜವಾಬ್ದಾರಿಯ ಕೃತ್ಯ. ಓದಲಿಚ್ಛಿಸುವವರಿಗೆಲ್ಲ ಅವಕಾಶ ಕಲ್ಪಿಸುವಂತೆ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪನೆ ಮಾಡಬೇಕಾಗಿದ್ದುದು ಸರ್ಕಾರದ ಕರ್ತವ್ಯ. ಅದು ತಪ್ಪಿ ಹಣ ಸಂಪಾದನೆಗೋಸ್ಕರ ಶಿಕ್ಷಣ ಸಂಸ್ಥೆಗಳನ್ನು ತೆರೆಯುವ ಮುಕ್ತ ಸ್ವಾತಂತ್ರ್ಯವನ್ನು ಬಂಡವಾಳಸ್ಥರಿಗೆ ಒದಗಿಸುವ ಮೂಲಕ ಪ್ರಜಾಪ್ರಭುತ್ವದ ಒಂದು ಮುಖ್ಯ ಆದರ್ಶವಾದ ಸಮಾನತೆಯ ತತ್ವವನ್ನು ಸರ್ಕಾರವೇ ಧ್ವಂಸ ಮಾಡಿದೆ.

ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಹಿಂದೆ ಅಪಾರವಾಗಿ ಧನ ಸಂಪಾದನೆ ಮಾಡಿ ದಾನ ಧರ್ಮಗಳಿಗಾಗಿ ಅದರ ಒಂದು ಭಾಗವನ್ನು ವಿನಿಯೋಗಿಸಿ ಕೀರ್ತಿಭಾಜನರಾಗಬೇಕೆಂದು ಬಯಸುವ ಗಣ್ಯರು ಸ್ಥಾಪಿಸುತ್ತಿದ್ದರು ಅಥವಾ ರಾಷ್ಟ್ರೀಯ ಮನೋಧರ್ಮದ ದೇಶಪ್ರೇಮಿ ಸಾರ್ವಜನಿಕರು, ಕೈಗಾರಿಕೋದ್ಯಮಿಗಳು ಮುಂತಾದವರಿಂದ ವಂತಿಗೆ ಸಂಗ್ರಹಿಸಿ ಶಾಲಾ ಕಾಲೇಜುಗಳನ್ನು ಸ್ಥಾಪಿಸುತ್ತಿದ್ದರು. ಈಗ ಅದು ತಪ್ಪಿಹೋಗಿ ಅಪಾರವಾದ ಆರ್ಥಿಕ ಶಕ್ತಿಯನ್ನು ಗಳಿಸಿಕೊಂಡು ಕುಳಿತಿರುವ ಮಠಗಳು ಮತ್ತು ಅಲ್ಪ ಸಂಖ್ಯಾತರ ಹೆಸರಿನಲ್ಲಿ ವಿಶೇಷ ಸವಲತ್ತುಗಳನ್ನು ಪಡೆದಿರುವ ಜಾತೀಯ ಸಂಸ್ಥೆಗಳು (ಸಿಖ್ಖರು, ಜೈನರು, ಬೌದ್ಧರು, ಮುಸಲ್ಮಾನರು ಮೊದಲಾದ ಕೋಮಿನವರು) ಮಾತ್ರ ಖಾಸಗಿ ಶಿಕ್ಷಣ, ಸಂಸ್ಥೆಗಳನ್ನು ನಡೆಸಬಲ್ಲವರಾಗಿದ್ದಾರೆ. ಈ ಒಂದು ಪ್ರವೃತ್ತಿಯ ವಿಷಯದಲ್ಲಿ ಕರ್ನಾಟಕ ರಾಜ್ಯ ಭಾರತದ ಇತರ ಎಲ್ಲ ರಾಜ್ಯಗಳಿಗಿಂತ ಮುಂದಿದೆ. ಬ್ರಾಹ್ಮಣ, ವೀರಶೈವ ಮತ್ತು ಒಕ್ಕಲಿಗ ಜಾತಿಯವರ ಹಿಡಿತದಲ್ಲಿರುವ ಮಠಗಳು ಧಾರ್ಮಿಕ ಕೇಂದ್ರಗಳೆಂದು ಕರೆಯಲ್ಪಡುತ್ತಿದ್ದರೂ ಅವು ಜಾತೀಯ ಸಂಘಟನೆಗಳಾಗಿ ಮಾರ್ಪಟ್ಟಿವೆ. ಆದ್ದರಿಂದಲೇ ಅವು ಈಗ ರಾಜಕೀಯ ಶಕ್ತಿ ಕೇಂದ್ರಗಳೂ ಆಗಿವೆ ಎಂಬ ಸಂಗತಿ ಗುಟ್ಟಾಗಿ ಉಳಿದಿಲ್ಲ. ಇವುಗಳಿಗೆ ಹೊರತಾದ ಆದರೆ





ವಿದ್ಯಾ - ವ್ಯಾಪಾರ ಕೇಂದ್ರಗಳ ಒಂದು ಮಾದರಿ

ರಾಜಕೀಯವಾಗಿ ವರ್ಚಸ್ಸನ್ನು ಗಳಿಸಿಕೊಂಡಿರುವ ಎಂ. ಎಸ್. ರಾಮಯ್ಯ ನವರಂಥ ಏಕವ್ಯಕ್ತಿ-ಮಾಲೀಕತ್ವದ ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳು ಕೆಲವಿವೆ. ಧರ್ಮಸ್ಥಳದ ಮಂಜುನಾಥೇಶ್ವರ ವಿದ್ಯಾಸಂಸ್ಥೆಗೆ ಸೇರಿದ ಕಾಲೇಜುಗಳು, ಬೀದರ್‌ನಲ್ಲಿರುವ ಗುರುನಾನಕ್ ತಾಂತ್ರಿಕ ಕಾಲೇಜು ಮತ್ತು ಮಣಿಪಾಲ್ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ಕಾಲೇಜುಗಳು, ಅಲ್ ಅಮೀನ್ ವಿದ್ಯಾಸಂಸ್ಥೆಗಳು ಈ ಗುಂಪಿಗೆ ಸೇರುತ್ತವೆ. ಅಲ್ಪಸಂಖ್ಯಾತರೆಂಬ ಕಾರಣದಿಂದ ಈ ಸಂಸ್ಥೆಗಳು ವಿಶೇಷ ಸವಲತ್ತುಗಳನ್ನು ಅನುಭವಿಸುತ್ತಿವೆ. ಉದಾಹರಣೆಗೆ – ಇವು ಸರ್ಕಾರದ ಅನುದಾನ ಸೌಲಭ್ಯಕ್ಕೆ ಸಂಪೂರ್ಣವಾಗಿ ಅರ್ಹವಾಗಿರುವುದರ ಜೊತೆಗೆ ಮೀಸಲಾತಿ ನಿಯಮಗಳನ್ನು ಪಾಲಿಸಬೇಕಾಗಿಲ್ಲ. ಈ ಸವಲತ್ತುಗಳ ಜೊತೆಗೆ, ಮನಬಂದಂತೆ ಪ್ರವೇಶ ಧನವನ್ನು ವಿಧಿಸುತ್ತ ಗರಿಷ್ಠ ಮೊತ್ತದ ಅನುದಾನ ಗಳಿಕೆಗಾಗಿ ವಿದ್ಯಾರ್ಥಿಗಳ ಸಂಖ್ಯೆಯನ್ನು 'ಇನ್‌ಫ್ಲೇಟ್' ಮಾಡಿ ತೋರಿಸಿ ಹೊಸ ನೇಮಕಾತಿಗಳನ್ನು ಮಂಜೂರು ಮಾಡಿಸಿಕೊಳ್ಳುವುದು ಮೊದಲಾದ ಅಕ್ರಮ ಆಚರಣೆಗಳ ಜೊತೆಗೆ, ಅಂತಹ ಹುದ್ದೆಗಳನ್ನು ತುಂಬುವಾಗ ಉದ್ಯೋಗಾರ್ಥಿಗಳಿಂದ ಲಂಚ ಪಡೆಯುತ್ತಾರೆಂದು ತಿಳಿದುಬಂದಿದೆ. ಈ ಲಂಚದ ಮೊತ್ತ ಪ್ರಾಥಮಿಕ ಮತ್ತು ಪ್ರೌಢಶಾಲಾ ಮಟ್ಟದಲ್ಲಿ ಒಂದು ಲಕ್ಷ ರೂ.ವರೆಗೆ; ಕಾಲೇಜು ಮಟ್ಟದಲ್ಲಿ ಎರಡು ಲಕ್ಷ ರೂ.ಗಳಿಗೂ ಹೆಚ್ಚು. ಈ ನೇಮಕಗಳು ಸಂಬಂಧಪಟ್ಟ ಸರ್ಕಾರಿ ಅಧಿಕಾರಿಗಳ ಶರೀಕಿನಿಂದ ಕೇವಲ ಕಾಗದದ ಮೇಲೆ ಇದ್ದು ಅವುಗಳ ಬಾಬ್ತು ಅನುದಾನವೆಲ್ಲ ಸಂಸ್ಥೆಯ ಬೊಕ್ಕಸಕ್ಕೆ ಸೇರುತ್ತದೆ. ಈ ಸಂಬಂಧವಾಗಿಯೇ ಒಂದೊಂದು ಸಂಸ್ಥೆ ವಾರ್ಷಿಕವಾಗಿ ಹತ್ತಾರು ಲಕ್ಷ ರೂ.ಗಳ ಅಧಿಕ ಅನುದಾನವನ್ನು ಕಬಳಿಸುತ್ತದೆ. ಈ ಸಂಗತಿಗಳು ನಿಖರವಾಗಿ ಈಚೆಗೆ ತಿಳಿದುಬಂದಿದ್ದು, ಕರ್ನಾಟಕದ ಇಬ್ಬರು ವಿದ್ಯಾಮಂತ್ರಿಗಳಲ್ಲಿ ಒಬ್ಬರಾದ ಶ್ರೀಯುತ ವಿಶ್ವನಾಥ್ ಅವರು ಅದರ ಗಂಭೀರವಾದ ತನಿಖೆಗೆ ಪ್ರಯತ್ನಿಸುತ್ತಿದ್ದಾರೆಂದು ಇತ್ತೀಚೆಗೆ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಅಲ್ಪ ಸಂಖ್ಯಾತರ ಸಂಸ್ಥೆಗಳು ಕೇವಲ ತಮ್ಮ ಮತಕ್ಕೆ ಸೇರಿದ ವಿದ್ಯಾರ್ಥಿಗಳಿಗೇನೂ ಪ್ರವೇಶ ಕೊಡುವುದಿಲ್ಲ, ಕೇವಲ ತಮ್ಮ ಮತದವರಿಗೇನೂ ಉದ್ಯೋಗ ಕೊಡುವುದಿಲ್ಲ. ತಮ್ಮ ಮತಧರ್ಮಗಳ ಪ್ರಚಾರವನ್ನು ಅಲ್ಲಿ ಮಾಡಿದ್ದೂ ಕಾಣಲಿಲ್ಲ (ಮಾಡಿದರೆ ಆ ಪ್ರಚಾರವನ್ನು ಕೇಳುವವರು ಯಾರು ?). ಹೀಗಿದ್ದೂ ಇಂಥ ಸಂಸ್ಥೆಗಳು ಸಂವಿಧಾನದ ರಕ್ಷಣೆ ಪಡೆದು ವಿಜೃಂಭಿಸುವುದಾದರೂ ಏಕೆ ಎಂದು ಜನ ಯೋಚಿಸಬೇಕು. ಇದರ ಜೊತೆಗೆ ಇಂಥ ಖಾಸಗಿ ಸಂಸ್ಥೆಗಳಲ್ಲಿ ವಕೀಲ ರಷೀದ್ ಇವರ ಕೊಲೆ, ಬೆಂಗಳೂರಿನ ದಂತವೈದ್ಯ ಕಾಲೇಜೊಂದರ ಅವ್ಯವಹಾರ ಕುರಿತ ಸಾರ್ವಜನಿಕರ ಮತ್ತು ವಿದ್ಯಾರ್ಥಿಗಳ ದೂರಿನ ತನಿಖೆ, ಬೀದರ್‌ನ ಗುರುನಾನಕ್ ಎಂಜಿನಿಯರಿಂಗ್ ಕಾಲೇಜಿನ ಸುತ್ತ ನಡೆದ ಹಿಂಸಾತ್ಮಕ ಗಲಭೆಗಳು – ಈ ಪ್ರಕರಣಗಳೆಲ್ಲ ಕಾಲಕಾಲಕ್ಕೆ ನಡೆಯುತ್ತಲೇ ಇವೆ.

ಈ ವಿದ್ಯಮಾನಗಳನ್ನೆಲ್ಲ ಸಮಗ್ರವಾಗಿ ಪರಿಶೀಲಿಸಿದಾಗ ಪ್ರಸಿದ್ಧವಾದ ಮಠ ಮಾನ್ಯಗಳು, ಜಾತೀಯ ಸಂಸ್ಥೆಗಳು ಮತ್ತು ಅಪಾರವಾಗಿ ಕಪ್ಪು ಹಣವನ್ನು ವೆಚ್ಚ ಮಾಡಿ ಚುನಾವಣೆಗಳನ್ನು ಗೆದ್ದುಬರುವ ರಾಜಕಾರಣಿಗಳು ಈ ಶಕ್ತಿಗಳ ತ್ರಿಗ್ಗಾಲಿಯ ಮೇಲೆ ಈ ರಾಜ್ಯದ ವಿದ್ಯಾಭ್ಯಾಸವೆಂಬ ಉದ್ಯಮ ಬಹು ದೊಡ್ಡದಾಗಿ ಬೆಳೆದುನಿಂತಿದೆ. ಇಂಥ ವಿದ್ಯಾಸಂಸ್ಥೆಗಳ ಸ್ಥಾಪನೆಯಲ್ಲೂ ಅಲ್ಲಿ ಅಭ್ಯಾಸಮಾಡಲು ಕಳಿಸುವ ವಿದ್ಯಾರ್ಥಿಗಳಿಗಾಗಿ ಕೊಡುವ ಪ್ರವೇಶ ಧನದಲ್ಲೂ ಅನಿವಾಸಿ ಭಾರತೀಯರ ಬಂಡವಾಳ ಕೂಡ ದೊಡ್ಡ ಪಾತ್ರವನ್ನು ನಿರ್ವಹಿಸುತ್ತಿದೆ.

### ಭಾಗ – ೩

ಸರ್ಕಾರದ ಅನುದಾನ ಸಂಹಿತೆ ಚಕ್ರಭೀಮನ ಕೋಟೆಯಂತೆ ಜನಸಾಮಾನ್ಯರಿಗೆ ಎಂದೂ ಅರ್ಥವಾಗದಷ್ಟು ಸಂಕೀರ್ಣವಾಗಿದ್ದು, ಸುಳ್ಳು, ವಂಚನೆಗಳ ಅವ್ಯವಹಾರಕ್ಕೆ ಅನೇಕ ಕಳ್ಳದಾರಿಗಳನ್ನು ಒಳಗೊಂಡಿದೆ. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಕ್ಕೆ ಶೇ. ೧೦೦ರಷ್ಟು ಅನುದಾನ ಸಿಗುತ್ತದೆ. ನಗರಗಳಲ್ಲಿರುವ ಅನೇಕ ಪ್ರತಿಷ್ಠಿತ ವಿದ್ಯಾಸಂಸ್ಥೆಗಳು ತಲಾ ಹತ್ತು ಸಾವಿರಕ್ಕೂ ಹೆಚ್ಚಿನ ಪ್ರವೇಶ ಧನವನ್ನು ಅನಧಿಕೃತವಾಗಿ ವಸೂಲ್ಮಾಡಿ ಅಷ್ಟನ್ನೂ ಸಂಸ್ಥೆಯ ಬೊಕ್ಕಸಕ್ಕೆ ಸೇರಿಸಿಕೊಳ್ಳುತ್ತವೆ. ಅವರು ಮಾಡುವ ಖರ್ಚುವೆಚ್ಚಗಳಿಗೆ ಸರ್ಕಾರದ ಅನುದಾನ ಸಾಕಾಗುತ್ತದೆ. ಸಿಬ್ಬಂದಿ ಮತ್ತು ಶಿಕ್ಷಕರ ವೇತನವೂ ಪೂರ್ತಿಯಾಗಿ ಸರ್ಕಾರದಿಂದಲೇ ಬರುತ್ತದೆ. ೧೯೮೭ಕ್ಕೆ ಹಿಂದೆ ಅಸ್ತಿತ್ವಕ್ಕೆ ಬಂದಿದ್ದು ಏಳು ವರ್ಷಗಳ ನಂತರ ಅನುದಾನ ಸಂಹಿತೆಗೆ ಒಳಪಟ್ಟ ಸಾಮಾನ್ಯ ಮತ್ತು ಅಲ್ಪ ಸಂಖ್ಯಾತರ ವಿದ್ಯಾಸಂಸ್ಥೆಗಳಿಗೆ ಅನುದಾನ ಸೌಲಭ್ಯ ಚಿನ್ನದ ಗಣಿಯಾಗಿ ಪರಿಣಮಿಸಿದೆ ಎಂದು ಬಲ್ಲವರು ಹೇಳುತ್ತಾರೆ. ಹಾಲಿ ಇರುವ ಸಿಬ್ಬಂದಿ ಎಂದು ಲೆಕ್ಕ ತೋರಿಸಿ ಹುದ್ದೆಯಲ್ಲಿ ಇಲ್ಲದಿದ್ದವರನ್ನು ಇದ್ದರೆಂದು ದಾಖಲೆ ಸೃಷ್ಟಿಸಿ ಅನುದಾನಕ್ಕೆ ಒಳಪಡಿಸಲಾಗಿದೆ. ಹಾಗೆ ಮಾಡುವಾಗ ಅವರಿಂದ ಲಂಚದ ವಸೂಲಿ. ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಮಟ್ಟದಲ್ಲಿ ರೂ. ೫೦,೦೦೦ದಿಂದ ೧.೫ ಲಕ್ಷ ರೂಗಳವರೆಗೆ, ಕಾಲೇಜು ಮಟ್ಟದಲ್ಲಿ ಎರಡು ಲಕ್ಷ ರೂಪಾಯಿಗಳಿಗೂ ಹೆಚ್ಚು. ಎಷ್ಟೋ ಕಡೆ ಸಂಸ್ಥೆಗಳೇ ಇಲ್ಲದೆ ಬರೀ ನಾಮಫಲಕಗಳಿದ್ದರೂ ಸಂಬಂಧಪಟ್ಟ ಅಧಿಕಾರಿಗಳ ಅನುಗ್ರಹದಿಂದ ಅನುದಾನ ಗಿಟ್ಟಿಸಿ ಕೋಟ್ಯಂತರ ರೂ.ಗಳ ಸರ್ಕಾರದ ಹಣವನ್ನು ನುಂಗಲಾಗಿದೆಯಂತೆ. ಚಿತ್ರದುರ್ಗ ಜಿಲ್ಲೆಯಲ್ಲಿ ಇಂಥದೊಂದು 'ಸ್ಕ್ಯಾಂಡಲ್' ನಡೆದಿದ್ದು ಎಷ್ಟೋ ಜನ ಉದ್ಯೋಗಾರ್ಥಿಗಳು ಲಕ್ಷಾಂತರ ಹಣ ಕಳೆದುಕೊಂಡು ನಿರುದ್ಯೋಗಿಗಳಾಗಿ ಅಲೆಯುತ್ತಿದ್ದಾರೆ ಎಂದು ತಿಳಿದುಬಂದಿದೆ. ಕಾರಣರಾದವರ ಶೋಧಕ್ಕಾಗಿ ಪೊಲೀಸರು ಹುಡುಕುತ್ತಿದ್ದಾರೆ. ಇನ್ನು ಉನ್ನತ ಶಿಕ್ಷಣಕ್ಕೂ ಅನುದಾನ ಸದ್ಯಕ್ಕೆ ಶೇ. ೧೦೦ರಷ್ಟು ದೊರೆಯುತ್ತಿದೆ. ಖಾಸಗಿ ಕಾಲೇಜುಗಳಿಗೂ ೧೯೭೭ರಿಂದ ತ್ರಿವಿಧ ಸೌಲಭ್ಯಗಳನ್ನು ಸರ್ಕಾರ ಕೊಡುತ್ತಿದೆ. ಈ ಅನುದಾನಿತ ಕಾಲೇಜುಗಳು ತೋರಿಸುವ ತ್ರಿವಿಧ ಲೆಕ್ಕ, ಫೀ ರಿಯಾಯಿತಿ ಪಡೆಯುವ ವಿದ್ಯಾರ್ಥಿಗಳ ಬಾಬ್ತು ಸರ್ಕಾರ 'ಲಾಸ್ ಆಫ್ ಫೀ ಇನ್‌ಕಮ್' ರೂಪದಲ್ಲಿ ಸಂಸ್ಥೆಗಳಿಗೆ ಕೊಡುವ ಹಣ, ಈ ವಿಷಯಗಳೆಲ್ಲ ಸಾಮಾನ್ಯರಿಗೆ ತಿಳಿಯದಷ್ಟು ನಿಗೂಢವಾಗಿವೆ. ಈ

ಬಾಬ್ತು ಸರ್ಕಾರ ಕೊಡುವ ಹಣದಲ್ಲಿ ಶೇ.೧೫ರಷ್ಟು ಕಡಿತ ಉಂಟು ಮಾಡುವ ಪ್ರಸ್ತಾಪ ಸರ್ಕಾರದ ಮುಂದಿದೆ. ಇದು ಜಾರಿಗೆ ಬರದಂತೆ ಮಾಡಲು ಸಂಸ್ಥೆಗಳು ಉದ್ಯೋಗಿಗಳು ಚಳವಳಿ ಮಾರ್ಗ ಹಿಡಿದರೂ ಹಿಡಿಯಬಹುದು.

ಇನ್ನು ಅನುದಾನಿತ ಖಾಸಗಿ ಕಾಲೇಜುಗಳು ಗಳಿಸುವ ವರಮಾನದ ಒಂದು ಸ್ಥೂಲ ಚಿತ್ರವನ್ನು ನೋಡೋಣ. ಅವುಗಳ ಖರ್ಚುವೆಚ್ಚದಲ್ಲಿ ವೇತನದ ಭಾಗವನ್ನು ಸರ್ಕಾರ ಭರಿಸುತ್ತದೆ. ಅವು ಯಾವುದಕ್ಕೂ ಕೈಯಿಂದ ವೆಚ್ಚ ಮಾಡದಂತಹ ಸ್ಥಿತಿ ಸದ್ಯಕ್ಕಿದೆ. ಅವರಿಗೆ ನಿಜವಾದ ಲಾಭ ಎಂದರೆ ಸಂಸ್ಥೆಯ ಬೆನಿಫಿಟ್ ಫಂಡ್ (ಐ.ಬಿ.ಎಫ್.). ಇದರ ದರ ತಲಾ ರೂ. ೯೦೦/- (ವರ್ಷಕ್ಕೆ). ಶುಲ್ಕ ವಿನಾಯಿತಿ ಪಡೆದವರು ಕೂಡ ಇದನ್ನು ಕೊಡಲೇಬೇಕು. ಎರಡು ಸಾವಿರ ವಿದ್ಯಾರ್ಥಿಗಳಿರುವ ಒಂದು ಕಾಲೇಜಿನಲ್ಲಿ ತಲಾ ರೂ. ೯೦೦/- ಎಂದರೆ ಹದಿನೆಂಟು ಲಕ್ಷ ರೂ. ಐ.ಬಿ.ಎಫ್. ಸಂಗ್ರಹವಾಗುತ್ತದೆ. ಇದಿಷ್ಟೂ ಸಂಸ್ಥೆಯ ಲೆಕ್ಕಕ್ಕೆ ಜಮಾ ಆಗುವ ನಿವ್ವಳ ಲಾಭ. ಇದರ ಮೇಲೆ ಸರ್ಕಾರದ ನಿಯಂತ್ರಣ ಇಲ್ಲ. ಇಷ್ಟರ ಮೇಲೆ ಕಾಲೇಜುಗಳು ಕೆಲವು ಐಚ್ಛಿಕ ವಿಭಾಗಗಳಿಗೆ ಪ್ರವೇಶ ಕೊಡಲು ರೂ. ೯೦೦/-ನ್ನು ಮಾತ್ರ ತೆಗೆದು ಕೊಳ್ಳುತ್ತಾರೆ ಎನ್ನುವಂತಿಲ್ಲ. ಕಂಪ್ಯೂಟರ್ ವಿಜ್ಞಾನ, ರೇಷ್ಮೆ ಕೃಷಿ ಇತ್ಯಾದಿ ಬೇಡಿಕೆ ಇರುವ ವಿಭಾಗಗಳಿಗೆ ಅವರು ಅನಧಿಕೃತವಾಗಿ ಎಷ್ಟು ಪ್ರವೇಶಧನವನ್ನಾದರೂ ವಸೂಲಿ ಮಾಡಬಹುದು (ಐದರಿಂದ ಹತ್ತು ಸಾವಿರ ರೂ.ಗಳು). ಇನ್ನು ಅನುದಾನಿತ ತಾಂತ್ರಿಕ ಕಾಲೇಜುಗಳ ವರಮಾನದ ಸ್ಥೂಲ ಚಿತ್ರವನ್ನು ನೋಡೋಣ : ಮುನ್ನೂರು ಜನ ವಿದ್ಯಾರ್ಥಿಗಳಿರುವ ಇಂಜಿನಿಯರಿಂಗ್ ಕಾಲೇಜಿನಲ್ಲಿ ನೂರ ಐವತ್ತು (ಶೇ. ೫೦) ಸರ್ಕಾರದ ಸೀಟುಗಳು. ಪೇಮೆಂಟ್ ಸೀಟುಗಳು ಅರವತ್ತು; ಹೊರನಾಡಿನವರಿಗೆ ಮಾರಿಕೊಳ್ಳುವಂಥವು ನಲವತ್ತೈದು. ಇನ್ನೂ ನಲವತ್ತೈದು 'ಮ್ಯಾನೇಜ್‌ಮೆಂಟ್ ಸೀಟು'ಗಳು. ಕೊನೆಯ ನಲವತ್ತೈದರಲ್ಲಿ ಬಹುಬೇಡಿಕೆಯ ಕಂಪ್ಯೂಟರ್ ವಿಜ್ಞಾನದಂಥವೇ ಮೂವತ್ತಿರುತ್ತವೆ. ಇವು ಸಂಪೂರ್ಣವಾಗಿ ಮ್ಯಾನೇಜ್‌ಮೆಂಟಿನ ಸ್ವಾಮ್ಯಕ್ಕೆ ಒಳಪಟ್ಟವು. ಇವುಗಳಲ್ಲಿ ಪ್ರವೇಶಕ್ಕೆ ಟೆಸ್ಟ್ ಪಾಸ್ ಮಾಡುವ ಅಗತ್ಯ ಇಲ್ಲ. ಆದ್ದರಿಂದ ಅವುಗಳಿಗೆ ಬೇಡಿಕೆ ಮತ್ತು ಬೆಲೆ ಎರಡೂ ಹೆಚ್ಚು. ಇವುಗಳಲ್ಲಿ ಕರ್ನಾಟಕದವರಿಗೇ ಕೊಡಲೆಂದು ಕೆಲವನ್ನು ಮೀಸಲಿರಿಸುತ್ತಾರೆ. ಆದರೆ ಆ ಬೆಲೆಗೆ ಯಾವ ಕನ್ನಡಿಗನೂ ಅವುಗಳನ್ನು ಕೊಳ್ಳಲಾರ (ಐದರಿಂದ ಹತ್ತು ಲಕ್ಷ ರೂ.ಗಳು). ಆದ್ದರಿಂದ ಅವೆಲ್ಲ ಹತ್ತರಿಂದ ಹದಿನೈದು ಲಕ್ಷ ರೂ. ಕೊಡಲು ಸಿದ್ಧರಿರುವ ಅನ್ಯರಿಗೆ ಸಿಗುತ್ತವೆ (ವೈದ್ಯಕೀಯ ಕಾಲೇಜಿಗಾದರೆ ಈ ವರ್ಗದ ಸೀಟುಗಳು ಭಾರತೀಯರಿಗೆ ಇಪ್ಪತ್ತರಿಂದ ಮೂವತ್ತು ಲಕ್ಷ ರೂ; ಹೊರಗಿನವರಿಗೆ ಮೂವತ್ತರಿಂದ ಐವತ್ತು ಲಕ್ಷ ರೂ). ಹಾಗಾಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜಿನಲ್ಲಿ ಒಂದೊಂದಕ್ಕೂ ಮ್ಯಾನೇಜ್‌ಮೆಂಟ್ ಸೀಟಿನಿಂದಲೇ ಕನಿಷ್ಠ ಒಂದೂವರೆಯಿಂದ ನಾಲ್ಕು ಕೋಟಿ ಆದಾಯವಿದೆ. ಇದಿಷ್ಟೂ ನಿವ್ವಳ ಆದಾಯ. ವೈದ್ಯಕೀಯ ಕಾಲೇಜಿನಲ್ಲಿ ಇದು ಮೂರುಪಟ್ಟು - ನಾಲ್ಕುಪಟ್ಟು ಹೆಚ್ಚು. ಒಂದು ವೈದ್ಯಕೀಯ ಕಾಲೇಜು ಮೂವತ್ತು ಸೀಟುಗಳನ್ನು ಮೂವತ್ತು ಲಕ್ಷರೂಪಾಯಿಗಳಿಗೆ ಒಂದರಂತೆ ಮಾರಿಕೊಂಡರೆ ಒಂಬತ್ತು ಕೋಟಿ ರೂ.ಗಳಿಗೆ ಮೋಸವಿಲ್ಲ. ಒಂದು ಪಕ್ಷ ಸರ್ಕಾರ ಅನುದಾನದಲ್ಲಿ ಶೇ. ೧೫ರ ಕಡಿತವನ್ನು ಜಾರಿಗೆ ತಂದರೂ ಅದು ಇವರ ಕೈ ಕಚ್ಚುವುದಿಲ್ಲ. ನಿವ್ವಳ ಆದಾಯದಲ್ಲಿ ಸ್ವಲ್ಪ ಕಡಿಮೆಯಾಗಬಹುದು ಅಷ್ಟೆ. ಈ ವಾಕ್ಯಗಳನ್ನು ಬರೆಯುತ್ತಿರುವಾಗ ನನ್ನ ಎದುರು ಊಟಮಾಡುತ್ತ ಕುಳಿತಿರುವ ನನ್ನ ಮಗಳು ಹೇಳುತ್ತಾಳೆ : ನಮ್ಮ ಊರಿನಲ್ಲಿರುವ ವೈದ್ಯಕೀಯ ಕಾಲೇಜಿಗೆ ಪ್ರವೇಶಕ್ಕೆ ಉತ್ತರ ಭಾರತದ ವಿದ್ಯಾರ್ಥಿನಿಯೊಬ್ಬಳು ಪ್ರವೇಶಧನಕ್ಕೆ ಬದಲಾಗಿ ಕಾಲೇಜಿಗೆ ಅತ್ಯಾಧುನಿಕ ಪ್ರವಾಸಿ ಬಸ್ ಒಂದನ್ನು ಕೊಟ್ಟಿದ್ದಾಳೆ ಎಂದು. ಅದೇ ಮ್ಯಾನೇಜ್‌ಮೆಂಟಿನ ದಂತವೈದ್ಯ ಕಾಲೇಜಿನ ಕೆಲವರು

ವಿದ್ಯಾರ್ಥಿನಿಯರು ವೈದ್ಯಕೀಯ (ಎಂ.ಬಿ.ಬಿ.ಎಸ್.) ಕಾಲೇಜಿಗೆ ಸೇರಲು ಬಿಟ್ಟುಹೋಗುವ ಕಾಲಕ್ಕೆ ಓದುತ್ತಿದ್ದ ಕಾಲೇಜಿಗೆ ಉಳಿದ ನಾಲ್ಕು ವರ್ಷಗಳ ಶಿಕ್ಷಣ ಶುಲ್ಕವನ್ನು ತೆತ್ತು ಹೋಗಬೇಕಾಯಿತಂತೆ ! ಇದು ಅಲ್ಲಿನ ಒಂದು ನಿಯಮ. ಈ ಬಿಜಿನೆಸ್‌ನ ವರದಿಯನ್ನು ಓದುತ್ತ ಉಂಟಾಗುವ ಓದುಗರ ಬೇಸರ ಈ ಅಂಕಿ-ಅಂಶಗಳು ಕೊಡುವ ಶಾಕ್‌ನಿಂದಾಗಿ ಕರಗಬಹುದೆಂಬ ನಿರೀಕ್ಷೆಯಿಂದ ಈ ಸ್ಥೂಲ ಚಿತ್ರವನ್ನು ಪ್ರಸ್ತಾಪಿಸಿದೆ. ಮೇಲೆ ಹೇಳಿದ ಅನುದಾನ ಮೊದಲಾದ ಸಂಗತಿಗಳು ಕೇವಲ ಊಹೆ ಮಾಡಿಕೊಂಡವಲ್ಲ. ವಿಧಾನ ಪರಿಷತ್ತಿನಲ್ಲಿ ನಮ್ಮ ರಾಜ್ಯದ ಉನ್ನತ ಶಿಕ್ಷಣ ಸಚಿವ ಡಾ॥ ಜಿ. ಪರಮೇಶ್ವರ ಅವರು ಕೊಟ್ಟ ಮಾಹಿತಿಯಂತೆ ನಮ್ಮ ಸರ್ಕಾರ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಕೊಡುವ ವಾರ್ಷಿಕ ಅನುದಾನ ೨೨೪ ಕೋಟಿ ರೂ.ಗಳು. ಅದರಲ್ಲಿ ಅಲ್ಪಸಂಖ್ಯಾತರ ೩೬ ಶಿಕ್ಷಣ ಸಂಸ್ಥೆಗಳಿಗೆ - ೨೧ ಕೋಟಿ ರೂ; ಮತಗಳವರ ಮಾಲಿಕತ್ವದ ೪೦ ಸಂಸ್ಥೆಗಳಿಗೆ - ೨೫ ಕೋಟಿ ರೂ; ಇತರ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ - ೧೭೮ ಕೋಟಿ ರೂ. ಈ ಸೌಲಭ್ಯವನ್ನು ೨೯೨ ಪ್ರಥಮ ದರ್ಜೆ ಕಾಲೇಜುಗಳು, ೧೨ ಇಂಜಿನಿಯರಿಂಗ್ ಕಾಲೇಜುಗಳು, ೭ ಪಾಲಿಟೆಕ್ನಿಕ್ ಸಂಸ್ಥೆಗಳು ಉಪಯೋಗಿಸಿಕೊಳ್ಳುತ್ತಿವೆ ಎಂದು ಅವರು ವಿವರಿಸಿದ್ದಾರೆ. ತಮ್ಮ ಕೆಲವು ಸಂಸ್ಥೆಗಳಿಗೆ ಸರ್ಕಾರ ಅನುದಾನ ನೀಡುತ್ತಿರುವ ವಿಷಯವನ್ನು ಸ್ವಾಮೀಜಿಯವರೊಬ್ಬರು ಬಹಿರಂಗ ವೇದಿಕೆಯಲ್ಲೇ ಒಪ್ಪಿಕೊಂಡಿದ್ದಾರೆ. ಈ ಅನುದಾನವನ್ನು ಕೆಲವು ಸಂಸ್ಥೆಗಳು ದುರುಪಯೋಗ ಮಾಡಿಕೊಂಡಿರುವುದನ್ನೂ ಆ ಸೌಲಭ್ಯದ ಉಪಯೋಗದಲ್ಲಿ ದೊಡ್ಡ ಅವ್ಯವಹಾರ ನಡೆದಿರುವುದನ್ನೂ ಕೆಲವು ತಿಂಗಳ ಹಿಂದೆ ಇನ್ನೊಬ್ಬ ವಿದ್ಯಾಮಂತ್ರಿಗಳಾದ ವಿಶ್ವನಾಥ್ ಬಹಿರಂಗವಾಗಿ ಹೇಳಿ ಅನೇಕರನ್ನು ಕೆರಳಿಸಿದ್ದಾರೆ. ಈ ವ್ಯವಹಾರವನ್ನು 'ಅನುದಾನ ದಾಸೋಹ' ಎಂದು ವಿಧಾನ ಪರಿಷತ್ತಿನಲ್ಲಿ ಡಾ॥ ಸಿದ್ಧಲಿಂಗಯ್ಯನವರು ಹೇಳಿದ್ದು ಕೂಡ ಉಂಟು.

ಸರ್ಕಾರ ಆರಂಭಿಸಿರುವ ಖಾಸಗೀಕರಣದ ಪ್ರಕ್ರಿಯೆಯಲ್ಲಿ ಮಿಕ್ಕೆಲ್ಲ ಕ್ಷೇತ್ರಗಳಿಗಿಂತ ಮುಂದಾಗಿ ಅದರ ಪರಾಕಾಷ್ಠೆಯನ್ನು ಮುಟ್ಟಿರುವ ಈ ವಿದ್ಯಾಸಂಸ್ಥೆಗಳ ಸಾಮಾಜಿಕ ಸೇವೆಯನ್ನು ಮಾನ್ಯ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರೂ ಮಾಜಿ ಮುಖ್ಯಮಂತ್ರಿಗಳಾದ ರಾಮಕೃಷ್ಣ ಹೆಗಡೆ, ಬಂಗಾರಪ್ಪ ಮತ್ತು ಇತರ ಕೆಲವರು ಮಂತ್ರಿಗಳೂ ಸಾರ್ವಜನಿಕ ಸಮಾರಂಭಗಳಲ್ಲಿ ಬಾಯಿತುಂಬ ಕೊಂಡಾಡಿದ್ದಾರೆ. ಎಸ್.ಎಂ. ಕೃಷ್ಣ ಅವರು ಅಂಥ ಸಮಾರಂಭ ಒಂದರಲ್ಲಿ ಹೇಳಿದ್ದೆಂದರೆ **'ಅನಕ್ಷರತೆಯನ್ನು ಹೋಗಲಾಡಿಸುವುದು ಸರ್ಕಾರವೊಂದರಿಂಲೇ ಸಾಧ್ಯವಿಲ್ಲ, ಅದಕ್ಕಾಗಿ ಉನ್ನತ ಶಿಕ್ಷಣವನ್ನು ಆದಷ್ಟೂ ........ ಖಾಸಗೀಕರಣಗೊಳಿಸುವುದು ಅನಿವಾರ್ಯ'.** ಇದು ಖಾಸಗೀಕರಣದ ತೀರಾ ದುರ್ಬಲ ಸಮರ್ಥನೆ. 'ಅನಕ್ಷರತೆ'ಯನ್ನು ಹೋಗಲಾಡಿಸುವುದು ವಯಸ್ಕರ ಶಿಕ್ಷಣ ಮತ್ತು ಪ್ರಾಥಮಿಕ ಶಿಕ್ಷಣಗಳ ಮಟ್ಟದ ಮಾತು. ಅನಕ್ಷರತೆಯನ್ನು ಹೋಗಲಾಡಿಸುವುದಕ್ಕೂ ಉನ್ನತ ಶಿಕ್ಷಣವನ್ನು ಖಾಸಗೀಕರಣಗೊಳಿಸುವುದಕ್ಕೂ ಎಲ್ಲಿಂದ ಎಲ್ಲಿಯ ಸಂಬಂಧ ? ಪ್ರಾಥಮಿಕ ಮತ್ತು ವಯಸ್ಕರ ಶಿಕ್ಷಣ ಸರ್ಕಾರದ ಜವಾಬ್ದಾರಿ. ಸಂವಿಧಾನದಲ್ಲಿ ಇದಕ್ಕೆ ಸ್ಪಷ್ಟ ನಿರ್ದೇಶನಗಳಿವೆ. ಆ ಕ್ಷೇತ್ರದ ವಿಫಲತೆಗೆ ಸರ್ಕಾರವೇ ಹೊಣೆ. ಇಂಥ ಪರಿಸ್ಥಿತಿಯನ್ನು ನಿರ್ಮಿಸಿ ಖಾಸಗಿ ಸಂಸ್ಥೆಗಳಿಗೆ ಪ್ರಿನ್ಸಿಪಾಲರು ಮತ್ತು ಶಿಕ್ಷಕರುಗಳನ್ನು ತಮ್ಮ ಖುಷಿ ಮತ್ತು ಅನುಕೂಲಕ್ಕೆ ತಕ್ಕಂತೆ ನೇಮಕ ಮಾಡಿಕೊಳ್ಳುವ, ವಿದ್ಯಾರ್ಥಿಗಳಿಗೆ ಪ್ರವೇಶ ಕೊಡುವಾಗ ಹೆಚ್ಚು ಕೊಟ್ಟವರಿಗೆ ಆದ್ಯತೆ ನೀಡುವ ಅಧಿಕಾರ - ಸ್ವಾತಂತ್ರ್ಯಗಳನ್ನು ಕೊಟ್ಟು ಅನುದಾನವನ್ನು ಕೊಡುವ ಕರ್ತವ್ಯವನ್ನು ಮಾತ್ರ ತನ್ನಲ್ಲಿ ಉಳಿಸಿಕೊಂಡಿರುವ ಸರ್ಕಾರದ ನೀತಿ ಒಂದು ದಿವಾಳಿಕೋರ ನೀತಿ. ಈ ವ್ಯವಸ್ಥೆಯನ್ನು ವೈತಾಳಿಕರಂತೆ ನಮ್ಮ ಹಲವು ರಾಜಕಾರಣಿಗಳು ಕೊಂಡಾಡುತ್ತ ನಡೆದಿರುವುದು ಜನರಿಗೆ ಅವರು ಮಾಡುತ್ತಿರುವ ದೊಡ್ಡ ಅಪಮಾನವಲ್ಲದೆ ಬೇರೆ ಅಲ್ಲ. ನಾವು ನೋಡಿರುವ ಪ್ರಮುಖ ಮಠವೊಂದು ಅದು ತನ್ನ ಕ್ಷೇತ್ರದಲ್ಲಿ ನಡೆಸುವ ಒಂದು ಸನಿವಾಸ ಶಾಲೆ ಮತ್ತು ಸಂಸ್ಕೃತ ಪಾಠಶಾಲೆ - ಈ ಎರಡು ಶಾಲೆಗಳಲ್ಲಿ ಮಾತ್ರ ಉಚಿತ ಶಿಕ್ಷಣವನ್ನು ಒದಗಿಸಿದೆ. ಆದರೆ ಜಿಲ್ಲಾ ಕೇಂದ್ರದಲ್ಲಿ ಅದು ನಡೆಸುತ್ತಿರುವ ನರ್ಸರಿ, ಪ್ರೌಢಶಾಲೆಗಳು, ಕಿರಿಯ ಕಾಲೇಜುಗಳು, ಪ್ರಥಮ ದರ್ಜೆ ಕಾಲೇಜು, ಪಾಲಿಟೆಕ್ನಿಕ್, ಫಾರ್ಮಸಿ ಕಾಲೇಜು, ಟಿ.ಸಿ.ಎಚ್. – ತರಬೇತಿ ಕೇಂದ್ರ, ಬಿ.ಎಡ್. ಕಾಲೇಜು, ಇಂಜಿನಿಯರಿಂಗ್ ಕಾಲೇಜು – ಈ ಎಲ್ಲ ತನ್ನ ಸಂಸ್ಥೆಗಳಲ್ಲೂ ಡೊನೇಶನ್ ಹಣವನ್ನು ಧಾರಾಳವಾಗಿ ವಸೂಲು ಮಾಡುತ್ತದೆ. ಪ್ರೌಢಶಾಲೆಯೊಂದರಲ್ಲಿ ಇಂಗ್ಲಿಷ್ ಮಾಧ್ಯಮಕ್ಕೆ ಪ್ರವೇಶ ಬೇಕಾದರೆ ಎರಡರಿಂದ ಮೂರು ಸಾವಿರ ಹಣ ಕೊಡಬೇಕು. ತಮಾಷೆ ಎಂದರೆ ಇವುಗಳಲ್ಲಿ ಬಹುತೇಕ ಸಂಸ್ಥೆಗಳು ಅನುದಾನ ಪಡೆಯುತ್ತಿರುವ ಸಂಸ್ಥೆಗಳು. ಗ್ರಾಮಾಂತರ ಪ್ರದೇಶಗಳಲ್ಲಿ ಅದು ನಡೆಸುತ್ತಿರುವ ಅನೇಕ ಪ್ರೌಢಶಾಲೆಗಳು ಮೊದಲಿನಿಂದಲೂ ಸರ್ಕಾರಿ ಅನುದಾನದಿಂದ ನಡೆಯುತ್ತಿವೆ. ಆದರೂ ಈ ಕ್ಷೇತ್ರಕ್ಕೆ ಕಾಲಕಾಲಕ್ಕೆ ಭೇಟಿ ಕೊಡುವ ರಾಜಕಾರಣಿಗಳೆಲ್ಲರೂ ಮಠದ 'ವಿದ್ಯಾದಾನ'ವನ್ನು ಮುಕ್ತಕಂಠದಿಂದ ಹೊಗಳುತ್ತಾರೆ. ಇದು ಸಾರ್ವಜನಿಕರ ತಿಳಿವಿಗೆ ಮಣ್ಣೆರಚುವ ಕೆಲಸ. ಹೊಸದಾಗಿ ಅಧಿಕಾರಕ್ಕೆ ಬಂದ ಪಕ್ಷ ಅಥವಾ ಮಂತ್ರಿ ಮಹೋದಯರನ್ನು ಸಾಲುಸಾಲಾಗಿ ಕರೆತಂದು ಈ ಧಾರ್ಮಿಕ ಮಠಗಳಿಗೆ ಸರ್ಟಿಫಿಕೇಟ್ ಪಡೆದುಕೊಳ್ಳುವ ಈ ಹುನ್ನಾರು ಪಟ್ಟಭದ್ರ ಹಿತಾಸಕ್ತಿಗಳು ಅನುಸರಿಸುತ್ತ ಬಂದಿರುವ ಒಂದು ವ್ಯವಸ್ಥಿತ ತಂತ್ರ. ಅದರಲ್ಲೂ ಹೆಚ್ಚು ಹೆಚ್ಚು ಆದಾಯವನ್ನೂ, ರಾಜಕೀಯ ಪ್ರಭಾವವನ್ನೂ ಕೂಡಿಸಿಕೊಳ್ಳುತ್ತ ಹೋಗುವ ಜಾತೀಯ ಸಂಸ್ಥೆಗಳಿಗೆ ಕುಮ್ಮಕ್ಕು ಕೊಡುತ್ತ ಅವುಗಳ ಕೊಂಡಾಟಕ್ಕೆ ಸಾಲಾಗಿ ನಿಲ್ಲುವ ನಮ್ಮ ರಾಜಕಾರಣಿಗಳ ಬಗೆಗೆ ಏನು ಹೇಳಿದರೂ ಕಡಿಮೆಯೇ. ಈಗ ರಾಜ್ಯದ ಚಿನ್ನದ ಗಣಿಗಳು ನಷ್ಟವನ್ನನುಭವಿಸುತ್ತ ಮುಚ್ಚಿಹೋಗುವ ಸ್ಥಿತಿಯಲ್ಲಿವೆ. ಆದರೆ ರಾಜ್ಯದಲ್ಲಿ ಸ್ಥಾಪನೆಯಾಗಿರುವ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳು ಒಂದೊಂದೂ ಒಂದು ವಜ್ರದ ಗಣಿಯಾಗಿ ಪ್ರವರ್ಧಮಾನಕ್ಕೆ ಬರುತ್ತಿವೆ. ಇನ್ನೂ ಹಲವು ಅಸ್ತಿತ್ವಕ್ಕೆ ಬರುವುದಿಲ್ಲ ಎಂದು ಯಾರೂ ಹೇಳುವಂತಿಲ್ಲ. ಸದ್ಯಕ್ಕೆ ಸುಮಾರು ಮೂವತ್ತು ವೈದ್ಯಕೀಯ ಕಾಲೇಜುಗಳೂ ಅವುಗಳ ಮೂರರಷ್ಟು ಇಂಜಿನಿಯರಿಂಗ್ ಕಾಲೇಜುಗಳೂ ಈ ರಾಜ್ಯದಲ್ಲಿವೆ. ಇವುಗಳಲ್ಲಿ ಬಹುತೇಕ ಸಂಸ್ಥೆಗಳು ಖಾಸಗಿ ಒಡೆತನದವು.

## ಭಾಗ – ೪

ಈ ಲೇಖನವನ್ನು ಬರೆಯಹೊರಟಿದ್ದು ಈ ತಾಂತ್ರಿಕ ಕಾಲೇಜುಗಳ ಅದ್ಭುತ ಕ್ರಾಂತಿಯನ್ನಾಗಲಿ, ಸರ್ಕಾರದ ಅನುದಾನ ಸಂಹಿತೆಯನ್ನಾಗಲಿ, ನಮ್ಮ ಜಾತೀಯ ಸಂಸ್ಥೆಗಳು ಮತ್ತು ರಾಜಕಾರಣಿಗಳ ಭ್ರಷ್ಟ ವ್ಯೂಹಗಳನ್ನಾಗಲಿ ಬಣ್ಣಿಸುವುದಕ್ಕಲ್ಲ. ವಿದ್ಯಾಭ್ಯಾಸ ಎಂಥ ದುಬಾರಿಯಾದ ವಸ್ತುವಾಗಿದೆ, ನಮ್ಮ ದುರ್ಬಲ ವರ್ಗಗಳು ಈ ವ್ಯವಸ್ಥೆಯಲ್ಲಿ ಎಂದಾದರೂ ತಲೆ ಎತ್ತುವ ಅವಕಾಶ ಇದೆಯೇ ಎಂಬುದನ್ನು ವಿಚಾರ ಮಾಡುವುದು ನನ್ನ ಮುಖ್ಯ ಉದ್ದೇಶ. ಒಂದಾನೊಂದು ಕಾಲಕ್ಕೆ ಬೀದಿಯ ದೀಪಗಳಡಿಯಲ್ಲಿ ವಿದ್ಯಾರ್ಥಿಗಳು ಕುಳಿತು ಅಭ್ಯಾಸ ಮಾಡಿದ್ದನ್ನು ಕೇಳಿದ್ದೇವೆ. ನೋಡಿಯೂ ಇದ್ದೇವೆ. ಅಂತಹ ಕಾಲಮಾನದಲ್ಲಿ ಈ ದೇಶ ಶ್ರೀನಿವಾಸ ರಾಮಾನುಜಮ್ ಅವರಂಥ ಗಣಿತ ಶಾಸ್ತ್ರಜ್ಞರನ್ನೂ, ಸರ್ ಎಂ. ವಿಶ್ವೇಶ್ವರಯ್ಯ ಅವರಂಥ ಇಂಜಿನಿಯರ್ ಮಹಾಶಯರನ್ನೂ, ಡಾ॥ ರಾಧಾಕೃಷ್ಣನ್ ಅವರಂಥ ವಿದ್ವಾಂಸರನ್ನೂ ಸೃಷ್ಟಿಸಿತ್ತು. ಹಳ್ಳಿಗಾಡಿನಿಂದ ಓದಲು ನಗರಗಳಿಗೆ ಬಂದ ವಿದ್ಯಾರ್ಥಿಗಳು ವಾರಾನ್ನವನ್ನು ಉಂಡು ಬದುಕಿದರು. ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಬರುತ್ತಿದ್ದ ಸ್ನಾತಕರು ದಟ್ಟಿ ಪಂಚೆ, ಮೋಟು ತೋಳಿನ ಅಂಗಿ ಅಥವಾ ಹತ್ತಿ ಬಟ್ಟೆಯ ಪೈಜಾಮ ಶರಟುಗಳನ್ನು ತೊಟ್ಟು ಬರುತ್ತಿದ್ದುದೂ ಉಂಟು. ಈಗ ಒಂದು ಚೂಡಿದಾರ್ ಜೋಡಿಯನ್ನು ಹೊಲಿಯಲು ಎಪ್ಪತ್ತೈದರಿಂದ ನೂರಿಪ್ಪತ್ತು ರೂ.ಗಳವರೆಗೆ ಮಜೂರಿ. ಸಾಮಾನ್ಯ ಶರಟು ಹೊಲಿಯಲು ಎಪ್ಪತ್ತೈದು ರೂ; ಪ್ಯಾಂಟ್ ಹೊಲಿಯಲು ನೂರೈವತ್ತು ಮತ್ತು ಹೆಚ್ಚು. ಇಂಥ ಅರ್ಥ ವ್ಯವಸ್ಥೆಯಲ್ಲಿ ಈ ದೇಶ ತನ್ನ ಪ್ರಜಾ ಸಂಪತ್ತಿಗೆಲ್ಲ ಎಂದಾದರೂ ವಿದ್ಯೆ ಕಲಿಸಬಲ್ಲುದೇ ? ಅನಕ್ಷರತೆಯ ನಿರ್ಮೂಲನ ಅಕ್ಷರ ಸತ್ಯವಾದೀತೇ ? ಹಣವಿದ್ದವರಿಗಷ್ಟೇ ಶಿಕ್ಷಣ. ಮಿಕ್ಕ ನಿರ್ಗತಿಕರಿಗೆ ಪರಂಪರೆಯಿಂದ ಅವರ ಪೂರ್ವಿಕರು ಮಾಡಿಕೊಂಡು ಬಂದ ಕೀಳು ಕಸುಬುಗಳೇ ಗತಿ ಎಂಬಂತಾಗುತ್ತದೋ ಕಾದು ನೋಡಬೇಕು.

ಪ್ರೊ॥ ಎಚ್. ಜಿ. ಸಣ್ಣಗುಡ್ಡಯ್ಯ
೧, 'ಎ' ಅಡ್ಡರಸ್ತೆ, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

ಎಸ್. ಎನ್. ಶಿವಸ್ವಾಮಿ

**ಯಾ**ರಿಂದಲಾದರೂ ಸರಿಯೆ, ಸತತವಾಗಿ ಉಚಿತ ಸೇವೆ ಅಪೇಕ್ಷಿಸಿ ಪಡೆಯುತ್ತಲೇ ಇರುವುದು ನಮ್ಮ ಮಾದೇವಪುರದ ಮಾಲಿಂಗಯ್ಯನ ವಿಶೇಷ ಸ್ವಭಾವ. ಸೇವೆ ಹಣದ ರೂಪದಲ್ಲೇ ಸಲ್ಲಬೇಕೆಂದಿಲ್ಲ, ವಸ್ತು ರೂಪದಲ್ಲಿ ಅಥವಾ ಚಾಕರಿ ರೂಪದಲ್ಲಿ ದೊರಕಿದರೆ ಆದೀತು. ಅದಕ್ಕೆ ಪ್ರತಿಯಾಗಿ ತಾನು ಏನೊಂದೂ ಖರ್ಚು, ಶ್ರಮ ವಹಿಸದಿರುವುದು ಮುಖ್ಯ. ಮಾಲಿಂಗಯ್ಯ ಗಿರಿಜಾ ಮೀಸೆ ಹೊತ್ತ ಸ್ಥೂಲಕಾಯದ ಎತ್ತರದ ಆಳು. ಸಾಲದ್ದಕ್ಕೆ ಶುದ್ಧ ಸೋಂಬೇರಿ. ಯಾರಿಂದ ಬೇಕಾದರೂ ಕೆಲಸ ತೆಗೆಯಬಲ್ಲ ಯುಕ್ತಿಶಾಲಿಯೂ ಹೌದು. ಮನೆಯಲ್ಲಿದ್ದರೂ ಅಷ್ಟೆ, ತಾನು ಹೋಗುತ್ತಿದ್ದ ಎಲ್ಲೈಸಿ ಆಫೀಸಿನಲ್ಲೂ ಅಷ್ಟೆ, ಕೂತಲ್ಲಿಂದ ಕದಲದೆ ತನ್ನ ಅವಶ್ಯಕತೆಗಳನ್ನೆಲ್ಲ ಒದಗಿಸಿಕೊಳ್ಳುವುದು ಅವನ ವೈಶಿಷ್ಟ್ಯ.

ಬೆಳಿಗ್ಗೆ ಮನೆ ಮುಂದಿನ ಜಗುಲಿಯ ಮೇಲೆ ಈಸಿ ಚೇರಿನಲ್ಲಿ ಪ್ರತಿಷ್ಠಿತನಾದ ಮೇಲೆ ಮಾಲಿಂಗಯ್ಯನಿಗೆ ಗೇಟಿನ ಬಳಿ ಬಿದ್ದಿರುತ್ತಿದ್ದ ದಿನಪತ್ರಿಕೆ ತಂದುಕೊಡಲು ಬೀದಿಯಲ್ಲಿ ಹೋಗುತ್ತಿದ್ದ ಯಾರಾದರೂ ಬೇಕು. ಸೈಕಲ್ ತುಳಿಯುತ್ತಿದ್ದ ಯಾವ ಅಪರಿಚಿತ ಹುಡುಗನನ್ನಾದರೂ ಕರೆದು ''ಹಾಗೇ ಬರ್‍ತಾ ಒಂದು ಸಿಗರೇಟ್ ಪ್ಯಾಕ್ ತಂದುಬಿಡು ಮರಿ'' ಅಂತ ಅಪ್ಪಣೆ ಕೊಡಿಸುತ್ತಿದ್ದ. ''ಹಾಲು ತರೋಕೆ ಹೋಗ್ತಿದ್ದೀಯಾ ? ಇಗೋ, ದುಡ್ಡು ತಗೋ, ನಮಗೂ ಒಂದು ಪ್ಯಾಕೆಟ್ ತಂದ್ಬಿಡು'', ''ಸೊಪ್ಪಿನ ಕೈಗಾಡಿ ಬಂದ್ರೆ ನಮಗೊಂದು ಕಟ್ಟು ಕೊತ್ತಂಬರಿ ಸೊಪ್ಪು ತಗೋಮ್ಮ'', ''ಪೇಟೆ ಕಡೆ ಹೊರಟಿರಾ ? ದಯಮಾಡಿ ಹಾಗೇ ಈ ಕಾಗದ ಪೋಸ್ಟು ಮಾಡಿಬಿಡಿ'', ''ಬ್ಯಾಂಕಿಗೆ ಹೋದರೆ ಈ ನನ್ನ ಚೆಕ್ ಮುರಿಸಿಕೊಂಡು ಬರ್‍ತೀರಾ ?'' ಹೀಗೆಲ್ಲಾ ಮಾಲಿಂಗಯ್ಯ ತನ್ನ ಎಲ್ಲಾ ಪುಡಿಗೆಲಸಗಳನ್ನು ಅಕ್ಕಪಕ್ಕದವರಿಂದ ಮಾಡಿಸಿಕೊಳ್ಳುತ್ತಾನೆ. ಅವನು ಮನೆಬಿಟ್ಟು ಸ್ಕೂಟರ್ ಏರಿದರೆ ಹೋಗುವುದು ನೇರವಾಗಿ ಆಫೀಸಿಗೆ. ಅಲ್ಲಿಂದ ಹಿಂದಕ್ಕೆ ಬಂದರೆ ಮನೆ. ಅಷ್ಟೇ ಹೊರತು ತನ್ನ ಸ್ವಂತ ಕಾರ್ಯಗಳಿಗಾಗಿ ಬಿಡುವು ಮಾಡಿಕೊಂಡವನೇ ಅಲ್ಲ. ನೆರೆಹೊರೆಯ ಮನೆಯವರು ಯಾವ ಯಾವ ದಿನ ಎಲೆಕ್ಟ್ರಿಕ್ ಬಿಲ್, ನೀರಿನ ಬಿಲ್, ಫೋನ್ ಬಿಲ್ ಕಟ್ಟಲು ಹೋಗುತ್ತಾರೆಂಬ ಮಾಹಿತಿಯನ್ನು ತಿಳಿದಿಟ್ಟುಕೊಂಡು, ಅವನು ಅವರುಗಳ ಜತೆಗೆ ತನ್ನ ಬಿಲ್ಲುಗಳನ್ನು ಕಳಿಸಿ ಪಾವತಿ ಮಾಡಿಸುತ್ತಾನೆ. ತಡವಾದರೆ ಅವರನ್ನೇ ಕರೆದು ಅವರಿಗೆ ಆಯಾ ಗಡುವಿನ ದಿನಗಳನ್ನು ಜ್ಞಾಪಕ ಮಾಡುತ್ತಾನೆ.




ಮಾಲಿಂಗಯ್ಯನ ಮನೆಯ ಹತ್ತಿರವೇ ಒಂದು ನರ್ಸಿಂಗ್ ಹೋಮ್ ಇದೆ. ಅದರಲ್ಲಿ ಒಬ್ಬ ಅತಿ ಜೂನಿಯರ್ ಡಾಕ್ಟರ್ ಉದ್ಯೋಗದಲ್ಲಿದ್ದಾನೆ. ಆತ ಡ್ಯೂಟಿಗೆ ಹೋಗಿಬರುವುದು ಮಾಲಿಂಗಯ್ಯನ ಮನೆ ಮಾರ್ಗವಾಗಿಯೇ. ದಿನಕ್ಕೆರಡು ಬಾರಿ ಅವರಿಬ್ಬರ ಮುಖಾಮುಖಿ, ಕುಶಲ ಪ್ರಶ್ನೆ ವಿನಿಯೋಗ ಆಗುತ್ತಲೇ ಇತ್ತು. ಮಾಲಿಂಗಯ್ಯ ಡಾಕ್ಟರನ್ನು ಒಂದೆರಡು ನಿಮಿಷ ನಿಲ್ಲಿಸಿಕೊಂಡು ತನ್ನ ಸ್ವಾಸ್ಥ್ಯದ ಬಗ್ಗೆ ಉಚಿತ ಸಲಹೆ ಪಡೆಯುತ್ತಿದ್ದ. ಅವಸರದಲ್ಲಿರುತ್ತಿದ್ದ ಡಾಕ್ಟರು ಅವನಿಗೆ ಯಾವ ಅನಾರೋಗ್ಯವೂ ಇಲ್ಲವೆಂದು ಹೇಳಿ ಮುಂದೆ ಹೋಗಲೆತ್ನಿಸುತ್ತಿದ್ದ. ಮಾಲಿಂಗಯ್ಯನ ಸಂದೇಹ ಮಾತ್ರ ಪರಿಹಾರವಾಗುತ್ತಿರಲಿಲ್ಲ. ಇಲ್ಲಸಲ್ಲದ ರೋಗ ಲಕ್ಷಣಗಳ ಚರ್ಚೆಮಾಡಿ ಡಾಕ್ಟರ ಅಭಿಪ್ರಾಯ ಕೇಳುತ್ತಿದ್ದ. ಬೇಜಾರಿನಿಂದ ಬೇಸತ್ತು ಡಾಕ್ಟರು ಮಾಲಿಂಗಯ್ಯನಿಂದ ತಪ್ಪಿಸಿಕೊಳ್ಳುವ ಸಲುವಾಗಿಯೇ ಸ್ಕೂಟರ್ ಕೊಂಡುಕೊಂಡು ಸುತ್ತು ಬಳಸು ದಾರಿಯಲ್ಲಿ ನರ್ಸಿಂಗ್ ಹೋಮಿಗೆ ಹೋಗಿಬರಲಾರಂಭಿಸಿದ್ದಾನೆ.

ಅದೇ ಸುಮಾರಿಗೆ ಮಗ್ಗುಲುಮನೆ ಒಕ್ಕಲು ಬದಲಾವಣೆಯಾಗಿ ಮನೆಯ ಮುಂದೆ ಡಾಕ್ಟರ್ ಶೆಣೈ ಅಂತ ಹೊಸ ಬೋರ್ಡು ತೂಗಿತು. ಮಾಲಿಂಗಯ್ಯನಿಗೆ ಕಾಣೆಯಾದ ಮರಿ ಡಾಕ್ಟರಿಗೆ ಬದಲಿ ಸಿಕ್ಕಿದ ಸಂತೋಷವಾಯಿತು. ಮಾಲಿಂಗಯ್ಯನ ದೃಷ್ಟಿಗೆ ಶೆಣೈ ಬಿದ್ದದ್ದೇ ತಡ, ಲೋಕಾಭಿರಾಮವಾಗಿ ಆತನನ್ನು ಮಾತನಾಡಿಸುತ್ತ ''ಓಹೋ, ತಾವೇ ಡಾಕ್ಟರ್ ಶೆಣೈ ಅಲ್ವೆ ?'' ಅಂತ ವಿಚಾರಿಸಿದ. ಶೆಣೈಯವರು ಹೌದೆನ್ನುವಷ್ಟರಲ್ಲಿ ಮಾಲಿಂಗಯ್ಯ ''ಒಂದ್ನಿಮಿಷ ಹೀಗೆ ಬರ್‍ತೀರಾ ? ಒಂದ್ಸಲ ನನ್ನ ಬಿ.ಪಿ. ಚೆಕ್ ಮಾಡೋ ಅಷ್ಟು ಪುರುಸೊತ್ತಿದೆಯೆ ?'' ಅಂದ.

ಶೆಣೈ ''ನಾನು ಅರ್ಥಶಾಸ್ತ್ರದ ಡಾಕ್ಟರು'' ಅಂದರು.

ಮಾಲಿಂಗಯ್ಯ ಅವರನ್ನು ಅಷ್ಟು ಸುಲಭವಾಗಿ ಬಿಟ್ಟುಬಿಟ್ಟಾನೆಯೆ ! ''ಹಾಗಾದ್ರೆ ನಿಮ್ಮ ಅಭಿಪ್ರಾಯ ನನಗೆ ಬೇಕೇ ಬೇಕು. ನನ್ನ ಹತ್ತಿರ ಧಂಡಿಯಾಗಿ 'ಆರ್ವಿ' ಸಿಮೆಂಟು ಕಂಪೆನಿಯ ಷೇರುಗಳು ಬಿದ್ದಿವೆ. ಆ ಕಂಪೆನಿ ಹ್ಯಾಗೆ ? ಮುಂದಕ್ಕೆ ಬರೋ ಸೂಚನೆಗಳಿವೆಯೆ ?'' ಅಂತ ಅಲ್ಲೂ ಉಚಿತ ಮಾಹಿತಿ ಸಂಗ್ರಹಿಸುವ ಹಂಚಿಕೆ ಹಾಕಿದ.

ಮಾಲಿಂಗಯ್ಯನ ಮನೆಯ ಎದುರು ಮನೆಯ ಗೃಹಿಣಿ ಮನೆಯಿಂದ ಹೊರಡುತ್ತಲೇ ಆಕೆ ಮಾರ್ಕೆಟ್ಟಿಗೆ ಹೊರಟಿದ್ದಾಳೆಂದು ದೃಢಪಡಿಸಿಕೊಂಡು ಆಕೆಯ ಕೈಲಿ ತಾನೂ ಸ್ವಲ್ಪ ತರಕಾರಿ ತರಿಸಿಕೊಂಡುಬಿಡುತ್ತಿದ್ದ. ಒಂದು ದಿನ ಆಕೆ ಮಾಲಿಂಗಯ್ಯ ಕೇಳುವುದಕ್ಕೆ ಮುಂಚೆಯೇ ''ಇವತ್ತು ನಾನು ಮಾರ್ಕೆಟ್ಟಿಗೆ ಹೋಗ್ತಾ ಇಲ್ಲ. ಇಲ್ಲೇ ಗಣಪತಿ ಗುಡಿಗೆ ಹೋಗಿಬರ್‍ತೀನಿ'' ಅಂದಳು. ಮಾಲಿಂಗಯ್ಯ ಅಲ್ಲಿಗೂ ಆಕೆಯ [illegible] ಬಿಡದೆ ''ಅಲ್ಲಿಂದ ಒಂದಿಷ್ಟು ಗರಿಕೆ ಹುಲ್ಲು ಕಿತ್ಕೊಂಡು ಬನ್ನಿ'' ಅಂತ [illegible] ಪುಕ್ಕಟೆ ಸೇವೆಯನ್ನು ಸಂಪಾದಿಸಿದ.

ಉಚಿತ ಸೇವೆ ಪಡೆಯುವ ಪ್ರವೃತ್ತಿಯು ಮಾಲಿಂಗಯ್ಯನ [illegible] ಜುಗ್ಗಪ್ಪ ಅನ್ನುವ ಇನ್ನೊಬ್ಬ ಉಚಿತ ಸೇವಾ ಧುರಂಧರನ ಪರಿಚಯ ಇದೆ. [illegible] ಅರಸುವುದು ಇನ್ನೊಂದು ರೀತಿಯ ಉಚಿತ ಸೇವೆ. [illegible] ಭೇಟಿಯಾಗಿರುವುದೂ ಸಾಧ್ಯ. [illegible]

ಪ್ರವೀಣನೆನ್ನುವುದನ್ನು ನಿಮ್ಮ ನೆನಪಿಗೆ ತರಲು ಇಲ್ಲಿ ಪ್ರಯತ್ನಿಸುತ್ತೇನೆ.

ಜುಗ್ಗಪ್ಪನಿಗೆ ಮುಫತ್ತಾಗಿ ಸಿಗುವ ಯಾವ ವಸ್ತುವನ್ನೂ ಬಿಡದೆ ಕಸಿದುಕೊಳ್ಳುವ ಅಭ್ಯಾಸ ಇದೆ. ಈಚೆಗೆ ನಾನು ಗಮನಿಸಿದ ಕೆಲವು ಸಂಗತಿಗಳು ಇದಕ್ಕೆ ಹೊಸ ದೃಷ್ಟಾಂತಗಳೆನ್ನಿಸಿಕೊಳ್ಳಬಹುದು. ಮೊನ್ನೆ ಅವನ ಮನೆಗೆ ಹೋದಾಗ ಒಂದು ನಾಯಿಮರಿ ಮನೆಯಲ್ಲಿ ಓಡಾಡುತ್ತಿರುವುದು ಕಾಣಿಸಿತು. ಜೇಬಿಗೆ ಹಾಕಿದ ಕೈಯನ್ನು ಜಪ್ಪಯ್ಯ ಅಂದರೂ ಹೊರಕ್ಕೆ ತೆಗೆಯದ ಜುಗ್ಗಪ್ಪ ನಾಯಿಮರಿ ಕೊಳ್ಳಲು ಹೇಗೆ ಮನಸ್ಸು ಮಾಡಿದ ಅನ್ನುವುದು ನನಗೆ ಆಶ್ಚರ್ಯ. ಯಾರೋ ಸುಮ್ಮನೆ ಕೊಟ್ಟಿರಬಹುದೆಂದು ಊಹಿಸಿದೆ. ಆಗ ಅವನ ಹೆಂಡತಿಯೇ ಅದು ಮನೆಗೆ ಬಂದ ಸಂದರ್ಭವನ್ನು ವಿವರಿಸಿದಳು. ಹಬ್ಬದ ಇಳುವರಿ ವ್ಯಾಪಾರದಲ್ಲಿ ಒಂದೊಂದು ಕಿಲೋ ಅಕ್ಕಿ ಕೊಂಡವರಿಗೆ ನಾಲ್ಕು ನಾಲ್ಕು ನಾಯಿ ಸೋಪುಬಿಲ್ಲೆ ಉಚಿತವಾಗಿ ಕೊಡುತ್ತಿದ್ದ ಅಂಗಡಿಗೆ ಹೋಗಿ ಜುಗ್ಗಪ್ಪ ಎರಡು ಕಿಲೋ ಅಕ್ಕಿ ತಂದನಂತೆ. ಅಕ್ಕಿಯ ಜತೆಗೆ ಉಚಿತವಾಗಿ ಕೈಸೇರಿದ ಎಂಟು ನಾಯಿ ಸೋಪುಗಳೂ ಉಪಯೋಗವಾಗುವ ತನಕ ನಾಯಿಮರಿಯನ್ನು ಎಲ್ಲಿಂದಲೋ ಎರವಲು ತಂದಿದ್ದನಂತೆ.

ಜುಗ್ಗಪ್ಪನಿಗೆ ಒಂದು ದಿನ ಬೀದಿಯಲ್ಲಿ ಯಾರೋ ಬೀಳಿಸಿಕೊಂಡು ಹೋಗಿದ್ದ ಕೆಮ್ಮಲು ಮಾತ್ರೆಯ ಡಬ್ಬಿ ಸಿಕ್ಕಿತು. ಮನೆಯಲ್ಲಿ ಯಾರಿಗೂ ಕೆಮ್ಮಲು ಇಲ್ಲ. ದಿನವೆಲ್ಲ ಕೆಮ್ಮಲು ಮಾತ್ರೆಗಳನ್ನು ಹೇಗೆ ಉಪಯೋಗಿಸಿಕೊಳ್ಳುವುದೆನ್ನುವ ಯೋಚನೆ ಮಾಡಿದ. ಸಂಜೆಯ ಮಳೆಗಾಳಿ ಚಳಿಯಲ್ಲಿ ಅವನಿಗೆ ಪರಿಹಾರ ತೋಚಿತು. ಚಿಕ್ಕ ಕೋಣೆಯ ಕಿಟಕಿಯ ಹತ್ತಿರ ಮಲಗುತ್ತಿದ್ದ ತನ್ನ ಅತ್ತೆಯ ತಲೆಯ ಕಡೆಗಿದ್ದ ಕಿಟಕಿ ಬಾಗಿಲನ್ನು ತೆರೆದಿಟ್ಟು ರಾತ್ರಿಯೆಲ್ಲ ಅವಳಿಗೆ ಥಂಡಿ ತಗಲುವ ಹಾಗೆ ಮಾಡಿ ಮಾರನೆಯ ದಿನವೇ ಅವಳಿಗೆ ಶೀತ, ಕೆಮ್ಮಲು ಪ್ರಾರಂಭವಾಗುವ ಹಾಗೆ ಮಸಲತ್ತು ಮಾಡಿ ಮಾತ್ರೆಗಳಿಗೆ ಉಪಯೋಗ ಕಲ್ಪಿಸಿದ.

ಜುಗ್ಗಪ್ಪ ತನ್ನ ಕಾಲೇಜು ದಿನಗಳಿಂದಲೇ ಜಿಪುಣತನಕ್ಕೆ ಪ್ರಸಿದ್ಧನಾಗಿದ್ದ. ಆ ದಿನಗಳಲ್ಲಿ ಅವನಿಗೂ ಒಬ್ಬ ಗೆಳತಿ ಇದ್ದಳು. ಅಪ್ಪನ ಕಣ್ಣು ತಪ್ಪಿಸಿ ಅವಳೊಂದಿಗೆ ಆಗಾಗ ವಿಹಾರಾರ್ಥವಾಗಿ ಹೊರಗೆ ಹೋಗುತ್ತಿದ್ದ. ಒಂದು ದಿನ ಅವರಿಬ್ಬರೂ ಹೊಟೆಲಿಗೆ ಹೋಗಿ ಬಂದದ್ದನ್ನು ಕಂಡವರೊಬ್ಬರು ಗೆಳತಿಯನ್ನು ಪ್ರಶ್ನಿಸಿದರು : ''ಜುಗ್ಗಪ್ಪ ನಿನ್ನನ್ನು ಹೊಟೆಲಿಗೆ ಕರೆದುಕೊಂಡು ಹೋದದ್ದು ಆಶ್ಚರ್ಯ. ನಿನ್ನ ಬಿಲ್ಲು ನೀನೇ ಕೊಡಬೇಕಾಯ್ತೇನೋ ?'' ಹುಡುಗಿ : ''ನನ್ನ ಬಿಲ್ಲು ನಾನು ಕೊಡೋದಿರಲಿ, ಅವನ ಬಿಲ್ಲನ್ನೂ ಯಾವಾಗಲೂ ನಾನೇ ಚುಕಾಯ್ಸೋದು'' ಅಂದಳು.

ಜುಗ್ಗಪ್ಪನ ಮನೆಯಿಂದ ನಡೆದುಕೊಂಡು ಹೋಗುವ ದೂರದಲ್ಲಿ ಒಂದು ಈಜುಕೊಳದ ಉದ್ಘಾಟನೆಯಾಯಿತು. ಪ್ರಾರಂಭದ ದಿನ ಸಾರ್ವಜನಿಕರಿಗೆ ಈಜುಕೊಳದಲ್ಲಿ ಉಚಿತ ಈಜು ವ್ಯವಸ್ಥೆ ಏರ್ಪಾಡಾಗಿತ್ತು. ನಡೆದುಹೋಗುವ ಜಾಗಗಳಿಗೇ ಹೋಗಿಬರುತ್ತ ಜುಗ್ಗಪ್ಪ ಬಸ್ಸು ಆಟೋಗಳ ಖರ್ಚನ್ನಂತೂ ಉಳಿಸುತ್ತಿದ್ದ. ಪಾರ್ಕಿನ ನಡೆದಾಟದಲ್ಲಿ ಉಚಿತವಾಗಿ ದಕ್ಕುತ್ತಿದ್ದ ಗಾಳಿ ಸೂರ್ಯರಶ್ಮಿಗಳ ಜತೆಗೆ ಹೀಗೆ ಪುಕ್ಕಟೆ ಈಜುವ ಸೌಕರ್ಯವೂ ಒದಗಿತೆಂದರೆ ಅವನಿಗೆ ಪರಮಾನಂದವೇ ಆಯ್ತು. ಈಜುಕೊಳಕ್ಕೆ ಮನೆಯವರನ್ನೆಲ್ಲ ಕರೆದುಕೊಂಡು ಹೋಗಿ ಶಕ್ತಿ ಮೀರಿ ಈಜಿದ. ಮಕ್ಕಳನ್ನು ಬಾರಿಬಾರಿಗೆ ಮುಳುಗು ಹಾಕಿಸಿ ಕೈಕಾಲು ಬಡಿಯುವುದನ್ನು ಕಲಿಸಿದ. ಈಜುಕೊಳದ ಹೆಬ್ಬಾಗಿಲು ಮುಚ್ಚುವ ಸಮಯದಲ್ಲಿ ಅವರೆಲ್ಲ ಇನ್ನೂ ನೀರಿನಲ್ಲೇ ಇದ್ದರು. ಆ ದಣಿದ ದೇಹಗಳನ್ನು ಕಾವಲುಗಾರರು ಆಚೆಗೆಳೆದು ಹಾಕಿರದಿದ್ದರೆ ಈಜುಕೊಳದ ಪ್ರಾರಂಭೋತ್ಸವದ ಚರಿತ್ರೆ ದುರಂತದಲ್ಲಿ ಮುಕ್ತಾಯವಾಗುತ್ತಿತ್ತು.

ಜುಗ್ಗಪ್ಪನ ಬಳಿ ಹಣವಿಲ್ಲವೆಂದೇನಿಲ್ಲ. ಅವನು ಹಣ ಖರ್ಚು ಮಾಡದೆ ಗಂಟು ಮಾಡುವ ಯೋಚನೆಯನ್ನೇ ಮಾಡುತ್ತಿದ್ದ, ಅಷ್ಟೆ. ಒಂದು ಸಲ ಅವನು ಯಾವುದೋ ಹಳೆಯ ಆಸ್ತಿ ಮಾರಿ ಬಂದ ದುಡ್ಡನ್ನು

ದ್ವಿಗುಣಗೊಳಿಸುವ ದಾರಿ ಹುಡುಕುತ್ತಿದ್ದ. ಅವನಿಗೆ ಯಾರೋ ಪೆಟ್ರೋಲ್ ಬಂಕ್ ಖರೀದಿಸುವ ಸೂಚನೆ ಕೊಟ್ಟರು. ಅಲ್ಲಿ ಇಲ್ಲಿ ವಿಚಾರಿಸಿ ಮಾರಾಟಕ್ಕಿದ್ದ ಒಂದು ಪ್ರತಿಷ್ಠಿತ ಪೆಟ್ರೋಲ್ ಬಂಕನ್ನು ಕೊಂಡುಕೊಂಡ. ಹೊಸ ಮಾಲೀಕನಾಗಿ ಅವನು ಅದರಲ್ಲಿ ತಂದ ಒಂದೇ ಒಂದು ಸುಧಾರಣೆ ಅಲ್ಲಿದ್ದ ''ನೀರು, ಗಾಳಿ ಫ್ರೀ'' ಎಂಬ ಬೋರ್ಡ್‌ನ್ನು ಕಿತ್ತೊಗೆದದ್ದು.

ಜುಗ್ಗಪ್ಪನ ಬಳಿ ಹಣ ಕೊಳೆಯುತ್ತ ಬಿದ್ದಿರಬಹುದೆಂದು ಊಹಿಸಿದ ಒಬ್ಬ ಅಪಹರಣಕಾರ ಒಂದು ಸಲ ಅವನನ್ನು ಅಪಹರಿಸಿ ಅವನ ಬಿಡುಗಡೆಗಾಗಿ ಒಂದು ಲಕ್ಷ ಒತ್ತೆ ಹಣ ಕೇಳಿ ಮನೆಯವರಿಗೆ ಫೋನು ಮಾಡಿದ. ಜುಗ್ಗಪ್ಪ ತನ್ನ ಸೆರೆಯಲ್ಲಿರುವುದನ್ನು ಸಾಬೀತುಪಡಿಸಲು ಅವನ ಕೈಗೇ ಫೋನು ಕೊಟ್ಟು ಮಾತನಾಡಲು ಹೇಳಿದ. ಜುಗ್ಗಪ್ಪ ಮನೆಯವರನ್ನು ಸುಲಿಗೆ ಹಣ ತೆರಬಾರದೆಂದೂ, ಹೇಗೋ ತಾನು ತಪ್ಪಿಸಿಕೊಂಡು ಬರುವೆನೆಂದೂ ಹೇಳಿದ. ಆಮೇಲೆ ತಪ್ಪಿಸಿಕೊಂಡು ಬಂದಮೇಲೆ ತಾನು ಹೇಗೆ ಮೂರುವಾರ ತನ್ನ ಊಟ ತಿಂಡಿಗಳನ್ನು ಇನ್ನೊಬ್ಬರ ಖರ್ಚಿನಲ್ಲಿ ಅನುಭವಿಸಿದೆನೆನ್ನುವುದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ.

ಒಂದು ಸಲ ನಡುರಾತ್ರಿಯಲ್ಲಿ ಜುಗ್ಗಪ್ಪನ ಹೆಂಡತಿಗೆ ಗಂಟಲು ನೋವು ಶುರುವಾಗಿ ಅವನು ಹತ್ತಿರದಲ್ಲೇ ಇದ್ದ ಔಷಧಿಯಂಗಡಿಗೆ ಓಡಿದ. ಅಂಗಡಿಯ ಬಾಗಿಲು ಮುಚ್ಚಿತ್ತಾದರೂ ಮಹಡಿಯ ಮೇಲೇ ಮಾಲೀಕನ ಮನೆ. ಮಹಡಿಗೆ ಹೋಗಿ ಕರೆಗಂಟೆ ಒತ್ತಿದ. ಗಾಢನಿದ್ರೆಯಿಂದ ಗಾಬರಿಗೊಂಡು ಎದ್ದು ಬಂದ ಅಂಗಡಿಯವನು ಮುಖ ಗಂಟಿಕ್ಕಿ ಏನಾಯಿತೆಂದು ವಿಚಾರಿಸಿದ. ಜುಗ್ಗಪ್ಪ ತನ್ನ ಹೆಂಡತಿಗೆ ಗಂಟಲುನೋವು ಉಲ್ಬಣಿಸದಂತೆ ಏನಾದರೂ ಔಷಧಿ ಬೇಕೆಂದು ಕೇಳಿದ. ಅಂಗಡಿಯವನು ತಲೆ ಚಚ್ಚಿಕೊಂಡು ''ಈ ಸಣ್ಣ ಕಾರಣಕ್ಕಾಗಿ ನನ್ನ ನಿದ್ದೆ ಕೆಡಿಸಿದಿರಾ ? ಒಂದು ಲೋಟ ಬಿಸಿನೀರು ಕುಡಿಸಿದ್ದರೆ ಇಷ್ಟು ಹೊತ್ತಿಗೆ ಗಂಟಲುನೋವು ಮಾಯವಾಗ್ತಿರಲಿಲ್ವೆ ?'' ಆತ ರೇಗಿದ. ಜುಗ್ಗಪ್ಪ ಜ್ಞಾನೋದಯವಾದವನಂತೆ ಅಂಗಡಿಯವನಿಗೆ ಥ್ಯಾಂಕ್ಸ್ ಹೇಳಿ ನೀರು ಕಾಯಿಸಲು ಮನೆಗೆ ಓಡಿದ.

ಹುಷಾರಾಗಿ ಇಸ್ಪೀಟಾಡಿ ಅಷ್ಟಿಷ್ಟು ಪುಡಿಕಾಸು ಗಳಿಸುವುದಕ್ಕಾಗಿ ಜುಗ್ಗಪ್ಪ ಒಂದು ಚಿಲ್ಲರೆ ಕ್ಲಬ್ಬಿನ ಮೆಂಬರಾಗಿದ್ದ. ಒಂದೊಂದು ಸಲ ಇಸ್ಪೀಟ್ ಬಳಗದ ಇಬ್ಬರು ಮೂವರು ಸೇರಿ ಒಂದೆರಡು ಸುತ್ತು 'ಪಾನಕ ಪೂಜೆ' ಮಾಡುತ್ತಿದ್ದರು. ಜುಗ್ಗಪ್ಪ ಅದರಲ್ಲಿ ಭಾಗಿಯಾಗಿ ಒಂದೊಂದಾಗಿ ಎರಡು ಪೆಗ್ ಮಾತ್ರ ಕುಡಿದು ಎದ್ದು ಹೋಗುತ್ತಿದ್ದ. ಯಾವಾಗಲೂ ಎರಡೇ ಪೆಗ್, ಯಾಕೆಂದರೆ ಮೂರನೆಯ ಸುತ್ತಿಗೆ ಇವನ ಸರದಿ ಬರುತ್ತಿತ್ತು. ಜುಗ್ಗಪ್ಪನ ಉಚಿತ ಸೇವೆಗಳ ಪಟ್ಟಿ ಬಹಳ ದೊಡ್ಡದು. ಅವುಗಳಲ್ಲಿ ಹಲವನ್ನಾದರೂ ಪರಿಶೀಲಿಸಿದವರಿಗೆ ಅವನ ವ್ಯಕ್ತಿತ್ವದ ಪರಿಚಯವಾಗದೆ ಇರದು. ಕೆಲವು ಗಮನಾರ್ಹ ಉದಾಹರಣೆಗಳೊಂದಿಗೆ ಈ ನನ್ನ ಸಮೀಕ್ಷೆಯನ್ನು ಮುಗಿಸುತ್ತೇನೆ.

ಜುಗ್ಗಪ್ಪ ಪ್ರಕೃತಿ ಚಿಕಿತ್ಸೆಯ ಸಂಬಂಧವಾಗಿ ಎಲ್ಲಿಂದಲೋ ಒಂದು ಕಿರುಪುಸ್ತಕವನ್ನು ಉಚಿತವಾಗಿ ಸಂಪಾದಿಸಿ ಓದಿ ಬಹಳ ಆನಂದ ಹೊಂದಿದ. ಅದರ ಸೂಚನೆಯಂತೆ ಮನೆಮಂದಿಗೆಲ್ಲ ತಣ್ಣೀರು ಸ್ನಾನ, ಮಿತಾಹಾರ, ಆದಷ್ಟು ಮಟ್ಟಿಗೆ ಊಟಕ್ಕೆ ಹಸಿ ತರಕಾರಿ ಬಳಕೆ ಈ ನಿಯಮಗಳನ್ನನುಸರಿಸಿ ಅದರಿಂದ ಆದ ಇಂಧನ ಉಳಿತಾಯದ ಲೆಕ್ಕ ಹಾಕುತ್ತಿದ್ದ. ರಾತ್ರಿ ವಿದ್ಯುದ್ದೀಪಗಳು ಆರಿಹೋದಾಗ ರಿಪೇರಿಗಾಗಿ ಫೋನು ಮಾಡಹೊರಡದೆ ವಿದ್ಯುಚ್ಛಕ್ತಿ, ಟೆಲಿಫೋನ್ ಎರಡೂ ಬಾಬತ್ತಿನ ಖರ್ಚು ಉಳಿಸಿ ಸಂತೋಷಪಡುತ್ತಿದ್ದ. ಮನರಂಜನೆಗೆಂದು ಅವನು ತನ್ನ ಮನೆಯವರನ್ನು ತಿಳಿದವರ ಮಕ್ಕಳ ಉಚಿತ ನೃತ್ಯ ರಂಗಪ್ರವೇಶಗಳಿಗೆ ಮಾತ್ರ ಕರೆದೊಯ್ಯುತ್ತಿದ್ದ. ಅವರು ನೋಡಿದ ನಾಟಕಗಳೆಂದರೆ ಉಚಿತ ಬೀದಿ ನಾಟಕಗಳ ಪ್ರದರ್ಶನಗಳಷ್ಟೆ. ಸಿನಿಮಾಗಳೆಂದರೆ ಟಿ.ವಿ.ಯಲ್ಲಿ ಕಂಡದ್ದೆಷ್ಟೋ ಅಷ್ಟೆ.

ಜುಗ್ಗಪ್ಪ ಸ್ವಲ್ಪ ದೂರದ ಸ್ಥಳಕ್ಕೆ ಹೋಗಿಬರಬೇಕಾಗಿದ್ದಲ್ಲಿ ಆ ದಿಕ್ಕಿಗೆ ಯಾರು ಯಾರು ಸ್ವಂತ ವಾಹನದಲ್ಲಿ ಎಂದೆಂದು ಪ್ರಯಾಣ ಮಾಡುತ್ತಾರೊ ಅನ್ನುವುದನ್ನು ತಿಳಿದುಕೊಂಡು ಅವರ ಜತೆಗೆ ಹೋಗಿ ಬಿಟ್ಟಿ ಸವಾರಿ ಮಾಡುತ್ತಿದ್ದ. ಲಾಂಡ್ರಿಯಲ್ಲಿ ಜುಗ್ಗಪ್ಪ ಎಂದಿಗೂ ತಮ್ಮ ಮನೆಯ ಕಾಲುಚೀಲಗಳನ್ನು ಚೆಲುವೆಗೆ ಹಾಕುತ್ತಿರಲಿಲ್ಲ. ಅವನು ಅವುಗಳನ್ನು ಪ್ಯಾಂಟ್ ಜೇಬುಗಳಲ್ಲಿ ಅಡಗಿಸಿಟ್ಟು ಲಾಂಡ್ರಿಗೆ ಕಳಿಸಿಬಿಡುತ್ತಿದ್ದ.

ಜುಗ್ಗಪ್ಪನ, ಅವನ ಮಕ್ಕಳ ಷರಟು ಷರಾಯಿಗಳು ಒಂದೇ ಮಾದರಿಯದಾಗಿರುವುದರ ರಹಸ್ಯವನ್ನು ಇಲ್ಲಿ ತಿಳಿಸಬಯಸುತ್ತೇನೆ. ಅವನೆಂದಿಗೂ ಹಳೆಯ ಬಟ್ಟೆಬರೆಗಳನ್ನು ದೂರ ಎಸೆಯುತ್ತಿರಲಿಲ್ಲ. ವರಸೆಯಾಗಿ ಬೆಳೆಯುತ್ತಾ ಬಂದಿದ್ದ ದೊಡ್ಡಮಗನಿಂದ ಒಡಿದು ಕಿರಿಯವನ ತನಕ ಬಟ್ಟೆಗಳು ಒಬ್ಬರಿಂದೊಬ್ಬರಿಗೆ ಬದಲಾಗಿ ಸತತವಾಗಿ ಉಪಯೋಗಕ್ಕೆ ಬರುತ್ತಿದ್ದವು. ದೀಪಾವಳಿ ಹಬ್ಬಕ್ಕೆ ಅವನ ಮಾವನವರು ಮನೆಯವರಿಗೆಲ್ಲಾ ಹೊಸಬಟ್ಟೆ ಹೊಲಿಸಿಕೊಳ್ಳಲು ಹಣ ಕಳಿಸುತ್ತಿದ್ದರು. ಜುಗ್ಗಪ್ಪ ಮಿಲ್ಲಿನ ಸಗಟು ಮಳಿಗೆಗೇ ಹೋಗಿ ಬಾಳಿಕೆ ಬರುವಂಥ ಒಂದು ಥಾನು ಬಟ್ಟೆ ತಂದುಬಿಡುತ್ತಿದ್ದ. ಅವನ ಬಂಧುವೊಬ್ಬ ಆನೆಕಲ್ಲಿನಲ್ಲಿ ದರ್ಜಿ ಕೆಲಸ ಮಾಡುತ್ತಿದ್ದ. ವಾರಕ್ಕೊಂದು ಸಲವಾದರೂ ಕೋರ್ಟು, ಕಚೇರಿ ಕೆಲಸಕ್ಕಾಗಿ ಬೆಂಗಳೂರಿಗೆ ಬಂದುಹೋಗುತ್ತಿದ್ದ. ಹಾಗೆ ಬಂದಾಗ ಜುಗ್ಗಪ್ಪ ಅವನಿಗೆ ಬಟ್ಟೆ ಒಪ್ಪಿಸಿ ತನಗೂ ಮಕ್ಕಳಿಗೂ ಷರಟುಗಳು, ಅದೇ ಬಟ್ಟೆಯಲ್ಲಿ ಹೆಂಡತಿಗೆ ರವಿಕೆ ಹೊಲಿದು ತರಲು ಹೇಳುತ್ತಿದ್ದ. ಜುಗ್ಗಪ್ಪನ ಮನೆಯಲ್ಲಿ ಇಳಿದುಕೊಂಡ ತಪ್ಪಿಗೆ ಶಿಕ್ಷೆಯಂತೆ ದರ್ಜಿ ಅಗ್ಗವಾಗಿ ಬಟ್ಟೆ ಹೊಲಿದು ತಂದುಕೊಡುತ್ತಿದ್ದ. ಒಟ್ಟು ಲೆಕ್ಕ ಮಾಡಿದವರಿಗೆ ಜುಗ್ಗಪ್ಪ ಈ ವಹಿವಾಟಿನಲ್ಲಿ ಸಾಕಷ್ಟು ಹಣ ಉಳಿತಾಯ ಮಾಡುತ್ತಿದ್ದುದು ತಿಳಿದುಬರುತ್ತಿತ್ತು.

ಆನೆಕಲ್ಲಿನ ದರ್ಜಿ ಹೊಲಿದುಕೊಡುತ್ತಿದ್ದ ಬಟ್ಟೆಗಳು ಒಮ್ಮೊಮ್ಮೆ ಬಿಗಿ, ಒಮ್ಮೊಮ್ಮೆ ಅಳ್ಳಕ ಇದ್ದರೂ ಜುಗ್ಗಪ್ಪನಿಗೆ ಅವುಗಳು ಅಗ್ಗದ ಬಟ್ಟೆಗಳೆಂದು ಮೆಚ್ಚಿಗೆ. ಅವುಗಳು ಏಕಪ್ರಕಾರವಾಗಿದ್ದದ್ದು ಅವನಿಗೆ ಒಂದು ಸಲ ಪೇಚಾಟ ಉಂಟುಮಾಡಿತ್ತು. ಅವನ ಹಿರಿಯಮಗ, ಕಡೆಯ ವರ್ಗದಲ್ಲಿ ಕಾಲೇಜಿನಲ್ಲಿ ಓದುತ್ತಿದ್ದವನು ಒಂದು ರಾತ್ರಿ ಸಹಪಾಠಿಯ ಮನೆಯಿಂದ ಹಿಂದಿರುಗುತ್ತಿದ್ದಾಗ ಮನೆಯ ಹತ್ತಿರ ತನ್ನನ್ನು ಬೊಗಳಿ ಬೆದರಿಸಿದ ನಾಯಿಯೊಂದಕ್ಕೆ ಕಲ್ಲು ಬೀಸಿ ಅದರ ಕಾಲು ಮುರಿದಿದ್ದ. ಆ ನಾಯಿಯನ್ನು ಸಂಚಾರಕ್ಕೆಂದು ಕರೆತಂದಿದ್ದ ಹುಡುಗ, ನಾಯಿಗೆ ಒಬ್ಬ ಪಟ್ಟೆ ಪಟ್ಟೆ ಷರಟಿನ ವ್ಯಕ್ತಿ ಪೆಟ್ಟು ಮಾಡಿದನೆಂದು ತನ್ನ ಅಪ್ಪನಿಗೆ ದೂರು ಹೇಳಿದ್ದಲ್ಲದೆ ಅಪರಾಧಿಯ ಮನೆಯನ್ನೂ ತೋರಿಸಿದ. ಕುಸ್ತಿ ಪೈಲ್ವಾನನಂತಿದ್ದ ಅಪ್ಪ ಮಾರನೆಯ ದಿನವೇ ಜುಗ್ಗಪ್ಪನನ್ನು ಬೀದಿಯಲ್ಲಿ ಅಡ್ಡಗಟ್ಟಿ ನಿಲ್ಲಿಸಿ ಥಳಿಸಿ ''ನಾಯಿಗೆ ಮಾಡಿದ ಹಾಗೆ ನಿನ್ನ ಕಾಲು ಮುರೀಲಿಲ್ಲ, ಹೋಗು. ನಿನ್ನ ಅದೃಷ್ಟ ಚೆನ್ನಾಗಿತ್ತು,'' ಅಂತ ಛೀಮಾರಿ ಹಾಕಿ ಕಳಿಸಿದ. ಮಗ ಮಾಡಿದ ತಪ್ಪಿಗೆ ತಾನು ಶಿಕ್ಷೆ ಅನುಭವಿಸಬೇಕಾಗಿ ಬಂದದ್ದು ಸಮವಸ್ತ್ರದ ಮಹಿಮೆಯಿಂದ ಎನ್ನುವುದು ಜುಗ್ಗಪ್ಪನಿಗೆ ಹೊಳೆಯಿತು. ಈ ಪ್ರಸಂಗವನ್ನು ನನಗೆ ಅವನೇ ಹೇಳಿ ತನಗಾದ ಅವಮಾನದ ಸಂಗತಿಯನ್ನು ನಗೆಮಾತಿನಲ್ಲಿ ತೇಲಿಸಿದ. ನಾನೂ ''ಇದೇ ನಿನಗೆ ಎಂದಾದರೂ ಆಗಲೇ ಬೇಕಾಗಿದ್ದ 'ಉಚಿತ' ಸೇವೆ, ಅಂದರೆ ನಿನ್ನ ಕಂಜೂಸಿತನಕ್ಕೆ ತಕ್ಕ ಶಾಸ್ತಿ'' ಅಂತ ಕುಹಕ ನುಡಿದು ಅವನ ನಗೆಯ ಮೂಡ್‌ನಲ್ಲಿ ಭಾಗಿಯಾದೆ.

ಎಸ್. ಎನ್. ಶಿವಸ್ವಾಮಿ
೬೭, (ಹೊಸ ೧೧೩), ಬಸಪ್ಪ ಲೇಔಟ್, ೧ನೇ ಕ್ರಾಸ್ ರೋಡ್
[illegible]ಪುರಂ ಬಡಾವಣೆ, ಹನುಮಂತನಗರ, ಬೆಂಗಳೂರು - [illegible]



# 'ಹೊಸತು' ವಿಶೇಷ ಸಂಚಿಕೆಗೆ ಶುಭಾಶಯಗಳು





ಪುಟ : 104 ಬೆಲೆ: ರೂ. 23

## ಜನಪದ ಪ್ರಕಾಶನ

### ಯಶವಂತಪುರ, ಬೆಂಗಳೂರು

### ನಮ್ಮ ಕೆಲವು ಪ್ರಕಟಣೆಗಳು




ಪುಟ : 40 ಬೆಲೆ: ರೂ. 10



ಪುಟ : 128 ಬೆಲೆ: ರೂ. 30



ಪುಟ : 64 ಬೆಲೆ: ರೂ. 12



ಪುಟ : 80 ಬೆಲೆ: ರೂ. 20




ಪುಟ : 188 ಬೆಲೆ: ರೂ. 36




ಪುಟ : 96 ಬೆಲೆ: ರೂ. 25



ಪುಟ : 80 ಬೆಲೆ: ರೂ. 15




ಪುಟ : 64 ಬೆಲೆ: ರೂ. 18




ಪುಟ : 96 ಬೆಲೆ: ರೂ. 18



ಪುಟ : 64 ಬೆಲೆ: ರೂ. 12




ಪುಟ : [illegible] ಬೆಲೆ: ರೂ. 20



ಪುಟ : 64 ಬೆಲೆ: ರೂ. 15



ಪುಟ : 160 ಬೆಲೆ: ರೂ. 25




ಪುಟ : 80 ಬೆಲೆ: ರೂ. 15




ಪುಟ : 40 ಬೆಲೆ: ರೂ. 10




ಪುಟ : 40 ಬೆಲೆ: ರೂ. 10




ಇತ್ತೀಚಿನ ಕೆಲವು ವರ್ಷಗಳಲ್ಲಿ ದೇಶಕ್ಕೆ ಒಂದು ಕೃಷಿ ನೀತಿ ನಿರೂಪಣೆ ಕುರಿತ ವ್ಯಾಪಕ ಚಿಂತನೆ ನಡೆಯುತ್ತಾ ಬಂದಿದೆ. ಕೇಂದ್ರ ಶಾಸನ ಸಭೆಗಳಲ್ಲಿ, ರಾಜ್ಯ ಶಾಸನ ಸಭೆಗಳಲ್ಲಿ ಸಾಕಷ್ಟು ಆಸಕ್ತಿ ಮೂಡಿ ತತ್ಫಲ ಕೇಂದ್ರ, ಹಾಗೂ ಕೆಲವು ರಾಜ್ಯಗಳಲ್ಲಿ ಕೃಷಿ ನೀತಿ ಬಗ್ಗೆ ವರದಿಗಳು ತಯಾರಿಸಲ್ಪಟ್ಟು ಸರ್ಕಾರಿ ಆಜ್ಞೆಗಳು ಸಹ ಹೊರಬಂದಿವೆ. ನಿಜಕ್ಕೂ ಇದು ಒಂದು ಶುಭ ಸೂಚನೆ. ಮಾನವ ಬದುಕಿಗೆ ಮೂಲಾಧಾರವಾದ ಕೃಷಿ ಚಟುವಟಿಕೆ ನಡೆದು ಬಂದ ದಾರಿ, ಬೃಹತ್ ಪ್ರಮಾಣದಲ್ಲಿ ಬೆಳೆದಿರುವ ಪ್ರಜಾಸಂಖ್ಯೆ, ಅದರ ಜೀವನಾಧಾರ ಅವಶ್ಯಕತೆಗಳಾದ ಆಹಾರ, ಬಟ್ಟೆ, ವಸತಿ, ಕಾರ್ಖಾನೆಗಳಿಗೆ ಬೇಕಾದ ಕಚ್ಚಾವಸ್ತುಗಳನ್ನು ಪ್ರಸ್ತುತ ಹಾಗೂ ಮುಂದಿನ ದಿನಗಳಲ್ಲಿ ಪೂರೈಸುವಿಕೆ ಈ ಕೆಲವಂಶಗಳ ಬಗ್ಗೆ ವಿಚಾರಧಾರೆಗಳನ್ನು ಸ್ಥೂಲವಾಗಿ ಪ್ರಸ್ತಾಪಿಸುವ ಪ್ರಯತ್ನ ಈ ಸಣ್ಣ ಲೇಖನದ ಉದ್ದೇಶ.

ಆದಿ ಮಾನವ ಪ್ರಕೃತಿಯ ಒಂದು ಅವಿಭಾಜ್ಯ ಅಂಗವಾಗಿದ್ದ. ವಿಶಾಲ ಸ್ವಾಭಾವಿಕ ಪ್ರಕೃತಿ ಅಂದರೆ, ಬೆಟ್ಟಗುಡ್ಡ, ನದಿ, ಸರೋವರ, ಸಮುದ್ರ, ಗಾಳಿ, ಮಳೆ, ಬಿಸಿಲು, ಇವುಗಳೊಡನೆ ಸ್ಪಂದಿಸಿ ಇತರ ಪ್ರಾಣಿ ಸಮೂಹದಲ್ಲಿ ಸೇರಿಹೋಗಿದ್ದ. ಪ್ರತಿನಿತ್ಯ ಹಗಲು-ರಾತ್ರಿ ಕಾಲಕಾಲಕ್ಕೆ ವರ್ಷವರ್ಷಕ್ಕೆ ಒದಗುವ ಏರುಪೇರು, ಅದರೊಟ್ಟಿನ ನೋವು-ನಲಿವು ಅವನ ಬದುಕಿನ ಸಾಮಾನ್ಯ ಘಟನೆಗಳು. ಅವುಗಳ ಬಗ್ಗೆ ಕೌತುಕ, ಅದೇನು ಎಂಬುದನ್ನು ಅರಿಯುವ ಹಂಬಲ. ಆಕಾಂಕ್ಷೆ, ಚಿಂತನೆ ಪ್ರಾರಂಭ ಮನುಷ್ಯ ಮಾನವನಾಗುವ ಹಾದಿಯಲ್ಲಿ ಮೊದಲ ಹೆಜ್ಜೆ. ಯೂರೋಪ್ ಮತ್ತಿತರ ಪಾಶ್ಚಾತ್ಯ ದೇಶಗಳಲ್ಲಿ ಪ್ರಾಕೃತಿಕ ಸಂಪನ್ಮೂಲದ ಭೂಮಿ ಬಲಾಢ್ಯರ ಹಿಡಿತದಲ್ಲಿದ್ದು ಊಳಿಗಮಾನ್ಯ ಪದ್ಧತಿ ವ್ಯಾಪಕವಾಗಿದ್ದಾಗ ಸಾಮಾನ್ಯ ಜೀವನ ದುಸ್ತರವಾಗಿತ್ತು. ಪ್ರತಿಯಾಗಿ ಭಾರತದ ಆರ್ಷೇಯ ಸಂಸ್ಕೃತಿಯಲ್ಲಿ ಕೃಷಿ ಸುಭದ್ರ ತಳಹದಿಯ ಮೇಲೆ ಗೌರವಾನ್ವಿತ ಸ್ಥಾನ ಪಡೆದಿತ್ತು.

ವೇದ ಸಂಸ್ಕೃತಿಯ ಗುರುಕುಲಾಶ್ರಮದ ಅಧ್ಯಯನ ಕ್ರಮ ಜ್ಞಾನಾರ್ಜನೆ ವ್ಯವಸ್ಥೆಯಲ್ಲಿ ಅಪ್ರತಿಮ, ವೈಶಿಷ್ಟ್ಯಪೂರ್ಣ. ಭೂಮಿ (ಪ್ರಕೃತಿ), ದನಕರು, ಬೆಳೆ ಧಾನ್ಯಗಳಲ್ಲಿ ಬುದ್ಧಿಜೀವಿಗಳು ಬೆಳೆಸಿಕೊಂಡಿದ್ದ ಕ್ರಿಯಾತ್ಮಕ ಆಸಕ್ತಿ. ಕಾಡಿನ ಮಧ್ಯೆ ಅದರ ಅಂಗವಾಗಿ, ಜ್ಞಾನಿಗಳು ಜ್ಞಾನಾಭ್ಯರ್ಥಿಗಳು ಒಂದೇ ಆವರಣದಲ್ಲಿ ವಾಸಿಸಿದ್ದು ಸುತ್ತ ಮುತ್ತ ಭೂಮಿಯಲ್ಲಿ ತಮ್ಮ ಬಳಕೆಗೆ ಅಗತ್ಯವಾದ ದವಸಧಾನ್ಯಗಳನ್ನು, ಅದರೊಟ್ಟಿಗೆ ದನಕರುಗಳನ್ನು ಸಾಕಿ, ಹಾಲು-ಮೊಸರು, ಬೆಣ್ಣೆ-ತುಪ್ಪ ಇತ್ಯಾದಿಗಳ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿದ್ದರು. ಈ ಜನ ಸಂಪೂರ್ಣ ಸ್ವಾವಲಂಬಿಗಳಾಗಿದ್ದು, ಹೊರಗಿನ ಬಲಾಢ್ಯರ ಹಂಗಿಗೆ ಬಿದ್ದವರಲ್ಲ. ಬಡವರಾಗಲೀ ಬಲ್ಲಿದರಾಗಲೀ ಆಶ್ರಮಗಳಿಗೆ ಹೋಗಿ ಅಲ್ಲಿನ ನಿಷ್ಕಾಕ್ರಮಗಳಿಗೆ ಬದ್ಧರಾಗಿ ಪ್ರಯೋಜನ ಪಡೆಯುತ್ತಿದ್ದರು. ಇವರ ಬುದ್ಧಿ, ಶ್ರಮ, ಆಸಕ್ತಿ, ಆಧ್ಯಾತ್ಮ ಜ್ಞಾನ ಬೆಳವಣಿಗೆಯಲ್ಲಿದ್ದಷ್ಟೇ ಜೀವನಾಧಾರವಾದ ಬೆಳೆ, ದನಕರುಗಳ ಅಭಿವೃದ್ಧಿಯಲ್ಲೂ ಇತ್ತು. ಹೀಗೆ ಕೃಷಿಯಲ್ಲಿ ಒದಗಿದ ವಿಷಯ ಜ್ಞಾನ ಸಾಮಾನ್ಯ ಜನರ ಕೃಷಿ ಪರಂಪರೆಯಾಗಿ ನಡೆದುಬಂದಿತು.

**ಪ್ರೊ || ಬಿ. ವಿ. ವೆಂಕಟರಾವ್**

ಕ್ರಮೇಣ ಜನಸಂಖ್ಯೆ ಹೆಚ್ಚಿದಂತೆ ಆಹಾರ ಮತ್ತಿತರ ವ್ಯವಸಾಯ ಉತ್ಪನ್ನಗಳಿಗೆ ಬೇಡಿಕೆ ಹೆಚ್ಚಾಯಿತು. ಕೇವಲ ಅನಿಶ್ಚಿತ ಮಳೆಯನ್ನಾಧರಿಸಿದ ಉತ್ಪನ್ನ ಸಾಲದಾಯಿತು. ಅದಕ್ಕೆ ಅಷ್ಟಾದರೂ ಭರವಸೆ ನೀಡುವ ಸಲುವಾಗಿ ೫೦೦-೬೦೦ ವರ್ಷಗಳ ಹಿಂದೆಯೇ ಕೆರೆ-ಕುಂಟೆಯಂಥ ನೀರಾವರಿ ಸಾಧನಗಳು ಅಸ್ತಿತ್ವಕ್ಕೆ ಬಂದಿದ್ದವು. ಇಂಥ ಸಾವಿರಾರು ನಿದರ್ಶನಗಳನ್ನು ದಕ್ಷಿಣ ಭಾರತದಲ್ಲಿ ನೋಡಬಹುದು. ಅಲ್ಲಲ್ಲಿ ಸಾವಿರಾರು ಎಕರೆಗೆ ನೀರು ಒದಗಿಸಬಲ್ಲ ದೊಡ್ಡ ಕೆರೆಗಳು ಸಹ ಇವೆ. ಬಹುತೇಕ ಕೆರೆ-ಕುಂಟೆಗಳು ಹೂಳು ತುಂಬಿ ಹಾಳಾಗಿವೆ. ಅವುಗಳ ಪುನರುತ್ಥಾನದತ್ತ ಸಾಕಷ್ಟು ಮಾತಿನ ಮಳೆ ನಡೆಯುತ್ತಲೇ ಇದೆ. ಹಿಂದಿನಿಂದಲೂ ಏತ-ಕಪಿಲೆ ನೀರಾವರಿಯಿಂದ ಕಬ್ಬು ಮತ್ತಿತರ ತೋಟದ ಕೃಷಿ ರೂಢಿಯಲ್ಲಿದೆ. ಸಾಧಾರಣವಾಗಿ ಮಳೆಯನ್ನೇ ನಂಬಿದ ದೇಶದ ಬೇಸಾಯ ಒಂದು ಬಗೆಯ ಜೂಜು; ಅದರಂತೆಯೇ ರೈತನ ಬಾಳೂ ಭರವಸೆ ವಂಚಿತ.

ಬ್ರಿಟಿಷರ ವಸಾಹತುಶಾಹಿಯಾಗಿದ್ದ ೧೫೦ ವರ್ಷಕಾಲ ಆಳರಸರು ಭಾರತದಲ್ಲಿ ಕೃಷಿ - ಹಳ್ಳಿಗಾಡಿನ ಏಳಿಗೆಗೆ ಹರಿಸಿದ ಗಮನ ಏನೂ ಇಲ್ಲ. ಉತ್ತರ ಭಾರತದಲ್ಲಿ ಜಮೀನ್ದಾರಿ ಪದ್ಧತಿ ಜಾರಿಯಲ್ಲಿದ್ದು ಜಮೀನುದಾರರಿಂದ ವರ್ಷಕ್ಕೊಮ್ಮೆ ರಾಜಾದಾಯ ವಸೂಲು ಮಾಡಿಕೊಳ್ಳುವುದಷ್ಟೇ ಸರ್ಕಾರದ ಆಸಕ್ತಿಯಾಗಿತ್ತು. ಜಮೀನಿನ ಹಕ್ಕೆಲ್ಲವೂ ಜಮೀನುದಾರನದಾಗಿತ್ತು. ತುಂಡು ತುಂಡು ಜಮೀನುಗಳ ಸಾಗುವಳಿಗೆ ಅನುಮತಿ ಮಾತ್ರ ಉಳುವವನ ಪಾಲಿಗೆ ಬಂದಿದ್ದು. ಬೆಳೆದ ಉತ್ಪತ್ತಿಯನ್ನೆಲ್ಲಾ ಜಮೀನುದಾರ ಬಗ್ಗು ಬಡಿದುಹಾಕಿಕೊಳ್ಳುತ್ತಿದ್ದ; ನಿಜವಾಗಿಯೂ ಶೋಚನೀಯ ಗುಲಾಮಗಿರಿ ಸನ್ನಿವೇಶ. ಕ್ರೌರ್ಯ, ದಬ್ಬಾಳಿಕೆ ದಿನನಿತ್ಯದ ದೃಶ್ಯ. ಕಾಗದದ ಮೇಲೆ ಜಮೀನ್ದಾರಿ ಪದ್ಧತಿ ಹೋದರೂ ಈಗಲೂ ಭೂಮಿಹಾರ್ ಠಾಕೂರರುಗಳ ಜಮೀನ್ದಾರಿ ಜೀವಂತವಾಗಿಯೇ ಇದೆ. ಬದಲಾಗಿ ದಕ್ಷಿಣ ಭಾರತದಲ್ಲಿ ರೈತವಾರಿ ಜಮೀನು ವಿತರಣೆ ಪದ್ಧತಿ ಜಾರಿಯಲ್ಲಿತ್ತು. ಸರ್ಕಾರ ರೈತರಿಗೆ ಜಮೀನನ್ನು ಖಾಯಂ ಸಾಗುವಳಿ ಕೊಡುವ ಪದ್ಧತಿ, ರೈತನ ಹೆಸರಿಗೆ ಖಾತೆ ಪಟ್ಟ ಮಾಡಿ ಪಟೇಲ-ಶಾನುಭೋಗರ ಮೂಲಕ ವರ್ಷಕ್ಕೊಮ್ಮೆ ಕಂದಾಯ ವಸೂಲಿಯಾಗಿ ಸರ್ಕಾರಕ್ಕೆ ಸಂದಾಯವಾಗುವ ವ್ಯವಸ್ಥೆ. ಭೂಮಿ ಉತ್ತು ಬೆಳೆ ಉತ್ಪಾದಿಸುವವನಿಗೂ ಒಂದು ನೇರ ಸಂಬಂಧ. ಜಮೀನ್ದಾರಿಗಿಂತ ಭಿನ್ನವಾದ ಈ ವ್ಯವಸ್ಥೆಯಲ್ಲಿ ಹಳ್ಳಿಗನಿಗೆ ಅವನ ಸ್ಥಾನ ಏನು ಅಂತ ಗೊತ್ತು. ಮೈಸೂರು, ಬರೋಡ ಇಂಥ ಕಾನೂನುಬದ್ಧ ಆಡಳಿತ ಇದ್ದೆಡೆ, ಹಾಗೆಯೇ ಬ್ರಿಟಿಷರ ನೇರ ಆಡಳಿತ ಹೊಂದಿದ್ದ ಮದ್ರಾಸ್, ಬೊಂಬಾಯಿ, ಪಂಜಾಬ್ ಪ್ರಾಂತ್ಯಗಳಲ್ಲಿ ಈ ಬಗೆಯ ನಕಾರಾತ್ಮಕವಾದ ನೆಮ್ಮದಿ ಇತ್ತು. ಆದರೆ ಕೃಷಿ ಹಾಗೂ ಉಳುವವನ ಸ್ಥಿತಿಗತಿ ಸುಧಾರಿಸಿ ಭರವಸೆ ಒದಗಿಸುವ ಸಕಾರಾತ್ಮಕ ಸನ್ನಿವೇಶ ಇರಲಿಲ್ಲ.

೧೯ನೇ ಶತಮಾನದ ಕೊನೆಯರ್ಧದಲ್ಲಿ ದೇಶದ ಅನೇಕ ಕಡೆ ಮಳೆಬೆಳೆಯಿಲ್ಲದ ಭೀಕರ ಕ್ಷಾಮಗಳು ತಲೆದೋರಿದವು. ಲಕ್ಷಾಂತರ ಜನ [illegible] ಸಾವಿಗೀಡಾದರು. ಆಗತಾನೇ ಈಸ್ಟ್ ಇಂಡಿಯಾ ಕಂಪೆನಿ ಸರ್ಕಾರ ಹೋಗಿ ಬ್ರಿಟಿಷ ರಾಣಿಯಿಂದ ನೇರ ಆಡಳಿತ ಅಸ್ತಿತ್ವಕ್ಕೆ ಬಂದಿತ್ತು. ಅಷ್ಟು ಹೊತ್ತಿಗೆ ಅಂದರೆ ೧೭-೧೮ನೇ ಶತಮಾನಗಳಲ್ಲಿ ಇಂಗ್ಲೆಂಡ್ ಯೂರೋಪ್‌ಗಳಲ್ಲಿ ರಸಾಯನಶಾಸ್ತ್ರ,

ಜೀವಶಾಸ್ತ್ರಗಳಲ್ಲಿ ಸಂಶೋಧನೆಗಳು ನಡೆದು, ಅದರ ಆಧಾರದ ಮೇಲೆ ಕೃಷಿ ಸುಧಾರಿಸುವ ಪ್ರಯತ್ನ ನಡೆದಿತ್ತು. ಇವುಗಳ ಮಾದರಿಯಲ್ಲೇ ೧೯ನೇ ಶತಮಾನದ ಕೊನೆಯ ಭಾಗದಲ್ಲಿ ನಮ್ಮಲ್ಲೂ ಕೃಷಿ ಇಲಾಖೆಗಳು. ಸಂಶೋಧನಾ ಸಂಸ್ಥೆಗಳು, ಕಾಲೇಜುಗಳು ಪ್ರಾರಂಭಿಸುವ ಪ್ರಯತ್ನ ನಡೆಯಿತು. ಮೈಸೂರು ಸಂಸ್ಥಾನದಲ್ಲಿ ೧೮೯೯ರಲ್ಲಿ ವ್ಯವಸಾಯ ಇಲಾಖೆ ಪ್ರಾರಂಭವಾಯಿತು. ಹೆಬ್ಬಾಳದಲ್ಲಿ ೧೯೧೩ರಲ್ಲಿ ಹೈಸ್ಕೂಲ್ ನಂತರದ ೩ ವರ್ಷ ಅವಧಿಯ ಅಗ್ರಿಕಲ್ಚರಲ್ ಡಿಪ್ಲೋಮಾ ಶಾಲೆ ಪ್ರಾರಂಭವಾಯಿತು. ಅದು ಒಂದು ದಿಟ್ಟ ಹೆಜ್ಜೆ. ಕೇಂದ್ರದ ಹಾಗೂ ದೇಶದ ಕೆಲವೆಡೆ ಪ್ರಾರಂಭವಾದ ಇಂಥ ಸಂಸ್ಥಾ ವ್ಯವಸ್ಥೆ, ಒಂದು ಭೂಷಣಕ್ಕಿಂತ ಹೆಚ್ಚಾದ ಪರಿಣಾಮ ಬೀರುವುದಾಗಲಿಲ್ಲ. ದೇಶಾದ್ಯಂತ ಕೋಟ್ಯಾಂತರ ಜನರ ಉಳಿವು-ಅಳಿವು ಹಾಗೂ ದೇಶದ ಭದ್ರತೆಗೆ, ನೆಮ್ಮದಿಗೆ ಆಧಾರವಾಗಬಲ್ಲ ಕೃಷಿ ಚಟುವಟಿಕೆ ಮುನ್ನಡೆಗೆ ಇದು ಸ್ಪಂದಿಸಲಾರದಾಯಿತು.

೧೦೦ ವರ್ಷಗಳ ರಾಜಕೀಯ ಹೋರಾಟದ ಫಲ, ೧೯೪೭ರಲ್ಲಿ ಭಾರತ ಸ್ವತಂತ್ರವಾಯಿತು. ಶತಮಾನಗಳು ಗುಲಾಮಗಿರಿಯಲ್ಲಿ ನರಳಿ ಸೊರಗಿಹೋಗಿರುವ ಕೋಟ್ಯಾಂತರ ಬಡಜನರ ಆರ್ಥಿಕ ಸಾಮಾಜಿಕ ಸುಧಾರಣೆಯ ಆಶಾಗೋಪುರಕ್ಕೆ ಇದು ಮೊದಲ ಹೆಜ್ಜೆ. ಕೇಂದ್ರದಲ್ಲಿ ಅಸ್ತಿತ್ವಕ್ಕೆ ಬಂದ ನಮ್ಮದೇ ಆದ ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಪ್ರಾರಂಭಿಸಿತು. ಸರ್ವತೋಮುಖ ಅಭಿವೃದ್ಧಿಗೆ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿತು. ಅದರಲ್ಲಿ ನೀರಾವರಿ ಸೌಕರ್ಯ ಹೆಚ್ಚಳದಿಂದ ವ್ಯವಸಾಯಾಭಿವೃದ್ಧಿಗೂ ಒತ್ತು ನೀಡಲಾಗಿದೆ. ದೇಶದ ವಿಭಜನೆಯಿಂದ ಅಲ್ಲೋಲಕಲ್ಲೋಲವಾದ ದೇಶ ಅಂದಿನ ೪೦-೪೫ ಕೋಟಿ ಜನಸಂಖ್ಯೆಗೆ ಆಹಾರ ಒದಗಿಸಲು ಸಶಕ್ತವಾಗಿರಲಿಲ್ಲ. ಮೊದಲೆರಡು ಪಂಚವಾರ್ಷಿಕ ಯೋಜನೆಗಳು ಕೊರತೆಯನ್ನು ನೀಗುವಲ್ಲಿ ಫಲಪ್ರದವಾಗಲಿಲ್ಲ. ಈ ತೀವ್ರ ಆಹಾರ ಅಭಾವ ಪರಿಹಾರಕ್ಕೆ ಅಪಾರ ವೆಚ್ಚದಲ್ಲಿ ಲಕ್ಷಾಂತರ ಟನ್ನುಗಳ ಆಹಾರಧಾನ್ಯವನ್ನು ಆಮದಿಸಿ ಒದಗಿಸಬೇಕಾಯಿತು. ೧೯೬೫ರ ಸಮಯದಲ್ಲಿ ಗೊಬ್ಬರ ನೀರಾವರಿಗೆ ಖಚಿತ ಪ್ರತಿಫಲ ಕೊಡುವ ಮೆಕ್ಸಿಕನ್ ಹೈಬ್ರಿಡ್ ಗೋಧಿ ತಳಿಗಳನ್ನು ವ್ಯಾಪಕವಾಗಿ ಆಮದು ಮಾಡಿಕೊಳ್ಳಲಾಯಿತು. ಅದೇ 'ಹಸಿರು ಕ್ರಾಂತಿ'ಗೆ ನಾಂದಿ. ಉತ್ತಮ ಇಳುವರಿ ಕೊಡುವ ಅಕ್ಕಿ, ಜೋಳ, ಹತ್ತಿ, ಹೀಗೆ ಎಲ್ಲ ಬೆಳೆಗಳಲ್ಲೂ ಉತ್ತಮ ಸಾಧನೆಯಾಯಿತು. ೫೦ ಮಿಲಿಯ ಟನ್ ಇದ್ದ ಆಹಾರೋತ್ಪನ್ನವು ಇಂದು ೨೦೦ ಮಿಲಿಯ ಟನ್ ಆಗಿದೆ. ಒಂದು ರೀತಿಯಲ್ಲಿ ದೇಶ ಅಭಾವ ಕಳೆದು ಆಹಾರ ಸ್ವಪರಿಪೂರ್ಣತೆ ಗಳಿಸಿದೆ. ಹಾಲಿ ೪೦ ಲಕ್ಷ ಟನ್ ಆಹಾರ ಧಾನ್ಯದ ಕಾಪು ದಾಸ್ತಾನಿದೆ. ಪ್ರಸ್ತುತ ಜಾಗತಿಕ ಆರ್ಥಿಕ ಉದಾರೀಕರಣದ ಸನ್ನಿವೇಶದಲ್ಲಿ ಸತತವಾಗಿ ಬೆಳೆಯುತ್ತಿರುವ ಜನಸಂಖ್ಯೆಗೆ ಬರುವ ದಿನಗಳಲ್ಲಿ ಆಹಾರ ಒದಗಿಸಲು ಉತ್ಪನ್ನ ಹೆಚ್ಚಳ ಸಾಧ್ಯವೇ ? ಹಸಿರು ಕ್ರಾಂತಿಯಿಂದ ಕಟ್ಟಿರುವ ಆಹಾರ ಸುಭದ್ರತೆ ಇಂದು ಎಷ್ಟು ಪ್ರಕೃತ; ನಾವು ಕಾಣುತ್ತಿರುವ ಆಹಾರ ಆಯಾಧಿಕ ಅಥವಾ ಸರ್‌ಪ್ಲಸ್ ನಿಜವೇ, ತೋರಿಕೆಯೇ ಎಂಬ ಬಗೆಯ ಹಲವಾರು ಪ್ರಶ್ನೆಗಳು ಬಹಳಷ್ಟು ಜನರನ್ನು ಕಾಡುತ್ತಿವೆ.

ಭಾರತ ಬಡ ಜನರ ದೇಶ, ಶೇ. ೪೦ ರಷ್ಟು ಜನ ಬಡತನದ ರೇಖೆಯ ಕೆಳಗಿರುವವರು; ಅಂದರೆ ದಿನಕ್ಕೆ ಎರಡು ಹೊತ್ತು ಹೋಗಲಿ, ಒಂದು ಹೊತ್ತಿನ ಊಟ ಸಿಗದವರೂ ಇದ್ದಾರೆ. ಅವರ ಸಂಪಾದನೆ ತೀರಾ ಕಡಿಮೆ. ಕಳೆದ ೫೦ ವರ್ಷದ ಅಭಿವೃದ್ಧಿ ಪ್ರಯತ್ನ ಅವರನ್ನು ಮುಟ್ಟಿಯೇ ಇಲ್ಲ. ಮಾರುಕಟ್ಟೆ ದರದಲ್ಲಿ ಆಹಾರಧಾನ್ಯ ಕೊಳ್ಳುವ ಶಕ್ತಿ ಅವರಲ್ಲಿಲ್ಲ. ಈ ಅಪಾರ ಜನಸ್ತೋಮಕ್ಕೆ ಒಂದು ಮಟ್ಟದ ಜೀವನದ ಭದ್ರತೆ ಒದಗಿಸುವ ಕಾರ್ಯನಿರೀಕ್ಷೆಯಲ್ಲಿ ೧೯೬೫ರ ಸರ್ಕಾರದ ಆಹಾರ ವಿತರಣ ನೀತಿಯಂತೆ ಇಂಥ ಜನರಿಗೆ ರೇಷನ್ ಅಂಗಡಿಗಳ ಮೂಲಕ ಅಗ್ಗದ ಬೆಲೆಯಲ್ಲಿ ಅಕ್ಕಿ, ಗೋಧಿ, ಸೀಮೆ ಎಣ್ಣೆಯಂಥ ಅಗತ್ಯ ವಸ್ತುಗಳ ವಿತರಣೆ ಮಾಡುವ ವ್ಯವಸ್ಥೆ ಜಾರಿಯಲ್ಲಿದೆ; ನಷ್ಟವನ್ನು ಸರ್ಕಾರ ತಾನೇ ಭರಿಸಿ ಈ ಸಾಮಾಜಿಕ ಹೊಣೆ ನೆರವೇರಿಸುತ್ತಾ ಬಂದಿದೆ. ಈಗ ಇದರ ಕಾರಣ

ನಷ್ಟ ಅಥವಾ 'ಸಬ್ಸಿಡಿ' ಪ್ರತಿವರ್ಷ ೧೦,೦೦೦ ಕೋಟಿ ರೂಪಾಯಿ. ಜಾಗತಿಕ ಉದಾರೀಕರಣದ ಚಿಂತನೆಯಂತೆ ವ್ಯವಸಾಯವೂ ಒಂದು ಉದ್ಯಮ. ಸ್ಪರ್ಧಾತ್ಮಕ ಮುಕ್ತ ಮಾರುಕಟ್ಟೆಯ ಚೌಕಟ್ಟಿನಲ್ಲಿ ಬರುವ ವಿಷಯ. ಅನೇಕ ಬಹುರಾಷ್ಟ್ರೀಯ ಸಂಸ್ಥೆಗಳು ಒಂದಲ್ಲ ಒಂದು ಸೋಗಿನಲ್ಲಿ ನಮ್ಮ ವ್ಯವಸಾಯ ಕ್ಷೇತ್ರದಲ್ಲಿ ನುಸುಳಿಕೊಂಡಿವೆ. ಬೀಜ, ಗೊಬ್ಬರ, ಸಸ್ಯ ಸಂರಕ್ಷಣಾ ರಾಸಾಯನಿಕ ತಯಾರಿಕೆ ಹಾಗೂ ಸರಬರಾಜಿನಲ್ಲಿ ಅವುಗಳ ಪಾತ್ರ ಗಣನೀಯ. ಇದರೊಟ್ಟಿಗೆ 'ಕಾಂಟ್ರಾಕ್ಟ್ ಫಾರ್ಮಿಂಗ್' ಅಂದರೆ ಬೃಹತ್ ಕಂಪೆನಿಗಳು ಸಣ್ಣ ರೈತರಿಂದ ಅವರ ಹಿಡುವಳಿಗಳನ್ನು ಗುತ್ತಿಗೆ ಪಡೆದು ಸಂಘಟಿಸುವ ರೀತಿಯಲ್ಲಿ ಬಂಡವಾಳ ಹೂಡಿ ಉದ್ಯಮ ರೀತಿಯ ತೀವ್ರ ಬೇಸಾಯ ಮಾಡುವುದು. ಅದರ ನಿವ್ವಳ ಪರಿಣಾಮ ಅವನ ಒಂದೆರಡು ಎಕರೆ ಜಮೀನಿನಿಂದ ರೈತನ ಉಚ್ಚಾಟನೆ; ಆಧುನಿಕ ತಂತ್ರಜ್ಞಾನ ಅಳವಡಿಕೆಯಿಂದ ಕಂಪೆನಿಗಳಿಗೆ ಲಾಭ, ರೈತನಿಗೆ ಕಣ್ಣೀರು ಸುರಿಸುವ ಹೀನಾಯ ಸ್ಥಿತಿ. ಮಾರುಕಟ್ಟೆಯಲ್ಲಿ ಅಷ್ಟೋ ಇಷ್ಟೋ ಕಾಳು ಕೊಂಡು ಹೊಟ್ಟೆ ಹೊರೆದುಕೊಳ್ಳುವ ಅಸಹಾಯಕ ಸ್ಥಿತಿ. ಮಳೆ-ಬೆಳೆ ಬಿಗಡಾಯಿಸಿದಾಗ ಅದೂ ಇಲ್ಲದೆ ಸಾವು ತಪ್ಪಿಸಿಕೊಳ್ಳುವ ತವಕದಿಂದ ಪಟ್ಟಣಗಳ ಕೊಳೆಗೇರಿಗಳತ್ತ ಧಾವಿಸುವ ಅನಿವಾರ್ಯತೆ.

ಯಾವುದೇ ವ್ಯಾಪಾರೋದ್ಯಮದ ಉದ್ದೇಶ ಕಡಿಮೆ ಬೆಲೆಗೆ ಕೊಂಡೋ ತಯಾರಿಸಿಯೋ ಅಧಿಕ ಬೆಲೆಗೆ ಮಾರಿ ಹೆಚ್ಚು ಹೆಚ್ಚು ಲಾಭ ಗಳಿಸುವುದು. ಈ ಹಿತಾಸಕ್ತಿಗಳು ಯಾವುದೇ ಸಬ್ಸಿಡಿಗೆ ಬದ್ಧ ವೈರಿಗಳು. ಇವರ ಕಪಿಮುಷ್ಟಿಯಲ್ಲಿರುವ ಜಾಗತಿಕ ಹಣಕಾಸು ಸಂಸ್ಥೆಗಳು, ಅವರ ಕೃಪಾದೃಷ್ಟಿಯಲ್ಲಿರುವ ನಮ್ಮ ಸರಕಾರ ಈ ಸನ್ನಿವೇಶದಲ್ಲಿ ಸಹಜವಾಗಿ ಸಬ್ಸಿಡಿ ನೀತಿಯನ್ನು ಮುಂದುವರಿಸುವುದು ಆಗದ ಮಾತು. ಕ್ರಮೇಣ ಅದು ತಪ್ಪಿ ಸಮಾಜವಾದದ ಅಡಿಗಲ್ಲಾದ ಜನಹಿತ ನೀತಿಗೆ ತಿಲಾಂಜಲಿ.

**ಕೇಂದ್ರ ಕೃಷಿ ನೀತಿ**

ಈ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರ ಮಂಡಿಸಿರುವ ಕೃಷಿ ನೀತಿಯ ನಿಲುವುಗಳನ್ನು ವಿಚಾರಮಾಡೋಣ. ಅವುಗಳಲ್ಲಿ (i) ಮುಂದಿನ ೫ ವರ್ಷಗಳಲ್ಲಿ ಕೃಷಿ ಪ್ರಗತಿ ದರ ಶೇ. ೧.೫ರಿಂದ ೪ಕ್ಕೆ ಹೆಚ್ಚಳ, (ii) ಕೃಷಿ ಕ್ಷೇತ್ರದಲ್ಲಿ ಖಾಸಗಿ ಬಂಡವಾಳದ ಆಕರ್ಷಣೆ, (iii) ಒಪ್ಪಿಕೊಂಡಿರುವ ವಿಶ್ವ ಮಾರುಕಟ್ಟೆಯ ಷರತ್ತಿನಂತೆ ಅನಿರ್ದಿಷ್ಟ ಆಮದಿಗೆ ಅವಕಾಶ; ಆ ಕಾರಣ ಉಂಟಾಗಬಹುದಾದ ಬೆಲೆ ಏರಿಳಿತ ಹಾಗೂ ಅದನ್ನು ಎದುರಿಸಲು ಪ್ರತಿ ಕ್ರಮಗಳು ಅಂದರೆ ವಾಯಿದಾ ಮಾರುಕಟ್ಟೆ ಹಾಗೂ ಪ್ರತಿ ವಸ್ತುವಿಗೂ ಗುಣ ನಿಯಂತ್ರಣ ತಂತ್ರ, (iv) ರಫ್ತು ಉತ್ತೇಜನದಿಂದ ಬೆಲೆ ಏರಿಳಿತಗಳಿಗೆ ಕಡಿವಾಣ ಹಾಗೂ ರೈತನ ಯಾವುದೇ ಆದಾಯಕ್ಕೆ ಅಡೆತಡೆಗಳ ನಿಯಂತ್ರಣ. ಸಾರಾಂಶ, ಕೃಷಿ ಲಾಭನಷ್ಟಗಳನ್ನೊಳಗೊಂಡ ವಾಣಿಜ್ಯೋದ್ಯಮ ಎಂಬ ನೀತಿಗೆ ಸಂಪೂರ್ಣ ಒಪ್ಪಿಗೆ. ವಾಣಿಜ್ಯೋದ್ಯಮಿಗಳಲ್ಲಿ ಕೃಷಿಯಲ್ಲಿ ಬಂಡವಾಳ ತೊಡಗಿಸಿ ಲಾಭ ಗಳಿಸಬಹುದೆಂಬ ಗರಿಗೆದರಿದ ಆಶೆ, ತಕ್ಷಣದ ಪ್ರತಿಕ್ರಿಯೆ, ಈ ನೀತಿಯ ಒಪ್ಪಿಗೆಗೆ ಸಾಕ್ಷಿ. ಹಾಗೆಯೇ ಇಲ್ಲದವನ ಗತಿಗೆ ಕೊಡಲಿ ಪೆಟ್ಟು. ಪ್ರಕೃತಿಯ ಆಣತಿಯಂತೆ ಭೂ ಕೃಷಿ, ಜನರ ಆಹಾರಗಳ ಅವಶ್ಯಕತೆ ಪೂರೈಸಿಕೊಳ್ಳುವುದಕ್ಕೆ ಹೆಚ್ಚು ಉತ್ಪನ್ನ, ವಿನಿಮಯ ಆಧಾರದ ಮೇಲೆ ಬೆಳೆಯುವವನ ಇತರ ಅವಶ್ಯಕತೆಯನ್ನು ಪಡೆದುಕೊಳ್ಳುವ ಸಾಧನ; ಹಸಿದು ಬವಳಿಸುತ್ತಿರುವವರನ್ನು ಕಡೆಗಣಿಸಿ ಲಾಭ ಗಳಿಕೆಗಲ್ಲ.

ಕೆಲವು ರಾಜ್ಯ ಸರ್ಕಾರಗಳೂ ಈ ದಿಸೆ ಧ್ವನಿಗೂಡಿಸಿವೆ. ಅವುಗಳಲ್ಲಿ ಒಂದೆರಡನ್ನು ವಿಚಾರ ಮಾಡಬಹುದು. ಆಂಧ್ರಸರ್ಕಾರವೂ ಕೃಷಿಯಲ್ಲಿ ರೈತ-ಸರ್ಕಾರದ ಸಹಭಾಗಿತ್ವ ಮಾರ್ಗಕ್ಕೆ ವಿದಾಯ ಕೊಟ್ಟಂತೆ ಕಾಣುತ್ತದೆ. ಮಾರುಕಟ್ಟೆ ದೃಷ್ಟಿಯುಳ್ಳ ಉದ್ಯಮಶೀಲ ಕೃಷಿಗೆ ಒತ್ತುಕೊಟ್ಟಿದೆ. ಮಾರುಕಟ್ಟೆಯ ದೃಷ್ಟಿಯಲ್ಲಿ ಮಾನವೀಯ ಮೌಲ್ಯಗಳಿಗಿಂತ ಬೆಲೆ/ಲಾಭಗಳೇ ಮುಖ್ಯ. ಕಳೆದ ೫೦ ವರ್ಷಗಳ ಜನಪರ ಯೋಜನೆಗಳು ಫಲವೇ, ವಿಫಲವೇ ಎಂಬ ಪ್ರಶ್ನೆಗೆ ಎಲ್ಲಾ ಸರ್ಕಾರಗಳೂ ಸುಮ್ಮನಾಗಿಬಿಡುತ್ತವೆ. ಲಕ್ಷಾಂತರ ಕೋಟಿ ಸಾರ್ವಜನಿಕ ಬಂಡವಾಳ ಸುರಿದು ಮಣ್ಣು ಸಂರಕ್ಷಣೆ, ನೀರಾವರಿ, ಬೆಳೆ ಸುಧಾರಣೆ, ಜಲಾನಯನ ಪ್ರದೇಶ ಅಭಿವೃದ್ಧಿ, ಗೊಬ್ಬರ, ಕ್ರಿಮಿನಾಶಕಗಳ ತಯಾರಿಕೆ - ಬಳಕೆ ಇಂಥ ಹಲವಾರು ಕಾರ್ಯಕ್ರಮಗಳು ನಡೆದಿವೆ. ಇವು ಹೀಗಾಯಿತು, ಹೀಗಾಗಲಿಲ್ಲ - ಈ ಕಾರಣಕ್ಕಾಗಿ ಜಾಗತಿಕ ಆರ್ಥಿಕ ಉದಾರೀಕರಣ ಕಾರ್ಯಕ್ರಮದಲ್ಲಿ ನಾವೂ ಸೇರಿಕೊಳ್ಳುತ್ತಿದ್ದೇವೆ ಎಂದು ಜನಕ್ಕೆ ಹೇಳುವ ಸೌಜನ್ಯ ಅಗತ್ಯವಿಲ್ಲವೇ ? ಈಗ ಅಧಿಕಾರದಲ್ಲಿರುವವರೆಲ್ಲಾ ಸಣ್ಣ ರೈತನ ವ್ಯಕ್ತಿತ್ವವನ್ನು ಉದಾಸೀನಗೊಳಿಸಿ



ಏಯ್ ಒಡೆಯ, ನೀವೆಂದೂ ಉಳಲಿಲ್ಲ, ಬೆಳೆ
ಕೊಯ್ಯಲಿಲ್ಲ
ಮತ್ತೆ, ಮೂವತ್ತು ಮಿಲಿಯ ಕಂತೆಗಳ
ಕೊಂಡೊಯ್ದಿರೇಕೆ ?
ನಿಮ್ಮ ಪ್ರಾಸಾದದಲಿ ಎತ್ತುಗಳು ಕಾಣಬರವೇಕೆ ?
ಪ್ರಾಮಾಣಿಕ ವ್ಯಕ್ತಿ ತಿಂದುದೆಂದೂ ಇಲ್ಲ
ಮೈಗಳ್ಳ ರೊಟ್ಟಿಯನು, ನಿಮ್ಮಂತೆ ಒಡೆಯ

*— ಚೀಣೀ ಕೃತಿಯೊಂದರಿಂದ*

ಕಾಂಟ್ರಾಕ್ಟ್ ಕಾರ್ಪೊರೇಟ್ ಮಾದರಿಯ ಕೃಷಿ ವಿಧಾನಗಳನ್ನು ವೈಭವೀಕರಿಸುತ್ತಿದ್ದಾರೆ.

ಕರ್ನಾಟಕದಲ್ಲೂ ೧೯೯೫ರಲ್ಲಿ ಜನತಾ ಸರ್ಕಾರ ಈ ದಿಸೆಯಲ್ಲಿ ಕೂಲಂಕಷ ವಿಚಾರ ವಿನಿಮಯ ನಡೆಸಿ ರಾಜ್ಯಕ್ಕೆ ಕೃಷಿ ನೀತಿ ಪ್ರಣಾಳಿಕೆಯನ್ನೊದಗಿಸಿದೆ. ರಾಜ್ಯಕ್ಕೆ ಸಂಬಂಧಿಸಿದಂತೆ ಕೃಷಿಯ ಎಲ್ಲಾ ವಿಭಾಗಗಳಲ್ಲೂ ಸಾಕಷ್ಟು ಶ್ರಮವಹಿಸಿ ವ್ಯಾಪಕ ಅಂಕಿ ಅಂಶಗಳನ್ನು ಸಂಗ್ರಹಿಸಿ ಅದರ ಆಧಾರದ ಮೇಲೆ ಆಗಬೇಕಾದ ಕೆಲಸಗಳ ಬಗ್ಗೆ ಸಲಹೆಗಳು ಇಲ್ಲಿ ಮಂಡಿತವಾಗಿವೆ. ವರದಿಯ ಮೊದಲ ಅಧ್ಯಾಯದಲ್ಲಿ ಬಂಡವಾಳ ಹೂಡಿಕೆಯಲ್ಲಿ, ಕೃಷಿ - ಕೈಗಾರಿಕೆ ಇವುಗಳ ಮಧ್ಯೆ ಕೃಷಿಯೆದುರು ಆಗಿರುವ ಪಕ್ಷಪಾತವನ್ನು ತೋರಿಸಿದೆ. ಎರಡನೇ ಅಧ್ಯಾಯ ಕರ್ನಾಟಕದ ಕೃಷಿ ಸಮಸ್ಯೆಗಳು ಹಾಗೂ ಅವುಗಳ ಆಗುಹೋಗುಗಳ ಬಗ್ಗೆ ವಿವರವಾದ ಚರ್ಚೆಯನ್ನೊಳಗೊಂಡಿದೆ. ಮೂರನೇ ಅಧ್ಯಾಯ ಮುಂದಿನ ಕಾರ್ಯವಿಧಾನಗಳನ್ನು ಕುರಿತ ಸಲಹೆಗಳಿಂದ ಕೂಡಿದೆ. ಅದು ಕೃಷಿಗೆ ಕೈಗಾರಿಕೆ ಸ್ಥಾನಮಾನ ಒದಗಿಸಿ ಅದರ ಉತ್ಪಾದನೆಗೆ ಪ್ರೋತ್ಸಾಹ ಕೊಡಲು ತೆರಿಗೆ, ಬಂಡವಾಳ, ಬಡ್ಡಿ, ರಫ್ತು - ಇತ್ಯಾದಿಗಳಲ್ಲಿಯೂ ರಿಯಾಯಿತಿಯ ಅಗತ್ಯವನ್ನು ಪ್ರತಿಪಾದಿಸಿದೆ. ಕೃಷಿಯಲ್ಲಿ ತೊಡಗಿರುವ ಅಪಾರ ಕಾರ್ಮಿಕರಿಗೂ ಕೈಗಾರಿಕಾ ಕಾರ್ಮಿಕರಂತೆ ಸಂಘಟಿತರಾಗಿ ಹಿತ ಸಾಧಿಸಿಕೊಳ್ಳುವ ಆದ್ಯ ಅವಶ್ಯಕತೆಯನ್ನು ಸೂಚಿಸಿದೆ. ಮುಂದಿನ ೧೭ ಅಧ್ಯಾಯಗಳಲ್ಲಿ ಬಂಡವಾಳ ಹೂಡಿಕೆ, ಸಾಲ ಲಭ್ಯತೆ, ನೀರಾವರಿ, ಒಣಬೇಸಾಯ, ಬೆಲೆ ಹಾಗೂ ಮಾರುಕಟ್ಟೆ ಸುಧಾರಣೆ, ಮಾರುಕಟ್ಟೆ ಅಭಿವೃದ್ಧಿ, ಸಂಶೋಧನೆ, ವಿಸ್ತರಣೆ, ತಾಂತ್ರಿಕತೆಗಳಿಗೆ ಹೊಸ ಚೈತನ್ಯ, ಕೃಷಿ ಉತ್ಪನ್ನಗಳ ರಫ್ತು ನೀತಿ, ಭೌತಿಕ ಹಾಗೂ ಮಾನವ ಮೂಲ ಸೌಕರ್ಯಗಳ ಬಗ್ಗೆ ನೀತಿ ನಿರೂಪಣೆ, ಜಿಲ್ಲಾ ಕೃಷಿ ಯೋಜನೆ, ಕೃಷಿಯ ಪ್ರಗತಿಯಲ್ಲಿ ಜನರ ಆಸಕ್ತಿ ಕೆರಳಿಸುವ ಕಾರ್ಯವ್ಯವಸ್ಥೆ ಇವೆಲ್ಲಾ ಪರಿಶೀಲಿತವಾಗಿವೆ. ಮೂರನೇ ಅಧ್ಯಾಯದಲ್ಲಿ ಈ ಕಾರ್ಯವಿಧಾನಗಳನ್ನು ಕಾರ್ಯಗತ ಮಾಡಲು ಸೂಚನೆಗಳು ಕೊಡಲ್ಪಟ್ಟಿವೆ. ಇದು ಒಂದು ದಾಖಲೆ ವರದಿ; ಸ್ತುತ್ಯಾರ್ಹ ಕೆಲಸ.

ರಾಜ್ಯದ ಕೃಷಿ ನೀತಿಯ ಉದ್ದೇಶ ಕೃಷಿ ಪ್ರಗತಿಯ ದರವನ್ನು ಶೇ. ೪.೫ಕ್ಕೆ ಹೆಚ್ಚಿಸುವುದು. ಇದಾಗ ಬೇಕಾದರೆ ಕೃಷಿಗೂ ಸಹ ಕೈಗಾರಿಕೆಗೆ ಒದಗಿಸಿದಂತೆ ಧಾರಾಳವಾದ ಬಂಡವಾಳ, ಪ್ರೋತ್ಸಾಹ, ಸವಲತ್ತುಗಳನ್ನು ಒದಗಿಸಬೇಕು. ಭೂಮಿ, ಪಶು, ನೀರು ಆಧಾರಿತ ಸಮಗ್ರ ಚಟುವಟಿಕೆಗಳ ಸಂಯೋಜಿತ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮ ಬೆಂಬಲ, ಬೆಳೆ ಉತ್ಪಾದನೆಯೊಟ್ಟಿಗೆ ರೇಷ್ಮೆ, ತೋಟಗಾರಿಕೆ, ಪುಷ್ಪ ಕೃಷಿ, ಮೀನು ಸಾಕಣೆ, ಹೈನುಗಾರಿಕೆ ಇವೆಲ್ಲವೂ ಸೇರಿವೆ. ಈ ಎಲ್ಲ ಉದ್ಯಮಗಳಲ್ಲೂ ಖಾಸಗಿ ಉಮೇದಿನಿಂದ ಉದ್ಭವವಾಗುವ ಸುವ್ಯವಸ್ಥಿತ ಸಂಘಟನೆ ಅಥವಾ ಕಾರ್ಪೊರೇಷನ್‌ಗಳ ಪಾತ್ರಕ್ಕೆ ಅವಕಾಶವಿದೆಯತ್ತ

ಅನುಷ್ಠಾನದ ಹೊಸ್ತಿಲಲ್ಲಿರುವ ಕೃಷಿ ನೀತಿ ವಿಚಾರ ವಿನಿಮಯ ಮಾಡುವಾಗ ದೇಶದ ಕೃಷಿ ಅಂದರೆ ಭೂಮಿ, ಜನ - ಸಾಧನ ಸಂಪತ್ತುಗಳ ಬಳಕೆಯಾಗುತ್ತಿರುವ ಬಗೆ ವಿಚಾರಾರ್ಹ; ಒಂದು ತುಲನಾತ್ಮಕ ಆಳ, ಒಳನೋಟ - ದರ್ಶನ ಅಗತ್ಯ. ದೇಶದ ಭೂವಿಸ್ತೀರ್ಣ ೩೨೮ ದಶಲಕ್ಷ. ಇದರಲ್ಲಿ ೧೪೨ ದಶಲಕ್ಷ ಉಳುಮೆಯಾಗಿದೆ. ಉಳಿದ ಭೂಮಿಯ ಶೇಕಡಾವಾರು ವಿತರಣೆ ಕಾಡು - ೨೨, ಗೋಮಾಳ ಇತ್ಯಾದಿ - ೧೧, ವ್ಯವಸಾಯೇತರ ರಸ್ತೆ, ಹಳ್ಳಿ ಊರು - ೯.೫, ಬೀಳು - ೭. ಕರ್ನಾಟಕದಲ್ಲಿ ಭೂಪ್ರದೇಶ ೧೯೨ ಲಕ್ಷ; ವಿತರಣೆ ಸಾಗುವಳಿ ೨೧ ಲಕ್ಷ ಬೀಳು ಸೇರಿ - ೧೨೩, ಕಾಡು - ೧೫, ಹುಲ್ಲುಗಾವಲು - ೯.೫, ವ್ಯವಸಾಯೇತರ ೯.೫. ನೀರಾವರಿ ಸೌಕರ್ಯ ಭಾರತದಲ್ಲಿ ಶೇ. ೪೦-೪೫; ಕರ್ನಾಟಕದಲ್ಲಿ - ೨೦. ಮಣ್ಣು, ಬೆಳೆ, ಜೈವಿಕ ವೈವಿಧ್ಯ ಪ್ರಪಂಚದ ಬೇರೆ ಭಾಗಗಳಿಗೆ ಹೋಲಿಸಿದರೆ, ಸಮಾಧಾನಕರ. ಇದರೊಟ್ಟಿಗೆ ಸಾವಿರಾರು ವರ್ಷಗಳು ಬಾಳಿ ಬಂದ ಹೆಮ್ಮೆಯ ಕೃಷಿ ಪರಂಪರೆ. ಆದರೂ ಲಭ್ಯ ಕೃಷಿ ಭೂಮಿ ವಿತರಣೆಯಲ್ಲಿ ಅಸಾಮಾನ್ಯ ತಾರತಮ್ಯ. ೮೨ ದಶಲಕ್ಷ ಹಿಡುವಳಿಗಳಲ್ಲಿ ಸುಮಾರು ೬೦ ಲಕ್ಷ ಸಣ್ಣವು - ಅತಿ ಸಣ್ಣವು - ಅರ್ಧದಿಂದ ೧-೨ ಹೆಕ್ಟೇರು ಗಾತ್ರದ ತುಂಡು ಭೂಮಿ. ಒಟ್ಟು ಸಂಖ್ಯೆಯಲ್ಲಿ ಸಣ್ಣ ರೈತರು ಮೂರರಷ್ಟಿದ್ದರೂ ವಿಸ್ತೀರ್ಣದಲ್ಲಿ ಅವರಿಗೆ ದಕ್ಕಿರುವುದು ಕೇವಲ ಕಾಲುಭಾಗ. ಒಂದು ಅಂದಾಜಿನಂತೆ ದೊಡ್ಡ ರೈತ ಕುಟುಂಬದಲ್ಲಿ ವ್ಯಕ್ತಿಶಃ ೩೦೦ ಗುಂಟೆ ಲಭ್ಯವಿದ್ದರೆ, ಬಡಕುಟುಂಬದಲ್ಲಿ ಅದು ತಲಾ ೫ ಗುಂಟೆ. ಬಡತನ, ಕಡುಬಡತನ, ಇವರು ಇವರೊಟ್ಟಿನ ಕೃಷಿಕೂಲಿ, ಬಡಗಿ ಕಮ್ಮಾರ ಇಂಥವರು, ಒಪ್ಪತ್ತು ಊಟಕ್ಕೆ ಪರದಾಡುವರು. ಈ ದಾರುಣ ಸ್ಥಿತಿ ಹುಟ್ಟಿನಿಂದ ಸಾವಿನವರೆವಿಗೂ ಅವರ ಹಣೆಬರಹ. ಈ ಅಪಾರ ಜನಸ್ತೋಮ ಸುಮಾರು ೪೦೦ ಕೋಟಿ; ವ್ಯಗ್ರವಾದರೆ ಆಗುತ್ತಿದ್ದರೆ, ದೇಶದಲ್ಲಿ ಅಶಾಂತಿ ಶತಃಸಿದ್ಧ.

ಈಗ್ಗೆ ೨೦ ವರ್ಷಗಳ ಹಿಂದೆ, ೧೯೭೯-೮೦ರಲ್ಲಿ ಕೃಷಿ ವಿಶ್ವವಿದ್ಯಾನಿಲಯದಲ್ಲಿ ''ಸಣ್ಣ ರೈತರಿಗೆ ತಾಂತ್ರಿಕತೆ'' ಕುರಿತ ಗಂಭೀರ ಚಿಂತನೆ. ಸ್ವಶ್ರಮದಿಂದ, ನಗದು ಹಣ ಬೇಡದ, ಫಲಪ್ರದ ತಂತ್ರಗಳು (ಯು.ಎ.ಎಸ್. ವಿಸ್ತರಣ ಶ್ರೇಣಿ ೧೦) ಈ ಚಿಂತನೆಗೆ ಆಧಾರ. ಆಟಾಟೋಪ, ಆಡಂಬರ ಚಾಮರ ತಮಟೆಗಳಿಲ್ಲದೆ ಶ್ರದ್ಧಾವಂತ ಹಳೆ ತಲೆಮಾರಿನ ಕೃಷಿತಜ್ಞ ಕ್ರಿಯಾಶೀಲತೆಗೆ ದ್ಯೋತಕ. ವಿವೇಚನೆಯುತ ಸಾಗುವಳಿ ಕ್ರಮ, ಸೊಪ್ಪು, ಕೊಟ್ಟಿಗೆ ಗೊಬ್ಬರಗಳ ವೃದ್ಧಿ, ಬೆಳೆ ಪರಿವರ್ತನೆ, ಮಿಶ್ರಬೆಳೆ, ಹೈನುಗಾರಿಕೆ, ರೇಷ್ಮೆ ಸಾಕಣೆಯಂಥ ಕಸುಬುಗಳು ಅಲ್ಲದೆ ಹೊಲಗಳಲ್ಲಿ, ಗದ್ದೆಗಳಲ್ಲಿ ಆಗುವೆಡೆ, ಹಾಲಿ ಕಳೆಯಿಂದ ಕೂಡಿ ನಿರರ್ಥಕವಾಗಿರುವ ಬದು, ಸಣ್ಣ ಬದು, ಕಾಂಟೂರ್ ಸಾಲು, ಅಂಚು ಮೂಲೆ, ಸರಹದ್ದು ಸನ್ನಿವೇಶಾನುಗುಣವಾಗಿ ಶೀಘ್ರವಾಗಿ ಬೆಳೆಯುವ ಮೇವು, ಸೊಪ್ಪು, ಉರುವಲು, ನಾಟಿ,ಔಷಧಿ, ಹಣ್ಣು ಹಂಪಲು ಕೊಡಬಲ್ಲ ಗ್ಲಿರಿಸೀಡಿಯ, ಸೂಬಾಬುಲ್, ಅಗಸೆ, ನುಗ್ಗೆ, ಹುಣಸೆ, ಬೇವು, ಹೊಂಗೆ, ಮಾವು, ತೇಗ, ಮರ-ಗಿಡ ಬಳ್ಳಿಗಳನ್ನು ನೆಟ್ಟು ಬೆಳೆಸುವ ಕಾರ್ಯಕ್ರಮಗಳನ್ನು ಗುರುತಿಸಲಾಯಿತು. ಈ ಬಗೆಯ ಎಲ್ಲಾ ಚಟುವಟಿಕೆಗಳೂ ಜಮೀನಿನಲ್ಲಿ ಬಡಾಯಿಸಿ, ರೈತನಿಗೆ ಅವನ ಕುಟುಂಬಕ್ಕೆ ವರ್ಷವಿಡೀ ಕೆಲಸವಾದಾಗ ಅವನ ನೆಲೆ, ವಸತಿ, ಆರ್ಥಿಕ ಆಸಕ್ತಿ, ಸ್ವಪ್ರೇರಣೆಯಿಂದ ಜಮೀನಿನಲ್ಲಿ ಕೇಂದ್ರೀಕೃತವಾಗುತ್ತದೆ. ಹಳ್ಳಿಯ ಕೊಳಕು ಕೊಚ್ಚೆ, ಅದರಂತೆಯೇ ನಗರಗಳ ಭಯಾನಕ ಕೊಳೆಗೇರಿಗಳಿಂದ ಮುಕ್ತವಾದ ಗಾಳಿ ಬೆಳಕು, ಬಾವಿ ನೀರುಳ್ಳ ವಿಶಾಲ ಸನ್ನಿವೇಶದಲ್ಲಿ ಬದುಕುವ ಅವಕಾಶ ಅವನದಾಗುತ್ತದೆ. ನಂತರದ ಹಂತ ಸಣ್ಣ ಪುಟ್ಟ ಎಲೆಕ್ಟ್ರಿಕಲ್ ಎಲೆಕ್ಟ್ರಾನಿಕ್ ಬಿಡಿಭಾಗ ತಯಾರಿಕೆ. 'ಅಗ್ರೋ ಫಾರೆಸ್ಟ್ರೀ ಕೃಷಿವಿಧಾನ-ರೂಢಿ' ಎಂಬ ಈ ಬಗೆಯ ಗ್ರಾಮೀಣಾಭಿವೃದ್ಧಿ ಚಟುವಟಿಕೆ ಆಗಲೇ ಜನರ ಆಸಕ್ತಿಯನ್ನು ಕೆರಳಿಸಿದೆ. ಇದೂ ಒಂದು ಧಾನ್ಯ, ಮರ, ಗಿಡ, ಜಾನುವಾರು ಚಟುವಟಿಕೆಗಳ ಸಂಯೋಜನೆ, ಸ್ವಯಂ ಪ್ರೇರಣೆಯಿಂದ ಹೊರಗಿನ ಸುಧಾರಕರ ಹಾವಳಿಯಿಲ್ಲದೆ ನಡೆಯಬಹುದು. ಆಗಬೇಕಾದದ್ದು, ಅರಣ್ಯ-ಕೃಷಿ ಇಲಾಖೆಯಿಂದ, ಹವಾಗುಣ - ರೈತನ ಸನ್ನಿವೇಶದ ಅನುಕೂಲಕ್ಕೆ ಹೊಂದುವ, ಗುಣಾತ್ಮಕ ಸಸ್ಯ ತಳಿಗಳ ಸರಬರಾಜು. ಅವು ನಾಟಿಯಾಗಿ ಬೇರು ಬಿಟ್ಟು ನಿಂತು, ಒಂದೆರಡು ವರ್ಷ ಬದುಕಿ ಬೆಳೆಯುವವರೆಗೆ ಅಗತ್ಯವಾದ ತಾಂತ್ರಿಕ ಸಲಹೆ, ಅಲ್ಪಸ್ವಲ್ಪ ಹಣಕಾಸು ಈ ಎಲ್ಲ ನೆರವು ಒದಗುವ ಭರವಸೆ ನಮ್ಮ ಕೃಷಿ ನೀತಿಯ ಆದ್ಯ ಅಂಗವಾಗಬೇಕು. ನಮ್ಮ ರೈತ ಕರ್ಮಯೋಗಿ, ಅಭಿಮಾನಿ, ಪ್ರಾಮಾಣಿಕ. ಕೃಷಿಗೆ ಇವನಿಂದ ಆಗಬಲ್ಲ ಕೊಡುಗೆಗೂ ಸಂಬಳ ಸಾರಿಗೆಗೋಸ್ಕರ ಕೆಲಸ ಮಾಡುವ ಕಾಂಟ್ರಾಕ್ಟ್-ಕಾರ್ಪೊರೇಟ್ ನೌಕರಶಾಹಿ ಕೆಲಸಕ್ಕೂ ಹೋಲಿಕೆ ಹಾಸ್ಯಾಸ್ಪದ. ಈ ಕಾರ್ಯನೀತಿಯಿಂದ ದೇಶದಾದ್ಯಂತ ಹರಡಿರುವ ಇಂಥ ತುಂಡು ಭೂಮಿಯನ್ನಾಧರಿಸಿದ ಅಸಂಖ್ಯಾತ ರೈತರು ಅವರೊಟ್ಟಿಗಿನ ಕೂಲಿಗಳು, ಬಡಗಿ, ಕಂಬಾರ, ಕಮ್ಮಾರ, ಚಮ್ಮಾರ ಇವರೆಲ್ಲರಿಗೂ ವರ್ಷವಿಡೀ ಕೆಲಸ, ಜೀವನ ನೆಮ್ಮದಿ. ಆಧುನಿಕ ವಿಜ್ಞಾನ ತಂತ್ರಜ್ಞಾನದಿಂದ ನಾಗಾಲೋಟದಿಂದ ಹೊರಬರುತ್ತಿರುವ ಅನೇಕಾನೇಕ ಸೌಕರ್ಯಗಳು ಅಂತೆಯೇ ಈಗೀಗ ಜನಪ್ರಿಯವಾಗುತ್ತಿರುವ ಜೈವಿಕ ತಂತ್ರಜ್ಞಾನದ ಅನುಕೂಲಗಳು ಅವಶ್ಯಕ. ಅವು ಸಣ್ಣ ರೈತನ ಉದ್ಯಮಕ್ಕೆ ಹೊಂದುವ ರೀತಿಯಲ್ಲಿ ಅಳವಡಿಕೆಯಾಗಬೇಕು. ಆದರೆ ವ್ಯಾಪಾರ ಲಾಭದೃಷ್ಟಿಯುಳ್ಳ ಬೀಜ, ಟರ್ಮಿನೇಟರ್ ಬೀಜ, ಗುಣಾಂಶ ಕಡೆಗಣಿಸಿ ಇಳುವರಿಯಷ್ಟೇ ಉದ್ದೇಶವುಳ್ಳ ಸಸ್ಯ ಪ್ರಾಣಿ ಸಂವರ್ಧನೆ, (ಧ್ರುವ) ಪೈರು ಸಸ್ಯತಳಿ ಅಭಿವೃದ್ಧಿಯಲ್ಲಿ ಅಂಗಾಂಶ ಕೃಷಿ, ಸಸ್ಯ ಪ್ರಾಣಿ ವಸ್ತುಗಳ ಮೇಲೆ ಆಸ್ತಿಸ್ವಾಮ್ಯ ಕಾಯಿದೆ, ಈ ಬಗೆಯ ಅಪಾಯ ಜೀವ ತಂತ್ರಗಳತ್ತ ತೀವ್ರ ಎಚ್ಚರಿಕೆ ಅಗತ್ಯ. ಒಟ್ಟಿನಲ್ಲಿ ಮಧ್ಯವರ್ತಿ ವಂಚನೆಯಿಂದ, ಮುಕ್ತ ಬೆಳೆಯುವವರ - ಬಳಸುವವರ ಹಿತಾಸಕ್ತಿ ರಕ್ಷಿಸುವಲ್ಲಿ ಪ್ರಾಮಾಣಿಕ ರಕ್ಷಣೆ ಬೇಕು.

**ಪ್ರೊ || ಬಿ. ವಿ. ವೆಂಕಟರಾವ್**
ಅಧ್ಯಕ್ಷರು, ಪರಿಸರ ಪ್ರಜ್ಞಾ ಪ್ರತಿಷ್ಠಾನ
ನಂ. ೭೮, ೩ನೇ ಅಡ್ಡರಸ್ತೆ, ಗವಿಪುರಂ ವಿಸ್ತರಣ, ಬೆಂಗಳೂರು-೫೬೦ ೦೧೯



> *ಭಾರತದ ವರ್ಣವ್ಯವಸ್ಥೆ ಎಷ್ಟು ಹಳೆಯದೋ ಅದರ ಬಗೆಗಿನ ವ್ಯಾಖ್ಯಾನಗಳೂ ಅಷ್ಟೇ ಹಳೆಯವೆಂದರೆ ಉತ್ಪ್ರೇಕ್ಷೆಯಲ್ಲ. 'ವರ್ಣ' ಎಂದರೆ ಬಣ್ಣವೋ ಜಾತಿಯೋ ? ಈ ಪ್ರಶ್ನೆಯೂ ಸಾಕಷ್ಟು ಜಟಿಲವಾದುದೇ. ಶ್ರೇಣೀಕೃತ ಸಮಾಜದಲ್ಲಿ ಕನಿಷ್ಠನೆನಿಸಿಕೊಂಡಿರುವ ಶೂದ್ರ ಮೂಲತಃ ಯಾರು, ಅವನ ಸ್ಥಾನವೇನು ? ಆರ್ಯರು ಹೊರಗಿನವರು, ಶೂದ್ರರು ಒಳಗಿನವರು ಎಂಬ ಅಭಿಪ್ರಾಯದಲ್ಲಿ ಹುರುಳಿದೆಯೆ ? – ಇವುಗಳ ಬಗ್ಗೆ ಡಾ|| ಅಂಬೇಡ್ಕರರು ಸ್ವಲ್ಪ ಬೆಳಕು ಚೆಲ್ಲಿದ್ದಾರೆಂಬುದನ್ನು ಲೇಖಕರು ವಿವರಿಸಿದ್ದಾರೆ. ಇಡೀ ಪ್ರಶ್ನೆಗೆ ಇನ್ನೊಂದು ಆಯಾಮ ಒದಗಿಸಿರುವ ಚರ್ಚೆಯು ಇನ್ನೂ ಮುಂದುವರಿಯುತ್ತಲೇ ಇದೆ.*

# ಪುರುಷ ಸೂಕ್ತ ಮತ್ತು ಶೂದ್ರರು

**ವೇ**ದಗಳಲ್ಲಿ ಅತಿ ಪ್ರಾಚೀನವಾದ ಋಗ್ವೇದವನ್ನು ಹತ್ತು ಮಂಡಲಗಳಾಗಿ ವಿಭಾಗಿಸಲಾಗಿದೆ. ಅವುಗಳಲ್ಲಿ ಎರಡರಿಂದ ಎಂಟನೆಯ ಮಂಡಲಗಳು ಅತಿ ಪ್ರಾಚೀನವಾಗಿದ್ದು ಆ ಒಂದೊಂದು ಮಂಡಲವನ್ನು ಒಂದೊಂದು ವಂಶದ ಋಷಿಗಳು ರಚಿಸಿದಂತೆ ಕಾಣುತ್ತದೆ. ಆದ್ದರಿಂದಲೇ ಅವುಗಳನ್ನು ವಂಶೀಯ ಮಂಡಲಗಳೆಂದು ಕರೆಯಲಾಗಿದೆ. ಒಂಬತ್ತನೆಯ ಮಂಡಲದ ರಚನಾ ವಿನ್ಯಾಸ ಸ್ವಲ್ಪ ಭಿನ್ನವಾಗಿದೆ. ಇತರ ಮಂಡಲಗಳಲ್ಲಿ ಅನೇಕ ದೇವತೆಗಳ ಸೂಕ್ತಿಗಳಿದ್ದರೆ ಈ ಮಂಡಲದ ಎಲ್ಲಾ ಸೂಕ್ತಗಳೂ ಸೋಮನನ್ನು ಕುರಿತವಾಗಿವೆ.

ಋಗ್ವೇದದ ಹತ್ತನೆಯ ಮಂಡಲದ ಸೂಕ್ತಗಳು ಇತ್ತೀಚಿನವು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಅವುಗಳ ಭಾಷೆಯೂ ಸಾಪೇಕ್ಷವಾಗಿ ಇತ್ತೀಚಿನದಾಗಿದೆ. ಋಗ್ವೇದದ ಹತ್ತನೆ ಮಂಡಲದ ೯೦ನೆ ಸೂಕ್ತ 'ಪುರುಷ ಸೂಕ್ತ'ವೆಂದು ಪ್ರಸಿದ್ಧವಾಗಿದೆ. 'ಪುರುಷನಿಗೆ ಸಾವಿರ ಶಿರಗಳು, ಸಾವಿರ ಕಣ್ಣುಗಳು, ಸಾವಿರ ಪಾದಗಳಿವೆ' ಎಂದು ಪ್ರಾರಂಭವಾಗುವ ಈ ಸೂಕ್ತದಲ್ಲಿರುವ ೧೬ ಸ್ತೋತ್ರಗಳಲ್ಲಿ ವಿಶ್ವದ ಉಗಮದ ಬಗ್ಗೆ ಒಂದು ಸಿದ್ಧಾಂತವನ್ನು ಪ್ರತಿಪಾದಿಸಲಾಗಿದೆ. ಅದನ್ನು ಸೃಷ್ಟಿ ಶಾಸ್ತ್ರವೆಂದೂ ಕರೆಯುತ್ತಾರೆ. ಆ ಸ್ತೋತ್ರಗಳಲ್ಲಿ ಮಧ್ಯದ ೧೧ ಮತ್ತು ೧೨ನೆ ಸ್ತೋತ್ರಗಳು ಗಂಭೀರ ಅಧ್ಯಯನಕ್ಕೆ ಅರ್ಹವಾಗಿವೆ. ಅವನ್ನು ಇಲ್ಲಿ ನೋಡೋಣ :

'ಈ ಪುರುಷನನ್ನು ದೇವತೆಗಳು ಎಷ್ಟು ಭಾಗವಾಗಿ ಕತ್ತರಿಸಿದರು. ಪುರುಷನ ಮುಖ ಯಾವುದು ? ಅವನ ಬಾಹುಗಳು ಯಾವುವು ? ಅವನ ತೊಡೆಗಳು, ಪಾದಗಳು ಯಾವುವು ?' (ಋ. x .೯೦.೧೧)

'ಅವನ ಮುಖದಿಂದ ಬ್ರಾಹ್ಮಣನು ಉದಿಸಿದನು, ಅವನ ತೋಳುಗಳಿಂದ ಕ್ಷತ್ರಿಯನು ಉದಿಸಿದನು, ಅವನ ತೊಡೆಗಳಿಂದ ವೈಶ್ಯನೂ, ಅವನ ಪಾದಗಳಿಂದ ಶೂದ್ರನೂ ಉದಿಸಿದರು.' (ಋ. x .೯೦.೧೨)

ವಿಶ್ವ ಮತ್ತು ಅದರೊಳಗಿನ ಚರಾಚರ ವಸ್ತುಗಳು ಹೇಗೆ ಉಗಮವಾದುವು ಎಂಬ ಬಗ್ಗೆ ಪ್ರತಿಯೊಂದು ಧರ್ಮವೂ ತನ್ನದೇ ಆದ ಸೃಷ್ಟಿ ಶಾಸ್ತ್ರವನ್ನು ಹೊಂದಿದೆ. ಅವುಗಳ ತೌಲನಿಕ ಅಧ್ಯಯನದ ಹಿನ್ನೆಲೆಯಲ್ಲಿ ಪುರುಷ ಸೂಕ್ತದ ಮೇಲಿನ ಸ್ತೋತ್ರಗಳ ವೈಶಿಷ್ಟ್ಯವೇನು ಎಂಬುದನ್ನು ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಪರೀಕ್ಷೆಗೊಳಪಡಿಸಿದ್ದಾರೆ.

ಈಜಿಪ್ಷಿಯನ್ನರಲ್ಲೂ ಒಂದು ಬಗೆಯ ಸೃಷ್ಟಿ ಶಾಸ್ತ್ರವಿದೆ. ಅದರ ಪ್ರಕಾರ 'ಖ್ನುಮು' ಅಂದರೆ ಸೃಷ್ಟಿಕರ್ತನಾದ ದೇವರು ಕುಂಬಾರನ ಚಕ್ರದ ಮೇಲೆ ಎಲ್ಲ ಜೀವರಾಶಿಗಳನ್ನು ಸೃಷ್ಟಿಸಿದನು. ಅಲ್ಲಿ ಸೃಷ್ಟಿಕರ್ತನನ್ನು ವರ್ಣಿಸಿರುವ ರೀತಿ ಹೀಗಿದೆ : 'ಅವನು ಜನಕರ ಜನಕ, ಜನನಿಯ ಜನನಿ.... ಅವನು ಮನುಷ್ಯರನ್ನು ರೂಪಿಸಿದನು, ದೇವತೆಗಳನ್ನು ಸೃಷ್ಟಿಸಿದನು..... ಅವನೇ ಸ್ವರ್ಗ, ಮರ್ತ್ಯ, ಪಾತಾಳ, ಜಲ, ಪರ್ವತಗಳನ್ನೆಲ್ಲಾ ಸೃಷ್ಟಿಸಿದನು..... ಅವನೇ ಎಲ್ಲ ಪಕ್ಷಿಗಳಲ್ಲಿಯೂ, ಎಲ್ಲ ಮೀನುಗಳಲ್ಲಿಯೂ ಕಾಡು ಮೃಗಗಳಲ್ಲಿಯೂ ಮತ್ತು ಎಲ್ಲ ಕ್ರಿಮಿಕೀಟಗಳಲ್ಲಿಯೂ ಹೆಣ್ಣು ಮತ್ತು ಗಂಡನ್ನು ಸೃಷ್ಟಿಸಿದನು'. (ಅಂಬೇ., ಸಂ. ೭, ಪು. ೨೮)

ಸೃಷ್ಟಿಯ ಉಗಮದ ಸಿದ್ಧಾಂತಗಳು ಇದೇ ರೀತಿ ಬೈಬಲಿನ ಹಳೆ ಒಡಂಬಡಿಕೆಯಲ್ಲೂ ಇತರ ಧರ್ಮಗಳಲ್ಲೂ ವ್ಯಕ್ತವಾಗಿವೆ. ಈ ಸೃಷ್ಟಿ ಶಾಸ್ತ್ರದ ವಿವಿಧ ರೂಪಗಳು ವಿದ್ವಾಂಸರ ಕುತೂಹಲ ತಣಿಸಲು ಮತ್ತು ಮಕ್ಕಳನ್ನು ರಂಜಿಸಲು ಸಹಾಯಕವಾಗಬಹುದೇ ಹೊರತು ಅದಕ್ಕಿಂತ ಹೆಚ್ಚಿನ ಮಹತ್ವ ಅವುಗಳಿಗೆ ಇರುವುದಿಲ್ಲ. ಈ ಮಾತು ಪುರುಷ ಸೂಕ್ತದ ೧೧ ಮತ್ತು ೧೨ನೆ ಸ್ತುತಿಗಳನ್ನು ಹೊರತುಪಡಿಸಿ ಉಳಿದ ಸೃಷ್ಟಿ ಶಾಸ್ತ್ರಕ್ಕೂ ಅನ್ವಯಿಸುತ್ತದೆ. ೧೧ ಮತ್ತು ೧೨ನೆ ಸ್ತುತಿಗಳ ಉದ್ದೇಶವೇ ಭಿನ್ನವಾಗಿದೆ. ಮೇಲುನೋಟಕ್ಕೆ ಈ ಶ್ಲೋಕಗಳು ನಾಲ್ಕು ವರ್ಣಗಳಾದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಹೇಗೆ ವಿರಾಟ್ ಪುರುಷನ ದೇಹದ ವಿವಿಧ ಭಾಗಗಳಿಂದ ಉದ್ಭವಿಸಿದರು ಎಂಬುದನ್ನು ಸೂತ್ರೀಕರಿಸುತ್ತವೆ. ಇವು ಕೇವಲ ಕವಿ ಕಲ್ಪನೆ ಎಂದು ಅಂದಿನ ಆರ್ಯರು ಭಾವಿಸದೆ, ಒಂದು ವಿಶಿಷ್ಟ ರೂಪದ ಸಮಾಜ ರಚನೆಯನ್ನು ನಿಗದಿಪಡಿಸುವ ದೈವಾದೇಶಗಳೆಂದು ಭಾವಿಸಿದರು.

**ಪ್ರೊ|| ಬಿ. ವಿ. ವೀರಭದ್ರಪ್ಪ**

'ಪುರುಷ ಸೂಕ್ತ' ವಿಧಿಸಿದ ಸಮಾಜ 'ಚಾತುರ್ವರ್ಣ್ಯ' ಎಂದು ಪ್ರಸಿದ್ಧವಾಯಿತು. ದೈವ ನಿಯಮವಾದ್ದರಿಂದ ಅದು ಸ್ವಾಭಾವಿಕವಾಗಿ ಆರ್ಯರ ಆದರ್ಶವಾಯಿತು.

ಪುರುಷ ಸೂಕ್ತದ ವರ್ಣ ವಿಭಜಿತ ಸೃಷ್ಟಿ ಸಿದ್ಧಾಂತವನ್ನು ನಂತರದ ಸ್ಮೃತಿಕಾರರು ಪ್ರಚಾರ ಮಾಡಲು ಮುಂದಾದರು. 'ಆಪಸ್ತಂಬ ಧರ್ಮಸೂತ್ರ' ಚಾತುರ್ವರ್ಣ್ಯವನ್ನು ಈ ರೀತಿ ಪ್ರತಿಪಾದಿಸುತ್ತದೆ :

'ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣಗಳಿವೆ. ಇವುಗಳಲ್ಲಿ ಪ್ರತಿಯೊಂದು ವರ್ಣವೂ ಹುಟ್ಟಿನಿಂದ ತನ್ನ ಕೆಳವರ್ಣಕ್ಕಿಂತ ಶ್ರೇಷ್ಠವಾದುದು. ಅವರಲ್ಲಿ ಶೂದ್ರರನ್ನೂ, ಪಾಪ ಕರ್ಮ ಮಾಡಿದವರನ್ನೂ ಬಿಟ್ಟರೆ ಉಳಿದವರಿಗೆ ಉಪನಯನ, ವೇದಾಧ್ಯಯನ ಮತ್ತು ಯಜ್ಞ ಮಾಡುವ ಹಕ್ಕುಗಳಿವೆ.' (ಆಪ. ೧.೧.೧.೪,೫,೬)

ಇದನ್ನೇ ವಾಸಿಷ್ಠ ಧರ್ಮಸೂತ್ರ ಬೇರೆ ಮಾತುಗಳಲ್ಲಿ ಹೇಳುತ್ತದೆ. ಇನ್ನಿತರ ಸ್ಮೃತಿಕಾರರೂ ಮೇಲಿಂದ ಮೇಲೆ ಇದೇ ಗಿಳಿಪಾಠಗಳನ್ನು ಒಪ್ಪಿಸಿದ್ದಾರೆ. ಪುರುಷ ಸೂಕ್ತದ ಪಾವಿತ್ರ್ಯದ ವಿರುದ್ಧ ದನಿ ಎತ್ತಿದವರ ಸೊಲ್ಲಡಗಿಸುವಲ್ಲಿ ಮನು ಯಶಸ್ವಿಯಾದ. ಅವನು ಎರಡು ಕೆಲಸ ಮಾಡಿದ. ಮೊದಲನೆಯದಾಗಿ ಪುರುಷ ಸೂಕ್ತದ ಆದರ್ಶವನ್ನು ಎತ್ತಿ ಹಿಡಿದ :

ಲೋಕದ ಅಭ್ಯುದಯಕ್ಕಾಗಿ ಸೃಷ್ಟಿಕರ್ತನು ತನ್ನ ಬಾಯಿ, ತೋಳು, ತೊಡೆ ಮತ್ತು ಪಾದಗಳಿಂದ ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರನ್ನು ಸೃಷ್ಟಿಸಿದ. (ಮನು. ೧.೩೧)

ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ದ್ವಿಜ ಜಾತಿಗೆ ಸೇರಿದ್ದಾರೆ. ಆದರೆ ನಾಲ್ಕನೆಯವನಾದ ಶೂದ್ರನಿಗೆ ಕೇವಲ ಒಂದೇ ಜನ್ಮ. (ಅದೇ. X.೪.)

ಶೂದ್ರನಿಗೆ ದುಡ್ಡು ಕೊಟ್ಟು ಪಾಠ ಕಲಿತುಕೊಳ್ಳುವವನು ಮತ್ತು ಅವನಿಂದ ವಿದ್ಯೆ ಪಡೆಯುವವನು ದೇವತೆಗಳು ಮತ್ತು ಪಿತೃಗಳ ಗೌರವಾರ್ಥವಾಗಿ ನಡೆಯುವ ಆಚರಣೆಯಲ್ಲಿ ಆಹ್ವಾನಗೊಳ್ಳಲು ಅನರ್ಹನು. (ಅದೇ. III.೧೫೬)

ಪ್ರಧಾನವಾಗಿ ಶೂದ್ರರೂ ಪಾಖಂಡಿಗಳೂ ಇದ್ದು ಬ್ರಾಹ್ಮಣರಿಲ್ಲದ ರಾಜ್ಯ ಕ್ಷಾಮಡಾಮರಗಳಿಂದ ಬಹುಬೇಗನೆ ಸಂಪೂರ್ಣವಾಗಿ ನಾಶವಾಗುತ್ತದೆ. (ಅದೇ. VIII. ೨೦-೨೨)

ಅಷ್ಟಕ್ಕೇ ಅವನು ನಿಲ್ಲುವುದಿಲ್ಲ. ಇನ್ನೂ ಒಂದು ಹೆಜ್ಜೆ ಮುಂದು ಹೋಗಿ ಒಂದು ಮಹತ್ವದ ಘೋಷಣೆಯನ್ನು ಮಾಡುತ್ತಾನೆ. ಅದೇನೆಂದರೆ :

''ಧರ್ಮಕ್ಕೆ ವೇದವೇ ಮೂಲ, ಪರಮ ಗಂತವ್ಯ'' (ಅದೇ. II. ೬).

ಪುರುಷ ಸೂಕ್ತವು ವೇದದ ಒಂದು ಭಾಗ. ಅದರಲ್ಲಿರುವ ಚಾತುರ್ವರ್ಣ್ಯವೆಂಬ ಸಾಮಾಜಿಕ ಆದರ್ಶಕ್ಕೆ ಮನು ಆ ಮೊದಲು ಇರದಿದ್ದ ದೈವತ್ವವನ್ನೂ ಪರಿಪೂರ್ಣತೆಯನ್ನೂ ಕೊಟ್ಟನೆಂದು ತಿಳಿಯಬಹುದು. ಪುರುಷ ಸೂಕ್ತದ ವಿಮರ್ಶಾತ್ಮಕ ವಿಶ್ಲೇಷಣೆಯನ್ನು ಅಂಬೇಡ್ಕರ್ ಅವರು ಗಂಭೀರವಾಗಿ ಪರಿಗಣಿಸಿದ್ದಾರೆ :

''ಪುರುಷ ಅಪ್ರತಿಮವಾದುದೆಂದು ಹಿಂದುಗಳು ಪರಿಗಣಿಸುತ್ತಾರೆ.... ವರ್ಣರಹಿತ ಸಮಾಜವನ್ನು ಸಾಮಾಜಿಕ ಆದರ್ಶವೆಂದು ಬೋಧಿಸಿದ್ದರೆ 'ಪುರುಷ ಸೂಕ್ತ' ನಿಜವಾಗಿಯೂ ಅಪ್ರತಿಮವಾಗುತ್ತಿತ್ತು. ಆದರೆ ಅದು ವರ್ಣಬದ್ಧ ಸಮಾಜವನ್ನು ತನ್ನ ಆದರ್ಶವೆಂದು ಬೋಧಿಸುತ್ತದೆ. ಇದನ್ನು ಅಪ್ರತಿಮವೆಂದು ಹೇಳಲು ಸಾಧ್ಯವೇ ?.... ಸಂಪೂರ್ಣ ಪ್ರಾಚೀನವಲ್ಲದ ಪ್ರತಿಯೊಂದು ಸಮಾಜದಲ್ಲೂ ವರ್ಗಗಳು ಇದ್ದೇ ಇರುತ್ತವೆ.... (ಆದರೆ) ಮೇಲು ಜಾತಿಯವರಾದರೆ ಪುರಸ್ಕಾರ, ಕೆಳಜಾತಿಯವರಾದರೆ ತಿರಸ್ಕಾರ ಎಂದು ನಿರ್ದಿಷ್ಟಪಡಿಸುವ ಶಾಶ್ವತ ಅಧಿಕೃತ ಶ್ರೇಣಿ ಯಾವ ಸಮಾಜದಲ್ಲೂ ಇಲ್ಲ. ನಾನಾ ವರ್ಣಗಳ ನಡುವಣ ಸಂಬಂಧ ಶ್ರೇಣೀಕೃತ ಆದ್ಯತೆಗೆ ಶಾಶ್ವತವಾಗಿ ಬದ್ಧವಾಗಿರುವುದರಿಂದ ಅದನ್ನು ಯಾವ ಕಾಲ ದೇಶಗಳೂ ಬದಲಾವಣೆ ಮಾಡಲು ಸಾಧ್ಯವಿಲ್ಲ. ಆದ್ದರಿಂದಲೇ ಪುರುಷ ಸೂಕ್ತದ ವಿಧಾನ ಅಪ್ರತಿಮವಾಗಿದೆ !'' (ಅಂಬೇ., ಸಂ. ೭, ಪು. ೩೩)

ಋಗ್ವೇದದಲ್ಲಿ ಸೃಷ್ಟಿ ಶಾಸ್ತ್ರವನ್ನು ಕುರಿತು ಹೇಳಿರುವುದು ಪುರುಷ ಸೂಕ್ತವೊಂದೇ ಅಲ್ಲ. ಅದರಲ್ಲಿ ಇನ್ನೊಂದು ಸೃಷ್ಟಿಶಾಸ್ತ್ರವೂ ಇದೆ. 'ಆದಿಯುಗದಲ್ಲಿ ಶೂನ್ಯದಿಂದ ದೇವತೆಗಳು ಮತ್ತು ಉಳಿದ ಜೀವರಾಶಿಗಳು ಸೃಷ್ಟಿಯಾದುವು' ಎಂದು ಇನ್ನೊಂದು ಕಡೆ ಹೇಳಿದೆ (ಋ. X. ೭೨,೧-೯). ಅಲ್ಲಿ ಒಟ್ಟು ಒಂಬತ್ತು ಸೂಕ್ತಿಗಳಿವೆ. ಏಕೆ ಒಂದೇ ಗ್ರಂಥದಲ್ಲಿ ಎರಡು ಪರಸ್ಪರ ವಿರೋಧಾತ್ಮಕ ಸೃಷ್ಟಿ ಸಿದ್ಧಾಂತಗಳನ್ನು ಪ್ರತಿಪಾದನೆ ಮಾಡಲಾಯಿತು ?

ಪುರುಷ ಸೂಕ್ತವನ್ನು ಓದುವವರಿಗೆ ಒಂದು ಮೂಲಭೂತ ಸಮಸ್ಯೆ ಎದುರಾಗುತ್ತದೆ. ಕತ್ತೆ, ಕುದುರೆ, ಮೇಕೆಗಳಿಂದ ಸೃಷ್ಟಿ ಪ್ರಾರಂಭವಾಗುತ್ತದೆಂದು ಹೇಳುವ ಅದು ಮಾನವ ಸೃಷ್ಟಿಯ ಬಗ್ಗೆ ಯಾಕೆ ಏನೂ ಹೇಳುವುದಿಲ್ಲ? ಬದಲಾಗಿ ವರ್ಣಸಮಾಜದ ಉದಯದ ಬಗ್ಗೆ ಯಾಕೆ ಆಸಕ್ತಿ ತೋರಿಸುತ್ತದೆ ?

ಋಗ್ವೇದದಲ್ಲಿ ಮಾನವರಲ್ಲಿ ಯಾವ ಭೇದ ಭಾವವನ್ನೂ ಎಣಿಸದೆ ಅವರನ್ನು ಸಮಾನವಾಗಿ ಕಾಣುವ ಸೂಕ್ತಿಗಳು ಬೇಕಾದಷ್ಟಿವೆ. ಉದಾಹರಣೆಗೆ :

''ಅಗ್ನಿಯು ದೇವತೆಗಳ ಮತ್ತು ಮಾನವರ ಜೊತೆಗೂಡಿ ಸೂಕ್ತಿಗಳನ್ನು ಪಠಿಸುತ್ತಾ ಶತರೂಪ ಯಜ್ಞವನ್ನು ಆಚರಿಸಿದನು.'' (ಅದೇ. III. ೩.೬)

''ಎಲೈ ದೇವತೆಗಳೆ, ವಾಜ ಮತ್ತು ರಿಭುಕ್ಷಣರೆ, ದೇವಯಾನದಿಂದ ಬಂದು ನಮ್ಮ ಯಜ್ಞದಲ್ಲಿ ಪಾಲುಗೊಳ್ಳಿ. ಎಲೈ ಮಂಗಳಕರ ದೇವತೆಗಳೆ, ಶುಭದಿನಗಳಲ್ಲಿ ಮಾನವರಿಗಾಗಿ ಒಂದು ಯಜ್ಞವನ್ನು ರೂಪಿಸಿ.'' (ಅದೇ. IV. ೩೭.೧)

''ಹೋತೃವಾದ ಅಗ್ನಿಯನ್ನು ಯಜ್ಞದಲ್ಲಿ ಮಾನವರು ಸ್ತುತಿಸುತ್ತಾರೆ.'' (ಅದೇ. VI. ೧೪.೨)

ಋಗ್ವೇದದ ಆರಂಭ ಕಾಲದಲ್ಲಿ ಮಾನವನು ಜೀವನೋಪಾಯಕ್ಕಾಗಿ ಭಿನ್ನವೃತ್ತಿಗಳನ್ನು ಅವಲಂಬಿಸಿದ್ದರೂ ಅವರಲ್ಲಿ ಭೇದಭಾವವಿರಲಿಲ್ಲ :

''ಕೆಲವರು ಅಧಿಕಾರಕ್ಕಾಗಿ, ಕೆಲವರು ಕೀರ್ತಿಗಾಗಿ, ಕೆಲವರು ಸಂಪತ್ತಿಗಾಗಿ, ಕೆಲವರು ಕೆಲಸಕ್ಕಾಗಿ ಪ್ರಯತ್ನಿಸಬಹುದು. ಉಷೆ ಜನರನ್ನು ಎಚ್ಚರಿಸುವುದರಿಂದ ಪ್ರತಿಯೊಬ್ಬನೂ ತನಗಿಷ್ಟವಾದ ರೀತಿಯಲ್ಲಿ ಜೀವನೋಪಾಯ ಮಾಡಬಹುದು.'' (ಅದೇ. ೧. ೧೧೩.೬)

ಋಗ್ವೇದ ಕಾಲದಲ್ಲಿ ಅನೇಕ ಬುಡಕಟ್ಟುಗಳಿದ್ದರೂ ಅವುಗಳಲ್ಲಿ ಅಂತರವಿರಲಿಲ್ಲ :

''ಎಲೈ ಇಂದ್ರಾಗ್ನಿಗಳೆ, ನೀವು ಯದುಗಳು, ತುರ್ವಸರು, ದ್ರುಹ್ಯರು, ಅನುಗಳು, ಪುರುಗಳಲ್ಲಿ ನೆಲೆಸಿದ್ದರೆ ಇಲ್ಲಿಗೆ ಬನ್ನಿ. ದಶದಿಕ್ಕುಗಳಲ್ಲಿಯೂ ಬಲಶಾಲಿಗಳಾದ ವೀರರೆ, ನಿಮಗೆ ಅರ್ಪಿಸಿರುವ ಈ ಸೋಮವನ್ನು ಸ್ವೀಕರಿಸಿ.'' (ಅದೇ ೧. ೧೦೮. ೮)

ವಸ್ತುಸ್ಥಿತಿಯಲ್ಲಿ ವೈಯಕ್ತಿಕ ಅನುಕೂಲವಾದಾಗ ಮಾತ್ರ ವ್ಯಕ್ತಿ ವಾಸ್ತವವನ್ನೇ ಆದರ್ಶವೆಂದು ಹೇಳಲು ಪ್ರಯತ್ನಿಸುತ್ತಾನೆ. ಪುರುಷ ಸೂಕ್ತ ಮಾಡಿರುವುದೂ ಅದನ್ನೇ.

ಕವಷ ಐಲೂಷ ಎಂಬ ಋಷಿ ಋಗ್ವೇದದ ನಾಲ್ಕು ಸೂಕ್ತಗಳನ್ನು ರಚಿಸಿದ್ದಾನೆ. ಅವನೊಬ್ಬ ಶೂದ್ರ ಮತ್ತು ಜೂಜಾಟ ಅವನ ಹವ್ಯಾಸವಾಗಿತ್ತು. ಪ್ರಾರಂಭದಲ್ಲಿ ಇತರ ಋಷಿಗಳು ಅವನನ್ನು ಉಪೇಕ್ಷೆ ಮಾಡಿದ್ದರು. ಆದರೆ ಅನಂತರ ಅವನ ಜ್ಞಾನ ಮತ್ತು ವಿದ್ವತ್ತುಗಳನ್ನು ಗಮನಿಸಿ ಅವನನ್ನು ಗೌರವಿಸಲು ತೊಡಗಿದರು. ಋಗ್ವೇದದ ಹತ್ತನೆ ಮಂಡಲದ ೩೧ರಿಂದ ೩೪ನೇವರೆಗಿನ ಸೂಕ್ತಗಳನ್ನು ಅವನು ರಚಿಸಿದ್ದಾನೆ. ಒಂದು ಸೂಕ್ತದಲ್ಲಿ ಅವನು ಜನರನ್ನು ಕುರಿತು ಜೂಜಾಟ ಬಿಟ್ಟು ವ್ಯವಸಾಯದಲ್ಲಿ ತೊಡಗಿ ಎಂದು ಬುದ್ಧಿ ಹೇಳುತ್ತಾನೆ. ಜೂಜುಕೋರನ ಕುಟುಂಬದ ಸ್ಥಿತಿಯನ್ನು ಅವನು ಈ ರೀತಿ ವಿವರಿಸುತ್ತಾನೆ :

''ಜೂಜುಕೋರನ ಹೆಂಡತಿ ಅನಾಥಳಾಗಿ ದಾರಿದ್ರ್ಯವನ್ನನುಭವಿಸಬೇಕಾಗುತ್ತದೆ. ಅವನ ತಾಯಿ ಮನೆಯಿಲ್ಲದೆ ದಿಕ್ಕೆಟ್ಟು ಅಲೆಯುವ ತನ್ನ ಮಗನಿಗಾಗಿ ಗೋಳಾಡುತ್ತಾಳೆ. ಯಾವಾಗಲೂ ಭಯಗ್ರಸ್ತನಾಗಿ ಸಾಲಗಾರನಾಗಿ ಹಣಕ್ಕಾಗಿ ಪರದಾಡುತ್ತಾ ಅವನು ಅನ್ಯರ ಮನೆಗೆ ಕನ್ನ ಹಾಕುತ್ತಾನೆ.'' (ಅದೇ. X.೩೪.೧೦)

ಪೀಜವನನ ಮಗನಾದ ಸುದಾಸ ಎಂಬ ಶೂದ್ರ ರಾಜ ಋಗ್ವೇದದ ಹತ್ತನೆ ಮಂಡಲದ ೧೩೪ನೆ ಸೂಕ್ತವನ್ನು ರಚಿಸಿದ ಎಂದು ಸಾಯಣರೇ ಹೇಳುತ್ತಾರೆ. ಅಲ್ಲದೆ ಅವನು ಅಶ್ವಮೇಧ ಯಜ್ಞ ಮಾಡಿದನೆಂದು ಋಗ್ವೇದದಲ್ಲಿ (III.೫೩) ದಾಖಲಾಗಿದೆ. ಸುದಾಸನು ಬ್ರಾಹ್ಮಣರಿಗೆ ನೀಡುತ್ತಿದ್ದ ದಾನಕ್ಕಾಗಿ ಸುಪ್ರಸಿದ್ಧನಾಗಿದ್ದ. ಋಗ್ವೇದದ ಕನಿಷ್ಠ ೧೬ ಮಂತ್ರಗಳಲ್ಲಿ ಬ್ರಾಹ್ಮಣರು ಅವನ ಲೋಕೋಪಕಾರಿ ಗುಣವನ್ನು ಕೊಂಡಾಡಿದ್ದಾರೆ.

ವಸಿಷ್ಠರು ಸುದಾಸನ ಪುರೋಹಿತರು. ಅವನ ಪಟ್ಟಾಭಿಷೇಕ ನೆರವೇರಿಸಿಕೊಟ್ಟವರು ಅವರೇ. ದಶರಾಜರ ವಿರುದ್ಧ ಜಯಗಳಿಸಲು ವಸಿಷ್ಠರು ಸುದಾಸನಿಗೆ ನೆರವಾಗುತ್ತಾರೆ.

ಪ್ರಾಚೀನ ವೈದಿಕ ಸಾಹಿತ್ಯವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದ ಡಾ॥ ಅಂಬೇಡ್ಕರ್ ಅವರು ೧. ಆರ್ಯರು, ದಾಸರು ಮತ್ತು ದಸ್ಯುಗಳ ನಡುವೆ ಜನಾಂಗಿಕ ಪ್ರತ್ಯೇಕತೆ ಇತ್ತು ಎಂಬುದಕ್ಕೆ ಯಾವ ಆಧಾರವೂ ಇಲ್ಲ; ೨. ದಾಸರು ಮತ್ತು ದಸ್ಯುಗಳಿಗಿಂತ ವರ್ಣದಲ್ಲಿ ಆರ್ಯರು ಭಿನ್ನವಾಗಿದ್ದರು ಎಂಬ ವಾದವನ್ನು ವೇದಗಳು ಬೆಂಬಲಿಸುವುದಿಲ್ಲ, ಎಂಬ ತೀರ್ಮಾನಕ್ಕೆ ಬರುತ್ತಾರೆ. (ಅಂಬೇ., ಸಂ. ೭, ಪು. ೧೨೩)

ಋಗ್ವೇದದ I.೧೭೯.೬ರ ಮಂತ್ರ ವರ್ಣದ ಅರ್ಥವನ್ನು ತಿಳಿದುಕೊಳ್ಳಲು ಸಹಕಾರಿಯಾಗಿದೆ. ಮಕ್ಕಳು ಮತ್ತು ಬಲವನ್ನು ಪಡೆಯುವುದಕ್ಕಾಗಿ ಲೋಪಾಮುದ್ರೆಯ ಜೊತೆ ಅಗಸ್ತ್ಯ ಸಂಸಾರ ಮಾಡಿದ ಎಂದೂ ಹಾಗೂ ಅದರ ಪರಿಣಾಮವಾಗಿ ಎರಡು ವರ್ಣಗಳೂ ವರ್ಧಿಸಿದುವು ಎಂದೂ ಆ ಮಂತ್ರ ವಿವರಿಸುತ್ತದೆ. ಆರ್ಯರು ಮತ್ತು ದಾಸರ ಬಗ್ಗೆ ಹೇಳುವಂತಿದ್ದರೂ ಆ ಎರಡು ವರ್ಣಗಳು ಯಾವುವು ಎಂಬುದನ್ನು ಆ ಸೂಕ್ತ ಸ್ಪಷ್ಟಪಡಿಸುವುದಿಲ್ಲ. ಅದು ಏನೇ ಇರಲಿ ಆ ಮಂತ್ರದಲ್ಲಿ ವರ್ಣ ಎಂದರೆ ವರ್ಗ ಅಥವಾ ಬಣ್ಣ ಅಲ್ಲ ಎಂಬುದು ಸಂಶಯಾತೀತವಾಗಿದೆ.

ಲೋಪಾಮುದ್ರೆಯು ವಿದರ್ಭ ದೇಶದ ರಾಜಕುಮಾರಿ. ಅಗಸ್ತ್ಯನ ಜನನ ನಿಗೂಢವಾಗಿದೆ. ಮಿತ್ರಾವರುಣರೆಂಬ ಋಷಿಗಳು ಒಮ್ಮೆ ಊರ್ವಶಿಯನ್ನು ಕಂಡು ಮೋಹಿತರಾದರು. ಊರ್ವಶಿ ಅವರ ವೀರ್ಯವನ್ನು ಒಂದು ಕುಂಭದಲ್ಲಿ ಸಂಗ್ರಹಿಸಿದಳು. ಆಗ ಅದರಿಂದ ಅಗಸ್ತ್ಯನೂ ವಸಿಷ್ಠನೂ ಜನಿಸಿದರು. ಈ ಕಾರಣದಿಂದಲೇ ಇವರಿಗೆ ಮೈತ್ರಾವರುಣಿ ಎಂತಲೂ, ಕುಂಭಸಂಭವರೆಂದೂ ಹೆಸರು.

ಋಗ್ವೇದದ IX. ೭೧. ೨ನೆ ಮಂತ್ರದಲ್ಲಿ ಬರುವ 'ಅಸುರ ವರ್ಣವನ್ನು ತ್ಯಜಿಸಿದನು' ಎಂಬ ಮಾತು ಈ ಸೂತ್ರದ ಇತರ ಮಂತ್ರಗಳ ಬೆಳಕಿನಲ್ಲಿ ಓದಿದರೆ ಸ್ಪಷ್ಟವಾಗುವುದಿಲ್ಲ. ಸೂಕ್ತದ ಅಧಿಷ್ಠಾತೃ ದೇವತೆ ಸೋಮ ಪವಮಾನ. ಇದನ್ನು ಮನಸ್ಸಿನಲ್ಲಿಟ್ಟುಕೊಂಡರೆ 'ಅಸುರ ವರ್ಣವನ್ನು ತ್ಯಜಿಸಿದನು' ಎಂಬ ಮಾತು ಸೋಮನ ವರ್ಣನೆ ಎಂದು ತಿಳಿಯಬೇಕಾಗುತ್ತದೆ. ಇಲ್ಲಿ ವರ್ಣ ಪದವನ್ನು 'ರೂಪ' ಎಂಬ ಅರ್ಥದಲ್ಲಿ ಬಳಸಲಾಗಿದೆ. ಈ ಮಂತ್ರದ ಉತ್ತರಾರ್ಧ ಹೀಗಿದೆ 'ಅವನು ತನ್ನ ಕಪ್ಪನೆಯ ಹೊದಿಕೆಯನ್ನು ಎಸೆದು ಬಿಳಿಯ ಹೊದಿಕೆಯನ್ನು ತೆಗೆದುಕೊಂಡನು.' ಇದರಿಂದ ವರ್ಣ ಶಬ್ದ ಕತ್ತಲೆಯನ್ನು ಸೂಚಿಸುವ ಪದವೆಂದು ಸ್ಪಷ್ಟವಾಗುತ್ತದೆ.

ಋಗ್ವೇದದ I.೧೦೪.೨ ಮತ್ತು II.೧೨.೪ ಈ ಎರಡು ಮಂತ್ರಗಳು ವರ್ಣಶಬ್ದವನ್ನು ದಾಸರಿಗೆ ಅನ್ವಯಿಸುತ್ತದೆ. ದಾಸರಿಗೆ ಅನ್ವಯಿಸಿದಾಗ ವರ್ಣಶಬ್ದದ ಅರ್ಥವೇನು ? ಅದು ದಾಸನ ಮೈಬಣ್ಣಕ್ಕೆ ಸಂಬಂಧಿಸಿದೆಯೆ ಎಂಬುದು ಪ್ರಶ್ನೆಯಾಗೇ ಉಳಿಯುತ್ತದೆ.

ಋಗ್ವೇದದ ಆಧಾರ ತೀರಾ ಅಪರಿಪೂರ್ಣವಾಗಿದೆ. ಈ ಸಂಬಂಧದಲ್ಲಿ ಈ ಶಬ್ದ ಇಂಡೋ-ಇರಾನಿಯನ್ನರ ಸಾಹಿತ್ಯದಲ್ಲಿ ಬಳಕೆಯಾಗಿರುವ ರೀತಿ ಈ ದೃಷ್ಟಿಯಿಂದ ಸಹಕಾರಿಯಾಗಿದೆ. 'ಝೆಂಡ್ ಅವೆಸ್ತ'ದಲ್ಲಿ ವರ್ಣ ಶಬ್ದ ಬಳಕೆಯಾಗಿದೆ. ಅದು 'ವರಣ' ಅಥವಾ 'ವರೇಣ' ರೂಪ ತಾಳಿದೆ. ಅದನ್ನು ಸ್ಪಷ್ಟವಾಗಿ 'ನಂಬಿಕೆ, ಧಾರ್ಮಿಕ ಸಿದ್ಧಾಂತ, ಪಂಥ ಅಥವಾ ನಂಬಿಕೆಯ ಆಯ್ಕೆ' ಎಂಬ ಅರ್ಥದಲ್ಲಿ ಬಳಸಲಾಗಿದೆ. ಅದು 'ವರ್' ಎಂಬ ಧಾತುವಿನಿಂದ ಬಂದಿದೆ, ಇದರರ್ಥ ನಂಬಿಕೆ ಇಡು, ವಿಶ್ವಾಸವಿಡು ಎಂದು. ಗಾಥಾಗಳಲ್ಲಿ 'ವರಣ' ಅಥವಾ 'ವರೇಣ'ವನ್ನು ನಂಬಿಕೆ, ಸಿದ್ಧಾಂತ, ಪಂಥ ಅಥವಾ ವಿಶ್ವಾಸ ಎಂಬ ಅರ್ಥದಲ್ಲಿ ಆರು ಕಡೆ ಬಳಸಲಾಗಿದೆ. (ಅಂಬೇ., ಸಂ. ೭, ಪು. ೧೧೯-೧೨೦)

ಶೂದ್ರರು ಬೇರೆ, ದಾಸ ದಸ್ಯುಗಳು ಬೇರೆ ಎಂಬುದರ ಬಗ್ಗೆ ಅಂಬೇಡ್ಕರರ ವಿಚಾರ ಸರಣಿಯನ್ನು ನೋಡಬಹುದು :

''ಝೆಂಡ್ ಅವೆಸ್ತದ 'ದಾಹಕ'ವೆಂಬುವವನೂ ಋಗ್ವೇದದ 'ದಾಸ' ಎಂಬುವವನೂ ಒಬ್ಬನೇ ವ್ಯಕ್ತಿಯೆ ? ನಾಮ ಸಾದೃಶ್ಯವನ್ನು ಆಧಾರವಾಗಿಟ್ಟುಕೊಳ್ಳುವುದಾದರೆ ಆ ಹೆಸರುಗಳು ಒಬ್ಬನೇ ವ್ಯಕ್ತಿಯವು ಎಂಬ ತೀರ್ಮಾನಕ್ಕೆ ಎಡೆಮಾಡಿಕೊಡುತ್ತವೆ. ಸಂಸ್ಕೃತದ ದಾಸ 'ಅವೆಸ್ತಾ'ದಲ್ಲಿ 'ದಾಹ' ಆಗಿರಲು ಸಾಕು. (ಸಂಸ್ಕೃತದ 'ಸ' ಪರ್ಶಿಯನ್ ಭಾಷೆಯಲ್ಲಿ ಸ್ವಾಭಾವಿಕವಾಗಿಯೇ 'ಹ' ಎಂದು ಪರಿವರ್ತನೆಗೊಳ್ಳುತ್ತದೆ)...... ಅವರಿಬ್ಬರೂ ಒಂದೇ ಎಂಬ ಬಗ್ಗೆ ಇದಲ್ಲದೆ ಬೇರೆ ಹಾಗೂ ಹೆಚ್ಚು ಸುಸಂಬದ್ಧ ಪ್ರಮಾಣ ಸಿಕ್ಕುತ್ತವೆ. ಯಸ್ನಹಾ ೯ರಲ್ಲಿ ಅ ಝಿ ದಾಹಕ ಎಂಬಾತನು ಮೂರು ತಲೆ, ಮೂರು ಬಾಯಿ, ಆರು ' ಕಣ್ಣುಳ್ಳವನಾಗಿದ್ದನೆಂದು ಹೇಳಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿ ಏನೆಂದರೆ ಋಗ್ವೇದ (X. ೯೯.೬)ದಲ್ಲಿಯೂ ದಾಸನ ವರ್ಣನೆ ಇದೇ ಪ್ರಕಾರ ಬರುತ್ತದೆ. ಆತನಿಗೂ ಮೂರು ತಲೆ, ಆರು ಕಣ್ಣು. ಅಂದ ಮೇಲೆ ಋಗ್ವೇದದ ದಾಸ ಹಾಗೂ ಅವೆಸ್ತಾದ ದಾಹಕ ಇಬ್ಬರೂ ಒಂದೇ ಎಂಬ ವಾದವನ್ನು ಒಪ್ಪಿಕೊಂಡದ್ದಾದರೆ ದಾಸರು ಭಾರತದ ಮೂಲನಿವಾಸಿಗಳಲ್ಲವೆಂದೇ ಸಿದ್ಧವಾಗುತ್ತದೆ.'' (ಅಂಬೇ., ಸಂ. ೭, ಪು. ೧೫೫ - ೧೫೬)

ದಾಸರು ಹಾಗೂ ದಸ್ಯುಗಳು ಕಾಡು ಸ್ಥಿತಿಯಲ್ಲಿನ

## ನೀರ ಮಕ್ಕಳ ಮುಟ್ಟಾಟ

ಕಣ್ಣೇ ಕಟ್ಟೇ ಆಡೇ ಗೂಡೇ
ಮುದ್ದಿನ ಮೂಟೆ ಉರುಳಿ ಹೋಯ್ತು
ಇವಳ ಬಿಟ್ಟು ಇವಳು ಯಾರು ?

ನೀರ ಮಕ್ಕಳು ಹಾರಿ
ಆಕಾಶವನು ಏರಿ
ಮುಗಿಲ ಪರದೆಯಲಡಗಿ
ಗಪ್ ಚಿಪ್ ಗಪ್ ಚಿಪ್
ಇವಳ ಬಿಟ್ಟು ಇವಳು ಯಾರು ?

ಅಜ್ಜಿ ಬಿಟ್ಟಳು ಕಣ್ಣು
ಗಾಳಿ ಮಗುವೋಡೋಡಿ
ಆಕಾಶ ಕುಲುಕಾಡಿ
ಮುಟ್ಟಿ ಬರಲು

ಖುಶಿಯಿಂದ ಕೂಗಾಡಿ
ಛಕ್ ಎಂದು ನಗೆಯಾಡಿ
ಹನಿಯ ಕುದುರೆಯನೇರಿ
ಧುಮುಕಿದವೊ ಮಕ್ಕಳು
ಭೂಮಿಯೆಡೆಗೆ
ಹೊಳೆಯಾಗಿ ಹರಿದವೊ
ಅಜ್ಜಿ ಬಳಿಗೆ
ಕಡಲ ನೆಲೆಗೆ

ಆರ್. ವಿ. ಭಂಡಾರಿ
ಅರೆಅಂಗಡಿ ೫೮೧ ೪೫೦, ಹೊನ್ನಾವರ - ಉ. ಕ.

ಜನಾಂಗಗಳಾಗಿರಲಿಲ್ಲ. ಅವರು ಆರ್ಯರಷ್ಟೇ ನಾಗರಿಕತೆಯನ್ನುಳ್ಳ, ಆದರೆ ಅವರಿಗಿಂತ ಇನ್ನೂ ಪ್ರಬಲರಾದ ಜನಗಳಾಗಿದ್ದರು. ಈ ಮುಂದಿನ ಋಗ್ವೇದ ಪ್ರಮಾಣಗಳನ್ನು ನೋಡಬಹುದು :

ದಸ್ಯುಗಳು ನಗರಗಳಲ್ಲಿ ವಾಸಿಸುತ್ತಿದ್ದರು (I.೫೩.೮; ೧.೧೦೩.೩). ಅವರು ಸಾಮೂಹಿಕವಾಗಿ ಗೋವು, ಕುದುರೆ ಮತ್ತು ರಥಗಳನ್ನು ಹೊಂದಿದ್ದರು (II.೧೫.೪; VIII.೪೦.೬). ಸುವರ್ಣ ಹಾಗೂ ಮುತ್ತು ರತ್ನಗಳ ಒಡವೆಗಳಿಂದ ಅಲಂಕೃತರಾಗಿರುತ್ತಿದ್ದರು (೧.೩೩.೮). ದಸ್ಯು, ದಾನವರೂ ಹಾಗೂ ಆರ್ಯ ದೇವತೆಗಳೂ ಕಬ್ಬಿಣ, ಬೆಳ್ಳಿ ಹಾಗೂ ಬಂಗಾರದ ಕೋಠಿ (ವಾಡೆ)ಗಳಲ್ಲಿ ವಾಸಿಸುತ್ತಿದ್ದರು (೧೧೨೦.೮). ಅಗ್ನಿದೇವನು ದಸ್ಯುಗಳ ನಗರಗಳನ್ನು ಸುಟ್ಟುಹಾಕಿದನು (VII . ೫.೩). ದಸ್ಯುಗಳೂ ರಥಗಳನ್ನು ಹೊಂದಿದವರಾಗಿದ್ದು ಆರ್ಯರಂತೆ ಅವುಗಳನ್ನು ಯುದ್ಧದಲ್ಲಿ ಉಪಯೋಗಿಸುತ್ತಿದ್ದರು ಹಾಗೂ ಆರ್ಯರಂಥ ಆಯುಧಗಳನ್ನು ಬಳಸುತ್ತಿದ್ದರು (VIII . ೨೪ .೨೭; III. ೩.೫; II.೧೫.೪).

ಶೂದ್ರರೆಂದರೆ ದಾಸರು, ದಸ್ಯುಗಳು ಎಂಬುದು ಕೇವಲ ಕಪೋಲ ಕಲ್ಪಿತ ಸಿದ್ಧಾಂತ. ಅದಕ್ಕೆ ತಿಲಮಾತ್ರವೂ ಸಾಕ್ಷ್ಯಾಧಾರಗಳಿಲ್ಲ. ದಾಸ ಶಬ್ದ ಋಗ್ವೇದದಲ್ಲಿ ೫೪ ಸಾರಿ ಬರುತ್ತದೆ. ದಾಸ, ದಸ್ಯುಗಳನ್ನು ಒಮ್ಮೊಮ್ಮೆ ಒಟ್ಟಿಗೆ ಪ್ರಸ್ತಾಪಿಸಲಾಗಿದೆ. ಶೂದ್ರ ಎಂಬ ಶಬ್ದ ಒಂದೇ ಒಂದು ಸಾರಿ ಬಂದಿದೆ; ಅದೂ ದಾಸ ಹಾಗೂ ದಸ್ಯುಗಳಿಗೆ ಸಂಬಂಧಪಡದ ಸಂದರ್ಭದಲ್ಲಿ. ಈ ಹಿನ್ನೆಲೆಯಲ್ಲಿ ಯಾರೇ ವಿಚಾರವಂತ ವ್ಯಕ್ತಿ 'ದಾಸ - ದಸ್ಯುಗಳು ಹಾಗು ಶೂದ್ರರು ಒಂದೇ' ಎಂದು ವಾದಿಸುವುದು ಸಾಧ್ಯವಿಲ್ಲ. ಮತ್ತೊಂದು ಮುಖ್ಯ ಸಂಗತಿ ಏನೆಂದರೆ ದಾಸ ಹಾಗೂ ದಸ್ಯು ಎಂಬ ಹೆಸರುಗಳು ನಂತರದ ವೈದಿಕ ಸಾಹಿತ್ಯದಲ್ಲಿ ಎಲ್ಲೂ ಕಂಡುಬರುವುದಿಲ್ಲ. ಅಂದರೆ ಅವರು ಬಹುಶಃ ವೇದಕಾಲದ ಆರ್ಯರೊಂದಿಗೆ ಸಂಪೂರ್ಣ ಬೆರೆತು ಹೋಗಿದ್ದರು ಎಂದು ತೋರುತ್ತದೆ. ಆದರೆ ಶೂದ್ರರ ಮಾತೇ ಬೇರೆ. ಪೂರ್ವಕಾಲದ ವೈದಿಕ ಸಾಹಿತ್ಯದಲ್ಲಿ ಅವರ ಬಗೆಗೆ ಪ್ರಸ್ತಾಪವೇ ಕಾಣುವುದಿಲ್ಲ. ಆದರೆ ನಂತರದ ವೈದಿಕ ಸಾಹಿತ್ಯದಲ್ಲಿ ಅವರ ಪ್ರಸ್ತಾಪ ಹೇರಳವಾಗಿ ಬರುತ್ತದೆ. ಇದರಿಂದ ಶೂದ್ರರು ದಾಸ-ದಸ್ಯುಗಳಿಗಿಂತ ಬೇರೆಯಾಗಿದ್ದರು ಎಂಬುದು ಸ್ಪಷ್ಟವಾಗಿದೆ.

ಶೂದ್ರರು ಆರ್ಯರಾಗಿರಲಿಲ್ಲ ಎಂಬ ವಾದದ ಬೆಂಬಲಕ್ಕೆ ವಾಜಸನೇಯಿ ಸಂಹಿತೆಯ ಎರಡು ಶ್ಲೋಕಗಳನ್ನು ಉಲ್ಲೇಖಿಸಲಾಗಿದೆ :

"ಜಿಂಕೆ ಹೊಲದಲ್ಲಿನ ಜವೆಗೋಧಿಯನ್ನು ತಿಂದಾಗ ಹೊಲದೊಡೆಯ ಆ ಪುಷ್ಟ ಪ್ರಾಣಿಯ ಬಗ್ಗೆ ತನ್ನ ಮೆಚ್ಚಿಗೆ ಸೂಚಿಸುವುದಿಲ್ಲ; ಶೂದ್ರ[illegible] ಆರ್ಯ [illegible] ಆಕೆಯ ಗಂಡ ಅದರಿಂದ [illegible] ಐಶ್ವರ್ಯವನ್ನು ಬಯಸುವುದಿಲ್ಲ" (XX [illegible] ೩೦-೩೧).

[illegible] ಬೇರೆ, ಶೂದ್ರರು ಬೇರೆ ಹಾಗೂ ಪರಸ್ಪರ ವಿರೋಧಿಗಳು ಎಂಬಂತೆ ಆಗಾಗ ಪ್ರಸ್ತಾಪಿಸಲಾಗಿದೆ. ಆದರೆ ಆರ್ಯರಲ್ಲಿ ಎರಡು ಬಗೆಯ ಆರ್ಯರಿದ್ದರು ಎಂಬುದಕ್ಕೆ ಅನೇಕ ಸಾಕ್ಷ್ಯಾಧಾರಗಳಿವೆ. ಅವರನ್ನು ವೇದ ಕಾಲದ ಆರ್ಯರು ಮತ್ತು ವೇದ ಪೂರ್ವಕಾಲದ ಆರ್ಯರು ಎಂದು ಋಗ್ವೇದ ಗುರುತಿಸಿದೆ. ಒಂದು ಬಣದ ಆರ್ಯರು ಇನ್ನೊಂದು ಬಣದ ಆರ್ಯರನ್ನು ಬೇರೆ ಅಥವಾ ವಿರೋಧಿ ಎಂದು ಭಾವಿಸುವುದು ಅಸಹಜವೇನಲ್ಲ. ಈ ಹಿನ್ನೆಲೆಯಲ್ಲಿ ಶೂದ್ರರು ಆರ್ಯರಿಗೆ ವಿರೋಧಿಗಳಾಗಿದ್ದಂತೆ ನಿರೂಪಿಸುವ ಮೇಲಣ ಉಕ್ತಿಗಳು 'ಶೂದ್ರರು ಆರ್ಯರಾಗಿರಲಿಲ್ಲ' ಎಂದು ಹೇಳುತ್ತವೆ ಎಂದು ಅರ್ಥವಲ್ಲ. ಅವುಗಳ ಉದ್ದೇಶ ಅವರು ಆರ್ಯರ ಬೇರೆ ಒಂದು ಬಣ ಅಥವಾ ವರ್ಗ ಆಗಿದ್ದರು ಎಂದು ತಿಳಿಸುವುದಾಗಿರಬಹುದು.

ಇಂಡೋ - ಆರ್ಯನ್ ಸಮಾಜದಲ್ಲಿ ಶೂದ್ರರು ಕ್ಷತ್ರಿಯ ವರ್ಣಕ್ಕೆ ಸೇರಿದ್ದರು ಮತ್ತು ಅವರು ಪ್ರತ್ಯೇಕ ವರ್ಣವಾಗಿರಲಿಲ್ಲ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದ್ದಷ್ಟೇ ಅಲ್ಲದೆ ಅದಕ್ಕೆ ಅಗತ್ಯವಾದ ಸಾಕ್ಷ್ಯಾಧಾರಗಳನ್ನು ಡಾ॥ ಅಂಬೇಡ್ಕರ್ ತಮ್ಮ 'ಯಾರು ಶೂದ್ರರಾಗಿದ್ದರು ?' ಎಂಬ ಕೃತಿಯಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ. ಅವರು ಅದಕ್ಕೆ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು ಬಿಡಿಸಿರುವುದರ ಜೊತೆಗೆ ತಮಗೆ ಒಡೆಯದ ಒಗಟುಗಳಾಗಿರುವ ಸಮಸ್ಯೆಗಳನ್ನೂ ನಮ್ಮ ಮುಂದಿಟ್ಟಿದ್ದಾರೆ. ಆ ಒಗಟುಗಳು ಯಾವುವೆಂದರೆ :

೧. ಶೂದ್ರರು ಅನಾರ್ಯರೆಂದೂ, ಆರ್ಯರ ವೈರಿಗಳೆಂದೂ ಆರ್ಯರು ಶೂದ್ರರನ್ನು ಜಯಿಸಿ ತಮ್ಮ ಗುಲಾಮರನ್ನಾಗಿ ಮಾಡಿದ್ದಾರೆಂದೂ ಆರೋಪಿಸಲಾಗಿದೆ. ಹಾಗಾದರೆ ಯಜುರ್ವೇದ ಮತ್ತು ಅಥರ್ವವೇದಗಳ ಋಷಿಗಳು ಶೂದ್ರರಿಗೆ ಕೀರ್ತಿಯನ್ನು ಏಕೆ ಹಾರೈಸಬೇಕಾಗಿತ್ತು ಮತ್ತು ತಾವು ಅವರ ಕೃಪೆಯಲ್ಲಿರಬೇಕೆಂಬ ಇಚ್ಛೆಯನ್ನು ಏಕೆ ವ್ಯಕ್ತಪಡಿಸಬೇಕಿತ್ತು ?

೨. ಶೂದ್ರರಿಗೆ ಯಜ್ಞ ಯಾಗಾದಿಗಳನ್ನು ನೆರವೇರಿಸುವ ಅಧಿಕಾರ ಇಲ್ಲವೆಂದು ಹೇಳುತ್ತಾರೆ. ಶತಪಥ ಬ್ರಾಹ್ಮಣವು ಶೂದ್ರನನ್ನು ಯಜ್ಞಕರ್ತ ಎಂದು ಏಕೆ ಕರೆಯುತ್ತದೆ ಮತ್ತು ಅವನನ್ನು ಸಂಬೋಧಿಸುವ ಕ್ರಮವನ್ನು ಏಕೆ ಸೂಚಿಸುತ್ತದೆ ?

೩. ಶೂದ್ರರಿಗೆ ವೇದಾಧ್ಯಯನದ ಅಧಿಕಾರವಿಲ್ಲವೆಂದು ಹೇಳಲಾಗಿದೆ. ಹಾಗಾದರೆ ಶೂದ್ರನಾದ ಸುದಾಸ ಋಗ್ವೇದ ಮಂತ್ರಗಳ ಕರ್ತೃ ಹೇಗಾದನು ?

೪. ಶೂದ್ರರಿಗೆ ಉಪನಯನದ ಅಧಿಕಾರವಿಲ್ಲವೆಂದು ಹೇಳುತ್ತಾರೆ. ಇದು ಮೊದಲಿನಿಂದಲೂ ಇದ್ದುದಾದರೆ ಅದರ ವಿಷಯಕ್ಕೆ ಭಿನ್ನಾಭಿಪ್ರಾಯ ಏಕಿರಬೇಕು ? ಬದರಿ ಮತ್ತು ಸಂಸ್ಕಾರ ಗಣಪತಿ ಇವರು ಶೂದ್ರನಿಗೆ ಉಪನಯನದ ಹಕ್ಕು ಇರುತ್ತದೆಂದು ಏಕೆ ಹೇಳುತ್ತಾರೆ ?

೫. ಶೂದ್ರನಿಗೆ ಆಸ್ತಿಯನ್ನು ಸಂಗ್ರಹಿಸುವ ಪರವಾನಗಿ ಇರುವುದಿಲ್ಲ. ಹಾಗಾದರೆ ಮೈತ್ರಾಯಣಿ ಮತ್ತು ಕಾಠಕ ಸಂಹಿತೆಗಳು ಶೂದ್ರರು ಶ್ರೀಮಂತರೂ ಮತ್ತು ಐಶ್ವರ್ಯವಂತರೂ ಆಗಿದ್ದರೆಂದು ಹೇಗೆ ಹೇಳುತ್ತವೆ ?

೬. ಶೂದ್ರನು ರಾಜ್ಯದ ಅಧಿಕಾರಿಯಾಗಲು ಅನರ್ಹನೆಂದು ಹೇಳಲಾಗುತ್ತದೆ. ಹಾಗಾದರೆ ಮಹಾಭಾರತ ಶೂದ್ರರು ಅರಸರ ಮಂತ್ರಿಗಳಾಗಿದ್ದರೆಂದು ಹೇಗೆ ಹೇಳುತ್ತದೆ ?

೭. ಶೂದ್ರರು ಮೂರು ವರ್ಣದವರ ಆಳುಗಳಾಗಿ ಅವರ ಸೇವೆ ಮಾಡಬೇಕೆಂದು ಹೇಳಲಾಗುತ್ತದೆ. ಹಾಗಾದರೆ ಸುದಾಸನ ಉದಾಹರಣೆ ಮತ್ತು ಸಾಯಣರು ಉಲ್ಲೇಖಿಸಿರುವ ಇನ್ನುಳಿದ ಉದಾಹರಣೆಗಳಿಂದ ಸಿದ್ಧವಾಗುವಂತೆ ಶೂದ್ರರಲ್ಲಿ ಅರಸರು ಹೇಗೆ ಆಗಿಹೋದರು ?

ಸಾಂಪ್ರದಾಯಕ ಹಿಂದುವಾಗಲಿ ಆಧುನಿಕ ವಿದ್ವಾಂಸರಾಗಲಿ ಈ ಜಟಿಲ ಸಮಸ್ಯೆಗಳನ್ನು ಬಿಡಿಸುವ ಗೊಡವೆಗೆ ಹೋಗಿಲ್ಲ. ಸಾಂಪ್ರದಾಯಕ ಹಿಂದುಗಳಿಗೆ ಅವುಗಳಲ್ಲಿ ಆಸಕ್ತಿ ಇಲ್ಲ. ಶೂದ್ರನು (ವಿರಾಟ್) ಪುರುಷನ ಪಾದದಿಂದ ಹುಟ್ಟಿದ್ದಾನೆ ಎಂಬ ಪುರುಷ ಸೂಕ್ತದ ವಿವರಣೆಯಿಂದ ತೃಪ್ತರಾಗುತ್ತಾರೆ. ಶೂದ್ರ ಮೂಲತಃ ಅನಾರ್ಯ ಆಗಿರುವುದರಿಂದ ಆರ್ಯರು ಅವನಿಗೆ ಪ್ರತ್ಯೇಕ ಕಾಯ್ದೆಗಳನ್ನು ಮಾಡಿರುವುದು ಸಹಜ ಎಂದು ಆಧುನಿಕ ಪಂಡಿತರು ಭಾವಿಸುತ್ತಾರೆ. ಈ ಹಿನ್ನೆಲೆಯಲ್ಲಿ ಡಾ॥ ಅಂಬೇಡ್ಕರ್ ಅವರು ಆ ಸಮಸ್ಯೆಗಳಿಗೆ ಸುಸಂಬದ್ಧ ವಿವರಣೆಗಳನ್ನು ನೀಡುವ ಪ್ರಯತ್ನದಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ.

ಅವರ ಅಭಿಪ್ರಾಯಗಳನ್ನು ಈ ಮುಂದಿನಂತೆ ಸಂಗ್ರಹಿಸಬಹುದು : ೧. ಶೂದ್ರರು ಸೂರ್ಯವಂಶದ ಆರ್ಯ ಸಮುದಾಯಗಳಲ್ಲಿ ಒಂದು ಸಮುದಾಯವಾಗಿದ್ದರು. ೨. ಇಂಡೋ - ಆರ್ಯನ್ ಸಮಾಜದಲ್ಲಿ ಶೂದ್ರರು ಕ್ಷತ್ರಿಯ ವರ್ಣಕ್ಕೆ ಸೇರಿದ್ದರು. ೩. ಆರ್ಯ ಸಮಾಜ ಒಂದು ಕಾಲದಲ್ಲಿ ಮೂರೇ ವರ್ಣಗಳನ್ನು ಮಾನ್ಯ ಮಾಡಿತ್ತು. ಅವು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣಗಳಾಗಿದ್ದವು. ಆಗ ಶೂದ್ರರು ಪ್ರತ್ಯೇಕ ವರ್ಣವಾಗಿರದೆ ಕ್ಷತ್ರಿಯ ವರ್ಣದ ಒಂದು ಭಾಗವಾಗಿದ್ದರು. ೪. ಶೂದ್ರ ಅರಸರು ಮತ್ತು ಬ್ರಾಹ್ಮಣರ ನಡುವೆ ಬಹುಕಾಲದ ದ್ವೇಷವಿತ್ತು; ಬ್ರಾಹ್ಮಣರನ್ನು ಅತಿಯಾದ ಹಿಂಸೆಗೆ ಮತ್ತು ಅಪಮಾನಕ್ಕೆ ಗುರಿಪಡಿಸಲಾಗಿತ್ತು. ೫. ಹಿಂಸೆ ಮತ್ತು ತುಳಿತದ ಪರಿಣಾಮವಾಗಿ ಶೂದ್ರರನ್ನು ದ್ವೇಷಿಸುತ್ತಿದ್ದ ಬ್ರಾಹ್ಮಣರು ಅವರಿಗೆ ಜನಿವಾರ ಕೊಡಲು ನಿರಾಕರಿಸಿದರು ಮತ್ತು ೬. ಜನಿವಾರ ದೀಕ್ಷೆಯಿಂದ ವಂಚಿತರಾದ ಶೂದ್ರರು ಸಾಮೂಹಿಕವಾಗಿ ಅವಹೇಳನಗೊಂಡು ವೈಶ್ಯರಿಗಿಂತಲೂ ಕೆಳಗಿಳಿದು ನಾಲ್ಕನೆ ವರ್ಣ ನಿರ್ಮಾಣ ಮಾಡಿದರು.

ಅಂಬೇಡ್ಕರರು ಈ ತೀರ್ಮಾನಗಳಿಗೆ ಬರುವ ಮೊದಲು ಸಾಕಷ್ಟು ದೃಷ್ಟಾಂತಗಳನ್ನು ಅವರ ವಾದದ ಬೆಂಬಲಕ್ಕೆ ಆಧಾರವನ್ನಾಗಿ ನೀಡಿದ್ದಾರೆ.

ಪ್ರೊ॥ ಬಿ. ವಿ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫



# ಶಿಖರ ಸಹವಾಸ

ವಿಜಯ ವಾಮನ

**ಗೊ**ತ್ತಿಲ್ಲದೇ ಮನಸ್ಸು ಹಿಮಾಲಯದ ಶಿಖರ - ಸಹವಾಸಕ್ಕೆ ಜಾರುತ್ತಿದೆ. ಕಣ್ಮುಚ್ಚಿದರೂ ಒಂದೇ; ಕಣ್ತೆರೆದರೂ ಒಂದೇ. ಎಲ್ಲೆಡೆ ಗಾಢ ಕತ್ತಲೆಯ ರಾತ್ರಿ. ದಿನವಿಡೀ ದುಡುದುಡು ನಡೆದು ದಣಿದಿದ್ದ ಗೆಳೆಯರೆಲ್ಲ ತಲೆ ನೆಲಕ್ಕಿಟ್ಟವರೆ ನಿದ್ದೆ ಹೋಗಿದ್ದರು. ನನಗೋ ಮಾರನೆ ಬೆಳಗಿನ ದಿವ್ಯದರ್ಶನ ಯಾವ ಬಗೆಯದ್ದೋ ಎಂಬ ಅರೆಗನಸು. ಕಣ್ ಬಿಟ್ಟಾಗ ಎದುರಿಗೊಂದು ಮುಗಿಲೆತ್ತರದ ಬಿಳೀ ಶಿಖರ ! ಎಡಕ್ಕೂ ಅಂಥದ್ದೇ ! ಬಲಕ್ಕೂ ಅಂಥದ್ದೇ ! ಸುತ್ತಲೆಲ್ಲ ಆಕಾಶಕ್ಕೆ ಲಗ್ಗೆ ಇಡುವ ಬಿಳಿಬಿಳೀ ಶಿಖರಗಳೋ ಶಿಖರಗಳು. ನೀಲಿ ಆಗಸ. ಮುಗಿಲು ಮುಟ್ಟುವ ಮಂಜಿನ ಪುಣ್ಯ ಶಿಖರಗಳು. ಆಗ ಇದ್ದಕ್ಕಿದ್ದಂತೆ..... ತಂತಾನೇ ಈ ಶಿಖರಗಳು ಯಾವುದೋ ನಾದ ಗುಂಜನಕ್ಕೆ ಸಿಕ್ಕಿದಂತೆ, ಮಧು ಮಧುರ ನಾದ - ನದಿ ಝುಳು ಝುಳು ಹರಿದು ಮೈಮನಗಳನ್ನೆಲ್ಲ ಆವರಿಸಿಕೊಂಡಂತಾಗಿ ಹುಚ್ಚನಂತೆ ಒಂದೊಂದು ಶಿಖರಕ್ಕೂ ಅಮೀರ್ ಖಾನ್, ಭೀಮಸೇನ್, ಮನ್ಸೂರ್ ಅಂತ ಹೆಸರು ಹಿಡಿದು ಕೂಗಿಕೊಂಡೆ.... ಒಂದೇ ? ಎರಡೇ ?.....

ಈಗ ಮನ್ಸೂರರ ಆತ್ಮಚರಿತ್ರೆ ಓದುವಾಗ ಮತ್ತದೇ ಶಿಖರ ಸಹವಾಸಕ್ಕೆ ಮನಸ್ಸು ತಹತಹಿಸುತ್ತಿದೆ. ಹೆಚ್ಚೂ ಕಡಿಮೆ ಇಂಥದ್ದೇ ಅನುಭವ ಕವಿ ಬೇಂದ್ರೆಯವರಿಗೂ ಆಗಿರಬೇಕು. ''ಮಲ್ಲಿಕಾರ್ಜುನ ಶಿಖರ ಮಲ್ಲಿಗೆಯೊಳಿದ್ದಂತೆ'' ಎನ್ನುತ್ತಾರೆ ಬೇಂದ್ರೆ. ಶಿಖರದ ಉತ್ತುಂಗ ಘನತೆ, ಮಲ್ಲಿಗೆಯ ಕಂಪು, ಎರಡೂ ಮಿಳಿತಗೊಂಡ ಮನಸೂರೆಗೊಳ್ಳುವಂಥಾ ಮನ್ಸೂರ ಗಾಯನ ! ''ಮನಮೀರಿ ನಾನಿಂತೆ/ಕಳಚಿ ಬಿದ್ದಿತು ಗೆಳೆಯ/ ಜಗದ ಚಿಂತೆ.'' ಇದೊಂದು ಶಿಖರ - ಸಂವಾದ !

ಪಂಡಿತ್ ಮಲ್ಲಿಕಾರ್ಜುನ ಮನ್ಸೂರ ಅವರ ಆತ್ಮಚರಿತ್ರೆ ''ನನ್ನ ರಸಯಾತ್ರೆ'' ಓದುವಾಗ ಮನಸ್ಸಿಗೆ ಥಟ್ಟನೆ ಮುಟ್ಟುವುದು ಅವರ 'ವಿನಯ'. ಎಷ್ಟೋ ಬಾರಿ ಸಂಗೀತಕ್ಕಿರುವ ವಿನಯ ಸಾಹಿತ್ಯಕ್ಕೇಕೆ ಇಲ್ಲ ಎಂಬ ಪ್ರಶ್ನೆ ನನ್ನನ್ನು ಕಾಡಿದೆ. ಆದರೂ ಈ 'ರಸಯಾತ್ರೆ' ಓದುವ ಭಾಗ್ಯಕ್ಕೆ ಪು. ಲ. ದೇಶಪಾಂಡೆ, ರಮೇಶ ನಾಡಕರ್ಣಿ, ಅನಕೃ, ಬಿ.ಎ. ಸನದಿಗಳಂಥಾ ಸಾಹಿತಿಗಳೇ ಕಾರಣ ಎನ್ನುವುದು ಒಂದು ವಿಶೇಷ.

'ರಸಯಾತ್ರೆ'ಯ ಪ್ರಾರಂಭ ಮನಸೂರು ನಿಲ್ದಾಣದಿಂದ ! ಹೆಸರೇ ಎಷ್ಟು ಸಿಹಿಯಾಗಿದೆ ! ನಮ್ಮೂರುಗಳು ನೋಡಿ - ನವಿಲೂರು, ಕೋಗಿಲೆ, ಸಿರಿವಂತೆ, ಮನಸೂರು ! ಈ ಮನಸೂರ ಕೂಸು ಹುಟ್ಟಿದ್ದು ಅಮವಾಸ್ಯೆ, ಮೂಲನಕ್ಷತ್ರ! ತಂದೆ ತಾಯಿಗೆ ಗಂಡಾಂತರ. ಇದೇ ನೆವವಾಗಿ ಮಲ್ಲಿಕಾರ್ಜುನ ನೇರವಾಗಿ ಗುರುಗಳಡಿಗೇ ಬಿದ್ದ ಗುರುವಿನ ಗುಲಾಮನಾದ. ಹೀಗೆ ಹುಟ್ಟಿನಿಂದಲೇ ವಿನಯದ ಕೂಸು ಈ ಮನಸೂರ ದುಂಬಿ. ಇದೇ ವಿನಯವೇ ಮುಂದೆ ಉಸ್ತಾದ್ ಅಲ್ಲಾದಿಯಾ ಖಾನ್, ಉಸ್ತಾದ್ ಮಂಜೀ ಖಾನ್, ಉಸ್ತಾದ್ ಬುರ್ಜಿ ಖಾನ್, ಪಂಡಿತ್ ನೀಲಕಂಠ ಬುವಾರಂತಹ ದಿಗ್ಗಜಗಳ ಪಾದದಡಿ ಕುಳಿತು ಸಂಗೀತ ಸುಧೆ ಹೀರಲು ಕಲಿಸಿದ್ದು ಈ ಮರಿದುಂಬಿಗೆ ! ''ಈ ಸಂಗೀತ ಶಿವಪೂಜೆಯಲ್ಲೇನು ?'' ಎಂದು ಅರ್ಥಪೂರ್ಣವಾಗಿ ನಕ್ಕು ನುಡಿದ ಗುರು ಹುಕ್ಕೇರಿ ಮಠದ ಪೂಜ್ಯ ಶಿವಬಸವಸ್ವಾಮಿಗಳು. ಗುರುವಿನ ಮಾತು ಫಲಿಸಿತು. ಮನಸೂರಿನಿಂದ ಹೊರಟ ಈ ಸಂಗೀತದ ರೈಲು ದಿ. ವಾಮನರಾಯರ ನಾಟಕ ಕಂಪೆನಿಯಲ್ಲಿ ಸ್ವಲ್ಪ ಕಾಲ ನಿಂತಿತು. ೧೯೨೯-೩೦ ಇರಬೇಕು. ಅಣ್ಣ ಬಸವರಾಜ ಬೆನ್ನಹಿಂದೆ. ತಮ್ಮ ಮಲ್ಲಿಕಾರ್ಜುನ ವಿಭಿನ್ನ ಪಾತ್ರಗಳಲ್ಲಿ - ಅಭಿಮನ್ಯು, ಪ್ರಹ್ಲಾದ, ಶಕುನಿಗಳಾಗಿ ಮಿಂಚಿದ. ಇಂದಿಗೂ ''ಅರಗಿಳಿ ಮರಗಿಳಿ ಭರದಲಿ ಬಾರಾ'' ''ಪ್ರೀತಿ ಜೀವನ ಜ್ಯೋತಿ'' ''ಭೇದಿಸು ಮಾಯಾ ಬಂಧನವಾ'' ಮುಂತಾದ ಜನಪ್ರಿಯ ಗೀತೆಗಳನ್ನು ನೆನಪಿಸಿಕೊಂಡು ಖುಷಿಪಡುತ್ತಾರೆ ಲೇಖಕ ಎನ್ಕೆ ಕುಲಕರಣಿ.

೧೯೩೩ರ ಸುಮಾರಿಗೇ ಎಚ್.ಎಂ.ವಿ. ರೆಕಾರ್ಡ್ ಕಂಪೆನಿಯ ಶ್ರೀ ರೂಪಜೀಯವರು ಮನ್ಸೂರರ ಗೌಡಮಲ್ಹಾರ ಮತ್ತು ಅಡಾಣಾ ರಿಕಾರ್ಡುಗಳನ್ನು ಹೊರತಂದರು. ಮಹಾರಾಷ್ಟ್ರದ ಸಂಗೀತ ಪ್ರಪಂಚದಲ್ಲೊಂದು ಕ್ರಾಂತಿಯಾಯ್ತು! ಮುಂಬಯಿನಲ್ಲಿ ವಿಷ್ಣುಪಂತ ಪಾಗನೀಸರದು ಒಂದು ಗ್ರಾಮಾಫೋನ್ ದುಕಾನು. ಅಲ್ಲಿಯೇ ಮನ್ಸೂರರಿಗೆ ಗುರುದರ್ಶನವಾಗಿದ್ದು. ನಾದದೇವ ಅಲ್ಲಾದಿಯಾ ಖಾನರ ಪುತ್ರ ಉಸ್ತಾದ್ ಮಂಜೀಖಾನ ಸಾಹೇಬರು ಗುರುವಾಗಿ ದೊರೆತರು. ಮುಂದಿನದು ಇತಿಹಾಸ. ದೀಕ್ಷಾ ದಿನದಿಂದಲೇ ಭೀಮಪಲಾಸ್ ಆರಂಭ. 'ಷಡ್ಜ-ಜೀವನ'ಕ್ಕೆ ನಾಂದಿ. ''ನಿನ್ನ ಭಕ್ತರ ಪಾದವಲ್ಲದೇ ಅನ್ಯ ವಿಷಯಕ್ಕೆಳಸದಂತಿರಿಸು'' ಎನ್ನುತ್ತಲೇ ಗುರು-ಪಾದದಡಿಯಲ್ಲಿ ಪ್ರಾರ್ಥನೆ. ಗುರು-ಶಿಷ್ಯರ ಅದ್ವಿತೀಯ ಸಮಾಗಮ, ತಾಲೀಮು, ನಾದ ಜಗತ್ತೇ ರಸಯಾತ್ರೆಯ ಸುಮಧುರ ನಿಲ್ದಾಣ !

ಗುರುಗಳಾದ ನೀಲಕಂಠಬುವಾ, ಉಸ್ತಾದ ಮಂಜೀಖಾನರು ಮತ್ತು ಪ್ರೀತಿಯ ತಾಯಿ ಇವರೆಲ್ಲರೂ ಒಬ್ಬರ ಹಿಂದೆ ಒಬ್ಬರು ಮನ್ಸೂರರನ್ನು ತೊರೆದು ನಡೆದಾಗ ಅವರು ಪಟ್ಟ ಸಂಕಟ ಹೇಳತೀರದು. 'ರಸಯಾತ್ರೆ'ಯಲ್ಲಿ ಇದೊಂದು ಹೃದಯ ವಿದ್ರಾವಕ ಅಧ್ಯಾಯ. ಶಿವರಾತ್ರಿಯ ದಿನವೇ ಈ ನಾದೋಪಾಸಕನಿಗೆ ಶಿವನ ಬಗ್ಗೆ ಬೇಜಾರು ! ತಾಯ ಬಲವಂತಕ್ಕೆ ಶಿವನೆದುರು ಹಾಡಿದ ಮಲ್ಲಿಕಾರ್ಜುನ. ಸಂಗೀತ ಪ್ರಿಯ ಶಿವ ಬಿಟ್ಟಾನೆಯೇ ಅಂಥಾ ಅವಕಾಶವನ್ನ ! ಆದರೆ ಆ ಶಿವ ಮನ್ಸೂರರ ತಾಯಿಯ ಬೇಡಿಕೆಯನ್ನು ಅಷ್ಟು ಶೀಘ್ರವಾಗಿ ಮತ್ತು ಕ್ರೂರವಾಗಿ ಈಡೇರಿಸಬಾರದಿತ್ತು. ''ಕೈ ಹಿಡಿದು ಕರೆದುಕೋ ಚೆನ್ನಮಲ್ಲಿಕಾರ್ಜುನ'' ಎಂದು ಕಾತರಿಸಿದ ಹೆಣ್ಣಿನ ಮೇಲೆ ಚಕ್ಕಡಿ ಹರಿಹಾಯಿಸುವುದೇ ಮುಕ್ಕಣ್ಣ ? ಉರ್ದು ಕವಿಯೊಬ್ಬನ ಮಾತುಗಳು ನೆನಪಾಗುತ್ತದೆ - ಸಾಯಲು ತಲೆಕೊಟ್ಟು ನಿಂತ ಕವಿ, ಕಟುಕನಿಗೆ ಹೀಗೆನ್ನುತ್ತಾನೆ - ''ನನ್ನ ಕೊರಳಿಗೆ ನಿನ್ನ ಕೊಡಲಿಯ ಹರಿತ ಪರೀಕ್ಷಿಸಬೇಕಾಗಿದೆಯಯ್ಯಾ. ಎಲ್ಲಿ ಹೊಡೆ ನೋಡೋಣ !'' ಯಾರ್ಯಾರು ಏನೇನು ಪರೀಕ್ಷಿಸುತ್ತಾರೋ; ಯಾರ್ಯಾರನ್ನು ಪರೀಕ್ಷಿಸುತ್ತಾರೋ; ಹೇಗೆ ಪರೀಕ್ಷಿಸುತ್ತಾರೋ ಯಾರು ಬಲ್ಲರು ?

'ರಸಯಾತ್ರೆ'ಯ ಇನ್ನೊಂದು ನಿಲ್ದಾಣ - ''ಉತ್ಸವೇ ವ್ಯಸನೇ ಚೈವ.'' ಯಾತ್ರೆಯ ಉದ್ದಕ್ಕೂ ಒದಗಿದ ಗೆಳೆಯರು, ಗುರುಗಳನ್ನು ಪ್ರೀತಿಯಿಂದ, ವಿನಯದಿಂದ ಸ್ಮರಿಸಿಕೊಳ್ಳುತ್ತಾ ನೆನಪಿನ ಓಣಿಯಲ್ಲಿ ಓಡಾಡುತ್ತಾರೆ. ಯಾವ ಗತ್ತು ಗೈರತ್ತುಗಳಿಲ್ಲದೇ ಭಾಷೆಯ ಆಡಂಬರವಿಲ್ಲದೇ, ಬಡಿವಾರದ ಮಾತುಗಳಿಲ್ಲದೇ, ಚಿಲ್ಲರೆ ಗಾಯಕರ ಅಹಂಕಾರಗಳಿಲ್ಲದೇ ಕೇವಲ ಸರಳತೆ ಹಾಗೂ ವಿನಯ ಶೀಲತೆಗಳ ಹಳಿಗಳ ಮೇಲೆ ಸಾಗುತ್ತದೆ 'ರಸಯಾತ್ರೆ'ಯ ರೈಲು.

ನಾಗಪುರ ಕಾಲೇಜಿನ ಪ್ರಿನ್ಸಿಪಾಲ ಭವಾನಿಶಂಕರ ನಿಯೋಗಿ ಎಳೆಯ ಮಲ್ಲಿಕಾರ್ಜುನನ ಗಾಯನಕ್ಕೆ ಒಲಿದಿದ್ದು ರಸಯಾತ್ರೆಯ ಸ್ಮರಣೀಯ ಘಟನೆಗಳಲ್ಲೊಂದು. ಮನ್ಸೂರರ ಮೆಹಫಿಲ್

ಒಂದರಲ್ಲಿ ವಯೋವೃದ್ಧ ರಸಿಕರೊಬ್ಬರ ಪ್ರಸ್ತಾಪ ಬರುತ್ತದೆ. ಧೋ ಎಂದು ಸುರಿಯುವ ಧಾರಾಕಾರ ಮಳೆಯಲ್ಲಿ, ಮೊಣಕಾಲಮಟ್ಟ ನೀರಿನಲ್ಲಿ ಮುದುಡಿ ಕುಳಿತ ಆ ಮುದುಕನ ಮಾತುಗಳು ಕೇಳಿ – ''ಇವರ ಇದೇ ತೋಡಿರಾಗವನ್ನು ನಲವತ್ತೈದು ವರ್ಷಗಳ ಹಿಂದೆ ಕೇಳಿದ್ದೆ. ಇವತ್ತಿಗೂ ಅದೇ! ಕಂಠದ ಕಸುವು ಕೊಂಚವೂ ಕ್ಷೀಣಿಸಿಲ್ಲ. ಆದರೆ ಸಮಯದ ಸರಿಕೆಯಲ್ಲಿ ನಾನು ಮಾತ್ರ ಮುದುಕನಾಗಿದ್ದೇನೆ!''

''ಪೇಟಿ ಬೇಸುರೀ ಹೈ ತೋ ಕ್ಯಾ ? ಹಮ್ ತೋ ಸುರೀಲೇ ಹೈ ನಾ ? ಗಾವೋ.... ಗಾವೋ.'' ಮನ್ಸೂರರನ್ನು ಹೀಗೆ ಕೇಳಿಕೊಂಡಿದ್ದು ಅಂತಿಂಥ ವ್ಯಕ್ತಿಯಲ್ಲ. ಉಸ್ತಾದ್ ಭಬ್ಬೂಖಾನ್. ಮನ್ಸೂರ್ ಆ ಬೇಸುರೀ ಪೇಟಿಯ ಜೊತೆ ಹಾಡಿದ ರಾಗ ಜೀವನ ಪುರಿ. ಕೇಳಿ ಧನ್ಯರಾದ ಉಸ್ತಾದರೂ ಉತ್ಸಾಹದಿಂದ ಅದೇ ಪೇಟಿಯ ಜೊತೆ ಬಿಲಾಸಖಾನಿ ತೋಡಿ ಹಾಡಿಕೊಂಡು ಖುಷಿ ಅನುಭವಿಸಿದರಂತೆ. ಒಂದು ಶಿಖರ ಇನ್ನೊಂದು ಶಿಖರವನ್ನು ಮೆಚ್ಚಿಕೊಂಡರೆ ಸಾಹಿತ್ಯದಲ್ಲಿ ಯಾವ ಅಲಂಕಾರ ಎನ್ನುತ್ತಾರೋ ?

ಬೇರೆ ಬೇರೆ ಸಂದರ್ಭಗಳಲ್ಲಿ ವರದಿಯಾಗಿರುವ ಕೆಲವು ''ಕಹಿ'' ಪ್ರಸಂಗಗಳಿಗೆ 'ರಸಯಾತ್ರೆ'ಯಲ್ಲಿ ಜಾಗವೇ ಇಲ್ಲ. ಮನ್ಸೂರರ ತಾರುಣ್ಯದಲ್ಲಿ ಉಸ್ತಾದ್ ಬಡೇ ಗುಲಾಂ ಅಲೀ ಖಾನರ ಜೊತೆ ನಡೆಯಿತೆನ್ನಲಾದ ಛಾಲೆಂಜ್ ಸಂಗೀತದ ಪ್ರಸ್ತಾಪ ಇಲ್ಲಿ ಇಲ್ಲವೇ ಇಲ್ಲ. ಬಡೇ ಗುಲಾಂ ಅಲೀ ಖಾನರ ಸವಾಲನ್ನು ಸ್ವೀಕರಿಸುವ ಸ್ಥಿತಿಯಲ್ಲಿ ಉಸ್ತಾದ ಅಲಾದಿಯಾ ಖಾನರು ಇರಲಿಲ್ಲ. ಕೊಲ್ಲಾಪುರದಲ್ಲಿ ನಡೆದ ಒಂದು ರೀತಿಯ ''ಸಂಗೀತ ಸಮರ''ಕ್ಕೆ ಗುರುಗಳೇ ಮನ್ಸೂರರನ್ನು ಕಳಿಸಿಕೊಡುತ್ತಾರೆ. ಆ ಸಭೆಯಲ್ಲಿ ಮನ್ಸೂರರು ರಾಗ ನಂದ್ ಹಾಗೂ ಕಾನಡಾಗಳನ್ನು ಹಾಡುತ್ತಾರೆ. ಇಡೀ ಸಭೆ ಬೆಕ್ಕಸಬೆರಗಾಗಿ, ಮಂತ್ರಮುಗ್ಧವಾಗಿ ಗಾಯನವನ್ನ ಆಲಿಸುತ್ತದೆ. ಆದರೆ ನಂತರದ ಬಡೇ ಗುಲಾಂ ಖಾನರ ಕಚೇರಿ ಕಳೆಗಟ್ಟುವುದೇ ಇಲ್ಲ. ''ಚೋಟುದ್ದ ಹುಡುಗನನ್ನು ಹಾಡಲು ಬಿಟ್ಟು ನನ್ನನ್ನು ಅವಮಾನಿಸಿದಿರಿ'' ಎಂದು ಗುಡುಗುತ್ತಾರೆ. ''ದಕ್ಷಿಣ ಭಾರತದಲ್ಲಿ ಯಾವ ಮಹಾ ಸಂಗೀತಗಾರ ಇದ್ದಾನೆ ? ಸಂಗೀತವೆಲ್ಲಿದೆ ?'' ಎಂದು ತಮ್ಮ ಗುರುಗಳಿಗೆ ಅವಮಾನಿಸಿದ್ದ ಬಡೇ ಗುಲಾಮರಿಗೆ ಯಾವ ರಿಯಾಯಿತಿಯನ್ನು ನೀಡಲು ಮನ್ಸೂರರಿಗೆ ಇಷ್ಟವಾಗ ಲಿಲ್ಲವಂತೆ. ಆದರೆ 'ರಸಯಾತ್ರೆ'ಯಲ್ಲಿ ಇಂಥಾ ವಿರಸಕ್ಕೆ ಜಾಗವೇ ಇಲ್ಲ! ಎಂಥಾ ಹೃದಯ ವೈಶಾಲ್ಯ ಅಲ್ಲವೇ ?

ಮನ್ಸೂರರ ಘರಾಣೆಗೆ ''ಅತರೌಲಿ ಜೈಪುರ ಘರಾಣೆ'' ಎಂದು ಕರೆಯುತ್ತಾರೆ. ಇದೊಂದು ಸಂಗೀತದ ಗಣಿ. ಎಂತೆಂಥಾ ವಜ್ರಗಳು ಗೊತ್ತೇ ? ಅಲ್ಲಾದಿಯಾ ಖಾನ, ಕೇಸರಿ ಬಾಯಿ ಕೇಸ್ಕರ್, ಮಂಜೀಖಾನ, ಬುರ್ಜೀ ಖಾನ, ಮೊಗೂಬಾಯಿ ಕುರ್ಡೀಕರ್, ಕಿಶೋರಿ ಅಮೋಣಕರ್ ! ಈ ಗಣಿಯಿಂದ ಎದ್ದು ಬಂದ ಕೋಹಿನೂರ್ ಎಂದರೆ ಪಂಡಿತ ಮಲ್ಲಿಕಾರ್ಜುನ ಮನ್ಸೂರ್. ಈ ಘರಾಣೆಯ ವಿಶೇಷತೆಯನ್ನು ಅವರ ಮಾತುಗಳಲ್ಲೇ ಕಾಣುವ. - ''ಧೃಪದವನ್ನೇ ಖ್ಯಾಲ ಮಾಡಿ ಹಾಡೋದು. ಆಲಾಪದಲ್ಲಿ ಒಂದು ಸ್ವರದಿಂದ ಮತ್ತೊಂದಕ್ಕೆ ಸಂಬಂಧ ಇಟ್ಟು ಅದನ್ನ ಬೆಳೆಸೋದು. ತಾನಗಳಿಂದ ರಾಗಕ್ಕೆ ಹಾನಿಯಾಗದಂತೆ ಸಮ್ಮಿನಿಂದ ಸಮ್ಮಿಗೆ ಸರಿಯಾದ ಬೆಳವಣಿಗೆ ಆಗಿ, ಮುಖಡೆ ಹಿಡಿದು ಸಮ್ಮಿನಲ್ಲಿ ಮುಗಿಸಬೇಕು.'' ಸಾಧನೆ, ನಿತ್ಯಸಾಧನೆ, ನಿರಂತರ ಸಾಧನೆ, ಇದೊಂದೇ ಸಂಗೀತಗಾರನಿಗಿರ ಬೇಕಾದ ಆಸ್ಥೆ-ಆಸಕ್ತಿ. ಸಂಗೀತ ಸಾಧನೆಯಲ್ಲಿ ಸೀಳು ದಾರಿಗಳಿಲ್ಲ ಎನ್ನುತ್ತಾರೆ ಮನ್ಸೂರ್.

'ರಸಯಾತ್ರೆ'ಯಲ್ಲಿ ಅಲ್ಲಲ್ಲಿ ಚಿಮುಕಿಸಿದಂತೆ ಅನೇಕ ಕವಿಗಳು ಅವರ ಕವನಗಳು ಇಣುಕುತ್ತವೆ. ನವಿರಾದ ಹಾಸ್ಯ, ಮಹಾನ್ ಗಾಯಕರೊಂದಿಗೆ ಮುಲಾಕತ್ತುಗಳು, ತಾರುಣ್ಯದ ಮುಂಬೈ ಬದುಕು, ಚುಚ್ಚಿಕೊಲ್ಲುವ ನೂರೆಂಟು ತಾಪತ್ರಯಗಳ ನಡುವೆಯೆ ಸಂಗೀತ ಸಾಧನೆ. ಹೀಗೆ 'ರಸಯಾತ್ರೆ' ಅನೇಕ ಚಿಕ್ಕ - ಪುಟ್ಟ ನಿಲ್ದಾಣಗಳಲ್ಲಿ ನಿಂತೂ ನಿಲ್ಲದೇ ಸಾಗುತ್ತದೆ. ಈ ಆತ್ಮಚರಿತ್ರೆ ಸಾಹಿತ್ಯ ಕೃತಿಯಾಗಿಯೂ, ಸಂಗೀತ ವಾಗಿಯೂ ಲಲಿತವಾಗಿ ಹರಿಯುತ್ತದೆ. ಪು. ಲ. ದೇಶಪಾಂಡೆಯವರು ಕಂಡುಕೊಂಡಂತೆ ಈ ಮಹಾನುಭಾವ ಲಯದ ಉಪಾಸಕ, ಶಬ್ದಶಃ ಸಂಗೀತವೇ ಉಸಿರಾದ ವ್ಯಕ್ತಿ. ಸ್ವರ ಸಂಗೀತಕ್ಕೆ ಆಧ್ಯಾತ್ಮ ಸೌಂದರ್ಯವನ್ನು ಮೇಳೈಸಿದ ಪುಣ್ಯಾತ್ಮ. ತಂಬೂರಿಯ ನಾದದಲ್ಲೇ ಅನಾಹತನಾಗುವ ಸಮರ್ಥ ಗಾಯಕ. ಸಾವಿನ ದವಡೆಯಲ್ಲಿದ್ದಾಗಲೂ ''ದುಃಖ ದೂರ ಕರೋ ಮುರಾರಿ'' ಎಂದು ಹಾಡುತ್ತಲೇ ಇದ್ದರಂತೆ. ಅವರನ್ನು ಪರೀಕ್ಷಿಸುತ್ತಿದ್ದ ಡಾಕ್ಟರ್ ತಳವಳಕರ್ ಅವರಿಗೆ ಆಶ್ಚರ್ಯವೋ ಆಶ್ಚರ್ಯ, ''ಈತನ ರಕ್ತದಲ್ಲಿ ನಿಜಕ್ಕೂ ಸಂಗೀತ ಹರಿಯುತ್ತಿದೆ''ಎಂದು ಉದ್ಗರಿಸಿದರು ಈ ಡಾಕ್ಟರ್ ಮಹಾಶಯ.

ಈ 'ರಸಯಾತ್ರೆ'ಯಲ್ಲಿ ಅನೇಕ ಸಹಯಾತ್ರಿಕರು ಬೇರೆ ಬೇರೆ ನಿಲ್ದಾಣಗಳಲ್ಲಿ ಹತ್ತಿಳಿಯುತ್ತಾರೆ. ಪು. ಲ. ದೇಶಪಾಂಡೆ, ಶಿವರಾಮ ಕಾರಂತ, ಚೌಡಯ್ಯ, ವಾಸುದೇವಾಚಾರ್ಯರು, ರೂಪಜೀ, ಅನಕೃ. ಎಂಥ ರಸಯಾತ್ರೆ ! ಎಂತೆಂಥ ಸಹಯಾತ್ರಿಕರು ! ಒಮ್ಮೆ ಮೈಸೂರಿನ ಕಾರಂಜಿ ಕೆರೆಯ ಬಳಿ, ಬೆಳದಿಂಗಳ ರಾತ್ರಿಯಲ್ಲಿ ಮನ್ಸೂರರಿಗೆ ಒಬ್ಬನೇ ಒಬ್ಬ ವಿಶೇಷ ಶ್ರೋತೃ. ಅನಕೃ ! ''ಗಟ್ಟಿಯಾಗಿ ಹಾಡಿ ಮಲ್ಲಪ್ಪನವರೇ'' ಎಂದು ಕೇಳಿಕೊಂಡರಂತೆ ! ಕೇಳಬೇಕೆ ? ಕವಿ ಹೃದಯ ಕೇಳಿತು. ಕೋಗಿಲೆ ದನಿ ತೆರೆದು ಹಾಡಿತು. ''ಹಾಡು ಹಕ್ಕಿಗೆ ಬೇಕೆ ಬಿರುದು ಸಮ್ಮಾನ ?''

'ರಸಯಾತ್ರೆ'ಯಲ್ಲೊಂದು ಫೋಟೋ ಇದೆ. ತನ್ನ ಗುರುಗಳಾದ ಉಸ್ತಾದ ಮಂಜೀಖಾನ್ ಹಾಗೂ ಉಸ್ತಾದ್ ಬುರ್ಜಿ ಖಾನರ ನಡುವೆ ಮನ್ಸೂರ್ ಇದ್ದಾರೆ. ಈ ಪುಸ್ತಕ ಅರ್ಪಣೆಯಾಗಿರುವುದು ''ಪರಮ ಗುರು ಮಂಜೀಖಾನ್ ಸಾಹೇಬರಿಗೆ.'' ಈ ಹುಟ್ಟಾ ಲಿಂಗಾಯತನ ಗುರು ಮಂಜೀಖಾನ್ ಎನ್ನುವಾಗ ಅಥವಾ ''ಅಲ್ಲಾ ಜಾನೇ ಅಲ್ಲಾ ಜಾನೆ'' ಎಂದು ಆಲಾಪಿಸುವ ಜಸ್‌ರಾಜರ ಗಾಯನ ಕೇಳುವಾಗ ಅಥವಾ ಪರವೀನ್ ಸುಲ್ತಾನಾ ಎನ್ನುವ ಮುಸ್ಲಿಮ್ ಹೆಣ್ಣು ''ಭವಾನಿ ದಯಾನೀ ಮಹಾವಾಕ್ ವಾಣೀ'' ಎಂದು ಪ್ರಾರ್ಥಿಸುವಾಗ ಅಥವಾ ನಮ್ಮ ಪ್ರಾಚೀನ ಧೃವಪದ ಡಾಗರ್ ಎಂಬ ಮುಸ್ಲಿಮ್ ಮನೆತನದಲ್ಲಿ ಬೀಡುಬಿಟ್ಟಿದೆ ಎಂದು ನೆನಪಿಸಿಕೊಂಡಾಗ ಈ ದೇಶದಲ್ಲಿ ಹಿಂದೂ - ಮುಸ್ಲಿಮ್ ಒಡಕು ಮೂಡಿಸಿದ ಅಸಹ್ಯಕಾರಕ ಶಕ್ತಿಗಳ ಬಗ್ಗೆ ಬೇಜಾರಾಗುತ್ತದೆ. ಪಾಕಿಸ್ತಾನಿ ಕವಿ ಫೈಜ್ ಅಹ್ಮದ್ ಫೈಜ್ - ತನ್ನ ಕವಿತೆಯಲ್ಲಿ ಹಲಬುತ್ತಾನೆ : ''ನನ್ನ - ನಿನ್ನ ವಿರಸದ ಕಾರಣ ಯಾರ್‍ಯಾರಿಗೆ ಏನಂತ ವಿವರಿಸಲಿ ? ನನ್ನನ್ನು ಬಿಟ್ಟು ಹೋಗುವ ಸಲುವಾಗಿಯಾದರೂ ನನ್ನ ಜೊತೆ ಬಾ.''

ಗೊತ್ತಿಲ್ಲದೇ ಮನಸ್ಸು ಶಿಖರ-ಸಹವಾಸ ಬಯಸುತ್ತಿದೆ !

ವಿಜಯ ವಾಮನ
ನಂ. ೧, ಗುಲ್‌ಮೊಹರ್, ಕೆ. ಎಚ್. ಬಿ. ಕಾಲನಿ
ಗಾಂಧಿನಗರ, ಸಾಗರ - ೫೭೭ ೪೦೧

ಹೊಳೆವಗಣ್ಣುಗಳ ಬುಲ್‌ಬುಲ್ ಹಕ್ಕಿಗೆ ಹೇಳಿತು ಒಮ್ಮೆ ಗಿಡುಗ
ಹಿಡಿದದನು ತನ್ನ ಚುಚ್ಚು ಪಂಜಗಳಲ್ಲಿ.
ಕರೆದೊಯ್ಯುತ್ತಿತ್ತು ಅದು ಎತ್ತರದಿ ಮುಗಿಲಲ್ಲಿ.
ಅಳುತ್ತಿತ್ತು ಬುಲ್‌ಬುಲ್ ಹಕ್ಕಿ ಹೃದಯವಿದ್ರಾವಕವಾಗಿ
ಗಿಡುಗನ ಪಂಜಗಳ ಬಿಗಿ ಹಿಡಿತಕ್ಕೆ ಸಿಕ್ಕಿ.
ಹೇಳಿತು ಗಿಡುಗ ದರ್ಪದಿಂದ, ಅಧಿಕಾರವಾಣಿಯಿಂದ :
''ಅಯ್ಯೋ. ಅಳುತಿಹೆಯೇಕೆ ಹೀಗೆ ದುಃಖದಲಿ ?
ತಿಳಿಯದೆ ನಿನಗೆ ನಾನು ನಿನಗಿಂತ ಬಲಶಾಲಿ !
ಬೇಕಾದಷ್ಟು ಅಳು ನೀನು, ಹಾಡು ಶೋಕ ಗೀತೆಯನು,
ನಾನಂತೂ ಕರೆದೊಯ್ಯುವೆನು ನಿನ್ನನು ನನಗಿಷ್ಟ ಬಂದೆಡೆಗೆ.
ನಾ ನಿನ್ನ ತಿನ್ನಲೂಬಹುದು, ಸ್ವತಂತ್ರವಾಗಿ ಬಿಡಲೂಬಹುದು.
ಅದು ನನ್ನ ಮರ್ಜಿ – ತಿಳಿ ನೀನು ಇದನು.''

*– ಗ್ರೀಕ್ ನೀತಿಕಥೆಯೊಂದರಿಂದ*






# ವಚನಗಳು

ಸಾಹಿತ್ಯಲೋಕದಲ್ಲಿ ಆದಿ ಮತ್ತು ಅಂತವೆಂದು ಕರೆಯಬಹುದಾದ ಉಕ್ತಿ ವೈಚಿತ್ರ್ಯಗಳು ಎರಡೇ! (೧) ಉಪಮೆ (೨) ರೂಪಕ. ಒಂದರಲ್ಲಿ ಸಾದೃಶ್ಯ ಕಲ್ಪನೆಯಿದ್ದರೆ ಮತ್ತೊಂದರಲ್ಲಿ ಅಭೇದ ಕಲ್ಪನೆಯಿರುತ್ತದೆ. ಈ ದೃಷ್ಟಿಯಿಂದ ಉಪಮೆಯು ದ್ವೈತ, ರೂಪಕವು ಅದ್ವೈತ. ಇದನ್ನು ಹೀಗೆ ವಿವರಿಸಬಹುದು; ಉಪಮೆಯಲ್ಲಿ ನಾಲ್ಕು ಸಂಗತಿಗಳಿರುತ್ತವೆ (= ಮಾತು ಬೆಣ್ಣೆಯಂತೆ ಮೃದುವಾಗಿದೆ) :

೧. ಉಪಮೇಯ - ಮಾತು
೨. ಉಪಮಾನ - ಬೆಣ್ಣೆ
೩. ಉಪಮಾವಾಚಕ - ಅಂತೆ
೪. ಸಾಧಾರಣ ಧರ್ಮ - ಮೃದುವಾಗಿದೆ.

ಮೇಲಿನ ನಾಲ್ಕು ಸಂಗತಿಗಳಲ್ಲಿ ಸಾಧಾರಣ ಧರ್ಮ ಮತ್ತು ಉಪಮಾವಾಚಕಗಳನ್ನು ಕಿತ್ತುಹಾಕಿದರೆ ಅಭೇದ ಕಲ್ಪನೆಯ ರೂಪಕವಾಗಿಬಿಡುತ್ತದೆ: (೧) ಮಾತು ಬೆಣ್ಣೆ (೨) ಬೆಣ್ಣೆ ಮಾತು. ಉಪಮೆಗೆ ಸಾಧ್ಯವಾಗದ 'ಸಂಕ್ಷಿಪ್ತತೆ' ರೂಪಕದಲ್ಲಿರುವುದು ಸುಸ್ಪಷ್ಟ! ದೀಪಕ - ಉತ್ಪ್ರೇಕ್ಷೆ - ದೃಷ್ಟಾಂತ - ಅರ್ಥಾಂತರನ್ಯಾಸ ಮುಂತಾದ (=ನೂರಾರು?) ಅಲಂಕಾರಗಳು ಮೂಲತಃ ದ್ವೈತ ಅಥವಾ ಅದ್ವೈತದ ಹಾದಿಯಲ್ಲಿದ್ದು ದೀರ್ಘ ವಿವರಣೆಗಳಿಂದ ಕೂಡಿರುತ್ತವೆ. ಸಾಹಿತ್ಯಲೋಕದಲ್ಲಿ ದ್ವೈತ ಮಾರ್ಗದ ಕವಿಗಳು ಒಂದು ಗುಂಪಾದರೆ, ಅದ್ವೈತ ಮಾರ್ಗದ ಕವಿಗಳು ಇನ್ನೊಂದು ಗುಂಪು. ಅಲ್ಲಮನು ಎಲ್ಲ ಕವಿಗಳಂತೆ 'ಉಪಮಾಲೋಲ'ನಾಗದೆ, 'ರೂಪಕ ಸಾಮ್ರಾಜ್ಯ ಚಕ್ರವರ್ತಿ'ಯಾಗದೆ ಶಬ್ದದೊಳಗೆ ನಿಃಶಬ್ದವನ್ನು ಸೃಷ್ಟಿಸಿದವನು. ನಿಃಶಬ್ದವೇ ಬೆಡಗು! ನಿಃಶಬ್ದವೇ ಸುಂದರ!

ರೂಪಕದ ಎರಡು ಸಂಗತಿಗಳಲ್ಲಿ 'ಉಪಮೇಯ'ವನ್ನು ಕಿತ್ತುಹಾಕಿ 'ಉಪಮಾನ'ವನ್ನು ಮಾತ್ರ ಹೇಳುವ ಅಲ್ಲಮಪ್ರಭುವಿನ ವಚನಗಳು ಶಬ್ದದೊಳಗಣ ನಿಃಶಬ್ದವಾಗಿದೆ. ಶ್ರಮಜೀವಿಗಳಾದ ಜನಪದರ ಗಾದೆ ಮತ್ತು ಒಗಟುಗಳಲ್ಲಿ 'ಉಪಮೇಯ'ವೇ ಇರುವುದಿಲ್ಲ.

೧. ಸಂತೆ ಹೊತ್ತಿಗೆ ಮೂರು ಮೊಳ
೨. ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ
೩. ಅಮ್ಮನ ಸೀರೆ ಮಡಿಚೋಕಾಗಲ್ಲ
ಅಪ್ಪನ ದುಡ್ಡು ಎಣಿಸೋಕಾಗಲ್ಲ
೪. ಬಾವಿಯೊಳಗೆ ಬೆಳ್ಳಿ ಬಟ್ಟಲು

## ವಿ. ಚಂದ್ರಶೇಖರ ನಂಗಲಿ

೫. ಕೆರೆ ಏರಿ ಮೇಲೆ ಮೂವರು ಹೆಂಗಸರು ಕಾಲು ಜಾರಿದರು. ಒಬ್ಬಳು ಮುಳುಗಿದಳು, ಒಬ್ಬಳು ಕರಗಿದಳು, ಒಬ್ಬಳು ತೇಲಿದಳು.

ಶಬ್ದಗಳನ್ನು ಹೊಸೆಯುತ್ತಾ ಯಾವುದಾದರೊಂದು 'ಸಂದರ್ಭ'ಕ್ಕೆ ಶಾಶ್ವತವಾಗಿ ಅರ್ಪಿಸಿಬಿಡುವ 'ಸ್ಥಗಿತ' ವಿಧಾನಕ್ಕಿಂತಲೂ, ಅದೇ ಶಬ್ದಗಳನ್ನು ನಿತ್ಯನೂತನವಾದ ಕಾಲ ಮತ್ತು ದೇಶಗಳ 'ಸಂದರ್ಭ'ಕ್ಕಾಗಿ ನಿಃಶಬ್ದಗೊಳಿಸುವ 'ಗತಿಶೀಲ' ವಿಧಾನವು ಉತ್ಕೃಷ್ಟವಾದುದು. ಅಲ್ಲಮನ ವಚನಗಳಲ್ಲಿ ಇಂಥ 'ನಿಃಶಬ್ದ'ದ ಕಾಂತಿ ಮತ್ತು ಸತ್ವಗಳಿವೆ. ಜನಪದರ ಗಾದೆ ಮತ್ತು ಒಗಟುಗಳು ಕೂಡ ಇಂಥವೇ! ಇವನ್ನು ಬೇರೆ-ಬೇರೆ ಕಾಲದೇಶಗಳ 'ವಿವಿಧ ಸಂದರ್ಭ ಪರಂಪರೆ'ಯಲ್ಲಿ ಸಮುದಾಯಗಳು ಚಲನಶೀಲವಾಗಿ ಬಳಸುತ್ತಿರುತ್ತವೆ. ಅಲ್ಲಮನ ವಚನಗಳಲ್ಲಿ ಇಂಥ ಗಾದೆಗಳು ಕೂಡ ಎಡೆ ಪಡೆದಿವೆ :

೧. *ಅಗ್ಘವಣಿ-ಪತ್ರೆ-ಧೂಪ-ದೀಪ ನಿವಾಳಿಯಲ್ಲಿ*
*ಪೂಜಿಸಿ ಪೂಜಿಸಿ ಬಳಲುತ್ತೈದಾರೆ!*
*ಏನೆಂದರಿಯರು! ಎಂತೆಂದರಿಯರು!*
*ಜನಮರುಳೋ ಜಾತ್ರೆಮರುಳೋ - ಎಂಬಂತೆ*
*ಎಲ್ಲರೂ ಪೂಜಿಸಿ*
*ಏನನೂ ಕಾಣದೆ*
*ಲಯವಾಗಿ ಹೋದರು, ಗುಹೇಶ್ವರ*

೨. *ಜಾಲಗಾರನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ*
*ಸೂನೆಗಾರನ ಮನೆಯಲ್ಲಿ ಹೆಣ ಹೋಗಿ ಅಳುವಂತೆ*
*ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮರುಗುವಂತೆ*
*ಠಕ್ಕನ ಪೂಜೆಗೆ ಮೆಚ್ಚುವನೇ ನಮ್ಮ ಗುಹೇಶ್ವರನು.*

(ಈ ವಚನದಲ್ಲಿ ಮೂರು ಗಾದೆಗಳಿವೆ: ಬೆಸ್ತನಿಗೆ ಮುಳ್ಳು, ಕಟುಕನಿಗೆ ಮಾಂಸ, ಕಳ್ಳನಿಗೆ ಬಟ್ಟಲು, ಪೂಜಾರಿಗೆ ಪೂಜೆ ಹೊಸತಲ್ಲ, ಇವೆಲ್ಲ ವೃತ್ತಿಮೂಲವಾದ ಯಾಂತ್ರಿಕ ವಿಧಿಗಳು ಅಷ್ಟೆ.)

೩. *ಅಂಗದಲ್ಲಿ ಮಾಡುವ ಸುಖವದು*
*ಲಿಂಗಕ್ಕೆ ಭೂಷಣವಾಯಿತ್ತು.*
*ಕಾಡುಗಿಚ್ಚಿನ ಕೈಯಲ್ಲಿ ಕರಡವ ಕೊಯ್ಸುವಂತೆ*
*ಹಿಂದೆ ಮೆದೆಯಿಲ್ಲ!*
*ಮುಂದೆ ಹುಲ್ಲಿಲ್ಲ!!*
*ಲಿಂಗ-ಲಿಂಗವೆಂಬಕ್ಷರ ಫಲದಾಯಕ*
*ಲಿಂಗೈಕ್ಯವದು ಬೇರೆ ಗುಹೇಶ್ವರ*

(ಈ ವಚನದಲ್ಲಿರುವ ಗಾದೆ ಹೊಚ್ಚ ಹೊಸತು. 'ಕರಡ' ಎಂದರೆ ಕಾಡಿನಲ್ಲಿ ಅಥವಾ ಬೆಟ್ಟದಲ್ಲಿ ಬೆಳೆದು ಒಣಗಿದ ಹುಲ್ಲು. ಈ ವಚನಕ್ಕೆ ಪೂರಕವಾಗಿ 'ಕರ್ಪುರದ ಗಿರಿಯ ಉರಿಯು ಹಿಡಿದಡೆ'... ಎಂಬ ವಚನವನ್ನು ಪರಿಶೀಲಿಸಬಹುದು. 'ದೇಹವೇ ದೇವಾಲಯ'ವೆಂಬ ದೃಷ್ಟಿಕೋನವಿಲ್ಲದೆ... ಈ ಭಾವವಿಲ್ಲದಾಗ 'ಲಿಂಗೈಕ್ಯ'ವೆಂಬುದು 'ಮರಣ' ವೆಂಬರ್ಥವನ್ನು ಮಾತ್ರ ಕೊಡಬಲ್ಲುದು.)

ಜನಪದರ ಒಗಟುಗಳ ವಿನ್ಯಾಸಗಳನ್ನೂ ಅಲ್ಲಮನಲ್ಲಿ ವಿಶೇಷವಾಗಿ ಕಾಣಬಹುದು. 'ಸಮುದಾಯಗಳ ಬುದ್ಧಿಮತ್ತೆ'ಯ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರುವ ವಿದ್ವಾಂಸರು (=ವಿಧ್ವಂಸರು) ಈ ನಿಟ್ಟಿನಲ್ಲಿ ಯೋಚಿಸುವ ಕಿಂಚಿತ್ ಶ್ರಮವನ್ನೂ ತೆಗೆದುಕೊಳ್ಳಲಾರರು. ಈ ಮಾತಿಗೆ ಡಾ|| ಎಲ್. ಬಸವರಾಜು ಒಂದು ಅಪವಾದ :

...'ಒಗಟನ್ನೇ ಬೆಡಗುಗೊಳಿಸಿದವರು ವಚನಕಾರರೆಂದರೆ ಸಾಲದು ; ಕೆಳವರ್ಗದ ವಚನಕಾರರೆನ್ನಬೇಕು. ಆಗಲೇ ಇಡಿಯಾಗಿ ವಚನ ಸಾಹಿತ್ಯದ ಮೂಲದಲ್ಲೇ ಒಂದು ಜನಪರವಾದ ಮತ್ತು

ಜನಪದದ ಬೀಜಾಣು ಅಡಗಿರುವುದನ್ನು ಗುರುತಿಸುವ ಕಾರ್ಯ ಕ್ರಮಾಗತವಾಗಿ ನಡೆದಂತಾಗುತ್ತದೆ... ಬೆಡಗಿನ ವಚನ ಪ್ರಕಾರದಲ್ಲಿ ಅತ್ಯಂತ ಪರಿಪೂರ್ಣತೆಯನ್ನು ಸಾಧಿಸಿ ಅದನ್ನೇ ತನ್ನ ಮುಖ್ಯ ಮಾಧ್ಯಮವನ್ನಾಗಿ ಮಾಡಿಕೊಂಡ ಅಲ್ಲಮಪ್ರಭು ದೇವರು ಕೆಳವರ್ಗದ ನಟುವ ಜಾತಿಗೆ ಸೇರಿದವರೆಂಬುದನ್ನು ಮರೆಯಬಾರದು... ಅನುಭವ ಮಂಟಪದಲ್ಲಿ ವಚನಗಳು ಪ್ರಕಟಗೊಂಡವೆನ್ನುವುದು ನಿಜವಾದರೆ, ಬೆಡಗಿನ ವಚನಗಳಿಗೆ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ. ಒಬ್ಬನು ಒಂದು ಬೆಡಗನ್ನು ಹೇಳಿದರೆ ಇನ್ನೊಬ್ಬನು ಅದಕ್ಕೆ ಹೊಯ್ಕಯಾಗಿ ಮತ್ತೊಂದು ವಚನವನ್ನೇಕೆ ಹೇಳಿರಬಾರದು. ಹೀಗೆ ಬೆಡಗಿನ ವಚನ ಸಂಪ್ರದಾಯ ಆಶು ರಚನೆಯಾಗಿಯೂ ರೂಪಗೊಂಡಿರಬಹುದು''....

**ಬೆಡಗಿನ ವಚನ ಪರಂಪರೆ, ಪು ೭೭-೮೮.**

ಶಬ್ದಗಳನ್ನು ಒಡೆದು, ಕೂಡಿಸಿ ಬಗೆಬಗೆಯ ರೀತಿಗಳಲ್ಲಿ ಕ್ರೀಡೆಯಾಡುವ 'ಕವಿತ್ವಸಾಧಕರ ಕಳವಳ' ಅಲ್ಲಮನ ವಚನಗಳಲ್ಲಿ ಇಲ್ಲವೇ ಇಲ್ಲ. ಕೆಲವರು ಅಲ್ಲಮನ ಬೆಡಗಿನ ವಚನಗಳನ್ನು 'ನಾರಿಕೇಳಪಾಕ'ಕ್ಕೆ ಹೋಲಿಸಿದ್ದಾರೆ. ತೆಂಗಿನಕಾಯನ್ನು ಸುಲಿದು-ಒಡೆದು-ಚಚ್ಚಿ-ತಿನ್ನುವಂತೆ ಅಲ್ಲಮನ ವಚನಗಳು ಕಠಿಣತಮವೆಂದು ಇಂಥವರ ಅನ್ನಿಸಿಕೆ. ಇದಕ್ಕೆ ಸ್ವತಃ ಅಲ್ಲಮನೇ ಕೊಟ್ಟಿರುವ ಉತ್ತರವನ್ನಿಲ್ಲಿ ಸ್ಮರಿಸಲೇಬೇಕು:

*ಒಳಗೆ ನೋಡಿಹೆನೆಂದಡೆ ಒಳಗೆ ನಿರಾಳ*
*ಹೊರಗೆ ನೋಡಿಹೆನೆಂದಡೆ ಹೊರಗೆ ನಿರಾಳ*
*ಹೊಲದಲ್ಲಿ ಆವಿಲ್ಲ*
*ಮನೆಯಲ್ಲಿ ಕರುವಿಲ್ಲ*
*ನೆಲಹಿನ ಮೇಲಣ ಬೆಣ್ಣೆಯದು ದಿಟವೋ ?!*
*ನಾರಿವಾಳದ ಕಾಯೊಳಗಣ*
*ತಿರುಳನೊಡೆಯದೇ ಮೆಲಬಲ್ಲಡೆ*
*ಬೆಡಗು ಗುಹೇಶ್ವರ !*

ಜನಪದರ ಒಗಟುಗಳ ವಿವಿಧ ವಿನ್ಯಾಸಗಳೇ ಬೆಡಗಿನ ವಚನಗಳ ಅಂತಃಸ್ಫೂರ್ತಿಯಾಗಿದೆ. ಮೇಲಿನ ವಚನದಲ್ಲಿ ಲಕ್ಷಣಸಂಪನ್ನತೆಯನ್ನು ದಾಟಿದ ಲಕ್ಷ್ಯಸಿದ್ಧಿಯ ನಿರ್ವಚನವೇ ಅಡಗಿದೆ : (೧) ಒಳಗೆ-ಹೊರಗೆ (೨) ಮನೆ-ಹೊಲ (೩) ಕರು - ಆವು ಈ ತ್ರಿವಳಿಗಳು ಬರಿಯ ಲಕ್ಷಣಗಳಿದ್ದಂತೆ. 'ನೆಲಹಿನ ಮೇಲಣ ಬೆಣ್ಣೆ' ಎಂಬುದೇ ಲಕ್ಷ್ಯಸಿದ್ಧಿ. ಶರಣನಾದವನಿಗೆ (ಸಾಹಿತಿ, ವಿಜ್ಞಾನಿ, ತತ್ವಜ್ಞಾನಿಗೆ ಕೂಡ) ಲಕ್ಷ್ಯಸಿದ್ಧಿಯೇ ಮುಖ್ಯ. 'ಮೀನ್ಸ್' ಮತ್ತು 'ಎಂಡ್' ಎಂಬ ಆಂಗ್ಲ ಪರಿಭಾಷೆಗಳನ್ನಿಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಈ ವಿಚಾರವನ್ನೇ ಅಲ್ಲಮನ ಮತ್ತೊಂದು ವಚನವೂ ಮತ್ತಷ್ಟು ಪುಷ್ಟೀಕರಿಸುತ್ತದೆ.

*ಬಿತ್ತದೆ ಬೆಳೆಯದೆ ತುಂಬಿದ ರಾಶಿಯ*
*ಕಂಡಲ್ಲಿ ಸುಖಿಯಾಗಿ ನಿಂದವರಾರೋ !?*
*ಇದ ಹೇಳಲು ಬಾರದು! ಗೊಗ್ಗೇಶ್ವರ*
*ನಿಮ್ಮ ಶರಣನು ಲಚ್ಚಣವಳಿಯದೆ*
*ರಾಸಿಯನಳೆದನು.*

ಕವಿತ್ವಸಾಧಕರಲ್ಲಿ ಇಬ್ಬಗೆ : (೧) ಶಬ್ದಸಾಧಕರು (೨) ಅರ್ಥಸಾಧಕರು. ಅಲ್ಲಮನು ಇವೆರಡು ಗುಂಪಿಗೂ ಸೇರಿದವನಲ್ಲ. ಶಬ್ದಾರ್ಥಗಳನ್ನು 'ನಿಃಶಬ್ದ'ಗೊಳಿಸುವ ಬೆಡಗಿನಲ್ಲಿ ಬೆರಗಿದೆ, ಬೆಳಗಿದೆ. ಬೆಡಗಿನಿಂದ ಬೆರಗಿನೆಡೆಗೆ, ಬೆರಗಿನಿಂದ ಬೆಳಗಿನೆಡೆಗೆ ಚಲಿಸುವುದನ್ನೇ ಅಲ್ಲಮನು ''ಶಬ್ದದೊಳಗಣ ನಿಃಶಬ್ದದಂತೆ''..... ''ಮಾತೆಂಬುದು ಜ್ಯೋತಿರ್ಲಿಂಗ'' - ಎಂದು ನುಡಿದಿದ್ದಾನೆ. ಲಕ್ಷಣ-ಲಕ್ಷ್ಯ, ಸಾಧನ - ಸಾಧ್ಯ ಎಂಬ ವಿಚಾರದ ಪ್ರತಿಪಾದನೆ ಅಲ್ಲಮನ ಅನೇಕ ವಚನಗಳಲ್ಲಿದೆ. ಈ ದೃಷ್ಟಿಯಿಂದ ನೋಡಿದರೆ ಅಲ್ಲಮನಲ್ಲಿ 'ವಚನಸರಪಳಿ'ಯೊಂದನ್ನು ಕಂಡುಕೊಳ್ಳಬಹುದು. ಅಂಥ ಇನ್ನೆರಡು ವಚನಗಳಿವು :

*೧. ತಿಳಿದಿರ್ದ ಮಡುವಿನೊಳಗೆ*
*ಸುಳಿದಾಡುತ್ತದೆ ಒಂದು ಸುವರ್ಣದ ಬಿಂದು !*
*ಅದು ಹಿಂದುಮುಂದಾಗಿ ನೋಡಿದವರಿಗಲ್ಲದೆ*
*ಕಾಣಬಾರದು.*

*ಮಡುವ ತುಳುಕದೆ*
*ದಡವ ಸೋಂಕದೆ ಹಿಡಿಯಬಲ್ಲಡೆ*
*ಗುಹೇಶ್ವರನೆಂಬ ಲಿಂಗವು ಈಗಳೆ ಸಾಧ್ಯ*

*೨. ಮಠವೇಕೋ, ಪರ್ವತವೇಕೋ*
*ಜನವೇಕೋ, ನಿರ್ಜನವೇಕೋ*
*ಚಿತ್ತ ಸಮಾಧಾನವುಳ್ಳ ಶರಣಂಗೆ ?*
*ಮತ್ತೆ ಹೊರಗಣ ಚಿಂತೆ-ಧ್ಯಾನ-ಮೌನ*
*ಜಪ-ತಪವೇಕೋ ತನ್ನ ತಾನರಿದ*
*ಶರಣಂಗೆ, ಗುಹೇಶ್ವರ !*

ಇದುವರೆಗಿನ ವಿಚಾರಮಂಡನೆಯಿಂದ 'ಬೆಡಗು' ಎಂದರೆ ಅದೊಂದು ಘನಗಂಭೀರವಾದ ಚಿಂತನ ದೀಪ್ತಿ ಎನ್ನಿಸಿದೆಯೇ ? ಅಲ್ಲಮ ಇದನ್ನೂ ಒಪ್ಪುವುದಿಲ್ಲ. 'ಬೆಡಗು' ಎಂದರೆ 'ಥಳಕು' ಎಂಬರ್ಥವೂ ರೂಢಿಯಲ್ಲಿದೆ. ಇದನ್ನು ಬಳಸಿಕೊಳ್ಳುವುದರ ಮೂಲಕ ಬೆಡಗಿನ ಬಗ್ಗೆ ಮೋಹಾವೇಶವನ್ನು ಹೊಡೆದುರುಳಿಸುತ್ತಾನೆ:

*ಮಿಂದು ದೇವರ ಪೂಜಿಸಿಹೆನೆಂಬ*
*ಸಂದೇಹಿ ಮಾನವ ನೀ ಕೇಳಾ*
*ಮೀಯದೇ ಮೀನು ?*
*ಮೀಯದೇ ಮೊಸಳೆ ?*
*ತಾ ಮಿಂದು, ತನ್ನ ಮನ ಮೀಯದನ್ನಕ್ಕರ*
*ಈ ಬೆಡಗಿನ ಮಾತ ಮೆಚ್ಚುವನೆ*
*ನಮ್ಮ ಗುಹೇಶ್ವರ ಲಿಂಗವು ?*

ಅಲ್ಲಮನಿಗೆ ತಾನೊಂದು 'ಸಿದ್ಧಾಂತ' ಅಥವಾ 'ತತ್ವಜ್ಞಾನ' ಅಥವಾ 'ಬೋಧಾಮೃತ' ನೀಡಬೇಕೆಂಬ ಸಂಕಲ್ಪವೇ ಇಲ್ಲ. ಪೂರ್ವಸಿದ್ಧಾಂತಗಳು ಸ್ವೀಯವಾಗಿರಲಿ ಅಥವಾ ಪರಕೀಯವಾಗಿರಲಿ ಅವುಗಳೊಂದಿಗೆ ಅಲ್ಲಮ ರಾಜಿಯಾಗುವುದಿಲ್ಲ:

*'ನಿನ್ನ ಅರಿವೆಲ್ಲವ ಹರಿಹಂಚಮಾಡಿ*
*ನೀನರಿ ಮರುಳೇ ಅನುಭಾವಿಯಾದಡೆ...'*





ಸಂಸ್ಕೃತಿದತ್ತ ಹಾಗೂ ಸ್ವಾರ್ಜಿತವೆನ್ನಬಹುದಾದ ಅರಿವನ್ನು ಹರಿದೊಗೆಯುತ್ತಾ ನಿರಹಂಕಾರ ಮತ್ತು ಸುಜ್ಞಾನ ಬುದ್ಧಿಯಿಂದ ನಿತ್ಯನೂತನವಾಗಿರುವ ಬಗೆಯಲ್ಲೇ ಶಬ್ದ ಮುಗ್ಧವಾಗುವ ಪರಿಯಿದೆ. ಇಂಥ ಗತಿಮತಿಯನ್ನೇ ಅಲ್ಲಮನು 'ಶಿಶು ಕಂಡ ಕನಸು' ಎನ್ನುತ್ತಾನೆ. ಮಗುವಿನ ಮುಗ್ಧ ಮನಸ್ಸು ಮತ್ತು ತುಂಬಿದ ಕೊಡವಾಗಿರುವ ಮನಸುಗಳಲ್ಲಿ ವ್ಯತ್ಯಾಸಗಳಿಲ್ಲ, ಇವೆರಡು ನಿಷ್ಕಲ್ಮಷವಾದವು. ವೀರಶೈವವೂ ಸೇರಿದಂತೆ ಪ್ರಚಲಿತ ಮತಧರ್ಮದ ಪರಿಭಾಷೆಗಳು ಮತ್ತು 'ಸ್ಥಾಪಿತ'ವಾಗಿರುವ ತಾತ್ವಿಕತೆಯ ಚೌಕಟ್ಟುಗಳು ಅಲ್ಲಮನ ವಚನಗಳನ್ನು ಗ್ರಹಿಸಲು ನೆರವಾಗುವುದಿಲ್ಲ. ಈ ದೃಷ್ಟಿಯಿಂದ ಅಲ್ಲಮನನ್ನು ಕನ್ನಡ ಸಂಸ್ಕೃತಿಯ ಝೆನ್ ಎಂದು ಹೇಳಬಹುದು. ಝೆನ್ ಎಂದು ಗುರುತಿಸಲ್ಪಡುತ್ತಿರುವ ಕಥಾ ಪ್ರಸಂಗಗಳು, ಸಂವಾದ, ಒಗಟು, ಮುಂಡಿಗೆಗಳಲ್ಲಿ (೧) ಬೆಡಗು (೨) ಬೆರಗು (೩) ಬೆಳಗು - ಇವು ಮೂರೂ ಮುಪ್ಪುರಿಗೊಂಡಿರುವಂತೆಯೇ ಅಲ್ಲಮನ ವಚನಗಳಲ್ಲೂ ಬೆಡಗಿದೆ - ಬೆರಗಿದೆ - ಬೆಳಗಿದೆ. ಇದನ್ನು ಸಮರ್ಥಿಸಲು ಝೆನ್ ಕಥಾಪ್ರಸಂಗವೊಂದನ್ನು ಇಲ್ಲಿ ಉದಾಹರಿಸಲಿಚ್ಛಿಸುತ್ತೇನೆ :

ಸಂಚಾರದಲ್ಲಿದ್ದ ಗುರು ತಂಕಾ, ಒಂದು ರಾತ್ರಿ ಒಂದು ದೇವಾಲಯದಲ್ಲಿ ಇಳಿದುಕೊಂಡಿದ್ದ. ಅಲ್ಲಿ ಚಳಿ ವಿಪರೀತವಾಗಿತ್ತು. ಬೆಂಕಿ ಉರಿಸಿಕೊಳ್ಳುತ್ತಿದ್ದರೂ ಈಗ ಅದು ಕ್ರಮೇಣ ಆರತೊಡಗಿತ್ತು. ಮತ್ತೆ ಉರಿಸಲು ಹತ್ತಿರ ಕಟ್ಟಿಗೆಯೂ ಇರಲಿಲ್ಲ. ತಂಕಾ ಅಲ್ಲಿದ್ದ ಬುದ್ಧದೇವನ ಮರದ ವಿಗ್ರಹಗಳಲ್ಲಿ ಒಂದನ್ನು ಎತ್ತಿಕೊಂಡು ಬೆಂಕಿಗೆ ಚಾಚಿದ. ಇದನ್ನು ಕಂಡ ದೇವಾಲಯದ ಅರ್ಚಕ ಏನು ಹೇಳಲಿಕ್ಕೂ ತೋಚದೆ ನಿಬ್ಬೆರಗಾಗಿ ನಿಂತುಕೊಂಡಿದ್ದ. ತಂಕಾ ಆತನಿಗಾದ ಆಘಾತವನ್ನು ಗುರುತಿಸಿದ.

ಬೆಂಕಿ ಕೊಂಚ ಇಳಿಮುಖವಾಗುತ್ತಿದ್ದಂತೆ, ತಂಕಾ ಒಂದು ಕಡ್ಡಿಯನ್ನೆತ್ತಿಕೊಂಡು ಬೂದಿಯನ್ನು ಕೆದರತೊಡಗಿದ. ಅರ್ಚಕ ಕುತೂಹಲದಿಂದ "ಏನನ್ನೋ ಹುಡುಕುತ್ತಿದ್ದೀರಾ ?" ಎಂದು ಕೇಳಿದ. "ಹೌದು ಬುದ್ಧದೇವನ ಶರೀರ (ಪವಿತ್ರ ಚಿತಾಭಸ್ಮ) ಹುಡುಕುತ್ತಿದ್ದೇನೆ", ಎಂದ, ಗುರು ತಂಕಾ. "ಮರದ ಪ್ರತಿಮೆ ಸುಟ್ಟರೆ ಪವಿತ್ರವಾದ ಶರೀರ ಭಸ್ಮ ಸಿಕ್ಕುತ್ತದೆಯೆ ?" ಎಂದು ಮೆಲುನಕ್ಕ ಅರ್ಚಕ.

ಆಗ ಗುರು ಹೇಳಿದ - "ಹೌದಲ್ಲವೆ ? ಹಾಗಿದ್ದರೆ, ಆ ಇನ್ನೆರಡು ಮರದ ಪ್ರತಿಮೆಗಳಿದ್ದಾವಲ್ಲ, ತಾ. ಬೆಂಕಿ ಉರಿಸಿಕೊಳ್ಳುತ್ತೇನೆ." (ಝೆನ್ : ಕೆ.ವಿ. ಸುಬ್ಬಣ್ಣ, ಅಕ್ಷರ ಪ್ರಕಾಶನ, ಹೆಗ್ಗೋಡು. ಪು. ೨೫, ೧೯೯೧)

ಮೇಲ್ಕಂಡ ಝೆನ್ ಕಥಾ ಪ್ರಸಂಗವು ತನ್ನ ಆಂತರ್ಯದಲ್ಲಿ 'ವಿಗ್ರಹಭಂಜನೆ'ಯ ಆಶಯವನ್ನು ಗರ್ಭೀಕರಿಸಿಕೊಂಡಿದೆ. ಅರ್ಚಕ ಮತ್ತು ಗುರು ತಂಕಾ - ಇವರಿಬ್ಬರ ಗ್ರಹಿಕೆಯಲ್ಲೇ ಇರುವ ವ್ಯತ್ಯಾಸಗಳು ಸುಸ್ಪಷ್ಟವಾಗಿವೆ. ಆಚಾರ-ವಿಚಾರ, ತನು-ಅಣು, ಕುರುಹು-ಅರಿವು ಈ ತ್ರಿವಳಿಗಳಲ್ಲಿ ಇಬ್ಬರು ಬೇರೆ ಬೇರೆಯಾಗಿದ್ದಾರೆ. 'ವಿಗ್ರಹಭಂಜನೆ' ಅಥವಾ 'ಕುರುಹಿನ ನಿರಾಕರಣೆ'ಯನ್ನು ನಿರ್ದಿಷ್ಟ ವಿಷಯವೊಂದರ (ಕಥಾಪ್ರಸಂಗ) ಮೂಲಕ ಹೇಳುತ್ತಿದ್ದರೂ ಅದು ಭಿನ್ನ ವಿಷಯವಾಗಿ ಸಹೃದಯರಿಗೆ ಹೊಳಹಾಗುವಂತೆ 'ನಿರೂಪ'ಗೊಂಡಿರುವುದೇ ಇಲ್ಲಿನ ವೈಶಿಷ್ಟ್ಯ. ಈ ಝೆನ್ ಪ್ರಸಂಗದಲ್ಲಿ ವಿಗ್ರಹಭಂಜನೆ ಅಥವಾ ಕುರುಹಿನ ನಿರಾಕರಣೆಯೇ 'ಉಪಮೇಯ'. ಬುದ್ಧನ ಮರದ ವಿಗ್ರಹಗಳೇ 'ಉಪಮಾನ'. ಉಪಮೇಯವನ್ನು ಕಿತ್ತುಹಾಕಿದ್ದರೂ ಇದು ಉಪಮಾನದ ಮೂಲಕವೇ ಬೋಧೆಯಾಗುವಂತೆ 'ನಿರೂಪ'ಗೊಂಡಿರುವುದನ್ನಿಲ್ಲಿ ಗಮನಿಸಬೇಕು. ಹೀಗೆ ಪ್ರಸಂಗವನ್ನು 'ಸರಿಯಾಗಿ' ಅರ್ಥಮಾಡಿಕೊಳ್ಳದಿದ್ದರೆ ಅಂಥವರು ಕೆಟ್ಟರೆಂದೇ ಹೇಳಬೇಕು:

*ರೂಪನೆ ಕಂಡರು ನಿರೂಪನ ಕಾಣರು !*
*ತನುವನೆ ಕಂಡರು ಅನುವನೆ ಕಾಣರು !*
*ಆಚಾರವನೆ ಕಂಡರು ವಿಚಾರವನೆ ಕಾಣರು !*
*ಗುಹೇಶ್ವರ ! ನಿಮ್ಮ ಕುರುಹನೆ ಕಂಡು*
*ಕೂಡಲರಿಯದೆ ಕೆಟ್ಟರು.*

ಅಲ್ಲಮನ ವಚನಗಳಲ್ಲಿ ಬಹುಮಟ್ಟಿಗೆ 'ಉಪಮೇಯ'ವೇ ಇರುವುದಿಲ್ಲ. ವರ್ಣಿತವಾಗಿರುವ 'ಉಪಮಾನ'ದ ಮೂಲಕ ಸಹೃದಯರು 'ಸರಿಯಾಗಿ' ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಇದನ್ನೇ ಧ್ವನಿ ಸಿದ್ಧಾಂತವು 'ಉಪಸರ್ಜನ' ಎಂದು ಕರೆದಿದೆ. ವಾಚ್ಯವಾಗಿರುವ ನಿರ್ದಿಷ್ಟ ವಿಷಯಕ್ಕಿಂತಲೂ ಪ್ರತೀಯಮಾನವು ಭಿನ್ನ ವಿಷಯವನ್ನೊಳಗೊಂಡಿರುತ್ತದೆಯೆಂಬುದೇ 'ಉಪಸರ್ಜನ'ದ ಸಾರಭೂತ ವಿಚಾರವಾಗಿದೆ. ಈ ದೃಷ್ಟಿಯಿಂದ ನೋಡಿದರೆ,




ಬೆಡಗು, ನಿಃಶಬ್ದ, ಉಪಸರ್ಜನ, ಝೆನ್, ಜನಪದರ ಗಾದೆ ಮತ್ತು ಒಗಟು - ಇವೆಲ್ಲ 'ಮಾನವ ಸರಪಳಿ'ಯಂತೆ ಪರಸ್ಪರ ಬೆಸೆದುಕೊಳ್ಳುವ ಸುವಿಚಾರ ಸೋಪಾನ ಸರಣಿಯಾಗಿದೆ. ಝೆನ್ ಕಥಾಪ್ರಸಂಗದ ಮೂಲಕ ಆಗಲೇ ಸ್ಪಷ್ಟಪಡಿಸಿದ ವಿಗ್ರಹಭಂಜನೆ ಅಥವಾ ಕುರುಹಿನ ನಿರಾಕರಣೆಯನ್ನು 'ಭಿನ್ನವಿಷಯ' ಪ್ರತಿಪಾದನೆಯ ಮೂಲಕ ಅಲ್ಲಮಪ್ರಭು ಮಂಡಿಸುವುದಕ್ಕೆ ಅಸಂಖ್ಯಾತ ಉದಾಹರಣೆಗಳಿವೆಯಾದರೂ ಅತ್ಯಂತ ಪ್ರಸಿದ್ಧವಾದ, ಕೇಳುತ್ತಿದ್ದರೆ ಒಡಲಿನಲ್ಲಿ ಮಿಂಚು ಹರಿಯುವಂಥ ವಚನವೊಂದನ್ನು ಉದಾಹರಿಸುತ್ತೇನೆ :

*ಹರಿವ ನದಿಗೆ ಮೈಯೆಲ್ಲ ಕಾಲು*
*ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ*
*ಬೀಸುವ ಗಾಳಿಗೆ ಮೈಯೆಲ್ಲ ಕೈ*
*ಇದು ಕಾರಣ, ಗುಹೇಶ್ವರ*
*ನಿಮ್ಮ ಶರಣಂಗೆ ಸರ್ವಾಂಗವೆಲ್ಲ ಲಿಂಗಮಯವಯ್ಯಾ !*

ಇದೇ ಬೆಡಗಿನ ವಚನ : ಬೆರಗಿನ ವಚನ : ಬೆಳಗಿನ ವಚನ. ಇದನ್ನು ಅರಿಯದ, ಅರಿಯಲು ಇಚ್ಛಿಸದ ರಸಾಧಿಕಾರಿಗಳು ಅಲ್ಲಮನ ವಚನಗಳನ್ನು ಕಠಿಣ, ಅರ್ಥವಾಗದೆಂದು ದೂರುತ್ತಾರೆ. ಎಲ್ಲ ವಸ್ತು ವಿಷಯಗಳು ನಮ್ಮ ಮೂಗಿನ ನೇರಕ್ಕೆ ಇರಬೇಕೆಂದು ಬಯಸುವ ಗುಲಗಂಜಿಗಳಿಗೆ ತನ್ನ ಕಪ್ಪು ತಿಳಿಯುವುದೆಂದಿಗೆ ? ಅಲ್ಲಮನ ವಚನಗಳು ಅಂಗಡಿಯಲ್ಲಿ ಸಿಗುವ ಪದಾರ್ಥಗಳಂತೆ ವಿಂಗಡಿಸಿ ಮಾರುವ ಸರಕಲ್ಲ! ಆದ್ದರಿಂದಲೆ ಏನೋ ? ಕೆಲವರಿಗೆ ಅಲ್ಲಮನು 'ಸಮಾಜ ವಿರೋಧಿ'ಯಾಗಿ ಕಂಡಿದ್ದಾನೆ. ಅಲ್ಲಮನ ವಚನಗಳು ಒಂದು ಕಾಡಿನಂತಿದೆ: ಈ ಕಾಡಿನಲ್ಲಿ ಹುಲ್ಲು-ಗಗನ ಚುಂಬಿ ವೃಕ್ಷ, ಪೊದೆ-ಪೊಟರೆ, ಹೆಬ್ಬಂಡೆ-ಗುಹೆ, ಸವಿಜೇನು-ತಿಳಿಜಲ, ದಿಗಂತ ವಿಶ್ರಾಂತ ಗಿರಿಪಂಕ್ತಿ-ಆಳ ಆಳವಾದ ಕಣಿವೆ ಎಲ್ಲವೂ ಒಂದರೊಳಗೊಂದು ಐಕ್ಯಸ್ಥಲವಾಗಿದೆ. ಸರ್ಕಾರದ ನೆಡುತೋಪುಗಳು, ಪಾರ್ಕುಗಳು ನಮಗೆ ಅರ್ಥವಾಗಬಹುದಾದವರೂ ತನಗೆ ತಾನೆ ಸರಿಸಾಟಿಯಾದ ಕಾಡು ಸುಲಭಗ್ರಾಹ್ಯವಲ್ಲ. ಆದರೆ, ಕಾಡನ್ನೇ ನಂಬಿ ಅರಣ್ಯ ಉತ್ಪನ್ನಗಳಿಂದಲೇ ಬದುಕುತ್ತಿರುವ ಅಸಂಖ್ಯಾತ ಗಿರಿಜನರಿಗೆ ಕಾಡು ಎಂದರೆ ಪೊರೆಯುವ ಪ್ರತ್ಯಕ್ಷ ತಾಯಿ. ನಾಗರಿಕರ ಪಾಲಿಗೆ ಕಾಡೆಂಬುದು ಬಿಂಬವಲ್ಲ; ಬರಿಯ ಶಬ್ದ ಮಾತ್ರ ! ಈ ವೈದೃಶ್ಯವೇ ಅಲ್ಲಮನ ವಚನಗಳ ಓದಿನಲ್ಲೂ ಕಂಡುಬರುತ್ತದೆ. ಗಿರಿಜನರಂತೆ ಅಲ್ಲಮನ ವಚನಾರಣ್ಯದಲ್ಲಿ ಅಲೆದಾಡುವ ಚೈತನ್ಯವಿದ್ದವರಿಗೆ ಅಲ್ಲಮನು 'ಪ್ರಿಸಮ್' ಇದ್ದಂತೆ ! ಇದರ ಮೂಲಕ ಬದುಕಿನ ಬಗೆ ಬಗೆ ಬಣ್ಣಗಳನ್ನು ಬಗೆದು ನೋಡಬಹುದು. ಆದರೆ ಅಲ್ಲಮನ ವಚನಾರಣ್ಯದಲ್ಲಿ ಹೊಕ್ಕು ಬಳಕೆಯಿಲ್ಲದವರು ನಾಗರಿಕರಂತೆ ಕಾಡಿನೊಂದಿಗೆ 'ಬಿಂಬಮೂಲ' ಸಂಬಂಧಿಗಳಾಗದೆ, 'ಶಬ್ದಮೂಲ' ಸಂಬಂಧಿಗಳಾಗಿ ದಿಕ್ಕೆಟ್ಟು ದುರವಗಾಹಿಯೆಂದು ತೀರ್ಮಾನಿಸಿಬಿಡುತ್ತಾರೆ.

ಅಲ್ಲಮನ ವಚನಾರಣ್ಯದ ಹೊಕ್ಕು ಬಳಕೆಯಿಂದ

ನಾನು ಕಂಡುಕೊಂಡಿರುವ ಒಳದಾರಿಗಳಲ್ಲೊಂದನ್ನು ಇಲ್ಲಿ ಪರಿಚಯಿಸಲಿಚ್ಛಿಸುತ್ತೇನೆ. ಕೆಳಗೆ ಕೊಟ್ಟಿರುವ ಐದು ವಚನಗಳು ಐದು ಬೆರಳುಗಳಂತಿದ್ದು ಒಂದನ್ನೊಂದು ಗ್ರಹಿಸಲು ನೆರವಾಗುವುದಲ್ಲದೆ, 'ಬೆಡಗು' ಎಂದರೆ 'ದುರವಗಾಹಿ'ಯೆಂಬ ರೂಢಿಗತ ದೃಷ್ಟಿದೋಷಕ್ಕೆ ಯಥೋಚಿತ ಸುಲೋಚನವೂ ಆಗುತ್ತದೆ:

೧. *ಒಂದೂ ಇಲ್ಲದ ಬಿಂದವ*
*ತಂದೆಯಿಲ್ಲದ ಕಂದನ*
*ಮಾತೆಯಿಲ್ಲದ ಜಾತನ*
*ಗಮನವಿಲ್ಲದ ಗಮ್ಯನ*
*ಮೂವರರಿಯದ ಮುಗ್ಧನ ಠಾವ ತೋರಿಸು, ಗುಹೇಶ್ವರ*

(ಮೂವರು : ತಂದೆ (ಗುರು), ಮಾತೆ (ಲಿಂಗ), ಗಮನ (ಜಂಗಮ). ''ತಾನೆ ಗುರುವಾದ, ತಾನೆ ಲಿಂಗವಾದ, ತಾನೆ ಜಂಗಮವಾದ'')

೨. *ನೀರಿಲ್ಲದ ಒರಳಿಂಗೆ*
*ನೆಳಲಿಲ್ಲದ ಒನಕೆ*
*ರೂಹಿಲ್ಲದ ನಾರಿಯರು*
*ಬೀಜವಿಲ್ಲದ ಅಕ್ಕಿಯ ಥಳಿಸುತ್ತ*
*ಬಂಜೆಯ ಮಗನ ಜೋಗುಳವಾಡುತ್ತೈದಾರೆ.*
*ಉರಿಯ ಚಪ್ಪರವಿಕ್ಕಿ*
*ಗುಹೇಶ್ವರನ ಕಂದನು ಲೀಲೆಯನಾಡಿದನು.*

(ಬೀಜವಿಲ್ಲದ ಅಕ್ಕಿ = ತುಷವ ನೀಗದ ತಂಡುಲದಂತೆ ಕಾಯದ ದೆಶೆ ಶುದ್ಧವಾಗಿರಬೇಕು)



ಹಣ, ಅಧಿಕಾರ, ಆಸ್ತಿ
ವಿಚಾರಗಳಿಗಾಗಿ
ತಕರಾರು ಬಂದಾಗಲೇ
ನಾವು
ಸಂಬಂಧ,
ಸಹೋದರತ್ವ, ಮಾನವೀಯತೆ
ಎಲ್ಲವನ್ನೂ ಮಾರಿಕೊಂಡು
ಮಾಡಿಕೊಳ್ಳುತ್ತೇವೆ
ಕರಾರು......!

**- ಶಿವರಾಮ ಕಾರಗಡಿ**




೩. *ತಾಯಿ ತಂದೆಯಿಲ್ಲದ ಕಂದಾ*
*ನಿನಗೆ ನೀನೇ ಹುಟ್ಟಿದೆಯಲ್ಲಾ !*
*ನಿನ್ನ ಪರಿಣಾಮವೆ ನಿನಗೆ ಪ್ರಾಣ*
*ತೃಪ್ತಿಯಾಗಿರ್ದೆಯಲ್ಲಾ !*
*ಭೇದಕರಿಗೆ ಅಭೇದ್ಯನಾಗಿ*
*ನಿನ್ನ ನೀನೇ ಬೆಳಗುತ್ತಿರ್ದೆಯಲ್ಲಾ !*
*ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರ*

(ಕಂದ = ''ಹೃದಯಕಂದದ ಮೇಲೆ ಹುಟ್ಟಿತ್ತು'')

೪. *ಹುಟ್ಟು ಬಂಜೆಯ ಮಗನೊಬ್ಬ*
*ಈನದೆಮ್ಮೆಯ ಗಿಣ್ಣ ಬೇಡಿದನು !*
*ಕೊಂಬಿಲ್ಲದ ಮರನನೇರಿ*
*ಹೊಟ್ಟೆ ತುಂಬ ಹಣ್ಣ ಮೆಲಿದನು !*
*ಗೊಗೇಶ್ವರ, ಗೊಗೇಶ್ವರ*
*ಇಳಿ ಇಳಿ ಎಂದರೆ ಅಳುತ್ತೈದಾನೆ.*

(ಕೊಂಬು = ''ಅಂಗದ ಕೊನೆಯ ಮೇಲಣ ಕೋಡಗ ಕೊಂಬು ಕೊಂಬಿಂಗೆ ಹಾರಿತ್ತು'')

೫. *ತಮ್ಮ ತಾವರಿಯರು*
*ಹೇಳಿದರೂ ಕೇಳರು*
*ಆರರ ಹೊಲಬನೇನೆಂದರಿಯರು*
*ಎಂಟರ ಕಂಟಕವ ಮುನ್ನರಿಯರು*
*ಏರಿದ ಬೆಟ್ಟವನಿಳಿಯಲರಿಯದವರನೇನೆಂಬೆ*
*ಗುಹೇಶ್ವರ ?*

(ತಾವು = ೧. ಸರ್ವನಾಮ ೨. ಸ್ಥಳ)

ಕೊನೆಯದಾಗಿ, ಅಲ್ಲಮನ ವಚನಗಳಲ್ಲಿ ಕಂಡುಬರುವ ವಿಷಯರಾಹಿತ್ಯ ಅಥವಾ ಉಪಮೇಯದ ಗೈರುಹಾಜರಿ ತುಂಬಾ ವಿಶಿಷ್ಟವಾಗಿದೆಯೆಂಬುದನ್ನು ನಿರಾಕರಿಸಲಾಗದು. ಸಾಮಾನ್ಯವಾಗಿ ಕವಿಗಳೆನಿಸಿಕೊಂಡವರು ಪಗಡೆಯಾಟದಲ್ಲಿ ಮುಳುಗಿದ ಜೂದಾಳಿಗಳಂತೆ ಯಾವುದಾದರೊಂದು 'ವಿಷಯ'ವನ್ನು ಪಣವಾಗಿಟ್ಟುಕೊಂಡು ಆಡುವ ರೀತಿಗೆ ಒಗ್ಗಿಹೋಗಿರುತ್ತಾರೆ. ಆದರೆ, ಅಲ್ಲಮನಿಗೆ 'ಅಂತ'ವಾಗಿ ಬಿಡುವ ನಿರ್ದಿಷ್ಟ ವಿಷಯಗಳಿಲ್ಲವೇ ಇಲ್ಲ. ವಿಷಯಗಳಿಗೆ ಬದಲು 'ಜ್ಞೇಯ'ಗಳ ಮೂಲಕವೇ ಮಾತನಾಡುವ ಅಲ್ಲಮನ ನಿಃಶಬ್ದವು ಬಹುಳಾರ್ಥಗರ್ಭಿತವಾಗಿದೆ; ಅನಂತ ತಾನನಂತವಾಗಿದೆ :

*ಹಿಡಿವ ಕೈಯ ಮೇಲೆ ಕತ್ತಲೆಯಯ್ಯ !*
*ನೋಡುವ ಕಂಗಳ ಮೇಲೆ ಕತ್ತಲೆಯಯ್ಯ !*
*ನೆನೆವ ಮನದ ಮೇಲೆ ಕತ್ತಲೆಯಯ್ಯ !*
*ಕತ್ತಲೆಯೆಂಬುದು ಇತ್ತಲೆಯಯ್ಯ !*
*ಗುಹೇಶ್ವರನೆಂಬುದು ಅತ್ತಲೆಯಯ್ಯ !*

ಮೇಲಿನ ವಚನದಲ್ಲಿ ಹಿಡಿವ, ನೋಡುವ, ನೆನೆವ ಎಂಬ ವಿವಿಧ ಕ್ರಿಯಾ ಸಾಧ್ಯತೆಗಳಿವೆಯೇ ಹೊರತು ಕಾರಣ ಸಾಮಗ್ರಿ ಅಥವಾ ಸಾಧನ-ಸಲಕರಣೆಗಳ ಪ್ರಸ್ತಾಪವೇ ಇಲ್ಲ. ಕೈಯಲ್ಲಿ ಹಿಡಿದಿರುವುದೇನು ? ಕಂಗಳಲ್ಲಿ ನೋಡುತ್ತಿರುವುದೇನು ? ಮನದಲ್ಲಿ ನೆನೆವುತ್ತಿರುವುದೇನು ? - ಎಂಬ ಪ್ರಶ್ನೆಗೆ ಈ ನಿಃಶಬ್ದ ವಚನದಲ್ಲಿ ಉತ್ತರವಿಲ್ಲ. ಕೈಯಲ್ಲಿ ಹಿಡಿದಿರುವುದು : ಇಷ್ಟಲಿಂಗ, ಧರ್ಮಗ್ರಂಥ, ಪಠ್ಯಪುಸ್ತಕ, ನಿಯತಕಾಲಿಕೆ, ಕಾನೂನು, ಅಧಿಕಾರ, ವಿಧ್ವಂಸಕ ಸ್ವಿಚ್ಚುಗಳು, ಈಸಿ ಮೌಸ್, ಇಸ್ಪೀಟು, ಸಿಗರೇಟು, ಪ್ಯಾಕೆಟುಗಳು ಹೀಗೆ ಏನು ಬೇಕಾದರೂ ಆಗಬಹುದು. ಹೀಗೆ ಪರಿಭಾವಿಸುತ್ತಾ ಸಾಗಿದರೆ ನೋಡುವ ಕಂಗಳ ಮೇಲೆ, ನೆನೆವ ಮನದ ಮೇಲೆ ದಬ್ಬಾಳಿಕೆ ನಡೆಸುತ್ತಿರುವ ಪಟ್ಟಭದ್ರ ಹಿತಾಸಕ್ತಿಗಳು, ಯಜಮಾನ ಸಂಸ್ಕೃತಿಯ ಉತ್ಪಾದನೆಗಳು, ವಿದ್ಯುನ್ಮಾನ ಮಾಧ್ಯಮಗಳು, ವಿಶ್ವವಸಾಹತುಶಾಹಿಯ ಹುನ್ನಾರಗಳು ಕತ್ತಲೆಯಂತೆ ಸರ್ವವ್ಯಾಪಿಯಾಗುತ್ತಿರುವ ವಿರಾಟ್ ಸ್ವರೂಪವೊಂದು ಗೋಚರವಾಗುವುದಲ್ಲದೆ, ಗುಹೇಶ್ವರನು ಹೇಗೋ ಹಾಗೆ ನಿಜದುದಯದ ಪರಿ ಬೇರೆಂಬುದೂ ಅರಿವಾಗುತ್ತದೆ.

ಎ. ಚಂದ್ರಶೇಖರ ನಂಗಲಿ
೩೮೮೪, ಪಿ.ಸಿ ಬಡಾವಣೆ, ಕೋಲಾರ - ೫೬೩೧೦೧

# ದಿವಾನ್ ಪೂರ್ಣಯ್ಯ ಪುನರಾವಲೋಕನ

ಡಾ॥ ಸಿದ್ಧಲಿಂಗಸ್ವಾಮಿ

*ಮೈಸೂರಿನಲ್ಲಿ ಬಹುಕಾಲ ಪೂರ್ಣಯ್ಯನ ಛತ್ರವೆಂದು ಒಂದಿತ್ತು. ಬೆಂಗಳೂರಲ್ಲಿ ಆತನ ವಂಶಸ್ಥರ ಭಾರಿ ಬಂಗಲೆಗಳು ಈಗಲೂ ಇವೆ. ಎಲ್ಲ ದಿವಾನರನ್ನೂ ಶ್ಲಾಘಿಸಿ ಬರೆಯುವುದು ನಮ್ಮ ಮೈಸೂರು ಚರಿತ್ರೆಯ ಪಠ್ಯಪುಸ್ತಕಗಳ ಕ್ರಮ. ಪೂರ್ಣಯ್ಯನವರೆಂದರೆ ಇನ್ನೂ ಸ್ವಲ್ಪ ಹೆಚ್ಚಿನ ಆದರ. ಆತನೊಬ್ಬ ಪವಾಡ ಪುರುಷನೋ ಎಂಬಂತೆ ಚಿತ್ರಣ ನೀಡುವ ಪ್ರಸಂಗಗಳೂ ಇವೆ. ವಾಸ್ತವಿಕವಾಗಿ ಆತ ಎಂಥವನು, ಆತನ ಆಡಳಿತ ವ್ಯವಸ್ಥೆಯ ನೀತಿಗಳೇನಾಗಿದ್ದುವು, ಆತನ ಹಾಗೂ ಬ್ರಿಟಿಷ್ ವಸಾಹತು ಆಡಳಿತದ ನಡುವೆ ಎಂತಹ ಸಂಬಂಧವಿದ್ದಿತು, ಎಂಬಿತ್ಯಾದಿ ಪ್ರಶ್ನೆಗಳನ್ನು ಐತಿಹಾಸಿಕ ದಾಖಲೆಗಳ ಆಧಾರದ ಮೇಲೆ ಉತ್ತರಿಸುವ ಯತ್ನ ಸಮಗ್ರವಾಗಿ ನಡೆದದ್ದು ಮಾತ್ರ ಈಚಿನ ದಶಕಗಳಲ್ಲೇ. ೧೭೯೯ರಿಂದ ೧೮೩೧ರವರೆಗಿನ ಅವಧಿಯಲ್ಲಿ ಮೈಸೂರು ರಾಜ್ಯದಲ್ಲಿ ಕೃಷಿಕ್ಷೇತ್ರದ ಸಂಬಂಧಗಳನ್ನು ಆಳವಾಗಿ ಅಭ್ಯಾಸ ಮಾಡಿರುವ ಡಾ॥ ಸಿದ್ಧಲಿಂಗಸ್ವಾಮಿಯವರು ತಮ್ಮ ಪಿಎಚ್.ಡಿ. ಪ್ರೌಢಪ್ರಬಂಧದಲ್ಲಿ ಪೂರ್ಣಯ್ಯನವರ ಕಾಲಾವಧಿಗೆ ಒಂದು ಅಧ್ಯಾಯವನ್ನು ಮೀಸಲಾಗಿಟ್ಟಿದ್ದಾರೆ. ಅವರ ವಸ್ತುನಿಷ್ಠ ವಿಶ್ಲೇಷಣೆಯನ್ನು ಪ್ರಸ್ತುತ ಲೇಖನದಲ್ಲಿ ಕಾಣಬಹುದು.*

ಹಳೆಯ ಮೈಸೂರು ರಾಜ್ಯದ ಇತಿಹಾಸದಲ್ಲಿ ದಿವಾನರಿಗೆ ಮಹತ್ವದ ಸ್ಥಾನವಿದೆ. ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ಎಂ. ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್‌ರಂತಹ ದಕ್ಷ ಆಡಳಿತಗಾರರಿಂದಾಗಿ ಆಗಿನ ಕಾಲಕ್ಕೆ ಮೈಸೂರು ರಾಜ್ಯವು ಪ್ರಗತಿ ಹೊಂದಿದ ರಾಜ್ಯವಾಗಿತ್ತು. ದಿವಾನರ ಹುದ್ದೆ ಸರ್ಕಾರದ ಆಡಳಿತ ವ್ಯವಸ್ಥೆಯಲ್ಲಿ ಮಹತ್ವವನ್ನು ಪಡೆದಿದ್ದು ದಿವಾನ್ ಪೂರ್ಣಯ್ಯನವರ ಕಾಲದಿಂದ. ಪೂರ್ಣಯ್ಯನವರು ದಿವಾನರಾಗಿ ನಡೆಸಿದ ೧೧ ವರ್ಷದ ನಿರಂಕುಶ ಆಡಳಿತ ಮೈಸೂರು ರಾಜ್ಯದ ಜನರ ಮನಸ್ಸಿನಿಂದ ೨೦೦ ವರ್ಷಗಳಾದರೂ ಪೂರ್ತಿ ಮರೆಯಾಗಿಲ್ಲವೆಂಬುದೇ ಪೂರ್ಣಯ್ಯನವರ ವಿಶೇಷ. ಅವರ ವ್ಯಕ್ತಿತ್ವ ಹಾಗೂ ಆಡಳಿತ ಶೈಲಿಯನ್ನು ವಿಭಿನ್ನ ದೃಷ್ಟಿಗಳಿಂದ ಅರ್ಥೈಸಲಾಗಿದೆ. ಐತಿಹಾಸಿಕ ದಾಖಲೆಗಳನ್ನು ಆಧರಿಸಿ ಒಂದು ಪುನರಾವಲೋಕನವನ್ನು ಮಾಡುವ ಅಗತ್ಯವಿದೆ.

ಪೂರ್ಣಯ್ಯನವರು ಕ್ರಿ.ಶ. ೧೭೪೬ ರಲ್ಲಿ ಕೊಯಮತ್ತೂರಿನ ಸಂಪ್ರದಾಯಸ್ಥ ಮಾಧ್ವ ಬ್ರಾಹ್ಮಣ ಮನೆತನದಲ್ಲಿ ಜನಿಸಿದರು. ಪೂರ್ಣಯ್ಯ ಬಾಲ್ಯದಿಂದಲೇ ಬುದ್ಧಿವಂತ ಮತ್ತು ಅವರಿಗಿದ್ದ ಅಪಾರ ಸ್ಮರಣ ಶಕ್ತಿಯಿಂದಾಗಿ ಅನ್ನದಾನ ಶೆಟ್ಟಿ ಎಂಬ ವರ್ತಕನ ಮೂಲಕ ಹೈದರಾಲಿಯ ಆಸ್ಥಾನದಲ್ಲಿ ಗುಮಾಸ್ತ ಹುದ್ದೆಯನ್ನು ಪಡೆದರು. ತದನಂತರ ಹಂತ ಹಂತವಾಗಿ ಆಡಳಿತದಲ್ಲಿ ಮೇಲೇರಿ ಹೈದರಾಲಿಯ ಹಣಕಾಸು ಮಂತ್ರಿಯಾದರು. [illegible] ಜಹಗೀರು ಪಡೆದಿದ್ದರು. ಹೀಗೆ ಹೈದರಾಲಿ ಮತ್ತು [illegible] ಕಾಲದಲ್ಲಿಯೂ

ಪೂರ್ಣಯ್ಯನವರು ಆಡಳಿತದ ಮೇಲೆ ಹಿಡಿತ ಹೊಂದಿ ರಾಜ್ಯದ ಬಗ್ಗೆ ಅರಿವು ಹೊಂದಿದ್ದರು. ೪ನೇ ಮೈಸೂರು ಯುದ್ಧದಲ್ಲಿ ಟಿಪ್ಪು ಸೋತಾಗ ಬ್ರಿಟಿಷರು ಮೈಸೂರು ರಾಜ್ಯವನ್ನು ಪೂರ್ತಿಯಾಗಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳದೆ ಒಂದು ಸಣ್ಣ ರಾಜ್ಯವಾಗಿ ಮೈಸೂರಿನ ಅರಸು ಮನೆತನಕ್ಕೆ ಬಿಟ್ಟುಕೊಡಲು ನಿರ್ಧರಿಸಿದ್ದು ಸಹ ಅವರ ರಾಜತಾಂತ್ರಿಕ ನೀತಿಯ ಭಾಗವೇ ಆಗಿತ್ತು; ಏಕೆಂದರೆ ಮೈಸೂರು ಅರಸು ಮನೆತನಕ್ಕೆ ಸಾಮಾನ್ಯ ಜನರು ಆದರಾಭಿಮಾನ ತೋರಿಸುತ್ತಿದ್ದರು. ಹೀಗಾಗಿ ಜನರ ಭಾವನೆಗಳ ನಾಡಿಮಿಡಿತ ಹಿಡಿದ ಬ್ರಿಟಿಷರು ಒಂದು ಕಡೆ ೫ ವರ್ಷದ ರಾಜಕುಮಾರ ಮುಮ್ಮಡಿ ಕೃಷ್ಣರಾಜ ಒಡೆಯರ್‌ಗೆ ಪಟ್ಟ ಕಟ್ಟಿದರು. ತಮ್ಮ ನೀತಿಗೆ ಅನುಗುಣವಾಗಿ ಮೈಸೂರು ರಾಜ್ಯದಿಂದ ಬರಬೇಕಾದ ಆದಾಯವನ್ನು ನಿಷ್ಠೆಯಿಂದ ತಂದುಕೊಡುವ ಯಾವುದೇ ಕಾರಣಕ್ಕೂ ಮುಂದೆ ತಮಗೆ ತಲೆನೋವಾಗದಂತಹ ಒರ್ವ ನಿಷ್ಠಾವಂತ ಆಡಳಿತಗಾರ ಬ್ರಿಟಿಷರಿಗೆ ಬೇಕಾಗಿತ್ತು. ಇಂತಹ ಸಮಯದಲ್ಲಿ ಲಾರ್ಡ್ ವೆಲ್ಲೆಸ್ಲಿಯ ದೃಷ್ಟಿಗೆ ಬಿದ್ದಿದ್ದು ಪೂರ್ಣಯ್ಯನವರೇ. ಮೈಸೂರಿನ ದಿವಾನಗಿರಿಗೆ ಅವರನ್ನೇ ತಕ್ಕವರೆಂದು ಗುರುತಿಸಿ ನೇಮಿಸಲು ಶಿಫಾರಸ್ಸು ಮಾಡಿದ್ದು ಆತನೇ. ಟಿಪ್ಪುವಿನ ಆಡಳಿತದಲ್ಲಿ ಪ್ರಧಾನಿಯಾಗಿದ್ದ ಮೀರ್ ಸಾದಕನ ನಂತರದ ಸ್ಥಾನ ಪೂರ್ಣಯ್ಯನವರದಾಗಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರ ಮೊದಲ ೧೨ ವರ್ಷಗಳ ಅವಧಿಯಲ್ಲಿ ದಿವಾನರಾಗಿ ಹಾಗೂ ರಾಜಪ್ರತಿನಿಧಿಯಾಗಿ ಆಡಳಿತ ಚುಕ್ಕಾಣಿ ಹಿಡಿದ ಅವರಿಗೆ ಕರ್ನಲ್ ಕ್ಲೋಸ್ ಮೊದಲ್ಗೊಂಡು ಸತತವಾಗಿ ಬ್ರಿಟಿಷ್ ರೆಸಿಡೆಂಟರುಗಳ ಮಾರ್ಗದರ್ಶನ ದೊರೆತಿತ್ತು.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ಕರ್ನಲ್ ಕ್ಲೋಸ್‌ಗೆ ಈ ರೀತಿ ನಿರ್ದೇಶನ ನೀಡಿತು: "ದಿವಾನರ ಆಡಳಿತವನ್ನು ಅತ್ಯಂತ ಜಾಗ್ರತವಾಗಿ ನೋಡಬೇಕು ಹಾಗೂ ಬ್ರಿಟಿಷರಿಗೆ ಬರಬೇಕಾದ ಪೊಗದಿ (೨೪ ಲಕ್ಷಗಳು) ಅಡೆತಡೆಯಿಲ್ಲದೆ ಬರಬೇಕು." ಈ ಪ್ರದೇಶದ ಸಂಪನ್ಮೂಲಗಳನ್ನು ಹೆಚ್ಚಿಸಿ, ಕಂಪನಿಯ ನೇರ ಆಡಳಿತವಿಲ್ಲದೆಯೇ ಸರ್ಕಾರದ ಆದಾಯ ಹೆಚ್ಚಿಸಲು ಗಮನ ನೀಡುವುದು ಕಂಪನಿಯ ಉದ್ದೇಶವಾಗಿತ್ತು.

ಬ್ರಿಟಿಷರ ಶಹಭಾಸ್‌ಗಿರಿ ಪಡೆಯುವ ಸಲುವಾಗಿ ಪೂರ್ಣಯ್ಯನವರು ಈ ನಿರ್ದೇಶನಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದರು. ಮೈಸೂರು ಕಮಿಷನ್‌ನ ಶಿಫಾರಸ್ಸಿನಂತೆ ಪೂರ್ಣಯ್ಯನವರಿಗೆ ರಾಜ್ಯ ಆದಾಯದಲ್ಲಿ ಶೇ. ೦.೫ ಕಮಿಷನ್ ಅಲ್ಲದೆ ತಿಂಗಳಿಗೆ ೫೦೦ ಕಂಠೀರಾಯಪಗೋಡಗಳನ್ನು (ಚಿನ್ನದ ನಾಣ್ಯಗಳು) ವೇತನವಾಗಿ ಗೊತ್ತುಪಡಿಸಲಾಯಿತು (ಒಂದು ಕಂ.ಪ. = ಮೂರೂವರೆ ರೂಪಾಯಿಗಳು).

ದಿವಾನರಾಗಿ ಅಧಿಕಾರ ವಹಿಸಿಕೊಂಡ ನಂತರ ಪೂರ್ಣಯ್ಯ ಸರ್ಕಾರವನ್ನು ಪುನರ್‌ರಚಿಸಿದರು. ಆಡಳಿತಕ್ಕೆ ಕಂಟಕಪ್ರಾಯರಾಗಿದ್ದ ಪಾಳೆಗಾರರನ್ನು ಸದೆಬಡಿಯುವುದು ಹಾಗೂ ಪಟೇಲರುಗಳ ಪ್ರಭಾವವನ್ನು ಮೊಟಕುಗೊಳಿಸುವುದು ಇವರ ಆದ್ಯ ಕೆಲಸವಾಯಿತು. ಮಹಾರಾಜರಿಗೆ ತಲುಪಬೇಕಾದ ಕಂದಾಯ, ಕಾಣಿಕೆ, ಕಪ್ಪ ಇತ್ಯಾದಿಗಳನ್ನು ಇವರ ಮೂಲಕವೇ ಸಲ್ಲಿಸುತ್ತಿದ್ದುದರಿಂದ ಆಡಳಿತ ವ್ಯವಸ್ಥೆಯೊಳಗೆ ಪಟೇಲ ಮತ್ತು ಪಾಳೇಗಾರರು ಮಹಾರಾಜರ ಆಡಳಿತ ಕೊಂಡಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು.

ಟಿಪ್ಪು ಮತ್ತು ಹೈದರಾಲಿ ರಾಜ್ಯದಲ್ಲಿನ ಪಾಳೆಯಗಾರರನ್ನು ಅಡಗಿಸಿ ಬಲಾಢ್ಯರಾಗಿದ್ದರು. ಇದರಿಂದ ಹಳ್ಳಿಗಾಡಿನ ಉತ್ಪನ್ನದ ಮಿಗುತಾಯವನ್ನು ರಾಜ್ಯದ ಯಂತ್ರದ ಬಲಪಡಿಸುವಿಕೆಗೆ ಬಳಸಲಾಯಿತು. ಈ ಪಾಳೇಗಾರರು ತಮ್ಮ ಸ್ಥಳೀಯ ಶಕ್ತಿಯನ್ನು ಪ್ರದರ್ಶಿಸಲು ಸಮಯ ಕಾಯುತ್ತಿದ್ದರು. ಟಿಪ್ಪುವಿನ ಮೇಲೆ ಬ್ರಿಟಿಷರು ಧಾಳಿ ಮಾಡಿದಾಗ ಇವರು ದಂಗೆಯೇಳಲು ಸಾಧ್ಯವಾಯಿತು. ಇಂತಹ ಪಾಳೇಗಾರರ ದಂಗೆಯನ್ನು ಬ್ರಿಟಿಷರು ಪ್ರೋತ್ಸಾಹಿಸಿದರು. ಟಿಪ್ಪುವಿನ ಮರಣಾನಂತರ ತಮ್ಮ ಜಹಗೀರುಗಳನ್ನು ಮರಳಿ ಪಡೆಯಲು ಪಾಳೇಗಾರರು ಯತ್ನಿಸಿದರು. ಇದರಿಂದಾಗಿ ಪೂರ್ಣಯ್ಯನವರಿಗೆ ಈ ಪರಿಸ್ಥಿತಿಯಿಂದ ಎಚ್ಚೆತ್ತು ಅಧಿಕಾರವನ್ನು ಕೇಂದ್ರೀಕರಿಸಿಕೊಳ್ಳಲು ಸಾಧ್ಯವಾಯಿತು. ಈ ಸಂದರ್ಭದಲ್ಲಿ ಅಧಿಕಾರವನ್ನು ಬಿಗಿಗೊಳಿಸಿದರು. ಕಂದಾಚಾರ ವ್ಯವಸ್ಥೆ ಮೂಲಕ ಪೊಲೀಸ್ ವ್ಯವಸ್ಥೆಯನ್ನು ಬಲಪಡಿಸಿದರು. ಈ ಕಂದಾಚಾರ ಪೊಲೀಸರು ಬೇಡ ಜನಾಂಗದವರಾಗಿದ್ದು, ತಲೆಮಾರುಗಳಿಂದ ಯುದ್ಧ ಕಾರ್ಯಗಳಲ್ಲಿ ತೊಡಗಿಸಿಕೊಂಡ ಬುಡಕಟ್ಟು

ಜನರಾಗಿದ್ದರು.

ಪೂರ್ಣಯ್ಯನವರು ಆಡಳಿತದ ಮೊದಲ ವರ್ಷದಲ್ಲಿ ಇಪ್ಪತ್ತು ಸಾವಿರ ಇಂತಹ ಸೈನಿಕರನ್ನು ನೇಮಿಸಿ ಅವರಿಗೆ ಅರ್ಧ ಸಂಬಳವನ್ನು ನಗದಾಗಿ ಮತ್ತು ಉಳಿದರ್ಧವನ್ನು ಉಂಬಳಿ ಜಮೀನು ನೀಡುವುದರ ಮೂಲಕ ಕೊಟ್ಟು ಅವರ ಸೇವೆಯನ್ನು ಪಡೆದುಕೊಂಡರು. ಅವರ ಸಂಬಳ ತಿಂಗಳಿಗೆ ೨-೩ ರೂಪಾಯಿಗಳೆಂದು ನಿಗದಿಮಾಡಿದ್ದರು. ಈ ರೀತಿ ಮಾಡಿದುದರಿಂದ ಅವರನ್ನು ಪಾಳೇಗಾರರ ಜತೆ ಸೇರುವುದು ತಪ್ಪಿಸಿ ಸರ್ಕಾರಕ್ಕೆ ವಿಧೇಯರನ್ನಾಗಿ ಮಾಡಲು ಸಾಧ್ಯವಾಯಿತು.

ವ್ಯವಸ್ಥೆಯ ವಿರುದ್ಧ ಬಂಡೆದ್ದ ಪಾಳೇಗಾರ-ಪಟೇಲರನ್ನು ಗುರುತಿಸಿ, ಅವರು ಹಕ್ಕು ಸ್ಥಾಪಿಸಿ ಕೇಳಿದ ಪ್ರದೇಶಗಳನ್ನು ನೀಡದೆ ನಿಯಂತ್ರಿಸಲಾಯಿತು. ಟಿಪ್ಪುವಿನ ಮರಣಾನಂತರ ಉಂಟಾದ (ಕ್ರಿ. ಶ. ೪-೫-೧೭೯೯ರಲ್ಲಿ) ಪ್ರಕ್ಷೋಭೆಯಲ್ಲಿ ಪ್ರಭಾವಿ ಪಾಳೇಗಾರರು ಹಾಗೂ ಅವರ ಬಂಧುಗಳನ್ನು ಸಾರ್ವತ್ರಿಕವಾಗಿ ಹತ್ಯೆ ಮಾಡಲಾಯಿತು. ಉಳಿದ ಪಾಳೇಪಟ್ಟುಗಳನ್ನು ಸರ್ಕಾರದ ನೇರ ಹತೋಟಿಗೆ ತರಲಾಯಿತು. ಹಲವಾರು ಕಟ್ಟಾ ಭಿನ್ನಮತೀಯರನ್ನು ಜೈಲಿನಲ್ಲಿಟ್ಟು ಶಿಕ್ಷಿಸಲಾಯಿತು. ಕೆಲವರು ಸರ್ಕಾರ ನೀಡಿದ ವಿಶ್ರಾಂತಿ ವೇತನ ಸವಲತ್ತುಗಳನ್ನು ಪಡೆದು ಮೈಸೂರಿನಲ್ಲಿ ನೆಲೆಸಲು ಒಪ್ಪಿಕೊಂಡರು. ದಿವಾನರು ಪ್ರವಾಸ ಹೋದಾಗ ಈ ಪಾಳೇಗಾರರು ಅವರನ್ನು ಹಿಂಬಾಲಿಸ ಬೇಕಾಗಿತ್ತು. ಆದರೂ ಸಹ ಬಲಂನ ವೆಂಕಟಾದ್ರಿನಾಯಕ ಸ್ವತಂತ್ರವಾಗಿರಲು ಬಯಸಿದ. ಬ್ರಿಟಿಷ್ ಸೈನ್ಯ ಅವನ ಮೇಲೆ ಧಾಳಿ ಮಾಡಿ ಅವನನ್ನು ಬಂಧಿಸಿ ನೇಣುಹಾಕಿತು. ವೆಂಕಟಾದ್ರಿನಾಯಕನನ್ನು ಯುದ್ಧ ಖೈದಿಯನ್ನಾಗಿ ಇಡಬೇಕೆಂಬುದು ಕರ್ನಲ್ ವೆಲ್ಲೆಸ್ಲಿ ಬಯಕೆ ಯಾಗಿತ್ತು. ಆದರೆ ಜನರ ಪ್ರತಿಭಟನೆ ಪ್ರವೃತ್ತಿಯನ್ನು ಚಿವುಟಿ ಹಾಕಲು ವೆಂಕಟಾದ್ರಿ ನಾಯಕನನ್ನು ನೇಣು ಹಾಕಲು ಪೂರ್ಣಯ್ಯ ಒತ್ತಾಯಿಸಿದರು. ಇದರಿಂದಾಗಿ ಜನರು ಪಾಠ ಕಲಿಯುತ್ತಾರೆ ಎಂಬುದು ಪೂರ್ಣಯ್ಯನವರ ನಿರಂಕುಶ ಅಭಿಪ್ರಾಯವಾಗಿತ್ತು.

**ಇನಾಮು ವಿಸ್ತರಣೆ**

ಬ್ರಿಟಿಷರು ಪೂರ್ಣಯ್ಯನವರಿಗೆ ನೀಡಿದ ನಿರ್ದೇಶನದಲ್ಲಿ ಬ್ರಾಹ್ಮಣರಿಗೆ ಮತ್ತು ದೇವಸ್ಥಾನಗಳಿಗೆ ಇನಾಂ(ಬಿಟ್ಟಿ) ಜಮೀನು ಕೊಡುವುದನ್ನು ನಿಲ್ಲಿಸಬೇಕೆಂದು ಹೇಳಿದ್ದರು. ಇಂತಹ ಜಮೀನುಗಳು ಹೈದರಾಲಿಗಿಂತ ಹಿಂದೆ ಇದ್ದ ಇನಾಮುಗಳಿಗಿಂತ ಕಡಿಮೆ ಇದ್ದರೂ ಸಹ ಪ್ರಾಂತ್ಯಕ್ಕೆ ಹೋಲಿಸಿದರೆ ಹೆಚ್ಚಾಗಿಯೇ ಇದ್ದವು. ಬ್ರಾಹ್ಮಣರ ಅಧಿಕಾರ ಅವಧಿಯಲ್ಲಿ ಈ ರೀತಿ ಇನಾಮುಗಳನ್ನು ಬ್ರಾಹ್ಮಣರಿಗೆ ನೀಡುವುದು ಸಂಭವನೀಯವಾಗಿದ್ದುದರಿಂದ ಈ ಇನಾಮುಗಳನ್ನು ವಿಸ್ತರಿಸಕೂಡದೆಂದು ಗೌವರ್ನರ್ ಜನರಲ್‌ನು ಸ್ಪಷ್ಟ ನಿರ್ದೇಶನವನ್ನು ರೆಸಿಡೆಂಟರಿಗೆ ಕೊಟ್ಟಿದ್ದನು.

ದಿವಾನರಾಗಿ ಪೂರ್ಣಯ್ಯ ಅಧಿಕಾರ ವಹಿಸಿಕೊಂಡ ನಂತರ ಎಲ್ಲಾ ರೀತಿಯ ಇನಾಮುಗಳನ್ನು ಪರಿಶೀಲಿಸುವುದಾಗಿ ಹೇಳಿ ದತ್ತಿಗಳನ್ನು ಹಿಂತೆಗೆದುಕೊಂಡರು. ಈ ರೀತಿ ಹೈದರಾಲಿಯಿಂದ ಕೊಡಲ್ಪಟ್ಟಿದ್ದ ಇನಾಮುಗಳ ಮೊತ್ತ ೨,೩೩,೯೫೪ ಕಪಗಳೆಂದು ಪೂರ್ಣಯ್ಯ ಹೇಳಿದರು. ಇನಾಮುಗಳನ್ನು ಪರಿಶೀಲಿಸುವ ನೆಪದಲ್ಲಿ ಇನಾಮು ಜಮೀನುಗಳ ಬದಲಾಗಿ ಹಣ ರೂಪದ ಇನಾಮುಗಳನ್ನು ನೀಡಿದರು. ಅಲ್ಲದೆ ಇನ್ನೂ ಹಲವು ಇನಾಮು, ಜಹಗೀರು ಹಾಗೂ ಅಗ್ರಹಾರಗಳನ್ನು ಸ್ಥಾಪಿಸಿದರು. ಸುಮಾರು ೬೨೬ ಬ್ರಾಹ್ಮಣರಿಗೆ ೯೫೩ ಕಪ ಆದಾಯವಿರುವ ಜಮೀನು ಹಾಗೂ ೨೭೫೦ ಕಫ ಹಣ ರೂಪದ ಇನಾಮು



ನೀಡಿದರು. ಶೃಂಗೇರಿ ಮಠವೂ ಸೇರಿದಂತೆ ಇತರ ಹನ್ನೆರಡು ಜನರಿಗೆ ೪೮೧೦ ಕಪ ಹಣ ಹಾಗೂ ೧೦೩೮೦ ಮೌಲ್ಯದ ಜಮೀನುಗಳನ್ನು ನೀಡಲಾಯಿತು. ಶಿವಮೊಗ್ಗ ಜಿಲ್ಲೆಯ ನಗರದಲ್ಲಿ ಹೈದರಾಲಿಯ ಕಾಲದಲ್ಲಿ ಅಗ್ರಹಾರಗಳ ಮೇಲೆ ವಿಧಿಸಿದ್ದ ತೆರಿಗೆ ಪಟ್ಟಿಯನ್ನು ಇಳಿಸಿದರು.

**ರೆವಿನ್ಯೂ ಆಡಳಿತ**

ಪೂರ್ಣಯ್ಯನವರ ರೆವಿನ್ಯೂ ಆಡಳಿತದಲ್ಲಿ ಮೂರು ಪ್ರಮುಖರಿದ್ದರು. ಸುಭಾದಾರರು ಹಾಗೂ ಜಿಲ್ಲೆಗಳಲ್ಲಿ ಅಮೀಲರು ಇದ್ದರು. ಅವರಿಗೆ ಸಾಕಾಗುವಷ್ಟು ಸಂಬಳವನ್ನು ನಿಗದಿಮಾಡಲಾಯಿತು. ವಿವಿಧ ಹಂತಗಳಲ್ಲಿ ರೆವಿನ್ಯೂ ವಸೂಲಾತಿಗಾಗಿ ಸುಮಾರು ಹತ್ತು ಸಾವಿರ ಜನರನ್ನು ನೇಮಿಸಿಕೊಳ್ಳಲಾಯಿತು. ರಾಜ್ಯಾದಾಯದ ಶೇ. ೯೦ ರಷ್ಟಿದ್ದ ಭೂ ಕಂದಾಯವನ್ನು ಸಂಗ್ರಹಿಸಲು ಗಮನ ನೀಡಿದರು. ಹಳೆಯ ತೆರಿಗೆಗಳನ್ನು ಪುನರ್‌ಸ್ಥಾಪಿಸಿ ಕೆಲವು ಹಳೇ ಬಾಕಿಗಳನ್ನು ಮನ್ನಾ ಮಾಡಿದರು. ಹೊಸ ಸರ್ಕಾರದ ಬಗ್ಗೆ ಜನರಿಗೆ ನಂಬಿಕೆ ತರಲು ಈ ರೀತಿ ಕ್ರಮಗಳನ್ನು ಕೈಗೊಂಡರು. ವಾಸ್ತವವಾಗಿ ಈ ಇಳಿಕೆಯು ನೈಜವಾಗಿರಲಿಲ್ಲ. ಜನರ ದೂರುಗಳು ಬಂದಾಗ ಸ್ಥಳೀಯ ಅಧಿಕಾರಿಗಳಿಗೆ ನಿರ್ದೇಶನ ನೀಡಿ ಹಿಂದಿನ ೨-೩ ವರ್ಷಗಳಲ್ಲಿ ಇದ್ದುದಕ್ಕಿಂತ ಜಾಸ್ತಿ ವಸೂಲು ಮಾಡಬಾರದೆಂದು ಹೇಳಿದರು. ಆದರೆ ಈ ಆಜ್ಞೆ ಎಷ್ಟುಮಟ್ಟಿಗೆ ಜಾರಿಯಾಯಿತು ಎಂಬುದು ಸಂದೇಹಾಸ್ಪದವಾಗಿದೆ. ಚಿತ್ರದುರ್ಗದಲ್ಲಿ ಆ ಭಾಗದ ಪದ್ಧತಿಗನು ಗುಣವಾಗಿ ಕುಡು (ಕೊಳಗ) ಒಂದಕ್ಕೆ ವಿವಿಧ ದರಗಳಲ್ಲಿ ಭೂಕಂದಾಯ ವಿಧಿಸಿದರು. ಪಾಳೇಗಾರರ ಕಾಲಕ್ಕಿಂತಲೂ ಪೂರ್ಣಯ್ಯನವರ ಕಾಲದ ತೆರಿಗೆ ಕಠಿಣ ತೆರನಾಗಿತ್ತು. ಬಲಂನಲ್ಲಿ ತೆರಿಗೆ ವಸೂಲ್ಮಾಡುವಾಗ ಸೈನ್ಯವನ್ನು ಇಟ್ಟುಕೊಂಡೇ ವಸೂಲ್ಮಾಡಲಾಯಿತು. ಕೆಲವು ಕಡೆ ಕಂದಾಯವು ಡೋಲಾಯಮಾನವಾಗಿದ್ದುದರಿಂದ ಜಮೀನುದಾರರಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಪೂರ್ಣಯ್ಯ ಕಂದಾಯ ವಿಧಿಸಿದರು.

ಮಂಜರಾಬಾದಿನಲ್ಲಿ ಕಂದಾಯವನ್ನು ವಾರಾಹ ಶಿಸ್ತು ಎಂದು ಕರೆಯಲಾಗುತ್ತಿತ್ತು. ವಿಜಯನಗರ ಕಾಲದಿಂದಲೂ ಇಲ್ಲಿನ ಶಿಸ್ತನ್ನು ಬದಲಾಯಿಸಿರಲಿಲ್ಲ. ಹೈದರಾಲಿಯ ಕಾಲದಲ್ಲಿ ಈ ಶಿಸ್ತನ್ನು ದ್ವಿಗುಣಗೊಳಿಸಲಾಗಿತ್ತು. ಪೂರ್ಣಯ್ಯ ಇದನ್ನು ತ್ರಿಗುಣಗೊಳಿಸಿದರು. ಇದಲ್ಲದೆ ಅರಮನೆಯ ಅನುಕೂಲಕ್ಕಾಗಿ ಇಲ್ಲಿನ ಒಳ್ಳೆಯ ಜಮೀನುಗಳ ಮೇಲಿದ್ದ ನಗದು ತೆರಿಗೆಯನ್ನು ಧಾನ್ಯದ ತೆರಿಗೆಯನ್ನಾಗಿ ಪರಿವರ್ತಿಸಿದರು. ಆದರೆ ಉಳಿದ ಕಡೆ ತೆರಿಗೆಯನ್ನು ನಗದು ರೂಪದಲ್ಲೇ ವಿಧಿಸಲು ಪ್ರಾರಂಭಿಸಲಾಯಿತು. ತರೀ ಜಮೀನುಗಳ ರೈತರು ಸಾಮಾನ್ಯವಾಗಿ ಹಣ ರೂಪದಲ್ಲಿ ತೆರಿಗೆ ನೀಡುತ್ತಿದ್ದರು. ಇದು ಸಾಮಾನ್ಯವಾಗಿ ಉತ್ಪಾದನೆಯ ಮೂರನೆಯ ಒಂದು ಭಾಗವಾಗಿತ್ತು. ಖುಷ್ಕಿ ಜಮೀನುಗಳ ಉತ್ಪನ್ನದ ಅರ್ಧ ಭಾಗವನ್ನು ಧಾನ್ಯ ರೂಪದಲ್ಲಿ ತೆರಿಗೆಯಾಗಿ ನೀಡಬೇಕಾಗಿತ್ತು. ಆದರೆ ತೋಟಗಳ ಒಡೆಯರು ವಿಶೇಷವಾಗಿ ಹಣ ರೂಪದಲ್ಲಿ ತೆರಿಗೆ ನೀಡುತ್ತಿದ್ದರು. ಇದಲ್ಲದೆ ಕಾವೇರಿ ಜಲಾನಯನ ಪ್ರದೇಶದ ರೈತರು ಸಹ ಹಣ ರೂಪದಲ್ಲಿ ತೆರಿಗೆ ನೀಡಬೇಕಾಗಿತ್ತು. ಪೂರ್ಣಯ್ಯನವರು ಒಂದಿಷ್ಟು ಕೃಷಿ ಅಭಿವೃದ್ಧಿಗಾಗಿ ಕೆರೆ, ಸೇತುವೆ, ರಸ್ತೆಗಳನ್ನು ನಿರ್ಮಿಸಿದರು ಹಾಗೂ ದುರಸ್ತಿ ಮಾಡಿಸಿದರು. ಹೇಮಾವತಿಗೆ ಅಣೆಕಟ್ಟೊಂದನ್ನು ನಿರ್ಮಿಸಲಾಯಿತು. ಕೆಲವು ಪಟ್ಟಣಗಳಲ್ಲಿ ಛತ್ರಗಳನ್ನು ಕಟ್ಟಿಸಿದರು.

**ಬಯಲಾದ ಸ್ವಾರ್ಥ**

ಕ್ರಿ.ಶ. ೧೮೦೯-೧೦ ರನಂತರ ಮಹಾರಾಜ ಮತ್ತು ದಿವಾನರ ನಡುವಿನ ಸಂಬಂಧ ಹದಗೆಟ್ಟಿದ್ದರಿಂದಾಗಿ ಕಂದಾಯ ವಸೂಲಿ ಕಾರ್ಯಗಳನ್ನು ನಿಧಾನ ಗೊಳಿಸಿದರು. ಈ ವೇಳೆಗೆ ಯುವರಾಜನು ತನ್ನ ಅಧಿಕಾರವನ್ನು ದೃಢಪಡಿಸಲು ಪ್ರಯತ್ನಿಸಿದನು.

ಕ್ರಿ. ಶ. ೧೮೧೧ರಲ್ಲಿ ಇವರಿಬ್ಬರ ನಡುವೆ ತೀವ್ರತರವಾದ ಭಿನ್ನಾಭಿಪ್ರಾಯ ಉಂಟಾಗಿ ಯುವರಾಜ ಅಧಿಕಾರವನ್ನು ಕಸಿದುಕೊಂಡನು. ಯುವರಾಜನು ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಆಸಕ್ತಿವಹಿಸಿದ್ದು ಪೂರ್ಣಯ್ಯನವರಿಗೆ ಸರಿಬೀಳಲಿಲ್ಲ. ಅಲ್ಲದೆ, ಪೂರ್ಣಯ್ಯ ಈ ರೀತಿ ಅಧಿಕಾರದಲ್ಲಿ ಪಾಲ್ಗೊಳ್ಳುವ ರಾಜನ ಪ್ರಯತ್ನಗಳಿಗೆ ನಿರಾಸೆ ಉಂಟುಮಾಡಿದನು.

ಇವರಿಬ್ಬರ ನಡುವಿನ ವೈಷಮ್ಯ ಉಲ್ಬಣಗೊಳ್ಳಲು ಪೂರ್ಣಯ್ಯನವರ ಉದ್ಧಟತನ ಕಾರಣವಾಯಿತು. ರೆಸಿಡೆಂಟರ ಸಮ್ಮುಖದಲ್ಲಿ ನಡೆದ ಸಭೆಯೊಂದರಲ್ಲಿ ಪೂರ್ಣಯ್ಯ ಮಹಾರಾಜರನ್ನು ಬಹಿರಂಗವಾಗಿ ಕಡೆಗಣಿಸಿದನು. ಚರ್ಚೆಯ ನಡುವೆ ತನ್ನ ದಿವಾನಗಿರಿ ಹುದ್ದೆಯು ವಂಶಪಾರಂಪರ್ಯವೆಂದು, ತಮ್ಮ ಮಗನಿಗೆ ಅಥವಾ ಸೋದರ ಸಂಬಂಧಿಗಳಿಗೆ ಅದನ್ನು ಕೊಡಬೇಕೆಂದು ಹೇಳಿದರು. ಅಲ್ಲದೆ ಒಂದು ವೇಳೆ ರಾಜನಿಗೆ ಪ್ರಾಂತ್ಯದ ಆಡಳಿತದಲ್ಲಿ ಅವಕಾಶ ಕೊಟ್ಟರೆ, ತಾನು ಬ್ರಿಟಿಷರ ಅವಕೃಪೆಗೆ ಈಡಾಗಬಹುದು ಎಂದು ಹೇಳಿದನು. ರಾಜನಿಗೆ ಖಜಾನೆ ಒಪ್ಪಿಸಿದಲ್ಲಿ ಬ್ರಿಟಿಷರಿಗೆ ಸರಿಬೀಳುವುದಿಲ್ಲವೆಂದು ಹಾಗೂ ಆ ಹಣಕ್ಕೆ ಅವನೊಬ್ಬನೆ ಜವಾಬ್ದಾರಿಯೆಂದು ಸಹ ಹೇಳಿದನು. ಪೂರ್ಣಯ್ಯನವರ ಈ ವರ್ತನೆ ರಾಜನನ್ನು ಬೇಕೆಂತಲೆ ಅಧಿಕಾರದಲ್ಲಿ ಪಾಲ್ಗೊಳ್ಳುವುದನ್ನು ತಡೆಗಟ್ಟುವುದಾಗಿತ್ತು. ಈ ರೀತಿ ಯುವರಾಜನನ್ನು ಉಪೇಕ್ಷೆ ಮಾಡಿರುವುದು ಅನುಮಾನಗಳಿಗೆ ಪುಷ್ಟಿ ನೀಡುತ್ತದೆ. ಇಷ್ಟು ಸಾಲದೆ ಬ್ರಿಟಿಷ್ ಸರ್ಕಾರಕ್ಕೆ ಮನವಿ ಮಾಡಿ ದಿವಾನಗಿರಿಯನ್ನು ತನ್ನ ಕುಟುಂಬಕ್ಕೆ ಮೀಸಲಿಡಬೇಕೆಂದು ಕೇಳಿಕೊಂಡನು.

ಪೂರ್ಣಯ್ಯನವರ ಈ ವರ್ತನೆಗಳಿಂದ ಯುವರಾಜನ ಅನುಮಾನಗಳು ಬಲಗೊಂಡು ಉದ್ದೇಶಪೂರ್ವಕವಾಗಿ ಪೂರ್ಣಯ್ಯ ತನ್ನ ಮೇಲೆ ಹಾಗೂ ರಾಜ್ಯದ ಮೇಲೆ ಶಾಶ್ವತವಾಗಿ ಅಧಿಕಾರ ಚಲಾವಣೆ ಮಾಡುತ್ತಿದ್ದಾನೆಂದು ಭಾವಿಸಿದ; ತನ್ನ ಪೂರ್ವಜರಿಂದ ಬಂದಿರುವ ಈ ಅಪರಿಮಿತ ರಾಜತ್ವದ ಅಧಿಕಾರವನ್ನು ಕಿತ್ತುಕೊಂಡಿದ್ದಾನೆಂದು ಸಹ ಪರಿಗಣಿಸಿದ. ಅದಲ್ಲದೆ ಮಹಾರಾಜನ ಹಲವಾರು ಬಂಧುಗಳನ್ನು ಅಧಿಕಾರ ಸ್ಥಾನಗಳಿಂದ ಪೂರ್ಣಯ್ಯ ದೂರವಿರಿಸಿದ್ದ. ರಾಜನ ಮೇಲೆ ಹಠೋಟಿ ಸಾಧಿಸುವ ಪೂರ್ಣಯ್ಯನವರ ಹೋರಾಟಕ್ಕೆ ಮದ್ರಾಸ್ ಸರ್ಕಾರ ತಣ್ಣೀರೆರಚಿತು. ದಿವಾನಗಿರಿಯು ವಂಶಪಾರಂಪರ್ಯವಲ್ಲವೆಂದು ಹಾಗೂ ದಿವಾನರು ನಿವೃತ್ತರಾಗಬೇಕೆಂದು ಶಿಫಾರಸ್ಸು ಮಾಡಿತು.

ಪೂರ್ಣಯ್ಯ ೧೭೯೯ ರಿಂದ ೧೮೧೦ ರವರೆಗೆ ೧೧ ವರ್ಷಗಳ ಕಾಲ ಆಡಳಿತ ನಡೆಸಿದ್ದರು. ಅವರ ಕಾಲಾವಧಿಯಲ್ಲಿ ತೆರಿಗೆ ವಸೂಲಿ ಅಪಾರವಾಗಿ ಹೆಚ್ಚಿತ್ತು. ಪೂರ್ಣಯ್ಯನವರ ಆಡಳಿತ ಹಲವಾರು ಟೀಕೆಗಳಿಗೆ ಒಳಪಟ್ಟಿದೆ. ಅವರ ದಿವಾನಗಿರಿ ಪ್ರಾರಂಭವಾದಾಗಿನಿಂದಲೂ ರಾಜ್ಯದ ಹಲವಾರು ಕಡೆಗಳಿಂದ ತಾಪತ್ರಯಗಳನ್ನು ಹೇಳಿಕೊಳ್ಳಲು ರಾಜರ ಬಳಿ ಜನರು ಬರುತ್ತಿದ್ದರು. ಅಂತಹ ದೂರುಗಳು ಪೂರ್ಣಯ್ಯನವರ ಸಂಬಂಧಿಕ ಅಧಿಕಾರಿಗಳ ಮೇಲೂ ಸಹ ಇದ್ದವು. ಅವರ ಸಂಬಂಧಿಕ ಅಧಿಕಾರಿಯೊಬ್ಬನ ವಿರುದ್ಧ ಮಾಡಿದ ದೌರ್ಜನ್ಯದ ದೂರನ್ನು ಪೂರ್ಣಯ್ಯ ತನಿಖೆ ಸಹ ಮಾಡಲಿಲ್ಲ. ಈ ರೀತಿ ಅತಿರೇಕಗಳು ಅಧಿಕಾರಿಗಳಿಂದ ರೈತರ ಮೇಲೆ ನಡೆಯುತ್ತಿದ್ದವು. ಆದರೆ ಅಧಿಕಾರಿಗಳು ಪ್ರಭಾವಿ ವ್ಯಕ್ತಿಗಳಾಗಿದ್ದುದರಿಂದ ಜನರ ಗೋಳಿಗೆ ಕೊನೆಯಿರಲಿಲ್ಲ. ಇಂತಹ ದೌರ್ಜನ್ಯವೊಂದನ್ನು ಕರ್ನಲ್ ವಿಲ್ಸ್ ಪ್ರಸ್ತಾಪಿಸಿದ್ದಾನೆ.

ನಗರ ರೈತರ ಬಂಡಾಯದ ಬಗ್ಗೆ ವಿಚಾರಣೆ ನಡೆಸಿದ ಸಮಿತಿಯ ಮುಂದೆ ಬಂದ ದೂರುಗಳಲ್ಲಿ ಪೂರ್ಣಯ್ಯನವರ ಕಂದಾಯದ ಆಡಳಿತದ ಬಗ್ಗೆಯೂ ಸಹ ಇದ್ದವು. ೧೮೧೫ರಲ್ಲಿ ಮಹಾರಾಜರು ದಿವಾನರನ್ನು ಕುರಿತಂತೆ ಈ ರೀತಿ ಹೇಳಿದ್ದಾರೆ: ''ದಿವಂಗತ ಪೂರ್ಣಯ್ಯನವರ ಪ್ರತಿಭೆ ಕಂದಾಯ ವಸೂಲಿ ಮಾಡುವುದರಲ್ಲಿ ಲೀನವಾಗಿದ್ದು, ಜನರ ಕಷ್ಟ ಕಾರ್ಪಣ್ಯಗಳ ವಿರುದ್ಧವಿದ್ದುದರಿಂದ ಜನರು ಅನಾಯಾಸವಾಗಿ ತೊಂದರೆಗೆ ಸಿಲುಕಿದರು.'' ಈ ಟೀಕೆಯನ್ನು ೧೮೩೨-೩೩ರ ನಗರ ಬಂಡಾಯದ ವಿಚಾರಣಾ ಸಮಿತಿಯು ಪ್ರತಿಧ್ವನಿಸಿದೆ: ''ಪೂರ್ಣಯ್ಯನವರ ಕಾಲದಲ್ಲಿದ್ದ ಶಾಂತಿ ಮತ್ತು ಆರ್ಥಿಕ ಸುಸ್ಥಿತಿಯ ಆಧಾರದ ಮೇಲೆ ದೇಶದ ಸಂಪತ್ತು ವೃದ್ಧಿಯಾಯಿತು ಎಂದು ಹೇಳಲು ಬರುವುದಿಲ್ಲ'' ಸಮಿತಿ ಮುಂದೆ ಸಾಕ್ಷ್ಯ ನೀಡಿದ ರೈತನೊಬ್ಬನ ಮಾತಿನಲ್ಲಿ ಹೇಳುವುದಾದರೆ ''ಪೂರ್ಣಯ್ಯನವರ ಆಡಳಿತದ ಆರಂಭದಲ್ಲಿ ಸುಸ್ಥಿತಿಯಲ್ಲಿದ್ದ ರೈತರಲ್ಲಿ ಅರ್ಧ ಭಾಗ ಜನ ಅವರ ಅಧಿಕಾರದ ಅಂತಿಮ ದಿನಗಳಲ್ಲಿ ಬಡತನಕ್ಕೆ ಈಡಾಗಿದ್ದರು.'' ಪೂರ್ಣಯ್ಯನವರು ಹಲವರ ಪ್ರಶಂಸೆಗೆ ಒಳಗಾಗಿದ್ದರು; ಆದರೂ ಅವರ ಆಡಳಿತ ಜನರ ಏಳಿಗೆಗೆ ಅಡ್ಡಿಯಾಗಿತ್ತು, ಎಂದು ವಿಚಾರಣಾ ಸಮಿತಿ ಪದೇಪದೇ ಅಭಿಪ್ರಾಯಪಟ್ಟಿದೆ. ಪೂರ್ಣಯ್ಯನವರು ದೊಡ್ಡ ಮೊತ್ತದ ಹಣವನ್ನು ಕಮೀಷನ್ ಆಗಿ ಪಡೆಯುತ್ತಿದ್ದರು. ಬ್ರಿಟಿಷರಿಗೆ ಕೊಡುತ್ತಿದ್ದ ೨೪ ಲಕ್ಷ ರೂಪಾಯಿಗಳ ಪೊಗದಿಯಲ್ಲದೆ ಸುಮಾರು ೨೦ ಲಕ್ಷ ರೂಪಾಯಿಗಳು ವಿವಿಧೆಡೆ ಪಲಾಯನವಾಯಿತು. ಇದರಲ್ಲಿ ಬಹುಪಾಲು ಹಣ ವರ್ತಕರಿಗೆ ಹಾಗೂ ಬ್ರಾಹ್ಮಣರಿಗೆ ಶಾಲು, ಆಭರಣ, ಉಡುಗೊರೆಗಳ ಮೂಲಕ ಹೊರಸಾಗಿಸಲಾಯಿತು.

ಪೂರ್ಣಯ್ಯ ನಿವೃತ್ತರಾದಾಗ ಸುಮಾರು ೫೦ ಲಕ್ಷ ರೂಪಾಯಿಗಳನ್ನು ರಾಜ್ಯ ಬೊಕ್ಕಸಕ್ಕೆ ಕೊಡಬೇಕಾಗಿತ್ತು. ಇದರ ವಸೂಲಿಗೆ ರಾಜ ನಿಯೋಗವೊಂದನ್ನು ಕಳುಹಿಸಿದಾಗ ಸುಮಾರು ೨೫ ಲಕ್ಷ ರೂಪಾಯಿ ಹಣ ಹಾಗೂ ೭ ಲಕ್ಷ ರೂ. ಮೌಲ್ಯದ ಆಭರಣಗಳನ್ನು ಹಿಂತಿರುಗಿಸಿದರು. ಈ ಹಣ ಹಾಗೂ ಆಭರಣಗಳನ್ನು ಪೂರ್ಣಯ್ಯ ಹಾಗೂ ಅವರ ಸಂಬಂಧಿಗಳು ರಾಜ್ಯ ಬೊಕ್ಕಸದಿಂದ ತೆಗೆದುಕೊಂಡಿದ್ದರು. ಉಳಿದ ಸುಮಾರು ೨೦ ಲಕ್ಷ ರೂಪಾಯಿಗಳನ್ನು ಕೊಡಲು ಪೂರ್ಣಯ್ಯ ನಿರಾಕರಿಸಿದರು.

ಪೂರ್ಣಯ್ಯನವರ ಆಡಳಿತ ರಾಜ್ಯದ ಬೊಕ್ಕಸವನ್ನು ತುಂಬುವುದಾಗಿತ್ತೇ ವಿನಾ ಜನರ ಸಂಪತ್ತನ್ನು ವೃದ್ಧಿಸುವುದಾಗಿರಲಿಲ್ಲ. ಪೂರ್ಣಯ್ಯನವರ ಕಾಲದ ಕಂದಾಯ ನಂತರದ ದಿನಗಳಿಗೆ ಹೋಲಿಸಿದರೂ ಸಹ ಅಧಿಕವಾಗಿತ್ತು. ೧೮೦೪ನೇ ಇಸವಿಯ ಕಂದಾಯವು ೧೮೬೦ರ ಕಂದಾಯಕ್ಕೂ ಜಾಸ್ತಿ ಎಂದು ಅಂಕಿ-ಅಂಶಗಳು ಹೇಳುತ್ತವೆ. ಇದರಿಂದ ರೈತರ ಮೇಲೆ ಕಂದಾಯದ ಹೊರೆ ಎಷ್ಟು ಅಧಿಕ ಎಂದು ತಿಳಿಯುತ್ತದೆ. ಪೂರ್ಣಯ್ಯನವರನ್ನು ಬ್ರಿಟಿಷರು ದಿವಾನರ ಹುದ್ದೆಗೆ ಆಯ್ಕೆ ಮಾಡಿದ್ದು ಅವರು ಬ್ರಿಟಿಷ್ ಕಂಪನಿಯ ಒಬ್ಬ ನಮ್ರ ಸೇವಕ ಎಂಬ ಕಾರಣಕ್ಕಾಗಿ. ಇದರಿಂದಾಗಿಯೇ ೧೮೦೭ರಲ್ಲಿ ಯಳಂದೂರು ಜಹಗೀರನ್ನು ಹಾಗೂ ೧೮೧೧ರಲ್ಲಿ ವಿಶ್ರಾಂತಿ ವೇತನವನ್ನು ಕಂಪನಿ ಅವರ ಪರವಾಗಿ ಶಿಫಾರಸ್ಸು ಮಾಡಿತ್ತು.

ಇಪ್ಪತ್ತು ವರ್ಷಗಳ ಕಾಲ ಮೈಸೂರಿನ ಕಮೀಷನರ್‌ರಾಗಿದ್ದ ಮಾರ್ಕ್ ಕಬ್ಬನ್ ''ಪೂರ್ಣಯ್ಯನವರ ಆಡಳಿತ ಪರಿಪೂರ್ಣ; ಆದರೆ ಅವರು ದೌರ್ಜನ್ಯದಿಂದ ಹಣ ಸಂಗ್ರಹಿಸಿದರು'' ಎಂದಿದ್ದಾನೆ. ''ಹೆಚ್ಚು ಕಂದಾಯ ಸಂಗ್ರಹಿಸುವುದೇ ಅವರ ಮೂಲ ಉದ್ದೇಶವಾಗಿತ್ತೇ ವಿನಾ ರಾಜ್ಯದ ರೈತಾಪಿ ಜನರ ಯೋಗಕ್ಷೇಮದ ಬಗ್ಗೆ ನಿರಾಸಕ್ತರಾಗಿದ್ದರು'' ಎಂದು ಲೂಯಿಸ್ ರೈಸ್ ಸಹ ಹೇಳಿದ್ದಾರೆ.

ಪೂರ್ಣಯ್ಯ ಜನರ ಸೂರೆ ಮಾಡಿ ಖಜಾನೆ ತುಂಬಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರ ವಹಿಸಿಕೊಂಡಾಗ ಪೂರ್ಣಯ್ಯನವರ ದುರಾಡಳಿತದ ಕೆಟ್ಟ ಪರಿಣಾಮ ಮಹಾರಾಜರ ಮೇಲೆ ಬಿತ್ತು. ತೊಂದರೆಗೆ ಒಳಗಾದ ಜನರಿಗೆ ಪರಿಹಾರ ನೀಡಲು ರಾಜನು ಕಂದಾಯ ಮಾಫಿ ಮಾಡಬೇಕಾಯಿತು. ಪೂರ್ಣಯ್ಯನ ಆಡಳಿತ ವೈಖರಿ ನಗರದ ರೈತರು ಬಂಡಾಯ ಹೂಡಲು ಒಂದು ಕಾರಣವಾಯಿತು.

ದಿವಾನ್ ಪೂರ್ಣಯ್ಯನವರು ಹೈದರಾಲಿ, ಟಿಪ್ಪುಸುಲ್ತಾನರ ಆಡಳಿತಾವಧಿಯಲ್ಲಿ ಪಾಲುದಾರರಾಗಿದ್ದೇ ಅಲ್ಲದೆ ಮೈಸೂರು ರಾಜರನ್ನು ನೆಪ ಮಾತ್ರಕ್ಕೆ ರಾಜರನ್ನಾಗಿರಿಸಿ ಬ್ರಿಟಿಷರ ಸಹವರ್ತಿಯಾಗಿ ಹನ್ನೊಂದು ವರ್ಷಗಳ ಕಾಲ ರಾಜ್ಯಾಡಳಿತವನ್ನು ನಡೆಸಿದರು. ಇವರ ಅಧಿಕಾರ ಒಬ್ಬರಲ್ಲಿ ಒಬ್ಬರ ಮರ್ಜಿ ಇದ್ದುದರಿಂದ ತನಗೆ ಅಧಿಕಾರ ನೀಡಿದವರನ್ನು ಸಂತೃಪ್ತಿಪಡಿಸುವುದು ಮುಖ್ಯವಾಗಿತ್ತೇ ವಿನಾ ಆತನಿಗೆ ಜನರ ಹಿತ ಮುಖ್ಯವಾಗಿರಲಿಲ್ಲ. ಹೀಗಾಗಿ ದಿವಾನ್ ಪೂರ್ಣಯ್ಯನವರು ಓರ್ವ ನಿರಂಕುಶ ಅಧಿಕಾರಿಯಾಗಿ, ಓರ್ವ ದಕ್ಷ ಆಡಳಿತಗಾರನಿಗೆ ಇರಬೇಕಾದ ದೂರದೃಷ್ಟಿ ಇಲ್ಲದ ವ್ಯಕ್ತಿಯಾಗಿ ಇತಿಹಾಸದಲ್ಲಿ ಉಳಿದುಹೋದರು.

ಡಾ|| ಸಿದ್ದಲಿಂಗಸ್ವಾಮಿ
ಡಿ-೮, ಪಿಡಬ್ಲ್ಯುಡಿ ಕ್ವಾರ್ಟರ್ಸ್, ಜೀವನ್‌ಭೀಮಾನಗರ
ಎಚ್ ಎ ಎಲ್ ೩ನೇ ಸ್ಟೇಜ್, ಬೆಂಗಳೂರು - ೫೬೦ ೦೭೫

ಮನೆಯಂಗಳದ ಕಟ್ಟೆಯ ಮೇಲೆ ಕುಂತಿದ್ದ ಹೊನ್ನಪ್ಪ ಮುಂದಿನ ರಸ್ತೆಯನ್ನೇ ದಿಟ್ಟಿಸಿನೋಡುತ್ತಿದ್ದ. ರಸ್ತೆಯ ಆಚೆಗಿರುವ 'ಅಪ್ಪನ ಕೆರೆ'ಯ ನೀರು ಅರ್ಧಕ್ಕರ್ಧ ಸುಟ್ಟು ಆವಿಯಾಗಿಹೋಗಿತ್ತು. ಕಲಬುರ್ಗಿಯಲ್ಲಿಯ ಬೇಸಿಗೆಯ ಬಿಸಿಲೆಂದರೆ ಅದು ಬಿಸಿಲಲ್ಲ ಬೆಂಕಿಮಳೆಯೇ ಬೀಳುತ್ತಿತ್ತು. ಆಗಸದಿಂದ ಸೂರ್ಯ ತಾಯಿ ಹೊಟ್ಟೆಲಿಂದ ಹುಟ್ಟುವಾಗಲೇ ಮೈಗೆ ಬೆಂಕಿ ಹಚ್ಚಿಕೊಂಡೇ ಹುಟ್ಟುತ್ತಾನೆ. ಕೆರೆಯ ತಳದಲ್ಲಿಯ ಮೀನುಗಳೆಲ್ಲ ಬಿಸಿಲಿಗೆ ಕಾಯ್ದು, ಸತ್ತು, ನೀರಿನ ಮೇಲೆ ತೇಲುತ್ತಿದ್ದುವು ರಾಶಿರಾಶಿಯಾಗಿ! ಜನರು ಅಲ್ಲಲ್ಲಿ ಗುಂಪು ಕಟ್ಟಿಕೊಂಡು ನಿಂತು, ರಸ್ತೆಯ ಮೇಲೆ ಓಡಾಡುವ ಮಂದೆಲ್ಲಾ ಅದೇ ಮೀನಿನ ಹೆಣಗಳ ರಾಶಿ ನೋಡುತ್ತ ತ್ಚು... ತ್ಚು.... ತ್ಚು.... ಪಾಪ ಅನ್ನುತ್ತಿದ್ದರು. ಕೆಲವು ಪಡ್ಡೆ ಹುಡುಗರು ಆಗಲೇ ನೀರಿಗಿಳಿದು ಮೀನುಗಳನ್ನು ಬಾಚಿಕೊಳ್ಳಲು ಶುರುಮಾಡಿದ್ದರು. 'ಯೇನು ಬಿಸಲಪಾ ಇದೂ.... ಇದರವ್ವನಾ ತಂದೂ..... ಹೊಲಸ ಸೂಳ್ಯಾಮಗಂದೂ....' ಅಂತ ಬೈಯ್ಕೋತ ಒಬ್ಬ ಕೂಲಿಕಾರನು ಕೈಗಾಡಿ ಒತ್ತಿಕೊಂಡು ರಸ್ತೆಗುಂಟ ನಡೆದಿದ್ದನು. ಕಾದ ತಗಡಿನಂತೆ ಸುಡುತ್ತಿರುವ ರಸ್ತಾದ ಮೇಲೆ ಆಟೋರಿಕ್ಷಾ, ಸೈಕಲ್ಲು, ಮೋಟಾರು, ಬಸ್ಸು, ಸ್ಕೂಟರುಗಳು ಸರ್ರ ಭರ್ರಂತ ಸರಿದಾಡುತ್ತಿದ್ದುವು.

ಹೊನ್ನಪ್ಪ ಮೂಕನಂತೆ ಮುಂದಿನ ರಸ್ತೆಗೆ ಕಣ್ಣು ನೆಟ್ಟಿದ್ದ. ಆಟೋರಿಕ್ಷಾಗಳು ಹಾದು ಹೋಗುವಾಗ ಅವನ ಕಳ್ಳುಬಳ್ಳಿ ಚುರ್ರೆನ್ನುತ್ತಿತ್ತು. ಎದೆಯಲ್ಲಿ ಸಂಕಟ ಹೊಯ್ದಾಡುತ್ತ ಬಿಸಿಯುಸಿರನ್ನು ಹೊರದಬ್ಬುತ್ತಿತ್ತು. ನಿನ್ನೆ ಆ ಪಠಾಣಸಾಬಿಗೆ ತನ್ನ ಸೈಕಲರಿಕ್ಷಾ ಮಾರಿಬಂದಾಗಿಂದ ಹೊನ್ನಪ್ಪ ಬೇಚೈನಾಗಿದ್ದ. ಮುಂದೇನು ಮಾಡಬೇಕಂತ ತಿಳಿಲಾರ್ದೆ, ಬದುಕುವ ದಾರಿಗಳೆಲ್ಲ ಎಕದಂ ಬಂದ್ ಆದಂಗಾಗಿ ಎದೆಯೊಡೆದುಕೊಂಡು ಕಂಗಾಲಾಗಿದ್ದ. ಆ ಸೈಕಲರಿಕ್ಷಾ ಅವನ ಸಂಸಾರ ಸಾಕುವ ಸಾಧನವಾಗುತ್ತಿತ್ತು. ಅದರ ದುಡಿತದಿಂದಲೇ ಅವನ ಕುಟುಂಬದ ಐದು ಹೊಟ್ಟೆಗಳಿಗೆ ಕೂಳು ನೀರು ಸಿಗುತ್ತಿತ್ತು. ಹೊನ್ನಪ್ಪನಿಗೇನೂ ಬ್ಯಾರೆ ಆಮದನಿ ಬರುವ ಏನೂ ದಂಧಾಯಿರಲಿಲ್ಲ. ಹೊಲಮನೆಯಂತೂ ಮದಲೇ ಇರಲಿಲ್ಲ. ಹಳ್ಯಾಗಿದ್ದ ಅಂಗೈಯೋಟು ಹೊಲವನ್ನು ತನ್ನ ಮದುವೆಯ ಸಾಲಕ್ಕೆ ಗೌಡನಿಗೆ ಮುರಗಂಟು ಮಾಡಿ, ಅವ್ವ, ಹೆಣ್ತಿ ಮತ್ತು ಎರಡು ಮಕ್ಕಳನ್ನು ಕಟ್ಟಿಕೊಂಡು ಬಂದು ಕಲಬುರ್ಗಿ ಸೇರಿದ್ದ.

ದುಡಿದುಂಡು ಬದುಕಲಿಕ್ಕೆಂದು ಹೊನ್ನಪ್ಪ ಕಲಬುರ್ಗಿಯಂಥ ಶಾರಪಟ್ಟಣಕ್ಕೇನೋ ಬಂದಿದ್ದ ಖರೇ. ಆದರೆ ಇಲ್ಲಿ ಬಂದಾಗ ಏನು ಮಾಡಬೇಕೆಂದು ತಿಳಿಯದೇ ಗಾಬರಿಯಾಗಿದ್ದ! ಲಾಲಗಿರಿಯ ಕ್ರಾಸ್ ದಾಟಿ, ಶಾಬಾಜಾರ ನಾಕ್ಯಾದ ಕಡೆಗೆ ಹೋಗುವ ದಾರಿಯ ಮಗ್ಗುಲಿಗಿದ್ದ ಮಾರುತಿ ಝೋಪಡಪಟ್ಟಿಯಲ್ಲಿ ಒಂದು ಪತರಾದ ಖೊಲ್ಲಿಗೆ ತಿಂಗಳಿಗೆ ಹತ್ತು ರುಪೈ ಕಿರಾಯಿಮೇಲೆ ತನ್ನ ತಾಬೇದಾಗ ತಗೊಂಡನು. ಮುಪ್ಪಿನ ಅವ್ವ ಮಕ್ಕಳ ಆಡಿಸುತ್ತ ಮನೆಯಲ್ಲಿರುತ್ತಿದ್ದಳು. ಅಲ್ಲೇ ಝೋಪಡಪಟ್ಟಿಯ ಮುಂದೆ ಕಚ್ಚಾ ರಸ್ತಾದ ಬಯಲು ದಾಟಿದರೆ ರಾಘವೇಂದ್ರ ಕಾಲನಿಯ ಬಾಂಬ್ರ ಮನೆಗಳ ಸಾಲುಗಳು. ಒಂದು ದಿನ ಪೂರಾ ಹೊನ್ನಪ್ಪನ ಹೆಂಡತಿ ಶಾಣವ್ವ ಆ ಕಾಲನಿಯ ಮನೆ ಮನೆಗೆ ತಿರುಗಿ 'ಭಾಂಡಿ ಬಟ್ಟಿ' ಕೆಲಸ ಕೇಳಿ, ಕೊನೆಗೆ ಒಂದು ಮನೆಯಲ್ಲಿ ಕೆಲಸ ಹಿಡಿದೇ ಬಂದಳು. ಮರುದಿನ ಬೆಳಗಾ ಮುಂಜಾನೆ ಎದ್ದು, ಮಾರಿ ತೊಳ್ಕೊಂಡು ಶಾಣವ್ವ ಹಾರ್ರ ಮನೆಯ ಕೆಲಸಕ್ಕೆ ನಡೆದಳು. ಆ ಬಂಗಲೆಯ ಅಂಗಳದ ಕಸಹೊಡೆದು, ಗೇಟಿನ ಮುಂದೆ ಹೆಂಡೆರಾಡಿಯ ಥಳಿ ಹಾಕಿ, ಅವರ ಭಾಂಡಿ ತೊಳೆದು, ಬಟ್ಟೆ ಒಗೆದು, ಅವರು ಕೊಟ್ಟ ತಂಗಳು ರೊಟ್ಟಿ ಪಲ್ಯ ಉಡಿಯಲ್ಲಿ ಹಾಯ್ಕೊಂಡು

*ಆಟೋರಿಕ್ಷಾವೊಂದು ಆವಾಜು ಮಾಡುತ್ತ ಅವನ ಬಂಡಿ ದಾಟಿ ಮುಂದೆ ಹೋದಾಗ ಹಿಂದಿನಂತೆ ಹೊನ್ನಪ್ಪನಿಗೆ ಸಿಟ್ಟು ಬರಲಿಲ್ಲ. ಆಟೋವನ್ನು ಬೈಯಬೇಕೆನಿಸಲಿಲ್ಲ. ಬದಲಾಗಿ ಮುಸು ಮುಸು ನಗುತ್ತ ''ಬೆಂಡಿಕಾಯೀ..... ಬದನಿಕಾಯೀ..... ಗಜ್ಜರಿ..... ಟೊಮೆಟೊ..... ಪಾಲಕಪಲ್ಲ್ಯಾ..... ರಾಜಗಿರೀ...... ಮೆಂತೆಪಲ್ಲ್ಯಾ..... ಪುಂಡಿಪಲ್ಲ್ಯಾ.....'' ಅಂತಾ ದನಿಯೆತ್ತಿ ಹಾಡುವಂತೆ ಕೂಗುತ್ತ ತನ್ನ ಹೊಸ ಕಾಯಕ ಶುರುಮಾಡಿದ.*



ಗೀತಾ ನಾಗಭೂಷಣ

ಶಾಣವ್ವ ಮನೆಗೆ ಬರಬೇಕಾದರೆ ಅಕರಾ ಬಾರಿಸಿತ್ತು! ತಂದಿದ್ದನ್ನು ಮಕ್ಕಳಿಗೆ, ಅತ್ತೆಗೆ ತಿನ್ನಲು ಇಕ್ಕಿ ತನ್ನ ಮನೆಯ ಕಸಮುಸುರೆ, ಅಡಿಗೆ ಅಂತ ಕೆಲಸ ಶುರುಮಾಡಿದಳು.

ನಾಲ್ಕಾರು ದಿನ ಒಡ್ಯಾಡಿ ಒಡ್ಯಾಡಿ ಹೊನ್ನಪ್ಪನೂ ಕೇರಿಯ ಚಂದ್ರಪ್ಪನ ಸೈಕಲರಿಕ್ಷಾವೊಂದನ್ನು ಬಾಡಿಗೆಗೆ ಹಿಡಿದು ನಡೆಸತೊಡಗಿದ್ದ. ಹೊನ್ನಪ್ಪನಿಗೆ ಸೈಕಲ್ಲು ನಡೆಸುವುದು ಬರುತ್ತಿದ್ದುದರಿಂದ ಈಗ ಈ ಸೈಕಲರಿಕ್ಷಾ ಹೊಡೆಯುವುದು ಸಾಧ್ಯವಾಯಿತು ಖರೇ. ಆದರೆ ಕಲಬುರ್ಗಿ ನಗರದ ಏರಿಳಿಯುವ ರಸ್ತೆಗಳ ಮೇಲೆ; ಅದೂ ಜೋಡಿ ಸವಾರಿ ಕೂಡಿಸಿಕೊಂಡು ರಿಕ್ಷಾದ ಪೆಡಲ್ ತುಳಿಯುವುದೆಂದರೆ ಒಂದೀಟು ತರಾಸಾಗಿ ದಮ್ಮು ಹತ್ತಿಬರುತ್ತಿತ್ತು. ಮೊದಲಲ್ಲಾ ಆಟೀಟು ಎದಿಬ್ಯಾನಿನೂ ಆಯಿತು. ಆದರೆ ದಿನಗಳೆದಂಗೆಲ್ಲ ಅದು ರೂಢಿಯಾಯಿತು. ಹೊನ್ನಪ್ಪನ ಮೈಯಲ್ಲಿ ಕಸುವಿತ್ತು. ಬದುಕಬೇಕೆಂಬ ಛಲವಿತ್ತು. ಸರಾಗವಾಗಿ ಸೈಕಲರಿಕ್ಷಾ ಹೊಡೆಯುತ್ತ ದಿನಕ್ಕೆ ಹತ್ತಿಪ್ಪತ್ತು ರುಪ್ಯೆ ಗಳಿಸತೊಡಗಿದ. ಅದರಲ್ಲಿ ಐದು ರುಪ್ಯೆ ರಿಕ್ಷಾದ ಬಾಡಿಗೆ ಅಂತ ಅದರ ಮಾಲಿಕನಿಗೆ ಕೊಟ್ಟು ಉಳಿದದ್ದರಲ್ಲಿ ಹತ್ತು ರುಪ್ಯೆ ಮನಿಖರ್ಚಿಗೆಂದು ಹೆಂಡತಿಯ ಕೈಗೆ ಹಾಕುತ್ತಿದ್ದ. ಉಳಿದ ಒಂದೆರಡು ಚಿಲ್ಲರರುಪ್ಯೆ ಅವನ ಇಡೀ ದಿನದ ಚೀಪಾಣಿ, ಬೀಡಿಗಳಿಗೆ ಖರ್ಚಾಗುತ್ತಿದ್ದುವು.

ಕಲಬುರ್ಗಿಯಂಥ ಶಾರಪಟ್ಟಣದಲ್ಲಿ ಹೊನ್ನಪ್ಪನ ಸಂಸಾರ ಸುಸೂತ್ರವಾಗಿ ನಡೆಯಿತು. ಶಾಣವ್ವನಿಗೆ ಭಾಂಡಿಬಟ್ಟೆ ಕೆಲಸಕ್ಕೆ ಮತ್ತೆರಡು ಬಾಂಬ್ರ ಮನೆಗಳು ಸಿಕ್ಕುವು. ಮನಿಗೆಡ್ಡು ರೊಟ್ಟಿ ಪಲ್ಲೆ ಸಿಗುತ್ತಿತ್ತು. ಮುಂಜಾನಿ ಸಂಜೀಗಿ ಚಾ ಸಿಗುತ್ತಿತ್ತು. ಹಬ್ಬ ಹುಣ್ಣಿಮೆ ಬಂದಾಗ ಹಾರ್‍ರ ಮನೆಯ ಸಿಹಿರುಚಿ ತಂಗಳ ಅಡುಗೆಯೂ ದೊರೆಯುತ್ತಿತ್ತು. ಮನೆಯಲ್ಲಿ ಮುದುಕಿ ಮಾಳವ್ವನೂ ಸೊಸೆಗೆ ಹೇಳಿ ಶನಿವ್ಯಾರ ಸಂತಿಲಿಂದ ಎಡ್ಡು ಕೋಳಿ ತರಿಸಿಕೊಂಡು ಸಾಕತೊಡಗಿದಳು. ಆರೇಳು ತಿಂಗಳುಗಳಲ್ಲಿ ಎಂಟ್ಹತ್ತು ಕೋಳಿ, ಮರಿಗಳು ಅಂತ ಅಂಗಳದ ತುಂಬ ಕಿಚಿಪಿಚಿ ಮಾಡುತ್ತ ನೆಲ ಕೆದರತೊಡಗಿದವು. ಅವ್ವ, ಹೆಂಡತಿ, ಮಕ್ಕಳೊಂದಿಗೆ ಹೊನ್ನಪ್ಪ ಪಿರೀತಿಯಿಂದಲೇ ಸಂಸಾರ ನಡೆಸಿದ್ದ.....

''ಯಪ್ಪಾ.... ನಾನೂ ಹೋಗಿ ಮೀನಾ ತರ್‍ತೀನೋ.... ಬಾಜು ಗುಡಿಸಲ ಅಣ್ಣಪ್ಪ ಹೊಂಟಾನ....'' ಎಂಟೋರ್ಸಿನ ಮಗ ಬಾಬ್ಯಾ ಬಂದು ಕೇಳಿದಾಗ ಹೊನ್ನಪ್ಪ ಹೊಳ್ಳಿ ನೋಡಿದನು. ಕೆದರಿದ ತಲೆಯ, ತೋಳು ಹರಿದ ಮಾಸಿದ ಅಂಗಿ ತೊಟ್ಟಿದ್ದ ಮಗ ಆಸೆಗಣ್ಣು ಎತ್ತಿದ್ದ. ಸೊಲುಪ ಹೊತ್ತು ಮಗನ ಮಾರಿ ನೋಡಿದ ಹೊನ್ನಪ್ಪ ಸಿಡುಕಿದ. ''ಏಸ ಆ ಸತ್ತು ನಾರಾ ಕೊಳಕ ಮೀನಾ ತಿಂದು ಸಾಯ್ಬೇಕಂತ ಮಾಡೀರೇನು ? ಸುಮ್ಮನ ಒಳಗನಡಿ ಅಂತೀನೀ.... ಮೀನಾ ತರ್‍ತಾನಂತ ಮಗಾ ಮೀನಾ.... ನಡಿಯಿಲ್ಲಿಂದ.'' ಕಣ್ಣು ತುಂಬಿ ಬರುತ್ತಿದ್ದ ನೀರನ್ನು ಮುಂಗೈಯಿಂದ ಸೀಟಿಕೊಳ್ಳುತ್ತ ಬಾಬ್ಯಾ ಅಲ್ಲಿಂದ ಸರಿದುಹೋದನು.

ಬಿಸಿಲು ಬಲಿಯುತ್ತಿತ್ತು. ಹೊನ್ನಪ್ಪ ಎದ್ದು ಹಂಗೇ ರಸ್ತೆಯನ್ನು ತುಳಿಯತೊಡಗಿದ. ತನ್ನ ಬದಿಯಿಂದೊಂದು ಆಟೋರಿಕ್ಷಾ ಸದ್ದು ಮಾಡುತ್ತ ಸರಿದುಹೋದಾಗ ಅವನಿಗೆ ಎಲ್ಲಿಲ್ಲದ ಸಿಟ್ಟು ಬಂತು. ಥೂ ಅಂತ ಉಗುಳಿದ. ''ಈ ಆಟೋರಿಗಸ್ಯಾಗೋಳು ಬಂದು ನಮ್ ಸೈಕಲರಿಗಸ್ಯಾಗೋಳ ಹೊಟ್ಟಿಮ್ಯಾಲ ಮಣ್ಣ ಹಾಕ್ಯಾವ.... ಯಾ ದೇಶ್ಯಾದಿಂದ ಬಂದುವೋ ಈ ಕರಿಮೈ ಆಟೋಗೋಳು.... ಇದರವ್ವನಾ.... ರಂಡೀಮಗಂದೂ..... ಬಡೂರ ಹೊಟ್ಟಿಮ್ಯಾಲ ಕಾಲ್ಕುಡಾ ಹೊನ್ನಾರ ಈ ಆಟೋವಾಲಾಗೋಳದೂ.....'' ಅಂತ ಗೊಣ ಗೊಣ ಬೈಯ್ಯುತ್ತ ಮುಂದೆ ನಡೆದ.

ಸಂಗಮ ಟಾಕೀಜಿನ ಮುಂದಿನ ಆಲದಮರದ ನೆಳ್ಳಾಗ ಮೀಸಿ ಸಿದ್ರಾಮನ ಚಾದ ಬಂಡಿ ನಿಂತಿತ್ತು. ಅವನ ಗಲ್ಲದ ತುಂಬ ಎದ್ದು ನಿಂತಿರುತ್ತಿದ್ದ ಮೀಸಿಯಿಂದಾಗಿ ಅವನಿಗೆ 'ಮೀಸಿ ಸಿದ್ರಾಮ' ಅಂತೇ ಎಲ್ಲರೂ ಕರೆಯುತ್ತಿದ್ದರು. ಅವನ ಬಂಡಿ ಹೋಟಲ್ಲಿನ ಬಾಜು ನಾಕುಮಂದಿ ಸೈಕಲರಿಕ್ಷಾವಾಲಾಗಳು ನಿಂತು ಚಾ ಕುಡಿಯುತ್ತ ಮಾತಾಡುತ್ತಿದ್ದರು. ಅದರಲ್ಲಿಬ್ಬರು ತಮ್ಮ ರಿಕ್ಷಾ ಮಾರಿಕೊಂಡವರೇ. ಮತ್ತಿಬ್ಬರದು ಬಾಡಿಗೆಯ ಗಾಡಿಗಳು. ''ಬಾರೋ ಹೊನ್ನಪ್ಪಾ.... ರಿಗಸ್ಯಾ ಮಾರಿಬಿಟ್ಟೆಂತಲ್ಲೋ ನಿಂದೂ ?'' ರುಕ್ಮಣ್ಣ ಕರೆದ. ಹೊನ್ನಪ್ಪ ಹತ್ತಿರ ಬರುತ್ತ ''ಹೊಯಿಂದ್ಲೋ ಯಣ್ಣಾ.... ತಿಂಗಳದಿನಾ ಆಯ್ತು. ಪೂರಾ ದಂಧಾ ಬಂದಾಗ್ಯಾದಲ್ಲ! ಒಬ್ಬರನೂ ಸೈಕಲರಿಗಸ್ಯಾದಾಗ ಕುಡ್ಲಕ್ಕ ತಯಾರಿಲ್ಲಪಾ. ಎಲ್ಲೋರೂ ಆಟೋದಾಗೇ ಹೋಗ್ತಾರ ಮಕ್ಳೂ..... ನಮ್ ರಿಗಸ್ಯಾದಾಗ, ಅಪ್ಪನ ಗುಡಿಲಿಂದ ಬಜಾರಕ್ಕೆ ಬರಬೇಕಾದ್ರ ಬರೇ ಎಡ್ಡು ರುಪ್ಯೆ ಕುಡ್ಲಕ್ಕ ಆಗಂಗಿಲ್ಲಂತೇಳಿ ಆ ಆಟೋದಾಗ ಮೂರು ರುಪ್ಯೆಕೊಟ್ಟು ಕುಂತು ಹೋಗ್ತಾರಲ್ಲ.... ಈ ಮಂದಿಬಲ್ಲಿ ರೊಕ್ಕಾ ಜಾಸ್ತಿ ಆಗ್ಯಾವೋ ಏನೋ ಅಪಾ.... ಹಿಂಗ್ ಆದ್ರ ನಮ್ ಹೊಟ್ಟಿ ಹ್ಯಾಂಗ್ ತುಂಬೇಕು ಹೇಳು ? ದಿನಾ ಮುಂಜಾನೆದ್ದು ಟ್ಯಾಂಡಿಗಿ ರಿಗಸ್ಯಾ ತಂದು ಹಚ್ಚಾದೂ.... ಸವಾರಿಯಿಲ್ದೆ ಕುಂತೂ ಕುಂತೂ ಸಾಕಾಗಿ ಮತ್ತ ವಾಪಸ್ಸು ರಿಗಸ್ಯಾ ಎಳ್ಕೊಂಡು ಮನೀಗಿ ಒಯ್ಯಾದೂ.... ಭಾಳ ಭಾಳಂದ್ರ ದಿನಕ್ಕ ಎಂಟ್ಹತ್ತು ರುಪ್ಯೆ ಗಿರಾಕಿ ಆದ್ರೆ ಆಯ್ತು ಇಲ್ದರ ಇಲ್ಲ....'' ಹೊನ್ನಪ್ಪ ಹತ್ತಿರ ಬಂದು ತನ್ನೆದೆಯ ಚಟಪಡಿಕೆ ತೋಡಿಕೊಂಡ.

''ಈ ಆಟೋಗೋಳು ಬಂದೂ ಬಂದೂ ನಮ್ ಸೈಕಲರಿಗಸ್ಯಾಗೋಳು ಕುಂದ್ರೇಬಿದ್ದು ಅಂತೀನೀ.... ನಮ್ ದಂಧಾಯೆಲ್ಲಾ ಚೌಪಟ್ ಆಯ್ತೋ ಹೊನ್ನಪ್ಪಾ.... ಆಟೋದಾಗ ಜಲ್ದಿ ಹೋಗ್ತೀವೀ.... ಟೇಂ ಉಳಿತಾದ ಅಂತಾರ ಮಂದಿ. ಈ ಶಾರಪಟ್ಟಣದ ಶೋಕಿಲಾಲ ಮಂದೀಗಿ ಆಟೋದಾಗಿನ ಮೆರವಣಿಗಿ ಛಲೋ ಅನಸ್ತದಪಾ.... ಒಟ್ಟಿನ್ಯಾಗ ನಾವು ಸಾಯ್ಲಕತ್ತೀವಿ ನೋಡು. ತಗೋ ಚಾ ಕುಡಿ....'' ಗಿರೆಪ್ಪ ಚಾದ ಗಿಳಾಸು ಕೊಟ್ಟು ಹಣೆಯ ಮೇಲಿನ ಬೆವರೊರೆಸಿಕೊಂಡ. ಅಂಗಿ ಕಿಸೆಯಿಂದ ಬೀಡಿಗಟ್ಟಾ, ಕಡ್ಡಿಡಬ್ಬಿ ಹೊರಗ ತಗದು, ಒಂದು ಬೀಡಿ ಹೊರಗೆಳ್ಕೊಂಡು ತುಟಿಗಿಟ್ಟುಕೊಂಡು ಕಡ್ಡಿಗೀರಿ ಬೆಂಕಿಹಚ್ಚಿ ಸರ್‍ರಂತ ಒಂದು ಧಂ ಎಳೆದು ಹೊಗೆಬಿಟ್ಟನು. ಕಡ್ಡಿಡಬ್ಬಿ ಬೀಡಿಗಟ್ಟಾಗಳು ಬಾಜು ನಿಂತಿದ್ದ ಚಾಂದಪಾಶಾನ ಕೈಗೆ ರವಾನೆಯಾದುವು.

''ದಂಧಾ ಅಂದ್ರ ಹೀಂಗೇ ಇರ್‍ತದೋ ದೋಸ್ತ್.... ನಿಮ್ ಸೈಕಲರಿಗಸ್ಯಾಗೋಳು ಹೊಸದಾಗಿ ಇದೇ ನಮ್ ಕಲಬುರ್ಗಿಗಿ ಬಂದಾಗ ಪಾಪ ಆ ಟಾಂಗಾವಾಲಾಗೋಳು ಬಾಯಿ ಬಾಯಿ ಬಡ್ಕೊಂಡಿದ್ರು. ಆವಾಗ ಮಂದೆಲ್ಲಾ ಸೈಕಲರಿಗಸ್ಯಾದಾಗ ಕೂಡ್ಲಕ್ಕ ಮುಗಿಬಿಳ್ತಿದ್ರು ಅಂತೀನೀ.... ಆದರೆ ಟಾಂಗಾದಾಗ ಕೂಡ್ಲಕ್ಕ ಹಿಂದಕ ಸರಕೋತಿದ್ರು. ಟಾಂಗಾವಾಲಾಗೋಳ ದಂಧಾನೂ ಆವಾಗ ನೆಲಕಚ್ಚಿತ್ತು. ಈಗ ನಿಮ್ದು. ಮುಂದ



ಒಂದು ದಿನ ಬಂಬೈ, ಹೈದರಾಬಾದಿನಂಗ ಮೋಟಾರ ಟ್ಯಾಗಸಿಗೋಳು ಬಂದೂ ಅಂದ್ರ ಈ ಆಟೋಗೋಳನೂ ಹಿಂಗೇ ಹಿಂದಕ ಸರೀಬೇಕಾಗ್ತದ್ರೆಪಾ..... ಇವುಕ್ಕನೂ ಆವಾಗ ಯಾರೂ ಕೇಳಂಗಿಲ್ಲ. ದಂಧಾ ಅಂದ್ರ ಹಿಂಗೇ..... ಸುಗ್ಗಿ ಇದ್ದಂಗ. ಈಗ ನೀವು ಸೈಕಲರಿಗಸ್ಯಾ ಬಿಡ್ರಿ. ಆಟೋ ಡರೆವರ ಆಗಿಬಿಡ್ರಿ ನೀವೂ. ಕಾಲಕ್ಕೆ ತಕ್ಕಂಗ ಜಿಂದಗಿ ಮಾಡ್ಲಕ್ಕ ಕಲೀಬೇಕ್ರೆಪಾ.... ಬರ್‍ರಿ ಬರ್‍ರಿ ಪಾನ್ ತಗೋರಿ.'' ಪಾನ್ ಶಾಪಿನ ಅನ್ವರ ಮಿಂಯಾ ನಗುತ್ತ ನುಡಿದು ಪಾನ್ ಬೀಡಾ ಕೊಟ್ಟನು. ''ನಿನ್ ಪಾನ್ ತಿಲ್ಲಕ್ಕ ನಂಬಲ್ಲಿ ರೊಕ್ಕ ಇಲ್ಲೋ ದೋಸ್ತ್.... ನೀಯೇನು ಪುಗಸಟ್ಟೆ ಕುಡ್ತ್ಯಾ?'' ಅನ್ನುತ್ತ ಗಿರೆಪ್ಪ ಪಾನ್ ತೊಗೊಂಡು ಬಾಯಿಗಿಟ್ಟುಕೊಂಡ. ''ನಿಮಗ ರೊಕ್ಕಾ ಕೇಳ್ತಿನೇನೋ ಗಿರೆಪ್ಪಾ.... ತಗೋರಿ ತಿನ್ರೀ..... ದೋಸ್ತಾನಕಿ ಮುಂದ ಈ ರೊಕ್ಕ ರುಪೈಗಿ ಏನೂ ಕಿಮ್ಮತ್ತಿಲ್ಲಪಾ....'' ಅನ್ವರ ಮಿಂಯಾ ಉತ್ತರಿಸಿದ.

ರಿಕ್ಷ್ಯಾವಾಲಾಗಳ ಎಲ್ಲರ ಬಾಯಿಯಲ್ಲೂ ಇಂಥವೇ ಮಾತುಗಳು. ಚರ್ಚೆ, ನಿರಾಸೆಯ ನುಡಿಗಳು. ಗಾಬರಿಯ ಮುಖ, ನಿರಾಸೆಯ ದನಿ, ಕಂಗಾಲುತನದ ಮಾತುಗಳು. ತಾವು ಬದುಕುವ ದಾರಿಗೆ ಗೋಡೆಯಾಗಿ ನಿಂತ ಆಟೋರಿಕ್ಷ್ಯಾಗಳ ಮೇಲೆ ಈ ಮಂದಿಗೆ ಸಿಟ್ಟು, ತಿರಸ್ಕಾರ, ದ್ವೇಷ.

''ಇಟೊತ್ತು ಯಕಾಡಿ ಹೋಗಿದ್ದಿ ಮಾರಾಯಾ ? ನಿನ್ ಸಲ್ಯಾಕ ಕಾಯ್ಕೊಂಡು ಕುಂತು ಹಾರ್‍ರ ಮನಿಗೋಳಿಗಿ ಕೆಲಸಕ್ಕೆ ಹೋಗ್ಲಕ್ಕ ನನಗ ತಡ ಆಗಲಕತ್ತಾದ......'' ಹೊನ್ನಪ್ಪ ಬಂದಿದ್ದು ಕಂಡವಳೇ ಶಾಣವ್ವ ಪ್ರಶ್ನೆ ತೂರಿದಳು. ಉತ್ತರಕ್ಕಾಗಿ ಕಾಯದೆ ತನ್ನ ಸೀರೆಯ ಬಾಳೆಗಂಟಿನಿಂದ ಇಪ್ಪತ್ತು ರುಪೈನ ನೋಟು ತೆಗೆದು ಅವನಿಗೆ ಕೊಡುತ್ತ ಹೇಳಿದಳು. ''ಇವತ್ತ ಆಯ್ತವಾರ ಅದಾಅಲ್ಲ. ಈ ರುಪೈದಾಗ ಅದ್ದಾ ಕಿಲೋ ಮಟನ್ನು, ನಾಕು ಬಾಟಲಿ ಸಿಂದಿ ತಗೊಂಡು ಬಾ. 'ಸಂಡೇ' ಮಾಡಾಮೆಂತ. ನಿನಗ ದಂಧಾಯಿಲ್ಲಂತ್ಹೇಳಿ ಉಣಾದೂ ತಿನ್ನಾದೂ ಬಿಟ್ಟು ಕೂಡಾಮೇನು ? ಮೀನಾ ತರ್‍ಲಕ್ಕ ಬ್ಯಾಡಂದಿ ಅಂತ ಬಾಬ್ಯಾ ಅಳ್ಕೋತ ಕುಂತಾದ ಮಗಾ.... ಇಲ್ಲಿಗಿ ಬಂದಾಗಿಂದ ಒಂದ 'ಸಂಡೇ'ನೂ ಮಾಡಾದು ಬಿಟ್ಟಿಲ್ಲ ನಾವು. ಮದಲೇ ಕುಡ್ಯಾ ತಿನ್ನಾ ಮಂದಿ ನಾವು. ಕಾಟಕರು. ಎಂಟು ದಿನದಾಗ ಒಮ್ಮೆರೆ ಖಂಡಾ ತಿಲ್ಲಿಲ್ಲಂದ್ರ ಬಾಯಿ ರುಚಿ ಕೆಡತಾದ. ಮುಗಲು ಕಡ್ದು ಮೈಮ್ಯಾಲ ಬಿದ್ದವರ ಹಂಗ ಯಾಕೀಟು ಕಂಗಾಲಾಗೀದಿ ನೀನು ? ರಟ್ಟಿ ಮುರ್ದು ಹೊಟ್ಟೀಗಿ ಉಣಾ ನಮ್ಮಂತಾ ಗರೀಬ ಮಂದಿಗೇನು..... ಈ ದಂಧಾ ನಿಂತರ ಇನ್ನೊಂದು. ಅದುನೂ ತಪ್ಪದ್ರ ಮತ್ತೊಂದು, ಒಟ್ಟನ್ಯಾಗ ನಮ್ ರಟ್ಟಿಗೋಳು ಗಟ್ಟಿದ್ರ್ಯಾಯ್ತು ಬಿಡು. ನೀ ಮಟನ್ ತಂದು ತೊಳ್ದು ಕುದೀಲಕ್ಕಿಡು ಒಲಿಮ್ಯಾಲ. ನಾ ಜಲ್ದಿ ಬರ್‍ತೀನೆಂತ. ನಾ ಬಂದಮ್ಯಾಲೇ ಸಿಂದಿ ಗಡಂಗಕ್ಕೆ ಹೋಗಾಕೆಂತ....'' ಅಂತಂದು ಮುಂದೆ ಬೇರ್‍ಯಾವ ಮಾತಿಗೂ ಇಂಬು ಕೊಡಲಾರ್‍ದೆ ಗಸಗಸನೆ ನಡದೇಬಿಟ್ಟಳು. ಹೊನ್ನಪ್ಪ ಕೈಯಲ್ಲಿಯ ನೋಟನ್ನೊಮ್ಮೆ ದೀರ್ಘವಾಗಿ ನೋಡಿ ಉದ್ದನೆಯ ಉಸಿರೆಳೆದು ಬಿಟ್ಟು ಮನೆಯೊಳಗೆ ಕಾಲಿಟ್ಟನು.

ಹೊನ್ನಪ್ಪ ಮಟನ್ನು ತಂದು, ತೊಳೆದು ಅದಕ್ಕೆ ಉಪ್ಪು, ಅರಿಶಿಣ ಸೇರಿಸಿ ಸಿಲಾವರ ಬಗೋಣಿಯಲ್ಲಿಟ್ಟು ಒಂದಿಸು ಬಿಸಿನೀರು ಹಾಕಿ ಕುದೀಲಕ್ಕಿಟ್ಟನು. ಒಲಿಯ ಬೆಂಕಿ ಚಾಚಿ, ಬಾಗಿಲ ಬಳಿ ಬಂದು ಕುಂತು ಬಳ್ಳೊಳ್ಳಿ ಸುಲಿಯತೊಡಗಿದನು. ಕೊತ್ತಂಬರಿ ಸೋಸಿ, ಅಲ್ಲಾದ ಸಿಪ್ಪಿ ತೆಗೆದು ತೊಳೆದು ಎಲ್ಲ ಒಂದು ಅಂಚು ನೆಗ್ಗಿದ್ದ ಪಿಲೇಟಿನಲ್ಲಿಟ್ಟು ಒಲೆಯ ಬಾಸು ಕಲಗಲ್ಲಿನಲ್ಲಿಟ್ಟು ಬಂದನು. ಹೊರಬಂದು ಬೀಡಿಸೇದುತ್ತ ಅಂಗಳದ ಕಟ್ಟಿಗೆ ಕುಂಡಿಯೂರಿದನು. ಬೇವಿನ ಗಿಡದ ನೆಳ್ಳಿನಲ್ಲಿ ಕುಂತು ಮಕ್ಕಳು ಆಟ ಆಡುತ್ತಿದ್ದುವು. ಅವರ ಬಾಜು ಕುಂತಿದ್ದ 'ಆಯಿ' ತಲೆ ತುರಿಸಿಕೊಳ್ಳುತ್ತ ದೂರದಲ್ಲಿ ತಿಪ್ಪೆ ಕೆದಕುತ್ತಿದ್ದ ಕೋಳಿಗಳ ಮೇಲೆ ನಿಗಾಯಿಟ್ಟದ್ದಳು. ಅಂಗಳದಲ್ಲೀಗ ನೆಳ್ಳು ಬಂದಿತ್ತು. ಬಿಸಿಲು ಬಾಡುತ್ತ ಆಕಾಸಂಬೋದು ಕೆಂಬಣ್ಣಕ್ಕೆ ತಿರುಗುತ್ತ ತಣ್ಣಗಾಗುತ್ತಿತ್ತು.

ಮಗಾ ರುಮಾಲು ಸುತಗೊಂಡ, ಅಂಗಿ ಹಾಯ್ಕೊಂಡು, ಕೈಯಾಗ ಖಾಲಿ ಬಾಟಲಿಗೋಳು ತುಂಬ್ಕೊಂಡು ಕೈಚೀಲಾ ಹಿಡ್ಕೊಂಡು ಹೊರಗ ಹೊಂಟಿದ್ದು ಕಂಡು ಮುದುಕಿ ಕೇಳಿತು. ''ಸಿಂದಿ ದುಕಾನಕ್ಕ ಹೊಂಟಿದ್ದೇನೋ ಮಗಾ.... ಇಗಾ ನನ್ನ ಬಲ್ಲಿ ಕೋಳಿ ಮಾರಿ ಬಂದ ಹತ್ತು ರುಪೈ ಅವಾ ತಗೊ.... ಎಡ್ಡು ಬಾಟಲಿ ಜಾಸ್ತಿ ತಗೊಂಡು [illegible] ಈ [illegible] ಹೊಟ್ಟ್ಯಾಗೆಲ್ಲಾ ಧಗಿ ಬಿದ್ದಂಗಾಗ್ಯಾದ ನನಗ. ಹಿಡಿ [illegible] '' ಅನ್ನುತ್ತ [illegible] ಬಿಚ್ಚಿ ಒಳಗಿಂದ ನೋಟು ತೆಗೆದುಕೊಟ್ಟಿತು. ಮಗಾ [illegible] ಅವ್ವನ ದನಿ ಅವನ ಬೆನ್ನು ಹತ್ತಿತು. ''ಜಲ್ದಿ ಬಾರೋ.... ಗಾಳಿಧೂಳಿ ಏಳಂಗ ಕಾಣಸ್ತದ. ನಿನ್ನ ಹೆಣ್ತೆನೂ ಇನ್ನೂ ಬರಲಿಲ್ಲ ನೋಡು..... ಹೊತ್ತ ಮುಣಗದರ ನನಗ ಕಣ್ಣು ಒಂದೀಟು ಮಂಜಾಗ್ತಾವಲ್ಲೋ ಹೊನ್ನಾ....''

ಹೊನ್ನಪ್ಪನಿಗೆ ತಿನ್ನುವ ಕುಡಿಯುವ ಖಯ್ಯಾಲಿ ಭಾಳ. ಎಡ್ಡು ದಿನಕ್ಕೊಮ್ಮೆ ತತ್ತಿಪಲ್ಯಾ, ಆಂಬಲೇಟು, ಎಂಟು ದಿನಕ್ಕೊಮ್ಮೆ ಮಟನ್ನು, ಕೋಳಿ, ಮೀನಾ, ತಪ್ಪದರ ಮನ್ಯಾಗಿಂದೊಂದು ಕೋಳಿ ಕೊಯ್ದು 'ಸಂಡೇ' ಮಾಡುತ್ತಿದ್ದನು. ಶಾಣವ್ವ ಮಟನ್ ಪಲ್ಯಾ ಮಾಡಿದರೆ ಅವನಿಗೆ ಪಸಂದಾಗುತ್ತಿರಲಿಲ್ಲ. ಅಕಿ ಎಣ್ಣೆ, ಮಸಾಲಿಗೆಲ್ಲಾ ಕಂಜೀಕು ಮಾಡಿ ತುಸು ತುಸುವೆ ಹಾಕುತ್ತಾಳೆಂದೂ, ಪಲ್ಲೆದ ಸ್ವಾದವೇ ಕಮ್ಮಿಯಾಗುತ್ತದೆಂಬ ಕಳವಳ. ತಾನೇ ಕುಂತು 'ಸಂಡೇ' ದಿನ ಪಲ್ಯ ಮಾಡುತ್ತಾನೆ. ಪಲ್ಯ ಕುದಿಯುತ್ತಿರುವಾಗ ಸವುಟನಿಂದ ಸೊಲುಪ ತೆಗೆದು ಅಂಗೈಗೆ ಹಾಕಿಕೊಂಡು ನೆಕ್ಕಿ ಉಪ್ಪು, ಕಾರ ರುಚಿ ನೋಡುತ್ತಾನೆ. ಆಟರಲ್ಲಿ ಮಕ್ಕಳು ಬಂದು ''ಯಪ್ಪಾ.... ಚೂರು ಕುದ್ದಾವೇನೋ ?'' ಅಂತ ಬಾಯಲ್ಲಿ ನೀರು ಸೋರಿಸುತ್ತ ಕೇಳುತ್ತವೆ. ಅವರಿಗಾಗೇ ಅಂತ ಕಾರಾ ಹಾಕದಕ್ಕಿಂತ ಮದಲೇ ಬೇರೆಯಾಗಿ ತೆಗೆದಿಟ್ಟದ್ದ ನಾಕು ನಾಕು ಚೂರುಗಳನ್ನು ಬಟ್ಟಲಲ್ಲಿ ಹಾಕಿಕೊಡುತ್ತಾನೆ. ಹಿಂಗೆ ಪಲ್ಲೆ ಮಾಡಿ ಕೆಳಗಿಳಿಸಿದ ನಂತರವೇ ಹೊನ್ನಪ್ಪ ಸಿಂದಿ ದುಕಾನಕ್ಕೆ ಹೋಗುತ್ತಿದ್ದ.

ಗಂಡಾ, ಹೆಣ್ತಿ, ಅವ್ವ – ಮೂವರು ಅಂಗಳದಲ್ಲಿ ಸಿಂದಿ ಚಾಪಿ ಹಾಸಿಕೊಂಡು ಕುಂತು ಸಿಂದಿ ಕುಡಿಯುತ್ತ, ಹುರಿದ ಸೇಂಗಾ ಬಿಡಿಸಿಕೊಳ್ಳುತ್ತ ಆ ಮಾತು ಈ ಮಾತು ಆಡುತ್ತ 'ಮಜಾ' ಮಾಡುತ್ತಿದ್ದರು. ನೆರೆಮನೆಯ ಬಕ್ಕವ್ವಾಯಿನೂ ಬಂದು ಪಾಲ್ಗೊಳ್ಳುತ್ತಿದ್ದಳು ಆಗಾಗ. ''ಸಂಡೇ ಪಾಲ್ಟಿ ನಡೀತೇನೋ ಹೊನ್ನಪ್ಪಾ ? ಶಾಣೀ ನಿನ್ ನಸೀಬು ಛಂದದಾನೇ ಪೋರಿ. ಹಿಂತಾ ಛಲೋ ಗಂಡ ಸಿಕ್ಕಾನ. ನಮ್ಮ ಗಂಡಗೋಳು ಹಿಂಗೆಲ್ಲಾ ಹೆಂಡ್ರಿಗಿ ಮುಂದ ಕೂಡಸ್ಗೊಂಡು ಸಿಂದಿ ಕುಡ್ಸಿ ನೆತ್ತಿ ಮ್ಯಾಲೇರಸ್ಗೋತಿರಲಿಲ್ಲವ್ವ.... ಏನಿದ್ದರನೂ ನಾವೆಲ್ಲಾ ಕದ್ದೂ ಮುಚ್ಚೇ ಕುಡೀಬೇಕಾಗಿತ್ತು....'' ಅನ್ನುತ್ತಿದ್ದಳು. ಹೊನ್ನಪ್ಪ ಶಾಣವ್ವ ನಗುತ್ತಿದ್ದರು. ''ಬಾರೇ ಚಿಗವ್ವಾ ಇಕಾಡೀ...'' ಅಂತ ಕರೆದು ಅವಳಿಗೂ ಒಂದು ಗಿಲಾಸು ತುಂಬಿಕೊಟ್ಟು ''ಕುಡಿಯೇ ನಿನ್ನವ್ವನಾ.... ಸತ್ತು ಸೊರಗದಾಗಿರೋ ಆ ನಮ್ ಚಿಗಪ್ಪಗ ಯಾಕ ಬದಲಾಮಿ ಮಾಡ್ತೀ....'' ಅನ್ನುತ್ತಿದ್ದ.

ಬೆಳದಿಂಗಳ ರಾತ್ರಿ ಇದ್ದರಂತೂ ಮುಗೀತು. ಅಂಗಳದಲ್ಲೇ ಕುಂತು ಉಣ್ಣುತ್ತಿದ್ದರು. ಮಕ್ಕಳು, ಮುದುಕಿ ಅಲ್ಲೇ ಚಾಪಿಯ ಮೇಲೆ ಮಲಗುತ್ತಿದ್ದರು. ಗಂಡಾಹೆಣ್ತಿ ಒಳಗ ಹೋಗಿ ಬಾಗಿಲು ಮುಚ್ಚಿಕೊಂಡರೆ ಮುಗೀತು. ಪಿಸು ಪಿಸು ಮಾತು, ಗುಸು ಗುಸು ನಗು, ಬಳಿ ಆವಾಜು, ಶಾಣವ್ವನ ಕಾಲಲ್ಲಿಯ ನಕಲಿ ಚೈನಿನ ಗೆಜ್ಜೆಯ ಲಯಬದ್ಧವಾದ ಆವಾಜು, ಅವಳು ಸುಕದಲಿಂದ ನೆಳ್ಳ್ಯಾಡೋ ದನಿಗಳೆಲ್ಲ ಭಾಳ ಹೊತ್ತಿನ ತನಕಾ ಗುಡಸಲದೊಳಗ ಗಿರಕಿಹೊಡ್ಕೋತ ಆಗಾಗ ಹೊರಗ ಓಡಿಬರ್‍ತಿದ್ದುವು.

ಬೆಳಗಾದರೆ ಮತ್ತೆ ಶುರುವಾಗುತ್ತಿತ್ತು ಅವನ ಸೈಕಲರಿಕ್ಷ್ಯಾ ಸವಾರಿ. ಮೊದ ಮೊದಲು ಬಾಡಿಗೆ ರಿಕ್ಷಾ ಹೊಡೆಯುತ್ತಿದ್ದ ಹೊನ್ನಪ್ಪ ಒಂದೇ ವರ್ಸಿನಲ್ಲಿ ಒಂದು ಸೆಕೆಂಡಹ್ಯಾಂಡ ರಿಕ್ಷಾ ಖರೀದಿಮಾಡಿದ್ದ. ಬ್ಯಾರೆ ರಿಕ್ಷ್ಯಾವಾಲಾಗಳಂಗ ಹೊನ್ನಪ್ಪಗ ಗುಟಕಾ ತಿನ್ನಾದೂ, ಮಟಕಾ ಆಡಾದೂ, ದಿನಾ ರಾತರಿ ಸಿಂದಿ ಸೆರಿ ಕುಡ್ಯಾದೂ, ಅಂದರ ಬಾಹರ ಆಡಾದೂ, ಬಾರನ್ಯಾಗಿನ ಬಿರ್‍ಯಾನಿ ತಿನ್ನಾದೂ – ಉಹೂಂ. ಎಂಟು ದಿನದಾಗ ಒಮ್ಮೆ 'ಸಂಡೇ' ಮಾಡಿ ಅವತ್ತ ಆಟೇ ಹೆಂಡತಿಯೊಂದಿಗೆ ಮನೆಯಲ್ಲಿ ತಂದು ಸಿಂದಿ ಕುಡಿಯುತ್ತಿದ್ದನು. ರಾತ್ರಿ ರಿಕ್ಷ್ಯಾ ಹೊಡ್ದು ಬರಾಮುಂದ ಮಕ್ಕಳಿಗಿ ಏನರೆ ತಿನ್ನಲಿಕ್ಕೆಂತ, ಅವ್ವಗ ಎಲಿ ಅಡಿಕಿ ತಂಬಾಕು ಅಂತ ಪುಡಕಿ ಕಟ್ಗೊಂಡು ಬರುತ್ತಿದ್ದನು.

ಮಕ್ಕಳೆರಡೂ ಸಾಲಿ ಕಲೀಲಕತ್ತಿದ್ದುವು. ಎಡ್ಡೇ ಮಕ್ಕಳು ಸಾಕು ಅಂತ ಗಂಡಾಹೆಣ್ತಿ ನಿರ್ಧಾರ ಮಾಡಿದಂಗಿತ್ತು. ''ಇನ್ನೊಂದು ಪಾರ ಹುಟ್ಟಿದರ ಛಲೋ ಇತ್ತವ್ವ....'' ಅಂತ ಮುದುಕಿ ಗೊಣ ಗೊಣ ಮಾಡುತ್ತಿತ್ತು ಖರೇ.

ಕಲಬುರ್ಗಿ ರೋಡಿನ ಮೇಲೆ ಆಟೋಗಳು ತಿರುಗಾಡಲಿಕ್ಕೆ ಶುರುವಾದುವು. ಈ ಪಟ್ಟಣಕ್ಕೆ ಶುರು ಆಟೋ ತಂದಂವಾ ಅಂದರೆ ತುರಕರ ಬಾಬು ಮಿಂಯಾ. ಅವನ ಭಾಮೈದ ಹೈದರಾಬಾದನ್ಯಾಗ ಆಟೋ ಹೊಡಿತಿದ್ದನಂತೆ. ಅಂವಾನೇ ಇವನಿಗೊಂದು ಆಟೋ ಖರೀದಿಸಿಕೊಟ್ಟಿದ್ದ. ಹಂಗೇ ಅದರ 'ಡರೆವರಕಿ'ನೂ ಕಲಿಸಿದ್ದ. ಬಾಬು ಮಿಂಯಾನ ಆಟೋ ಕಂಡು ಮತ್ತ ಮೂರು ತಿಂಗಳದಾಗೇ ನಾಕೆಂಟು, ಮೂರುಗಾಲಿಯ ಕರಿ ಮೈಯ ಆಟೋರಿಗಸ್ಯಾಗಳು ಕಲಬುರ್ಗಿ ರಸ್ತಾಗಳ ಮ್ಯಾಲ

ಡರ್‍ರಂತ ಒಡ್ಕೋತ ಪಾಂವ್ ಪಾಂವ್ ಅಂತ ಹಾರನ್ ಭಾರಿಸ್ಗೋತ ಸರಿದಾಡಲಕತ್ತರ ಮಂದೆಲ್ಲಾ ದಂಗಾಗಿ ನೋಡುತ್ತಿದ್ದರು. ಶಾಣಬಸಪ್ಪನ ಗುಡಿಲಿಂದ ಸುಖಶಾಂತಿ ಹೋಟಲಕ ಹೋಗಲಿಕ್ಕೇ ಮೂರು ಮೂರು ರುಪೈ ಒಬ್ಬೊಬ್ಬರಿಗಿ ಅಂತಂದರನೂ ಮಂದಿ ಚೌಕಾಸಿ ಮಾಡಲಾರ್ದೆ ಕುಂತುಬಿಡ್ತಿದ್ದರು. ಆಟೋದಾಗ ಕುಂತು ಹೆಮ್ಮೆಯಿಂದ ಬೀಗುತ್ತ, ಮೂಗನ್ಯಾಗೇ ನಗುತ್ತ, ಮೋಟಾರಕಾರನ್ಯಾಗ ಕುಂತಂಗ ಹಿರಿಹಿರಿ ಹಿಗ್ಗುತ್ತಿದ್ದರು. ದಿನಕಳೆದಂಗೆಲ್ಲ ಆಟೋರಿಕ್ಷಾಗಳ ಹಾವಳಿ ಹೆಚ್ಚಾಗುತ್ತಿತ್ತು. ಸೈಕಲ್‌ರಿಕ್ಷಾವಾಲಾಗಳಿಗೆ ಅದರ ಬಿಸಿ ತಟ್ಟಲಾರಂಭಿಸಿತು.

''ಬರ್‍ರೀ ಸಾಬ್ರೇ.... ಎಲ್ಲಿಗಿ ಹೋಗ್ಬೇಕ್ರಿ.... ಬಾಜಾರಕ್ಕೇನ್ರೀ.... ಬರ್‍ರಿ ಬರ್‍ರಿ ಕೂಡ್ರೀ.... ಎಡ್ಡೇ ರುಪೈ ಕುಡ್ರೀ... ಸುಖಶಾಂತಿ ಹೋಟಲ ಮುಂದ ಬಿಡ್ತೀನ್ರೀ... ಬರ್‍ರಿ....'' ಅಂತ ಸವಾರಿಗಳಿಗೆ ಕರೆಯುತ್ತಿದ್ದರು. ''ಏs ಬ್ಯಾಡಪಾ.... ನಿನ್ ರಿಕ್ಷಾದಾಗ ಆದ್ರ ಭಾಳೊತ್ತಾಗ್ತದ.... ಆಟೋದಾಗ ಹ್ವಾದ್ರ ಕಣ್ಣು ಮುಚ್ಚಿ ಕಣ್ಣು ತೆರೆಟಗೆ ಬಾಜರದಾಗ ಇರ್ತೀವಿ'' ಅನ್ನುತ್ತಿದ್ದರು ಮಂದಿ. ''ಅಲ್ರಿಯಪ್ಪಾ.... ಅದಕ್ಕ ಒಂದ್ರುಪೈ ಜಾಸ್ತಿ ಕೊಡ್ಬೇಕಲ್ರೀ... ನಮಗಾದರ ಎಡ್ಡೇ ರುಪೈ....'' ರಿಕ್ಷಾವಾಲಾನ ಅನುನಯದ ದನಿಗೆ ಗಿರಾಕಿಗಳು ಸೊಪ್ಪು ಹಾಕುತ್ತಿರಲಿಲ್ಲ. ''ಹ್ವಾದರ ಹೋಗ್ಲಿ ಒಂದು ರುಪೈ. ಟೈಂ ಉಳೀತಾದಲ್ಲ ನಮಗ. ಈಗಿನ ಕಾಲದಾಗ ಟೈಂಗೇ ಭಾಳ ಕಿಮ್ಮತ್ತದಾನೋ....'' ''ಹೊಯಿಂದ್ರೀ ಬಾಬಾ.... ನಿಮ್ಮ ಟೇಮಿಗಿ ಕಿಮ್ಮತ್ತದಾ, ನಮ್ಮ ಟೇಮ ಖರಾಬದಾರೀ.... ನೀವೇನು ಮಾಡ್ತೀರಿ ಬಿಡ್ರಿ....'' ಅವನು ಸುಮ್ಮನಾಗುತ್ತಿದ್ದ. ಮತ್ತೊಬ್ಬ ಸೈಕಲರಿಕ್ಷಾವಾಲಾ ದೈನೇಸಿಯ ದನಿ ಎತ್ತುತ್ತಿದ್ದ. ''ಬಡೋರ ಹೊಟ್ಟಿ ಮ್ಯಾಲ ಹೊಡೀಬ್ಯಾಡ್ರೀಯಪ್ಪಾ.... ಈ ಆಟೋರಿಗಸ್ಯಾಗೋಳು ಬಂದಾಗಿನಿಂದ ನಮ್ ದಂಧಾನೇ ಖರಾಬಾಗ್ಯಾದ್ರೀ.... ನಮ್ ಹೊಟ್ಟಿ ತುಂಬಾದೇ ಭಾರೀ ಮುಶ್ಕಿಲ್ ಆಗ್ಯಾದ್ರೀ....''. ''ಏs ಬ್ಯಾಡೋ ಮಾರಾಯಾ ನಿಂದೇನು ಕಿರಕಿರಿ. ಹಿಂತಾ ಬಿಸಲಾಗ ನೀ ಧಮ್ಮ ಬಿಟ್ಕೋತ ಮೈಗಿ ಬೆವರಿಳಸ್ಗೋತ ರಿಕ್ಷಾ ತುಳ್ಯಾದು ಕಂಡೇ ನಮಗ, ನಾವೇ ಮಾಡಿದಂಗ ಅನಸ್ತದ.... ನಿಮ್ಮ ಬೆನ್ನಿನ ಮ್ಯಾಲೇ ಕುಂತು ಹೊಂಟಂಗಾಗಿ ಭಾಳ ಕೆಟ್ಟ ಅನಸ್ತದಪಾ...'' ಅನ್ನುತ್ತ ಆ ಮನುಷ್ಯ ಆಟೋದೆಡೆಗೆ ನಡೆದ.

ಹೊತ್ತು ಮುಣಗಲಕ್ಕ ತಯಾರಾಗಿ ನಿಂತಿತ್ತು. ಆಕಾಸದ ತುಂಬೆಲ್ಲಾ ಅಲ್ಲೊಂದು ಇಲ್ಲೊಂದು ಬಿಳಿ, ಬೂದುಬಣ್ಣದ ಮೋಡಗಳು ಸರಿದಾಡುತ್ತಿದ್ದವು. ನೋಡ ನೋಡಟಗೆ ಸೂರ್ಯ ಹಣ್ಣು ಹಣ್ಣು ಮುದುಕನಂಗಾಗಿ ಹೈರಾಣಾಗಿ ಕಳ್ಳಗುಮಟದ ಹಿಂದ ಕೆಳಗ ಜಾರಲಕತ್ತಿದ್ದ. ಮುಗಲ ಮಾರೀಗಿ ಅಲ್ಲೀಟು ಕೆಂಪು ಇಲ್ಲೀಟು ಹಳದಿ, ನಡಬರಕ ಬಿಳಿ, ತೊನ್ನಿನಂಗ ಸಂಜೆಯ ಬಣ್ಣ ಚೆಲ್ಲ್ಯಾಡಿತ್ತು.

ಹೊನ್ನಪ್ಪ ಅಪ್ಪನಕೆರಿ ಮೋಡಿನ ಮ್ಯಾಲಿನ ಸ್ಟ್ಯಾಂಡಿನ್ಯಾಗ ತನ್ನ ರಿಕ್ಷಾ ಹಚ್ಚಿ ಕುಂತೇಯಿದ್ದ. ಮಂಜಾನಿಲಿಂದ ಬರೇ ನಾಕು ಚಕ್ಕರ ಕಿರಾಯಿ ಹೊಡೆದಿದ್ದನು. ಕಿಸೆದಾಗ ಹತ್ತು ರುಪೈ ಬಿದ್ದಿದ್ದುವು. ಹಿಂದೆಲ್ಲಾ ದಿನಕ್ಕ ಚಾಳೀಸು, ಪನ್ನಾಸು ರುಪೈ ಕಿರಾಯಿ ಹೊಡೀತಿದ್ದ ತನಗ ಈಗ ಒಂದಿನಕ್ಕ ಇಪ್ಪತ್ತು ರುಪೈನೂ ಆಗಿಲ್ಲಂದ್ರ ಇದೇನು ದಂಧಾ ? ಇನ್ನ ಈ ರಿಗಸ್ಯಾ ಹೊಡೆದರಾಗ ಏನೂ ಫಾಯಿದಾಯಿಲ್ಲ. ಮನ್ನಿ ಆ ಆಟೋರಿಗಸ್ಯಾದ ಶಾಮಣ್ಣ ಹೇಳ್ಯಾನಲ್ಲ. ''ನಿನಗ ಹ್ಯಾಂಗಿದ್ದರನೂ ರಿಕ್ಷಾ ಓಡಿಸಲಕ್ಕ ಬರ್ತದ. ಪಂದ್ರಾದಿನದಾಗ ನಾ ನಿನಗ ಆಟೋ ಡರೆವಿಂಗ ಕಲಿಸ್ತೀನೆಂತ. ದಿನಾ ನನ್ ಜೋಡಿ ನನ್ ಗಾಡಿಮ್ಯಾಲ ನಡಿ. ನಿನ್ ಖಟಾರಾ ಸೈಕಲರಿಕ್ಷಾ ಮಾರಿಬಿಡು. ಡರೆವಿಂಗ್ ಕಲ್ತಮ್ಯಾಲ ನಿನಗ ನಮ್ಮ ಮಾಲಕರದೇ ಇನ್ನೊಂದು ಆಟೋ ಅದಾ. ಬಾಡಗಿಗಿ ನಿನಗೇ ಕುಡಸ್ತಿನೆಂತೋ ದೋಸ್ತ್. ಯಾಕ ಪರೇಶಾನ್ ಆಗ್ತೀ ? ನನ್ ಮಾತ ಕೇಳು....'' ಅಂತ ಹೇಳ್ಯಾನಲ್ಲ. ''ಅಲ್ಲಪಾ ಶಾಮಣ್ಣಾ.... ನಾ ಹೇಳಿಕೇಳಿ ಹಳ್ಳಿಗಂವಾರ. ಹೊಂಬಸಂಗ ಇದ್ದೀನಿ. ಆಟೋ ಡರೆವರ ಆಗಾದು ಅಂದ್ರ ನನಗ ಹ್ಯಾಂಗ್ ಸಾಧ್ಯಾ ಅಪಾ. ನಿಮ್ಮ ಈ ಆಟೋ ನನಗ ಅಟಾಪ ಆಗಂಗಿಲ್ಲ ಬಿಡು.'' ''ಅರೆ ಇಲ್ಲೋ ಹೊನ್ನಪ್ಪ.... ಹಾಂಗೆಲ್ಲಾ ಬಿಲಕುಲ್ ಆಗಂಗಿಲ್ಲೋ... ಪಂದ್ರಾದಿನ ಬ್ಯಾಡಂದ್ರ ಪೂರಾ ಒಂದು ತಿಂಗಳು ಡರೆವಿಂಗ್ ಕಲಿ, ಪೂರಾ ಪರಫೆಟ್ ಆದಮ್ಯಾಲೇ ಗಾಡಿ ನಡಸು....'' ಎಂದಿದ್ದ. ಹೊನ್ನಪ್ಪ ಅದೇ ವಿಚಾರದಲ್ಲಿದ್ದ. ಹೊಯಿಂದೂ ಶಾಮಣ್ಣ ಹೇಳಿದಂಗ ಮಾಡ್ಲಕ್ಕ ಧೈರ್ಯಾನೇ ಬರಂಗಿಲ್ಲಾಗೇದ....

ಹಿಂಗೇ ವಿಚಾರ ಮಾಡಿ ಮಾಡಿ ಮೂರು ದಿನವೆಲ್ಲ ಹೊನ್ನಪ್ಪ ಭಾರಿ ಬೇಚೈನಾಗಿದ್ದ. ಈಗಂತೂ ತಿಂಗಳ ದಿನಮಾನದಿಂದ ದಿನಕ್ಕೆ ಹತ್ತು, ಹದಿನೈದು ರುಪೈ ಬಾಡಿಗಿ



ಹೊಡ್ಯಾದೂ ಆಗ್ತಿರಲಿಲ್ಲ. ಗಿರಾಕಿನೇ ಸಿಗತಿರಲಿಲ್ಲ. ಮನ್ನಿ ರೋಸಿ ಹೋಗಿ, ಹಜಾರು ರುಪೈ ಕೊಟ್ಟು ಖರೀದಿ ಮಾಡಿದ್ದ ತನ್ನ ಪಿರೀತಿಯ ಸೈಕಲರಿಗಸ್ಯಾ ಒಂದೇ ಪಾನಸೇ ರೂಪೈಗಿ ಮಾರಿ ಕೈತೊಳ್ಕಂಡು ಬಂದಿದ್ದ.

ರಾತ್ರಿಯೆಂಬೋ ರಾತ್ರಿಯೆಲ್ಲಾ ಗಂಡ ನಿದ್ದಿಯಿಲ್ದೆ ಚಡಪಡಿಸೋದು ನೋಡಿ ಶಾಣವ್ವ ಧೈರ್ಯ ಹೇಳುತ್ತಿದ್ದಳು. ''ನೀ ಹಿಂಗ್ ಚಿಂತಿ ಮಾಡಬ್ಯಾಡಂತೀನೀ.... ಹಾಂಗಿದ್ದರನೂ ರಿಗಸ್ಯಾ ಮಾರಿದ ಪಾನಸೆ ರುಪೈ ಬಂದಾವಲ್ಲ. ನಾಳಿಗಿ ಆ ಚಡ್ಡಿ ಹೋಟಲ ಮಾಲಕ ರಾಮಜಿ ಕಾಕಾನ ಬಲ್ಲಿ ಹೋಗಾಮಿ. ಅಂವಂದೊಂದು ನಾಕು ಗಾಲಿ ಬಂಡಿ ಮಾರಾದು ಅದಾ ಅಂತ. ಅದು ಖರೀದಿ ಮಾಡಾಮೆಂತ, ಹರಾಜದಾಗ ಕಾಯಿಪಲ್ಲ್ಯಾ ತಗೊಂಡು ಬಂಡ್ಯಾಗಿಟ್ಕೊಂಡು ಗಲ್ಲೀ ಗಲ್ಲೀ ತಿರಗಕೋತ ತರಕಾರಿ ಮಾರಾಕೆಂತಿ.....'' ಹೊನ್ನಪ್ಪ ಉದ್ದನೆಯ ಉಸಿರೆಳೆದ. ''ಅಲ್ಲಿಗಗs ಶಾಣೀ.... ನನಗ ತಕ್ಕಡಿ ಹಿಡ್ಯಾದೂ ತೂಗಾದೂ ಬರಂಗಿಲ್ಲಲ್ಲೇ....'' ಅವಳು ನಕ್ಕುಬಿಟ್ಟಳು. ''ಕಲ್ತರಾಯ್ತು ಬಿಡು. ಅದೇನು ಆಟೋ ಡರೆವರಕಿ ಕಲ್ತ್ಯೋಟು ಬಿರಿ ಅಲ್ಲ ಬಿಡು. ಒಂದು ತಕಡ್ಯಾಗ ಕಿಲೋ, ಅದ್ದಾಕಿಲೋ ಕಲ್ಲ ಇಡಾದು, ಇನ್ನೊಂದು ತಕ್ಕಡ್ಯಾಗ ತರಕಾರಿ ಇಡಾದು. ಮತ್ತ ದಂಡಗಿ ಎತ್ತಿ ಹಿಡದ್ರಾಯ್ತು. ಅದೇನಂತಾ ಇಚಿತ್ತರ ಇದ್ಯಾ ಅಲ್ಲ ಬಿಡು. ನಾಯೆಲ್ಲಾ ಕಲಿಸ್ತಿನೆಂತ ನಿನಗ....'' ಅಂತ್ಹೇಳಿ ಅವನನ್ನು ಮಲಗಿಸಿ, ಮಗುವನ್ನು ರಮಿಸುವಂತೆ ಅವನ ಮೈಕೈ ಸವರಿ, ತಲೆಗೂದಲು ನೀವಿ, ಬೆನ್ನು ತಟ್ಟುತ್ತ ''ಹುಂ.... ಈಗ ಮಕ್ಕೊಂಡು ನಿದ್ದಿ ಮಾಡು'' ಅಂತೇಳಿ ಅವನ ಮೇಲೆ ಕೌದಿ ಹೊಚ್ಚಿ ಮೆತ್ತಗೆ ಅವನ ಬಾಜು ಮಲಗಿದಳು.

ರಾಮಜಿ ಕಾಕಾನಲಿಂದ ಬಂಡಿ ಖರೀದಿ ಮಾಡಿದಾಗ ಕಾಕಾ [illegible] ''ಬಂಡ್ಯಾಗ ಏನು ದಂಧಾ ಮಾಡ್ತೋ ತಮ್ಮಾ ? ಶಾಣಬಸಪ್ಪನ ಗುಡಿ ಮುಂದ ಚಾರಸ್ತಾದಾಗ ಮಿರಚಿ ಭಜಿ, ಚಾ ಮಾಡ್ತಾ ? ಸುಪರ ಮಾರ್ಕೆಟ್ಟಿನ್ಯಾಗ ಪಾನಿಪೂರಿ

ಭೇಲಪುರಿ ಇಡ್ಯಾ? ಏನು ಸಿನಿಮಾ ಟಾಕೀಜಗೋಳ ಮುಂದ ಹೊತ್ತ ಮುಣಗಿ ಬ್ರೆಡ್ ಆಂಬಲೇಟು ಮಾರ್‍ತ್ಯಾ?'' ''ಅದೆಲ್ಲಾ ನನಗ ಸುಧಾರಸಂಗಿಲ್ಲೋ ಕಾಕಾ... ತರಕಾರಿ ಇಟ್ಗೊಂಡು ಗಲ್ಲೀ ಗಲ್ಲೀ ತಿರುಗಿ ಮಾರಾಟ ಮಾಡ್ಬೇಕಂತ ಮಾಡೀನೀ....'' ''ಹೊಯಿಂದಾ... ಆಯ್ತು ಬಿಡು. ಆದರ ಹಿಂತಾ ಕೈಬಂಡಿಗೋಳ ಯೂನಿಯನ್ ಅದಾ ಅಲ್ಲಾ. ಅದಕ್ಕ ಮದಲ ನೀನು ಮೆಂಬರ್ ಆಗ್ಬೇಕು ನೋಡು. ಶಾಬಾಜಾರದಾಗ ಮಲಂಗನ ಹೋಟೆಲ ಬಾಜುನೇ ಈ ಸಂಘ ಅದಾ. ಅಲ್ಲಿ ಹೋಗಿ ಇಪ್ಪತ್ತು ರುಪೈಕಟ್ಟಿ ರಸೀದಿ ತಗೊಂಡು ಮದಲ ಮೆಂಬರ್ ಆಗು. ಅವರು ನಿನಗ ಬಂಡಿ ಹೊಡೀಲಕ್ಕ ಪರವಾನಗಿ ಕೊಡ್ತಾರ. ಮತ್ತ ಹಂಗೆ ಏರ್‍ಯಾನು ಫಿಕ್ಸ್ ಮಾಡ್ತಾರ....'' ''ಏರ್‍ಯಾ ? ಫಿಕ್ಸ್ ? ಹಾಂಗಂದ್ರೇನು ಕಾಕಾ ?'' ''ಅಲ್ಲೋ ಹುಚ್ಚಪ್ಪಾ ಯಾಕೀಟು ಗಾಬರ್‍ಯಾಗ್ತಿ? ನಿನಗೇನೂ ಮಾಡಂಗಿಲ್ಲ ಅವ್ರು. ನೀ ಯಾವ್ಯಾವ ಗಲ್ಲ್ಯಾಗ ತರಕಾರಿ ಯಾಪಾರ ಮಾಡ್ಬೇಕು ಅಂತ ಹೇಳ್ತಾರ. ನಿನಗ ನಿಗದಿ ಮಾಡಿಕೊಟ್ಟ ಏರಿಯಾ ಬಿಟ್ಟು ಅಕಾಡಿ ಇಕಾಡಿ ಹೋಗಬಾರ್‍ದು ನೋಡು. ಅದು ಮತ್ತ ಬ್ಯಾರೆಯವ್ರ ಏರಿಯಾ ಆಗಿರ್‍ತದ ತಿಳೀತೇನು ? ತಿಂಗಳಾ ತಿಂಗಳಾ ಮೆಂಬರ್ ಫೀಸಂತ ಐದ್ಯೆದು ರುಪೈ ಕಟ್ಟಬೇಕು....'' ''ಇದೇನಪಾ ಕಾಕಾ.... ನಾವು ಬಡೂರು. ಹೊಟ್ಟಿ ಸಲ್ಯಾಕ ಏನೆರೆ ಛೋಟಾ ಮೋಟಾ ದಂಧಾ ಮಾಡ್ಲಕತ್ತರ ಈ 'ಯೂನಿಯನ್' ಅಪ್ಪನ ಗಂಟೇನು ಹೋಗ್ತದಂತೀನಿ.'' ಹೊನ್ನಪ್ಪ ಗೊಣಗುಟ್ಟಿದ. ''ಇಷ್ಟೂರ್ಸ ನೀ ಈ ಕಲಬುರ್ಗ್ಯಾಗಿದ್ದು ಏನೂ ತಿಳ್ಕೊಂಡಿಲ್ಲ ಬಿಡಪಾ.... ಇಲ್ಲಿ ಎಲ್ಲಾ ದಂಧಾಗೋಳಗಿನೂ ಅವುದರದೇ ಒಂದೊಂದು 'ಯೂನಿಯನ್' ಅವಾ. ಬಿಕ್ಕಿ ಬೇಡಾ ಮಂದೀಗೀ, ಚಿಂದೀ ಕಾಗದ ಚೂರು ಆರ್‍ಸಾ ಮಂದೀಗಿನೂ ಅವರವರ ಯೂನಿಯನ್ ಅವಾ. ಈ ಸಂಘದಿಂದ ನಿಮಗನೂ ಫಾಯಿದಾ ಅದಾ ಬಿಡು. ನಿನ್ ದಂಧಾಕ್ಕ ಯಾರರೆ ಅಡ್ಡ ಬಂದರ, ಪೋಕರಿ ಪೋಲಿಗೋಳು ನಿನ್ ತರಕಾರಿ ತಗೊಂಡು ರೊಕ್ಕಾ ಕುಡ್ಲಿಲ್ಲಂದ್ರ, ನಿನಗ ಏನರೆ ಅಡಚಣಿ, ತರಾನ ಆದ್ರ ನೀ ನಿಮ್ಮ 'ಯೂನಿಯನ್'ಕ್ಕ ತಿಳಸದ್ರ ಸಾಕು. ಅವರು ನಿನಗ ಮದತ ಮಾಡ್ತಾರ. ನಿನಗ ಸಾಯಾ ಮಾಡಿ ನಿನ್ನ ತರಫದಾರಿ ಮಾಡ್ತಾರ....'' ''ಹೂಂ.... ಅಂತೂ ಈ ದೊಡ್ಡ ಊರಾಗ ದುಡುದು ಉಣ್ಣಲಕ್ಕನೂ ನೂರಾರು ರೀತಿ ರಿವಾಜುಗೋಳು ಅವಾಬಿಡು....'' ಹೊನ್ನಪ್ಪ ರಾಜಿಯ ದನಿ ಹಾಕಿದ.

ಎಲ್ಲಾ ಹೇರಾಫೇರಿಲಿಂದ ಕಡೀಗಿ ಒಂದು ದಿನ ಹೊನ್ನಪ್ಪನ ತರಕಾರಿ ಬಂಡಿ ಕಲಬುರ್ಗಿ ರಸ್ತಾದ ಮ್ಯಾಲ ಬಂದೇಬಿಟ್ಟಿತು. ಹಸುರು ಕಾಯಿಪಲ್ಲೆ, ಕೆಂಪು ಟೊಮೆಟೊ ಅಂತೆಲ್ಲಾ ಬುಟ್ಟಿಗಳು ಇಟ್ಟುಕೊಂಡು ಅವುಗಳ ಮೇಲೆ ಬಾಡದಿರಲು ಹಸಿ ಕಟ್ಟು ಮುಚ್ಚಿದ್ದನು ಬಂಡಿಯ ತುದಿಯಲ್ಲೊಂದು ತಕ್ಕಡಿ, ಕುಲ್ಲು ಮತ್ತು ರೊಕ್ಕ ಹಾಕಲು ಸಣ್ಣದೊಂದು ತಗಡಿನ 'ಗಲ್ಲಾ' ಡಬ್ಬಿ ಇಟ್ಟುಕೊಂಡು ಅವನು ನಿಧಾನವಾಗಿ ಗಾಡಿ ತಳ್ಳುತ್ತ ರಸ್ತೆಗಿಳಿದಾಗ, ಶಾಣಬಸಪ್ಪನ ಗುಡಿಯ ಕಳಸದ ಮೇಲೆ ಬಂಗಾರು ಬಣ್ಣದ ನೀರು ಸಿಂಪಡಿಸಿದಂಗಾಗಿ ಬೆಳಗು ಮಿರಿಮಿರಿ ಮಿಂಚುತ್ತಿತ್ತು.

ಆಟೋರಿಕ್ಷ್ಯಾವೊಂದು ಆವಾಜು ಮಾಡುತ್ತ ಅವನ ಬಂಡಿ ದಾಟಿ ಮುಂದೆ ಹೋದಾಗ ಹಿಂದಿನಂತೆ ಹೊನ್ನಪ್ಪನಿಗೆ ಸಿಟ್ಟು ಬರಲಿಲ್ಲ. ಆಟೋವನ್ನು ಬೈಯಬೇಕೆನಿಸಲಿಲ್ಲ. ಬದಲಾಗಿ ಮುಸು ಮುಸು ನಗುತ್ತ ''ಬೆಂಡಿಕಾಯೀ.... ಬದನಿಕಾಯೀ.... ಗಜ್ಜರಿ.... ಟೊಮೆಟೊ.... ಪಾಲಕಪಲ್ಲ್ಯಾ.... ರಾಜಗಿರೀ..... ಮೆಂತೆಪಲ್ಲ್ಯಾ.... ಪುಂಡಿಪಲ್ಲ್ಯಾ....'' ಅಂತಾ ದನಿಯೆತ್ತಿ ಹಾಡುವಂತೆ ಕೂಗುತ್ತ ತನ್ನ ಹೊಸ ಕಾಯಕ ಶುರುಮಾಡಿದ.

ಗೀತಾ ನಾಗಭೂಷಣ
'ಕಾವ್ಯಶ್ರೀ' ಪ್ಲಾಟ್ ನಂ. ೧೮, ಸ್ವಸ್ತಿಕ ಕಾಲೋನಿ, ಸೇಡಂ ರೋಡ
ಬಿಲಗುಂದಿ ತೋಟ, ರಿಂಗ್ ರೋಡ, ಗುಲಬರ್ಗಾ - ೫೮೫ ೧೦೩

## ಮಹಮದನ ಪ್ರೇಮ ಪತ್ರ

ಹತ್ತೂ ಜನರು ಓದಿಯಾದ ಮೇಲೆ
ನನ್ನ ಕೈ ಸೇರಿತು ಮಹಮದನ ಪತ್ರ

ತನ್ನೂರಿನ ಬಗ್ಗೆ
ತನ್ನ ಅಕ್ಕ ತಂಗಿಯರ ಬಗ್ಗೆ
ಮಲ್ಪೆಯ ಮೀನು, ಸಮುದ್ರದ ಹಿನ್ನೀರು
ಗೇರು ಹಣ್ಣು, ಗುಳ್ಳದ ಬಗ್ಗೆ
ಏನೆಲ್ಲ ಅಚ್ಚ ಕನ್ನಡದಲ್ಲಿ
ಬರೆದಿದ್ದ ಪತ್ರ -
'ಈದ್'ಗೆ ಮನೆಗೆ ಬರಲೇಬೇಕೆಂದು
ಕೇಳಿಕೊಂಡಿದ್ದ ಪತ್ರ-

ಆದರಲ್ಲಿ ಪ್ರೇಮದ ವಿಷಯವೇನೂ
ಇರಲಿಲ್ಲವಾದರೂ
ಅದು ಪ್ರೇಮ ಪತ್ರವೆಂದು
ಮುದ್ರೆ ಒತ್ತಲ್ಪಟ್ಟಿತು.
ಮಹಮದನಿಗೆ ಗುದ್ದು
ನನಗೆ ಎಚ್ಚರಿಕೆ
ಹತ್ತು ಹಲವು ಹದ್ದುಗಳು
ನನ್ನ-ಅವನ
ಚಲನವಲನದ ಬಗ್ಗೆ
ನಿಗಾ ಇಡುವಂತಾಯಿತು.



ಒಮ್ಮೆ ಮಹಮದನನ್ನು
ಭೇಟಿಯಾಗಬೇಕು
'ಪ್ರೇಮ ಭಾವ'
ಅರಳಿಸಿದ್ದಕ್ಕೇ
ಕ್ಷಮೆ ಬೇಡಬೇಕು ಎಂದೆಲ್ಲಾ
ಅಂದುಕೊಂಡೆನಾದರೂ.......

ಪ್ರತಿಬಾರಿ....
ನಮ್ಮಿಬ್ಬರ ನಡುವೆ
ಮಸೀದಿಯ ಗುಡ್ಡ
ಅಡ್ಡ ಬರುತ್ತಿತ್ತು.

ಅದೊಂದು ದಿನ –
ದೊಡ್ಡ ದೇವರ ಪಲ್ಲಕ್ಕಿ ಉತ್ಸವ
ಇಬ್ಬರನ್ನೂ ಸೀಳಿಕೊಂಡು
ಹೊರಟು ಹೋಯಿತು !

ಹೂವಿನಷ್ಟೇ ತಾಜಾ-ಕೋಮಲ
ಮಹಮದನ ಪ್ರೇಮ
ವಜ್ರದಷ್ಟೇ ಕಠಿಣ-ಕಠೋರ
ಸುತ್ತಣ ಜನರ ಆತ್ಮ.....

ಗಾಳಿ-ಬೆಂಕಿ ಸೇರಿಕೊಂಡು
ತನಗೆ ತಾನೆ ಕೂಡಿಕೊಂಡು
ಎಷ್ಟು ಸುತ್ತು ಉರಿದರೇನು
ಎಷ್ಟು ಹೊತ್ತು ಉರಿದರೇನು
ಉರಿಯೊಳಗೆ ಬಿರಿಯುತ್ತಿತ್ತು
ಬಿರಿದು ತಾನೆ ಬೆಳಗುತ್ತಿತ್ತು
ಪ್ರೇಮ ಪುಷ್ಪ ಅರಳುತ್ತಿತ್ತು.

ಸವಿತಾ ನಾಗಭೂಷಣ
ಅಂಚೆ ಅಧೀಕ್ಷಕರ ಕಛೇರಿ, ಚಿತ್ರದುರ್ಗ - ೫೭೭೫೦೧

# ನದೀ ತೀರದ ಹುಡುಗಿ

೧.

ಕನ್ಯಾ ಜಲ ಮಾಂತ್ರಿಕಳಂತೆ
ಆದಿ ತಳದಿ ಸುಳಿ ಬಿಚ್ಚಿ
ನೆರಳು ಹಡೆವ ಬೆರಗಿನ ಒಡಪನಿಡುವ
ಹೊಕ್ಕುಳ ನಿಜ ಬಳ್ಳಿಯಾದ ನೀರಂತೆ
ನದೀ ತೀರದ ಹುಡುಗಿ

ಆದಿ ಇಲ್ಲದ ನೀರು; ಅಂತ್ಯವಿಲ್ಲದ ತೇರು
ತಾನೆ ದೋಣಿ, ಅಲೆಯಲೆಯು ನಿಚ್ಚಣಿಕೆ
ರೂಹಿಲ್ಲದ ಚೆಲುವೆ ನಿಲುಕುವಳೆ ನಿನ್ನೆಗೆ
ಪರ್ವತ ಪ್ರೀತಿಯ ದಢೂತಿ ನಿಶ್ಚಲತೆಗೆ
ಮೀನು ಕುಣಿತದ ಅನಾದಿ ಜಲಪದದ ಭಾವಸೆಲೆ
ಜಲಮೂಲದಂತೆಯೇ ನಿಗೂಢ ಲೀಲೆ
ಅನಿಮಿಷ ಯೋಗಿಯ ನಾಡಿ ತಜ್ಞೆ
ತನ್ನ ಮೂಲಮಟ್ಟ ಕಾಯ್ದುಕೊಳ್ಳುವ
ಹಠಯೋಗಿನಿಗೆ ಉಳಿದೆಲ್ಲದರ ಬಗ್ಗೆ ಅವಜ್ಞೆ
ಕಾಲದ ವಕ್ರ ಹಾದಿಯಲ್ಲಿ ನಡೆದದ್ದೇ ನಾಂಟ್ಯವಾಗಿ
ಝುಲ್ಲ ಝುಲ್ಲ ಹರಿವು ಪಾತ್ರ
ನದಿಯು ನಾದಿದ ಹಾದಿಯ ಅಣುಕು ಮಾತ್ರ

ರಸದ ಸರಸ ಗುಟ್ಟಗಳ
ಅಪಾರದರ್ಶಕದಾಟದಲ್ಲಿ
ಇವಳ ಕಣ್ಣುಗಳಲ್ಲಿ ಗಲಗಲ ಜೀವಗಳ ಸಂತೆಯೇ ನೆರೆದು
ಸಾವಿನ ತೆಪ್ಪಕೂ ಆಗೀಗ ಮೀಟುಗೋಲಾಗುವ ನೀರಂತೆ
ಇವಳ ಪ್ರೀತಿ ನಿರ್ಬಣ್ಣ ; ಚಾಂಚಲ್ಯ ಜನ್ಯ

೨.

ಆಳಕ್ಕೆ ನೀಲಿ ಬಣ್ಣ ಕೊಟ್ಟ ಆಕಾಶದಂತೆ
ನದೀ ತೀರದ ಹುಡುಗಿ

ಇವಳ ಕತ್ತಲ ಕಣ್ಣುಗಳಲ್ಲಿ
ಇನ್ನೂ ಹುಟ್ಟಿರದ ಕೋಟಿ ಕೋಟಿ ಚುಕ್ಕೆಗಳ ಮಿನುಗು
ಕತ್ತಲೆತ್ತಿ ಕೊಡುವ ಬೊಗಸೆ ಬೊಗಸೆ ಸೂರ್ಯ ಸ್ವೇದವನ್ನೇ
ಬೆಳದಿಂಗಳಾಗಿಸಿ

ನೀರಸ ರಹಸ್ಯಗಳಲ್ಲಿ ನಗ್ನ ಕನ್ನೆ ತೇಲುತ್ತಾಳೆ
ಧೂಳ ಕಡಲಲ್ಲಿ ಬೆಳಕು ಬಡಿವಾಟದ ಬೆರಗು
ಮರೆಯುತ್ತಾಳೆ

ಇವಳ ಪೂರ್ವೀಕ ನೆತ್ತರುಪ್ಪಿನ ರುಚಿಯ ಋಣ
ಅನಂತಾಕಾಶದಂತೆ ಅನೂಹ್ಯ; ನೀಲಿಯಂತೆಯೇ ಆಳ
ಲಯ ತಪ್ಪದ ತಳಿಯ ವಿಲಯ ತಾಳ
ಘಾಸಿ ಜೀವಗಳ ತತ್ತರಗೆಡಿಸುವ ಕುರುಡು ಗಾಳ

೩.

ಕಾಯದ ತೇರಿಗೆ ಗಾಳಿಯ ಮಾಯದ ಗಾಲಿ
ಭ್ರಮೆಯ ಕನ್ನಡಿಯಲ್ಲಿ ತಥ್ಯವ ತಿದ್ದಿ ತೀಡುವ
ಬಹುರೂಪಿ ಮಂಜು ಮನದ ಮಂದ ಮಾರುತದಂತೆ
ನದೀ ತೀರದ ಹುಡುಗಿ

ತೇಲುವೊಂದೊಂದೂ ಮಾಗಿದೆಲೆ
ಕನಸಿನಿತಿಹಾಸದ ದಫ್ತರ ದಾಖಲೆ
ಇವಳು ಬರೆದೆಸೆದು ಮರೆತ ಕರುಳ ಪ್ರೀತಿಯ
ಅನಾಥ ಅಲೆ
ಅಸಂಖ್ಯ ನನ್ನಿ ನೆನಪುಗಳ ಚಂಡಮಾರುತವೆದ್ದಾಗ
ಛಿದ್ರ ಭಾವಗಳ ಹಾಯಿ ತೇಪೆ ಹೊಲೆಯುತ್ತ ಕೂತಳುವ
ವಿಲಕ್ಷಣ ವಿಲಾಪಗಳ ಹಡಗಿನೊಡತಿ
ಇವಳ ಒಂಟಿ ಪಯಣದ ಪ್ರತಿ ಉಸಿರೂ
ಹಮ್ಮೀರ ನಾಯಕರೆದೆಯ ಸಮೀರ ಗೀತೆ

ಉಸಿರಾಡುವಷ್ಟೇ ಸಲೀಸಾಗಿ
ಉಸಿರ ದಿಗ್ಬಂಧಿಸಬಲ್ಲ
ಪ್ರಾಣ ಮಂತ್ರ ಪಠಣ ಪ್ರವೀಣೆ

೪.

ಅಜ್ಞಾತ ರಹಸ್ಯಗಳಿಗೆ ಇಹದ ಇಂದ್ರಿಯಜಾಲದ



ಭಾಷ್ಯ ಬರೆವ ವಸುಂಧರೆಯ ಹಿಡಿಮಣ್ಣಂತೆ
ನದೀ ತೀರದ ಹುಡುಗಿ

ತೇವವಾದರೆ ಮಾತ್ರ ಎದೆಯಲ್ಲೇ ಮೊಳೆಯುತ್ತಾಳೆ
ಬಣ್ಣಗಳೇ ತನ್ನ ಜೀವವೆನ್ನುತ್ತಾಳೆ
ಜೀವಗಂಧದ ಗಾಬು ತೂರಿ ತೂರಿ
ಮಿಥುನ ಲಯಗಳ ಚಂಚಲಿತ ಸೊಲ್ಲೆತ್ತಿ
ಚಂದ್ರ ನಾಲಗೆಗೆ ಸೂರ್ಯನುರಿಯ ಬರೆ ಹಾಕಿ
ವಿಷಾಮೃತಗಳ ಒಟ್ಟಿಗೇ ಸೆರೆ ಇಳಿಸಿ
ನಿಶೆಗೇ ನಿಶೆಯೇರುವಂತೆ
ಅನೃತದ ನಗೆ ನಗುತ್ತಾಳೆ - ನಗೆಯೇ ಚೊಚ್ಚಿಲು ನಕ್ಕಂತೆ

ಇವಳು ನಿರ್ಭಾವುಕ ಭೂಮಿ ಪುತ್ರಿ; ಸಹಜ ಗರ್ಭ ಧಾತ್ರಿ
ಬೀಜಧ್ಯಾನದಲ್ಲಿ ಮರೆಯುತ್ತಾಳೆ ಎಲ್ಲ
ಮರೆತದ್ದನ್ನೂ ಮರೆತು ಮತ್ತೆ ಚಿಗುರುತ್ತಾ.....!

೫.

ಘನವಲ್ಲ, ದ್ರವವಲ್ಲ, ಹತ್ತುರಿವ ತಾನನಿಲವಲ್ಲ
ಮಥಿಸಿದೆಡೆ ಮೈದೋರಿ ಮೃತ್ಯುವಾಗುವ ಕಠಿಣ ಕಿಚ್ಚಂತೆ
ನದೀ ತೀರದ ಹುಡುಗಿ

ಬೆಂಕಿಯ ತನಿ ಎರೆದುಕೊಂಡು
ಕಾಪುಷ್ಪದ ವೀಳ್ಯವಿತ್ತು
ಕರಗಿ ಹರಿವ ಧಾತು ಜಲಧಿಯಲಿ ಮುಳುಗಿ
ಒಳಗೊಳಗೇ ರವ ರವ ವಡಬಾನಲ
ಜ್ವಾಲೆಗಿಂತಲೂ ತೀಕ್ಷ್ಣ ನಾಲಗೆಯಲ್ಲಿ ದಹಿಸುತ್ತ
ತಿದ್ದುತ್ತಾಳೆ ನಂಬಿಕೆಗಳ ಮೂಲರೂಪಗಳನ್ನ

ಭಗ ಭಗ ಮುಕ್ಕಲೇನೂ ಸಿಗದಿದ್ದರೆ
ಕ್ಷಣ ತಡಮಾಡದೆ ನಂದಿ ಹೋಗುತ್ತಾಳೆ
ಎದೆಯಾಳದಲ್ಲಿ ತಣ್ಣಗೆ ಸುಡುತ್ತಾಳೆ

೬.

ಚಕಿತ ಚಕಿತ ಇವಳ ನಿತ್ಯ ನಿರಂಜನ ಸತ್ಯವೆ ಚಕಿತ
ಚಕಿತ ಅರೂಪ; ಚಕಿತ ನಿರೂಪ
ನೆಲಭಾನುಗಳನೆ ಏಕಮಾಡುವ ತಾಂಡವ ನೃತ್ಯ ವಿಲಾಸವೆ ಚಕಿತ
ಚಕಿತ ಚಕಿತ ಹರಿಣಾಕ್ಷಿ ದ್ವಯಗಳ ಹರಿತವೆ ಚಕಿತ
ಹಗಲಗನಸಲ್ಲಿ ಇರುಳ ನಾವೆಗಳ ವಸಂತಯಾನವು ಚಕಿತ
ಕನ್ಯಾ ಕನಸಿಗೆ ಇರುಳೇ ಹಗಲು
ಅತ್ಯದ್ಭುತ ಕಾಲ ರಹಸ್ಯವು ಚಕಿತ
ನಾಡಿ ಬಡಿತದಲಿ ನಾಡಿಯೇ ಸಿಗದ
ನಾಡಿ ಸ್ತಂಭನ ಮೋಡಿಯೇ ಚಕಿತ

ನಾರೀ ಚಿದ್ವಿಲಾಸವು ಈ ಪರಿ
ತನ್ನೊಳು ತಾನೇ ಚಕಿತವಾಗಿರಲು
ನನ್ನೊಳಗಿನ್ನು ಅವಳ ಆದಿ ನದಿ
ಜುಳು ಜುಳು ಹರಿಯುತ್ತಿರಲು
ಚಕಿತವೊ ಚಕಿತ ತಣ್ಣಗೆ ಅವಳು
ಕೇಳಿದಳಲ್ಲ ಕನ್ನಡಿಯೆದುರು:
ನಿಮ್ಮದು ಯಾವ ನದಿ ?!

**ಲಕ್ಷ್ಮೀಪತಿ ಕೋಲಾರ**
'ಸಂಚಿಕೆ' ದಿನಪತ್ರಿಕೆ, ಪ್ರಧಾನ ಅಂಚೆ ಕಚೇರಿ ಪಕ್ಕ
ಗೌರಿ ಪೇಟೆ, ಕೋಲಾರ - ೫೬೩೧೦೧

**ಪಿತೂರಿ** ಅಥವಾ ಇಂಗ್ಲಿಷಿನ 'ಕಾನ್‌ಸ್ಪಿರಸಿ' ಎಂಬ ಶಬ್ದಕ್ಕೆ ಯಾವ ನಿಘಂಟಾದರೂ, ''ನ್ಯಾಯ ಬಾಹಿರವಾದ ಕಾರ್ಯದಲ್ಲಿ ತೊಡಗುವ ಉದ್ದೇಶದಿಂದ ಒಂದಾಗುವುದು'' ಎಂಬ ಅರ್ಥವನ್ನೇ ಕೊಡುತ್ತದೆ. ಆದರೆ ಇಂಗ್ಲಿಷೇ ಮಾತೃಭಾಷೆಯಾಗಿದ್ದ ಬ್ರಿಟಿಷ್ ಸಾಮ್ರಾಜ್ಯಶಾಹಿ ಅಧಿಕಾರಿಗಳಿಗೆ ''ಸ್ವಾತಂತ್ರ್ಯ, ಪ್ರಗತಿ, ಸಮಾಜವಾದ'' ಮುಂತಾದ ಭಾವನೆಗಳನ್ನು ಪ್ರಚಾರ ಮಾಡುವುದು, ಆ ತತ್ತ್ವಗಳ ಆಧಾರದ ಮೇಲೆ ಜನರನ್ನು ಸಂಘಟಿಸುವುದು ಮುಂತಾದುವೆಲ್ಲಾ 'ಪಿತೂರಿ'ಯಾಗಿಯೇ ಭಾಸವಾಗುತ್ತಿದ್ದುವು. ಬ್ರಿಟಿಷರು ಭಾರತವನ್ನು ಆಳುತ್ತಿದ್ದಾಗ ಮಹಾನ್ ದೇಶಭಕ್ತರು ಎದುರಿಸುತ್ತಿದ್ದ ಮೊಕದ್ದಮೆಗಳೆಂದರೆ ಈ ಬಗೆಯ 'ಪಿತೂರಿ' ಆಪಾದನೆಗಳು ಅಥವಾ ರಾಜದ್ರೋಹ. ಇಲ್ಲಿ ನಾವು ಪ್ರಸ್ತಾಪಿಸಲಿರುವ ಮೂರು ಪಿತೂರಿ

# 3 ಪಿತೂರಿ ಮೊಕದ್ದಮೆಗಳು

ಮೊಕದ್ದಮೆಗಳನ್ನು ೧೯೨೨ರಿಂದ ೧೯೩೩ರವರೆಗಿನ ಹನ್ನೊಂದು ವರ್ಷಗಳಲ್ಲಿ ಸಮಾಜವಾದವನ್ನು ಪ್ರಚಾರ ಮಾಡಲು ಹೊರಟ ಕಮ್ಯುನಿಸ್ಟರು ಎದುರಿಸ ಬೇಕಾಯಿತು. ಆ ಯುಗದಲ್ಲಿ ನಮ್ಮ ಜನ ಯಾವ ರೀತಿಯಲ್ಲಿ ಮೂಲಭೂತವಾದ ಅಭಿಪ್ರಾಯ ಹಾಗೂ ವಾಕ್ ಸ್ವಾತಂತ್ರ್ಯಗಳಿಂದಲೇ ವಂಚಿತರಾಗಿದ್ದರು ಎಂಬುದನ್ನು ಈ ಮೊಕದ್ದಮೆಗಳು ಎತ್ತಿ ತೋರಿಸುತ್ತವೆ.

**ಪೆಷಾವರ್ ಮೊಕದ್ದಮೆಗಳು - ಮುಹಾಜೀರ್‌ಗಳು**

ಪೆಷಾವರ್ ಪಿತೂರಿ ಮೊಕದ್ದಮೆಗಳು ಒಟ್ಟು ಐದು: ಹದಿನೇಳು ಮಂದಿ ಆಪಾದಿತರಾಗಿದ್ದು ಹದಿನೈದು ಮಂದಿ ಶಿಕ್ಷೆಗೆ ಗುರಿಯಾದರು, ಇಬ್ಬರು ಮಾಫಿ ಸಾಕ್ಷಿಗಳಾದರು. ಇವರೆಲ್ಲರೂ ಮುಹಾಜೀರ್‌ಗಳು : ಧರ್ಮನಿಷ್ಠನಾದ ಮುಸಲ್ಮಾನನೊಬ್ಬನು ತಾನು ಇರುವ ದೇಶದಲ್ಲಿ ಧಾರ್ಮಿಕವಾದ ಜೀವನವು ಅಸಾಧ್ಯವೆಂದು ಭಾವಿಸಿ ಬೇರೆ ದೇಶಕ್ಕೆ ವಲಸೆ ಹೋದರೆ ಆತ ಮುಹಾಜೀರ್ ಆಗುತ್ತಾನೆ.

೧೯೧೮ರಲ್ಲಿ ಮೊದಲ ಮಹಾಯುದ್ಧ ಮುಗಿದಾಗ ಸೋತ ರಾಷ್ಟ್ರಗಳಲ್ಲಿ ತುರ್ಕಿಯೂ ಒಂದು. ತುರ್ಕಿಯ ಸುಲ್ತಾನನು ಅಲ್ಲಿನ ಸಾಮ್ರಾಟನಾಗಿದ್ದುದು ಮಾತ್ರ ವಲ್ಲದೆ, ಜಗತ್ತಿನ ಮುಸಲ್ಮಾನರಿಗೆಲ್ಲ ಪರಮೋಚ್ಚ ಧರ್ಮ ಪ್ರಭುವಾದ ಖಲೀಫನೂ ಆಗಿದ್ದನು. ಆತನ ಸ್ಥಾನಮಾನ ಮತ್ತು ಮುಸ್ಲಿಂ ಪವಿತ್ರ ಕ್ಷೇತ್ರಗಳ ಹತೋಟಿ ಇವು ಭಾರತವೂ ಸೇರಿದಂತೆ ಎಲ್ಲ ದೇಶಗಳ ಮುಸ್ಲಿಂ ಜನರನ್ನು ಆತಂಕಕ್ಕೀಡುಮಾಡಿದ್ದುವು. ಗೆದ್ದವರಲ್ಲಿ ಬ್ರಿಟಿಷರು ಮುಖ್ಯರಾಗಿದ್ದು ಅವರ ಆ ಅಸಮಾಧಾನ ಹಾಗೂ ಆಕ್ರೋಶಗಳಿಗೆ ಗುರಿಯಾದರು. ಆ ಸಂದರ್ಭವನ್ನು ಹಿಂದು - ಮುಸ್ಲಿಂ ಐಕ್ಯಮತ್ಯವನ್ನು ಬೆಸೆಯುವ ಮಹದವಕಾಶವನ್ನಾಗಿ ಮಾಡಿಕೊಂಡು ಮಹಾತ್ಮಾ ಗಾಂಧಿ ಖಿಲಾಫತ್ - ಅಸಹಕಾರ ಚಳುವಳಿಯನ್ನು ಹೂಡಿದರು.

ಇದೇ ವೇಳೆಯಲ್ಲಿ ವಾಯವ್ಯ ಸರಹದ್ದು ಪ್ರಾಂತದ (ಈಗ ಪಾಕಿಸ್ತಾನದ ಭಾಗ) ಕೆಲವು ಧಾರ್ಮಿಕ ಮುಖಂಡರು 'ಹಿಜ್ರತ್' ಅಥವಾ ವಲಸೆ ಹೋಗುವ ಮಾತನ್ನೆತ್ತಿದರು. ಆ ಪ್ರಕಾರ ಸಾವಿರಾರು ಮಂದಿ ಆಫ್ಘಾನಿಸ್ತಾನಕ್ಕೆ ಹೋದರು. ಅಲ್ಲಿನ ಅಮೀರ (ರಾಜ) ಈ ವಲಸೆಗಾರರ ಹೊರೆ ತಾಳಲಾಗದೆ ಅವರನ್ನು ಹೊರದೂಡಿದ. ಆದರೆ ಸುಮಾರು ೨೦೦ ಮಂದಿ ಮುಂದೆ ಪ್ರಯಾಣ ಮಾಡಿದರು. ತುರ್ಕಿಗೆ ಹೋಗಿ ಅಲ್ಲಿ ಬ್ರಿಟಿಷರ ವಿರುದ್ಧವಾಗಿ ಹೋರಾಡುತ್ತಿದ್ದ ಜನರೊಂದಿಗೆ ಸೇರಿಕೊಳ್ಳುವುದು ಅವರ ಗುರಿ. ಅವರು ಮುಂದೆ ಪ್ರಯಾಣ ಮಾಡಿ ಅಮು ದರ್ಯಾ ನದಿಯನ್ನು ದಾಟಿ ಸೋವಿಯೆತ್ ರಷ್ಯಕ್ಕೆ ಸೇರಿದ್ದ ಭೂ ಪ್ರದೇಶವನ್ನು ಪ್ರವೇಶಿಸಿದರು. ಅಲ್ಲಿ ೧೯೧೭ರ ಕ್ರಾಂತಿಯ ನಂತರ ಅಲ್ಲಿನ ಕೆಲವು ಗುಂಪುಗಳು ಸೋವಿಯೆತ್ ಸರ್ಕಾರದ ವಿರುದ್ಧವಾಗಿ ಹೋರಾಡುತ್ತಿದ್ದು, ಅವಕ್ಕೆ ಬ್ರಿಟಿಷರ ಬೆಂಬಲವಿತ್ತು. ಈ ಮುಹಜೀರ್‌ಗಳು ಅಂತಹವರ ವಶಕ್ಕೆ ಸಿಕ್ಕಿ ಪಾರಾಗಿ ಕೊನೆಗೆ ತಾಷ್ಕೆಂಟನ್ನು ತಲುಪಿದರು. ಇವರು ಮಾಡಿದ ಪ್ರಯಾಣದ ದಾರಿಯನ್ನು ನಕ್ಷೆಯು ತೋರಿಸುತ್ತದೆ. ಜೆ.ಎಚ್.ಆರ್. ಫ್ರೇಜರ್ ಎಂಬ ಸೆಷನ್ಸ್ ನ್ಯಾಯಾಧೀಶ ಈ ಪ್ರಯಾಣವನ್ನು ''ಒಂದು ರಮ್ಯ ಸಾಹಸ ಪ್ರಸಂಗ'' ಎಂಬುದಾಗಿ ಬಣ್ಣಿಸಿದ್ದಾನೆ.

**ತಾಷ್ಕೆಂಟಿನಲ್ಲಿ ತರಪೇತಿ**

ಆ ವೇಳೆಗೆ ತಾಷ್ಕೆಂಟಿನಲ್ಲಿ ಭಾರತೀಯ ಕ್ರಾಂತಿಕಾರಿಗಳ ಎರಡು ಗುಂಪುಗಳವರು ಸೇರಿದ್ದರು. ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಭಾರತೀಯ ಕ್ರಾಂತಿಕಾರಿಗಳ ಒಂದು ಗುಂಪು ಜರ್ಮನಿಯ ನೆರವಿನಿಂದ ಭಾರತೀಯ ಸೇನೆಯೊಂದನ್ನು ಕಟ್ಟುವ ಪ್ರಯತ್ನ ಮಾಡಲು ನಿರ್ಧರಿಸಿ ಜರ್ಮನ್-ಭಾರತೀಯ ಸ್ನೇಹ ಸಮಿತಿಯೊಂದನ್ನು ಸ್ಥಾಪಿಸಿದ್ದರು. ಲಾಲಾ ಹರದಯಾಳ್, ವೀರೇಂದ್ರನಾಥ ಚಟ್ಟೋಪಾಧ್ಯಾಯ (ಸರೋಜಿನಿ ನಾಯ್ಡು ಅವರ ಅಣ್ಣ), ಭೂಪೇಂದ್ರನಾಥ ದತ್ತ (ವಿವೇಕಾನಂದರ ತಮ್ಮ) ಇದರಲ್ಲಿದ್ದವರು. ಇದನ್ನು ಬರ್ಲಿನ್ ಸಮಿತಿ ಎಂದು ಕರೆದರು. ಅಲ್ಲಿ ವಿಫಲರಾದಾಗ ರಾಜಾ ಮಹೇಂದ್ರ ಪ್ರತಾಪ್ ಮತ್ತು ಒಬೈದುಲ್ಲಾ ಅವರುಗಳು ಆಫ್ಘಾನಿಸ್ತಾನದಲ್ಲಿ ಸ್ವತಂತ್ರ ಭಾರತದ ತಾತ್ಕಾಲಿಕ ಸರ್ಕಾರವೊಂದನ್ನು ಸ್ಥಾಪಿಸಿದರು. ಯುದ್ಧಾನಂತರ ಅವರ ತಂಡ ರಷ್ಯಕ್ಕೆ ಹೋಗಿ ಅವರಲ್ಲಿ ಕೆಲವರು ತಾಷ್ಕೆಂಟಿಗೆ ಬಂದಿದ್ದರು. ಎಂ.ಪಿ.ಬಿ.ಟಿ. ಆಚಾರ್ಯ ಮತ್ತು ಅಬ್ದುಲ್ ರಬ್ ಅವರಲ್ಲಿ ಮುಖ್ಯರು.

ಭಾರತದಲ್ಲಿಯೇ ಜರ್ಮನರಿಂದ ಶಸ್ತ್ರಾಸ್ತ್ರ ನೆರವು ಪಡೆದು ಬಂಡಾಯವೆಬ್ಬಿಸಿ, ಭಾರತೀಯ ಸೈನ್ಯವನ್ನೂ ತಮ್ಮತ್ತ ಸೆಳೆದುಕೊಳ್ಳುವ ಪ್ರಯತ್ನ ನಡೆಸಿತು ಇನ್ನೊಂದು ಗುಂಪು. ಇದರಲ್ಲಿ ಎಂ.ಎನ್.ರಾಯ್ (ಮಾನವೇಂದ್ರನಾಥ ರಾಯ್) ಮುಖ್ಯರು. ಅವರು ಡಚ್ ಈಸ್ಟ್ ಇಂಡೀಸ್ (ಇಂಡೋನೇಷಿಯಾ), ಚೀಣಾ, ಜಪಾನ್, ಅಮೆರಿಕಗಳಲ್ಲೆಲ್ಲಾ ತಿರುಗಿ ಕೊನೆಗೆ ಮೆಕ್ಸಿಕೋವಿಗೆ ಬಂದರು. ಅಲ್ಲಿನ ಸೋಷಲಿಸ್ಟ್ ಪಕ್ಷದ ಕಾರ್ಯದರ್ಶಿಯಾಗಿ, ಅದನ್ನೇ ಕಮ್ಯುನಿಸ್ಟ್ ಪಕ್ಷವಾಗಿ ಮಾರ್ಪಡಿಸಿದರು. ರಷ್ಯದ ಕ್ರಾಂತಿಯ ನಂತರ ಸ್ಥಾಪನೆಯಾದ ಕಮ್ಯುನಿಸ್ಟ್ ಇಂಟರ್‌ನ್ಯಾಷನಲ್ಲಿನ ಎರಡನೆಯ ಸಮಾವೇಶಕ್ಕಾಗಿ ರಷ್ಯಕ್ಕೆ ಬಂದರು. ಅಲ್ಲಿ ಕಮ್ಯುನಿಸ್ಟ್ ಇಂಟರ್‌ನ್ಯಾಷನಲ್‌ನಲ್ಲಿ ಏಷ್ಯಾದ ದೇಶಗಳಲ್ಲಿ, ಮುಖ್ಯವಾಗಿ ಭಾರತದಲ್ಲಿ, ಕಮ್ಯುನಿಸ್ಟ್ ಪಕ್ಷವನ್ನು ಸಂಘಟಿಸುವ ಕಾರ್ಯಕ್ಕೆ ನಿಯುಕ್ತರಾದರು. ಅವರೂ ಆಗ ತಾಷ್ಕೆಂಟಿನಲ್ಲಿದ್ದರು.

ತಾಷ್ಕೆಂಟಿನಲ್ಲಿ ೧೯೨೦ರ ಅಕ್ಟೋಬರ್ ೧೭ರಂದು ಭಾರತೀಯ ಕಮ್ಯುನಿಸ್ಟ್ ಪಕ್ಷವನ್ನು ಸ್ಥಾಪಿಸಲಾಯಿತು. ಅಲ್ಲಿ ಕೆಲವು ಮುಹಾಜೀರ್‌ಗಳಿಗೆ ಸೈನಿಕ ತರಪೇತಿ ಹಾಗೂ ಸಾಮಾನ್ಯ ಶಿಕ್ಷಣವನ್ನು ವ್ಯವಸ್ಥೆ ಮಾಡಲು ''ಇಂಡಸ್ಕಿಕರ್'' ಎಂಬ ಶಾಲೆಯನ್ನು ಪ್ರಾರಂಭಿಸಿದರು. ಇಲ್ಲಿ ತರಪೇತಿ ಪಡೆದವರನ್ನು ಮಾಸ್ಕೋವಿನಲ್ಲಿದ್ದ ಪೌರ್ವಾತ್ಯ ಶ್ರಮಜೀವಿಗಳ ವಿಶ್ವವಿದ್ಯಾಲಯಕ್ಕೆ ಕಳುಹಿಸಿ ಅಲ್ಲಿಯೂ ಶಿಕ್ಷಣ ನೀಡಲಾಯಿತು.

**ಎನ್. ಪಿ. ಶಂಕರನಾರಾಯಣರಾವ್**

**ಭಾರತಕ್ಕೆ ವಾಪಸು, ಬಂಧನ ಮತ್ತು ಶಿಕ್ಷೆ**

ಆ ರೀತಿ ಕಮ್ಯುನಿಸ್ಟರೊಂದಿಗೆ ಸೇರಿಕೊಳ್ಳಲು ಇಷ್ಟ ಪಡದೆ ಹೋದ ಮುಹಾಜೀರ್‌ಗಳಲ್ಲಿ ಕೆಲವರು ತುರ್ಕಿಗೆ ಹೋಗುವ ಪ್ರಯತ್ನದಲ್ಲಿ ತೊಡಗಿದರು. ಉಳಿದವರು ಭಾರತಕ್ಕೆ ಹಿಂದಿರುಗಿದರು. ಹಿಂದಿರುಗಿ ಬಂದವರನ್ನು ಬ್ರಿಟಿಷ್ ಗೂಢಚಾರ ಅಧಿಕಾರಿಯಾಗಿದ್ದ ಎವಾರ್ಟ್ ಪ್ರಶ್ನಿಸಿದಾಗ ತಾಷ್ಕೆಂಟಿನ ಬೆಳವಣಿಗೆಗಳೆಲ್ಲ ಹೊರಬಂದವು. ಆಗಿನಿಂದ ಹಿಂದಿರುಗಿ ಬರುವ ಮುಹಾಜೀರ್‌ಗಳತ್ತ ಗಮನ ಹರಿಸುವ ಏರ್ಪಾಡುಗಳು ಆದುವು.

ತರಪೇತಿ ಪಡೆದಿದ್ದವರಲ್ಲಿ ಒಬ್ಬನಾದ ಮಹಮದ್ ಅಕ್ಬರ್ ಉರುಫ್ ಅಕ್ಬರ್ ಖುರೈಷಿಯು ಕಾಬೂಲಿಗೆ ಬಂದಾಗ, ಪಂಜಾಬ್ ಗೂಢಚಾರ ಇಲಾಖೆಗೆ ಬೇಹುಗಾರನಾಗಿದ್ದ ಅವನ ತಂದೆ ಹಫೀಜುಲ್ಲಾ ಮಗ ಭಾರತಕ್ಕೆ ಬಂದರೆ ಕ್ಷೇಮವೇ ಎಂದು ಅಧಿಕಾರಿಗಳನ್ನು ವಿಚಾರಿಸಿದ. ಭಾರತ - ಆಫ್ಘಾನಿಸ್ತಾನ ಗಡಿಯಲ್ಲಿ ಯಾರ ಹತೋಟಿಗೂ ಒಳಪಡದಿದ್ದ ಚಾಮರ್‌ಕುಡ್ ಎಂಬ ಜಾಗವಿತ್ತು. ಅಕ್ಬರ್ ಅಲ್ಲಿಗೂ ಹೋಗಿದ್ದ. ಇವೆಲ್ಲವೂ ಗೂಢಚಾರರಿಗೆ ತಿಳಿದಿದ್ದರೂ ಆ ತಂದೆ ಮಗ ರಹಸ್ಯವಾಗಿ ಲಾಹೋರಿಗೆ ಬಂದು ತಂಗಿದರು. ೧೯೨೧ರ ಸೆಪ್ಟೆಂಬರ್ ೨೫ರಂದು ಪೆಷಾವರಿನ ಬಳಿ ಮತ್ತೆ ಗಡಿ ದಾಟುವ ಪ್ರಯತ್ನದಲ್ಲಿದ್ದಾಗ ಅಕ್ಬರನನ್ನೂ ಅವನ ಆಳು ಬಹದೂರನನ್ನೂ ಬಂಧಿಸಲಾಯಿತು. ಬಳಿಕ ಅವನ ತಂದೆ ಹಫೀಜುಲ್ಲಾನನ್ನೂ ಬಂಧಿಸಿದರು. ಅವರ ಮೇಲೆ ಹೂಡಿದ ಮೊಕದ್ದಮೆಯೇ ಪೆಷಾವರ್ ಮೊಕದ್ದಮೆಗಳಲ್ಲಿ ಮೊದಲನೆಯದು. ಆದರೆ ಈ ಮೊಕದ್ದಮೆಯಲ್ಲಿ ಆತನ ಹೆಸರು ಅಕ್ಬರ್ ಖುರೈಷಿ ಎಂದು ದಾಖಲಾಗಿದೆ.

ಇದೇ ರೀತಿ ಸುದ್ದಿ ದೊರೆತಿದ್ದ ಉಳಿದ ತಾಷ್ಕೆಂಟ್ ತರಪೇತಿ ಪಡೆದಿದ್ದ ಮುಹಾಜೀರ್‌ಗಳನ್ನು ಬಂಧಿಸಿ, ಮೊಕದ್ದಮೆ ಹೂಡಲಾಯಿತು. ಪೆಷಾವರ್ ೩ನೆಯ ಮೊಕದ್ದಮೆಯನ್ನು ಮಾಸ್ಕೋ ತಾಷ್ಕೆಂಟ್ ಪಿತೂರಿ ಮೊಕದ್ದಮೆ ಎಂದು ಹೆಸರಿಸಲಾಗಿದ್ದು ಅದರಲ್ಲಿ ೧೦ ಮಂದಿ ಆಪಾದಿತರಿದ್ದು ಇಬ್ಬರು ಮಾಫಿ ಸಾಕ್ಷಿಗಳಾದರು. ೫ನೆಯ ಮೊಕದ್ದಮೆ ೧೯೨೭ರಲ್ಲಿ ಫಜಲ್ ಇಲಾಹಿ ಕುರ್ಬಾನ್ ಎಂಬುವರ ವಿರುದ್ಧವಾದುದು.

ಈ ಎಲ್ಲ ಮೊಕದ್ದಮೆಗಳಲ್ಲಿ ಹೊರಿಸಿದ ಆಪಾದನೆಯು ದಂಡ ಸಂಹಿತೆಯ ೧೨೧-ಎ ವಿಧಿಯ ಪ್ರಕಾರವಾದದ್ದು. ವಿಧಿ ೧೨೧ ''ರಾಜನಿಗೆ ವಿರುದ್ಧವಾಗಿ ಯುದ್ಧ ಹೂಡುವುದು ಅಥವಾ ಯುದ್ಧ ಹೂಡಲು ಪ್ರಯತ್ನಿಸುವುದ''ಕ್ಕೆ ಸಂಬಂಧಿಸಿದೆ. ೧೨೧-ಎ ಯು ''ವಿಧಿ ೧೨೧ರ ಪ್ರಕಾರ ಶಿಕ್ಷೆಗೆ ಅರ್ಹವಾಗುವ ಅಪರಾಧಗಳನ್ನೆಸಗಲು 'ಪಿತೂರಿ' ನಡೆಸಿದರೆ'' ಎಂದು ಹೇಳುತ್ತದೆ. ಆದ್ದರಿಂದ ಕೆಲವರು ಒಂದುಗೂಡಿದ್ದರು, ಅವರ ಉದ್ದೇಶವು ಸ್ವತಂತ್ರಗೊಳ್ಳುವುದು ಎಂಬುದಷ್ಟು ರುಜುವಾತಾದರೆ ಆಪಾದನೆ ರುಜುವಾತಾದಂತೆ.

ಹೀಗಾಗಿ, ಆಪಾದಿತರು ತಾಷ್ಕೆಂಟಿನ ಶಾಲೆಗೆ ಸೇರಿದ್ದರು, ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿದ್ದರು ಎಂಬುದಷ್ಟನ್ನು ರುಜುವಾತು ಮಾಡಿದ್ದರೆ ಸಾಕಿತ್ತು. ಅದು ಸುಲಭವಾಗಿ ರುಜುವಾತಾಯಿತು. ಆಪಾದಿತರಾದ ೧೭ ಮಂದಿಯಲ್ಲಿ ಅಬ್ದುಲ್ ಖಾದರ್ ಮತ್ತು ಹಫೀಜುಲ್ಲಾ ಇಬ್ಬರನ್ನು ಮುಕ್ತಗೊಳಿಸಲಾಯಿತು. ಗರಿಷ್ಠ ಸಜಾ ದೊರೆತುದು ಮಹಮದ್ ಅಕ್ಬರ್ ಉರುಫ್ ಅಕ್ಬರ್ ಖುರೈಷಿಗೆ. ಮೊಕದ್ದಮೆ ೧ರಲ್ಲಿ ೩ ವರ್ಷ, ಮೊಕದ್ದಮೆ ೨ರಲ್ಲಿ ೩ ತಿಂಗಳ ಏಕಾಂತ ಸೆರೆ ಸೇರಿದಂತೆ ೭ ವರ್ಷ ಸಜಾ ಆತನಿಗೆ ದೊರೆಯಿತು. ೩ ಮಂದಿಗೆ ೫ ವರ್ಷ ದೊರೆಯಿತು. ಅವರಲ್ಲಿ ಫಜಲ್ ಇಲಾಹಿ ಕುರ್ಬಾನ್ ಎಂಬಾತನಿಗೆ ಅದನ್ನು ೩ ವರ್ಷಕ್ಕೆ ಇಳಿಸಲಾಯಿತು. ಒಬ್ಬರಿಗೆ ೩ ವರ್ಷ, ಇಬ್ಬರಿಗೆ ೨ ವರ್ಷ, ೬ ಮಂದಿಗೆ ೧ ವರ್ಷ ಮತ್ತು ಮಾಫಿ ಸಾಕ್ಷಿಗಳಾದ ಕಾರಣ ಇಬ್ಬರಿಗೆ ಖುಲಾಸೆ ಆಯಿತು.

**ಕಾನ್ಪುರ ಪಿತೂರಿ ಮೊಕದ್ದಮೆ - ಹಿನ್ನೆಲೆ**

೧೯೧೨ರ ವೇಳೆಗೇ ವಿದೇಶಗಳಲ್ಲಿ ನೆಲೆಸಿದ್ದ ಪ್ರಸಿದ್ಧ ಕ್ರಾಂತಿಕಾರಿ ಲಾಲಾ ಹರದಯಾಳ್ 'ಮಾಡರ್ನ್ ರಿವ್ಯೂ' ಪತ್ರಿಕೆಯಲ್ಲಿ ಕಾರ್ಲ್ ಮಾರ್ಕ್ಸ್‌ರ ಒಂದು

ಜೀವನ ಚರಿತ್ರೆಯನ್ನು ಬರೆದಿದ್ದರು. ಸುಮಾರು ಅದೇ ಸಮಯದಲ್ಲಿ ಸ್ವದೇಶಾಭಿಮಾನಿ ರಾಮಕೃಷ್ಣನ್ ಪಿಳ್ಳೆ ಎಂಬುವರು ಮಲಯಾಳಂ ಭಾಷೆಯಲ್ಲಿ ಮಾರ್ಕ್ಸ್‌ರ ಒಂದು ಜೀವನ ವೃತ್ತವನ್ನು ಬರೆದಿದ್ದರು. ೧೯೧೭ರ ಕ್ರಾಂತಿಯ ನಂತರ ಸಹಜವಾಗಿ ಮಾರ್ಕ್ಸ್, ಲೆನಿನ್, ಸಮಾಜವಾದ ಮುಂತಾದುವು ಹೆಚ್ಚುಮಟ್ಟಿನ ಗಮನಕ್ಕೆ ಪಾತ್ರವಾದುವು : ೧೯೧೯-೨೨ರ ಅಸಹಕಾರ - ಖಿಲಾಫತ್ ಚಳವಳಿಯು ಗಮನಾರ್ಹವಾದ ಯಾವ ಸಾಧನೆಯನ್ನೂ ಸಾಧಿಸದೆ ಸಪ್ಪೆಯಾಗಿ ಮುಕ್ತಾಯಗೊಂಡುದು ಹಲವಾರು ಉತ್ಸಾಹಿಗಳನ್ನು ಚಿಂತನೆಗೀಡುಮಾಡಿತು. ಇಂತಹ ಚಿಂತನ ಮಂಥನದಲ್ಲಿ ಸಮಾಜವಾದದತ್ತ ಒಲಿದವರೆಂದರೆ ಮುಂಬಯಿನ ಎಸ್. ಎ. ಡಾಂಗೆ, ಮದರಾಸಿನ ಸಿಂಗಾರವೇಲು ಚೆಟ್ಟಿಯಾರ್, ಕಲ್ಕತ್ತೆಯ ಮುಜಫರ್ ಅಹಮದ್ ಮುಂತಾದವರು. ತಾಷ್ಕೆಂಟಿನಲ್ಲಿದ್ದ ಭಾರತೀಯ ಕ್ರಾಂತಿಕಾರಿಗಳಲ್ಲಿ ಅಬ್ದುಲ್ ರಬ್ ಅವರ ಹೆಸರನ್ನು ನೋಡಿದ್ದೇವೆ. ಅವರು ಕಾಬೂಲಿನಲ್ಲಿರುವಾಗ ಪಂಜಾಬಿನಿಂದ ಗುಲಾಮ್ ಹುಸೇನ್ ಅವರನ್ನು ಕರೆಸಿ ಕಮ್ಯುನಿಸ್ಟ್ ತತ್ತ್ವಗಳತ್ತ ಒಲಿಸಿದ್ದರು. ಕಮ್ಯುನಿಸ್ಟ್ ಇಂಟರ್‌ನ್ಯಾಷನಲ್‌ನ ಪರವಾಗಿ ಎಂ. ಎನ್. ರಾಯ್ ಹೊರಗಿದ್ದುಕೊಂಡೇ ಬಿರುಸಾದ ಪತ್ರವ್ಯವಹಾರಗಳ ಮೂಲಕ ಇವರೆಲ್ಲರೊಂದಿಗೆ ಸಂಪರ್ಕವಿರಿಸಿಕೊಂಡಿದ್ದರು.




ಈ ಚಟುವಟಿಕೆಗಳೆಲ್ಲ ಮೂರು ಮುಖ್ಯ ರೂಪಗಳನ್ನು ತಳೆದವು. ಮೊದಲನೆಯದೆಂದರೆ ನಿಯತಕಾಲಿಕಗಳು ಮತ್ತು ಪುಸ್ತಕಗಳ ಪ್ರಕಟಣೆ. ೧೯೨೨ರ ಆಗಸ್ಟ್‌ನಲ್ಲಿ ಡಾಂಗೆಯವರು ''ದಿ ಸೋಷಲಿಸ್ಟ್'' ಎಂಬ ವಾರಪತ್ರಿಕೆಯನ್ನು, ೧೯೨೩ರ ಕೊನೆಯಲ್ಲಿ ಸಿಂಗಾರವೇಲು ''ದಿ ಲೇಬರ್ ಕಿಸಾನ್ ಗೆಜೆಟ್'' ಎಂಬ ಪಾಕ್ಷಿಕವನ್ನೂ ಪ್ರಾರಂಭಿಸಿದರು. ಗುಲಾಮ್ ಹುಸೇನ್ ಉರ್ದುವಿನಲ್ಲಿ ''ಇನ್ಕಿಲಾಬ್'' ಎಂಬ ಪತ್ರಿಕೆಯನ್ನು ಹೊರಡಿಸಿದರು : ಡಾಂಗೆ, ರಾಯ್, ಸಿಂಗಾರವೇಲು ಎಲ್ಲರೂ ಕಿರುಪುಸ್ತಕಗಳನ್ನು ಹೊರತಂದರು.

ಕಾರ್ಮಿಕ ಸಂಘಟನೆಗಳು ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿಯೇ ತಲೆಯೆತ್ತಿದ್ದುವು. ಮೊದಲನೆಯ ಮಹಾಯುದ್ಧವು ಕೊನೆಗೊಂಡ ನಂತರ ಸಂಕಷ್ಟಗಳಿಗೊಳಗಾಗಿದ್ದ ಕಾರ್ಮಿಕರು ಮುಷ್ಕರಗಳನ್ನು ಹೂಡುವ ಪರಿಪಾಠ ಪ್ರಬಲವಾಯಿತು. ಕಾರ್ಮಿಕ ಸಂಘಗಳು ಹುಟ್ಟಿದುವು. ಬಲಗೊಂಡುವು. ಎಲ್ಲ ಪ್ರಮುಖ ರಾಷ್ಟ್ರೀಯ ನಾಯಕರೂ ಇವುಗಳನ್ನು ಪ್ರೋತ್ಸಾಹಿಸಿದರು. ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ ಸ್ಥಾಪನೆಯಾದುದು ಆಗಲೇ.

ರಾಜಕೀಯ ಕ್ಷೇತ್ರದಲ್ಲಿ ಈ ತಂಡದವರು ಎರಡು ರೀತಿಗಳಲ್ಲಿ ಕಾರ್ಯನಿರತರಾದರು. ಆಗಿನ ಪ್ರಮುಖ ರಾಷ್ಟ್ರೀಯ ಸಂಘಟನೆಯಾಗಿದ್ದ ಕಾಂಗ್ರೆಸ್ಸಿಗೆ ಸೇರಿ ಅಲ್ಲಿ ಹೆಚ್ಚು ಮಂದಿಯ ನಡುವೆ ಸಮಾಜವಾದ ಹಾಗೂ ಪ್ರಗತಿಪರ ಧೋರಣೆಗಳತ್ತ ಒಲವು ಮೂಡುವಂತೆ ಮಾಡುವುದು ಒಂದು ರೀತಿ. ಅಹಮದಾಬಾದ್ ಮತ್ತು ಗಯಾಗಳಲ್ಲಿ ಕಾಂಗ್ರೆಸ್ ಅಧಿವೇಶನಗಳು ನಡೆದಾಗ ಮುದ್ರಿತ ಮನವಿಗಳು, ಅಧಿವೇಶನಗಳಲ್ಲಿ ಭಾಷಣ ಮಾಡುವುದು, ಇಂತಹವುಗಳಲ್ಲಿ ತೊಡಗಿದರು. ಅದರೊಂದಿಗೇ ತಮ್ಮನ್ನು ಸಂಘಟಿಸಿಕೊಂಡು, ಕಾರ್ಮಿಕ - ರೈತ ಪಕ್ಷಗಳನ್ನು ಕಟ್ಟುವ ಪ್ರಯತ್ನಗಳು ಆರಂಭವಾದುವು. ಸಿಂಗಾರವೇಲು ಮದ್ರಾಸಿನಲ್ಲಿ ''ಹಿಂದುಸ್ತಾನ್ ಲೇಬರ್ ಕಿಸಾನ್ ಪಾರ್ಟಿ''ಯನ್ನೂ, ಡಾಂಗೆ ಮುಂಬಯಿನಲ್ಲಿ ''ಇಂಡಿಯನ್ ಸೋಷಲಿಸ್ಟ್ ಲೇಬರ್ ಪಾರ್ಟಿ ಆಫ್ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್'' ಅನ್ನೂ ಆರಂಭಿಸಿದರು.

ಈ ಎಲ್ಲ ಚಟುವಟಿಕೆಗಳು ಸರ್ಕಾರದ ಗಮನಕ್ಕೆ ಬರುತ್ತಲೇ ಇದ್ದುವು. ತಾನು ಏನು ನಡವಳಿಕೆಯನ್ನು ಕೈಗೊಳ್ಳಬೇಕು ಎಂಬುದರ ಬಗ್ಗೆ ಅದು ಗಮನ ಹರಿಸಿತು.

**ಸಮಾಲೋಚನೆಗಳು ಮತ್ತು ಕ್ರಮ**

೧೯೨೩ರ ಜೂನಿನಲ್ಲಿ ಈ ಸಮಾಲೋಚನೆ ಆರಂಭವಾಯಿತು. ಆಗ ಸರ್ಕಾರದ ಕಾನೂನು ಸಲಹೆಗಾರರು ಮುಂಬಯಿ, ಕಲ್ಕತ್ತಾ ಅಥವಾ ಮದ್ರಾಸ್‌ಗಳಲ್ಲಿ ೧೨೧-ಎ ಪ್ರಕಾರ ಕ್ರಮ ಜರುಗಿಸುವುದು ಸೂಕ್ತವಲ್ಲ ಎಂದರು. ಗುಲಾಮ್ ಹುಸೇನ್ ಮತ್ತು ನಳಿನಿ ಗುಪ್ತ ಎಂಬ ಇಬ್ಬರನ್ನು ಪೊಲೀಸರು ಪ್ರಶ್ನೆಗಳಿಗೆ ಗುರಿಮಾಡಿದಾಗ ಹಲವಾರು ವಿಚಾರಗಳು ಸರ್ಕಾರದ ಗಮನಕ್ಕೆ ಬಂದುವು. ಮುಜಾಫರ್ ಅಹಮದ್‌ರನ್ನು ಬಂಧಿಸಿ ಪ್ರಶ್ನಿಸಿದಾಗ, ಒಂದು ಹಂತದಲ್ಲಿ ಅವರಿಗೆ ಎಂ. ಎನ್. ರಾಯ್ ಮತ್ತು ಇತರರ ನಡುವೆ, ನಿರ್ದಿಷ್ಟವಾಗಿ ರಾಯ್ ಮತ್ತು ಮುಜಾಫರ್ ಅಹಮದ್‌ರ ನಡುವೆ, ನಡೆದಿದ್ದ ಪತ್ರ ವ್ಯವಹಾರದ ಪ್ರತಿಗಳನ್ನೇ ತೋರಿಸಲಾಯಿತು. ಹೀಗೆ ಬೇಹುಗಾರಿಕೆ ಇಲಾಖೆಯವರು ನಾನಾ ತಂತ್ರಗಳನ್ನು ಬಳಸಿ ಸಂಬಂಧಪಟ್ಟವರು ತಮ್ಮ ಕಾರ್ಯ ಚಟುವಟಿಕೆಗಳ ಬಗ್ಗೆ ಒಪ್ಪಿಕೊಳ್ಳುವಂತೆ ಮಾಡಿದರು. ಆ ಚಟುವಟಿಕೆಗಳು ಸಾಮಾನ್ಯ ದೃಷ್ಟಿಯಲ್ಲಿ ನ್ಯಾಯಬಾಹಿರವಾದಂತಹವೂ ಅಲ್ಲ.

ಈ ಸಮಾಲೋಚನೆಗಳ ಪರಿಣಾಮವಾಗಿ ಡಿಸೆಂಬರ್ ೧೯೨೩ರ ವೇಳೆಗೆ ಆಪಾದಿತರನ್ನಾಗಿ ೧೩ ಮಂದಿಯನ್ನು ಗುರುತಿಸಲಾಯಿತು. ಕಾನೂನು ಸಲಹೆಗಾರರು ಆ ಪಟ್ಟಿ ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ೫ ಮಂದಿಯ ಕೈಬಿಟ್ಟರು. ಫೆಬ್ರವರಿ ೧೯೨೪ರಲ್ಲಿ ಕಾನ್‌ಪುರದ ಮ್ಯಾಜಿಸ್ಟ್ರೇಟರ ಮುಂದೆ ೮ ಮಂದಿ ''ರಾಯ್ ಸೇರಿದಂತೆ ಪ್ರಖ್ಯಾತ ಬಾಲ್ಷೆವಿಕರ'' ವಿರುದ್ಧವಾಗಿ ಮೊಕದ್ದಮೆ ಹೂಡುವ ನಿರ್ಧಾರ ಕೈಗೊಳ್ಳಲಾಯಿತು. ಅವರ ಹೆಸರುಗಳು ಹೀಗಿವೆ : ೧) ಎಂ. ಎನ್. ರಾಯ್; ೨) ಮುಜಾಫರ್ ಅಹಮದ್; ೩) ಶೌಕತ್ ಹುಸೇನ್ ಉಸ್ಮಾನಿ; ೪) ಎಸ್. ಎ. ಡಾಂಗೆ; ೫) ಗುಲಾಮ್ ಹುಸೇನ್; ೬) ನಳಿನಿ ಗುಪ್ತ; ೭) ಎಂ. ಸಿಂಗಾರವೇಲು ಮತ್ತು ೮) ಆರ್. ಸಿ. ಎಲ್. ಶರ್ಮ. ಇವರಲ್ಲಿ ರಾಯ್ ಜರ್ಮನಿಯಲ್ಲಿದ್ದರು. ಶರ್ಮ ಪಾಂಡಿಚೆರಿಯಲ್ಲಿದ್ದರು. ಗುಲಾಮ್ ಹುಸೇನ್ ಲಾಹೋರ್ ಸೆರೆಮನೆಯಲ್ಲಿದ್ದರು. ಅವರನ್ನು ಕಾನ್ಪುರಕ್ಕೆ ಕರೆತರಲಿಲ್ಲ. ಸಿಂಗಾರವೇಲು ಅವರ ವಿರುದ್ಧವಾಗಿ ಕ್ರಮ ಕೈಗೊಳ್ಳುವುದನ್ನು ಕೈಬಿಡಲಾಯಿತು.

ಹೀಗಾಗಿ ೧೭ ಮಾರ್ಚ್ ೧೯೨೪ರಂದು ''ಕಾನ್ಪುರ ಬಾಲ್ಷೆವಿಕ್ ಪಿತೂರಿ ಮೊಕದ್ದಮೆ''ಯು ಮುಜಾಫರ್ ಅಹಮದ್, ಶೌಕತ್ ಉಸ್ಮಾನಿ, ಎಸ್. ಎ. ಡಾಂಗೆ ಮತ್ತು ನಳಿನಿ ಗುಪ್ತ ಈ ನಾಲ್ವರ ವಿರುದ್ಧವಾಗಿ ಮಾತ್ರ ಪ್ರಾರಂಭವಾಯಿತು.

**ಆಪಾದನೆಗಳು, ವಾದಗಳು, ತೀರ್ಪು**

ಆಪಾದನೆಗಳ ಪಟ್ಟಿಯ ಮುಖ್ಯ ಅಂಶಗಳನ್ನು ಸಂಕ್ಷಿಪ್ತವಾಗಿ ಹೀಗೆ ನಮೂದಿಸಬಹುದು. ''ಯುರೋಪಿನಲ್ಲಿ ಕಮ್ಯುನಿಸ್ಟ್ ಇಂಟರ್‌ನ್ಯಾಷನಲ್ ಎಂಬ

ಕ್ರಾಂತಿಕಾರಿ ಸಂಸ್ಥೆಯಿದೆ; ಅದು ಎಂ. ಎನ್. ರಾಯ್‌ರ ನೇತೃತ್ವದಲ್ಲಿ ಭಾರತದಲ್ಲಿ ತನ್ನ ಒಂದು ಶಾಖೆಯನ್ನು, ಚಕ್ರವರ್ತಿಗಳಿಂದ ಭಾರತದ ಸಾರ್ವಭೌಮತ್ವವನ್ನು ಕೊನೆಗೊಳಿಸುವ ಉದ್ದೇಶದಿಂದ ಸ್ಥಾಪಿಸಲೆಳಸುತ್ತಿದೆ. ಆ ಉದ್ದೇಶದಿಂದ ರಾಯ್ ಮತ್ತು ಇತರರು ತಮ್ಮ ತಮ್ಮಲ್ಲಿ ವ್ಯವಹರಿಸಿದ್ದಾರೆ. ಆಪಾದಿತರ ನಾಯಕತ್ವದಲ್ಲಿ ಕಾರ್ಮಿಕ ರೈತರ ಸಂಘವೊಂದನ್ನು ಅಥವಾ 'ಜನಪಕ್ಷ'ವನ್ನು ಕಟ್ಟಲೆತ್ನಿಸಿದ್ದಾರೆ. ಆ ಸಂಸ್ಥೆಯನ್ನು 'ಹಿಂಸಾಕ್ರಾಂತಿ'ಯ ಮೂಲಕ ಭಾರತವನ್ನು ಸಾಮ್ರಾಜ್ಯಶಾಹಿ ಬ್ರಿಟನ್ನಿನಿಂದ ಬೇರ್ಪಡಿಸುವುದಕ್ಕೂ, ಬ್ರಿಟಿಷ್ ಭಾರತದ ಸಾರ್ವಭೌಮತ್ವವನ್ನು ರಾಜ - ಸಾಮ್ರಾಟರಿಂದ ಕಸಿದುಕೊಳ್ಳುವುದಕ್ಕೂ ಬಳಸಲಾಗುವುದು. ಆ ಉದ್ದೇಶ ಸಾಧನೆಗಾಗಿ ನಿರ್ಮಿಸುವ ಸಂಘಟನೆಗೆ ಕಾನೂನುಬದ್ಧ ಹಾಗೂ ಕಾನೂನು ಬಾಹಿರ ಉದ್ದೇಶಗಳೆರಡೂ ಇರುತ್ತವೆ. ಆ ಉದ್ದೇಶ ಸಾಧನೆಗಾಗಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಬೆಂಬಲವನ್ನೂ ಸಹ ಗಳಿಸಲು ಪ್ರಯತ್ನಿಸಲಾಗುತ್ತಿದೆ.''

ಆಪಾದನೆಯನ್ನು ಸಾಬೀತುಪಡಿಸಲು ಎಂ. ಎನ್. ರಾಯ್ ಮತ್ತು ಆಪಾದಿತರ ನಡುವೆ ನಡೆದಿದ್ದ ಪತ್ರ ವ್ಯವಹಾರವನ್ನು ವಿಪುಲವಾಗಿ ಉಲ್ಲೇಖಿಸಲಾಯಿತು. ಆದರೆ ೧೯೨೩ರ ಮೇ ತಿಂಗಳಲ್ಲಿಯೇ ಸ್ಥಾಪನೆಯಾಗಿದ್ದ ಸಿಂಗಾರವೇಲು ಅವರ ನೇತೃತ್ವದ 'ಹಿಂದುಸ್ತಾನ್ ಲೇಬರ್ ಕಿಸಾನ್ ಪಾರ್ಟಿ'ಯನ್ನು ಉಲ್ಲೇಖಿಸಲಿಲ್ಲ. ಏಕೆ ? ಡಾಂಗೆಯವರೂ ಅದರೊಂದಿಗೆ ಸೇರಿಕೊಂಡಿದ್ದರು ಎನ್ನುವಾಗ ಇದು ವಿಚಿತ್ರವಾಗಿ ತೋರುತ್ತದೆ. ಲೇಬರ್ ಕಿಸಾನ್ ಪಾರ್ಟಿಯ ಕಾರ್ಯಕ್ರಮ ಹಾಗೂ ಘೋಷಣೆಗಳು ಕಾನೂನುಬದ್ಧವಾದ ಬಹಿರಂಗ ದಾಖಲಾತಿಗಳು ಎನ್ನುವುದೇ ಅದಕ್ಕೆ ಕಾರಣವಿರಬೇಕು.

ಡಾ|| ಮಣಿಲಾಲ್ ಆಪಾದಿತರ ಪರ ವಕೀಲರಾಗಿದ್ದರು. ಸೆಷನ್ಸ್ ಹಂತಕ್ಕೆ ಮೊಕದ್ದಮೆ ಬಂದಾಗ ನ್ಯಾಯಾಧೀಶರಾದವರು ಎಚ್. ಇ. ಹೋಂ ಎಂಬ ಬ್ರಿಟಿಷ್ ವ್ಯಕ್ತಿ. ಅವರು ಚೌರಿ ಚೌರಾದ ಪ್ರಕರಣದ ನ್ಯಾಯಾಧೀಶರಾಗಿದ್ದು ೧೭೨ ಮಂದಿ ರೈತರಿಗೆ ಮರಣದಂಡನೆ ವಿಧಿಸಿದ್ದವರು. ಸೆಷನ್ಸ್‌ನಲ್ಲಿ ಮಣಿಲಾಲರ ಜೊತೆಗೆ ಪಂಡಿತ ಕಪಿಲದೇವ ಮಾಲವೀಯ ಮತ್ತು ಮಸ್ತಾದಿಲಾಲ್ ರಾಹತ್ಗಿ ಎಂಬ ಇಬ್ಬರು ವಕೀಲರು ಸೇರಿದ್ದರು. ಈ ಮೊಕದ್ದಮೆಯ ವಿಚಾರವು ಅಂತರರಾಷ್ಟ್ರೀಯವಾಗಿ ಗಮನ ಸೆಳೆಯಿತು. ಆಗ ಬ್ರಿಟನ್ನಿನಲ್ಲಿ ಮೊಟ್ಟಮೊದಲ ಬಾರಿಗೆ ಲೇಬರ್ ಪಕ್ಷವು ಅಧಿಕಾರಕ್ಕೆ ಬಂದಿದ್ದು, ರ್‍ಯಾಂಸೇ ಮ್ಯಾಕ್ಡೊನಾಲ್ಡ್ ಪ್ರಧಾನಿಯಾಗಿದ್ದರು.

ಆ ಮೊಕದ್ದಮೆಗೆ, ಸರ್ಕಾರವು ಆ ಕಾಲದಲ್ಲಿ ಸರ್ಕಾರದ ಪರವಾಗಿ ಅದನ್ನು ನಡೆಸಿದ ರಾಸ್ ಆಸಲ್‌ಟನ್‌ಗೆ ಕೊಟ್ಟ ಶುಲ್ಕವು ೩೯,೬೯೦ ರೂಪಾಯಿಗಳು. ಆಪಾದಿತರ ಪರ ವಾದಿಸಿದ ವಕೀಲರು ಕೇವಲ ಕಾನೂನು ಅಂಶಗಳ ಮೇಲೆಯೇ ತಮ್ಮ ವಾದ ಮಂಡಿಸಿದರು.

ನಾಲ್ವರು ಆಪಾದಿತರಿಗೂ ನಾಲ್ಕು ನಾಲ್ಕು ವರ್ಷ ಕಠಿಣ ಸಜಾ ವಿಧಿಸಲಾಯಿತು. ಹೈಕೋರ್ಟು ಮೇಲ್ಮನವಿಯನ್ನು ಸಾರಾಸಗಟಾಗಿ ತಳ್ಳಿಹಾಕಿತು.

**ಮೀರತ್ ಮೊಕದ್ದಮೆ : ೧೯೨೯-೩೩**

ಆದರೆ ಸರ್ಕಾರದ ಈ ದಮನ ಕಾರ್ಯಕ್ರಮದಿಂದ ಜನರ ಉತ್ಸಾಹವು ಕುಗ್ಗಲಿಲ್ಲ. ೧೯೨೫ರ ಡಿಸೆಂಬರ್ ತಿಂಗಳಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನವು ಕಾನ್ಪುರದಲ್ಲಿ ಜರುಗಿದ ಸಂದರ್ಭದಲ್ಲಿ ಕಮ್ಯುನಿಸ್ಟರ ಒಂದು ಅಖಿಲ ಭಾರತ ಸಮ್ಮೇಳನವೂ ಜರುಗಿತು : ಸರ್ಕಾರದ ವರದಿಗಳ ಪ್ರಕಾರ ೫೦೦ ಮಂದಿ ಕೂಡಿದ್ದರು. ಕಾನ್ಪುರ ಪಿತೂರಿ ಮೊಕದ್ದಮೆಯಲ್ಲಿ ಕೈಬಿಟ್ಟಿದ್ದ ಆಪಾದಿತ ಸಿಂಗಾರವೇಲು ಅಧ್ಯಕ್ಷತೆ ವಹಿಸಿದ್ದರು. ಪಕ್ಷದ ಕಾರ್ಯಕ್ರಮ, ಸಂವಿಧಾನಗಳನ್ನು ಸ್ವೀಕರಿಸಿ ಒಂದು ಕಾರ್ಯಕಾರಿ ಸಮಿತಿಯನ್ನು ಚುನಾಯಿಸಲಾಯಿತು.

ಇದರಿಂದ ಕಮ್ಯುನಿಸ್ಟರಲ್ಲಿ ಹೊಸ ಚೈತನ್ಯ ಮೂಡಿತು. ಕಮ್ಯುನಿಸ್ಟ್ ಪಕ್ಷವು ತತ್ತ್ವನಿಷ್ಠ ಕಾರ್ಯಕರ್ತರಿಗಾಗಿ ಮಾತ್ರ ತೆರೆದಿದ್ದ ಪಕ್ಷವಾದ ಕಾರಣ ಜನಸಾಮಾನ್ಯರನ್ನು, ಮುಖ್ಯವಾಗಿ ರೈತರು ಮತ್ತು ಕಾರ್ಮಿಕರನ್ನು ಸೇರಿಸಿಕೊಳ್ಳಬಹುದಾದ ಬೃಹತ್ ರಾಜಕೀಯ ಪಕ್ಷವೊಂದರ ನಿರ್ಮಾಣದತ್ತ ಅವರು ಗಮನ ಹರಿಸಿದರು. ಹಾಗೆ ತಲೆಯೆತ್ತಿದ ಒಂದು ಪಕ್ಷ ಕಾರ್ಮಿಕ ಮತ್ತು ರೈತ ಪಕ್ಷ - ವರ್ಕರ್ಸ್ ಅಂಡ್ ಪೆಸೆಂಟ್ಸ್ ಪಾರ್ಟಿ. ಅದು ಮೊದಲು ತಲೆ ಎತ್ತಿದುದು ಮುಂಬಯಿ, ಕಲ್ಕತ್ತೆಗಳಲ್ಲಿಯಾದರೂ ಬಹು ಶೀಘ್ರವಾಗಿ ಪಂಜಾಬು, ಸಂಯುಕ್ತ ಪ್ರಾಂತಗಳು ಮುಂತಾದುವಕ್ಕೂ ವ್ಯಾಪಿಸಿತು. ೧೯೨೮ರ ಕೊನೆಯಲ್ಲಿ ಆ ಪಕ್ಷವು ಕಲ್ಕತ್ತೆಯಲ್ಲಿ ಕೂಡಿದ್ದ ಕಾಂಗ್ರೆಸ್ ವಾರ್ಷಿಕ ಅಧಿವೇಶನವು ಪೂರ್ಣ ಸ್ವರಾಜ್ಯವನ್ನು ಕಾಂಗ್ರೆಸ್ಸಿನ ಗುರಿಯನ್ನಾಗಿ ಸ್ವೀಕರಿಸಬೇಕೆಂದು ಒತ್ತಾಯಿಸಿ ೫೦,೦೦೦ ಮಂದಿ ಭಾಗವಹಿಸಿದ್ದ ಒಂದು ಭಾರಿ ಜನಪ್ರದರ್ಶನವನ್ನು ಏರ್ಪಡಿಸಿತು.

> *ಗೀತೆ ಮತ್ತು ವೇದಾಂತಗಳು ಸಮಾಜವಾದಿ ಹೋರಾಟಕ್ಕೆ ವೈಚಾರಿಕ ತಳಹದಿಯನ್ನು ಒದಗಿಸಲಾರವು. ದ್ವಂದ್ವಾತ್ಮಕ ಮತ್ತು ಚಾರಿತ್ರಿಕ ಭೌತವಾದದಿಂದ, ಅಂದರೆ ಮಾರ್ಕ್ಸ್‌ವಾದ - ಲೆನಿನ್‌ವಾದದಿಂದ ಮಾತ್ರ ಅದಕ್ಕೆ ವೈಚಾರಿಕ ಮತ್ತು ರಾಜಕೀಯ ಮಾರ್ಗದರ್ಶನ ನೀಡಲು ಸಾಧ್ಯ. ಇದರ ಬಗ್ಗೆ ಜನಸಮುದಾಯಗಳಿಗೆ ಸತತವಾಗಿ ತಿಳಿವಳಿಕೆ ನೀಡಬೇಕಾದ್ದು ನಮ್ಮ ಕರ್ತವ್ಯ.*
>
> **- ಎಸ್. ಜಿ. ಸರ್ದೇಸಾಯಿ**

ಇದಕ್ಕಿಂತಲೂ ಮುಖ್ಯವಾಗಿ ದೇಶಭಾಷೆಗಳಲ್ಲಿ ಕಮ್ಯುನಿಸ್ಟ್ ಪಕ್ಷದ ಪತ್ರಿಕೆಗಳು ಪ್ರಾರಂಭವಾದುವು. ಮರಾಠಿಯಲ್ಲಿ 'ಕ್ರಾಂತಿ', ಬಂಗಾಳಿಯಲ್ಲಿ 'ಗಣವಾಣಿ', ಪಂಜಾಬಿನಲ್ಲಿ 'ಕೀರ್ತಿ', ಉರ್ದುವಿನಲ್ಲಿ 'ಮೆಹನತ್ ಕಶ್' ಎಂಬ ಪತ್ರಿಕೆಗಳು ಹೊರಟುವು. ತಮಿಳಿನಲ್ಲಿ 'ತೊಳಿಲಾಳಿ', ಬಂಗಾಳಿಯಲ್ಲಿ 'ಧೂಮಕೇತು' (ಲಾಂಗಲ್) ಎಂಬ ಹೆಸರಿನ ಪತ್ರಿಕೆಗಳೂ ಬರುತ್ತಿದ್ದುವು.

೧೯೨೮ರಲ್ಲಿ ಜಗತ್ತಿನ ಆರ್ಥಿಕ ಪರಿಸ್ಥಿತಿಯು ಹದಗೆಡುತ್ತಾ ಬಂತು. ಕಾರ್ಮಿಕ ಸಂಘಟನೆಗಳು ಹಾಗೂ ಮುಷ್ಕರಗಳು ಪ್ರಬಲವಾದುವು. ಆ ವರ್ಷದಲ್ಲಿ ಮುಂಬಯಿನಲ್ಲಿ ಜವಳಿ ಗಿರಣಿಗಳ ಕಾರ್ಮಿಕರು, ಕಲ್ಕತ್ತೆಯಲ್ಲಿ ಸೆಣಬು ಉದ್ಯಮದವರು, ಬಂಗಾಳ-ನಾಗಪುರ, ಈಸ್ಟ್ ಇಂಡಿಯನ್ ಮತ್ತು ಸೌತ್ ಇಂಡಿಯನ್ ರೈಲ್ವೇಗಳಲ್ಲಿನ ನೌಕರರು ಮುಷ್ಕರ ಹೂಡಿದರು. ಇವುಗಳಲ್ಲೆಲ್ಲ ಕಮ್ಯುನಿಸ್ಟರ ಪ್ರಭಾವ ಎದ್ದು ಕಾಣುವಂತಿತ್ತು.

**ಬಂಧನಗಳು ಮತ್ತು ಮೊಕದ್ದಮೆ**

೧೯೨೮ರ ಡಿಸೆಂಬರ್‌ನಲ್ಲಿ ಕಲ್ಕತ್ತೆಯಲ್ಲಿ ಕಾಂಗ್ರೆಸ್ ಅಧಿವೇಶನವು ಜರುಗಿದಾಗ ಕಾರ್ಮಿಕ - ರೈತ ಪಕ್ಷದ ಸಮ್ಮೇಳನವೂ ಜರುಗಿ, ಆ ಪಕ್ಷವನ್ನು ಕಮ್ಯುನಿಸ್ಟ್ ಪಕ್ಷವಾಗಿ ಪುನರ್‌ರಚಿಸುವ ನಿರ್ಧಾರವನ್ನು ಕೈಗೊಂಡಿತು. ೧೯೨೯ರ ಮಾರ್ಚ್‌ನಲ್ಲಿ ಕಮ್ಯುನಿಸ್ಟ್ ಪಕ್ಷದ ಕೇಂದ್ರ ಸಮಿತಿಯು ಕಾರ್ಮಿಕ ರೈತ ಪಕ್ಷವನ್ನು ವಿಸರ್ಜಿಸಲು ನಿರ್ಧರಿಸಿತು. ಮರುದಿನವೇ ೩೨ ಮಂದಿ ಕಮ್ಯುನಿಸ್ಟರನ್ನು ಬಂಧಿಸಲಾಯಿತು. ಅದರಲ್ಲಿ ಎಸ್. ಎ. ಡಾಂಗೆ, ಮುಜಾಫರ್ ಅಹಮದ್, ಪಿ. ಸಿ. ಜೋಶಿ, ಸೋಹನ್ ಸಿಂಗ್ ಜೋಶ್ ಸೇರಿದ್ದರು. ಭಾರತದಲ್ಲಿ ಕೆಲಸ ಮಾಡುತ್ತಿದ್ದ ಫಿಲಿಪ್ ಸ್ಪ್ರಾಟ್, ಬೆನ್ ಬ್ರಾಡ್ಲಿ, ಲೆಚರ್ ಹಚಿನ್‌ಸನ್ ಎಂಬ ಮೂವರು ಬ್ರಿಟಿಷ್ ಕಮ್ಯುನಿಸ್ಟರೂ ಇದ್ದರು.

ಇದು ಸಹ ದಂಡಸಂಹಿತೆಯ ೧೨೧-ಎ ವಿಧಿಯ ಅನ್ವಯವಾದ ಮೊಕದ್ದಮೆ. ನಾನಾ ದೃಷ್ಟಿಗಳಿಂದ ಇದೊಂದು ವಿಶಿಷ್ಟ ಮೊಕದ್ದಮೆ. ೧೯೨೯ರ ಜೂನ್ ೧೨ರಂದು ಮೀರತ್ತಿನ ಮ್ಯಾಜಿಸ್ಟ್ರೇಟರೆದುರು ದಾಖಲಾದ ಮೊಕದ್ದಮೆ ಹೈಕೋರ್ಟಿನಲ್ಲಿ ಮುಕ್ತಾಯವಾದದ್ದು ೧೯೩೩ರ ಆಗಸ್ಟ್ ೩ರಂದು. ಈ ದೀರ್ಘಾವಧಿ ಮಾತ್ರವಲ್ಲ, ಸರ್ಕಾರವು ಹಾಜರು ಪಡಿಸಿದ ದಾಖಲಾತಿಗಳು ಒಟ್ಟು ೪೮೫೯ ಪುಟಗಳಿದ್ದು, ಆಪಾದಿತರ ಹೇಳಿಕೆಗಳು ೩೦೯೨ ಪುಟಗಳಾಗುತ್ತವೆ. ಸಾಕ್ಷಿಗಳ ಸಂಖ್ಯೆ ೨೮೧.

ಸೆಷನ್ಸ್ ನ್ಯಾಯಾಧೀಶರು ೨೭ ಮಂದಿಗೆ ಜೀವಾವಧಿಯಿಂದ ಮೂರು ವರ್ಷದವರೆಗೆ ಸಜಾ ವಿಧಿಸಿದ್ದರಾದರೂ, ಹೈಕೋರ್ಟು ಅವರಲ್ಲಿ ೯ ಮಂದಿಯನ್ನು ಖುಲಾಸೆ ಮಾಡಿ, ಇತರರ ಶಿಕ್ಷೆಗಳನ್ನಿಳಿಸಿತು. ಎಂ. ಎನ್. ರಾಯ್ ಭಾರತಕ್ಕೆ ಹಿಂದಿರುಗುವಾಗ್ಗೆ, ಅಂದರೆ ೧೯೩೧-೩೨ರ ವೇಳೆಗೆ, ಅವರು ಕಮ್ಯುನಿಸ್ಟ್ ಚಳುವಳಿಯಿಂದ ದೂರ ಸರಿದಿದ್ದರಾದರೂ ಈ ಪಿತೂರಿ ಮೊಕದ್ದಮೆಗಳ ಸಂಬಂಧವಾಗಿ ೬ ವರ್ಷ ಸೆರೆಮನೆಯಲ್ಲಿ ಇರಬೇಕಾಯಿತು.

ಸ್ವಾತಂತ್ರ್ಯ ಬಂದ ಐದು ದಶಕಗಳ ನಂತರವೂ ಈ ಪಿತೂರಿ ಮೊಕದ್ದಮೆಗಳಲ್ಲಿ ಬಲಿಷ್ಠ ಬ್ರಿಟಿಷ್ ಸಾಮ್ರಾಜ್ಯವನ್ನು ಎದುರಿಸಿ ಎದೆ ಚಾಚಿ ನಿಂತ ಈ ವೀರರು ನೆನಪಿನಿಂದ ಮಾಸದವರು.

ಎನ್. ಪಿ. ಶಂಕರನಾರಾಯಣರಾವ್
೮೮೭, ೧೯ನೇ ಮೈನ್, ಬನಶಂಕರಿ ೨ನೇ ಹಂತ, ಬೆಂಗಳೂರು-೫೬೦ ೦೭೦

# ಜಾನ್ ಗ್ರಿಯರ್‌ಸನ್



ಎಂ. ವಿ. ಕೃಷ್ಣಸ್ವಾಮಿ

ನಾನೀಗ ಪರಿಚಯಿಸಲು ಹೊರಟಿರುವ ಮಹನೀಯರು ಜಾನ್ ಗ್ರಿಯರ್‌ಸನ್, ಸಿನೆಮಾ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ರೀತಿಯ ಮಹತ್ವಪೂರ್ಣವಾದ ಸಾಧನೆಯನ್ನು ಗಳಿಸಿದವರು. ಈ ವಿಷಯದ ಜೊತೆಗೆ, ನನ್ನ ಸಿನೆಮಾ ವ್ಯಾಸಂಗದಲ್ಲಿ ಅವರಿಂದ ಪಡೆದ ಸಹಾಯ ಸ್ಫೂರ್ತಿಯನ್ನು ಸಂಕ್ಷಿಪ್ತವಾಗಿ, ಸೂಕ್ಷ್ಮವಾಗಿ ಸೂಚಿಸುವುದೇ 'ಈ ಲೇಖನದ ಗುರಿ.

ನನಗೆ ಅವರ ಪರಿಚಯವಾದದ್ದೂ ಅನಿರೀಕ್ಷಿತವಾಗಿ, ಅದೃಷ್ಟವಶಾತ್! ಸಿನೆಮಾ ಬಗ್ಗೆ ಚಿಕ್ಕಂದಿನಲ್ಲಿ ನನಗೆ ಕಿಂಚಿತ್ತೂ ಆಸಕ್ತಿಯಾಗಲೀ ಕುತೂಹಲವಾಗಲೀ ಇರಲಿಲ್ಲ. ಹೈಸ್ಕೂಲು ವಿದ್ಯಾಭ್ಯಾಸದ ಆರಂಭದವರೆಗೂ ಹಳ್ಳಿಗಳಲ್ಲಿಯೇ ಬೆಳೆದವನು - ಸಿನೆಮಾ ಇರಲಿ, ವಿದ್ಯುಚ್ಛಕ್ತಿಯೇ ಇಲ್ಲದ ಕಾಲದಲ್ಲಿ. ೧೯೩೪ರಿಂದ ಮೈಸೂರಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸ. ಆಗ ಅಲ್ಲಿ ಎರಡೋ ಮೂರೋ ಚಿತ್ರಮಂದಿರಗಳಿದ್ದಿರಬಹುದು. ಆದರೆ ತಾಯಿಯನ್ನು ಪೀಡಿಸಿ ಎರಡಾಣೆಯೋ ನಾಲ್ಕಾಣೆಯೋ ಸುಲಿಗೆ ಮಾಡಿ, ಬೀಡಿಯ ಹೊಗೆ ದುರ್ನಾತಗಳನ್ನು ಸಹಿಸಿಕೊಂಡಾದರೂ, ಸಿನೆಮಾ ನೋಡಲೇಬೇಕೆಂಬ ಚಟವಾಗಲೀ, ಹುಚ್ಚಾಗಲೀ ನನ್ನದಲ್ಲ. ಆದರೂ ವಿಪರ್ಯಾಸ, ನಾನು ಸಿನೆಮಾ ವ್ಯಾಸಂಗವನ್ನೇ ೧೯೪೭ರಲ್ಲಿ ಆರಂಭಿಸಿದೆ! ''ಭಾರತಿ'' ಕನ್ನಡ ಚಲನ ಚಿತ್ರದಲ್ಲಿ, ಮನರಂಜನೆಯ ಚಿತ್ರಗಳ ಪರಿಭಾಷೆಯಲ್ಲಿ ''ಹೀರೋ'' ಪಾರ್ಟ್ ಮಾಡಲು ಒಪ್ಪಿಕೊಂಡಾಗ!

೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸೇರಿ ಎರಡು ವರ್ಷಗಳು ಕಾಲೇಜು ವ್ಯಾಸಂಗಕ್ಕೆ ತರ್ಪಣ ಕೊಟ್ಟು, ೪೪ರಲ್ಲಿ ಇಂಗ್ಲಿಷ್ ಆನರ್ಸ್ ಪದವೀಧರನಾಗಿ, ೪೫ರಿಂದ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕನಾಗಿದ್ದ ಕಾಲ ಅದು. ನನ್ನ ಸಿನೆಮಾ ಪ್ರವೇಶಕ್ಕೆ ಹಿನ್ನೆಲೆ, ಕಾರಣ, ಒಂದು, ನನ್ನ ೬-೭ ವರ್ಷಗಳ ಇಂಗ್ಲಿಷ್ ಮತ್ತು ಕನ್ನಡ ಹವ್ಯಾಸಿ ರಂಗಭೂಮಿಯ ಆಸಕ್ತಿ, ಅಭ್ಯಾಸ, ಚಟುವಟಿಕೆಗಳು; ಮತ್ತೊಂದು ಇನ್ನೂ ಮುಖ್ಯ ಕಾರಣ, ನಮ್ಮ ವಿದ್ಯಾಭ್ಯಾಸ ಕ್ರಮ ಪದ್ಧತಿಗಳಲ್ಲಿ ಸ್ವಂತ ಅನುಭವದಿಂದ ನನ್ನಲ್ಲಿ ಜನಿಸಿದ್ದ ಆಂತರಿಕ ಅಸಮಾಧಾನ, ಅದೇ ಸಮಯಕ್ಕೆ ದೇಶಕ್ಕೆ ಬಂದ ಸ್ವಾತಂತ್ರ್ಯ ಚಿಮ್ಮಿಸಿದ ಹುರುಪು, ಆಶೋತ್ತರಗಳು. ಏತನ್ಮಧ್ಯೆ ವಿದ್ಯಾಭ್ಯಾಸದಲ್ಲಿ ಶ್ರಾವ್ಯ ದೃಶ್ಯ ಮಾಧ್ಯಮಗಳ ಸಂಯೋಜನೆ, ಬೆಂಬಲದ ಉಪಯೋಗ ಬೇಕು ಎಂದು ಎದ್ದಿದ್ದ ಗುಲ್ಲು, ಇವೆಲ್ಲದರ ಕಲಸು ಮೇಲೋಗರದ ಪರಿಣಾಮ ನನ್ನ ಯೋಜನೆ - ಇಂಗ್ಲೆಂಡಿಗೆ ಹೋಗಿ ಶೈಕ್ಷಣಿಕ ಸಿನೆಮಾ ವ್ಯಾಸಂಗ ಮಾಡಬೇಕೆಂದು! ಸರಿ. ೧೯೪೮ರಲ್ಲಿ, ಎಸ್. ಎಸ್. ವಾಸನ್‌ರವರ ಜೆಮಿನಿ ಸ್ಟುಡಿಯೋನಲ್ಲಿ ಒಂದು ತಿಂಗಳು ಚಲನ ಚಿತ್ರ ನಿರ್ಮಾಣ, ನಿರ್ದೇಶನ, ಸಂಕಲನ ಇತ್ಯಾದಿ ಕಾರ್ಯವನ್ನು ವೀಕ್ಷಿಸಿ, ಅಧ್ಯಾಪಕ ವೃತ್ತಿಗೆ ದಿಢೀರ್ ರಾಜೀನಾಮೆ ಕೊಟ್ಟು ಸೆಪ್ಟೆಂಬರ್ ತಿಂಗಳಲ್ಲಿ ಲಂಡನ್ನಿಗೆ ತೆರಳಲು ಸಿದ್ಧನಾದೆ. ಹಣ, ಬಟ್ಟೆಬರೆ, ಪಾಸ್‌ಪೋರ್ಟ್, ಟಿಕೆಟ್ ಇತ್ಯಾದಿಗಳನ್ನು ಹೊಂದಿಸಿಕೊಳ್ಳಲು ಅನುವಾದೆ. ಆ ಕಾಲಕ್ಕೆ ವಿದೇಶ ಪ್ರವಾಸ ಬಹಳ ಪ್ರಯಾಸದ ಕೆಲಸ. ಜೊತೆಗೆ ನನ್ನ ಹೀನ ಆರ್ಥಿಕ ಸ್ಥಿತಿ! ನನ್ನಲ್ಲಿ ಅಪಾರವಾಗಿದ್ದದ್ದು ಯಾವುದೋ ಒಂದು ಆತ್ಮವಿಶ್ವಾಸ ಮತ್ತು ಹುಚ್ಚು ಹುಚ್ಚು ಉತ್ಸಾಹ, ಅಷ್ಟೆ.

ಆಗಿನ ಬೊಂಬಾಯಿನಿಂದ ಸಮುದ್ರಯಾನ ನಿಗದಿಯಾಗಿದ್ದ ಹಿಂದಿನ ದಿನ, ನನಗೆ ಲಂಡನ್ನಿನ ಭಾರತ ಹೈಕಮಿಷನರ್ ಆಫೀಸಿನಿಂದ ಒಂದು ತಾರು ಬಂತು. ''ಸದ್ಯದ ಪರಿಸ್ಥಿತಿಯಲ್ಲಿ (ಆಗ ಲಂಡನ್ನಿನಲ್ಲಿ ಸಿನೆಮಾ ಕ್ಷೇತ್ರದಲ್ಲಿ ನಿರುದ್ಯೋಗ ಸಮಸ್ಯೆ ದುರ್ಭರವಾಗಿತ್ತು) ಸಿನೆಮಾ ಕ್ಷೇತ್ರದಲ್ಲಿ ಇಲ್ಲಿ ಶೈಕ್ಷಣಿಕ ವ್ಯವಸ್ಥೆ ಅಸಾಧ್ಯ. ಸದ್ಯಕ್ಕೆ ನೀನು ಇಲ್ಲಿಗೆ ಬರಬೇಡ'' ಎಂದು. ಆಗ ನನ್ನ ಜಗ್ಗಿ ಕುಗ್ಗಿದ ಪರಿಸ್ಥಿತಿಯನ್ನು ನೀವೇ ಯೋಚಿಸಿಕೊಳ್ಳಬಹುದು. ಬಂದದ್ದೆಲ್ಲಾ ಬರಲಿ ಎಂದು ನಿರ್ಧರಿಸಿ, ಮಾರನೆಯ ದಿನ ಲಂಡನ್ನಿಗೆ ಹಡಗು ಹತ್ತಿದೆ. ಪ್ರಯಾಣದುದ್ದಕ್ಕೂ ಸಮುದ್ರಯಾನದ ದೇಹಾಲಸ್ಯದಿಂದ ಪೀಡಿತನಾಗಿ, ೧೯ ದಿವಸಗಳ ನಂತರ ಲಂಡನ್ ತಲುಪಿದೆ. ಅಲ್ಲಿ ಟಿಲ್‌ಬರಿ ಬಂದರಿನಲ್ಲಿ ಇಳಿದಾಗ ನನ್ನ ಮನಸ್ಸು, ಹೃದಯ, ಅಲ್ಲಿಯ ಛಳಿಯಿಂದ ಕೂಡಿದ ಮೋಡ ಕವಿದ ವಾತಾವರಣದಂತೆಯೇ ಆಗಿತ್ತು. ಕಿಂಕರ್ತವ್ಯ ವಿಮೂಢನಾಗಿದ್ದೆ.

ಭಾರತದಿಂದ ಹೊರಟಾಗ ಪರಿಚಯ ಪತ್ರಗಳ ಕಂತೆಯನ್ನೇ ಹೊಂದಿಸಿಕೊಂಡು ತಂದಿದ್ದೆ. ಅದರಲ್ಲೊಂದು ಮದ್ರಾಸಿನ ಬ್ರಿಟಿಷ್ ಡೆಪ್ಯುಟಿ ಹೈ ಕಮಿಷನರ್ ಅವರಿಂದ ಲಂಡನ್ನಿನ ಕೇಂದ್ರ ವಾರ್ತಾ ಕಛೇರಿಯ ನಿರ್ದೇಶಕರಿಗೆ. ಒಂದೆರಡು ದಿನಗಳಲ್ಲೇ ಅವರನ್ನು ನೋಡಲು ನಿಶ್ಚಯಿಸಿದೆ. ಕಛೇರಿ ಸೇರಿದಾಗ ಅಲ್ಲೊಬ್ಬರು ಹೊಸ ನಿರ್ದೇಶಕರು ಬಂದಿರುವುದು ತಿಳಿಯಿತು. ಅವರನ್ನೇ ಭೇಟಿಯಾಗಲು ಹೋಗಿ, ಅವರಿಗೆ ಪರಿಚಯ ಪತ್ರವನ್ನು ಕೊಟ್ಟೆ. ಆತ ಎಡಗೈಯಲ್ಲಿ ತೆಗೆದುಕೊಂಡ ಪತ್ರವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ, ಅದನ್ನು ಹಾಗೇ ಟೇಬಲ್ ಮೇಲೆ ಎಸೆದು What can I do for you, young man? (ನನ್ನಿಂದ ಏನಾಗಬೇಕಪ್ಪಾ) ಎಂದು ಗಡುಸಾಗಿ ಕೇಳಿದ.

ಆಗತಾನೆ ಸ್ವತಂತ್ರನಾಗಿದ್ದ ಭಾರತೀಯನಾದ ನನಗೆ ಆತನ ವರ್ತನೆಯಿಂದ ಬಹಳ ಅಸಮಾಧಾನ, ಕೋಪವೇ ಬಂತು. ಆದರೆ ಅಸಹಾಯಕ ನಾನು. ಕಹಿಯನ್ನೆಲ್ಲಾ ಅದುಮಿ, ನುಂಗಿಕೊಂಡು - ಭಾರತದಿಂದ ಶಿಕ್ಷಣ ಚಲನಚಿತ್ರ ವ್ಯಾಸಂಗಕ್ಕೆ ಬಂದಿದ್ದೇನೆ. ನಿಮ್ಮ ಕಛೇರಿಯಿಂದ ಸಹಾಯ ವೇನಾದರೂ ಆದರೆ ಸಂತೋಷ - ಎಂದು ನಾನೂ ಕಟುವಾಗಿಯೇ ಉತ್ತರಿಸಿದೆ. You have come to the right place and the right man (ಸರಿಯಾದ ಸ್ಥಳಕ್ಕೇ ಬಂದಿದ್ದೀಯ, ಸರಿಯಾದ ವ್ಯಕ್ತಿಯ ಹತ್ತಿರಕ್ಕೇ) ಎಂದದ್ದೇ ತಕ್ಷಣ ಫೋನಿನಲ್ಲಿ ತನ್ನ ಇಬ್ಬರು ಮೂವರು ಸಹೋದ್ಯೋಗಿಗಳನ್ನು ಕರೆದು, ಅವರು ಬಂದೊಡನೆಯೇ-ಭಾರತದಿಂದ ಬಂದಿದ್ದಾನೆ, ಈತ ನನ್ನ ಸ್ನೇಹಿತ ಎಂದು ನನ್ನ ಕಡೆ ತಿರುಗಿದಾಗ ನಾನು ''ಕೃಷ್ಣಸ್ವಾಮಿ'' ಅಂದೆ. ಹೌದು ಕೃಷ್ಣಸ್ವಾಮಿ. ಇಲ್ಲಿಗೆ ಶಿಕ್ಷಣ ಚಲನಚಿತ್ರಗಳ ವ್ಯಾಸಂಗಕ್ಕೆ ಬಂದಿದ್ದಾನೆ. ಈತನಿಗೆ ಪ್ರತಿ ಶನಿವಾರ ಬೆಳಗ್ಗೆ ೨-೩ ಘಂಟೆಗಳ ಕಾಲ ನಮ್ಮ ಚಿಕ್ಕ ಚಿತ್ರಮಂದಿರದಲ್ಲಿ ಶಿಕ್ಷಣ ಚಿತ್ರಗಳು, ವೈಜ್ಞಾನಿಕ ಚಿತ್ರಗಳು, ನಮ್ಮ ಡಾಕ್ಯುಮೆಂಟರಿಗಳನ್ನು ತೋರಿಸುವ ವ್ಯವಸ್ಥೆ ಮಾಡಿ ಎಂದು ಪುನಃ ನನ್ನ ಕಡೆ ತಿರುಗಿ ಮೊದಲು ಚಿತ್ರಗಳನ್ನು ನೋಡು, ಇದು ನಿನ್ನ ಶಿಕ್ಷಣದ ಮೊದಲ ಮೆಟ್ಟಲು, ಬಾಕಿ ವಿಷಯಗಳನ್ನು ಆಮೇಲೆ ಯೋಚಿಸೋಣ ಅಂದದ್ದೇ, ನಾನಿನ್ನು ಹೋಗಬಹುದು ಎಂದು ಸಂಜ್ಞೆಯಲ್ಲೇ ಸೂಚಿಸಿ ಭೇಟಿಯ ಮುಕ್ತಾಯ ಮಾಡಿದ, ಆ ವ್ಯಕ್ತಿಯೇ ಡಾ. ಜಾನ್ ಗ್ರಿಯರ್‌ಸನ್! ಆತ ಎಷ್ಟು ಸುಪ್ರಸಿದ್ಧ ವ್ಯಕ್ತಿ ಎಂಬ ವಿಷಯ ನನಗೆ ಆಗ ಎಳ್ಳಷ್ಟೂ ತಿಳಿದಿರಲಿಲ್ಲ. ಮಾರನೆಯ ದಿನ ಆತನನ್ನು ಪುನಃ ಭೇಟಿಯಾಗಿ, ನನ್ನ ಹಾಗೇ ಇನ್ನೂ ಕೆಲವು ವಿದ್ಯಾರ್ಥಿಗಳಿದ್ದಾರೆ - ಅವರನ್ನೂ ಚಿತ್ರ ಪ್ರದರ್ಶನಕ್ಕೆ ಬರಹೇಳಬಹುದೇ ಎಂದಾಗ - You've given me a brilliant idea



**CENTRAL OFFICE OF INFORMATION**
**NORGEBY HOUSE, 83 BAKER STREET, LONDON, W.1**
Telephone: WELbeck 4420 Telegrams: Centroform, London

Our reference ..........

Your reference ..........

2nd May, 1949

Mr. M.V. KRISHNASWAMY is [redacted] Indian Student who has impressed me very much. He is [redacted] serious [redacted] who is genuinely interested in the production of documentary and educational films.

In short, I think Mr. Krishnashwamy is spending his time in England very wisely; he is getting first hand knowledge of how those tools of education are actually produced. I want to give whole-hearted recommendation to all those people who can assist Mr. Krishnashwamy in the pursuit of his career in films. I am certain he will go far and be a valuable asset to the India he so desires to serve.

John Grierson

- ನೀನು ನನಗೆ ಅದ್ಭುತವಾದ idea ಕೊಟ್ಟಿದ್ದೀಯ ಎಂದವರೇ ತಕ್ಷಣ ತನ್ನ Stenographer ಕರೆದು - ನಮ್ಮ ಕಛೇರಿ ಸಾಗರದಾಚೆಯಿಂದ ಬಂದಿರುವ ಚಲನಚಿತ್ರ ವಿದ್ಯಾರ್ಥಿಗಳ film club ಒಂದನ್ನು ಸ್ಥಾಪಿಸಿದೆ (Overseas film students club), ಅದರ ಗೌರವ ಕಾರ್ಯದರ್ಶಿ ಎಂ. ವಿ. ಕೃಷ್ಣಸ್ವಾಮಿ ಎಂಬ ಭಾರತೀಯ. ನಿಮ್ಮ ದೇಶದ ವಿದ್ಯಾರ್ಥಿಗಳು ಯಾರಾದರೂ ಇದ್ದ ಪಕ್ಷದಲ್ಲಿ ಅವರು ಆತನನ್ನು ಸಂಪರ್ಕಿಸಲಿ - ಎಂದು ಲಂಡನ್ನಿನಲ್ಲಿದ್ದ ಎಲ್ಲಾ ರಾಯಭಾರಿ ಕಛೇರಿಗಳಿಗೂ ಆ ಪತ್ರವನ್ನು ಕಳುಹಿಸಿದರು.

ಲಂಡನ್ನಿನಲ್ಲಿದ್ದ ಒಂದು ವರ್ಷಕಾಲ ಆ clubನ ಕಾರ್ಯವನ್ನು ನಿರ್ವಹಿಸಿದೆ. ಇದರಿಂದಾಗಿ ಅತ್ಯುತ್ತಮ ಚಲನ ಚಿತ್ರಗಳನ್ನು ನೋಡುವುದಷ್ಟೇ ಅಲ್ಲದೆ, ಅವುಗಳ ನಿರ್ಮಾಪಕರ, ನಿರ್ದೇಶಕರ ಹಾಗೂ ತಂತ್ರಜ್ಞರೊಡನೆ ಚರ್ಚೆಗಳನ್ನು ನಡೆಸಿ ಗಂಭೀರವಾಗಿ ವಿಚಾರ ವಿನಿಮಯ ಮಾಡಿಕೊಳ್ಳುವ ಸದವಕಾಶ ದೊರಕಿತು : ನನಗೆ ಮತ್ತು ಬೇರೆ ಬೇರೆ ದೇಶಗಳ ೮-೧೦ ಇತರ ಸದಸ್ಯರಿಗೆ ಸಿನೆಮಾ ಚರಿತ್ರೆಯಲ್ಲಿ ಸ್ಥಿರವಾಗಿ ನೆಲೆಸಿರುವ ಹಲವಾರು ಹೆಸರಾಂತ ವ್ಯಕ್ತಿಗಳ ಆತ್ಮೀಯ, ನಿಕಟ ಪರಿಚಯವಾಯಿತು. ಜಾನ್ ಗ್ರಿಯರ್‌ಸನ್, ಬೇಸಿಲ್ ರೈಟ್, ಹಂಫ್ರಿ ಜೆನ್ನಿಂಗ್ಸ್, ಮೇರಿ ಫೀಲ್ಡ್, ಆರ್ಥರ್ ಎಲ್ಟನ್, ಜಾನ್ ಮತ್ತು ಹಲಾಸ್ ಬ್ಯಾಚಲರ್, ಇತ್ಯಾದಿ.

ಈ ಕೆಲಸದಲ್ಲಿ ನನಗೆ ಸಂಪೂರ್ಣ ಬೆಂಬಲವಿತ್ತವರು ಜಾನ್ ಮ್ಯಾಡಿಸನ್. ಗ್ರಿಯರ್‌ಸನ್ ಅವರ ಸಹೋದ್ಯೋಗಿ. ಅವರು ಬಹುಕಾಲ ಅಂತರರಾಷ್ಟ್ರೀಯ ವೈಜ್ಞಾನಿಕ ಚಲನಚಿತ್ರಗಳ ಸಂಸ್ಥೆಯ ಅಧ್ಯಕ್ಷರಾಗಿದ್ದರು. ನನಗೆ ಪರಮ ಮಿತ್ರರಾದರು. ಅದಕ್ಕೂ ಹೆಚ್ಚಾಗಿ ಮಾರ್ಗದರ್ಶಿಯಾದರು.

ಜಾನ್ ಗ್ರಿಯರ್‌ಸನ್ - (೧೮೯೮-೧೯೭೨) ಅವರು ಹುಟ್ಟಿದ್ದು ಸ್ಕಾಟ್‌ಲೆಂಡಿನ ಒಂದು ಹಳ್ಳಿಯಲ್ಲಿ, ಸಮೀಪದಲ್ಲೇ ಇದ್ದ ಇನ್ನೊಂದು ಹಳ್ಳಿಯಲ್ಲಿ ಅವರ ತಂದೆ ಸ್ಕೂಲು ಮಾಸ್ತರು. ಸ್ವತಃ ಕಟ್ಟುನಿಟ್ಟಿನ ಮನುಷ್ಯ. ಇತರರಲ್ಲೂ, ಮಕ್ಕಳಲ್ಲೂ ಅದನ್ನೇ ನಿರೀಕ್ಷಿಸುತ್ತಿದ್ದವರು, ಬಯಸುತ್ತಿದ್ದವರು. ನಾವು ಅಪ್ಪಟ ಪಂಜಾಬಿ, ಬಂಗಾಳಿ, ಮಲಯಾಳಿ ಅನ್ನುವ ಅರ್ಥದಲ್ಲಿ ಗ್ರಿಯರ್‌ಸನ್ ಅಪ್ಪಟ ಸ್ಕಾಟ್. ಸ್ಕಾಟರು ಧೈರ್ಯ, ಸ್ಥೈರ್ಯ, ಸಾಹಸಕ್ಕೆ ಹೆಸರಾದವರು. ಬ್ರಿಟಿಷ್ ರಾಜ್ಯಭಾರದ ಕಾಲದಲ್ಲಿ ಆಡಳಿತಾಧಿಕಾರಿಗಳಾಗಿದ್ದವರು ಮುಕ್ಕಾಲು ಮೂರು ವೀಸೆ ಜನ ಸ್ಕಾಟರು. ಗ್ರಿಯರ್‌ಸನ್ ಅವರದು ದೊಡ್ಡ ಕುಟುಂಬ. ಮಕ್ಕಳಿಗೆ ಚರ್ಚೆ ಎಂದರೆ ಬಲು ಆಸಕ್ತಿ. ತಂದೆ ಇದನ್ನು ಪ್ರೋತ್ಸಾಹಿಸಿ, ಪ್ರಚೋದಿಸುತ್ತಿದ್ದರು. ಗ್ರಿಯರ್‌ಸನ್ ಅವರ ಚರ್ಚಾ ಸಾಮರ್ಥ್ಯ, ಕೌಶಲ್ಯ ಅತಿ ಉನ್ನತ ಮಟ್ಟದ್ದಾಗಿತ್ತು. ಅವರೊಬ್ಬ ಪ್ರತಿವಾದಿ ಭಯಂಕರ. ಇದನ್ನು ಡಾಕ್ಯುಮೆಂಟರಿ ಸಿನೆಮಾ ಪ್ರಚಾರ, ಪ್ರಸಾರ, ಚಳುವಳಿಯಲ್ಲಿ ಬಹಳ ಚೆನ್ನಾಗಿ ಉಪಯೋಗಿಸಿಕೊಂಡರು.

ಗ್ಲಾಸ್ಗೊ ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರದ ಪದವೀಧರರಾಗಿ, ಕೆಲಕಾಲ ಡರ್ಹಾಮ್ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದು, ೧೯೨೪ರ ವೇಳೆಗೆ ರಾಕ್‌ಫೆಲರ್ ವೇತನ ಪಡೆದು ಮೂರು ವರ್ಷಗಳ ಕಾಲ ಅಮೆರಿಕದಲ್ಲಿ ಸಮಾಜಶಾಸ್ತ್ರದ ಅಧ್ಯಯನ ನಡೆಸಿದರು. ಇದೇ ಅವರ ಗಮನ, ಸಂಶೋಧನೆಗಳನ್ನು, ಸಿನೆಮಾ, ಅದರಲ್ಲೂ ಮುಖ್ಯವಾಗಿ, ಸಿನೆಮಾ ಪ್ರೇಕ್ಷಕರ ಅಭಿರುಚಿ ಮನೋಭಾವಗಳ ಕಡೆ ಹೊರಳಿಸಿದ್ದು. ಹಾಲಿವುಡ್ಡಿನ ಸಂಪರ್ಕ ಅನಿವಾರ್ಯವಾಯಿತು. ಚಾಪ್ಲಿನ್ ಮತ್ತಿತರರ ಸಖ್ಯ ಲಭಿಸಿತು. ಸಿನೆಮಾ ವಿಮರ್ಶೆಯ ಹವ್ಯಾಸವನ್ನು ಬೆಳೆಸಿಕೊಂಡರು. ಹರಿತವಾದ ಶೈಲಿ, ಖಚಿತವಾದ ಅಭಿಪ್ರಾಯಗಳಿಂದಾಗಿ, ಹಲವಾರು ಚಕಮಕಿಸುವ ವಿಮರ್ಶೆಗಳು ಅವರ ಲೇಖಣಿಯಿಂದ ಹೊರಬಿದ್ದವು.

೧೯೨೬ರಲ್ಲಿ ನ್ಯೂಯಾರ್ಕ್ ಸನ್ ಎಂಬ ಪತ್ರಿಕೆಯಲ್ಲಿ ಖ್ಯಾತ ನಿರ್ದೇಶಕ ರಾಬರ್ಟ್ ಫ್ಲಾಹೆರ್ಟಿ ಅವರ 'ಮೋನಾ' ಎಂಬ ಚಿತ್ರದ ವಿಮರ್ಶೆಯಲ್ಲಿ ಪ್ರಪ್ರಥಮ ಬಾರಿಗೆ, ಜಾನ್ ಗ್ರಿಯರ್‌ಸನ್ ಅವರು ಡಾಕ್ಯುಮೆಂಟರಿ ಪದವನ್ನು ಉಪಯೋಗಿಸಿದ್ದರು. ಅದು ಫ್ರೆಂಚ್ ಭಾಷೆಯಿಂದ ಬಳಸಿಕೊಂಡ ಪದ. ಪ್ರವಾಸ ಕಥನಗಳಿಗೆ ಸಂಬಂಧಿಸಿದ್ದು ಮೋನಾ - ದಕ್ಷಿಣ ಸಮುದ್ರದ ದ್ವೀಪಗಳ ಪಾಲಿನೇಶಿಯನ್ ಯುವಜನರ ದೈನಂದಿನ ಜೀವನದ ವಿಷಯವನ್ನು ನಿರೂಪಿಸಿದ





*ಡ್ರಿಫ್ಟರ್ಸ್ (1929), ಇ ಎಂ ಬಿ ಫಿಲ್ಮ್ ಯೂನಿಟ್ ತಯಾರಿಕೆ*
*ನಿರ್ದೇಶನ : ಜಾನ್ ಗ್ರಿಯರ್‌ಸನ್*

ಚಲನಚಿತ್ರ. ಇಲ್ಲೊಂದು ಚಿಕ್ಕ ನೆನಪು.

ನನಗೆ ೮-೯ರಷ್ಟು ವಯಸ್ಸಿದ್ದಿರಬೇಕು. ೧೯೩೧-೩೨ರಲ್ಲಿ ನನ್ನ ತವರೂರು ಮೇಲುಕೋಟೆಗೆ ಬೇಸಿಗೆ ರಜೆಯ ಸಮಯದಲ್ಲಿ ಹೋಗಿದ್ದೆ. ಆಗ ಅಲ್ಲಿಯ ಮನೋಹರವಾದ ಕಲ್ಯಾಣಿಯ ಪರಿಸರದಲ್ಲಿ ಚಿತ್ರೀಕರಣ ಒಂದನ್ನು ನೋಡಿದ್ದೆ. ಬಹಳ ದೂರದಿಂದ ನೋಡಿದ್ದೆ. ಕಾರಣ, ಚಿತ್ರೀಕರಣ ಮಾಡುತ್ತಿದ್ದವರು ಪರಂಗಿಯವರು. ಆ ಕಾಲದಲ್ಲಿ ಪರಂಗಿಯವರನ್ನು ಕಂಡರೆ ಕಿರಿ ಕಿರಿ, ದಿಗಿಲು ಮತ್ತು ಊರಿನಲ್ಲಿದ್ದ ಪ್ರಬಲ, ಒಣಮಡಿಯ ಸಂಪ್ರದಾಯಸ್ಥರೆಲ್ಲರೂ ಅದನ್ನು ಬಹಿಷ್ಕರಿಸಬೇಕು ಎಂದು ಹಟ ಮಾಡಿ ನಿಶ್ಚಯಿಸಿದ್ದರು. ಅದರ ವಿಷಯ ವ್ಯಂಗ್ಯವಾಗಿಯೂ ಮಾತನಾಡಿಕೊಳ್ಳುತ್ತಿದ್ದರು. ಕಲ್ಯಾಣಿಗೆ ಮಾಮೂಲಾಗಿ ಬಟ್ಟೆ ಒಗೆದುಕೊಳ್ಳುವುದಕ್ಕೆ, ಸ್ನಾನಕ್ಕೆ ಹೋಗುತ್ತಿದ್ದ ಹೆಂಗಸರೆಲ್ಲರನ್ನೂ ಪರಂಗಿಯವನ ರಾಸಕ್ರೀಡೆಯ ಗೋಪಿಯರೆಂದು ಹಳಿದು, ಹಂಗಿಸಿ ಹಾಸ್ಯ ಮಾಡುತ್ತಿದ್ದರು. ಅಲ್ಲಿ ಚಿತ್ರೀಕರಣ ಮಾಡುತ್ತಿದ್ದ ನಿರ್ದೇಶಕ ರಾಬರ್ಟ್ ಫ್ಲಾಹೆರ್ಟಿ! ಮುಂದೆ ಪ್ರಪಂಚದ ಸಿನೆಮಾ ಚರಿತ್ರೆಯಲ್ಲಿ ಬಹಳ ವಿಶಿಷ್ಟ ಗಣ್ಯವ್ಯಕ್ತಿಗಳಲ್ಲೊಬ್ಬನೆಂದು ಎನಿಸಿಕೊಂಡವನು. ಚಿತ್ರ **ಎಲಿಫೆಂಟ್ ಬಾಯ್**. ಮೈಸೂರು ಸಾಬುವನ್ನು ಗುರುತಿಸಿ, ಅವನನ್ನು ಹಾಲಿವುಡ್ಡಿಗೆ ಕರೆದುಕೊಂಡು ಹೋಗಿ ಹೆಸರುವಾಸಿ ಮಾಡಿದವನು. ಗ್ರಿಯರ್‌ಸನ್ ಡಾಕ್ಯುಮೆಂಟರಿ ಚಿತ್ರಗಳ ಸಂಸ್ಥಾಪಕ, ಪಿತ, ನೇತನೆನಿಸಿಕೊಂಡರೂ, ಆತನ ಡಾಕ್ಯುಮೆಂಟರಿ ತತ್ವಗಳು ಪ್ರತಿಪಾದಿತವಾದದ್ದು ಫ್ಲಾಹೆರ್ಟಿಯ **ನಾನೂಕ್ ಆಫ್ ದಿ ನಾರ್ತ್** ಎಂಬ ಚಿತ್ರದಿಂದ. ಉತ್ತರ ಧ್ರುವದ ಎಸ್ಕಿಮೋ ಜನದ ನಿತ್ಯ ಜೀವನದ ರೋಮಾಂಚಮಯ ಕಲಾತ್ಮಕ ಚಿತ್ರ. ಇಂದಿಗೂ ಆ ಚಿತ್ರವನ್ನು ನೋಡಿದರೆ ಸೋಜಿಗವೆನಿಸುತ್ತದೆ. ಮೈನವಿರೇಳುತ್ತದೆ.

೧೯೪೮ರಲ್ಲಿ ಲಂಡನ್ನಿನಲ್ಲಿ ಅಲ್ಲಿ ನೋಡಿದ ಮೊದಲನೆಯ ಚಿತ್ರಗಳಲ್ಲೊಂದು, ಲಂಡನ್ ಫಿಲ್ಮ್ ಸೊಸೈಟಿಯ ಆಶ್ರಯದಲ್ಲಿ, ಫ್ಲಾಹೆರ್ಟಿಯವರ ಇನ್ನೊಂದು ಮೇರು ಕೃತಿ ಲೂಸಿಯಾನಾ ಸ್ಟೋರಿ.

ಎಲ್ಲಾ ಕಿರು, ಸಾಕ್ಷ್ಯ ಚಿತ್ರಗಳೂ ಡಾಕ್ಯುಮೆಂಟರಿಗಳಲ್ಲ. ಗ್ರಿಯರ್‌ಸನ್ ಅವರ ಅಭಿಪ್ರಾಯಗಳು, ವಿಶ್ಲೇಷಣೆಯ ಪ್ರಕಾರ - ಈ ವಿಷಯದಲ್ಲಿ **ಗ್ರಿಯರ್‌ಸನ್ ಆನ್**

ಡಾಕ್ಯುಮೆಂಟರಿ ಎಂಬ ದೊಡ್ಡ ಪುಸ್ತಕವೇ ಇದೆ - ಡಾಕ್ಯುಮೆಂಟರಿಗಳದೇ ಒಂದು ಪ್ರತ್ಯೇಕ, ವಿಶಿಷ್ಟ ವರ್ಗ. ಗ್ರಿಯರ್‌ಸನ್ ಪ್ರಕಾರ ಡಾಕ್ಯುಮೆಂಟರಿ ಸೂತ್ರ, ಸ್ವರೂಪ, ರೂಪರೇಷೆಗಳೇನು, ನೋಡೋಣ.

ತತ್ವಶಾಸ್ತ್ರ ಹಾಗೂ ಸಮಾಜಶಾಸ್ತ್ರದ ಅಧ್ಯಯನದ ಅಡಿಪಾಯ, ಈ ಹಿನ್ನೆಲೆಯೊಡನೆ, ಚಲನಚಿತ್ರ ವಿಮರ್ಶೆಗೆ ತೊಡಗಿದ ಗ್ರಿಯರ್‌ಸನ್ ಅವರಿಗೆ, ಆ ಮಾಧ್ಯಮದ ಪ್ರವೃತ್ತಿ, ಪ್ರಭಾವ, ವ್ಯಾಪ್ತಿ, ಅದರ ತಾಂತ್ರಿಕ ಗುಣಗಳ, ಶಕ್ತಿಗಳ ವೈವಿಧ್ಯ, ಪ್ರೇಕ್ಷಕರ ಮೇಲೆ ಅದು ಬೀರಬಹುದಾದ ಸಮ್ಮೋಹನಾಸ್ತ್ರದ ಪರಿಣಾಮ, ಎಲ್ಲ ತಮ್ಮ ಅಂಗೈನಷ್ಟು ಸ್ಪಷ್ಟವಾಗಿ ತಿಳಿದಿತ್ತು. ಇದರಿಂದ ಅವರಿಗೆ ಸ್ಫುರಿಸಿದ ಡಾಕ್ಯುಮೆಂಟರಿ ಕಲ್ಪನೆ ಸಹಜವೇ ಆಗಿತ್ತು. ಅವರ ಮೊದಲ ಪ್ರತಿಕ್ರಿಯೆ, ಇಂತಹ ಅತ್ಯುತ್ತಮ ಸಾಧನ, ಶಸ್ತ್ರ ಸಲಕರಣೆಯ ದುರುಪಯೋಗದ ಬಗ್ಗೆ ಬಹುಪಾಲು ಸ್ಟೂಡಿಯೋ ಚಿತ್ರಗಳ ಅಸಹಜತೆ, ಕೃತಕತೆ, ಅಲ್ಲಲ್ಲಿ ಆಗಾಗ್ಗೆ ಸುಳಿಯುತ್ತಿದ್ದ ಅಶ್ಲೀಲತೆ ಎಲ್ಲಾ ಅವರನ್ನು ಕಾಡಿತು. ಮನಸ್ಸನ್ನು ಕಲಕಿ ಕೆರಳಿಸಿತು. ಈ ರೀತಿಯ ವಿಚಾರಗಳಿಂದ ತಲೆ ತುಂಬಿದ್ದ ಗ್ರಿಯರ್‌ಸನ್ ೧೯೨೭ರಲ್ಲಿ, ತಮ್ಮ ೨೯ನೆಯ ವರ್ಷದಲ್ಲಿ ಇಂಗ್ಲೆಂಡಿಗೆ ಹಿಂದಿರುಗಿದ್ದರು. ಸ್ಟೀಫನ್ ಟ್ಯಾಲೆಂಟ್ಸ್ ಎಂಬುವರ ಬೆಂಬಲ ಪ್ರೋತ್ಸಾಹಗಳಿಂದ ಎಂಪೈರ್ ಮಾರ್ಕೆಟಿಂಗ್ ಬೋರ್ಡ್‌ನ ಫಿಲ್ಮ್ ಆಫೀಸರಾಗಿ ನಿಯಮಿತರಾದರು.

ಫ್ಲಾಹರ್ಟಿಯವರ **ನಾನೂಕ್ ಆಫ್ ದಿ ನಾರ್ತ್** ಮತ್ತು ಜಗದ್ವಿಖ್ಯಾತ ಸೋವಿಯೆತ್ ನಿರ್ದೇಶಕ ಐಸೆನ್‌ಸ್ಟೈನ್ ಅವರ **ಬ್ಯಾಟಲ್‌ಶಿಪ್ ಪೊಟೆಂಕಿನ್** ಚಿತ್ರಗಳಿಂದ ಪ್ರಭಾವಿತರಾದ ಗ್ರಿಯರ್‌ಸನ್ ಅವರಿಗೆ ಈ ಚಿತ್ರಗಳು ಡಾಕ್ಯುಮೆಂಟರಿ ತತ್ವ ಮತ್ತು ಧ್ಯೇಯಗಳನ್ನು ನಿಖರವಾಗಿ ಸ್ಪಷ್ಟಗೊಳಿಸಿದ್ದವು.

ಗ್ರಿಯರ್‌ಸನ್ ಅವರ ಕೆಲವು ಸಾಧನೆಗಳನ್ನು ತಿಳಿಸುವ ಮುನ್ನ ಅವರ ಡಾಕ್ಯುಮೆಂಟರಿ ಚಳುವಳಿಯ ತತ್ವದ ಕೆಲವು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಸೂಚಿಸುತ್ತಿದ್ದೇನೆ.

ಡಾಕ್ಯುಮೆಂಟರಿ ಎಂಬುದು ಕಿರುಚಿತ್ರವಾಗಲೀ, ಸಾಕ್ಷ್ಯಚಿತ್ರವಾಗಲೀ, ಅಥವಾ ವಾಸ್ತವಿಕತೆಯ ಕೇವಲ ಚಿತ್ರೀಕರಣವಷ್ಟೇ ಅಲ್ಲ. Documentary is the Creative Treatment of Actuality ಎಂಬುದೇ ಗ್ರಿಯರ್‌ಸನ್ ಅವರ ಸೂತ್ರ. ವಾಸ್ತವಿಕತೆಯ ಸೃಜನಾತ್ಮಕ ನಿರೂಪಣೆ, ಆವಿಷ್ಕಾರ, ಪರಿಷ್ಕರಣವೇ ಡಾಕ್ಯುಮೆಂಟರಿ. ಚಿನ್ನ ನೆಲದ ಮೇಲೆ ಸಿಗುವುದಿಲ್ಲ, ಭೂಗರ್ಭದಿಂದ ಅದುರನ್ನು ಅಗೆದು ತೆಗೆದು ಶೋಧಿಸಿದಾಗಲೇ ಅಪ್ಪಟ ಬಂಗಾರ ಸಿಗುವುದು. ಅಂತೆಯೇ, ವಾಸ್ತವಿಕತೆಯ ಕೇವಲ ಮೇಲು ಹೊದಿಕೆಯ ವೀಕ್ಷಣೆಯಷ್ಟೇ ಸಾಲದು. ಅದರ ಅಂತರಾಳವನ್ನು ಹೊಕ್ಕು, ತೀಕ್ಷ್ಣವಾಗಿ ನೋಡಿ, ಆ ಅಂತರಂಗವನ್ನು ಶೋಧಿಸಿ ವಿಶ್ಲೇಷಿಸಿದ ದರ್ಶನವೇ ಡಾಕ್ಯುಮೆಂಟರಿ. ಹಾಗಿಲ್ಲದ ಪಕ್ಷಕ್ಕೆ ಆಂಗ್ಲಕವಿ ವರ್ಡ್ಸ್‌ವರ್ತ್ ಹೇಳಿರುವಂತೆ ಒಂದು ಹಳದಿಯ ಹೂವು, ಹಳದಿಯ ಹೂವಾಗಿಯೇ ಉಳಿಯುವುದು, ಅಷ್ಟೆ. ಸಾಮಾನ್ಯ ದೃಷ್ಟಿಗೆ ನಿಲುಕದ ಸಾಮಾನ್ಯ ವಸ್ತುವಿನ ಅಸಾಮಾನ್ಯತೆಯನ್ನು ಎತ್ತಿ ತೋರಿಸುವುದೇ ಡಾಕ್ಯುಮೆಂಟರಿಯ ಕೌಶಲ. ರವಿ ಕಾಣದ್ದನ್ನು ಕವಿ ಕಾಣುವ ಪ್ರತಿಭೆಯಂತೆ.

ಈ ಅಭಿಪ್ರಾಯಗಳು ಸುಮಾರು ೭೦ ವರ್ಷಗಳಷ್ಟು ಹಿಂದಿನವು ಎಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು.

ನಮ್ಮೆಲ್ಲರಿಗೂ ತಿಳಿದಂತೆ ಸಿನೆಮಾ ಉಪಯೋಗಗಳು ಹಲವಾರು. ಆದರೆ, ಗ್ರಿಯರ್‌ಸನ್ ಅವರಿಗೆ ಅದು ಅತಿ ಮುಖ್ಯವಾಗಿ ಶಿಕ್ಷಣ ಮತ್ತು ಪ್ರಸಾರ, ಪ್ರಚಾರಗಳ ಮಾಧ್ಯಮ, ಸಾಧನ.

ಯಾವುದೇ ದೇಶದ, ಸಮಾಜದ ಪ್ರಗತಿ, ಅಲ್ಲಿಯ ಶಿಕ್ಷಣ, ವಿದ್ಯಾಭ್ಯಾಸಗಳ ಮೇಲೆ ಆಧಾರಿತವಾಗಿರುತ್ತದೆ. ಶಿಕ್ಷಣ ಕ್ರಮ, ಪದ್ಧತಿಗಳು ಎಷ್ಟು ವೀರ್ಯವತ್ತೋ, ಜೀವಸತ್ವ ಉಳ್ಳದ್ದೋ, ಅಷ್ಟೇ ಪ್ರಗತಿಯೂ ಶ್ರೇಷ್ಠವಾಗಿರುತ್ತದೆ, ಚುರುಕಾಗಿ ಮುಂದುವರಿಯುತ್ತದೆ. ಪ್ರಜಾಪ್ರಭುತ್ವದಲ್ಲಿ ಪ್ರಭುಗಳಾದ ಪ್ರಜೆಗಳ ಸಹಭಾಗಿತ್ವ ಆಡಳಿತದಲ್ಲಿ ಎಷ್ಟು ಮತ್ತು ಎಷ್ಟರಮಟ್ಟಿಗೆ ಉತ್ಕೃಷ್ಟವಾಗಿರುತ್ತದೋ, ಅಷ್ಟು ಪ್ರಜಾಪ್ರಭುತ್ವ ಒಳ್ಳೆಯ ಫಲದಾಯಕವಾಗುತ್ತದೆ. ಇದನ್ನು ಸಾಧಿಸುವುದಕ್ಕೆ ಸಿನೆಮಾ ಒಂದು ಅತ್ಯುಪಯುಕ್ತ ಸಾಧನ. ಕಾರಣ ಅದಕ್ಕಿರುವ ಪ್ರಚೋದನೆಯ ಗುಣ.



*ಡ್ರಿಫ್ಟರ್ಸ್ ಚಿತ್ರದ ಇನ್ನೊಂದು ದೃಶ್ಯ*

ಸಿನೆಮಾ ಒಂದು ವೇದಿಕೆ. ಧಾರ್ಮಿಕ ವೇದಿಕೆಯಂತೆ. ಅದನ್ನು ಸತ್ಪ್ರಚಾರಕ್ಕೆ ನಿಸ್ಸಂಕೋಚವಾಗಿ, ಧಾರಾಳವಾಗಿ ಉಪಯೋಗಿಸಬಹುದು, ಉಪಯೋಗಿಸಬೇಕು. ಆದರೆ ಯಾವುದೇ ರೀತಿಯ ಅಪಪ್ರಚಾರ ನಿಷಿದ್ಧ. ಪ್ರಚಾರದ ಗುರಿ ಸಮಾಜ ಸೇವೆ, ಸಮಾಜದ ಹಿತ, ಪ್ರಗತಿ ಉನ್ನತಿಗಳಿಗೆ ಸೀಮಿತ. ಇವಕ್ಕೆ ಅನುಕೂಲವಾದ ಸಾಮಾಜಿಕ, ಸಾರ್ವಜನಿಕ ಜೀವನದ ಸೂಕ್ಷ್ಮ ಹಾಗೂ ಗಾಢವಾದ ವಿಶ್ಲೇಷಣೆ ಈ ಮಾಧ್ಯಮದ ಮೂಲಕ ಆಗಬೇಕು. ಮನೋವಿಕಾಸ ಬಹಳ ಮುಖ್ಯ. ಹಾಗೆಂದ ಮಾತ್ರಕ್ಕೆ, ಮನರಂಜನೆ ಸಂಪೂರ್ಣ ತ್ಯಾಜ್ಯ ಎಂದು ತಿಳಿಯಬಾರದು. ಅದು ನಿಷಿದ್ಧವಲ್ಲ. ಅದು ಸರಿಯಾಗಿ ಸಹಜವಾಗಿರಬೇಕು. ನಕ್ಕು ನಗಿಸುವ ಸಹಜ ಧರ್ಮದಂತೆ.

ಪ್ರಾಯೋಜನೆ ಶಬ್ದ ಈಗ ಚಿರಪರಿಚಿತ, ಟಿ.ವಿ.ಯಿಂದಾಗಿ. ಆದರೆ ಪ್ರಾಯೋಜಕತೆಯ ಶುದ್ಧ ತತ್ವ, ರೂಪಗಳೇನು, ಎಂಬ ತಿಳುವಳಿಕೆಯನ್ನು ೩೦ರ ದಶಕದಲ್ಲೇ ಮೂಡಿಸಿ, ಕಾರ್ಯರೂಪಕ್ಕೆ ತಂದವರು ಗ್ರಿಯರ್‌ಸನ್. ಪ್ರಚಾರ, ಸಾರ್ವಜನಿಕ ಸಂಪರ್ಕ, ಸಂಬಂಧ ಎಂಬ ಪದಗಳಿಗೆ ಹೊಸ ಅರ್ಥವನ್ನು ಅವರು ತಂದುಕೊಟ್ಟರು.

Enlightened sponsorship - ತಿಳುವಳಿಕೆಯುತವಾದ ಪ್ರಬುದ್ಧ ಪ್ರಾಯೋಜಕತೆ - ಈ ಭಾವನೆಯನ್ನು ಪ್ರಯೋಗಿಸಿದವರು, ಬಳಕೆಗೆ ತಂದವರೇ, ಗ್ರಿಯರ್‌ಸನ್. ಸರಕುಗಳ ನೇರವಾದ, ಪ್ರತ್ಯಕ್ಷವಾದ ಜಾಹೀರಾತಿಗಿಂತ, ಉದ್ಯಮ ಸಂಸ್ಥೆಗಳ ಸಮಾಜ ಹಿತ ಪರೋಕ್ಷ ಜಾಹೀರಾತು ಉತ್ತಮ. ಸಾಮಾಜಿಕ ಪ್ರಜ್ಞೆ, ದೂರದೃಷ್ಟಿ, ಸತ್ಪ್ರಜಾ ಪ್ರಜ್ಞೆ ಇವುಗಳ ಪ್ರಚೋದನೆಗೆ ಬೆಂಬಲವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಅವರ **ಡ್ರಿಫ್ಟರ್ಸ್**, **ಬೇಸಿಲ್ ರೈಟ್** ಅವರ **ಸಾಂಗ್ ಆಫ್ ಸಿಲೋನ್**, **ನೈಟ್ ಮೇಲ್** ಇತ್ಯಾದಿ ಚಲನ ಚಿತ್ರಗಳು ಇಂದಿಗೂ ಜನಪ್ರಿಯವಾಗಿವೆ, ಸಾಕ್ಷಿಗಳಾಗಿವೆ.

ಇನ್ನು ಗ್ರಿಯರ್‌ಸನ್ ಅವರ ಕೆಲವು ವಿಶಿಷ್ಟ ಸಾಧನೆಗಳನ್ನು ಸಂಕ್ಷಿಪ್ತವಾಗಿ ತಿಳಿಸಿ, ಈ ಲೇಖನವನ್ನು ಮುಗಿಸುತ್ತೇನೆ.

EMB- ಎಂಪೈರ್ ಮಾರ್ಕೆಟಿಂಗ್ ಬೋರ್ಡ್ ಸಂಸ್ಥೆಗೆ ಫಿಲ್ಮ್ ಆಫೀಸರಾಗಿ ಸೇರಿಕೊಂಡ ಗ್ರಿಯರ್‌ಸನ್ ಅವರ ಪ್ರಥಮ ಚಿತ್ರ - ನಿರ್ಮಾಪಕ, ನಿರ್ದೇಶಕರಾಗಿ - **ಡ್ರಿಫ್ಟರ್ಸ್**. ವಸ್ತು, ಶೈಲಿ ಎರಡೂ ಆಕರ್ಷಕವಾಗಿದ್ದು, ೧೯೨೯ರಲ್ಲಿ ಒಂದು ಫಿಲ್ಮ್ ಸೊಸೈಟಿಯ ಆಶ್ರಯದಲ್ಲಿ ಬಿಡುಗಡೆಯಾದ ಚಿತ್ರ. ಬಹಳ ಯಶಸ್ವಿ ಆಯಿತು.

ವಸ್ತು ಸ್ಕಾಟ್ಲೆಂಡಿನ ಉತ್ತರ ಸಮುದ್ರದ ಮೀನುಗಾರಿಕೆ - ಹೆರ್ರಿಂಗ್ ಜಾತಿ ಮೀನುಗಳ - ಬೇಸಾಯ. ಮೊದಲ ಮಹಾಯುದ್ಧದ ಸಮಯದಲ್ಲಿ ೨-೩ ವರ್ಷಗಳ ಕಾಲ ಜಲಸೇನೆಯಲ್ಲಿ ಸೇವೆ ಮಾಡಿದ್ದ ಗ್ರಿಯರ್‌ಸನ್ ಅವರಿಗೆ ಸಮುದ್ರದ

ಅನುಭವ ಚೆನ್ನಾಗಿ ಆಗಿತ್ತು. ಅದರ ಜೊತೆಗೆ ಅವರ ಸಾಗರ ಪ್ರೇಮಿ ಉತ್ಸಾಹ ಚಿತ್ರದ ಶೈಲಿಯಲ್ಲಿ ಪ್ರತಿಬಿಂಬಿಸಿತ್ತು. ಸೋವಿಯೆತ್ ನಿರ್ದೇಶಕ ಐಸೆನ್‌ಸ್ಟೈನ್ ಅವರ **ಬ್ಯಾಟಲ್‌ಶಿಪ್ ಪೊಟೆಂಕಿನ್** ಚಲನಚಿತ್ರದ ಶೈಲಿಯ ಪ್ರಭಾವ, ಅದರ ಜಗತ್ಪ್ರಸಿದ್ಧವಾದ ಮೊಂಟಾಜ್ - ಸಂಕಲನ ಶೈಲಿ - ಅದರ ಪ್ರತಿಧ್ವನಿ **ಡ್ರಿಫ್ಟರ್ಸ್**‌ನಲ್ಲಿ ಯಥೇಚ್ಛವಾಗಿತ್ತು. ಸಾಮಾನ್ಯ ಜನರ ದಿನನಿತ್ಯದ ಜೀವನದ ಗೆಲುವು ನಲಿವು ನೋವುಗಳ ಸೃಜನಾತ್ಮಕ ನಿರೂಪಣೆ ಇಲ್ಲಿತ್ತು.

ಗ್ರಿಯರ್‌ಸನ್ ಅವರ ಡಾಕ್ಯುಮೆಂಟರಿ ತತ್ವದ ಯಶಸ್ವಿ ಮಾದರಿ ಮತ್ತು ಪ್ರತಿಪಾದನೆ ಆಯಿತು **ಡ್ರಿಫ್ಟರ್ಸ್**. ಗ್ರಿಯರ್‌ಸನ್ ತಮ್ಮ ಜೀವಮಾನದಲ್ಲಿ ನಿರ್ದೇಶಿಸಿದ ಏಕೈಕ ಚಿತ್ರ ಅದು! ಇದಕ್ಕೂ ಕಾರಣವಿದೆ.

ನಿರ್ದೇಶಿಸಿದ ಚಿತ್ರ ಒಂದೇ ಆದರೂ ಅವರು ಕಾರ್ಯನಿರ್ವಾಹಕ ನಿರ್ಮಾಪಕರಾಗಿ ಹೊರತಂದ ಚಿತ್ರಗಳು ಸಾವಿರಾರು. ಅವರ ಹೆಗ್ಗಳಿಕೆ, ಅಗ್ಗಳಿಕೆ, ಹಿರಿಮೆ, ಪ್ರತಿಭೆಯನ್ನು ಹುಡುಕಿ, ಗುರುತಿಸಿ, ಪೋಷಿಸಿ, ಬೆಳೆಸುವುದರಲ್ಲೇ ಮುಖ್ಯವಾಗಿ ಇದ್ದದ್ದು. ಡಾಕ್ಯುಮೆಂಟರಿ ಚಿತ್ರಗಳ ಕುಲದವರೆಲ್ಲರೂ ಅವರ ದತ್ತು ಪುತ್ರರೆಂದರೆ ಅದು ಉತ್ಪ್ರೇಕ್ಷೆಯಲ್ಲ. ಅವರಿಗೆ ಡಾಕ್ಯುಮೆಂಟರಿ ಪಿತನೆಂಬ ಖ್ಯಾತಿಯೂ ಇದರಿಂದಲೇ ಬಂದಿರುವುದು. ಡಾಕ್ಯುಮೆಂಟರಿ ಚಳುವಳಿಯ ಆರಂಭದಲ್ಲಿ ಎರಡು ದಶಕಗಳ ಕಾಲ ಸತತವಾಗಿ ಬೋಧನೆ ಪ್ರಚಾರಗಳ ಜತೆ ಜತೆಯೇ, ಡಾಕ್ಯುಮೆಂಟರಿ ತತ್ವಗಳನ್ನು ಅಭ್ಯಾಸ ಮಾಡಿ ಅನುಷ್ಠಾನಕ್ಕೆ ತಂದವರು ಡಾ. ಜಾನ್ ಗ್ರಿಯರ್‌ಸನ್.



*ಎಲಿಫೆಂಟ್ ಬಾಯ್ (1936) - ರಾಬರ್ಟ್ ಫ್ಲಾಹರ್ಟಿ ನಿರ್ದೇಶನದ ಚಿತ್ರದಲ್ಲಿ ಸಾಬು*

ಗ್ರಿಯರ್‌ಸನ್ ಮತ್ತು ಕ್ರೇಟನ್ ಇಬ್ಬರಿಂದ ಆರಂಭವಾದ E.M.B. ಫಿಲ್ಮ್ ಯೂನಿಟ್, ೧೯೩೦ ರಿಂದ ೧೯೩೩ರ ವೇಳೆಗೆ ಮೂವತ್ತಕ್ಕೂ ಮೀರಿದ ತಂಡವಾಗಿ ಬೆಳೆದಿತ್ತು. ನೂರಕ್ಕೂ ಹೆಚ್ಚು ಡಾಕ್ಯುಮೆಂಟರಿ ಚಿತ್ರಗಳನ್ನು ತಯಾರಿಸಿತು. ೧೯೩೩ರಲ್ಲಿ ಸ್ಟೀಫನ್ ಟ್ಯಾಲೆಂಟ್ಸ್ ಅವರಿಗೆ ಜನರಲ್ ಪೋಸ್ಟ್ ಆಫೀಸಿಗೆ ವರ್ಗವಾದಾಗ, ಅವರು ಗ್ರಿಯರ್‌ಸನ್ ನೇತೃತ್ವದ ತಂಡವನ್ನು ತಮ್ಮ ಜತೆಯೇ ಕೊಂಡೊಯ್ದರು. ಈ ಹೊತ್ತಿಗೆ ಮೂಕಿಗಳು ಟಾಕಿಗಳಾದುವು. ಇದರಿಂದ ಚಲನಚಿತ್ರದಲ್ಲಿ, ಮುಖ್ಯವಾಗಿ ಡಾಕ್ಯುಮೆಂಟರಿಗಳಲ್ಲಿ, ಶಬ್ದದ ಸೃಜನಾತ್ಮಕ ಉಪಯೋಗದ ಹಲವಾರು ಪ್ರಯೋಗಗಳಾದುವು. ಡಾಕ್ಯುಮೆಂಟರಿಯ ಮೊದಲನೆಯ ಅಲೆಯ ನಿರ್ದೇಶಕರೂ ತಮ್ಮದೇ ಹೊಸ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಡಾಕ್ಯುಮೆಂಟರಿ ಚಳುವಳಿಯನ್ನು ವರ್ಧಿಸಿದರು.

ಇದೆಲ್ಲವನ್ನು ವಿವರಿಸುತ್ತಾ ಹೋದರೆ, ಈ ಲೇಖನಕ್ಕೆ ಕೊನೆಯೇ ಇರುವುದಿಲ್ಲ! ಜಿ. ಪಿ. ಓ. ನಂತರ ಫಿಲಂ ಸೆಂಟರ್ ಎಂಬ ತಮ್ಮದೇ ಸ್ವಂತ ಸಂಸ್ಥೆಯೊಂದನ್ನು ಸ್ಥಾಪಿಸಿ, ತಮ್ಮ ಜನ್ಮದೇಶವಾದ ಸ್ಕಾಟ್ಲೆಂಡಿನ ವ್ಯಕ್ತಿತ್ವ, ಸಂಪ್ರದಾಯಗಳು, ಉದ್ಯಮಗಳು, ಆರ್ಥಿಕ ವ್ಯವಸ್ಥೆ, ಶಿಕ್ಷಣ, ಆಟೋಟಗಳ ಅತ್ಯುತ್ತಮ ಚಿತ್ರಗಳನ್ನು ತಯಾರಿಸಿದರು.

೧೯೩೯ರಲ್ಲಿ ಕೆನಡಾದ ನ್ಯಾಷನಲ್ ಫಿಲ್ಮ್ ಬೋರ್ಡ್‌ನ ಫಿಲ್ಮ್ ಕಮೀಷನರಾಗಿ ನೇಮಕವಾಗಿ, ಅದನ್ನು ಜಗತ್ಪ್ರಸಿದ್ಧವಾದ ಸಂಸ್ಥೆಯನ್ನಾಗಿ ಬೆಳೆಸಿದರು. ಕೆಲವೇ ವರ್ಷಗಳಲ್ಲಿ ಅದರ ಕೆಲಸಗಾರರ ಸಂಖ್ಯೆ ೪೦ ರಿಂದ ೨೦೦ಕ್ಕೂ ಮೀರಿ ಏರಿತು. ಪ್ರತಿವರ್ಷ ೨೦೦-೩೦೦ ಚಿತ್ರಗಳನ್ನು ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಹೊರತರುತ್ತಿತ್ತು. ಬೋರ್ಡಿನ ಸಾಧನೆ ಕೇವಲ ಸಂಖ್ಯೆಯದ್ದಾಗಿರಲಿಲ್ಲ. ಆ ಚಿತ್ರಗಳ ಗುಣಮಟ್ಟ ಕೇವಲ ವಿವರಣೆಯಿಂದ ಸಾಧ್ಯವಿಲ್ಲ.

ಚಿತ್ರಮಂದಿರಗಳಲ್ಲಿರುವ ಪ್ರೇಕ್ಷಕರಿಗಿಂತ, ಅವುಗಳ ಹೊರಗೆ ಇರುವ ಪ್ರೇಕ್ಷಕರೇ ಅಸಂಖ್ಯಾತ - ಶಾಲಾ ಕಾಲೇಜುಗಳಲ್ಲಿ, ಫ್ಯಾಕ್ಟರಿಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಎಂದು ಸಾರಿಸಾರಿ ಹೇಳುತ್ತಿದ್ದ ಗ್ರಿಯರ್‌ಸನ್, ಈ ಪ್ರೇಕ್ಷಕ ವೃಂದದ ಮನೋವಿಕಾಸ, ಬೆಳವಣಿಗೆಯೇ ಮುಖ್ಯ ಎಂದು ಖಚಿತವಾಗಿ ನಂಬಿದ್ದರು. ಅವರು ಬೋರ್ಡಿನ ಕಾರ್ಯಕ್ರಮ ಚಟುವಟಿಕೆಗಳಿಂದ ರಾಷ್ಟ್ರೀಯ ಶಿಕ್ಷಣಕ್ಕೆ ಪೂರಕವಾಗಿ ಬೆಂಬಲವಿತ್ತರು. ಆರು ವರ್ಷಗಳ ಕಾಲ ಅಲ್ಲಿ ಕೆಲಸ ಮಾಡಿದ ನಂತರ, ಅಂತರರಾಷ್ಟ್ರೀಯ ಸೇವೆಯನ್ನು ಕೈಗೊಂಡರು. ಯುನೆಸ್ಕೋವಿನ ಸಾಮೂಹಿಕ ಸಂಪರ್ಕ ಭಾಗದ (Mass Communication) ನಿರ್ದೇಶಕರಾಗಿ, ಐ.ಎಲ್.ಓ. ಅಂತಹ ಅಂತರರಾಷ್ಟ್ರೀಯ ಸಂಸ್ಥೆಗಳಿಗೆ ಡಾಕ್ಯುಮೆಂಟರಿಗಳ ಉಪಯೋಗದ ವಿನಿಮಯದಲ್ಲಿ, ಕಾರ್ಯಕ್ರಮದ ಯೋಜನೆಗಳಿಗೆ, ತಮ್ಮ ಸ್ಫೂರ್ತಿಯುತ ಮಾರ್ಗದರ್ಶನ ಮಾಡಿದರು.

ಇದಿಷ್ಟೂ ಸಾಧನೆ, ನಾನು ಅವರನ್ನು ೧೯೪೮ರಲ್ಲಿ ಸಂಧಿಸುವುದಕ್ಕೆ ಮುಂಚೆ ನಡೆದದ್ದು! ಅವರು ತಮ್ಮ ಆಯಸ್ಸು ಪೂರ್ತಿ ಚಲನಚಿತ್ರ ಮತ್ತು ಟಿ. ವಿ. ಕ್ಷೇತ್ರಗಳಲ್ಲಿ ಕರ್ಮಯೋಗಿಯಾಗಿಯೇ ಬಾಳಿದರು.

ಸ್ಕಾಟ್ಲೆಂಡ್ ನನ್ನ ದೇಶ, ಇಂಗ್ಲೆಂಡ್ ನನ್ನ ರಾಷ್ಟ್ರ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಹೀಗೆ ಸ್ವದೇಶೋ ಭುವನತ್ರಯಂ ಎಂದು ಹೊರಟ ಅವರು ಕ್ರಮೇಣ ವಸುಧೈವ ಕುಟುಂಬಕಂ ಎಂಬ ನಿಲುವನ್ನು ಸೇರಿದರು.

ಡಾಕ್ಯುಮೆಂಟರಿ ಎಂದರೆ ಏನು ಎಂಬ ಪ್ರಶ್ನೆಗೆ ಅವರು ತಮ್ಮ ಜೀವನದ ಸಂಜೆಯಲ್ಲಿ ಕೊಟ್ಟ ಉತ್ತರ ನೋಡಿ (ಇದು ಅಕ್ಷರಶಃ ಭಾಷಾಂತರವಲ್ಲ, ಕೇವಲ ತಾತ್ಪರ್ಯ ಮಾತ್ರ) : ಒಂದು ಒಳ್ಳೆಯ ಚಿತ್ರ ಹ್ರಸ್ವವಾಗಲಿ, ದೀರ್ಘವಾಗಲಿ, ಸಂತೋಷ, ಉತ್ಸಾಹ, ಆನಂದದಿಂದ ಕುಣಿದು ಕುಪ್ಪಳಿಸುತ್ತದೆ. ಕುಣಿತವಿಲ್ಲದಿದ್ದಲ್ಲಿ ಅದು ನಿಷ್ಪ್ರಯೋಜಕ, ಒಳ್ಳೆಯದಲ್ಲ.

ತುಂಬು ಆನಂದದಿಂದ ನರ್ತಿಸುವ ಚಿತ್ರ ಮಾಡಬೇಕಾದರೆ ಅದಕ್ಕೆ ಒಂದು ಕುರಿತ ವಿಧಾನ ಅಗತ್ಯ. ೧. ನಿಮಗೆ ವಸ್ತುವಿನ ವಿಷಯದಲ್ಲಿ ತುಂಬ ಆದರ ಅಕ್ಕರೆಗಳಿರಬೇಕು; ೨. ಅದನ್ನು ನಿಮ್ಮ ಕಣ್ಣಿನಿಂದ ಪ್ರೀತಿಸಬೇಕು. ಕಣ್ಣಷ್ಟೇ ಅಲ್ಲ, ಪಂಚೇಂದ್ರಿಯಗಳಿಂದಲೂ. ಆದರೆ, ಮುಖ್ಯವಾಗಿ ಕಣ್ಣುಗಳಿಂದ; ೩. ನಿಮ್ಮ ಮನಸ್ಸು ಸದಾ ಎಡೆಬಿಡದೆ ಅದರ ಗಮನದಲ್ಲಿ ನೆಟ್ಟಿರಬೇಕು. ಇದು ಶ್ರಮಸಾಧ್ಯವಾದ ಕೆಲಸ. ಆದರೆ ನೆರವೇರಿಸಲೇಬೇಕು. ನಿಮ್ಮ ಕಲ್ಪನಾ ಶಕ್ತಿಯ ಬೆಳಕು ಬೆಳಗಿ ಅದರ ಮೇಲೆ ಚೆಲ್ಲುವುದು ಆಗ ಮಾತ್ರ. ಹೀಗೆಂದು ಹೇಳಿದ್ದು ಪ್ಲೇಟೋ; ೪. ಹೀಗೆ ನಿಮ್ಮ ಭಾವನೆಗಳು ಮತ್ತು ಭಾವವನ್ನು, ವಸ್ತುವಿನ ವಿಷಯ ಅನುಭವಿಸಿ – ತಿಳಿಯಾಗಿ, ಭಾವನಾತ್ಮಕವಾಗಿ, ಗಾಢವಾಗಿ, ನಾಟಕಪೂರ್ಣವಾಗಿ ಎಲ್ಲಕ್ಕಿಂತಲೂ ಮುಖ್ಯವಾಗಿ ಸರಳವಾಗಿ, ನಿರಾಡಂಬರವಾಗಿ- ವ್ಯಕ್ತಪಡಿಸುವುದನ್ನು ಕಲಿಯುತ್ತೀರಿ.

ಆಂಗ್ಲಕವಿ ವರ್ಡ್ಸ್‌ವರ್ತ್ ಹೇಳಿದ್ದನ್ನು ನೆನಪಿಸಿಕೊಳ್ಳಿ: Beauty is emotion recollected in tranquility. ಸೌಂದರ್ಯವು, ಉಪರತಿಯ ಸಮಯದಲ್ಲಿ ಮನಸ್ಸಮಾಧಾನವಿದ್ದಾಗ ನೆನೆದುಕೊಂಡ ಭಾವಾವೇಶ. ಕುಣಿದು ಕುಪ್ಪಳಿಸುವುದಕ್ಕೆ ಇದು ವಿರೋಧಿಯಲ್ಲ. ಉಲ್ಲನೋವ (ಸೋವಿಯೆತ್ ಬ್ಯಾಲೆ ನರ್ತಕಿ) ನೋಡಿ. ಇದಕ್ಕೆಲ್ಲಾ ಬಹಳ ಶ್ರಮ ಅಗತ್ಯ. ಯಾವುದೂ ಆಕಾಶದಿಂದ ನಮ್ಮ ಮಡಿಲಿಗೆ ಬೀಳುವುದಿಲ್ಲ. ಇದಕ್ಕೆ ಸುಲಭದ ಅಡ್ಡದಾರಿ ಇಲ್ಲವೇ ಇಲ್ಲ. ಸತ್ಯಜಿತ್ ರಾಯ್ ಅವರನ್ನು ಕೇಳಿ.

ನೆನ್ನೆಯ ದಿವಸಗಳ ವಿಷಯ ವೃಥಾ ಯೋಚಿಸಬೇಡಿ. ನಿಮ್ಮ ಒಂದೇ ಒಳ್ಳೆಯ ಚಿತ್ರ, ನೀವು ನಾಳೆ ಮಾಡಲಿರುವುದು.

ಇದೆಲ್ಲಾ, ಹೊಸತು, ನೆಮ್ಮದಿಯ ನಾಳೆ ನಮ್ಮದು, ಎಂಬುದಕ್ಕೆ ಎಷ್ಟು ಸಮಂಜಸ, ನೋಡಿ !

ಎಂ. ವಿ. ಕೃಷ್ಣಸ್ವಾಮಿ
'ಕುಸುಮ ಭವನ್', ನಂ. ೨೨೪, ೪ನೇ ಮೇನ್ ರೋಡ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫.

# ಆರ್ಯರ ಪ್ರಶ್ನೆ ಭಾಷಾಶಾಸ್ತ್ರದ ಉತ್ತರ

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

*ಆರ್ಯರು ಯಾರು, ಅನಾರ್ಯರು ಯಾರು ಎಂಬುದು ಇತಿಹಾಸ ಸಂಶೋಧಕರೆಂದು ಕರೆದುಕೊಳ್ಳುವ ಡಾ॥ ನವರತ್ನ ರಾಜಾರಾಂ ಅಂಥವರಿಗೆ ಮಾನವಶಾಸ್ತ್ರದ ಪ್ರಶ್ನೆಗಳಾಗದೆ, ನೀತಿಶಾಸ್ತ್ರದ ಪ್ರಶ್ನೆಗಳಾಗಿ ಬಿಡುವುದು ನಮ್ಮ ಇಂದಿನ 'ಹಿಂದುತ್ವವಾದಿ' ಚರಿತ್ರೆಯ ಅಧ್ಯಯನಗಳ ಒಂದು ದುರಂತ. ಭಾಷಾಶಾಸ್ತ್ರವನ್ನಂತೂ ಅವರು ಪುರಸ್ಕರಿಸುವುದೇ ಇಲ್ಲ. ಏಕೆಂದರೆ ಅದು ಅವರ ಬುಡಕ್ಕೆ ಪೆಟ್ಟು ಕೊಡುತ್ತದೆಂಬ ಅಳುಕು. ಇತಿಹಾಸವನ್ನು ಉಪಹಾಸದ ಮಟ್ಟಕ್ಕೆ ಇಳಿಸುವುದು ಅಷ್ಟೇನೂ ಶ್ರೇಯಸ್ಕರವಲ್ಲ. ರಾಜಾರಾಂ ಅವರ ಸಂಶೋಧನಾ ವಿಧಾನವನ್ನು ಒಂದು ಲೇಖನದಲ್ಲಿ 'ನಾಚಿಕೆಗೇಡು' ಎಂದು ಇತಿಹಾಸತಜ್ಞರಿಬ್ಬರು ಪುರಾವೆಸಹಿತ ಖಂಡಿಸಿದ್ದಾರೆ. ಅದು ಸರಿಯೋ, ಇಲ್ಲವೋ, ಅದು ಬೇರೆ ಪ್ರಶ್ನೆ. ಆದರೆ ರಾಜಾರಾಂ ಅವರ ಸಂಶೋಧನೆಯು ಹೇಗೆ ಭಾವುಕತೆಯ ಆಗರವಾಗುತ್ತದೆಂಬುದು ಪ್ರಸ್ತುತ ಲೇಖನದಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ.*

**ಭಾ**ರತ ದೇಶವು ಬಹು ಹಿಂದಿನಿಂದಲೂ ವಿವಿಧ ಬುಡಕಟ್ಟುಗಳ ಜನರ ಆವಾಸಸ್ಥಾನವಾಗಿದೆ. ಆರ್ಯರಿಗಿಂತ ಮೊದಲು ಇಲ್ಲಿದ್ದವರು, ಆ ನಂತರ ಇಲ್ಲಿಗೆ ಬಂದು ನೆಲೆಸಿದ ಆರ್ಯರು, ಗ್ರೀಕರು, ಸಿಥಿಯನ್ನರು, ಹೂಣರು, ತುರುಕರು ಮುಂತಾದ ಹಲವು ಜನಾಂಗಗಳು ಭಾರತದ ಸಮಾಜ ವ್ಯವಸ್ಥೆ, ಕಲೆ, ಶಿಲ್ಪ ಇದಕ್ಕೆಲ್ಲ ತಮ್ಮ ತಮ್ಮ ಕೊಡುಗೆ ನೀಡಿವೆ. ಇಂದು ಯಾವ ಜನರಾಗಲಿ, ಸಂಸ್ಕೃತಿಯಾಗಲಿ ಮೂಲ ರೂಪದಲ್ಲಿ ಕಾಣಸಿಗುವುದಿಲ್ಲ........ ವೈದಿಕ ಸಾಹಿತ್ಯದಲ್ಲಿ ದಕ್ಷಿಣ ಭಾರತದ ದ್ರಾವಿಡ ಹಾಗೂ ಸಂಸ್ಕೃತೇತರ ಶಬ್ದಗಳು ಕಂಡುಬರುವಂತೆ ಪುರಾತನ ತಮಿಳು ಸಾಹಿತ್ಯವಾದ ಸಂಗಂ ಕಾಲದ ಕೃತಿಗಳಲ್ಲಿ ಪಾಲಿ ಮತ್ತು ಸಂಸ್ಕೃತ ಶಬ್ದಗಳು ಕಂಡುಬರುತ್ತವೆ. ಇಂದು ಮುಂಡ ಸಂಸ್ಕೃತಿಯು ಅಷ್ಟೊಂದು ಸ್ಫುಟವಾಗಿ ಎದ್ದು ಕಂಡುಬರುವುದಿಲ್ಲವಾದರೂ ಹತ್ತಿ, ದೋಣಿಗಾರಿಕೆ, ಪಿಕಾಸಿ ಮುಂತಾದುವಕ್ಕೆ ಉತ್ತರಭಾರತದ ಭಾಷೆಗಳಲ್ಲಿ ಬಳಕೆಯಲ್ಲಿರುವ ಶಬ್ದಗಳು ಮುಂಡಾ ಭಾಷೆಗಳಿಂದ ಬಂದಂಥವು ಎಂದು ಭಾಷಾಶಾಸ್ತ್ರ ಪರಿಣತರು ಅಭಿಪ್ರಾಯಪಟ್ಟಿದ್ದಾರೆ (ಪ್ರಾ. ಭಾ. ಪು. ೭).

ಭಾರತದ ಚರಿತ್ರೆಯಲ್ಲಿ ಮೊದಲ ಶ್ರೇಷ್ಠ ನಾಗರಿಕತೆ ಮತ್ತು ಸಂಸ್ಕೃತಿ ಎಂದರೆ ಸಿಂಧೂತೀರದ ಹರಪ್ಪ-ಮೊಹೆಂಜೊದಾರೊ ಕಾಲದ್ದು. ಆರ್ಯರ ಆಗಮನದ ಅನಂತರ ಅದು ಕ್ಷೀಣಿಸಿ ನಶಿಸಿಹೋದದ್ದರಿಂದ ಅದಕ್ಕೆ ಅವರೇ ಕಾರಣರೆಂದು ಗುರುತಿಸಲ್ಪಡುವುದುಂಟು. ಇದಕ್ಕೆ ಸಿದ್ಧ ಪುರಾವೆಗಳು ಅಷ್ಟಾಗಿ ಇಲ್ಲ. ಶತಮಾನದಿಂದ ಶತಮಾನಕ್ಕೆ ಹೊರಗಿನಿಂದ ಬಂದ ಶಕ್ತಿಗಳು ಮೂಲ ನಿವಾಸಿಗಳೊಡನೆ ಸಂಘರ್ಷದಲ್ಲಿ ತೊಡಗಿ, ತಮ್ಮ ಮೇಲುಗೈ ಸಾಧಿಸಿದುದರಿಂದ ಆರ್ಯರನ್ನು ಹೊರಗಿನಿಂದ ಬಂದ ಆಕ್ರಮಣಕಾರರು ಎಂದು ತಿಳಿಯುವುದು ರೂಢಿಯಾಗಿದೆ. 'ಆರ್ಯರ ಆಕ್ರಮಣ' ಎಂಬುದು ಈಚಿನ ಕೆಲವು ವಿದ್ವಾಂಸರಿಗೆ ಕಿರಿಕಿರಿಯುಂಟುಮಾಡಿದಂತೆ ತೋರುತ್ತದೆ. ಇರಲಿ. ವಲಸಿಗರಾಗಿ ಬಂದ, ಇಂಡೋ ಆರ್ಯನ್ ಭಾಷೆಗಳನ್ನಾಡುತ್ತಿದ್ದ ಜನ ಭರತಖಂಡದ ವಾಯವ್ಯ ಭಾಗಗಳಲ್ಲಿ ನೆಲೆಸಿದ್ದಂತೂ ನಿಜ. ಹಾಗೆ ನೆಲೆಸುವಾಗ ಅವರು ನಡೆಸಿದ ಹೋರಾಟಗಳಲ್ಲಿ ಮೂಲನಿವಾಸಿಗಳು ಸೋತು ಕೆಲಮಟ್ಟಿಗೆ ಸ್ಥಳಾಂತರಗೊಂಡಿರಬಹುದು. ಆದರೂ ಮೂಲನಿವಾಸಿಗಳನ್ನು, ಅವರ ಭಾಷೆ, ಸಂಸ್ಕೃತಿ ಮೊದಲಾದವುಗಳನ್ನು ಆರ್ಯರು ಸಂಪೂರ್ಣವಾಗಿ ನಾಶಮಾಡಿದಂತೆ ತೋರುವುದಿಲ್ಲ. ಏಕೆಂದರೆ, ಭೂ ಪ್ರದೇಶವು ಫಲವತ್ತಾಗಿದ್ದು, ನಿಸರ್ಗ ಸಂಪತ್ತು ಹೇರಳವಾಗಿದ್ದು ಜನಸಾಂದ್ರತೆ ಮಾತ್ರ ಅತ್ಯಂತ ವಿರಳವಾಗಿರುವಂಥ ಸಂದರ್ಭಗಳಲ್ಲಿ (ವಾಸ್ತವ ಹದಿನೈದು ಲಕ್ಷ ಚದುರ ಕಿ. ಮೀ.ಗಳಷ್ಟು ವಿಸ್ತಾರವಾದ ಪ್ರದೇಶದಲ್ಲಿ ಹರಡಿದ್ದ ಸರಸ್ವತೀ ಸಿಂಧೂ ನಾಗರೀಕತೆಯಲ್ಲಿ ಕನಿಷ್ಠ ಮೂವತ್ತು ಲಕ್ಷ ಜನ ಜೀವನ ಸಾಗಿಸುತ್ತಿದ್ದರು. ಅಂದರೆ, ಒಂದು ಚ. ಕಿ. ಮೀ. ನಷ್ಟು ಪ್ರದೇಶದಲ್ಲಿ ಇಬ್ಬರು !- ಸ. ಸಿಂ. ಲಿ. ಪು. ೭೯) ಒಂದು ಜನಸಮುದಾಯವನ್ನು ನಾಶಮಾಡಿಯೇ ಮತ್ತೊಂದು ಜನಸಮುದಾಯವು ಅಲ್ಲಿ ನೆಲೆಸುವ ಅವಶ್ಯಕತೆ ಇರುವುದಿಲ್ಲ.

ಎರಡು ಅಥವಾ ಹಲವು ಜನಸಮುದಾಯಗಳು ಒಂದು ಪ್ರದೇಶದಲ್ಲಿ ಚದುರಿದಂತೆ ಹರಡಿಕೊಂಡಾಗ ಪರಸ್ಪರ ದೇಹ ಸಂಪರ್ಕ, ಸಾಂಸ್ಕೃತಿಕ ಮತ್ತು ಆಚಾರವಿಚಾರಗಳ ಸಂಪರ್ಕವುಂಟಾಗಿ ಶಾರೀರಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಮಿಶ್ರ ಜನಾಂಗಗಳು ಸೃಷ್ಟಿಯಾಗುತ್ತವೆ. ''ಇಂದು ಯಾವ ಜನಾಂಗವಾಗಲಿ, ಸಂಸ್ಕೃತಿಯಾಗಲಿ ಮೂಲರೂಪದಲ್ಲಿ ಕಾಣಸಿಗುವುದಿಲ್ಲ'' ಎಂಬ ಮಾತಿನ ತಾತ್ಪರ್ಯ ಇದೇ.

ಈ ಭೂಮಿಯ ಮೇಲೆ ಕೆಲವು ಪ್ರಮುಖ ನದಿಗಳ ಬಯಲಿನಲ್ಲಿ ವಿಕಾಸಗೊಂಡ ನಾಗರಿಕತೆ ಕ್ರಮೇಣ ವಿಶಿಷ್ಟ ಸಂಸ್ಕೃತಿಯು ನೆಲೆಸಲು ಕಾರಣವಾಗಿದೆ. ಸಿಂಧೂ ನದೀ ತೀರದ ಹರಪ್ಪಾ ಮೊಹೆಂಜೊದಾರೊ ನಾಗರಿಕತೆಯ ಬಗೆಗೆ ಅಲ್ಲಿ ನಡೆದಿರುವ ಉತ್ಖನನಗಳಲ್ಲಿ ದೊರೆತ ಪುರಾತತ್ವ ಅವಶೇಷಗಳ ಮೂಲಕ ಪರಿಚಯವಾಗಿದೆಯೇ ಹೊರತು ಬರವಣಿಗೆಯ ದಾಖಲೆಗಳಿಂದ ಅಲ್ಲ. ಖಚಿತವೆನ್ನುವಂತಹ ವಿಷಯಗಳು ಇನ್ನೂ ಪ್ರಕಟಗೊಳ್ಳಬೇಕಾಗಿದೆ.

ಭಾರತೀಯ ಇತಿಹಾಸಕ್ಕೆ ಹೊಸ ತಿರುವು ಕೊಟ್ಟ ಮತ್ತು ಅವರೆಗಿನ ತಿಳಿವಳಿಕೆಯನ್ನು ಅಳಿಸಿಹಾಕಿದ ಹರಪ್ಪ ಮೊಹೆಂಜೊದಾರೊ ಶೋಧನವನ್ನು ಕುರಿತಂತೆಯೆ ಹಲವಾರು ಲೇಖನಗಳು ಮಾತ್ರವಲ್ಲದೆ ವಿಶಿಷ್ಟವಾದ ಕೃತಿಗಳು ಕಾಲಕಾಲಕ್ಕೆ ಪ್ರಕಟವಾಗಿವೆ. ಇವುಗಳಲ್ಲಿ ಸರ್ ಜಾನ್ ಮಾರ್ಷಲ್ಲರ ''ಮೊಹೆಂಜೊದಾರೊ ಅಂಡ್ ದಿ ಇಂಡಸ್ ಸಿವಿಲಿಸೇಷನ್'' (೧೯೩೧), ಇ. ಮೆಕಾಯ್ ಮತ್ತು ಇತರರು ಬರೆದ ''ಫರ್ದರ್ ಎಕ್ಸ್‌ಕವೇಷನ್ಸ್ ಅಟ್ ಮೊಹೆಂಜೊದಾರೊ'' (೧೯೪೮), ಎಂ. ಎಸ್. ವತ್ಸ ಮತ್ತಿತರರ ''ಎಕ್ಸ್‌ಕವೇಷನ್ಸ್ ಅಟ್ ಹರಪ್ಪ'' (೧೯೪೦), ಸರ್ ಮಾರ್ಟಿಮರ್ ವ್ಹೀಲರ್‌ರ 'ಹರಪ್ಪ' (೧೯೪೬) ಕೃತಿಗಳು ಉಲ್ಲೇಖನೀಯವೆನಿಸುತ್ತವೆ. (ಇ. ಅ.)

ಬ್ರಿಟಿಷರ ಕಾಲದಲ್ಲಿ ಭಾರತದ ಚರಿತ್ರೆಗೆ ಸಂಬಂಧಿಸಿದಂತೆ ಆ ವರೆಗೆ ಮುಚ್ಚಿಹೋಗಿದ್ದ ವಿಷಯಗಳನ್ನು - ದೇಶದ ಸಂಸ್ಕೃತಿ, ನಾಗರಿಕತೆ, ಮತಧಾರ್ಮಿಕ ನಂಬಿಕೆಗಳು, ಆಚರಣೆಗಳಿಗೆ ಸಂಬಂಧಿಸಿದವು - ಬೆಳಕಿಗೆ ತರಲಾಯಿತು. ಅವರು (ಬ್ರಿಟಿಷರು) ಯಾವ ಉದ್ದೇಶದಿಂದ ಈ ವಿಷಯಗಳನ್ನು ಅಧ್ಯಯನ ಮಾಡಿದರು ಎಂಬ ಬಗೆಗೆ

# 'ಪ್ರಿಸಮ್' ಹೆಮ್ಮೆಯ ಪ್ರಕಟಣೆಗಳು



ಲೇ : ಶಾ. ಶಿ.
ಬೆಲೆ : ರೂ. 65/-




ಸಂ : ಚಿ. ಶ್ರೀನಿವಾಸರಾಜು
ಬೆಲೆ : ರೂ. 100/-




ಬಾಗಲೋಡಿ ದೇವರಾಯ
ಬೆಲೆ : ರೂ. 130/-



ಸಂ : ಡಾ॥ ಗಿರಡ್ಡಿ ಗೋವಿಂದರಾಜ
ಬೆಲೆ: ರೂ. 200/-



ಸಂ : ಎಸ್. ದಿವಾಕರ್
ಬೆಲೆ: ರೂ. 400/-



ಸಂ : ಡಾ॥ ಜಿ. ಎಸ್. ಆಮೂರ
ಬೆಲೆ: ರೂ. 150/-



ಲೇ : ಜಿ. ಎಸ್. ಸದಾಶಿವ
ಬೆಲೆ : ರೂ. 125/-

**ಪ್ರಿಸಮ್ ಬುಕ್ಸ್ ಪ್ರೈ. ಲಿ.**
ನಂ. 1865, 32ನೇ ಕ್ರಾಸ್
ಬನಶಂಕರಿ ಎರಡನೇ ಘಟ್ಟ
ಬೆಂಗಳೂರು - 560 070
ಫೋನ್ : 6713979




ಸಂ : ಡಿ॥ ಎಂ. ಎಸ್. ಕೆ. ಪ್ರಭು
ಬೆಲೆ: ರೂ. 135/-

> ಸರಕಾರ ಯಾವತ್ತೂ ಆಯಾದೇಶದ ಸಾರ್ವಜನಿಕ ಅಭಿಪ್ರಾಯದ ಪರಿವೀಕ್ಷಣೆಯಲ್ಲಿರಬೇಕೆಂದು ನಾವು ಅಪೇಕ್ಷಿಸುತ್ತೇವೆ.
>
> *- ವಿ. ಐ. ಲೆನಿನ್*
>
> ಮಾನವ ಪ್ರಕೃತಿಯ ಸೃಷ್ಟಿ. ಅವನನ್ನು ಬೆಳೆಸಿ ರೂಪಿಸುವುದು ಸಮಾಜ.
>
> *- ವಿ. ಬೆಲಿನ್‌ಸ್ಕಿ*
>
> ಮಾತೃಭಾಷೆಯ ಬಗ್ಗೆ ನಿಜವಾದ ಪ್ರೇಮವಿಲ್ಲದ ದೇಶಪ್ರೇಮ ಊಹಿಸಿ ಕೊಳ್ಳಲಾಗದು. **- ಕೊನ್‌ಸ್ತಾಂತಿನ್ ಪಾವ್‌ಲೋಸ್ಕಿ**
>
> ನನ್ನಲ್ಲಿರುವ ಎಲ್ಲ ಒಳಿತಿಗೂ ಪುಸ್ತಕಗಳೇ ಕಾರಣ. **- ಮ್ಯಾಕ್ಸಿಮ್ ಗೋರ್ಕಿ**
>
> ಭೂಮಂಡಲಕ್ಕೆ ಮಿತಿಗಳಿವೆ. ಜ್ಞಾನಕ್ಕೆ ಮಿತಿಯೇ ಇಲ್ಲ.
>
> **- ಧ್ಮಿತ್ರಿ ಮೆಂಡಲಿಯೆವ್**

ಭಿನ್ನಾಭಿಪ್ರಾಯಗಳಿರುವುದು ಸಾಧ್ಯ. ತಾವು ಯಾವ ದೇಶವನ್ನು ಆಳಲು ಬಂದಿದ್ದರೋ ಆ ದೇಶದ ನಿಜವಾದ ಹಿನ್ನೆಲೆ, ಅಲ್ಲಿನ ಜನರ ಸ್ವಭಾವಗಳನ್ನು, ಆಚಾರ ವಿಚಾರಗಳನ್ನು ಚೆನ್ನಾಗಿ ತಿಳಿದುಕೊಂಡರೆ ತಮಗೆ ಆಡಳಿತವು ಸುಲಭವಾಗುತ್ತದೆ ಎಂಬ ಉದ್ದೇಶವಿರಬಹುದು. ಹಾಗೆಯೆ, ವಸಾಹತುಶಾಹಿಯು ತನ್ನ ನೆಲೆಯನ್ನು ಭದ್ರಗೊಳಿಸುವ ಸಲುವಾಗಿ ಪ್ರಾಚೀನ ಭಾರತವು ರಾಜಕೀಯವಾಗಿ ಮಾತ್ರವಲ್ಲದೆ ಸಂಸ್ಕೃತಿ, ನಾಗರಿಕತೆಗಳಲ್ಲಿಯೂ ಬಹಳ ಹಿಂದುಳಿದಿತ್ತು; ಇಲ್ಲಿನ ಜನರು ಸದಾ ಅಂತಃಕಲಹಗಳಲ್ಲಿ ತೊಡಗಿದ್ದು ಹೊರಗಿನ ಆಕ್ರಮಣಗಳಿಗೆ ಅವಕಾಶ ಮಾಡಿಕೊಡುತ್ತಿದ್ದರು - ಎಂದು ತೋರಿಸುವ ಉದ್ದೇಶವೂ ಕೆಲವರಲ್ಲಿ ಇದ್ದಿರಬಹುದು.

ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ನಮ್ಮ ಪ್ರಾಚೀನ ಇತಿಹಾಸವನ್ನು ಸ್ವಲ್ಪ ವೈಭವೀಕರಿಸಿ ನೋಡಿದ್ದುಂಟು. ಇದರ ಕಾರಣ ರಾಷ್ಟ್ರೀಯ ಅಹಮಿಕೆಯನ್ನು, ಅಭಿಮಾನವನ್ನು, ಜಾಗೃತಗೊಳಿಸಿ ಜನರನ್ನು ಹೋರಾಟಕ್ಕೆ ಹುರಿದುಂಬಿಸುವುದಾಗಿತ್ತು. ಅಗ್ರಸ್ಥಾನದಲ್ಲಿದ್ದ ಲೋಕಮಾನ್ಯ ತಿಲಕ್, ರಾನಡೆ, ಘೋಷಾಲ್, ಜಯಸ್ವಾಲ್ ಮುಂತಾದವರು ವಿದೇಶೀ ವಿದ್ವಾಂಸರ ವಿಕೃತ ಗ್ರಹಿಕೆಗಳನ್ನು ಖಂಡಿಸುವ ಮತ್ತು ಪ್ರಾಚೀನ ಭಾರತದ ಸಾಂಸ್ಕೃತಿಕ, ರಾಜಕೀಯ, ಆಡಳಿತ ಹಿರಿಮೆಗಳನ್ನು ಎತ್ತಿತೋರಿಸುವ ಸಂಶೋಧನೆಗಳನ್ನು ನಡೆಸಿದರು. ಇದೇ ಸಂದರ್ಭದಲ್ಲಿ ಭಾರತದ ವಿವಿಧ ಪ್ರದೇಶಗಳ ರಾಜವಂಶಗಳ ಸಾಹಸ ಕಾರ್ಯಗಳನ್ನು ವಿಜೃಂಭಿಸುವ ಸಾಹಿತ್ಯ ಕೃತಿಗಳು ರಚನೆಯಾದವು. ಕರ್ನಾಟಕದ ಗತ ವೈಭವ, ಚಾಲುಕ್ಯ ಸಾಮ್ರಾಟ ಪುಲಿಕೇಶಿ, ಮರಾಠರ ಅಭ್ಯುದಯ, ಛತ್ರಪತಿ ಶಿವಾಜಿ ಮೊದಲಾದ ಕಾದಂಬರಿಗಳನ್ನು ಇಲ್ಲಿ ನೆನೆಯಬಹುದು.

ಬ್ರಿಟಿಷರ ಕಾಲದಲ್ಲಿ ಭಾರತದ ಚರಿತ್ರೆಗೆ ಸಂಬಂಧಿಸಿದ ವಿಷಯಗಳನ್ನು ಅವರ ಅಗತ್ಯಕ್ಕೆ ತಕ್ಕಂತೆ ತಿರುಚಲಾಯಿತು ಎಂಬ ಆಪಾದನೆ ಆಗಾಗ ಕೇಳಿಬರುತ್ತದೆ. ಆದರೆ ಎಲ್ಲ ವಿಷಯಗಳಿಗೂ, ಎಲ್ಲ ಸಂದರ್ಭಗಳಿಗೂ ಈ ಆಪಾದನೆ ಸಲ್ಲದು. ಇತಿಹಾಸ ರಚನೆಗೆ ಅಗತ್ಯವಾದ ಮೂಲ ಆಕರಗಳ ಸಂಗ್ರಹ ಮತ್ತು ರಕ್ಷಣೆಯ ಕೆಲಸವನ್ನು ಅವರು ಉಚಿತವಾಗಿಯೆ ಮಾಡಿದ್ದಾರೆ. ಅವುಗಳನ್ನು ವಿಶ್ಲೇಷಿಸಿ ಪ್ರಾಮಾಣಿಕ ಇತಿಹಾಸವನ್ನು ಬರೆಯುವುದು ಇಂದಿನ ಸಂಶೋಧಕರ, ಇತಿಹಾಸಕಾರರ ಕರ್ತವ್ಯವಾಗಿದೆ.

ಪೂರ್ವ ಸೂರಿಗಳ ಸತತ ಪರಿಶ್ರಮದ ಫಲವಾಗಿ ಇಷ್ಟೆಲ್ಲಾ ಇತಿಹಾಸ ಸಾಮಗ್ರಿ ಲಭ್ಯವಿದ್ದರೂ ಅವುಗಳನ್ನು ಅಲಕ್ಷಿಸಿ ಇಲ್ಲವೆ ಅವುಗಳ ಮೇಲೆ ಮಿಥ್ಯಾರೋಪಗಳನ್ನು ಹೊರಿಸಿ ತಮ್ಮ ಮೂಗಿನ ನೇರಕ್ಕೇ ಸಂಶೋಧನೆಯನ್ನು ಎತ್ತಿಹಿಡಿಯುವುದು ಮತ್ತು ಇತಿಹಾಸದ ಮೂಲಕ ರಾಜಕೀಯ ನಡೆಸಹೊರಡುವುದು ಈಚಿನ ಕೆಲವು ಗ್ರಂಥಗಳಲ್ಲಿ ಕಂಡುಬರುತ್ತದೆ. ಡಾ॥ ನವರತ್ನ ಎಸ್. ರಾಜಾರಾಂ ಅವರು ಬರೆದು, ಬೇಳೂರು ಸುದರ್ಶನ ಅವರು ಕನ್ನಡದಲ್ಲಿ ಸಂಗ್ರಹಿಸಿರುವ ''ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ'' ಎಂಬ ಪುಟ್ಟ ಪುಸ್ತಕವನ್ನು ಕೈಗೆತ್ತಿಕೊಂಡು ಪುಟಗಳನ್ನು ತಿರುವಿದಂತೆ ಓದುಗರನ್ನು ಮೊದಲಿಗೇ ತಳಮಳಗೊಳಿಸುವ ಅಂಶಗಳೆಂದರೆ ಲೇಖಕರ ಭಾವಾವೇಶ, ಆಕ್ರೋಶ ಮತ್ತು ಪ್ರಚೋದಕ ಹಾಗೂ ಪ್ರಚಾರಕ ಶೈಲಿ. ಓದುಗನನ್ನು ಕೆಣಕಲೆಂದೇ ಕೆಲವು ವಾಕ್ಯಗಳನ್ನು ಹೆಣೆದಿರುವಂತಿದೆ. ಉದಾ: ''ಸತ್ಯದಿಂದ ತಪ್ಪಿಸಿಕೊಳ್ಳುತ್ತೀರಾ? ಎಷ್ಟು ದಿನ?'' ''ಆಕ್ರಮಣವಾದಕ್ಕೆ ಆಘಾತ ನೀಡಿದ ಸರಸ್ವತೀ'', ''ನಿಡುದಲೆ ಮೋಟುದಲೆಯ ಢೋಂಗಿ ವಿಜ್ಞಾನ'', ''ಬಿದ್ದ ಆಕ್ರಮಣವಾದ, ಮೂಡಿದ ಹೊಸ ವಿಶ್ವ ಇತಿಹಾಸ'', ಇತ್ಯಾದಿಗಳನ್ನು ಗಮನಿಸಬಹುದು.

ಆರ್ಯರು ಹೊರಗಿನಿಂದ ಬಂದವರಲ್ಲವೆಂದು ಸಾಧಿಸುವುದು ಡಾ॥ ರಾಜಾರಾಂ ಅವರ ಪ್ರಮುಖ ಉದ್ದೇಶವಾಗಿದೆ. ಆದರೆ ಅದಕ್ಕಾಗಿ ಅವರು ಇಲ್ಲಿ ಒದಗಿಸುವ ಆಧಾರಗಳಾವುವೂ ಪ್ರಬಲವಾದುವಲ್ಲ. ತಮ್ಮ ತಮ್ಮ ಕ್ಷೇತ್ರಗಳಲ್ಲಿ ಎಷ್ಟೇ ಮಹತ್ವದ ವ್ಯಕ್ತಿಗಳಾದರೂ ಸ್ವಾಮಿ ವಿವೇಕಾನಂದ, ಶ್ರೀ ಅರವಿಂದ, ಬಾಲ ಗಂಗಾಧರ ತಿಲಕ್, ಯಾಕೋಬಿ ಮೊದಲಾದವರು ಮೂಲತಃ ಇತಿಹಾಸ ಸಂಶೋಧಕರಲ್ಲ. ಆದ್ದರಿಂದ ಅವರ ಅಭಿಪ್ರಾಯಗಳನ್ನು ಅವಲಂಬಿಸಿ ಪ್ರಾಚೀನ ಇತಿಹಾಸ ವಿಮರ್ಶಿಸ ಹೊರಡುವುದು ಹಾಸ್ಯಾಸ್ಪದವಾಗುತ್ತದೆ.

ಪ್ರಾಚೀನ ಭಾರತದ ಮೂಲ ಜನಾಂಗಗಳು, ಅವರ ಸಂಸ್ಕೃತಿ ಮೊದಲಾದ ವಿಷಯಗಳ ಸಂಶೋಧನೆಗೆ ಭಾಷಾವಿಜ್ಞಾನವು ಒದಗಿಸಿರುವ ವಿಪುಲ ಸಾಮಗ್ರಿಯನ್ನು ಡಾ॥ ರಾಜಾರಾಂ ಕಣ್ಣೆತ್ತಿ ನೋಡುವುದಿಲ್ಲ. ಅಥವಾ ಅವುಗಳ ಬಗೆಗೆ ಉಡಾಫೆಯ ಮಾತಾಡುತ್ತಾರೆ :

''ಆರ್ಯರನ್ನು ಸಂಸ್ಕೃತ ಭಾಷೆಗೂ ದ್ರಾವಿಡರನ್ನು ದಕ್ಷಿಣ ಭಾರತದ ಭಾಷೆಗಳಿಗೂ ಸಮೀಕರಿಸಿದ ಭಾಷಾಶಾಸ್ತ್ರಜ್ಞರು ೧೯೨೦ರ ದಶಕದಲ್ಲಿ ಹರಪ್ಪ-ಮೊಹೆಂಜೊದಾರೊ ನಾಗರಿಕತೆಗಳ ಅಸ್ತಿತ್ವ ಬೆಳಕಿಗೆ ಬಂದಾಗ ತಬ್ಬಿಬ್ಬಾದರು. ಆದರೂ ಸಾವರಿಸಿಕೊಂಡು 'ನೋಡಿ ಇದು ದ್ರಾವಿಡರ ನಗರ ಪ್ರದೇಶ, ಇದನ್ನು ಧ್ವಂಸಮಾಡಿದವರು ಆರ್ಯರು. ಇಂದ್ರನೇ ಇದರ ಅಪರಾಧಿ' ಎಂದು ಸಮಜಾಯಿಷಿ ನೀಡತೊಡಗಿದರು.....

''ಇಷ್ಟೊಂದು ಮುಂದುವರೆದ ದ್ರಾವಿಡರು ಎರಡು ಸಾವಿರ ವರ್ಷಗಳ ಕಾಲ

ನಾಪತ್ತೆಯಾಗಿ ಆಮೇಲೆ ಹಠಾತ್ತಾಗಿ ಪ್ರತ್ಯಕ್ಷವಾದದ್ದಾದರೂ ಹೇಗೆ? ಅಥವಾ ಆರ್ಯರು ಬರೆದ ಸಾಹಿತ್ಯದಲ್ಲಿ ಹರಪ್ಪಾ-ಮೊಹೆಂಜೊದಾರೊ ನಾಗರಿಕತೆಯ ಅಂಶಗಳು ಪ್ರಕಟವಾದದ್ದಾದರೂ ಹೇಗೆ? ಆರ್ಯರು ನಾಗರಿಕತೆಯ ಪಾಠ ಕಲಿಸಿದ ಮೇಲೆ ದ್ರಾವಿಡರು ನಗರ ಕಟ್ಟಿದರೆ? ಇಂಥ ಗೋಜಲು ಗೋಜಲು ಪ್ರಶ್ನೆಗಳು ಹಲವು ಶ್ರದ್ಧಾವಂತ ಇತಿಹಾಸಕಾರರನ್ನ ಕಾಡಿದವು''. ಇದು ನವರತ್ನರ ಬರಹ ಶೈಲಿ.

ವಾಸ್ತವವಾಗಿ ಈ ಪ್ರಶ್ನೆಗಳಿಗೆ ಶ್ರದ್ಧಾವಂತ ಪ್ರಾಚೀನ ಇತಿಹಾಸಕಾರರು ಸಮಂಜಸವಾದ ಉತ್ತರಗಳನ್ನು ಕೊಟ್ಟಿದ್ದಾರೆ. ಡಾ॥ ರಾಜಾರಾಂ ಅಂಥವರು ಅವುಗಳನ್ನು ಗಮನಿಸಿಲ್ಲ ಅಥವಾ ಉದ್ದೇಶಪೂರ್ವಕವಾಗಿ ಈ ಪ್ರಶ್ನೆಗಳನ್ನು ಗೋಜಲು ಮಾಡಿದ್ದಾರೆ ಎಂದು ಮಾತ್ರ ಹೇಳಿದರೆ ಇಲ್ಲಿ ಸಾಕು. ಭಾಷಾಶಾಸ್ತ್ರದ ವಿಚಾರದಲ್ಲಿ ಈ ಲೇಖಕರಿಗೆ ಎಷ್ಟೊಂದು ಗೊಂದಲವಿದೆಯೆಂದು ತಿಳಿಯಲು ಈ ಒಂದು ವಾಕ್ಯವನ್ನು ಗಮನಿಸಬಹುದು: ''ತಥಾಕಥಿತ ದ್ರಾವಿಡ ಭಾಷಿಗನೇ (ಇವರು ಅಮೆರಿಕದಲ್ಲಿ ನೆಲೆಸಿರುವ ಕನ್ನಡಿಗರು) ಆಗಿರುವ ನಾನಂತೂ ಆರ್ಯ-ದ್ರಾವಿಡ ಭಾಷಾಭೇದವನ್ನು ಎಂದೂ ಒಪ್ಪಿರಲಿಲ್ಲ'' (ಸ. ಸಿಂ. ಲಿ. ಪು. ೮೯).

ಪ್ರಾಚೀನ ವಿದ್ವಾಂಸರು ಭಾರತದ ಭಾಷೆಗಳನ್ನು ತಮ್ಮದೇ ಆದ ರೀತಿಯಲ್ಲಿ ಪಂಚದ್ರಾವಿಡ, ಪಂಚಗೌಡೀಯ ಇತ್ಯಾದಿಯಾಗಿ ವಿಂಗಡಿಸುತ್ತಿದ್ದರು. ಅಲ್ಲದೆ, ದಕ್ಷಿಣ ಭಾರತದ ಪ್ರಮುಖ ಭಾಷೆಗಳಾದ ತಮಿಳು, ತೆಲುಗು, ಕನ್ನಡ, ಮಲೆಯಾಳಂಗಳು ಮತ್ತು ತುಳು, ಕೊಡಗು, ಬಡಗ, ಕೊರಗ, ಗದಬ ಮೊದಲಾದ ಹಲವು ಲಿಪಿರಹಿತ ಉಪಭಾಷೆಗಳು ಕೂಡ ಸಂಸ್ಕೃತದಿಂದಲೇ ಹುಟ್ಟಿ ಬಂದವೆಂದು ಭಾವಿಸಿದ್ದರು. ಆದರೆ, ಕಳೆದ ಶತಮಾನದ ಮಧ್ಯಭಾಗದಲ್ಲಿ ಸಂಸ್ಕೃತವನ್ನೂ ದಕ್ಷಿಣ ಭಾರತದ ಭಾಷೆಗಳನ್ನೂ ವೈಜ್ಞಾನಿಕ ದೃಷ್ಟಿಯಿಂದ, ತೌಲನಿಕವಾಗಿ ಅಭ್ಯಾಸ ಮಾಡಿದಾಗ ತಮಿಳು, ಕನ್ನಡ ಮೊದಲಾದವು ಸಂಸ್ಕೃತಜನ್ಯ ಭಾಷೆಗಳಲ್ಲವೆಂಬುದು ಸ್ಪಷ್ಟವಾಯಿತು. ೧೮೫೦ ರ ಸುಮಾರಿನಲ್ಲಿ ತಿನ್ನವೆಲ್ಲಿಯ ರೆವೆರೆಂಡ್ ಬಿಷಪ್ ರಾಬರ್ಟ್ ಕಾಲ್ಡ್‌ವೆಲ್ (೧೮೧೪-೧೮೯೧) ಎಂಬ ವಿದ್ವಾಂಸನು ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ (A Comparative Grammar of Dravidian or South Indian Family of Languages) ಎಂಬ ವಿಸ್ತಾರವೂ, ಪ್ರೌಢವೂ ಆದ ಗ್ರಂಥದಲ್ಲಿ ದ್ರಾವಿಡ ಭಾಷೆಗಳು ಸಂಸ್ಕೃತಕ್ಕಾಗಲಿ ಇಂಡೋ-ಆರ್ಯನ್ ಪರಿವಾರಕ್ಕಾಗಲಿ ಸೇರಿದವುಗಳಲ್ಲವೆಂದು ಸಕಾರಣವಾಗಿ ಪ್ರತಿಪಾದಿಸಿದನು. ಅಂದಿನಿಂದ 'ದ್ರಾವಿಡ ಭಾಷಾ ಕುಟುಂಬ' ಎಂಬ ಪರಿಕಲ್ಪನೆಯು ವಿದ್ವಾಂಸರಲ್ಲಿ ಪ್ರಚಲಿತವಿದ್ದು, ಜಗತ್ತಿನ ಜನಾಂಗಗಳ ಮೂಲ ಆವಾಸಸ್ಥಾನ, ಅವರ ಸಂಸ್ಕೃತಿಗಳು ಮತ್ತು ಸಾಮೂಹಿಕ ವಲಸೆ ಇತ್ಯಾದಿಗಳ ಅಧ್ಯಯನಕ್ಕೆ ಅಪಾರ ಕೊಡುಗೆ ಸಲ್ಲಿಸುತ್ತಿದೆ. ವಾಸ್ತವವಾಗಿ ಇದು (ದ್ರಾವಿಡ ಭಾಷಾ ಕುಟುಂಬ) ಏಷ್ಯಾ ಖಂಡದ ಬಹುದೊಡ್ಡ ಕುಟುಂಬಗಳಲ್ಲಿ ಮೂರನೆಯದು.

ಮೊದಲೆರಡೆಂದರೆ ಇಂಡೋ-ಇರಾನಿಯನ್ ಅಥವಾ (ಇಂಡೋ-ಆರ್ಯನ್) ಮತ್ತು ಹ್ಯಾನಿಟೊ-ಸೆಮೆಟಿಕ್ (ಅಥವಾ ಆಫ್ರೊ-ಏಷ್ಯಾಟಿಕ್). ಕೆಲವು ದ್ರಾವಿಡ ಭಾಷೆಗಳು ಉತ್ತರ ಭಾರತದಲ್ಲಿ ಹಾಗೂ ಪೂರ್ವ ಬಲೂಚಿಸ್ತಾನದ ಬ್ರಾಹುಯಿ ಎಂಬಲ್ಲಿ ಈಗಲೂ ಇವೆ. ಭಾರತದಲ್ಲಿ ಅತಿವಿಸ್ತಾರವಾಗಿ ಹರಡಿದ್ದುದು ದ್ರಾವಿಡ ಭಾಷೆಗಳೆಂಬುದಕ್ಕೆ ಇದು ಪುರಾವೆ ಒದಗಿಸುತ್ತದೆ. ಇಂಡೋ-ಯೂರೋಪಿಯನ್ ಭಾಷಿಕರು ಪ್ರವೇಶಿಸುವುದಕ್ಕೆ ಮುಂಚೆ ಇದ್ದ ಸ್ಥಿತಿ ಇದು. ಈ ವಿಷಯವಾಗಿ ವಿನ್‌ಫ್ರೆಡ್ ಲೇಮನ್‌ನ ಸುದೀರ್ಘ ಚರ್ಚೆಗಳನ್ನು ಗಮನಿಸಬೇಕು.

ಇಷ್ಟೆಲ್ಲಾ ಸಂಶೋಧನ ಸಾಮಗ್ರಿ ಕಣ್ಣ ಮುಂದಿದ್ದರೂ ಡಾ॥ ರಾಜಾರಾಂ ಅವುಗಳ ಪ್ರಸ್ತಾಪ ಮಾಡುವುದಿಲ್ಲ. ಈ ಮನೋಭಾವಕ್ಕೆ ಕಾರಣ ಊಹಿಸುವುದು ಕೂಡ ಕಷ್ಟವಲ್ಲ. ಮುಖ್ಯವಾಗಿ ಆರ್ಯರು ಭಾರತಕ್ಕೆ ಹೊರಗಿನಿಂದ ಬಂದವರಲ್ಲ ಎಂದೂ, ಸಂಸ್ಕೃತ ಭಾಷೆಯು ಜಗತ್ತಿನ ಎಲ್ಲ ಭಾಷೆಗಳಿಗೂ ಮೂಲ ಎಂದೂ ವಾದ ಹೂಡುವುದು ಇವರ ಉದ್ದೇಶವಾಗಿದೆಯೆಂಬುದು ಸ್ಪಷ್ಟ. ಡಾ॥ ರಾಜಾರಾಂ

ಬರೆಯುತ್ತಾರೆ: ''ಭಾರತ ಶ್ರೀಲಂಕಾದಿಂದ ಹಿಡಿದು ಇಂಗ್ಲೆಂಡ್ ಐರ್ಲೆಂಡಿನವರೆಗಿನ ಜನರೆಲ್ಲ ಯಾಕೆ ಪರಸ್ಪರ ಖಚಿತ ಸಂಬಂಧವಿರುವ ಭಾಷೆಗಳನ್ನೇ ಬಳಸುತ್ತಿದ್ದಾರೆ? ನಮಗೆಲ್ಲ ಕಳೆದ ಎರಡು ಶತಮಾನಗಳಿಂದ ಗೊತ್ತಿರುವಂತೆ ಸಂಸ್ಕೃತದ 'ದೇವ'ವೇ ಲ್ಯಾಟಿನ್ 'ದಿಯೋ' ಗ್ರೀಸಿನ 'ಥಿಯೋ' ಮತ್ತು ಫ್ರೆಂಚ್ ಭಾಷೆಯ 'ದಿಯೂ'; ಸಂಸ್ಕೃತದ 'ಅಗ್ನಿ' ಲ್ಯಾಟಿನ್ನಿನ ಇಗ್ನಾಸ್ ಆಗಿ ಅನಂತರದಲ್ಲಿ 'ಇಗ್ನೈಟ್' ಮುಂತಾದ ಆಂಗ್ಲ ಪದಗಳಾಗಿ ರೂಪುಗೊಂಡಿವೆ'' (ಸ.ಸಿ.ಲಿ., ಪು. ೫೦). ವಾಸ್ತವ ಸಂಗತಿಯೆಂದರೆ ಈ ಜ್ಞಾತಿ ಶಬ್ದಗಳು 'ಇಂಡೋ-ಯೂರೋಪಿಯನ್' ಎಂಬ ಸರ್ವಸಾಮಾನ್ಯ ಮೂಲಭಾಷೆಯಿಂದ, ಆಯಾ ಪರಿಸರಕ್ಕೆ ಅನುಗುಣವಾದ ಧ್ವನಿ ಬದಲಾವಣೆ ಹೊಂದಿ ಹೊಸ ಶಬ್ದಗಳಾಗಿವೆಯೆಂದು ಹೇಳಬಹುದೇ ಹೊರತು ಒಂದು ಭಾಷೆಯ (ಸಂಸ್ಕೃತದ) ಇಂಥದೇ ಶಬ್ದದಿಂದ ಬೇರೊಂದು ಭಾಷೆಯ ಶಬ್ದ **ಹುಟ್ಟಿತೆಂದು** ಹೇಳುವಂತಿಲ್ಲ. ಹಾಗೆ ಹೇಳಹೊರಟರೆ ಪಾಲ್ಘಾಟಿನ ಶೇಷಪ್ಪಯ್ಯರ್ ಇಂಗ್ಲೆಂಡಿನ ಶೇಕ್ಸ್‌ಪಿಯರ್ ಆಗಿದ್ದಾನೆ ಎಂದು ಹೇಳಿದಂತಾಗುತ್ತದೆ ! ನವರತ್ನರಿಗೆ ಅದೂ ಖುಷಿ ತಂದೀತೇನೋ !

ಇನ್ನು ನಮ್ಮ ಉಪಖಂಡಕ್ಕೆ ಆರ್ಯರ ಆಗಮನದ ವಿಚಾರವಾಗಿ ಡಾ॥ ಎಂ. ಎ. ಮೆಹಂದಳೆ ಅವರ ಅಭಿಪ್ರಾಯ ಹೀಗಿದೆ: ''ವೇದಕಾಲೀನ ಜನರ ಕ್ರಮಬದ್ಧ ವಿಸ್ತರಣೆಯಿಂದಾಗಿ ಅವರು ಹೊಸ ಹೊಸ ಪ್ರದೇಶಗಳಿಗೆ ಹೋಗಿ ಹೊಸ ಹೊಸ ಪ್ರಾಣಿಗಳು ಮತ್ತು ಧಾನ್ಯಗಳ ತಿಳಿವಳಿಕೆ ಪಡೆದುಕೊಂಡರೆನ್ನುವುದನ್ನು ಗಮನಿಸಿದಾಗ ಅವರು ಭಾರತಕ್ಕೆ ಹೊರಗಿನಿಂದ ಬಂದರು ಎಂಬುದು ಸ್ಪಷ್ಟವಾಗುತ್ತದೆ. ವೇದಕಾಲದ ಭಾರತೀಯರು ಇಲ್ಲಿಯ ಮೂಲನಿವಾಸಿಗಳಾಗಿದ್ದಿದ್ದರೆ ಅವರು ಋಗ್ವೇದದ ಸೂಕ್ತಗಳಲ್ಲಿ ಭಾರತದ ಮಧ್ಯ, ಪೂರ್ವ ಮತ್ತು ದಕ್ಷಿಣ ಭಾಗಗಳಿಗೆ ವಿಶೇಷವಾದ ಯಾವ ಅಂಶಗಳನ್ನಾದರೂ ಪ್ರಸ್ತಾಪಿಸದೆ ಇರುತ್ತಿರಲಿಲ್ಲ'' (ಉದ್ಧಾರಣ : ಇ. ಅ., ಪು. ೭೪).

ಇತಿಹಾಸ ಪೂರ್ವ ಕಾಲದ ಸುಮಾರು ಆರೆಂಟು ಸಾವಿರ ವರ್ಷಗಳ ಹಿಂದಿನ ಪರಿಸ್ಥಿತಿಯನ್ನು ಸಂಶೋಧಿಸಲು ಹೊರಟ ಡಾ॥ ರಾಜಾರಾಂ ತಮ್ಮ ವಾದವನ್ನು ಅತ್ಯಾಧುನಿಕ ಪರಿಸ್ಥಿತಿಯ ಉದಾಹರಣೆಗಳಿಂದ ಸಮರ್ಥಿಸ ಹೊರಡುವುದು ವಿಚಿತ್ರವಾಗಿದೆ. ಇವರು ಬರೆಯುತ್ತಾರೆ: ''ಈ ಜನ (ಆರ್ಯರು) ಮುಖ್ಯವಾಗಿ ಜನಸಾಂದ್ರತೆಯ ಮುಖ್ಯ ಭೂಮಿಯಿಂದ ಜನಸಾಂದ್ರತೆಯಿರದ ಪ್ರದೇಶಗಳಲ್ಲಿ ಅದೃಷ್ಟ ಹುಡುಕಿಕೊಂಡು ಯಾತ್ರಾರ್ಥಿಗಳಂತೆ ಬಂದರೇ ವಿನಃ ಸ್ಪಾನಿಷ್ ಧಾಳಿಕೋರರಂತಲ್ಲ. ಈಗಲೂ ಹಿಂದೂಗಳು ಈ ಕೆಲಸವನ್ನೇ ಮಾಡುತ್ತಿರುವುದನ್ನು ನೋಡಬಹುದು. ತಮ್ಮ ಸಂಸ್ಕೃತಿಯನ್ನು ಯೂರೋಪ್ ಅಮೆರಿಕಾಗಳಿಗೆ ಒಯ್ದಿದ್ದಾರೆ, ದೇಗುಲಗಳನ್ನು ಕಟ್ಟಿದ್ದಾರೆ, ಹಳೆಯ ಪದ್ಧತಿಗಳನ್ನು - ಅವು ಶಿಥಿಲಾವಸ್ಥೆಯಲ್ಲಿದ್ದರೂ - ಕಾಪಾಡಿಕೊಂಡು ಬಂದಿದ್ದಾರೆ. ೧೯೯೫ರಲ್ಲಿ ಲಂಡನ್ನಿನಲ್ಲಿ ಕಟ್ಟಿದ ಸ್ವಾಮಿ ನಾರಾಯಣ ದೇಗುಲವಂತೂ ಯೂರೋಪಿನ ಅತ್ಯುತ್ತಮ ವಾಸ್ತುಶಿಲ್ಪಗಳಲ್ಲೊಂದು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ದೇಗುಲವು ಅನೇಕ ಪ್ರವಾಸಿಗರನ್ನೂ ಭಕ್ತಾದಿಗಳನ್ನೂ ಆಕರ್ಷಿಸುತ್ತಿದೆ. ಯೂರೋಪು ಮತ್ತು ಉತ್ತರ ಅಮೆರಿಕಗಳಲ್ಲಿ ನೂರಾರು ಹಿಂದೂ ದೇಗುಲಗಳನ್ನು ಕಟ್ಟಲಾಗಿದೆ'' (ಸ.ಸಿ.ಲಿ., ಪು. ೬೭).

ಈ ಬರವಣಿಗೆಯ ಧಾಟಿಯನ್ನು ನೋಡಿದರೆ ಲೇಖಕರು ಕೈಗೊಂಡಿರುವುದು ಪ್ರಾಚೀನ ಭಾರತದ ಇತಿಹಾಸ ಸಂಶೋಧನೆಯೊ ಅಥವಾ ಅಮೆರಿಕದಲ್ಲಿ ನೆಲೆಸಿರುವ ಹಿಂದೂಗಳನ್ನು ಓಲೈಸುವ ಹರಿಕಥೆಯೊ ಎಂಬ ಸಂಶಯ ಬಂದರೆ ಅದು ಓದುಗನ ತಪ್ಪಲ್ಲವಷ್ಟೆ.

ಕಡೆಯದಾಗಿ ಒಂದು ಮಾತು. ಈ ಪುಸ್ತಕದಲ್ಲಿ ಒಂದು ಕಡೆ ಆರ್ಯ- ಅನಾರ್ಯರನ್ನು ವಿಂಗಡಿಸುವ ಪ್ರಸ್ತಾಪವಿದೆ: ''ಆರ್ಯ ಪದವನ್ನು ಹುಟ್ಟುಹಾಕಿದವರ ಪ್ರಕಾರ ಆ ಪದವನ್ನು ನೀತಿಸಂಹಿತೆಯನ್ನು ಪಾಲಿಸುವವರಿಗಾಗಿ ಬಳಸಬೇಕು. ಜನರು ಅವರವರ ವರ್ತನೆಗಳಿಗೆ ಅನುಸಾರವಾಗಿ ಆರ್ಯರೊ ಅನಾರ್ಯರೊ ಆಗುತ್ತಿದ್ದರು. ಮನುಸ್ಮೃತಿಯಲ್ಲಿ ಈ ಬಗ್ಗೆ ಖಚಿತ ವಿವರಣೆಯಿದೆ - ಪವಿತ್ರ ಆಚರಣೆಗಳನ್ನು ಮಾಡದ, ಮುನಿಗಳ ಮಾತು ಕೇಳದ, ಆರ್ಯ ಕ್ಷತ್ರಿಯರಾಗಿದ್ದ ಈ ಜನರು ಪೌಂಡ್ರಕ, ಚೋಡ, ದ್ರಾವಿಡ, ಕಾಂಭೋಜ, ಯವನ........ಕಿರಾತ, ದಾರದ ಸೇವಕ ಸ್ತರಕ್ಕೆ ಇಳಿದಿದ್ದಾರೆ. ಅಂದರೆ, ಆರ್ಯರ ವ್ಯಾಪ್ತಿಯಿಂದ ಹೊರಗೆ ಬರುವುದಕ್ಕೆ ಜನಾಂಗವೆಂದೂ ಕಾರಣವಾಗಿರಲಿಲ್ಲ. ಹುಟ್ಟಾಗಲಿ ರಾಷ್ಟ್ರೀಯತೆಯಾಗಲಿ ಕಾರಣವಾಗಿರಲಿಲ್ಲ. ಅದಕ್ಕೆ ಕೆಲವು ಪವಿತ್ರ ಆಚರಣೆಗಳ ಪಾಲನೆಯಲ್ಲಿನ ವೈಫಲ್ಯವು ಕಾರಣವಾಗಿತ್ತು'' (ಸ. ಸಿ. ಲಿ., ಪು. ೨೨). ಅಂದರೆ, ನಾವೆಲ್ಲಾ 'ಅಪವಿತ್ರರು.'

ಈ ಬಗೆಯ ಪ್ರಚೋದನಾತ್ಮಕ ಮಾತುಗಳು ದೇಶದಲ್ಲಿ ಹಲವು ಅನರ್ಥಗಳನ್ನೂ, ಅನಾಹುತಗಳನ್ನೂ ಹುಟ್ಟುಹಾಕಬಲ್ಲವು. ಈ ಬಗೆಗೆ ಎಚ್ಚರಿಕೆಯಿಂದ ಇರುವುದು ಅಗತ್ಯ.



*ಸಿಂಧೂ ನಾಗರಿಕತೆಯ ಲಿಪಿಯ ಒಂದು ನಮೂನೆ*

**ಟಿಪ್ಪಣಿಗಳು**

ಪ್ರಾ. ಭಾ. – ಪ್ರಾಚೀನ ಭಾರತ - ಆರ್. ಎಸ್. ಶರ್ಮ, ಅನುವಾದ : ಎನ್. ಪಿ. **ಶಂಕರನಾರಾಯಣರಾವ್**

ಸ. ಸಿಂ. ಲಿ. – ಸರಸ್ವತೀ ನದಿಯಿಂದ ಸಿಂಧೂ ಲಿಪಿವರೆಗೆ -

ಮೂಲ : **ಡಾ॥ ನವರತ್ನ ಎಸ್. ರಾಜಾರಾಂ**

ಕನ್ನಡ ಸಂಗ್ರಹ : **ಬೇಳೂರು ಸುದರ್ಶನ**

ಇ. ಅ. – ಇತಿಹಾಸದ ಅಧ್ಯಯನ : ಅಂದು - ಇಂದು

**- ಡಾ॥ ಎಚ್. ಎಸ್. ಗೋಪಾಲರಾವ್**

(ಇದೇ ಲೇಖಕನ ಅಪ್ರಕಟಿತ ಪುಸ್ತಿಕೆ 'ಇತಿಹಾಸದ ರಾಜಕೀಯ'ದಿಂದ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಸಂಗತಿಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ).

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

**ದಾಹ**



''ನಿರ್ಜೀವಿಗಳನು
ಮಾತ್ರ ಹುಕ್ಕಿ ತಿನ್ನುತ್ತದೆ
ರಣಹದ್ದು,
ಮಾನವರಲ್ಲಿ ಕೆಲವರು
ಸಜೀವಿಗಳನ್ನೇ ಕಿತ್ತು
ತಿನ್ನುತ್ತಾರೆ; ಮೀರಿ
ಮಾನವೀಯತೆಯ ಸರಹದ್ದು''

ಎನ್. ಶ್ರೀನಿವಾಸ್, ದ್ವಿ. ದ. ಸ.
ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರ
ವಿ. ಸಿ. ಫಾರಂ, ಮಂಡ್ಯ - ೫೭೧೪೦೫














ಪುರೋಹಿತನಿಗೆ ಒಳ್ಳೆಯ ಯೋಗ !



# ಸಿದ್ಧಾಂತಗಳು ಮತ್ತು ಸಾಂಸ್ಕೃತಿಕ ಸಂಘಟನೆಗಳು

ಒಂದು ಸಾಂಸ್ಕೃತಿಕ ಸಂಘಟನೆಗೆ ಸಿದ್ಧಾಂತಗಳಿರಬೇಕೇ ಎನ್ನುವುದು ಒಂದು ಮಹತ್ವದ ಪ್ರಶ್ನೆ. 'ಹೌದು' ಅನ್ನುತ್ತೇನೆ ನಾನು. ನಿರ್ದಿಷ್ಟವಾಗಿ ಮಾರ್ಕ್ಸ್, ಲೋಹಿಯಾ, ಗಾಂಧಿ, ಅಂಬೇಡ್ಕರ್ - ಇವರ ಸಿದ್ಧಾಂತಗಳೇ ಇರಬೇಕೆಂದೇನೂ ಇಲ್ಲ. ಆದರೆ, ಇವುಗಳೆಲ್ಲದರ ಮಿಶ್ರಣವಾದ ಜೀವನಪರತೆ, ಸಮಾಜಮುಖೀ – ಜನಮುಖೀ ಧೋರಣೆಗಳಿಲ್ಲದ ಸಾಂಸ್ಕೃತಿಕ ಸಂಘಟನೆ ಸರ್ಕಸ್ಸಿನ ತರಹ, ಮ್ಯಾಜಿಕ್‌ನ ತರಹ - ಕೇವಲ ಮನರಂಜನೆ, ಮನಸ್ಸಿಗೆ ಕಚಗುಳಿ ಕೊಟ್ಟು, ಭ್ರಮೆಯಲ್ಲಿ ಪ್ರೇಕ್ಷಕರನ್ನು ತೇಲಿಬಿಟ್ಟು, ಅವರನ್ನು ಮತ್ತೂ ಹಾದಿಗೆಡಿಸಿ ಅವರ ಚಿಂತನಶೀಲತೆಗೆ ಮಾರಕವಾಗುವುದು. ನಿರ್ದಿಷ್ಟ ಉದ್ದೇಶ, ಸಿದ್ಧಾಂತಗಳನ್ನಿಟ್ಟುಕೊಂಡು ಅಸ್ತಿತ್ವಕ್ಕೆ ಬಂದಿರುವ ಹಲವು ಸಾಂಸ್ಕೃತಿಕ ಸಂಘಟನೆಗಳಿವೆ. ಉದಾಹರಣೆಗೆ, ೪೦ರ ದಶಕದಲ್ಲಿ ಅಸ್ತಿತ್ವಕ್ಕೆ ಬಂದ 'ಇಪ್ಪಾ' (Indian People's Theatre Association). ನಮಗಿದೊಂದು ಉತ್ತಮ ಉದಾಹರಣೆ.

೧೯೭೫ರಲ್ಲಿ ಕರ್ನಾಟಕದಲ್ಲಿ ಮೂಡಿಬಂದ 'ಸಮುದಾಯ ಸಾಂಸ್ಕೃತಿಕ ಸಂಘಟನೆ'ಯೂ ಒಂದು ಸಾಮಾಜಿಕ, ರಾಜಕೀಯ ಬದ್ಧತೆಯಿಂದ ಮೂಡಿಬಂದ ಸಂಘಟನೆ. ನಮ್ಮ ದೇಶದ ವಿವಿಧೆಡೆಗಳಲ್ಲಿ ಇಂತಹ ಕೆಲವಾದರೂ ಸಂಘಟನೆಗಳಿವೆ. ಇವುಗಳ ಮುಖ್ಯ ಉದ್ದೇಶ - ಪರ್ಯಾಯ ಸಂಸ್ಕೃತಿಯ ಹುಡುಕಾಟ. ನಾನು ಆ ಸಂಘಟನೆಗಳ ವಿಚಾರದಲ್ಲಿ ಆಳವಾಗಿ ಪ್ರವೇಶಿಸದೆ, ಸುಮಾರು ೧೦ ವರ್ಷಗಳ ಕಾಲ ನಾನು ಬಹಳ ಆಪ್ತವಾಗಿ ತೊಡಗಿಸಿಕೊಂಡ ಸಮುದಾಯ ಸಾಂಸ್ಕೃತಿಕ ತಂಡದ ಆರಂಭ, ಸಿದ್ಧಾಂತಗಳು, ಕಾರ್ಯಕ್ರಮ, ನಡೆಸಿದ ಜಾಥಾಗಳು, ನಂತರದ ವಿಘಟನೆ - ಮೊದಲ ಕಾವು ನಿಧಾನವಾಗಿ ಆರುತ್ತಾ ಹೋಗಿ, ಈಗ ವ್ಯಾಪಕ ಕಾರ್ಯಕ್ರಮಗಳಿಲ್ಲದ ತೆಳು ಸಂಘಟನೆಯಾಗಿ ಅದು ಪರ್ಯಾಯ ಸೃಷ್ಟಿಸದಿರುವುದಕ್ಕೆ ಕಾರಣಗಳನ್ನು ಹುಡುಕುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡುತ್ತೇನೆ.

ಸುಮಾರು ೪೦ರ ದಶಕದಲ್ಲಿ ಆರಂಭವಾದ 'ಇಪ್ಪಾ'ದ ರಂಗ ಚಳವಳಿ ಯಾವ ಉದ್ದೇಶಗಳಿಂದ ಆರಂಭವಾಯ್ತು ಮತ್ತು ಯಾವ ಕಾರಣಗಳಿಂದ ಶಿಥಿಲವಾಯ್ತು ಎಂಬುದನ್ನು ಮುಖ್ಯವಾಗಿ ಬಂಗಾಳದ ಉದಾಹರಣೆಯನ್ನಿಟ್ಟುಕೊಂಡು, ತಮ್ಮದೊಂದು ಲೇಖನದಲ್ಲಿ ಮಾಲಿನಿ ಭಟ್ಟಾಚಾರ್ಯ ವಿಶ್ಲೇಷಿಸುತ್ತಾರೆ. ಈ ವಿಚಾರಗಳು ಕರ್ನಾಟಕದಲ್ಲಿ ೭೦ರ ದಶಕದಲ್ಲಿ ಆರಂಭವಾದ ಸಮುದಾಯ ಸಾಂಸ್ಕೃತಿಕ ಸಂಘಟನೆಗೂ ಅನ್ವಯವಾಗುವುದರಿಂದ ಅವನ್ನಿಲ್ಲಿ ಪ್ರಸ್ತಾಪಿಸುತ್ತಿದ್ದೇನೆ

''ಭಾರತೀಯ ರಂಗಭೂಮಿಯನ್ನು ವ್ಯಾಪಾರೀ ವೃತ್ತಿಯ ಹಿಡುಗಿನಿಂದ ಬಿಡಿಸುವುದು, ಕ್ಷಯಿಸುತ್ತಿದ್ದ ಪ್ರದರ್ಶನ ಕಲೆಗಳ ಪ್ರಚಲಿತ ಪ್ರಕಾರಗಳನ್ನು ಉಜ್ಜೀವನಗೊಳಿಸುವುದು ಮತ್ತು ರಂಗಭೂಮಿಯನ್ನು ಸಮಕಾಲೀನ ವಸ್ತುಸ್ಥಿತಿಯನ್ನು ಬಿಂಬಿಸುವ ಕನ್ನಡಿಯನ್ನಾಗಿ ರೂಪಿಸುವುದು, ಆಗ 'ಇಪ್ಪಾ'ದ ಉದ್ದೇಶವಾಗಿತ್ತು. ಭಾರತೀಯರ ಸ್ವಾತಂತ್ರ್ಯ ಹೋರಾಟ, ಆರ್ಥಿಕ ನ್ಯಾಯ ಹಾಗೂ ಪ್ರಜಾಪ್ರಭುತ್ವವಾದೀ ಸಂಸ್ಕೃತಿಗಾಗಿ ಹೋರಾಟ - ಇವೇ ಅವರು ಪರಿಗಣಿಸಿದ ಸಮಕಾಲೀನ ವಸ್ತುಸ್ಥಿತಿಗಳು. ಭಾರತೀಯ ಕಮ್ಯುನಿಸ್ಟ್ ಪಕ್ಷದೊಂದಿಗೆ ಸಂಬಂಧ ಇಟ್ಟುಕೊಂಡಿದ್ದ ಹಲವು ಬುದ್ಧಿಜೀವಿಗಳು ಇದರ ಮುಂಚೂಣಿಯಲ್ಲಿದ್ದರೂ ಈ ಚಳವಳಿಯ ಸಾಮೂಹಿಕ ಲಕ್ಷಣವನ್ನು ಅಲ್ಲಗಳೆಯುವಂತಿಲ್ಲ. ಈ ಚಳವಳಿ ತಾನು ಸ್ವತಃ ಅಡಗಿಹೋದರೂ ಬಂಗಾಳದ ರಂಗಭೂಮಿಯ ಮೇಲೆ ಈ ಚಳವಳಿ ಗಾಢವಾದ ಪ್ರಭಾವವನ್ನು ಬೀರಿತು.

''ಇಪ್ಪಾದ ಮೊದಲ ಬುಲೆಟಿನ್‌ನ ತಲೆಬರಹ *'People's Theatre Stars the People'* ಎಂದಿತ್ತು.

''೧೯೬೦ರಲ್ಲಿ ಬಂಗಾಳದಲ್ಲಿ ಹೊಸ ಹೊಸ ಫ್ಯಾಸಿಸ್ಟ್ ವಿರೋಧಿ ತಂಡಗಳು ಹುಟ್ಟಿಕೊಳ್ಳುತ್ತಿದ್ದವು. 'ಇಪ್ಪಾ'ದ ಕುಂದುಕೊರತೆಗಳಿಗೆ ಪ್ರತಿಕ್ರಿಯೆಯಾಗಿ ಈ ತಂಡಗಳು ಹುಟ್ಟಿರಬೇಕು. ಇಪ್ಪಾದೊಂದಿಗೆ ಕೆಲವು ಕಾಲ ಇದ್ದು ಆನಂತರ ಅದರಿಂದ ಹೊರಗೆ ಬಂದ ಅನೇಕರಿಂದಲೂ ಈ ತಂಡಗಳು ಆರಂಭವಾದವು. 'ಇಪ್ಪಾ' ಹೊಸ ಸಮಸ್ಯೆಗಳನ್ನು ಗಮನಕ್ಕೆ ತೆಗೆದುಕೊಳ್ಳುವ ಆತುರದಲ್ಲಿ ಆಗಲೇ ಇದ್ದ ಹಲವು ವಿಚಾರಗಳನ್ನು ಅಲಕ್ಷಿಸಿರುವುದು ಕಂಡುಬರುತ್ತದೆ. ಇದನ್ನು ಗಮನಿಸಿಯೇ ಆರಂಭವಾದ ಹೊಸ ತಂಡಗಳು ಎಲ್ಲಿ 'ಗಣನಾಟ್ಯ' (ಇಪ್ಪಾ) ನಿಂತುಬಿಟ್ಟಿದೆಯೋ ಅಲ್ಲಿಂದ 'ನವನಾಟ್ಯ' (ಆಧುನಿಕ ರಂಗ ಚಳವಳಿ) ಮುಂದುವರಿಯಬೇಕು ಎಂದು ಆಶಯ ವ್ಯಕ್ತಪಡಿಸಿರುವುದು ಕಂಡುಬರುತ್ತದೆ.

''ಪಕ್ಷದ ಧೋರಣೆಗೆ ಬದ್ಧವಾಗಿರಬೇಕೆಂಬ ಅಭಿಪ್ರಾಯವನ್ನು ಬಹಳ ಯಾಂತ್ರಿಕವಾಗಿ ಅನುಸರಿಸಿದ್ದರಿಂದ ತನ್ನ ಚಳವಳಿಯ ಪರಿಣಾಮದಿಂದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೊಸ ಪ್ರಯೋಗಗಳ ತುರ್ತನ್ನು ಕಂಡುಕೊಂಡಂತಹ ಯಾವ ಕಾರ್ಯಕರ್ತರ ಮೇಲೂ 'ಇಪ್ಪಾ' ಒಳ್ಳೆಯ ಪರಿಣಾಮ ಬೀರಲಿಲ್ಲ. ಇದಕ್ಕೆ ಪಕ್ಷದ ಸದಸ್ಯರು ಹಾಗೂ ಸಾಂಸ್ಕೃತಿಕ ಕ್ಷೇತ್ರದ ಕಾರ್ಯಕರ್ತರಿಬ್ಬರೂ ಹೊಣೆಗಾರರು. ಕಮ್ಯುನಿಸ್ಟ್ ಪಕ್ಷವೂ ಕೂಡಾ ಆಗ ಗೊಂದಲದಲ್ಲಿತ್ತು. ಈ ಸಂದರ್ಭದಲ್ಲಿ 'ಬಹುರೂಪಿ', 'ಥಿಯೇಟರ್ ಸೆಂಟರ್', 'ಲಿಟ್ಲ್ ಥಿಯೇಟರ್ ಗ್ರೂಪ್', 'ಶೌಭಾನಿಕ್' ಮುಂತಾದ ತಂಡಗಳು ಆರಂಭಿಸಿದ ಹೊಸ ರಂಗ ಚಳವಳಿ ನಿಜವಾಗಲೂ ಸ್ವಾಗತಾರ್ಹ ಮತ್ತು ಆರೋಗ್ಯಕರ ಬದಲಾವಣೆಯಾಯಿತು.

''ತನ್ನಂತಹ ಸಾಮೂಹಿಕ ಸಂಘಟನೆಯ ಶಿಸ್ತು ಯಾವ ರೀತಿಯಾಗಿರಬೇಕು ಮತ್ತು ಈ ಸಂಘಟನೆಗೆ ಕಮ್ಯುನಿಸ್ಟ್ ಪಕ್ಷದ ಜೊತೆಗೆ ಯಾವ ರೀತಿಯ ಸಂಬಂಧ ಇರಬೇಕು ಎಂಬುದರ ಬಗ್ಗೆ 'ಇಪ್ಪಾ'ಗೆ ಸ್ಪಷ್ಟವಾದ ಧೋರಣೆಗಳಿರಲಿಲ್ಲ. 'ಇಪ್ಪಾ'ದ ದಾಖಲೆಗಳು ಅದು ಪಕ್ಷದ ಶಾಖೆಯಲ್ಲವೆಂದು ಹೇಳಿದರೂ, ಅದು ಪಕ್ಷದ ಸಾಮುದಾಯಿಕ ಸಂಘಟನೆಯಾಗಿದ್ದುದು ಸ್ಪಷ್ಟವಾಗಿತ್ತು. ೧೯೫೭-೫೮ರ ಇಪ್ಪಾದ ೮ನೇ ರಾಷ್ಟ್ರೀಯ ಸಮ್ಮೇಳನದಲ್ಲಿ 'ಇಪ್ಪಾ ಯಾವ ರಾಜಕೀಯ ಪಕ್ಷದ ಅಂಗವೂ ಅಲ್ಲವೆಂದೂ, ಯಾವುದೇ ಪಕ್ಷದ ಉದ್ದೇಶಗಳನ್ನು ಪೂರೈಸಿಕೊಳ್ಳಲು ಈ ಸಂಘಟನೆಯನ್ನು ಬಳಸಲಾಗದೆಂದೂ' ಹೇಳಿ ಮೊದಲೇ ಇದ್ದ ಅಸ್ಪಷ್ಟತೆಗೆ ರಾಜಕೀಯ ಪಕ್ಷವನ್ನು ದೂರವಿಡುವುದರ ಮೂಲಕ ನಿವಾರಣೆಯನ್ನು ಕಂಡುಕೊಳ್ಳುವ ಪ್ರಯತ್ನ ನಡೆಯಿತು. ಆದರೆ ಈ ನೀತಿಯಿಂದ ಸಂಘಟನೆಯಲ್ಲಿ ಸಡಿಲತೆ ಹಾಗೂ ದಿಕ್ಕು ತಪ್ಪಿದ ಸ್ಥಿತಿ ಉಂಟಾಯಿತಲ್ಲದೆ ಬೇರೆ ಉಪಯೋಗವೇನೂ ಆಗಲಿಲ್ಲ. ಪಕ್ಷದ ಧೋರಣೆಗಳನ್ನು 'ಇಪ್ಪಾ'ದಂತಹ ಸಾಮೂಹಿಕ ಸಂಘಟನೆಯ ಮೇಲೆ ಹೇರುವುದರಿಂದ ಸಂಘಟನೆಯ ಬೆಳವಣಿಗೆ ಕುಂಠಿತವಾಗುತ್ತದೆ. ಇಪ್ಪಾ ಹೊಂದಿದ್ದ ಉದ್ದೇಶಗಳನ್ನು ಪೂರೈಸಲು ಅದಕ್ಕೆ ವಿಶಾಲವಾದ ರಾಜಕೀಯ ತಿಳಿವಳಿಕೆ ಅಗತ್ಯವಿತ್ತು. ಆದರೆ ೧೯೫೭-೫೮ರ ದಾಖಲೆಗಳು ಈ ಪ್ರಶ್ನೆಯನ್ನೇ ಬದಿಗೆ ತಳ್ಳಿಬಿಟ್ಟವೆ.

''೧೯೬೭-೬೯ರಲ್ಲಿ 'ಗಣನಾಟ್ಯ ಸಂಘ' (ಇಪ್ಪಾ)ವನ್ನು ಪಶ್ಚಿಮ ಬಂಗಾಳದಲ್ಲಿ ಪುನಸ್ಸಂಘಟಿಸಿದಾಗ, ೧೯೫೭-೫೮ರ ದಾಖಲೆಗಳಲ್ಲಿದ್ದ ರಾಜಕೀಯ ಸುಧಾರಣಾವಾದವನ್ನು ಗುರುತಿಸಿ, ಜನಸಾಮಾನ್ಯರು ಪ್ರಜಾಪ್ರಭುತ್ವವಾದಿ ಕ್ರಾಂತಿಯೆಡೆಗೆ ಸಾಗಲು ವರ್ಗ ಸಂಘರ್ಷಕ್ಕೆ ಬೇಕಾದ 'ಸಾಂಸ್ಕೃತಿಕ ಸೈನ್ಯ'ವನ್ನು ಒದಗಿಸುವ ತನ್ನ ಗುರಿಯನ್ನು 'ಇಪ್ಪಾ' ಘೋಷಿಸಿಕೊಂಡಿತು. ಬೇರೆ ನಾಟಕ ತಂಡಗಳೊಂದಿಗೆ ಸಾಮಾನ್ಯ ಪ್ರಜಾಪ್ರಭುತ್ವವಾದಿ ಹೋರಾಟಗಳಲ್ಲಿ ಒಂದಾಗುವ ಉದ್ದೇಶವನ್ನು ಸ್ಪಷ್ಟಪಡಿಸಿತು. ಈ ಹಿಂದಿನ 'ಇಪ್ಪಾ'ದ ದಾಖಲೆಗಳಲ್ಲಿದ್ದ ಅನುಮಾನಗಳು ಮತ್ತು ಅಪಲಾಪಗಳಿಲ್ಲದ ಈ ದಾಖಲೆ ಮೆಚ್ಚತಕ್ಕದ್ದಾಗಿದೆ.

**ಎಸ್. ಮಾಲತಿ, ಸಾಗರ**



'ಚಿತ್ರಾ' ಅಭಿನಯಿಸಿದ 'ಜೊತೆ ಜೊತೆಯಲಿ' ನಾಟಕದಲ್ಲಿ ಶ್ರೀ ಎ. ಎಸ್. ಮೂರ್ತಿ (ಕೃಪೆ : ಶ್ರೀಮತಿ ಗೌರಿ ದತ್ತು)

ಆದರೂ 'ಇಪ್ಟಾ' ಎಲ್ಲಾ ನಾಟಕ ತಂಡಗಳೊಂದಿಗೆ ವಿಚಾರ-ವಿನಿಮಯಕ್ಕಿಳಿಯುವುದು ಸಾಧ್ಯವಾಗಲಿಲ್ಲ. ಇದರ ಯಾಂತ್ರಿಕವಾದ ಶಿಸ್ತಿನ ಬಗ್ಗೆ ಬೇರೆಯವರಿಗಿದ್ದ ಅನುಮಾನಗಳು ಅಥವಾ ಸಂಘಟನೆಯಲ್ಲೇ ಇದ್ದ ತಾತ್ವಿಕ ಕುಂದುಕೊರತೆಗಳಿಂದ ಹವ್ಯಾಸಿ ನಾಟಕ ತಂಡಗಳಲ್ಲಿದ್ದ ವ್ಯಕ್ತಿವಾದಿ ಧೋರಣೆಗಳನ್ನು ತೊಡೆದುಹಾಕುವ ಹಾದಿಯನ್ನು 'ಇಪ್ಟಾ' ಕಂಡುಕೊಳ್ಳಲಿಲ್ಲ.''

ಮಾಲಿನಿ ಭಟ್ಟಾಚಾರ್ಯ ಅವರ ಲೇಖನದ ಮೇಲಿನ ಭಾಗಗಳಿಂದ ತಿಳಿದುಬರುವುದೇನೆಂದರೆ ಆರಂಭದಲ್ಲಿ ಕಮ್ಯುನಿಸ್ಟ್ ಪಕ್ಷದ ಹಿಡಿತದಲ್ಲಿರುವಾಗ ಅದನ್ನು ಘೋಷಿಸಿಕೊಳ್ಳದಿದ್ದರೂ 'ಇಪ್ಟಾ' ಕ್ರಿಯಾಶೀಲವಾಗಿತ್ತು ಮತ್ತು ಪಕ್ಷಕ್ಕಿರುವ ಬದ್ಧತೆಯನ್ನು ಘೋಷಿಸಿಕೊಳ್ಳದಿರುವಾಗ, ಸಾಂಸ್ಕೃತಿಕ ಸಂಘಟನೆಗೆ ಒಂದು ರೀತಿಯ ಅಭಿವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿವಾದಿ ಮಿತಿಗಳನ್ನು ಕಲೆಯಲ್ಲಿ ಮೀರಿ ಹೆಚ್ಚು ಮಾನವೀಯವಾಗುವ ಸಾಧ್ಯತೆಗಳಿರುತ್ತವೆ. ಆದರೂ ಪಕ್ಷದ ಪರೋಕ್ಷ ಹಿಡಿತವಿದ್ದದ್ದು ಇಪ್ಟಾದಲ್ಲಿಲ್ಲದ ಹಲವು ಕಲಾವಿದರಿಗೆ ಸಹನವಾಗದೆ, ಅವರು 'ಇಪ್ಟಾ'ದ ಒಳಗೆ ಬರದೆ, ಅದನ್ನೂ ಮೀರಿದ ಸಂಘಟನೆಗಳನ್ನು ತಾವು ಕಟ್ಟುತ್ತೇವೆಂದು ಆಧುನಿಕ ಹವ್ಯಾಸಿ ರಂಗಭೂಮಿಯನ್ನು ಬಂಗಾಳದಲ್ಲಿ ಕಟ್ಟಿದರು. ಇವರ ಜನಪರ ಚಟುವಟಿಕೆಗಳನ್ನು ಮನಗಂಡ ಇಪ್ಟಾ, ತಾನೂ ಅವರೊಂದಿಗೆ ಕ್ರಿಯಾಶೀಲವಾಗಿ ಶಾಮೀಲಾಗುವುದೆಂದು ಹೇಳಿಕೊಂಡಿತು. ಆದರೆ ಶಿಥಿಲವಾಗಿದ್ದ ಇಪ್ಟಾವನ್ನು ಮತ್ತೆ ತಹಬಂದಿಗೆ ತರಲು ತನಗೂ ಪಕ್ಷಕ್ಕೂ ನೇರವಾದ ಸಂಬಂಧವಿಲ್ಲವೆಂದು ೧೯೬೭ರಲ್ಲಿ ನೇರವಾಗಿ ಘೋಷಿಸಿಕೊಂಡು 'ಸಾಂಸ್ಕೃತಿಕ ಸೈನ್ಯ' ಕಟ್ಟಲು ಹೊರಟಿತು. ಆದರೆ, ಬೆಳೆಯುತ್ತಿದ್ದ ಜನಪರ ಆಧುನಿಕ ಹವ್ಯಾಸಿ ರಂಗಭೂಮಿಗೆ ದಿಕ್ಸೂಚಿಯನ್ನು ತೋರುವ ಶಕ್ತಿ ಇಪ್ಟಾಗೆ ಒದಗಿಬರಲೇ ಇಲ್ಲ. ಇಲ್ಲಿ ಏಳುವ ಪ್ರಶ್ನೆ ಏನೆಂದರೆ, ಸಾಂಸ್ಕೃತಿಕ ಸಂಘಟನೆಗೊಂದು ಸಿದ್ಧಾಂತವಿರಬೇಕೇ ಎಂಬುದು. - ಸಿದ್ಧಾಂತವಿದ್ದರೆ ಕಲೆ ಅರಳುವುದಿಲ್ಲವೇ, ಎಂಬುದು. ಬಹಳ ಜನ 'ಇಲ್ಲ' ಎಂದು ಉತ್ತರಿಸಿರುವ, ಆದರೆ ನಾನು ಪೂರ್ಣವಾಗಿ ಒಪ್ಪದ ಈ ಉತ್ತರಕ್ಕಿರುವ ಪ್ರಶ್ನೆ, ಇದನ್ನು ಪರಿಶೀಲಿಸಲು ಸ್ವಾನುಭವದತ್ತಲೇ ಹೊರಳೋಣ.

ಈಗ ಸುಮಾರು ೨೫ ವರ್ಷಗಳ ಹಿಂದೆ ಸಮುದಾಯದ ಹುಟ್ಟು. ಬೆಂಗಳೂರಿನ ಪ್ರಸನ್ನ, ಡಿ. ಆರ್. ನಾಗರಾಜ್, ಸಿದ್ಧಲಿಂಗಯ್ಯ, ಗಂಗಾಧರಸ್ವಾಮಿ, ಕೀರಂ, ಕೆ. ವಿ. ನಾರಾಯಣ, ಸಿ. ಜಿ. ಕೃಷ್ಣಸ್ವಾಮಿ ಮುಂತಾದವರೆಲ್ಲ ಸೇರಿ ಎಡ ಪಂಥೀಯ ಧೋರಣೆಗಳಿರುವ ಪರ್ಯಾಯ ಸಂಸ್ಕೃತಿಯೊಂದನ್ನು ರೂಪಿಸಬೇಕೆಂದು ಹುಟ್ಟುಹಾಕಿದ ಸಂಘಟನೆ. ನಂತರ ಇದರ ಶಾಖೆಗಳು ಮೈಸೂರು, ಧಾರವಾಡ, ರಾಯಚೂರು, ಸಿಂಧನೂರು, ಕೋಲಾರ, ಮಂಗಳೂರು, ಕುಂದಾಪುರ, ಬೀದರ್, ಹೀಗೆ ೨೨ ಕಡೆಗಳಲ್ಲಿ ಆರಂಭವಾದವು. ಚಲನಚಿತ್ರ ಸಮಾಜ, ನಾಟಕ, ಪುಸ್ತಕ ಪ್ರಕಟಣೆ, ಪತ್ರಿಕೆಯ ಪ್ರಕಟಣೆ - ಹೀಗೆ ಹಲವು ಹತ್ತು ಕಾರ್ಯಕ್ರಮಗಳು. ಬಹಳ ಮುಖ್ಯವಾದ ಕಾರ್ಯಕ್ರಮಗಳೆಂದರೆ ಕಲಾವಿದರು ಹಳ್ಳಿ ಹಳ್ಳಿಗೆ ಹೋಗಿ ತಿಂಗಳುಗಟ್ಟಲೆ ನಾಟಕ, ಭಾಷಣ, ಪುಸ್ತಕ ಮಾರಾಟ ಮಾಡುತ್ತ ಸಾಂಸ್ಕೃತಿಕ ಜಾಥಾ ನಡೆಸಿದ್ದು. ಸರ್ವಾಧಿಕಾರದ ವಿರುದ್ಧ ೧೯೭೬ರಲ್ಲಿ ಜಾಥಾ, ೧೯೭೯ರಲ್ಲಿ ಹೊಸ ಮೌಲ್ಯಗಳತ್ತ ಸಾಂಸ್ಕೃತಿಕ ಜಾಥಾ, ೧೯೮೧ರಲ್ಲಿ ರೈತರೆಡೆಗೆ ಸಾಂಸ್ಕೃತಿಕ ಜಾಥಾ, ೧೯೮೫ರಲ್ಲಿ ಭೀಕರ ಬರಗಾಲದೆದುರು ಜಾಥಾ, ೧೯೮೬ರಲ್ಲಿ ವಿಶ್ವಶಾಂತಿಗಾಗಿ ವರ್ಣಚಿತ್ರ ಜಾಥಾ - ಇವು ಅತ್ಯಂತ ಪರಿಣಾಮಕಾರಿ, ಸೂಕ್ತ ಕಾರ್ಯಕ್ರಮಗಳಾಗಿದ್ದವು. ಇದಲ್ಲದೆ ಹವ್ಯಾಸಿ ನಾಟಕ ರಂಗದಲ್ಲೂ ಸಮುದಾಯ ತಂಡವು ತಾಯಿ, ಗೆಲಿಲಿಯೋ, ಕುರಿ, ಹುತ್ತವ ಬಡಿದರೆ ಮುಂತಾದ ನಾಟಕಗಳಿಂದ ಹೊಸಗಾಳಿಯೊಂದು ಬೀಸುವಂತೆ ಮಾಡಿತು.

ಸಮುದಾಯದ ೨೦ ವರ್ಷಗಳ ನೆನಪಿಗಾಗಿ ಹೊರತಂದ ಸ್ಮರಣ ಸಂಚಿಕೆಯಲ್ಲಿ ಕೆ. ವೈ. ನಾರಾಯಣಸ್ವಾಮಿ ಹೇಳಿರುವ ಮಾತುಗಳು ಗಮನಾರ್ಹ : ''ಈ ಇಪ್ಪತ್ತು ವರ್ಷಗಳಲ್ಲಿ ಸಮುದಾಯ ಸಾಧಿಸಿರುವ ಪ್ರಗತಿಯ ಬಗ್ಗೆ ಖಂಡಿತವಾಗಿಯೂ ತೃಪ್ತಿ ಹೊಂದಿಲ್ಲ. ಆದರೆ ಎಂಥ ಮನಸ್ಥೈರ್ಯವನ್ನೂ ಅಲುಗಿಸಬಲ್ಲ, ಎಂಥ ಅನುಭಾವಿಕನನ್ನೂ ಆಸೆಬುರುಕನನ್ನಾಗಿ ಮಾಡಬಲ್ಲ, ಸ್ವಾರ್ಥದ ಲೇಪವಿಲ್ಲದೆ ಸಾಮೂಹಿಕವಾಗಿ ಆಲೋಚಿಸಲು ನಿರಾಕರಿಸುವ ಇವೊತ್ತಿನ ವಿಚ್ಛಿದ್ರಕಾರಿ ಸನ್ನಿವೇಶದಲ್ಲಿ ಸಮುದಾಯ ಸಂಘಟನೆ ಈ ಎಲ್ಲಾ ಮೋಹಗಳನ್ನು ಪ್ರಜ್ಞಾಪೂರ್ವಕವಾಗಿ ನಿಗ್ರಹಿಸಿ ತನ್ನ ಮೂಲ ಸ್ವರೂಪವನ್ನು, ಕರ್ತೃತ್ವ ಶಕ್ತಿಯನ್ನು ಉಳಿಸಿಕೊಂಡಿದೆ. (ಸಂಘಟನೆಯಿಂದ ಇಂಥ ವ್ಯಾಮೋಹಕ್ಕೆ ಬಲಿಬಿದ್ದು ದೂರವಾದವರ ಉದಾಹರಣೆಗಳು ಉಂಟು). ಇದು ಸಂಘಟನೆಗೆ ಅಗತ್ಯವಿರುವ ಜೀವಶಕ್ತಿಯನ್ನು, ಹೋರಾಡುವ ಇಚ್ಛಾಶಕ್ತಿಯನ್ನು ಒದಗಿಸಿದೆ. ಸಮುದಾಯಕ್ಕೆ ಇದು ಖುಷಿ ತರುವ ಸಂಗತಿಯಾಗಿದೆ.'' - ಇವು ೨೦ ವರ್ಷದ ಉತ್ಸವದ ಸಂದರ್ಭದಲ್ಲಿ ಆಡಿದ ಒಳ್ಳೆಯ ಮನಸ್ಸಿನ ಮಾತುಗಳು. ಆದರೆ ಸಮುದಾಯದ ಸಾಧನೆ ಅತ್ಯುನ್ನತವಾಗಿದ್ದರೂ, ಈಗ ಅದರ ಶಕ್ತಿ ಸ್ವಲ್ಪ ಸೊರಗಿದೆ. ಅದೀಗ ಕೆಲವು ಸಿದ್ಧಾಂತಿಗಳ ಬಿಡಿ ನಾಟಕಗಳ ಪ್ರದರ್ಶನವಷ್ಟೇ ಆಗಿ ಉಳಿದಿದೆ. ಇಡೀ ಹವ್ಯಾಸಿರಂಗವನ್ನು ಪ್ರಭಾವಿಸುವ ಶಕ್ತಿಯನ್ನು ಕಳೆದುಕೊಂಡಿರುವ ಸಮುದಾಯ, ಎಲ್ಲೋ ಕುಳಿತು ತನ್ನ ಸಿದ್ಧಾಂತದ ಮಂತ್ರ ಜಪಿಸುವ ಪರಿಸ್ಥಿತಿಗೆ ಬಂದಿದೆಯೇ, ಎಂಬ ಅನುಮಾನ ಹುಟ್ಟುವಂತಿದೆ.

ಅದೇ ಲೇಖನದಲ್ಲಿ ನಾರಾಯಣಸ್ವಾಮಿಯವರು ''ಕೊನೆಗೊಂದು ಮಾತು; ೧೯೭೫ರಲ್ಲಿ ಸಮುದಾಯವು ಹುಟ್ಟಿದಾಗ ಇದ್ದ ಸಾಮಾಜಿಕ ಬಿಕ್ಕಟ್ಟುಗಳನ್ನು ಗಮನಿಸಿದರೆ ಇವತ್ತಿನ ಆತಂಕಗಳು ಅಂದಿಗಿಂತಲೂ ಅನೇಕ ಪಟ್ಟು ಅಪಾಯಕಾರಿಯಾಗಿವೆ. ಆದ್ದರಿಂದಲೇ ಸಮುದಾಯದ ಅಸ್ತಿತ್ವ ಮತ್ತು ಹೋರಾಟವು ಇಂದು ಮುಖ್ಯವಾಗುತ್ತದೆ. ಈಗಿನ ಹರೆಯದ ಹುರುಪು, ಶಕ್ತಿಗಳಿಂದ, ಈವರೆಗೆ ಕಲಿತ ಪಾಠಗಳಿಂದ ಸಮುದಾಯ ಸಂಘಟನೆ ಮೈತುಂಬಿಕೊಂಡು ನಾಡಿನಾದ್ಯಂತ ಜನಸುಖಕ್ಕಾಗಿ ಮುನ್ನಡೆಯಲಿ'' ಎಂದು ಆಶಿಸಿ, ಹರಸುತ್ತಾರೆ. ಆದರೆ ಈ ಹರಕೆ ಫಲಿಸುವ ಸ್ಥಿತಿಯಿದೆಯೇ ? - ಇಲ್ಲ. ಹಾಗಾದರೆ ಸಮುದಾಯ ಅಥವಾ ಇಂತಹ

ಸಂಘಟನೆಗಳು ದಾರಿ ತಪ್ಪುತ್ತಿರುವುದೆಲ್ಲಿ? ನನ್ನ ಅಭಿಪ್ರಾಯದಲ್ಲಿ ಕೆಲವು ಹೀಗಿವೆ :

* ಆರಂಭದಲ್ಲಿ ದಲಿತರಿಗೋಸ್ಕರ ಸಾಂಸ್ಕೃತಿಕ ಕಾರ್ಯಕ್ರಮ ಎಂದು ಕಹಳೆಯೂದಿದ ಸಾಂಸ್ಕೃತಿಕ ನೇತಾರರು ಆ 'ದಲಿತ'ರಲ್ಲಿ ಮಹಿಳೆಯರೂ ಇದ್ದಾರೆಂದು ಭಾವಿಸಿದ್ದರೆ ? ಅಥವಾ ಮಹಿಳೆಯರ ಬಗ್ಗೆ ಇವರಿಗೆ ಕಾಳಜಿಯೇ ಇರಲಿಲ್ಲವೇ ? ಈ ಪ್ರಶ್ನೆ ಯಾಕೆ ಉದ್ಭವಿಸುತ್ತದೆಯೆಂದರೆ, ಅನೇಕ ಸಾಂಸ್ಕೃತಿಕ ಸಂಘಟನೆಗಳ ಮುಖ್ಯ ಕಾರ್ಯಕರ್ತರುಗಳಲ್ಲಿ ಹಲವರ ಹೆಂಡತಿಯರು ತಮ್ಮ ಗಂಡಂದಿರ ದೈಹಿಕ, ಮಾನಸಿಕ ಹಿಂಸೆಗೆ ಒಳಗಾಗಿರುವುದನ್ನು ನಾನು ಹತ್ತಿರದಿಂದ ನೋಡಿದ್ದೇನೆ, ಅನುಭವಿಸಿಯೂ ಇದ್ದೇನೆ. ಈ ಪರಿಯ ಸಂಘಟನೆಯೊಂದರ ನಿಷ್ಠಾವಂತ ಕಾರ್ಯಕರ್ತರೊಬ್ಬರ ಹೆಂಡತಿಯಂತೂ ಆತ್ಮಹತ್ಯೆಯನ್ನೇ ಮಾಡಿಕೊಂಡಿರುವ ಉದಾಹರಣೆಯಿದೆ.

* ಇಂತಹ ಸಂಘಟನೆಗಳ ಮುಂಚೂಣಿಯಲ್ಲಿ ಕೆಲವು ನಿಗದಿತ ಪಕ್ಷಗಳ ಕಾರ್ಯಕರ್ತರಿರುತ್ತಾರೆ. ಅವರ ಸದಸ್ಯತ್ವ, ಬದ್ಧತೆಯ ಬಗ್ಗೆ ಪ್ರಶ್ನೆ ಕೇಳುವ ಹಕ್ಕು ನನಗಿಲ್ಲ. ಆದರೆ ಅಂತಹ ನಿರ್ದಿಷ್ಟ ಪಕ್ಷಗಳ ಸ್ಪಷ್ಟವಾದ ಒಲವಿಲ್ಲದ ಹಲವು ನಾಟಕ ಪ್ರೇಮಿಗಳನ್ನು, ಕಲಾವಿದರನ್ನು, ಈ ನೇತಾರರು ಅನುಮಾನದಿಂದ ನೋಡಿ, ಮಾನಸಿಕ ಹಿಂಸೆಗೆ ಒಳಗು ಮಾಡುವುದನ್ನು ನಾನು ನೋಡಿದ್ದೇನೆ. ಇದರಿಂದ ಹಲವು ಮುಗ್ಧ ಕಲಾವಿದರು ದೂರ ಉಳಿದುಬಿಡುತ್ತಾರೆ.

* ಹಳ್ಳಿ ಹಳ್ಳಿಗೆ ಹೋಗಿ ಜಾಥಾ ಮಾಡಿ, ನಾಟಕವಾಡಿ ಭಾಷಣ ಮಾಡುವುದಷ್ಟೇ ನಮ್ಮ ಕಾರ್ಯಕ್ರಮಗಳಾದರೆ ನಮಗೂ ಇತರ ಪ್ರಚಾರ ಪ್ರಿಯರಿಗೂ ವ್ಯತ್ಯಾಸವಿರುವುದಿಲ್ಲ. ಆ ಹಳ್ಳಿಗಳಲ್ಲಿ ನಾಟಕ ನೋಡಿ, ಅದರಿಂದ ಪ್ರಭಾವಿತರಾಗಿ ಹಲವು ಪ್ರಶ್ನೆಗಳನ್ನು ಕೇಳಿ ಹಳ್ಳಿಗರು ಕಾಗದ ಬರೆದಾಗ ಅವುಗಳನ್ನು ಕಸದ ಬುಟ್ಟಿಗೆ ಎಸೆಯುವ ಪ್ರವೃತ್ತಿ ಬೆಳೆಸಿಕೊಂಡರೆ ಸಾಂಸ್ಕೃತಿಕ ಸಂಘಟನೆ ಜನಪರವಾಗಿ ಬೆಳೆಯಲು ಹೇಗೆ ಸಾಧ್ಯವಾಗುತ್ತದೆ ?

* ಮಾರ್ಕ್ಸ್‌ನ ಸಿದ್ಧಾಂತವೂ ಸೇರಿದಂತೆ ವಿವಿಧ ಸಿದ್ಧಾಂತಗಳ ಮೂಲ ಸೂತ್ರಗಳೆಲ್ಲಾ ರಕ್ತದಲ್ಲಿ ವಿಲೀನವಾಗಿ ಹೋಗಿರುವಂತೆ ಮಾತನಾಡುವ ಅನೇಕ ಸಾಂಸ್ಕೃತಿಕ ಸಂಘಟನೆಗಳ ಎಷ್ಟೋ ಪ್ರಮುಖ ಕಾರ್ಯಕರ್ತರು ವೈಯಕ್ತಿಕ ಬದುಕಿನಲ್ಲಿ ಸಂವಾದದ ಗೋಜಿಗೇ ಹೋಗದಿರುವುದು ಅಪರೂಪದ ಸಂಗತಿಯೇನಲ್ಲ - ಅದು ಸಂಘಟನೆಯ ಮೇಲೂ ಪರಿಣಾಮ ಬೀರುತ್ತದೆಂಬುದರಲ್ಲಿ ಸಂಶಯವಿಲ್ಲ.

ಈ ಸಂದರ್ಭದಲ್ಲಿ 'ಸಮುದಾಯ'ದ ಹಿಂದಿನ ಶಕ್ತಿಯಾಗಿದ್ದ ಪ್ರಸನ್ನರ ಬಗ್ಗೆ ಒಂದೆರಡು ಮಾತು ಹೇಳಲೇಬೇಕಾಗುತ್ತದೆ. ನನಗೆ ಗೊತ್ತಿದೆ, ವೈಯಕ್ತಿಕ ವಿಚಾರಗಳನ್ನು ಮಾತನಾಡಿದರೆ 'ಬುದ್ಧಿಜೀವಿ' (?)ಗಳಿಗೆ ಇಷ್ಟವಾಗುವುದಿಲ್ಲ, ಅವರಿಗೆ ಯಾವಾಗಲೂ ರೇಷ್ಮೆಯಂತಹ ನುಣುಪು ಜಾರಿಕೆಯ ಮಾತುಗಳೇ ಇಷ್ಟ. ಆದರೆ ಬದುಕು ಹಾಗಿಲ್ಲವಲ್ಲ, ಅದು ನಿಷ್ಠುರವಾದ ಸತ್ಯಗಳಿಗೆ ನಮ್ಮನ್ನು ಮುಖಾಮುಖಿಯಾಗಿಸುತ್ತದೆ. ಅದರಿಂದ ಮೂಡಿಬಂದ ತಿಳಿವಿನೆರಡು ಎಳೆಗಳು :

* ಪ್ರಸನ್ನ 'ಸಮುದಾಯ' ಆರಂಭಿಸಿದಾಗ ಆತನಿಗಿದ್ದ ಎಡಪಂಥೀಯ ಧೋರಣೆಯ ಉತ್ಕಟತೆಗಿಂತ ಹೆಚ್ಚಾಗಿದ್ದುದು, ಆ ಕಾಲದಲ್ಲಿ ಪ್ರಖ್ಯಾತಿಯ ಉತ್ತುಂಗಕ್ಕೇರಿದ್ದ ಮಾನ್ಯ ಬಿ. ವಿ. ಕಾರಂತರನ್ನು ಮೀರಿಸಬೇಕೆಂಬ ಹಂಬಲ ಅಷ್ಟೇ. ಅದನ್ನು 'ಹೊಟ್ಟೆಕಿಚ್ಚು' ಎಂದು ಕರೆದರೆ ತಪ್ಪಾಗುವುದಿಲ್ಲ. ಈಗಂತೂ ಅವರಿಗೆ ನಾಟಕ ಪ್ರಶಸ್ತಿಯೂ ಸಿಕ್ಕಿದೆಯಾದ್ದರಿಂದ ಕಾರಂತರನ್ನು ಸರಿಗಟ್ಟಿದ್ದೇನೆಂಬ ಭ್ರಾಂತಿಯೂ ಉಂಟಾಗಿರಬಹುದು.

* ಪ್ರಸನ್ನರ ರಂಗಭೂಮಿ ಸಂಘಟನೆಗೆ ಜನ ಬೇಕಾಗಿತ್ತು. ರಂಗಸಂಘಟನೆ ಮಾಡುವುದು ಸುಲಭದ ಕೆಲಸವಲ್ಲ. ಆ ಹೊತ್ತಿಗೆ ಮಾರ್ಕ್ಸ್‌ವಾದ ಆತನಿಗೆ ಉಪಯೋಗಕ್ಕೆ ಬಂತು. ಕೆಂಪು ಮಾತು ಮಾತಾಡಿದರೆ ಬೆನ್ನಹಿಂದೆ ಜನರ ದಂಡೋ ದಂಡು - ಎಂಬ ಸೂತ್ರ ಬದುಕುವ ದಾರಿಯಾಯಿತು. ಮುಂದೆ ಅವರೇ ಇದನ್ನು ಸಾಬೀತುಪಡಿಸಿದ್ದಾರೆ. ಅವರದು ಮಾರ್ಕ್ಸ್‌ವಾದದಲ್ಲಿ ಆಳವಾದ ನಂಬಿಕೆಯಾಗಿರಲಿಲ್ಲವೆಂಬುದು ಈಗ ಸರ್ವವಿದಿತ.

* ಸಮುದಾಯದ ೨೦ರ ದಶಕದ ಸ್ಮರಣ ಸಂಚಿಕೆಯೊಂದರಲ್ಲಿ ಪ್ರಸನ್ನ ಬರೆದಿದ್ದುದನ್ನು ಇಲ್ಲಿ ಸ್ಮರಿಸಬಹುದಾಗಿದೆ: ''ಎಷ್ಟೋ ಸೌಂದರ್ಯ ಮೀಮಾಂಸಕರ ಪ್ರಕಾರ ಕಲೆ ಯಾವುದೇ ಸಾಮಾಜಿಕ ಜವಾಬ್ದಾರಿಯನ್ನು ಪೂರೈಸಬೇಕಿಲ್ಲ. ಕಲೆಯ ಸೃಷ್ಟಿ ಸ್ವಂತ ಖುಷಿಗಾಗಿ ಮಾತ್ರ. ವೈಯಕ್ತಿಕ ಅಭಿವ್ಯಕ್ತಿ ಕಲೆಯ ಪರಮೋದ್ದೇಶ ಎನ್ನುವಂತಹ ತಪ್ಪು ಅಭಿಪ್ರಾಯಗಳೆಲ್ಲಾ ಈಗ ಪ್ರಚಲಿತವಿದೆ. ಆದ್ದರಿಂದ ಸಾಮಾಜಿಕ ಉಪಯೋಗಕ್ಕಾಗಿ ಬಳಸಿಕೊಳ್ಳದ ಹೊರತು ನಾಟಕ ಕಲೆಯಾಗಿ ಬೆಳವಣಿಗೆ ತೋರಲಾರದು ಎನ್ನುವುದನ್ನು ಮೊತ್ತ ಮೊದಲಿಗೆ ಮನದಟ್ಟುಮಾಡಿಕೊಡಬೇಕು. ಸಾಮಾಜಿಕ ಜವಾಬ್ದಾರಿಯನ್ನು ಹೊತ್ತ ನಾಟಕ ಆ ಜವಾಬ್ದಾರಿಯನ್ನು ಪೂರೈಸುವ ಜೊತೆ ಜೊತೆಗೇ ಕಲೆಯಾಗಿ ಬೆಳವಣಿಗೆ ತೋರುವುದೂ ಸಾಧ್ಯ.'' ಅದೇ ಪ್ರಸನ್ನ, ೧೯೯೯ರಲ್ಲಿ ಮೈಸೂರಿನಿಂದ ಹೊರಡುವ 'ಇಬ್ಬನಿ' ಎಂಬ ಪತ್ರಿಕೆಯ ಸಂದರ್ಶನವೊಂದರಲ್ಲಿ 'ನಾನು ಕಲೆಗೆ ಮಾತ್ರ ಬದ್ಧ' ಎಂಬಂತಹ ಮಾತುಗಳನ್ನಾಡಿದ್ದಾರೆ. ಅವರೀಗ ಸಮುದಾಯದಲ್ಲಿಲ್ಲದಿರುವುದರಿಂದ ಅವರು ಈಗ ಆಡುವ ಮಾತು ನನ್ನ ಲೇಖನಕ್ಕೆ ಅಪ್ರಸ್ತುತ ಎಂದು ಓದುಗರಿಗನ್ನಿಸಬಹುದು. ಆದರೆ, ಅವರ ಮಾರ್ಕ್ಸ್‌ವಾದದ ಬದ್ಧತೆಯ ಬಗೆಗೆ ೧೯೭೭ರ ಕಾಲದಲ್ಲೇ, ಅಂದರೆ ಅವರು ಮಾರ್ಕ್ಸ್‌ವಾದದ ಭಾಷಣಗಳನ್ನು ಸಲೀಸಾಗಿ ಉದುರಿಸುತ್ತಿದ್ದ ಕಾಲದಲ್ಲೇ, ನನಗೆ ಅನುಮಾನ ಮೂಡಿತ್ತು. ಅಂದರೆ ಅವರ ಮತ್ತು ಅಂತಹವರ ಆಶಯಗಳ ಪೂರೈಕೆಗೆ ಸಾಂಸ್ಕೃತಿಕ ಸಂಘಟನೆಯೊಂದು ಸಲಕರಣೆಯಾಗುತ್ತದೆಯೇ ಹೊರತು ಅದರ ಪ್ರಕಟಿತ ಉದ್ದೇಶಗಳು ಅವರ ಆಕಾಂಕ್ಷೆಯಾಗಿರುವುದಿಲ್ಲ.

> ನನ್ನ ಸೋಲೆಂದರೆ ಎಂದಿಗೂ ವಿಜಯ ಸಾಧ್ಯವಿಲ್ಲ ಎಂದು ಅರ್ಥವಲ್ಲ. ಎವರೆಸ್ಟ್ ಪರ್ವತಶಿಖರ ಏರುವ ಪ್ರಯತ್ನದಲ್ಲಿ ಸೋಲು ಅನುಭವಿಸಿದವರು ಅನೇಕರಿದ್ದಾರೆ. ಆದರೂ ಕೊನೆಗೆ ಎವರೆಸ್ಟ್ ಶಿಖರವನ್ನು ಜಯಿಸಲಾಗಿದೆ.
>
> *– ಅರ್ನೆಸ್ಟೊ ಚೆ ಗೆವಾರ*

ಹೊರಗೆ ಮಾರ್ಕ್ಸ್‌ವಾದ ಮಾತಾಡುತ್ತಿದ್ದ ಪ್ರಸನ್ನ, ಅವರ ಹೆಂಡತಿಯಾಗಿದ್ದ ನನ್ನನ್ನು ವಿನಾಕಾರಣ ಹೊಡೆಯುತ್ತಿದ್ದರು. ಆತ ಕೊಡುತ್ತಿದ್ದ ಮಾನಸಿಕ ಹಿಂಸೆಗೆ ಸಾಕ್ಷಿ ದೊರಕಿಸುವುದು ಸಾಧ್ಯವಿಲ್ಲ. ಅವರ ಹೊಡೆತಗಳ ಬಗ್ಗೆ ಒಮ್ಮೆ ನಾನು ಶೂದ್ರ ಶ್ರೀನಿವಾಸರಿಗೆ ದೂರಿತ್ತಾಗ 'ಗಾಂಧೀಜಿ ಕೂಡಾ ಕಸ್ತೂರಿ ಬಾಗೆ ಹೊಡೆದಿದ್ದರಂತೆ' ಎಂದು ಅವರು ನನಗೆ ಸಮಾಧಾನ (!) ಹೇಳಿದ್ದರು. ಈ ಒಂದು ಕಾರಣಕ್ಕೇ ಪ್ರಸನ್ನ ಈಗ ತಾವು ಗಾಂಧಿತತ್ವದ ಹಿಂಬಾಲಕರೆಂದು ತಿಳಿದುಕೊಂಡಿರಬೇಕು (ಪಾನನಿರೋಧವನ್ನು ಪಾಲಿಸುವುದು ಸ್ವಲ್ಪ ಕಷ್ಟವಿದ್ದರೂ!). ಈ ಮಂದಿಗೆ ಸ್ತ್ರೀವಾದಿ ನೆಲೆಯಲ್ಲಿ ಯೋಚಿಸುವುದೆಂದರೆ ಫ್ಯಾಷನ್ ಮಾತ್ರ ಎಂದೆನಿಸುತ್ತದೆ. ಇಲ್ಲದಿದ್ದರೆ ಗಾಂಧೀಜಿಯ ಉದಾಹರಣೆ ಕೊಟ್ಟು ಮಹಿಳೆಯ ಮೇಲಿನ ಹೊಡೆತಗಳನ್ನು ಸಮರ್ಥಿಸಿ ಸಮಾಧಾನ ಹೇಳುವುದು ತೀರಾ ಅಸಾಧ್ಯ.

ಒಟ್ಟಿನಲ್ಲಿ ಪ್ರತಿಯೊಂದು ಸಾಂಸ್ಕೃತಿಕ ಸಂಘಟನೆಗೂ ಸಿದ್ಧಾಂತದ ನೆಲೆಯಿರಬೇಕು. ಬದಲಾವಣೆ, ಕ್ರಾಂತಿಯೆಂದರೆ ದೊಡ್ಡ ದೊಡ್ಡ ವಾದಗಳ ಬಗ್ಗೆ ಭಾಷಣ ಕುಟ್ಟಿ, ಪ್ರಚಾರ ಗಿಟ್ಟಿಸುವುದಲ್ಲ. ಇಲ್ಲಿ ನನಗೆ ಫಿಲಿಪೈನ್ಸ್‌ನಲ್ಲಿ ಎಡಸಂಘಟನೆಗಳೊಂದಿಗೆ ಸಾಮಾಜಿಕ, ಶೈಕ್ಷಣಿಕ ಕಾರ್ಯಕ್ರಮಗಳನ್ನು ರೂಪಿಸುತ್ತಿರುವ ಬಿಷಪ್ ಲಬಾಯೆನ್ ಅವರ ಒಂದು ಮಾತನ್ನು ಉದ್ಧರಿಸಬೇಕೆನಿಸುತ್ತಿದೆ. ಅವರು ಹೇಳುತ್ತಾರೆ : ''ಕ್ರಾಂತಿಯ ಹೃದಯವೆಂದರೆ ಹೃದಯದ ಕ್ರಾಂತಿಯಲ್ಲದೆ ಬೇರೇನೂ ಅಲ್ಲ.'' ಇದನ್ನು ಅರಿತು ಮೈಗೂಡಿಸಿಕೊಳ್ಳಬೇಕಾದ ಅಗಾಧ ಜವಾಬ್ದಾರಿ ನಮ್ಮೆಲ್ಲ ಸಾಂಸ್ಕೃತಿಕ ಸಂಘಟನೆಗಳಿಗೆ ಇರಬೇಕಾಗುತ್ತದೆ. ಹಾಗೆಯೇ ಮ್ಯಾಕ್ಸಿಂ ಗಾರ್ಕಿ ೧೯೩೦ರಲ್ಲಿ, ಕಳೆದ ಶತಮಾನದ ಪ್ರಾರಂಭಿಕ ವರ್ಷಗಳಲ್ಲಿ ಇಡೀ ಯುರೋಪಿನಲ್ಲೇ ಫ್ಯಾಸಿಸಂನ ಕರಾಳ ನಗ್ನತೆಯು ಎಲ್ಲೆಲ್ಲೂ ವ್ಯಾಪಿಸಿದ್ದಾಗ, ಸೈದ್ಧಾಂತಿಕ ನಿಲುವೊಂದರ ಅಗತ್ಯ ಕಂಡುಬಂದಾಗ, ಬೌದ್ಧಿಕ ಕಾರ್ಯಕರ್ತನ ಜವಾಬ್ದಾರಿಯ ಬಗ್ಗೆ ಹೇಳುತ್ತಾ ''ಸಂಸ್ಕೃತಿಯ ಸೃಷ್ಟಿಕರ್ತರೇ, ನಿಮ್ಮ ಒಲವು ಯಾವ ಕಡೆಗೆ ?'' ಎಂದು ಕೇಳಿದ ಪ್ರಶ್ನೆಯನ್ನು, ಇಂದು ನಾವೆಲ್ಲಾ ಕೇಳಿಕೊಳ್ಳೋಣ.

ಎಸ್. ಮಾಲತಿ, ಸಾಗರ
ಮಹಾಲಸ ನಿಲಯ, ಜೋಗ ರಸ್ತೆ, ಸಾಗರ - ೫೭೭ ೪೦೧

# ಪ್ರಜಾಪ್ರಭುತ್ವ ಪ್ರಜ್ಞೆ ಮತ್ತು ಪರಿಸರ

ಕೆಲವು ವರ್ಷಗಳ ಹಿಂದೆ, ಮಹಾರಾಷ್ಟ್ರದ ಮುಖ್ಯ ಮಂತ್ರಿಯಾಗಿದ್ದವರು, ಭ್ರಷ್ಟಾಚಾರದ ಆರೋಪದ ಮೇಲಿನ ಕೋರ್ಟಿನ ತೀರ್ಪನ್ನು ಸಹಿಸದೆ ಆಡಿದ್ದ ಮಾತು, ತಾನು ಜನರ ಕೋರ್ಟಿನಲ್ಲಿ ಗೆದ್ದು ಬಂದಿದ್ದೇನೆ ಎಂದು. ಇತ್ತೀಚೆಗೆ ಬಿಹಾರದ ಮುಖ್ಯ ಮಂತ್ರಿಯಾಗಿದ್ದವರೂ ಇಂಥ ಮಾತನ್ನೇ ಹೇಳಿದ್ದು ವರದಿಯಾಗಿದೆ. ನಮ್ಮ ಸಂವಿಧಾನದ ನ್ಯಾಯಾಂಗ ತಮಗೆ ಅನುಕೂಲವಾದ ತೀರ್ಪು ಕೊಡದಿದ್ದಾಗ, ತಾವು ದೇಶದ ಜನತೆಯ ಪ್ರತಿನಿಧಿಗಳಾಗಿರುವುದರಿಂದ, ಪ್ರಜಾಪ್ರಭುತ್ವದಲ್ಲಿ ಜನರು ತಮ್ಮನ್ನು ಆಯ್ಕೆ ಮಾಡಿ ಕಳುಹಿಸಿರುವುದೇ ತಮ್ಮ ಯೋಗ್ಯತೆಗೆ ಸಾಕ್ಷಿ, ಇನ್ನೊಂದು ಚುನಾವಣೆ ನಡೆಯುವ ತನಕ ತಮ್ಮನ್ನು ಪ್ರಶ್ನಿಸುವ ಅಧಿಕಾರ ಯಾರಿಗೂ ಇಲ್ಲ ಎನ್ನುವ ಜನ ಪ್ರಾತಿನಿಧ್ಯವನ್ನೇ ಆಯುಧವಾಗಿಸಿಕೊಂಡ ಒಂದು ರೀತಿಯ ಅಹಂಕಾರವೂ ಈ ರೀತಿಯ ವಾದಸರಣಿಯಲ್ಲಿದೆ.

ಪ್ರಜಾಪ್ರಭುತ್ವದ ಮೂಲಭೂತ ಸೂತ್ರಗಳೆಲ್ಲ ನಮಗೆ ಪಶ್ಚಿಮದಿಂದಲೇ ದೊರಕಿದಂಥವು. ನಮ್ಮ ಸಂವಿಧಾನಕ್ಕೆ ಸಮೀಪವಾದುದಂತೆನಿಸುವುದು ನಮ್ಮನ್ನು ದೀರ್ಘಕಾಲ ಆಳುತ್ತಿದ್ದವರೇ ನಡೆಸಿಕೊಂಡು ಬರುತ್ತಿರುವಂತಹ ಪಾರ್ಲಿಮೆಂಟರಿ ರಾಜ್ಯ ಪದ್ಧತಿ. ಇದನ್ನು ಅರ್ಧ ಶತಮಾನಕ್ಕೂ ಹೆಚ್ಚು ಕಾಲ ನಡೆಸಿಕೊಂಡು ಬಂದಿದ್ದೇವೆ.

ಪ್ರಜಾಪ್ರಭುತ್ವದ ಸರಳೀಕೃತ ನಿರ್ವಚನದಲ್ಲಿ ಪ್ರಜೆಯೇ ರಾಜ್ಯದ ಅಧಿಕಾರದ ಆಯ್ಕೆಯ ಜೊಣೆಗಾರಿಕೆಯನ್ನು ನಿರ್ವಹಿಸಬೇಕಾದ ಪ್ರಮುಖ ಘಟಕ. ತನ್ನ ವೈಯಕ್ತಿಕ, ಸಾಮಾಜಿಕ ಹಾಗೂ ರಾಜಕೀಯ ಹಿತಗಳನ್ನು ಹೊಂದಿಸಿಕೊಳ್ಳುವ ಅವಕಾಶ ಹಾಗೂ ಸ್ವಾತಂತ್ರ್ಯವನ್ನು ಹೊಂದಿದವನು. 'ಲೋಕಸತ್ತೆ' 'ಪ್ರಜಾಪ್ರಭುತ್ವ' ಶಬ್ದಗಳ ಅರ್ಥವ್ಯಾಪ್ತಿ ಏನೆಂದು ಯೋಚಿಸುವಾಗಲೆಲ್ಲ ನಾವು ಆಧಾರಕ್ಕಾಗಿ ನೋಡುವುದು ಪಾಶ್ಚಾತ್ಯ ಚಿಂತಕರ ಕಡೆಗೆ, ಪಾಶ್ಚಾತ್ಯ ರಾಜ್ಯ ಪದ್ಧತಿಗಳ ಕಡೆಗೆ. ಸ್ವಾತಂತ್ರ್ಯ ಸಮಾನತೆಗಳ ಆದರ್ಶದ ಫ್ರೆಂಚ್ ರಾಜ್ಯ ಕ್ರಾಂತಿಯಿಂದಲೇ ಹೆಚ್ಚು ಕಡಿಮೆ ಆ ಸಂದರ್ಭದಲ್ಲಿ ಆರಂಭವಾಗಿ ಮುಂದುವರಿದ ಔದ್ಯೋಗಿಕ ಕ್ರಾಂತಿಯಿಂದಲೇ ಬೆಳೆಯುತ್ತ ಬಂದ ಮಧ್ಯಮ ವರ್ಗವೇ ಇಂಥ ಚಿಂತನೆಯನ್ನು ಪೋಷಿಸಿ ಮುಂದೆ ಹತ್ತೊಂಬತ್ತು ಇಪ್ಪತ್ತನೆಯ ಶತಮಾನಗಳ ಸಂದರ್ಭದಲ್ಲಿ ಸಾರ್ವತ್ರಿಕ ಮತದಾನ ಪದ್ಧತಿಗೆ ದಾರಿ ಮಾಡಿಕೊಟ್ಟದ್ದು.

ಭಾರತದ ಸಂವಿಧಾನದಲ್ಲಿ ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯನ್ನು ಆರಂಭಿಸಿದಾಗ ಪ್ರಜಾಪ್ರಭುತ್ವದ ಪ್ರಜ್ಞೆಯನ್ನು ಹೆಚ್ಚಾಗಿ ಇಂಗ್ಲಿಷಿನ ಮೂಲಕವೇ ದೊರಕಿದ ಬೌದ್ಧಿಕ ಚಿಂತನೆಯಿಂದ ದೊರಕಿಸಿಕೊಂಡಿದ್ದರೂ, ಅದನ್ನು ಪೋಷಿಸಬೇಕಾದ ಪರಿಸರದ ಕುರಿತ ಸ್ಪಷ್ಟ ಚಿಂತನೆಯನ್ನು ಮಾಡಿಕೊಂಡಿದ್ದೇವೆ ಎಂಬ ವಿಚಾರ ಈ ೫೦ ವರ್ಷಗಳಲ್ಲಿ ನಾವು ನಡೆದು ಬಂದ ದಾರಿಯತ್ತ ಕಣ್ಣು ಹಾಯಿಸಿದಾಗ ಸ್ಪಷ್ಟವಾದೀತು. ಇಂಗ್ಲೆಂಡಿನ ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿ ನಮ್ಮ ಲೋಕಸಭೆಗೆ ಸಮನೆನಿಸುವ ಹೌಸ್ ಆಫ್ ಕಾಮನ್ಸ್ ವಿಕಾಸಗೊಳ್ಳುತ್ತ ಬಂದ ಬಗೆಗೆ ದೀರ್ಘಕಾಲದ ಇತಿಹಾಸವಿದೆ. ಮೊದಲು ಸಂಪತ್ತು ಸೊತ್ತುಗಳೇ ಹೌಸ್ ಆಫ್ ಕಾಮನ್ಸ್ ಸದಸ್ಯತ್ವ ದೊರಕಿಸಿಕೊಳ್ಳುವ ಸಾಧ್ಯತೆಯಿದ್ದ ಸಂದರ್ಭ ಒಂದೆರಡು ಶತಮಾನಗಳ ಕಾಲ ಕಾದು, ಇಪ್ಪತ್ತನೆಯ ಶತಮಾನದಲ್ಲಷ್ಟೆ ಜನ ಪ್ರಾತಿನಿಧ್ಯದ ಕಾಯಿದೆ ಬಂದು ಮತದಾನ ಸಾರ್ವತ್ರಿಕವೆನಿಸತೊಡಗಿದ್ದು.

ಈ ಅವಧಿಯಲ್ಲಿ ಪ್ರಜೆಗಳ ಸ್ವತಂತ್ರ ಮತದಾನಕ್ಕೆ ಕಾರಣವಾಗುವ ಪರಿಸರ ಕೂಡ ದೀರ್ಘಕಾಲದಿಂದ ವಿಕಾಸಗೊಳ್ಳುತ್ತ ಬಂದಂಥದು. ಶಿಕ್ಷಣದ ಸಂಸ್ಕಾರವಿದ್ದ ಮತದಾರರು, ಸಮಾನ ಧಾರ್ಮಿಕ ಹಾಗೂ ಹೆಚ್ಚು ವ್ಯತ್ಯಾಸ ಕಾಣದ ಸಾಂಸ್ಕೃತಿಕ ಹಿನ್ನೆಲೆ, ಔದ್ಯೋಗಿಕ ಕ್ರಾಂತಿಯಿಂದ ಬೆಳೆಯುತ್ತಲೇ ಬಂದ, ಓದುವ ಅಭಿರುಚಿಯನ್ನು ಹೆಚ್ಚಿಸಿಕೊಳ್ಳುತ್ತ ಬಂದ, ಮಧ್ಯಮ ವರ್ಗ ಇವೆಲ್ಲವುಗಳಿಂದ ಪೋಷಿಸಲ್ಪಟ್ಟ ಪರಿಸರ ಸಹಜವಾಗಿಯೇ ಒಂದು ರೀತಿಯ ಸಾಮಾಜಿಕ ಐಕ್ಯವನ್ನೂ ತನ್ನ ನಾಡಿನ ಜತೆ ತನಗಿರುವ ಸಂಬಂಧವನ್ನು ಅರ್ಥ ಮಾಡಿಕೊಳ್ಳುವ ಶಕ್ತಿಯನ್ನೂ ತಂದಿತು. ಭೌಗೋಳಿಕವಾಗಿ ಬ್ರಿಟನ್ ಅಷ್ಟೇನು ಮಹತ್ವದ ಘಟಕವಾದುದೆಂದು ಹೇಳಿಕೊಳ್ಳುವಂತಿಲ್ಲವಾದರೂ ಆ ನಾಡಿನಲ್ಲಿ ಬೆಳೆದು ಬಂದ ಸಾಮಾಜಿಕ ಐಕ್ಯ, ಸಾಹಸ ಪ್ರವೃತ್ತಿ, ಇವುಗಳಿಂದಾಗಿ ಬ್ರಿಟನ್ ಅಂಗಡಿಗಾರರ ರಾಷ್ಟ್ರವೆಂದೂ ಸೂರ್ಯ ಕಂತದ ಸಾಮ್ರಾಜ್ಯವನ್ನು ಕಟ್ಟಿ ದೀರ್ಘ ಕಾಲ ಅದನ್ನು ಆಳುತ್ತ ಬಂದ ರಾಷ್ಟ್ರವೆಂದೂ, 'ರೂಲ್ ಬ್ರಿಟಾನಿಯಾ ರೂಲ್ ದಿ ವೇವ್ಸ್, ಬ್ರಿಟನ್ಸ್ ಶಲ್ ನೆವರ್ ಬಿ ಸ್ಲೇವ್ಸ್' ಎಂಬ ಅಹಂಕಾರದ ಸೊಲ್ಲನ್ನೂ ಎಲ್ಲ ಕೇಳುವಂತಾಗಿತ್ತು.

**ವ್ಯಾಸರಾಯ ಬಲ್ಲಾಳ**

ಭಾರತದಲ್ಲಿ ಲೋಕಸತ್ತಾತ್ಮಕ ರಾಜನೀತಿ ವೈಚಾರಿಕವೆನಿಸುವ ಪ್ರಗತಿಶೀಲ ಇತಿಹಾಸದ ಚಳುವಳಿಯೇನಲ್ಲ. ಅದು ಕ್ರಮವಾಗಿ ವಿಕಾಸಗೊಳ್ಳುತ್ತಾ ಬಂದ ಬೆಳವಣಿಗೆಯೂ ಅಲ್ಲ. ನಮ್ಮ ಐತಿಹಾಸಿಕ ಪರಂಪರೆ ಬೊಟ್ಟು ತೋರಿಸುವುದು ನಮಗೆ ಆಜ್ಞೆ ಕೊಡುವ ಮೇಲಿನವರಿಗೆ ವಿಧೇಯತೆಯನ್ನು ತೋರಿಸುವುದಲ್ಲದೆ ಅವರನ್ನು ಆರಾಧಿಸುವುದನ್ನೆ. ನಾವು ನೆಚ್ಚಿಕೊಂಡು ಬಂದ ಪಿತೃಪ್ರಧಾನ ಕೌಟುಂಬಿಕ ವ್ಯವಸ್ಥೆಯೂ ನಮ್ಮ ಜನ ಮನದಲ್ಲಿ ಸ್ವತಂತ್ರ, ವೈಚಾರಿಕ ಅಭಿವ್ಯಕ್ತಿಗೆ ಭಾರತ ಕಳೆದ ೫೦ ವರ್ಷಗಳಲ್ಲಿ ನಡೆಸಿದ ಚುನಾವಣೆಗಳಲ್ಲಿ ಗಂಡ, ಹೆಂಡತಿ, ತಂದೆ, ಮಗ, ಅಣ್ಣ, ತಮ್ಮಂದಿರು ವಿರುದ್ಧ ಪಕ್ಷಗಳಲ್ಲಿ ಚುನಾವಣೆಯ ಕಣಕ್ಕಿಳಿದಾಗ ಇದು ಎಂತಹ ಆಶ್ಚರ್ಯ ಎಂಬಂತೆ ಪತ್ರಿಕೆಗಳು ಬಣ್ಣಿಸಿದ್ದನ್ನು ನೆನಪಿಸಿಕೊಳ್ಳಬಹುದು. ಒಂದು ತೀರ ರಾಜಕೀಯವೆನಿಸಬಹುದಾದ ಸಮಸ್ಯೆಯೊಂದಿಗೆ ಭಾವನಾತ್ಮಕವೆನಿಸುವ ಸಂಬಂಧವನ್ನು ಬೆಳೆಸಿಕೊಂಡು ಅಸಮರ್ಥನೀಯ ನಿಲುವನ್ನೇ ತಳೆದು ಆತ್ಮಹತ್ಯೆಯ ಮಟ್ಟಕ್ಕೂ ಹೋಗುವುದನ್ನು ನಾವು ಇತ್ತೀಚಿಗಿನ ವರ್ಷಗಳವರೆಗೂ ಕಂಡಿದ್ದೇವಲ್ಲ. 'ರಾಜಾ ಪ್ರತ್ಯಕ್ಷ ದೇವತಾ' ಎಂಬ ಮಾತನ್ನು ಭಾರತೀಯರು ದೀರ್ಘ ಕಾಲದಿಂದ ನೆಚ್ಚಿಕೊಂಡವರು. ಪ್ರಜಾಪ್ರಭುತ್ವದ ಮುಖ್ಯ ಸೂತ್ರಗಳಿಗೆ ಸ್ಪಂದಿಸಬೇಕಾದ ಅವರು ತಮಗೆ ಅಗತ್ಯವಾದ ವೈಚಾರಿಕ ನಿಲುಮೆಯನ್ನು ಎಷ್ಟರಮಟ್ಟಿಗೆ ತಾವು ತಮಗೆ ಶಿಕ್ಷಣ ದೊರಕಿಸಿಕೊಟ್ಟ ಲೋಕಾನುಭವದಿಂದ ಪಡೆಯುತ್ತಾರೆ, ಎಷ್ಟರಮಟ್ಟಿಗೆ ಅವರ ಪ್ರಾದೇಶಿಕ ಹಾಗೂ ಸಾಮಾಜಿಕ ಪರಿಸರದಿಂದ ಪ್ರಭಾವಿತರಾಗುತ್ತಾರೆ, ಎಷ್ಟರಮಟ್ಟಿಗೆ ತಾವು ತಮ್ಮ ಲೋಕಸತ್ತಾತ್ಮಕ ಆಯ್ಕೆಯಲ್ಲಿ ಸ್ವತಂತ್ರ ಅಭಿವ್ಯಕ್ತಿಗೆ ಯೋಗ್ಯರೆನಿಸುವ 'ಪ್ರಜೆ' ಆಗುತ್ತಾರೆ ಎಂಬ ವಿಚಾರಗಳೆಲ್ಲ ನಮ್ಮ ಪ್ರಜಾಪ್ರಭುತ್ವವನ್ನು ಅರ್ಥೈಸುವ 'ಪ್ರಜ್ಞೆ'ಯ ಮುಖ್ಯ ಪ್ರಶ್ನೆಗಳಾಗಬೇಕು.

ನಮ್ಮ ಸ್ವಾತಂತ್ರ್ಯದ 'ಅರ್ಥ'ವನ್ನು ಎಲ್ಲ ತಿಳಿಯುವಂತಾಗಬೇಕು, ಎಲ್ಲರಿಗೂ ದೇಶದ ಆಗು ಹೋಗುಗಳಲ್ಲಿ ಭಾಗವಹಿಸುವ ಮುಕ್ತ ಅವಕಾಶ ಇರಬೇಕು ಎಂಬ ಆದರ್ಶವನ್ನು ತುಸು ಭಾವನಾತ್ಮಕ ದೃಷ್ಟಿಯಿಂದ ನೆಚ್ಚಿಕೊಂಡ ಪಂಡಿತ್ ನೆಹರೂರವರ ಆದರ್ಶ ಭಾರತದ ಕಲ್ಪನೆಯಲ್ಲಿ ಈ 'ವಯಸ್ಕ ಮತದಾನ' ಪದ್ಧತಿ ಅನಿವಾರ್ಯವೇನೋ ಎಂಬಂತೆ ಕಾಣಿಸಿಕೊಂಡದ್ದು. ಈ ಆಸೆಗೆ ಭಾರತದ ಪರಿಸರ, ಅದೂ ವಿಭಿನ್ನ ರೀತಿಯ ಭಾಷೆ, ಸಂಸ್ಕಾರ, ಪ್ರಾದೇಶಿಕ ವೈಶಿಷ್ಟ್ಯಗಳಿಂದ ರೂಪುಗೊಂಡ ಪರಿಸರ, ಇದಕ್ಕೂ ಹೆಚ್ಚು, ಜಾತಿ, ಉಪಜಾತಿ, ಕುಲಕಸುಬು, ಇಂತಹ ಸ್ವಾರ್ಥ ಸಾಮಾಜಿಕ ಜೀವನವನ್ನು ರೂಪಿಸಿದಂತಹ

ಪರಿಸರ, ಯಾವ ರೀತಿ ಸಹಕರಿಸಬಹುದು, ತೊಡಕಾಗಬಹುದು ಎಂಬುದನ್ನು ನಮ್ಮ ಸಂವಿಧಾನ ನಿರ್ಮಾಪಕರು ಸಾಕಷ್ಟು ಪರಿಶೀಲಿಸಿದ್ದಾರೆಯೇ ಎಂಬ ಯೋಚನೆ ಈಗ ಕಾಡುತ್ತಿದೆ. ಎಂದರೆ ಅವರು ಈ ಇವೆಲ್ಲವುಗಳನ್ನು ಗಮನಿಸಿಯೇ ಇಲ್ಲವೆಂದು ಇದರ ಅರ್ಥವಲ್ಲ. ಇಂತಹ ಸಮಸ್ಯೆಗಳ ಪರಿಹಾರಕ್ಕೆ ಕೆಲವು ಸರಳೀಕೃತ ಸೂತ್ರಗಳನ್ನು ಅವರು ಸಂವಿಧಾನದಲ್ಲಿ ಅಳವಡಿಸಿದ್ದೂ ಇದೆ. ಕಡ್ಡಾಯ ಪ್ರಾಥಮಿಕ ಶಿಕ್ಷಣ, ಎಲ್ಲ ನಾಗರಿಕರಿಗೂ ಅನ್ವಯಿಸುವ ಸಮಾನ ರೂಪದ ನ್ಯಾಯ ಸಂಹಿತೆ, ಹೀಗೆಲ್ಲ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅವರು ಕಂಡಿದ್ದ, ಅನುಭವಿಸಿದ್ದ ಸಾಮಾಜಿಕ ಐಕ್ಯ, ಸ್ವಾತಂತ್ರ್ಯ ಬಂದಮೇಲೂ ಮುಂದುವರಿಯುವುದು ಎಂದು ಅವರು ಸಹಜವಾಗಿಯೇ ನಂಬಿದ್ದಿರಬೇಕು. ಆದರೆ ಈ ನಂಬಿಕೆಗಳನ್ನೆಲ್ಲ ಅಲುಗಾಡಿಸುವಂತಹ ಸಾಮಾಜಿಕ ಸ್ಥಿತಿಯನ್ನು ನಾವು ಈಗ ಕಾಣುತ್ತಿದ್ದೇವೆ. ನಾವು ನಡೆಸಿದ ಚುನಾವಣೆಗಳಿಂದಾಗಿ ಪ್ರಜಾಪ್ರಭುತ್ವದ ಪ್ರಜ್ಞೆಯನ್ನು ಸಾರ್ವತ್ರಿಕವಾಗಿಸುವಲ್ಲಿ ನಾವು ಯಶಸ್ವಿಗಳಾಗಿದ್ದೇವೆ. ಆದರೆ ಸಾರ್ವತ್ರಿಕವಾಗಿ ಈ ಪ್ರಜ್ಞೆಯ ಎಚ್ಚರವಿದ್ದು ಲೋಕಸತ್ತೆಯನ್ನು ನಿಜವಾಗಿಸಬಹುದಾದ ಪರಿಸರ ನಮ್ಮದಿದೆಯೇ, ಅದನ್ನು ಎಷ್ಟರಮಟ್ಟಿಗೆ ಈ ೫೦ ವರ್ಷಗಳಲ್ಲಿ ಸಾಧಿಸಲು ನಾವು ಶಕ್ತರಾಗಿದ್ದೇವೆ ಎನ್ನುವ ವಿಚಾರಗಳನ್ನು ಇದಿರಿಸಬೇಕಾದ ಸಂದರ್ಭ ಈಗ ನಮ್ಮ ಮುಂದಿದೆ.

ವಯಸ್ಕ ಮತದಾನ ಪದ್ಧತಿ ಪ್ರಜಾಪ್ರಭುತ್ವಕ್ಕೆ ಸಹಜವೆನಿಸುವ ಆದರ್ಶದ ಪರಿಕಲ್ಪನೆ. ಆದರೆ ಭಾರತದಂತಹ ಬಹುಪಾಲು ಕೃಷಿಕರೂ ಸಾಕ್ಷರತೆಯ ಸಂಸ್ಕಾರವಿರದವರೂ ಇರುವ ದೇಶದಲ್ಲಿ ಒಮ್ಮಿಂದೊಮ್ಮೆಗೆ ವಯಸ್ಕ ಮತದಾನ ಪದ್ಧತಿಯನ್ನು ಜಾರಿಗೆ ತರುವುದು ಎಷ್ಟೆಲ್ಲ ಪರಿಸರ ಪ್ರಭಾವಿತ ಸ್ಥಾಪಿತ ಹಿತಗಳೂ, ಜನರ ನಿರಕ್ಷರತೆ ಅಜ್ಞಾನಗಳನ್ನು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವ ಸಂದರ್ಭ ಬಂದಾಗ ಪ್ರಜಾಪ್ರಭುತ್ವ ಅರ್ಥ ಕಳೆದುಕೊಳ್ಳದೇ ಎಂದು ನಾವು ಯೋಚಿಸಿದಂತಿಲ್ಲ. ಅಷ್ಟೇಯೇ, ಮತದಾನ ಪದ್ಧತಿಗೆ ರೂಪಿಸಲಾದ ವಯಸ್ಸಿನ ಮಿತಿಯನ್ನೂ ಕಡಮೆ ಮಾಡುವುದರಲ್ಲೆ ಸಂತೋಷಪಟ್ಟಿದ್ದೇವೆ. ಸ್ವಾತಂತ್ರ್ಯ ಬಂದ ಮೇಲೆ ದೀರ್ಘ ಕಾಲ ಆಡಳಿತೆಯ, ಅಧಿಕಾರದ ಹಿಡಿತವನ್ನು ತನ್ನ ಕೈಯಲ್ಲಿರಿಸಿಕೊಂಡಿದ್ದ ಕಾಂಗ್ರೆಸ್ ಆಡಳಿತೆ ಕೊನೆಗಂಡು ಸಂಯುಕ್ತರಂಗದ ಸರಕಾರಗಳು ಅಸ್ತಿತ್ವಕ್ಕೆ ಬಂದುದನ್ನು ಅವುಗಳ ಕಾರ್ಯ ನಿರ್ವಹಣೆಯಲ್ಲಿ ಈ ಸರಕಾರಗಳು ಅನುಭವಿಸಿದ ಹೊಂದಾಣಿಕೆಯ ಕಷ್ಟಗಳನ್ನು ನಾವು ಕಂಡಿದ್ದೇವೆ. ಇಂಥ ಸರಕಾರಗಳು ಕೆಲವು ಪ್ರಾಂತೀಯ ಅಥವಾ ವಿಶಿಷ್ಟ ಹಿತಗಳನ್ನು ಆಡಳಿತೆಯ ಹಿತಕ್ಕೆ ಹೊಂದಿಸುವ ಕೆಲಸದಲ್ಲಿ ಅಪಕ್ವ ಪರಿಸರ ಪ್ರಭಾವಿತ ನಾಯಕತ್ವದಿಂದ ರಾಷ್ಟ್ರದ ಹಿತಕ್ಕೆ ಹೊಂದಿಸಲಾಗದ ಪ್ರಾಂತೀಯ ಬೇಡಿಕೆಗಳಿಂದ ಏನೆಲ್ಲ ಸಮಸ್ಯೆಗಳು ಉದ್ಭವಿಸುತ್ತವೆ ಎಂಬುದನ್ನೂ ಕಂಡಿದ್ದೇವೆ. ಸ್ವಾತಂತ್ರ್ಯ ಪೂರ್ವದಲ್ಲಿ ಸ್ವಾತಂತ್ರ್ಯ ಚಳವಳಿ ನಡೆಸಿದ ಕಾಂಗ್ರೆಸ್ ಕೂಡ ಒಂದು 'ಸಂಯುಕ್ತರಂಗವೇ' ಆಗಿದ್ದರೂ ಅಲ್ಲಿ ಸ್ವಾತಂತ್ರ್ಯದ ಹಂಬಲದ ಆದರ್ಶ ಹೋರಾಟದ ಕಾಲದಲ್ಲಿ ಎಲ್ಲ ಭಿನ್ನತೆಗಳನ್ನು ದೂರವಿರಿಸಲು ಸಾಧ್ಯಮಾಡಿತ್ತು. ಸ್ವಾತಂತ್ರ್ಯ ಬಂದಮೇಲೆ ಈ ಆದರ್ಶ ತೆಳುವಾಗಿ, ವಯಸ್ಕ ಮತದಾನ ಪದ್ಧತಿಯಿಂದಾಗಿ ನಮ್ಮ ಚುನಾವಣೆಗಳಲ್ಲಿ ಜನ ಪ್ರಾತಿನಿಧ್ಯವನ್ನು ಸಂಪಾದಿಸಿದ ನಾಯಕತ್ವ ನಾಡಿನ ಎಲ್ಲ ನಾಗರಿಕರ ಹಿತವನ್ನೆ ಸಾರ್ವಭೌಮವೆಂದು ತಿಳಿದಿರುವ ವಿವೇಚನಾಯುಕ್ತ ನಾಯಕತ್ವವಾಗಿ ಬಂದಿದೆಯೇ, ಅಥವಾ ಪರಿಸರದ ಪ್ರಭಾವಗಳನ್ನೇ ವೈಶಿಷ್ಟ್ಯವಾಗಿಸಿಕೊಂಡ ಸ್ವಾರ್ಥದ ಅಧಿಕಾರ ದಾಹದ ನಾಯಕತ್ವವಾಗಿ ರೂಪುಗೊಂಡಿದೆಯೇ ಎಂಬ ವಿಚಾರಗಳು ಕುತೂಹಲ ಮೂಡಿಸುವಂಥವು.

ನಮ್ಮ ಸಂವಿಧಾನ ನಿರ್ಮಾಣದ ಕಾಲದಲ್ಲಿ ವಯಸ್ಕ ಮತದಾನ ಪದ್ಧತಿಗೆ ವಿರೋಧ ವಿರಲಿಲ್ಲವೆಂದಲ್ಲ. ಸ್ವಾತಂತ್ರ್ಯ ಹೋರಾಟದ ಸಕ್ರಿಯ ರಾಜಕಾರಣಕ್ಕೆ ಸಹಕರಿಸಿದ್ದ, ಪ್ರಬುದ್ಧ ಚಿಂತನೆಗೆ ಹೆಸರಾದ ಪತ್ರಿಕೆಯೆಂದು ಹೊಗಳಿಕೆಗೆ ಪಾತ್ರವಾಗಿದ್ದ 'ಹಿಂದೂ' ಪತ್ರಿಕೆಯೂ ವಯಸ್ಕ ಮತದಾನ ಪದ್ಧತಿಯಿಂದ ನಾವು ತಿನ್ನಬೇಕಾಗಿರುವುದಕ್ಕಿಂತ ಹೆಚ್ಚಿನದನ್ನು ಕಚ್ಚಿದ್ದೇವೆ ಎಂದುದಿದೆ. ಸರಿಯಾದ ಶೈಕ್ಷಣಿಕ ಹಾಗೂ ತಿಳಿವಳಿಕೆಯ ಸಾಮಾಜಿಕ ಪರಿಸರ ನಿರ್ಮಾಣವಾಗುವ ತನಕ ನಾವು ಕಾದು ಆಮೇಲೆ ವಯಸ್ಕ ಮತದಾನ ಪದ್ಧತಿಯನ್ನು ಜಾರಿಗೆ ತರುವುದು ಲೇಸು ಎಂದು ವಾದಿಸಿದ್ದಿದೆ.

ಈಗ ೫೦ ವರ್ಷಗಳ ಪ್ರಜಾಪ್ರಭುತ್ವದಲ್ಲಿ ಶಿಕ್ಷಣ ಮತ್ತು ಪ್ರಾದೇಶಿಕ ವೈಶಿಷ್ಟ್ಯಗಳ




ಹಿನ್ನೆಲೆಯಲ್ಲಿ ಆಗಿರುವುದೇನು ಎಂಬುದನ್ನು ಕಳೆದ (೧೯೯೧) ಖಾನೇಶುಮಾರಿಯ ವಿವರಗಳಿಂದ ಸ್ವಲ್ಪ ವಿಮರ್ಶಿಸೋಣ. ಕೆಲವು ಪ್ರಮುಖ ರಾಜ್ಯಗಳನ್ನಷ್ಟೆ ಗಮನದಲ್ಲಿರಿಸಿ ೪೦ ವರ್ಷಗಳಾದ ಮೇಲೆ ಜನ ಪ್ರಾತಿನಿಧ್ಯಕ್ಕಾಗಿ ಸ್ವತಂತ್ರ ಅಭಿಪ್ರಾಯ ನಿರ್ವಹಣೆ ಯಾವ ರೀತಿ ಆಗಿದೆ ಎನ್ನುವುದನ್ನು ತಿಳಿಯಲು ಇದೊಂದು ಪ್ರಯತ್ನ.

| ರಾಜ್ಯ | ಜನಸಂಖ್ಯೆ | ಸಾಕ್ಷರತೆ |
|---|---|---|
| ಆಂಧ್ರ(ಅಂದಾಜು) | ೬ ೧/೨ ಕೋಟಿ | ೪೬% |
| ಗುಜರಾತ್ (ಅಂದಾಜು) | ೪ ೧/೪ ಕೋಟಿ | ೬೧% |
| ಕರ್ನಾಟಕ (ಅಂದಾಜು) | ೪ ೧/೨ ಕೋಟಿ | ೫೬% |
| ಕೇರಳ | ೩ ಕೋಟಿ | ೯೩% |
| ಮಹಾರಾಷ್ಟ್ರ | ೮ ಕೋಟಿ | ೬೩% |
| ತಮಿಳುನಾಡು | ೬ ಕೋಟಿ | ೬೩% |
| ಪಶ್ಚಿಮ ಬಂಗಾಳ | ೭ ಕೋಟಿ | ೫೭% |
| ಪಶ್ಚಿಮ ಬಂಗಾಳದಲ್ಲಿ ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಬಹಳಷ್ಟು ಪ್ರಗತಿಯಾಗಿದೆ | | |
| ಉತ್ತರ ಪ್ರದೇಶ | ೧೩ ಕೋಟಿ | ೪೨% |
| ಬಿಹಾರ | ೯ ಕೋಟಿ | ೩೮% |
| ರಾಜಸ್ಥಾನ | ೪ ೧/೨ ಕೋಟಿ | ೩೯% |

ಅಜ್ಞಾನದಲ್ಲಿರುವ, ಬಡತನವನ್ನೇ ಆಶ್ರಯಿಸಬೇಕಾದ ಜನರ ಮತಗಳನ್ನು ಗುಂಪು, ಜಾತಿ, ಉಪಜಾತಿ, ಭಾಷೆ ಹಾಗೂ ಇತರ ಕೆಲವು ಆಮಿಷಗಳಿಂದಲೂ ಸೆಳೆಯಲು ಸಾಧ್ಯವಾಗುವ ಪರಿಸರ ಪ್ರಜಾಪ್ರಭುತ್ವದ ಅರ್ಥ ತಿಳಿಯದ ಜನರ ಪ್ರಾಮಾಣಿಕ ಅಭಿಪ್ರಾಯವನ್ನು ರೂಪಿಸುವುದಿಲ್ಲ. ನಮ್ಮ ಮತದಾನ ವ್ಯವಸ್ಥೆಯಲ್ಲಿ ಬರೇ ಸಂಖ್ಯಾ ರೂಪದ ಬಹುಮತಕ್ಕೇ ಪ್ರಾಶಸ್ತ್ಯವಿರುವುದರಿಂದ, ಆಯ್ಕೆ ಬಯಸುವ ಅಭ್ಯರ್ಥಿಗೆ ಮತದಾನ ಸಮೂಹದ ನಿರ್ಣಾಯಕವೆನಿಸಬಹುದಾದ ಪ್ರತಿಶತಾಂಶ ಮತ ದೊರೆಯಲೇಬೇಕು ಎಂಬ ಒತ್ತಾಯವೂ ಇರದಿರುವುದರಿಂದ, ವಿಜಯಿಯಾದ ಅಭ್ಯರ್ಥಿ ತಾನು ಆಯ್ಕೆಯಾದ ಪರಿಸರವನ್ನು ಸ್ಪಷ್ಟವಾಗಿ ಪ್ರತಿನಿಧಿಸುವ ವ್ಯಕ್ತಿಯೇ ಎಂದು ಹೇಳುವಂತಿಲ್ಲ. ಇನ್ನು ಸಾಕ್ಷರರಾಗಿರುವವರಲ್ಲೂ ನಿಜವಾದ ರಾಜ್ಯ ಹಾಗೂ ದೇಶದ ಹಿತಗಳೇನು, ಆಯ್ಕೆ ಬಯಸುವ ಅಭ್ಯರ್ಥಿಗೆ ಇವನ್ನು ಗಮನದಲ್ಲಿರಿಸಿ ಕೆಲಸ ಮಾಡುವ ಅರ್ಹತೆ ಇದೆಯೇ ಎಂದು ತಿಳಿಯಲು ಶಿಕ್ಷಣದ ಸಂಸ್ಕಾರ ಪಡೆದ ಮಧ್ಯಮ ವರ್ಗದಲ್ಲೂ - ಇವರ ಸಂಖ್ಯೆ ಗ್ರಾಮೀಣ ಪ್ರದೇಶಗಳಲ್ಲಿ ಕಡಿಮೆ - ಪ್ರತಿಶತ ಐವತ್ತರಷ್ಟಾದರೂ ಸಾಮಾಜಿಕ ಚಿಂತನೆಯನ್ನು ಹೆಚ್ಚಾಗಿ ದೂರವಿರಿಸಿಕೊಂಡವರು. ಸಾಮಾಜಿಕವೆನಿಸುವ ಚಿಂತನೆಗೆ ಪತ್ರಿಕೆ ಒಂದು ಪ್ರಮುಖ ಸಾಧನ. ೧೯೯೯ರಲ್ಲಿ ನಡೆಸಿದ ಒಂದು ಸಮೀಕ್ಷೆಯಂತೆ ನಮ್ಮ ಮಾಧ್ಯಮ ಪ್ರಪಂಚ (ಪತ್ರಿಕೆಗಳು) ದೇಶದ ರಾಜಕೀಯ ಹಾಗೂ ಸಾಮಾಜಿಕ ಪರಿಸರದ ಚಿತ್ರ

ಕೊಡುವಂಥವು, ತಲಪುವ ಓದುಗರೆಷ್ಟು ಎಂದು ಸೂಚಿಸಿದ ಕೆಲವು ಸಂಖ್ಯೆಗಳು ತುಂಬ ಕುತೂಹಲವನ್ನು ಮೂಡಿಸುವಂಥವು.

*ಪ್ರತಿವಾರ ಸಾಮಾನ್ಯವಾಗಿ ಪತ್ರಿಕೆಗಳನ್ನು ಓದುವವರು:*

| | ಗಂಡಸರು | ಹೆಂಗಸರು |
|---|---|---|
| ಅಹಮದಾಬಾದ್ | ೪.೯ | ೩.೩ |
| ಬೆಂಗಳೂರು | ೫.೩ | ೩.೫ |
| ಚೆನ್ನೈ | ೫.೧ | ೩.೨ |
| ಗುಜರಾತ್ | ೪.೬ | ೨.೭ |
| ಹೈದರಾಬಾದ್ | ೪.೯ | ೨.೭ |
| ಕರ್ನಾಟಕ | ೪.೯ | ೨.೮ |
| ಕೇರಳ | ೬.೨ | ೪.೯ |
| ಮುಂಬಯಿ | ೫.೩ | ೩.೯ |
| ಲಕ್ನೋ | ೪.೫ | ೨.೮ |
| ಮಹಾರಾಷ್ಟ್ರ | ೪.೯ | ೩.೨ |
| ಪಾಟ್ನಾ | ೫.೩ | ೨.೬ |
| ರಾಜಸ್ಥಾನ | ೪.೬ | ೨.೫ |
| ಪಶ್ಚಿಮ ಬಂಗಾಳ | ೪.೦ | ೨.೫ |
| ತಮಿಳುನಾಡು | ೪.೮ | ೨.೪ |

(ಆಧಾರ : NRS ೧೯೯೯)

ಮೇಲೆ ಸೂಚಿಸಿದ ಎಲ್ಲ ಕಡೆಗಳಲ್ಲೂ ಹೆಂಗಸರು ಪತ್ರಿಕೆಗಳ ಓದಿಗೆ ಅಷ್ಟು ಮಹತ್ವ ಕೊಡುವುದಿಲ್ಲವೆಂಬುದು ವ್ಯಕ್ತವಾಗುತ್ತಿದೆ. ಕೇರಳದಲ್ಲಿ ಸಾಕ್ಷರತೆಯ ಪ್ರಮಾಣ ಪ್ರತಿಶತ ೯೩ರಷ್ಟು ಇರುವಲ್ಲಿ ಸ್ತ್ರೀ ಹೆಚ್ಚು ಜಾಗೃತಳಾಗಿದ್ದಾಳೆ ಎಂಬುದನ್ನೂ ಇದು ಎತ್ತಿ ತೋರಿಸುತ್ತಿದೆ. ನಮ್ಮ ಸ್ವಾತಂತ್ರ್ಯ ಬಂದಮೇಲೆ ದೇಶದಲ್ಲಿ ಮೊದಲ ಕಮ್ಯುನಿಸ್ಟ್ ಸರಕಾರ ರೂಪುಗೊಂಡದ್ದು ಕೇರಳದಲ್ಲಿ. ಇದರ ಮುಂದಾಳತ್ವ ವಹಿಸಿದ್ದ ಹಲವರು ಹಿಂದೆ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದ್ದವರು ಎಂಬುದನ್ನೂ ಇಲ್ಲಿ ನೆನಪಿಸಿಕೊಳ್ಳಬಹುದು. ಎಡರಂಗದ ಸರಕಾರವಿರುವ ಪಶ್ಚಿಮ ಬಂಗಾಳದ ಪತ್ರಿಕೆಗಳ ಓದುಗರ ಸಂಖ್ಯೆ ಮಾತ್ರ ಆಶ್ಚರ್ಯವನ್ನುಂಟುಮಾಡುತ್ತಿದೆ. ಮುಂಬಯಿ ಮಹಾನಗರದಲ್ಲಿ ಕಳೆದ ಹಲವಾರು ಚುನಾವಣೆಗಳಲ್ಲಿ ಆಡಳಿತೆಯ ವಿರುದ್ಧ ಸ್ಪರ್ಧಿಸಿದ್ದ ಅಭ್ಯರ್ಥಿಗಳೇ ಹೆಚ್ಚಾಗಿ ಗೆದ್ದಿರುವುದೂ ಪರಿಸರ ಪ್ರಜಾಪ್ರಭುತ್ವದ ಪ್ರಜ್ಞೆಯನ್ನು ಘೋಷಿಸುವ ಒಂದು ಉದಾಹರಣೆ. ಗುಜರಾತ್ ಮತ್ತು ರಾಜಸ್ಥಾನಗಳಲ್ಲಿ ಪುರುಷ ಓದುಗರು ಪತ್ರಿಕೆಗಳಿಗಾಗಿ ವ್ಯಯಿಸುವ ಸಮಯ ಒಂದೇ ರೀತಿಯಿದೆ. ಆದರೆ ಸ್ತ್ರೀಯರು ಪತ್ರಿಕೆಗಳನ್ನು ಬಳಸುವುದು ಕಡಿಮೆ. ಮನೆಯ ಗಂಡಸರು ತಿಳಿಸಿದ ಅಭಿಪ್ರಾಯಗಳನ್ನೇ ಒಪ್ಪಿಕೊಳ್ಳುವ ರೀತಿಯ ಪರಿಸರ ಪ್ರಜ್ಞೆ ಅವರದಾಗಿದೆ ಎಂದು ತಿಳಿಯಬಹುದು. ಇದಕ್ಕೆ ಪುರುಷರಿಗೆ ಸಿಗುತ್ತಿರುವಂತಹ ಶಿಕ್ಷಣಾವಕಾಶಗಳು ಸ್ತ್ರೀಯರಿಗೆ ದೊರಕದ ಸಾಮಾಜಿಕ ಸ್ಥಿತಿಯೂ ಒಂದು ಕಾರಣ. ವಯಸ್ಕ ಮತದಾನ ಪದ್ಧತಿ ಜನಾಭಿಪ್ರಾಯದ ಪ್ರಾಮಾಣಿಕತೆಯನ್ನು ಸ್ಪಷ್ಟಪಡಿಸುವುದಿಲ್ಲ ಎನ್ನುವುದಕ್ಕೆ ಈ ಉದಾಹರಣೆಗಳು.

ಅಕ್ಷರ ಜ್ಞಾನದಿಂದ ವಂಚಿತರು, ಅಂಧಶ್ರದ್ಧೆಯನ್ನು ನೆಚ್ಚಿಕೊಂಡವರು, ಜಾತೀಯತೆಯೇ ತಮ್ಮ ಅನನ್ಯತೆಗೆ ಅಗತ್ಯವೆಂದು ತಿಳಿದವರು, ದೇಶದ ಬಹುಸಂಖ್ಯಾತ ಕೃಷಿಕ ಸಮುದಾಯ ಇಂಥವರೆಲ್ಲ ನಮ್ಮ ವಯಸ್ಕ ಮತದಾನ ಪದ್ಧತಿಯ ಲಾಭ ಪಡೆದು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪೋಷಿಸಬೇಕು. ತಮಿಳುನಾಡಿನಲ್ಲಿ ಭಾಷೆಯೊಂದಿಗಿರುವ ಭಾವನಾತ್ಮಕ ಸಂಬಂಧ, ವಿಚಾರವನ್ನೂ ಮರೆಸುವಷ್ಟರಮಟ್ಟಿಗೆ ತೀಕ್ಷ್ಣವಾಗಿರಬಹುದೇ ಎಂಬ ಸಂದೇಹ ಬರುವಂತೆ ಸಿನೆಮಾ ಪ್ರಪಂಚದಲ್ಲಿರುವವರೂ ರಾಜಕಾರಣಿಗಳಾಗಿ, ಇಂಥವರನ್ನು ಆರಾಧಿಸುವ ರೀತಿಯ ವೈಚಾರಿಕತೆ ವಯಸ್ಕ ಮತದಾನ ಪದ್ಧತಿಯನ್ನು ಪೋಷಿಸಬೇಕಾದ ಪರಿಸರವನ್ನು ಸೃಷ್ಟಿಸಿದೆ. ಗುಜರಾತ್‌ನಲ್ಲೂ ಭಾಷಾಭಿಮಾನ ತಮಿಳುನಾಡಿನಂತೆಯೇ ಇದೆಯಾದರೂ ಜನರು ವ್ಯಾಪಾರದ ಕಡೆಗೆ ತೋರಿಸುತ್ತಲೇ ಬಂದ ಒಲವು, ಇತರರೊಂದಿಗೆ ಬೆರೆಯಲೇಬೇಕಾದ ಸಹಜ ಗುಣದಿಂದಾಗಿ ದೊರಕುವ ಲೋಕಾನುಭವ,

ಇವುಗಳಿಂದಾಗಿ ಸ್ತ್ರೀ ಶಿಕ್ಷಣ ಕಡಿಮೆಯೆನಿಸಿದರೂ ರಾಷ್ಟ್ರೀಯವೆನಿಸುವ ಎಚ್ಚರ ಜಾಗೃತವಾಗಿದೆಯೆಂದು ತೋರುವ ವಿದ್ಯಾರ್ಥಿಗಳ ನವ ನಿರ್ಮಾಣ ಚಳವಳಿವನ್ನು ನೆನಪಿಗೆ ತರುವಂತಿದೆ. ಇನ್ನು ರಾಜಸ್ಥಾನ, ಶೈಕ್ಷಣಿಕವಾಗಿಯೂ ಹಿಂದುಳಿದ ರಾಜ್ಯ. ಹಿಂದೀ ಪ್ರದೇಶವಾದರೂ ಪತ್ರಿಕೆಗಳ ಓದು ಕೂಡ ಅಪೇಕ್ಷಿತ ಪ್ರಮಾಣದಲ್ಲಿಲ್ಲ. ಇಲ್ಲಿರುವ ಅಂಧಶ್ರದ್ಧೆಯ ನಿದರ್ಶನವಾಗಿ ರೂಪ ಕನ್ವರ್‌ಳ ಸಹಗಮನದ ಸನ್ನಿವೇಶವನ್ನು ನಾವು ನೆನಪಿಸಿಕೊಳ್ಳಬಹುದು. ಕೆಲವು ವರ್ಷಗಳ ಹಿಂದೆ ರಾಜಸ್ಥಾನದ ಒಂದು ಪ್ರಮುಖ ಪತ್ರಿಕೆಯ ಮುಂಬಯಿ ಪ್ರತಿನಿಧಿಯೊಂದಿಗೆ ನಾನು ಮಾತನಾಡುತ್ತಿದ್ದಾಗ ಅವರು ಪ್ರತಿನಿಧಿಸುತ್ತಿದ್ದ ಜೈಪುರದ ಪತ್ರಿಕೆಯ ಪ್ರಸಾರ ಸಂಖ್ಯೆ ಅರ್ಧಲಕ್ಷ ಮಾತ್ರ ಎಂದು ಹೇಳಿದ್ದು ನೆನಪಾಗುತ್ತಿದೆ.

ಕೆಲವು ಉದಾಹರಣೆಗಳಿಂದ ವ್ಯಕ್ತವಾಗುವ ಒಂದು ಸತ್ಯ ನಮ್ಮ ಮತದಾನ ವ್ಯವಸ್ಥೆಯಲ್ಲಿ ವಯಸ್ಕ ಮತದಾನ ಪದ್ಧತಿಗೂ ಸಮಾಜಕ್ಕೆ, ರಾಜ್ಯಕ್ಕೆ ದೇಶಕ್ಕೆ ಸಂಬಂಧವಿರುವ ಸಮಸ್ಯೆಗಳ ಕುರಿತು ಪ್ರಾಮಾಣಿಕ ಅಭಿಪ್ರಾಯ ನಿರ್ವಹಣೆಗೂ ಸಂಬಂಧವಿರಬೇಕಾದ ಸಾಕ್ಷರತೆ ನಿರೀಕ್ಷಿತ ಪ್ರಮಾಣದಲ್ಲಿರದಿರುವುದರಿಂದ ಪರಿಸರದ, ಅದರಲ್ಲೂ ಅಜ್ಞಾನದ, ಪ್ರಭಾವವೇ ಮತದಾರರ ಮೇಲೆ ಬೀಳುವುದು ಹೆಚ್ಚು. ಸ್ತ್ರೀಯರಿಗೆ ಸ್ವಾತಂತ್ರ್ಯವೇ ಇಲ್ಲವೆನ್ನುವಷ್ಟರ ಮಟ್ಟಿಗೆ ಶಿಕ್ಷಣದ ಕೊರತೆ ಎದ್ದು ಕಾಣುತ್ತದೆ. ಶಿಕ್ಷಣದ ಸಂಸ್ಕಾರವೇ ತೀರ ಕಡಮೆ ಎನಿಸುವ ಉತ್ತರ ಪ್ರದೇಶ, ಬಿಹಾರ ರಾಜ್ಯಗಳಲ್ಲಿ ಸ್ವಾತಂತ್ರ್ಯ ಪೂರ್ವದ ಸ್ಥಾಪಿತ ಹಿತಗಳದೇ ಪರಿಸರವನ್ನು ನಿರ್ದೇಶಿಸುತ್ತಿರುವುದರಿಂದ ಅಪರಾಧ ಪ್ರವೃತ್ತಿ, ಹಿಂಸೆ, ಕೊಲೆ, ಸುಲಿಗೆಗಳು ಅನಿಯಂತ್ರಿತ ರೀತಿಯಲ್ಲಿ ಬೆಳೆಯುತ್ತಲೇ ಇರುವುದನ್ನೂ ನಾವು ನೋಡುತ್ತಿದ್ದೇವೆ.

ವಿಶ್ವದಾದ್ಯಂತ ಎರಡನೆಯ ಮಹಾಯುದ್ಧದ ನಂತರದ ರಾಜಕೀಯ ಸ್ಥಿತ್ಯಂತರಗಳಲ್ಲಿ ಮುಖ್ಯವಾಗಿ ಆಫ್ರಿಕಾ ಭೂಖಂಡವೂ ಸೇರಿದಂತೆ, ಪ್ರಜಾಪ್ರಭುತ್ವ ನೆಲೆಗೊಳ್ಳಲು ಸೋತ ಹಲವಾರು ನಿದರ್ಶನಗಳನ್ನು ನಾವು ಕಂಡಿದ್ದೇವೆ. 'ಪ್ರಜಾಪ್ರಭುತ್ವ'ದಲ್ಲಿ ಹುಳುಕುಗಳಿಲ್ಲವೆಂದಲ್ಲ. ಆದರೆ ಇತರ ರಾಜ್ಯ ವ್ಯವಸ್ಥೆಗಳಿಗಿಂತ ಅದು ಮೇಲು ಎಂಬ ತಿಳಿವಳಿಕೆ ಬಳಕೆಯಲ್ಲಿದೆ. ಸಾಕ್ಷರತೆಯನ್ನು ಅಪೇಕ್ಷಿತ ಪ್ರಮಾಣದಲ್ಲಿ ಕಳೆದ ೫೦ ವರ್ಷಗಳಲ್ಲೂ ಸಾಧಿಸಲಾಗದೆ, ದಾರಿದ್ರ್ಯ ರೇಖೆಯಿಂದ ಕೆಳಗಿರುವವರ ಸಂಖ್ಯೆ ಭಯ ಹುಟ್ಟಿಸುವಂತಿರುವಾಗ, ಎಲ್ಲಕ್ಕೂ ಹೆಚ್ಚು ವಿಭಿನ್ನ ಭಾಷೆ, ಜೀವನ ಕ್ರಮ, ಭಾವನಾತ್ಮಕತೆ, ರಾಷ್ಟ್ರದ ಕುರಿತು ಅಭಿಮಾನ ಮೂಡಲು ಸಹಕರಿಸದ ಸಾಮಾಜಿಕ ಅನಿಷ್ಟಗಳೆನಿಸುವ ಜಾತೀಯತೆ, ಶಿಷ್ಟ ಪರಿಶಿಷ್ಟ ಜಾತಿಗಳೊಳಗೆ ಸ್ವಾಭಿಮಾನ, ಅಭಿವೃದ್ಧಿಗಳ ನೆಪದಿಂದ ನಡೆಯುತ್ತಲೇ ಇರುವ ತಿಕ್ಕಾಟ, ಆಧುನೀಕರಣದ ಪ್ರಕ್ರಿಯೆಯಲ್ಲಿ ಬೆಳೆಯುತ್ತಲೇ ಇರುವ ಸಾಮಾಜಿಕ ಅಂತರ ಹಾಗೂ ವರ್ಗ ಪ್ರಜ್ಞೆ, ಪ್ರತಿಶತ ೭೫ರಷ್ಟು ಕೃಷಿಕರೇ ಇರುವ

---

## ಪುರುಷೋತ್ತಮರು ! *

ಇಂಡಿಯಾ ಖಂಡ ಮಧ್ಯ ದೇಶ
ಕಲ್ಲು ಕ್ವಾರಿಯ ಒಡೆಯ
ಕಲ್ಲೇ ಮೃದುವೆಂಬ ಹೃದಯೇಶಾ.

ಬಂಡೆ ಸೀಳುವ ಕೈಯ್ಯ ಚೆಂಡನಾಡುವ
ಕೋದಂಡ ಸವಿಯ ಉಂಡವರು
ಕ್ವಾರಿಯ ಕಡಿದು ಕಲ್ಲನು ಒಡೆದು
ಒಡೆಯನ ನೆಣವ ಕೊಬ್ಬಿಸಿದವರು
ಇವರ ಮೂಳೆ ಹಂದರ
ಗಾಜಿನ ಗೂಡಿನಲಿ ಬಹಳ ಸುಂದರ!

ಹಸಿದೊಡಲ ಮಕ್ಕಳು ಮಡದಿಗಾಗಿ
ಗೋಗರೆದದ್ದು ಒಂದಿಷ್ಟು ಹೆಚ್ಚು ಕೂಲಿ
ನನಗೂ ಉಳಿಯುವುದು ಒಂದೆರಡೇ
ತುತ್ತೆಂದು ಒಡೆಯ ಮಾಡಿದನು ಗೇಲಿ.
ಹೆಚ್ಚು ಕೂಲಿ ಕೊಡುವ ಒಡೆಯನ
ಕ್ವಾರಿಗೆ ಹೋಗುವೆವು ಎಂದಾಡಿದರು.
ಏರಿತು ಸಿಟ್ಟು, ಕೆಕ್ಕರಿಸಿದ ಕಣ್ಣು
ಮಿರಿಮಿರಿ ಮಚ್ಚನು ತಂದು
ಕೊಚ್ಚಿದನೊಬ್ಬನ ಮುಂಗೈ
ಚಿಮ್ಮಿತು ರಕ್ತ, ಗುಡುಗಿದನುನ್ಮತ್ತ :
ನೀವು ದುಡಿದರೆ ನನ್ನ ಕ್ವಾರಿಯಲ್ಲೇ
ಹೋಗುವಿರಿ ಮತ್ತೆಲ್ಲಿ? ಉದ್ಧಟರಾದರೆ
ಉಳಿದವರಿಗೂ ಇದೇ ಶಾಸ್ತಿ.

ಕಂಗಾಲಾದ ಕಲ್ಲುಕುಟಿಕರು ಕ್ವಾರಿಯ ಬಿಟ್ಟು
ರಾತ್ರೋರಾತ್ರಿ ಕಂಬಿಯ ಕಿತ್ತರು
ಹಿಡಿದರು ಮರ್ಯಾದಾ ಪುರೊಷೋತ್ತಮನು
ನಡದಾಡಿದ ಕಾಡಿನ ಜಾಡನ್ನ
ಬಗಲಲಿ ಮಕ್ಕಳು, ಹೆಗಲಲಿ ಪಾತ್ರೆ
ಪಡಗದ ಗಂಟು ; ಒಡಲಗ್ನಿಯ ಕುಂಡ
ದಂಡಕಾರಣ್ಯದಲಿ ಅಲೆದಲೆದು
ಬಾಯಾರಿ ಬಸವಳಿದ ಹೃದಯಕ್ಕೆ
ನರ್ಮದೆಯ ಜುಳುಜುಳು ನಾದದ ಪುಳಕ
ಪುರುಷೋತ್ತಮನ ಪಾದಸ್ಪರ್ಶ ಪುನೀತ
ವನರಾಜಿ ಖಗ ಮೃಗ ನರ್ಮದೆಯ ಜಲಚರ
ಬಕುಲ ಕೇದಿಗೆ ಪುಷ್ಪ ಪರಿಮಳದ ತಂಗಾಳಿ
ತನು ಮನ ತಣಿಸಿದ ಮನುಜೋತ್ತಮನ ನಾಡಿನಲ್ಲಿ
ಜೀವ ಜಲಕಾಗಿ ನಡದು
ಒಂದೆರಡುಮೂರು ದಿನ ಅಲೆದು
ಗಂಟಲು ಒಣಗಿ, ಹೊಟ್ಟೆ ಬೆನ್ನಿಗೆ ಹತ್ತಿ, ಒತ್ತಿ ತಿದಿ
ನಾಲ್ಕಾರು ಎಳೆ ಹೃದಯಗಳು ಸ್ತಬ್ಧ
ಉಳಿದವರು ನಿಶಬ್ದ.

ತೆವಳಿ ದಡದ ಊರೊಂದು ಸೇರಿ
ಮರದಡಿ ಮರಣನಿದ್ದೆಯ ಮಂಪರಿನಲ್ಲಿ
ತೆರದ ಅರೆಗಣ್ಣು ಕಂಡದ್ದು
ಬೂಟುಗಾಲಿನ ಒದೆತ
ನವ ಪುರುಷೋತ್ತಮರ ಕಾರುಣ್ಯ ಲೀಲೆ
ಪಾಮರರಿಗಿನ್ನೆಲ್ಲಿ ಜಗದ ಜಂಜಾಟ?

ಕಾಡಿನಲಿ ಕ್ವಾರಿಯಲಿ ಎಲುಬಿನವಶೇಷ
ಸಂಶೋಧಕರಿಗೆ ಗ್ರಾಸ
ಜೀತ ಜೀವಿಗಳ ಪಳೆಯುಳಿಕೆ
ನಳನಳಿಸುವುದು ಇತಿಹಾಸ ಪುಟಗಳಲ್ಲಿ
ಸಮಾನತೆಯ ಸಂಪುಟದಲ್ಲಿ.

**ಸತ್ಯನಾರಾಯಣರಾವ್ ಅಣತಿ**
'ರಚನಾ', ಶರಾವತಿ ನಗರ, ಹೊಸಮನೆ
ಚರ್ಚ್ ಪಕ್ಕ, ಶಿವಮೊಗ್ಗ - ೫೭೭ ೨೦೧

** ಮಧ್ಯಪ್ರದೇಶದಲ್ಲಿ ಸುಮಾರು ಎಂಟು ಹತ್ತು ವರ್ಷಗಳ ಹಿಂದೆ ನಡೆದ ಘಟನೆಯನ್ನು ಆಧರಿಸಿದ್ದು.*






ನಾಡಲ್ಲಿ ಬೇರೆಲ್ಲ ಭಿನ್ನತೆಗಳ ನಡುವೆ ನಗರ ಕೇಂದ್ರಿತ ಮಧ್ಯಮ ವರ್ಗ ಹಾಗೂ ಸಾಮಾನ್ಯವೆನಿಸುವ ಜೀವನ ಸ್ತರವನ್ನೂ ಹೆಚ್ಚಿಸಿಕೊಳ್ಳಲು ಸಾಧ್ಯವಾಗದಿರುವ ಕೃಷಿಕ ಸಮುದಾಯ, ಇವರ ನಡುವಿನ ಅಂತರ, ಸಾರ್ವತ್ರಿಕವಾಗಿ ರೂಪುಗೊಂಡಿರುವ ಲಂಚಗುಳಿತನ (ನಮ್ಮ ಜಾಗೃತ ದಳದ ಮುಖ್ಯಸ್ಥರು ತಿಳಿಸಿರುವಂತೆ ನಮ್ಮ ರಾಷ್ಟ್ರೀಯ ಉತ್ಪನ್ನದ ಪ್ರತಿಶತ ೪೦ರಷ್ಟು ಅನ್ಯಾಯದ ಕಪ್ಪು ಹಣ), ಭ್ರಷ್ಟಾಚಾರದಲ್ಲಿ ಮುಳುಗಿರುವ ರಾಜಕಾರಣಿಗಳು, ಇನ್ನು ಯಾವ ರೀತಿಯ ಜಾತಿ ಅಥವಾ ವರ್ಗ ಭೇದವೂ ಇರದಂತೆ ಇಡಿಯ ಸಮಾಜವನ್ನು ಎಲ್ಲ ರೀತಿಗಳಲ್ಲೂ ಶೋಷಿಸುವ ದಳ್ಳಾಳಿ ವರ್ಗ– ಹೀಗೆ ರೂಪುಗೊಂಡಿರುವ ಪರಿಸರ ಪ್ರಜಾಪ್ರಭುತ್ವದ ಪ್ರಜ್ಞೆ ನಿತ್ಯ ತಂದುಕೊಳ್ಳಬೇಕಾದ ಎಚ್ಚರವಾಗಿ ರಾಷ್ಟ್ರಾಭಿಮಾನವನ್ನು ಮೂಡಿಸಲು ಸಹಕಾರಿಯಲ್ಲವೆಂಬ ಅಂಶ ನಮಗಿನ್ನೂ ಸ್ಪಷ್ಟವಾಗಿಲ್ಲವೆಂಬುದು ಬೇಸರದ ಸಂಗತಿ. ಸಾಕ್ಷರತೆ ಪರಿಸರದ ಪ್ರಜ್ಞೆಯನ್ನು ವಿವೇಚಿಸಲು ಸಹಾಯ ಮಾಡುವಂತೆಯೇ ಸಾಮಾಜಿಕ ಚಿಂತನೆಗೂ ಕಾರಣವಾಗುತ್ತದೆ. ಆಧುನಿಕತೆಯ ಸ್ಪರ್ಶ ಸಾಧ್ಯವಾಗಿಸಿ ತನ್ನ ಮತ್ತು ಇತರರ ಸಂಬಂಧದ ಸಮೀಕರಣ ಹೇಗೆ ಸಾಧ್ಯ ಎಂಬ ಚಿಂತನೆಗೆ ಎಡೆಮಾಡಿಕೊಡುತ್ತದೆ. ತನ್ನ ಬದುಕನ್ನು ವಿಮರ್ಶಿಸಬೇಕು ಎಂಬ ತಿಳಿವಳಿಕೆಯನ್ನು ತಂದುಕೊಡುತ್ತದೆ. ತನ್ನ ಹುಟ್ಟೂರು, ತನ್ನ ಜಿಲ್ಲೆ, ತನ್ನ ರಾಜ್ಯ, ತನ್ನ ದೇಶ, ಇವುಗಳ ಸಂಬಂಧದ ಎಚ್ಚರವನ್ನು ತಂದುಕೊಡುವ ಮೂಲಕ ರಾಷ್ಟ್ರಾಭಿಮಾನ ಮೂಡಲು ಸಹಕರಿಸುತ್ತದೆ. ಈ ವಯಸ್ಕ ಮತದಾನ ಪದ್ಧತಿಯ ವಯಸ್ಸಿನ ಮಿತಿಯನ್ನು ನಾವು ಕೆಳಗಿಳಿಸುತ್ತ ದೇಶದ ಬಹ್ವಂಶ ಜನರಿಗೆ ಮತ ಚಲಾಯಿಸುವ ಅಧಿಕಾರವನ್ನು ಕೊಟ್ಟಿದ್ದೇವೆ ಎಂದು ಕೊಚ್ಚಿಕೊಳ್ಳಬಹುದು, ಆದರೆ ಇದು ಸಂಖ್ಯಾ ಪ್ರಮಾಣದ ಪ್ರಜಾಪ್ರಭುತ್ವವೆನಿಸುವುದೇ ಹೊರತು ಪ್ರಾಮಾಣಿಕ ಜನಾಭಿಪ್ರಾಯದ ಪರಿಸರದ ಪ್ರಜಾಪ್ರಭುತ್ವವೆನಿಸದು.

ಸಾಕ್ಷರತೆ ಕೂಡ ಅಂಕೆ ಸಂಖ್ಯೆಗಳ ಆಧಾರದಿಂದ ನಿರ್ಧರಿಸುವ ಪರಿಸ್ಥಿತಿ ಸ್ವಾತಂತ್ರ್ಯ ಬಂದು ೫೦ ವರ್ಷಗಳಾದಮೇಲೂ ಮುಂದುವರಿದಿದೆ. ರಾಷ್ಟ್ರಾಭಿಮಾನವನ್ನೂ ಭಾವೈಕ್ಯ ವನ್ನೂ ಮೂಡಿಸಬೇಕಾದ ಶಿಕ್ಷಣ ನೀತಿ ಯಾವಾಗ ಬರಬಹುದು ಎಂದು ಇನ್ನೂ ಕಾಯ ಬೇಕಾಗಿದೆ. ಇದರಿಂದಾಗಿ ಜಾತಿ ವ್ಯವಸ್ಥೆಯಿಂದ ದುರ್ಬಲವಾಗಿರುವ ಸಮಾಜದ ಎಲ್ಲ ನಾಗರಿಕರನ್ನು, ಹೆಚ್ಚಿನ ಕಡೆ ನಿಂತ ನೀರಂತಿರುವ ಪರಿಸರಕ್ಕೇ ಹೊಂದಿಕೊಂಡಿರು ವಂಥವರನ್ನು ವಿಶಿಷ್ಟ ಕಾಣಿಕೆಯಿಂದ ಸೆಳೆಯಬಲ್ಲ ನಾಯಕತ್ವಕ್ಕೂ ಬರಗಾಲ. ಇಂದು ನಾಯಕತ್ವ ಅಧಿಕಾರ ಗಳಿಕೆಯ, ತನ್ಮೂಲಕ ಆರ್ಥಿಕ ಲಾಭಗಳಿಸುವ, ಏಕೈಕ ಸಾಧನ ವೆಂಬ ತಿಳಿವಳಿಕೆಯೇ ಸಾರ್ವತ್ರಿಕವಾಗಿ ಹರಡಿ ನಾಯಕರಲ್ಲೇ ನಾವು ಅಪೇಕ್ಷಿಸುವ ಮುತ್ಸದ್ದಿತನ ದೂರದ ನಕ್ಷತ್ರ.

ನಮ್ಮ ಸ್ವಾತಂತ್ರ್ಯದ ಇತಿಹಾಸದಲ್ಲಿ ಶಿಕ್ಷಣವನ್ನು ಆರಂಭದಿಂದಲೂ ತುಸು ಉಪೇಕ್ಷೆಯ ದೃಷ್ಟಿಯಿಂದ ನೋಡಿ ನಮ್ಮ ಪಂಚವಾರ್ಷಿಕ ಯೋಜನೆಗಳಲ್ಲಿ ಸಾಕಷ್ಟು ಆರ್ಥಿಕ ಅನುಕೂಲತೆಗಳನ್ನು ಒದಗಿಸದಿರುವುದೂ ಈಗಿನ ಸ್ಥಿತಿಗೆ ಒಂದು ಕಾರಣ. ಈಗಲೂ ನಮ್ಮ ಕೇಂದ್ರ ಸರಕಾರದಲ್ಲಿ ಶಿಕ್ಷಣದ ಪ್ರಮುಖ ಖಾತೆಯನ್ನು ನಿರ್ವಹಿಸಬೇಕಾದ ಮಂತ್ರಿಯೇ ಇಲ್ಲವಲ್ಲ. ನಾವು ನಮ್ಮ ಚುನಾವಣೆಗಳಲ್ಲಿ ಪ್ರತಿಶತ ೫೦ಕ್ಕಿಂತ ಹೆಚ್ಚು ಸುಮಾರು ಪ್ರತಿಶತ ೮೦ರ ತನಕ ಮತದಾನವನ್ನು ಕಂಡಿದ್ದೇವೆ ಎಂಬ ಹೊಗಳಿಕೆಯ ಮಾತು ಸಂಖ್ಯೆಯ ದೃಷ್ಟಿಯಿಂದ ಹೆಮ್ಮೆಗೆ ಕಾರಣವಾಗಬಹುದು. ಆದರೆ ಇದರಲ್ಲಿ ತಿಳಿವಳಿಕೆಯ ಮತದಾನವೆಷ್ಟು, ಅಜ್ಞಾನದ ಮತದಾನವೆಷ್ಟು, ಕುಯುಕ್ತಿ ಕುಟಿಲ ನೀತಿಗಳಿಂದ ಆಗಿರುವ ಮತದಾನ ಎಷ್ಟು ಎಂಬ ಅಧ್ಯಯನ ಸಾಧ್ಯವಾಗುವಂತಿದ್ದರೆ ಇಂತಹ ಮತದಾನ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪೋಷಿಸುವಂಥದಲ್ಲ ಎಂದು ಸ್ಪಷ್ಟವಾದೀತು.

ನಮ್ಮ ಸಾಮಾಜಿಕ ಪರಿಸರದಲ್ಲಿ ಹುದುಗಿರುವ ಅಜ್ಞಾನ, ದಾರಿದ್ರ್ಯ, ನಿರಕ್ಷರತೆ, ದೀರ್ಘ ಕಾಲದಿಂದ ರೂಢಿಸಿಕೊಂಡಿರುವ ಮೂಢನಂಬಿಕೆಗಳು, ಭಾವನಾತ್ಮಕ ಪಾಶಬ್ದನೆಗಳು ಇವೆಲ್ಲವುಗಳ ಜತೆಗೆ ಆಧುನಿಕತೆ ತರುತ್ತಲೇ ಇರುವ ನಮ್ಮ ಜೀವನ ಶೈಲಿಯ ಬದಲಾವಣೆಗಳು, ಇನ್ನು ಮಧ್ಯಮ ವರ್ಗದ, ನಮ್ಮ ಪರಿಸರಕ್ಕೆ ವಿಕೃತವೆನಿಸುವ ಗ್ರಾಹಕ ಸಂಸ್ಕಾರಗಳು, ಇವೆಲ್ಲ ಬೇರೆ ರೀತಿಯ ಪರಿಸರಕ್ಕೂ ಕಾರಣವಾಗುತ್ತಿವೆ. ಇವು ನಮ್ಮ ನೈತಿಕ ಪ್ರಜ್ಞೆಯನ್ನೂ ತಟ್ಟಿ ವಿಕೃತ ಮೌಲ್ಯಗಳ ಹುಟ್ಟಿಗೂ ಕಾರಣವಾಗುತ್ತಿವೆ. ನಮ್ಮ ವ್ಯಕ್ತಿಗತ ಉತ್ಪನ್ನದ ಪ್ರತಿಶತ ೪೦ರಷ್ಟು ಭ್ರಷ್ಟಾಚಾರ ಮೂಲದ್ದು ಎಂಬ ಪರಿಸರ ಇಂದು ನಿರ್ಮಾಣವಾಗಿರುವುದರಿಂದ ಹಣವೇ ಎಲ್ಲ ನೈತಿಕತೆಯ ಮುಖ್ಯ ಸೂತ್ರ ಎನ್ನುವ ನಂಬಿಕೆ ಪ್ರಜಾಪ್ರಭುತ್ವವನ್ನು ಅದರ ನಿಜವಾದ ಅರ್ಥದಲ್ಲಿ ಪೋಷಿಸುವಂಥದಲ್ಲ.

ಆದರೆ ಈಗ ನಾವು ವಯಸ್ಕ ಮತದಾನ ಪದ್ಧತಿಯಿಂದ ಹಿಂದೆ ಸರಿಯುವುದೂ ಸಾಧ್ಯವಿಲ್ಲ. ಈಗ ವಯಸ್ಕ ಮತದಾನ ಪದ್ಧತಿಯನ್ನು ಪೋಷಿಸಬೇಕಾದ ಪರಿಸರವನ್ನು ಉಂಟುಮಾಡುವುದು ಹೇಗೆ ಎಂಬ ಚಿಂತನೆ ನಾಡಿನಾದ್ಯಂತ ನಡೆಯಬೇಕಾಗಿದೆ. ಇದಕ್ಕಾಗಿ ನಮ್ಮ ಪ್ರಜಾಪ್ರಭುತ್ವದ ಪ್ರಾತಿನಿಧ್ಯ ಕಾಯಿದೆಯಲ್ಲಿ ರಾಷ್ಟ್ರದ ಹಿತವನ್ನು ಮುಖ್ಯವಾಗಿರಿಸಿ ಆಗಬೇಕಾದ ತಿದ್ದುಪಡಿಗಳು ಹಲವಾರು. ಚುನಾವಣೆಯ ಕಣಕ್ಕಿಳಿಯುವವರಿಗೆ ಕನಿಷ್ಠ ಪಿ.ಯು.ಸಿ. ಮಟ್ಟದ ವಿದ್ಯಾರ್ಹತೆ, ಚುನಾವಣೆಯ ಸಂದರ್ಭದಲ್ಲಿ ತಮಗಿರುವ ಸೊತ್ತಿನ ದೃಢೀಕೃತ ಪ್ರಮಾಣ ಪತ್ರ, ಕ್ರಿಮಿನಲ್ ಆಪಾದನೆಗಳಿಂದ ಮುಕ್ತ, ಸಂತಾನ ಎರಡು ಮಕ್ಕಳಿಗಷ್ಟೆ ಸೀಮಿತ, ತಾನು ಜಾತೀಯತೆಯಿಂದ ದೂರವಿರುತ್ತೇನೆ, ಭ್ರಷ್ಟಾಚಾರವನ್ನು ಸಹಿಸುವುದಿಲ್ಲವೆಂಬ ದೃಢೀಕೃತ ಪ್ರಮಾಣ ಪತ್ರ ಇಂಥವೆಲ್ಲ ಇಂದಿನ ರಾಜಕೀಯ ಪರಿಸರವನ್ನು ಶುಚಿಗೊಳಿಸಿ ನ್ಯಾಯವೆನಿಸುವ ಮತದಾನಕ್ಕೆ ಕಾರಣವಾಗಬಹುದು. ಅಷ್ಟೇ ಅಲ್ಲದೆ ರಾಜ್ಯ ಹಾಗೂ ಕೇಂದ್ರದ ಮಂತ್ರಿ ಮಂಡಲಗಳಲ್ಲೂ ಪ್ರತಿನಿಧಿಗಳ ಸಂಖ್ಯೆಗನುಗುಣವಾಗಿಯೇ ಪ್ರತಿಶತ ಇಷ್ಟೇ ಮಂತ್ರಿಗಳಿರಬೇಕೆಂಬ ಸೂತ್ರವೂ ಅನುಷ್ಠಾನಕ್ಕೆ ಬರಬೇಕಾದ ಅಗತ್ಯವಿದೆ. ಎಲ್ಲಕ್ಕೂ ಹೆಚ್ಚು ನಮ್ಮ ಸಾಕ್ಷರತೆ ಮುಖ್ಯವಾಗಿ ನಮ್ಮ ಹಳ್ಳಿಗಳಲ್ಲಿ ಒಂದು ವಿಶಿಷ್ಟ ಜಾಗೃತಿಗೆ ಕಾರಣವಾಗುವಂತೆ ಹರಡಬೇಕು. ಇದಕ್ಕೆಲ್ಲ ಅಗತ್ಯವಿರುವ ರಾಜಕೀಯ ಸಂಕಲ್ಪಶಕ್ತಿ ಇಂದಿನ ರಾಜಕೀಯ ನಾಯಕರಿಗಿದೆಯೇ ಎಂಬುದು ಬೇರೆಯೇ ಮಾತು.

**ವ್ಯಾಸರಾಯ ಬಲ್ಲಾಳ**
ನಂ. ೧೦೬೪, 'ಉತ್ತರಾಯಣ', ಕುಮಾರಸ್ವಾಮಿ ಬಡಾವಣೆ
(ಬಿ.ಡಿ.ಎ. ಪಾರ್ಕ್ ಬಳಿ) ೧ನೇ ಹಂತ, ಬೆಂಗಳೂರು - ೫೬೦ ೦೭೮

# ರಾಷ್ಟ್ರೀಯ ಅರಣ್ಯ ನೀತಿ - ಕರ್ನಾಟಕದ ವಿಶೇಷ ಸನ್ನಿವೇಶ

ಅಜ್ಜಂಪುರ ಕೃಷ್ಣಸ್ವಾಮಿ

ಅರಣ್ಯಗಳು ಮಾನವನಿಗೆ ಪ್ರಕೃತಿಯ ಬಹು ಪುರಾತನ ಕೊಡುಗೆ. ಅವು ಕೋಟ್ಯಂತರ ವರುಷಗಳ ಸಾಧನೆ. ಈಗ ನಾವು ಕಾಣುವ ರೀತಿಯಲ್ಲಿ ಗಿಡಮರಗಳು, ಅರಣ್ಯಗಳು ರೂಪುಗೊಂಡೇ ಸುಮಾರು ಹತ್ತು ಕೋಟಿ ವರುಷಗಳು ಸಂದಿವೆ ಎಂದು ತಜ್ಞರ ಅಭಿಪ್ರಾಯ. ಈ ಕಾಲಮಾನದಲ್ಲಿ ಮಾನವ ತೀರ, ತೀರ ಈಚಿನವ. ಮರಗಳೇ ಮಾನವನ ಮೊದಲ ಮನೆ. ಗವಿಗಳ ಆಸರೆಯಲ್ಲಿ, ವನ್ಯ ಜೀವಿಗಳ ಬದುಕಿನೊಂದಿಗೆ ತನ್ನ ಬದುಕನ್ನು ಹಾಸುಹೊಕ್ಕಾಗಿ ಬೆಳೆಸಿಕೊಂಡು ಬಂದ ಮಾನವ ಇಂದು ತನಗೆ ಆಸರೆಕೊಟ್ಟ ಪ್ರಕೃತಿಯನ್ನೇ ಮರೆತು, ಅದನ್ನು ತನ್ನ ಸ್ವಾರ್ಥಕ್ಕಾಗಿ ವಿಧ ವಿಧವಾಗಿ ಉಪಕ್ರಮಿಸಿ ತನ್ನ ಇರವಿಗೇ ಕಂಟಕ ತಂದುಕೊಂಡಿದ್ದಾನೆ.

ಬೇಟೆಯಾಡಿ ಬದುಕು ಸಾಗಿಸುತ್ತಿದ್ದ ಮಾನವನಿಗೆ, ಕೆಲವು ಸಸ್ಯಗಳ ಬೀಜಗಳು ಉದುರಿ ಅವುಗಳ ಬೆಳೆಯಿಂದ ಕಾಳು ಸಿಕ್ಕು ತಾನು ಅದರಿಂದ ಆಹಾರ ದಕ್ಕಿಸಿಕೊಳ್ಳಬಹುದೆಂಬ ಅರಿವು ಮೂಡಿದಾಗ ಮಾನವನ ಕೃಷಿ ಜೀವನ ಅಂಕುರಗೊಂಡಿತು. ತಾನಿದ್ದೆಡೆ ಇರುವ ಗಿಡಗೆಂಟೆ, ಮರಗಳನ್ನು ಕಡಿದು, ಸುಟ್ಟು, ಬಯಲು ಮಾಡಿ, ನೆಲ ಅಗೆದು, ಬೀಜ ಬಿತ್ತಿ ಫಸಲು ರೂಢಿಸಿಕೊಂಡು ಆಹಾರ ಒದಗಿಸಿಕೊಳ್ಳುವುದು ಪ್ರಾರಂಭವಾಯಿತು. ಮೇಲಿಂದ ಮೇಲೆ ಅದೇ ಸ್ಥಳದಲ್ಲಿ ಬೆಳೆ ತೆಗೆದು ಆ ಸ್ಥಳದ ಫಲವತ್ತು ಕುಂದಿದಾಗ ಬೇರೆ ಕಡೆಗೆ ಚಲಿಸಿ, ಅಲ್ಲಿ ಮತ್ತೆ ಕಾಡು ಕಡಿದು, ಬೆಳೆ ಬೆಳೆದು ತನ್ನ ಬದುಕು ಸಾಗಿಸುವುದು ಅವನ ಪದ್ಧತಿಯಾಯಿತು. ಈ ರೀತಿಯ 'ಕದಲು ಬೇಸಾಯ' ಇಂದು ಅರಣ್ಯ ಸಂಪತ್ತಿಗೆ ಒಂದು ಮಾರಕವಾಗಿ, ಭಾರತದಲ್ಲಿಯೇ ಸುಮಾರು ೨೫ ಲಕ್ಷ ಜನರು ಈ ರೀತಿಯ ಕೃಷಿಯಲ್ಲಿ ತೊಡಗಿದ್ದು, ಎರಡು ಕೋಟಿ ಹೆಕ್ಟೇರುಗಳಷ್ಟು ಭೂ ಪ್ರದೇಶ ಭೂಸವೆತಕ್ಕೆ ಈಡಾಗುತ್ತಿದೆಯೆಂದು ಅಂದಾಜು ಮಾಡಲಾಗಿದೆ. ಭೂಸವೆತದಿಂದ ಜಲಾಶಯಗಳ ಹೂಳುಬೀಳುವಿಕೆ, ನೆರೆಹಾವಳಿ ಇವು ಪ್ರತಿ ಮಳೆಗಾಲದಲ್ಲಿ ನಾವು ಕಂಡು ಕೇಳಿಬರುತ್ತಿರುವ ಅನಿಷ್ಟಗಳಾಗಿವೆ. ಭಾರತದಲ್ಲಿಯೇ ವರ್ಷಂಪ್ರತಿ ಸುಮಾರು ೬೦ ಕೋಟಿ ಹೆಕ್ಟೇರುಗಳಷ್ಟು ಕೃಷಿಭೂಮಿ ಭೂಸವೆತದ ಪೀಡೆಗೆ ಒಳಪಟ್ಟು ಫಲವತ್ತು ಕುಂದಿ ಬೆಳೆಗಳಿಗೆ ಹಾನಿಯಾಗುತ್ತಿದೆ ಎಂದು ಕೃಷಿತಜ್ಞರ ಅಂದಾಜು.

ಭಾರತದಲ್ಲಿ ಅರಣ್ಯ ಸಂಪತ್ತು ವಿಶೇಷವಾಗಿದ್ದುದಕ್ಕೆ ಪೌರಾಣಿಕ ಹಾಗೂ ಐತಿಹಾಸಿಕ ಸಾಕ್ಷ್ಯಗಳಿವೆ. ವೇದ ಉಪನಿಷತ್ತುಗಳಲ್ಲಿ ಮತ್ತು ಪುರಾಣಗಳಲ್ಲಿ ಅನೇಕ ಮಹದಾರಣ್ಯಗಳ ವರ್ಣನೆಗಳಿದ್ದು, ಗೃಹ ನಿರ್ಮಾಣಕ್ಕೆ ಬೊಂಬು, ಭಾವಣೀ ಹುಲ್ಲು ಇತ್ಯಾದಿಗಳ ಬಳಕೆ, ಗೋಶಾಲೆ, ಮೇವಿನ ವಿಶಾಲ ಪ್ರದೇಶಗಳ ಬಗ್ಗೆ ಉಲ್ಲೇಖಗಳು ಕಂಡುಬರುತವೆ. ಐತಿಹಾಸಿಕವಾಗಿ, ಅಲೆಕ್ಸಾಂಡರನ ಭಾರತದ ದಂಡಯಾತ್ರೆಯ ಕಾಲದಲ್ಲಿ ಪಂಜಾಬು ಪ್ರದೇಶದಲ್ಲಿ ಅವನ ಅಪಾರವಾದ ಸೈನ್ಯದ ಚಲನೆಯೂ ಕಾಣದಷ್ಟು ದಟ್ಟವಾದ ಅರಣ್ಯಗಳಿದ್ದವೆಂದು ಏರಿಯನ್ ಎಂಬ ಚರಿತ್ರಕಾರನ ವರ್ಣನೆಯಿಂದ ತಿಳಿದುಬರುತ್ತದೆ. ಚಕ್ರವರ್ತಿ ಚಂದ್ರಗುಪ್ತನ ಕಾಲದಲ್ಲಿ (ಕ್ರಿ. ಪೂ. ೩೨೨-೨೯೮) 'ಗೋಪಿಕತ್ರಿ' ಎಂಬ ಅರಣ್ಯಾಧಿಕಾರಿಯು ರಾಜ್ಯದ ಮುಖ್ಯ ಅಧಿಕಾರಿಗಳಲ್ಲೊಬ್ಬನಾಗಿದ್ದನೆಂದು ಮೆಗಾಸ್ತನೀಸನ ವರ್ಣನೆಯಿದೆ. ಕೌಟಿಲ್ಯ, ಅಶೋಕ ಚಕ್ರವರ್ತಿ ಇವರುಗಳ ಕಾಲದಲ್ಲಿಯೇ ಅರಣ್ಯ ಸಂರಕ್ಷಣೆ, ಗಿಡ ಮರಗಳ ನೆಡುವಿಕೆ ಇವುಗಳ ಬಗ್ಗೆ ಗಮನಕೊಡಲಾಗುತ್ತಿತ್ತೆಂದೂ ಉಲ್ಲೇಖಗಳಿವೆ. ಮಧ್ಯ ಏಷಿಯಾ ಧಾಳಿಕಾರರಿಂದ ಹಾಗೂ ಅವರು ತಂದ ಜಾನುವಾರುಗಳಿಂದ ಅಪಾರ ಅರಣ್ಯ ನಾಶವಾಯಿತು. ನಂತರದಲ್ಲಿ, ಬ್ರಿಟಿಷ್ ಸಾಮ್ರಾಜ್ಯಶಾಹೀ ದಿನಗಳಲ್ಲಿ ಅವರ ನೌಕಾಪಡೆಗಳು ಬಲಗೊಳ್ಳಲು ಸಾಕಷ್ಟು ಅಮೂಲ್ಯ ವನಸಂಪತ್ತು ಬಳಸಲ್ಪಟ್ಟಿತು.

*ಕರ್ನಾಟಕವು ಭಾರತ ದೇಶದಲ್ಲಿ ವನಸಂಪತ್ತಿಗೆ ಮೇಲುಗೈಯಾಗಿದೆ. ಪಶ್ಚಿಮ ಘಟ್ಟಗಳ ನೈಸರ್ಗಿಕ ನಿತ್ಯ ಹರಿದ್ವರ್ಣದ ಅರಣ್ಯಗಳು ರಾಜ್ಯದ ಒಂದು ಅಪೂರ್ವ ಆಸ್ತಿ, ಮಳೆ ಬೆಳೆಗಳಿಗೆ ಆಧಾರ. ಪೂರ್ವಕ್ಕೆ ಹಾದಂತೆ ಉತ್ತಮ ಚೌಬೀನೆ ಕೊಡುವ ಅರೆ-ನಿತ್ಯ ಹರಿದ್ವರ್ಣ ಮತ್ತು ಉದುರೆಲೆ ಕಾಡುಗಳು ವ್ಯವಸ್ಥಿತವಾಗಿ ಬಳಸಲ್ಪಟ್ಟಾಗ ನಾಡಿನ ಅಭ್ಯುದಯದ ಅಕ್ಷಯ ಪಾತ್ರೆ; ಮತ್ತೂ ಪೂರ್ವದ ಶುಷ್ಕ ಪ್ರದೇಶಗಳ ಅರಣ್ಯಗಳು ಶ್ರೀಗಂಧದ ತೌರು. ಬೆಲೆಬಾಳುವ ಅರಣ್ಯ ಲಘು ಫಸಲುಗಳ ಭಂಡಾರ. ವನ್ಯಜೀವಿ ಸಂಪತ್ತಿನಲ್ಲಿಯೂ ಕರ್ನಾಟಕ ಮುಂಚೂಣಿಯಲ್ಲಿದ್ದು, ಈಗ ಅರಣ್ಯನಾಶದಿಂದ ಅವಕ್ಕೂ ಸಂಚಕಾರ.*

ಭಾರತದ ಭೂಭಾಗ ಪ್ರಪಂಚದ ಭೂಭಾಗದ ಶೇ. ೨.೪೭ರಷ್ಟು. ಅದರ ಅರಣ್ಯಗಳ ವಿಸ್ತೀರ್ಣ ಪ್ರಪಂಚದ ಒಟ್ಟು ಅರಣ್ಯಗಳ ಶೇ. ೧ ರಷ್ಟು ಮಾತ್ರ. ಆದರೆ, ಭಾರತದ ಜನಸಂಖ್ಯೆ ಪ್ರಪಂಚದ ಜನಸಂಖ್ಯೆಯ ಶೇ. ೧೬ ಕ್ಕೂ ಮಿಗಿಲಾಗಿದೆ. ದೇಶದ ಹಿತರಕ್ಷಣೆಗೆ ಅರಣ್ಯಗಳು ಭೂಭಾಗದ ಶೇ. ೩೩ ರಷ್ಟಾದರೂ ಇರಬೇಕೆಂಬುದು ತಜ್ಞರ ಅಭಿಪ್ರಾಯ. ಭಾರತದ ಅರಣ್ಯಗಳ ವಿಸ್ತೀರ್ಣ ಒಟ್ಟು ದೇಶದ ಭೂಭಾಗದ ಶೇ. ೨೩ ರಷ್ಟು. ಪ್ರಪಂಚದ ಇನ್ನಿತರ ಕೆಲವು ರಾಷ್ಟ್ರಗಳಿಗೆ ಹೋಲಿಸಿದರೆ (ಜಪಾನ್ ಶೇ. ೬೧, ಫಿನ್ಲ್ಯಾಂಡ್ ಶೇ. ೬೦, ಸ್ವೀಡನ್ ಶೇ. ೫೫, ರಷ್ಯಾ (ಮೊದಲಿನ) ಶೇ. ೩೯, ಅಮೆರಿಕ ಶೇ. ೩೦) ಇದು ತನ್ನ ಅವಶ್ಯಕತೆಗಳಿಗಿಂತಾ ಕಡಿಮೆಯಾಗಿದ್ದು ಇಂದು ಭಾರತದ ಅರಣ್ಯಗಳ ಮೇಲಿನ ಒತ್ತಡ ಎಷ್ಟು ಅಪಾರವಾಗಿರುತ್ತದೆ ಎಂಬುದು ಮನನವಾಗುತ್ತದೆ. ಆದಾಗ್ಯೂ, ಒಂದು ಸಮಾಧಾನದ ವಿಷಯವೇನೆಂದರೆ ವನಸಂಪದದ ದೃಷ್ಟಿಯಿಂದ ಭಾರತದ ಅರಣ್ಯಗಳು, ಅದರಲ್ಲಿಯೂ ಈಶಾನ್ಯ ಭಾಗಗಳ ಮತ್ತು ಪಶ್ಚಿಮ ಘಟ್ಟಗಳ ವನಶ್ರೇಣಿಗಳು ಸಂಪದ್ಭರಿತವಾದವುಗಳು.

ಹೀಗೆ, ಹಿಂದೊಮ್ಮೆ ಅಪಾರ ವನಸಂಪತ್ತಿನಿಂದ ಕೂಡಿದ್ದ ನಮ್ಮ ದೇಶ, ಪರಕೀಯರ ಧಾಳಿ ದುಷ್ಪಟ್ಟುಗಳಿಂದ ಸೊರಗಿ, ಬಯಲು ಬಂಜರುಗಳು ಮೂಡಿಬಂದವು. ಒಂದಿಗೇ ಬೆಳೆಯುತ್ತಿರುವ ಜನ ಜಾನುವಾರುಗಳ ಸಂಖ್ಯೆ. ಇದರ ಪರಿಣಾಮ ಹೆಚ್ಚು ಹೆಚ್ಚು ಅರಣ್ಯ ಫಸಲುಗಳಿಗೆ ಬೇಡಿಕೆ. ಹೆಚ್ಚು ಆಹಾರೋತ್ಪಾದನೆಗೆ ಕೃಷಿಭೂಮಿಗಳ ವಿಸ್ತರಣೆ. ನಾಗರಿಕತೆಯ ಕುರುಹಾಗಿ ಊರು ಪಟ್ಟಣಗಳ ಬೆಳವಣಿಗೆ. ದೇಶ ಸ್ವಾತಂತ್ರ್ಯ ಗಳಿಸಿಕೊಂಡ ತರುಣದಲ್ಲಿ ಎಲ್ಲ ಸಮಸ್ಯೆಗಳ ಏಕಕಾಲದ ಪರಿಹಾರಕ್ಕೆ ಉತ್ಸಾಹ. ಕೈಗಾರಿಕಾ ಬೆಳವಣಿಗೆ, ರಸ್ತೆ, ಸಾರಿಗೆಗಳ ಅನಿವಾರ್ಯತೆ, ನೀರಾವರಿ ಹಾಗೂ ವಿದ್ಯುಚ್ಛಕ್ತಿ ಇವುಗಳಿಗಾಗಿ ಜಲಾಶಯಗಳ ನಿರ್ಮಾಣ, ನಿರಾಶ್ರಿತರ ಪುನರ್ವಸತಿ ಇವು ಒಂದರ ಹಿಂದೆ ಒಂದರಂತೆ ಮೂಡಲು ಪ್ರಾರಂಭವಾದವು. ಆದರೆ ಇವೆಲ್ಲಕ್ಕೂ ಕಾಡು ಕಡಿದೇ ಜಾಗ. ಇದನ್ನು ಒದಗಿಸಲು ಎಲ್ಲರಿಗೂ ಆತುರ, ವನಪಾಲಕರೊಬ್ಬರನ್ನು ಉಳಿದು. ಕಾಡಿನ ನಾಶಕ್ಕೆ ಮಿತಿಯಿರಲಿ ಎಂದ ವನಪಾಲಕರಿಗೆ 'ಇವರು ಅಭಿವೃದ್ಧಿ ವಿರೋಧಕರು' ಎಂಬ ನಾಮಪಟ್ಟಿ. ಮಿತಿಮೀರಿದ ಅರಣ್ಯನಾಶದಿಂದ ಪ್ರಕೃತಿಯ ಸಮತೋಲನದ ಏರುಪೇರು. ಅತಿವೃಷ್ಟಿ ಇಲ್ಲವೇ ಅನಾವೃಷ್ಟಿ, ಪ್ರವಾಹ ಇಲ್ಲವೆ ಬರ. ವನ್ಯಜೀವಿಗಳು ಕಂಗಾಲಾಗಿ ಅವುಗಳಿಂದಲೂ ಮಾನವನಿಗೇ ಪೆಟ್ಟು. ಅವೂ ವಿಧ್ವಂಸದ ಹಾದಿಯಲ್ಲಿವೆ. ಜನ ಜಾನುವಾರುಗಳಿಗಂತೂ ಬತ್ತಿದ ಕೆರೆಕಟ್ಟೆಗಳು. ಅಂತರ್ಜಲಕ್ಕೂ ಧಕ್ಕೆ. ಈಗಂತೂ ಮರಕ್ಷಾಮ ಎಲ್ಲರ ಬಾಯಿಮಾತು.

ಅರಣ್ಯಗಳಿಂದ ತಂಪು ತನುವು. ಕಾಲ ಕಾಲಕ್ಕೆ ಮಳೆ

ಬೆಳೆ. ನೀರು, ಆಹಾರಗಳೊಂದಿಗೆ ಮಾನವನ ಬಾಳ್ವೆಗೆ ಅರಣ್ಯಗಳ ಉತ್ಪನ್ನಗಳೂ ಆಧಾರ. ಅವನ ದಿನನಿತ್ಯದ ಬದುಕಿಗೆ ಇವು ಅತ್ಯವಶ್ಯಕ. ಇವುಗಳಿಂದಲೇ ಮನೆಯ ಸೂರಿಗೆ ದಿಮ್ಮಿ, ಉರಿಸಲು ಕಟ್ಟಿಗೆ, ಬುಟ್ಟಿಗೆ ಬಿದಿರು, ಕೃಷಿಕರ ಗೊಬ್ಬರ, ದನಗಳ ಮೇವು. ಮಾನವ ಕಲ್ಯಾಣಕ್ಕಾಗಿಯೇ 'ಅರಣ್ಯನೀತಿಯ' ಪ್ರತಿಪಾದನೆ. ಅರಣ್ಯ ನಿರ್ವಹಣೆಯಲ್ಲಿ ಕಟ್ಟುಪಾಡುಗಳ ನಿರ್ಮಾಣ.




ಕೃಪೆ : ಟೈಂಸ್ ಆಫ್ ಇಂಡಿಯಾ

### ರಾಷ್ಟ್ರೀಯ ಅರಣ್ಯನೀತಿ

ಯಾವುದೇ ರಾಷ್ಟ್ರದ ಅರಣ್ಯನೀತಿಯನ್ನು ಆ ರಾಷ್ಟ್ರದ ಸಂಸ್ಕೃತಿ, ಚಾರಿತ್ರಿಕ ಹಿನ್ನೆಲೆ, ವನಸಂಪತ್ತು ಇವುಗಳನ್ನು ಗಮನದಲ್ಲಿಟ್ಟುಕೊಂಡು, ಆ ರಾಷ್ಟ್ರದ ಒಟ್ಟಾರೆ ಹಿತರಕ್ಷಣೆ ಮತ್ತು ಅದರ ಜನತೆಯ ಬೇಕು ಬೇಡಗಳ ಮೇಲೆ ರೂಪಿಸಬೇಕಾಗುತ್ತದೆ. ಭಾರತವು ಕೃಷಿ ಪ್ರಾಧಾನ್ಯ ದೇಶ. ಬಹುಕಾಲದವರೆವಿಗೂ ಶೇ. ೮೦ ರಷ್ಟು ಮಂದಿ ಗ್ರಾಮೀಣ ಪ್ರದೇಶಗಳಲ್ಲಿಯೇ ಬದುಕು ಸಾಗಿಸುವರಾಗಿದ್ದರು. ಈಚಿನ ಕೈಗಾರಿಕಾ ಬೆಳವಣಿಗೆಯ ದಿನಗಳಲ್ಲಿ ನಗರಗಳು ವ್ಯಾಪಾರ ಮತ್ತು ಉದ್ಯೋಗ ಕೇಂದ್ರಗಳಾಗಿ ಉದ್ಯೋಗ ನಿಮಿತ್ತ ಅನೇಕ ಗ್ರಾಮಸ್ಥರು ಅಲ್ಲಿಗೆ ಧಾವಿಸುವುದು ಕಂಡುಬರುತ್ತಿದೆ. ಆದಾಗ್ಯೂ ಮೂಲತಃ ಗ್ರಾಮೀಣರು ಅವರ ದಿನನಿತ್ಯದ ಅವಶ್ಯಕತೆಗಳಿಗೆ ಅರಣ್ಯಗಳ ಮೇಲೆಯೇ ಅವಲಂಬಿತರಾಗಿರುತ್ತಾರೆ.

ಭಾರತದಲ್ಲಿ ವೈಜ್ಞಾನಿಕ ಅರಣ್ಯ ನಿರ್ವಹಣೆ ಪ್ರಾರಂಭವಾದದ್ದು ಸುಮಾರು ೧೮೬೪ರಲ್ಲಿ. ಸಾಂಪ್ರದಾಯಿಕ ಮೊದಲನೆಯ ಅರಣ್ಯ ನೀತಿ ರೂಪಿತವಾದದ್ದು ೧೮೯೪ರಲ್ಲಿ. ಇದರ ಕರ್ತೃ ಡಾ॥ ವೊಯಿಲ್ಕರ್ ಎಂಬ ಜರ್ಮನ್ ತಜ್ಞ. ಆಗಿದ್ದ ಪರಿಸ್ಥಿತಿಯಂತೆ ಅರಣ್ಯಗಳೂ ಸಂಪದ್ಭರಿತವಾಗಿದ್ದು, ಬೇಡಿಕೆಗಳೂ ಹೆಚ್ಚಿಲ್ಲದೆ ಈ 'ಅರಣ್ಯ ನೀತಿ' ಯ ಒಲವು ಅರಣ್ಯ ರಕ್ಷಣೆಗಿಂತ ಜನಗಳ ಅವಶ್ಯಕತೆಗಳಿಗೆ ಮತ್ತು ಕೃಷಿಗೆ ಆದ್ಯತೆ ಕೊಡುವಂತಹುದಾಗಿತ್ತು.

ಈ ಅರಣ್ಯ ನೀತಿಯ ಮುಖ್ಯಾಂಶಗಳು :

೧. ದೇಶದ ಅರಣ್ಯಗಳನ್ನು ಒಟ್ಟಾರೆ ಸಾರ್ವಜನಿಕ ಹಿತದೃಷ್ಟಿಯಿಂದ ನಿರ್ವಹಿಸಬೇಕಾಗಿದ್ದು, ನಿರ್ವಹಣೆಯು ಅರಣ್ಯ ಪ್ರದೇಶಗಳಲ್ಲಿಯೇ ವಾಸಿಸುತ್ತಿದ್ದು, ಅವುಗಳ ಮೇಲೆಯೇ ಅವಲಂಬಿತರಾದ ಜನತೆಯ ಹಕ್ಕು ಬಾಧ್ಯತೆಗಳ ನಿಯಂತ್ರಣವನ್ನು ಒಳಗೊಂಡಿರಬೇಕು;

೨. ದೇಶದ ಹವಾಗುಣ ಮತ್ತು ಭೌತಿಕ ಸ್ಥಿತಿಗಳ ರಕ್ಷಣೆಗಾಗಿ ಬೆಟ್ಟ ಗುಡ್ಡಗಳಲ್ಲಿನ ಅರಣ್ಯಗಳನ್ನು 'ರಕ್ಷಿತ ಅರಣ್ಯ' ಗಳಂತೆ ನಿರ್ವಹಿಸುವುದು;

೩. ಅಮೂಲ್ಯ ಚೌಬೀನೆಗಳ ಅರಣ್ಯಭಾಗಗಳನ್ನು ವಾಣಿಜ್ಯ ದೃಷ್ಟಿಯಿಂದ ನಿರ್ವಹಿಸುವುದು;

೪. ಕೆಳದರ್ಜೆಯ ಅರಣ್ಯಗಳನ್ನು ಸ್ಥಳದ ಜನತೆಗೆ ಅನುಕೂಲವಾಗುವಂತೆ ಚೌಬೀನೆ, ಸೌದೆ, ಸೊಪ್ಪು, ಜಾನುವಾರುಗಳ ಮೇವು ಇವುಗಳಿಗೆ ಮೀಸಲಾಗಿಟ್ಟು, ಆದರೆ ಅವುಗಳು ನಿರ್ನಾಮವಾಗದಂತೆ ನಿರ್ವಹಿಸುವುದು;

೫. ಕೃಷಿಯ ಬೆಳವಣಿಗೆಗಾಗಿ ಅರಣ್ಯಗಳನ್ನು ಬಿಟ್ಟುಕೊಡಬೇಕಾದಲ್ಲಿ, ಅವು ತುಕಡಿ ತುಕಡಿಯಾಗದಂತೆ ಹಾಗೂ ಉಳಿದ ಅರಣ್ಯ ಭಾಗಗಳ ಒತ್ತುವರಿಯಾಗದಂತೆ ಯಾವ ಶಂಕೆಯೂ ಇಲ್ಲದಂತೆ ಬಿಟ್ಟುಕೊಡುವುದು.

ನಂತರದಲ್ಲಿ ಜರುಗಿದ ಎರಡೂ ಮಹಾಯುದ್ಧಗಳ ಪರಿಣಾಮವಾಗಿ ಭಾರತದ ಅರಣ್ಯಗಳ ಮೇಲೆ ಹೆಚ್ಚಿನ ಒತ್ತಡ ಬಿದ್ದು ಅರಣ್ಯಗಳ ಗುಣಮಟ್ಟ ಇಳಿಯುವಂತಾಯಿತು. ಇಂತಹ ಬದಲಾದ ಪರಿಸ್ಥಿತಿಯಲ್ಲಿ, ದೇಶದ ಆರು ಅವಶ್ಯಕತೆಗಳಿಗೆ ಅನುಗುಣವಾಗಿ ೧೯೫೨ರಲ್ಲಿ ಹೊಸ ಅರಣ್ಯ ನೀತಿಯು ರೂಪುಗೊಂಡಿತು. ಆ ಆರು ಅವಶ್ಯಕತೆಗಳು ಈ ಕೆಳಗಿನಂತಿದ್ದವು:

೧. ಅತ್ಯಧಿಕ ಉತ್ಪನ್ನ ಮತ್ತು ಅತಿ ಕನಿಷ್ಠ ಅವನತಿ ಇರುವಂತೆ ನಿಯಂತ್ರಿತವಾಗಿ ಭೂ ಉಪಯೋಗವನ್ನು ವಿಧಿಸುವುದು; ಅರಣ್ಯಗಳನ್ನು ಅವುಗಳ ಪಾತ್ರದ ಮೇಲೆ 'ರಕ್ಷಣಾ ಅರಣ್ಯ' 'ರಾಷ್ಟ್ರೀಯ ಅರಣ್ಯ', 'ಗ್ರಾಮೀಣ ಅರಣ್ಯ' ಇತ್ಯಾದಿಯಾಗಿ ವಿಂಗಡಿಸಿ, ಅರಣ್ಯಗಳಿಗೆ ಧಕ್ಕೆ ತರುವ ಇತಿಮಿತಿಯಿಲ್ಲದ ಕೃಷಿವಿಸ್ತರಣ, ಅತಿಮೇಯಾಟ ಇವಕ್ಕೆ ತಡೆಯಾಗುವಂತೆ ನಿಯಂತ್ರಣ;

೨. ಜಲಾಶಯ ಪ್ರದೇಶಗಳಿಗೆ ನೀರಿನ ಆಸರೆಯಾಗಿರುವ ಗಿರಿಪ್ರದೇಶಗಳ ಅರಣ್ಯಗಳ ರಕ್ಷಣೆ ಹಾಗೂ ಭೂಸವೆತದ ಹಾನಿಯನ್ನು ತಪ್ಪಿಸುವುದು;

೩. ಪರಿಸರ ಮೌಲ್ಯವನ್ನು ವೃದ್ಧಿಪಡಿಸಲು ವೃಕ್ಷ ಸಂಪತ್ತನ್ನು ಹೆಚ್ಚಿಸುವುದು;

೪. ಕಿರುದಿಮ್ಮಿ, ಉರುವಲು, ಜಾನುವಾರುಗಳಿಗೆ ಮೇವು, ಇವುಗಳನ್ನು ಒದಗಿಸಿ, ಉತ್ಕೃಷ್ಟ ದನದ ಗೊಬ್ಬರವನ್ನು ಉರಿಸಿ ವ್ಯಯಮಾಡುವುದನ್ನು ತಪ್ಪಿಸಿ ಅದನ್ನು ಗೊಬ್ಬರಕ್ಕಾಗಿಯೇ ಬಳಸುವಂತೆ ಮಾಡುವುದು;

೫. ರಾಷ್ಟ್ರ ರಕ್ಷಣೆ ಹಾಗೂ ಕೈಗಾರಿಕೆಗಳಿಗೆ ಬೇಕಾಗುವ ದಿಮ್ಮಿಗಳಿಗೆ ಸತತ ಸರಬರಾಜಿನ ವ್ಯವಸ್ಥೆ ಮಾಡುವುದು;

೬. ಈ ಎಲ್ಲ ಅವಶ್ಯಗಳಿಗೆ ಕುಂದಾಗದಂತೆ, ಅರಣ್ಯಗಳಿಂದ ಅಧಿಕತಮ ಆದಾಯವನ್ನು ಪಡೆಯುವುದು. ದೇಶದ ಹಿತ ಸಾಧಿಸಲು ಭೂಭಾಗದ ಶೇ. ೩೩ ರಷ್ಟು ಅರಣ್ಯಗಳ ವ್ಯಾಪನೆಯನ್ನು ಕಾಪಾಡಿಕೊಂಡುಬರುವುದು; ಇದಿಲ್ಲದ ಕಡೆ, ವನೀಕರಣದಿಂದ ಆದಷ್ಟೂ ಇದರ ಗುರಿ ಸಾಧಿಸುವುದು.

ದೇಶದ ಮತ್ತು ಜನತೆಯ ಹಿತದೃಷ್ಟಿಯಿಂದ ರೂಪಿಸಿದ್ದ ಈ ಅರಣ್ಯ ನೀತಿಯು, ರಾಜ್ಯಗಳ ಸರ್ವತೋಮುಖ ಬೆಳವಣಿಗೆಯ ಬಿರುಸಿನಲ್ಲಿ ನಿಗದಿತಗೊಂಡಂತೆ ಅನುಷ್ಠಾನಗೊಳಿಸಲ್ಪಡದೆ ಅರಣ್ಯಗಳು ಅವನತಿಗೊಳ್ಳುತ್ತಾ ಬಂದು ಮತ್ತೆ ೧೯೮೮ರಲ್ಲಿ ಪರಿಷ್ಕೃತ ಅರಣ್ಯನೀತಿಯು ನಿರ್ಮಾಣಗೊಂಡಿತು. ಅದರ ಮುಖ್ಯ ತತ್ವಗಳು ಈ ಕೆಳಗಿನಂತಿವೆ :

೧. ಅರಣ್ಯಗಳ ಸಂರಕ್ಷಣೆಯಿಂದ ಪರಿಸರವನ್ನು ಕಾಪಾಡಿಕೊಂಡುಬರುವುದು: 'ಜೀವಪರಿಸ್ಥಿತಿಯ ಸಮಸ್ಥಿತಿ'ಯನ್ನು (ecological balance) ಪುನರುದ್ಧಾರ ಮಾಡುವುದು;

೨. ವೈವಿಧ್ಯತೆಯ ಸಸ್ಯ ಹಾಗೂ ಪ್ರಾಣಿಸಂಪದದ ಅರಣ್ಯ ಭಾಗಗಳನ್ನು ಗುರ್ತಿಸಿ ಅಂತಹ ಪ್ರದೇಶಗಳ ಸಂಪೂರ್ಣ ರಕ್ಷಣೆಯಿಂದ 'ಜೈವಿಕ ವೈವಿಧ್ಯತೆ'ಗಳನ್ನೂ 'ವಂಶವಾಹಿ ಸಂಪತ್ತು'ಗಳನ್ನೂ ಉಳಿಸಲು ಕ್ರಮ ತೆಗೆದುಕೊಳ್ಳುವುದು;

೩. ಭೂಸವೆತದಿಂದ ನದಿ, ಕೆರೆಕಟ್ಟೆಗಳು ಮತ್ತು ಮಾನವ ನಿರ್ಮಿತ ಜಲಾಶಯಗಳು ಹೂಳುಬೀಳುವುದನ್ನು ತಡೆಯಲು. ಅವುಗಳ 'ಜಲಾನಯನ ಪ್ರದೇಶ'ಗಳಲ್ಲಿನ ಅರಣ್ಯಗಳನ್ನು ರಕ್ಷಿಸುವುದು; ಕಡಲತೀರದಲ್ಲಿ ಮರಳು ದಿಣ್ಣೆಗಳ ವಿಸ್ತರಣವನ್ನು ತಡೆಯುವುದು;

೪. ತ್ವರಿತಗತಿಯ ವನೀಕರಣ ಅನುಸರಿಸಿ ಅವನತಿಗೊಂಡ ಅರಣ್ಯ

ಭಾಗಗಳಲ್ಲಿಯೂ, ಬಯಲು ಬಂಜರುಗಳಲ್ಲಿಯೂ ಹಸಿರು ಎಬ್ಬಿಸುವುದು;

೫. ಗ್ರಾಮಸ್ಥರ ಮತ್ತು ಬುಡಕಟ್ಟಿನವರ ಕಿರುದಿಮ್ಮಿ, ಉರುವಲು, ಮೇವು ಇತ್ಯಾದಿ ಅವಶ್ಯಕತೆಗಳನ್ನು ಪೂರೈಸುವುದು;

೬. ಅರಣ್ಯಗಳ ಉತ್ಪನ್ನವನ್ನು ವ್ಯಯವಾಗದಂತೆ ಬಳಸಿ ದಾರುವಿನ ಪರ್ಯಾಯ ಪದಾರ್ಥಗಳ ಬಳಕೆಯನ್ನು ಹೆಚ್ಚಿಸುವುದು;

೭. ರಾಷ್ಟ್ರದ ಅರಣ್ಯಗಳ ಗುಣಮಟ್ಟವನ್ನು ಹೆಚ್ಚಿಸುವುದು;

೮. ಈ ಉದ್ದಿಶ್ಯಗಳನ್ನು ಸಾಧಿಸಲು ಮಹಿಳೆಯರೂ ಸೇರಿದಂತೆ ಜನತೆಯು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿ, ಪ್ರಜೆಗಳಲ್ಲಿ ಕ್ರಿಯಾತ್ಮಕ ಚಟುವಟಿಕೆಗಳನ್ನುಂಟುಮಾಡುವುದು.

ಒಟ್ಟಿನಲ್ಲಿ ಈ ಪರಿಷ್ಕರಣದ ಗುರಿ ಪ್ರಕೃತಿ ಪರಿಸರಗಳ ಪರಿಸ್ಥಿತಿ ತೀರ ಹದಗೆಡುವ ಮುನ್ನ 'ಪರಿಸರದ ಸ್ಥಿರತೆ', 'ಜೀವ ಪರಿಸ್ಥಿತಿಯ ಸಮತೋಲನ' ಮತ್ತು 'ವಾಯುಮಂಡಲದ ಸಮಸ್ಥಿತಿ' ಇವುಗಳನ್ನು ಸಾಧಿಸುವುದಾಗಿದೆ.

**ಕರ್ನಾಟಕದ ವಿಶೇಷ ಸನ್ನಿವೇಶ**

ಸ್ವಾತಂತ್ರ್ಯೋತ್ತರ ದಿನಗಳಲ್ಲಿ ನಾನಾ ಕಾರಣಗಳಿಂದ – ಸಕಾರಣಗಳಿಗೇ ಆದರೂ – ಇತರೆಡೆಗಳಲ್ಲಂತೆ, ಕರ್ನಾಟಕದ ಅರಣ್ಯಗಳಿಗೂ ಪೆಟ್ಟು. ಕಾದಿಟ್ಟ ಅರಣ್ಯಗಳ ಹೊರತಾದ ಇತರ ಸರ್ಕಾರೀ ಜಾಗಗಳಲ್ಲಿ, ಹೆಚ್ಚಾಗಿ ಡಿಸ್ಟ್ರಿಕ್ಟ್ ಫಾರೆಸ್ಟ್‌ಗಳಲ್ಲಿ ಆಹಾರೋತ್ಪಾದನೆಯ ಸೋಗಿನಲ್ಲಿ ಘನವಾದ ಮರಗಳ ನಿರ್ಮೂಲ. ಬದಲಿಗೆ ಅಲ್ಲಿ ಕೃಷಿವಿಸ್ತರಣೆ, ವಸತಿಗೊಂಡ ಜನತೆಯ ದಿನನಿತ್ಯದ ಅವಶ್ಯಕತೆಗಳಿಗೆ ಅಕ್ಕ ಪಕ್ಕದ ಕಾದಿಟ್ಟ ಅರಣ್ಯಗಳ ಮೇಲೆ ಒತ್ತಡ. ತತ್ಪರಿಣಾಮವಾಗಿ ಅವುಗಳ ಗುಣಮಟ್ಟದ ಇಳಿಮುಖ. ಜಲಾಶಯಗಳಿಗೆ, ರೈಲು ರಸ್ತೆ ಹಾಗೂ ಸಾರಿಗೆ ವ್ಯವಸ್ಥೆಗಳಿಗೆ, ಕೈಗಾರಿಕಾ ಬೆಳವಣಿಗೆಗಾಗಿ, ಪುನರ್ವಸತಿಗಾಗಿ, ಕೆಲವೆಡೆ ವನೀಕರಣಕ್ಕಾಗಿಯೂ ವೃಕ್ಷ ಭರಿತ ಪ್ರದೇಶಗಳ ಬಳಕೆ. ಇದು ೬೦-೭೦ ರ ದಶಕದಲ್ಲಿ ಮುಗಿಲೇರಿ, ೭೩-೭೪ರಲ್ಲಿ ಅರಣ್ಯ ರಕ್ಷಣೆಗೆ ಆಗಿದ್ದ ಕರ್ನಾಟಕ ಅರಣ್ಯಮಂತ್ರಿ ಕೆ. ಎಚ್. ಪಾಟೀಲರ ಕೆಚ್ಚೆದೆಯ ನಿಲುವು, ಮುಂದೆ 'ರಾಷ್ಟ್ರೀಯ ಅರಣ್ಯ ನೀತಿ' ಯ ಪರಿಷ್ಕರಣದಲ್ಲಿ ಪ್ರಭಾವ ಬೀರಿ, ಕರ್ನಾಟಕಕ್ಕೊಂದು ಶೋಭೆ ತಂದುಕೊಟ್ಟು, ಇಂದು ಪರಿಸ್ಥಿತಿ ಸ್ವಲ್ಪವಾದರೂ ಹದಕ್ಕೆ ಬಂದಿದೆ. ಆ ಕ್ರಮಗಳಲ್ಲಿ ಕೆಲವು ಗಮನೀಯವಾದವು ಈ ಕೆಳಗಿನಂತಿವೆ :

೧. ಅರಣ್ಯಾಭಿವೃದ್ಧಿ ಕಾರ್ಯಗಳಿಗಲ್ಲದೆ ಬೇರಾವ ಕಾರಣಗಳಿಗೂ ಅರಣ್ಯ ಪ್ರದೇಶಗಳನ್ನು ಬಿಟ್ಟುಕೊಡುವುದರ ನಿಷೇಧ. ಅನಿವಾರ್ಯವಾಗಿ ಹಾಗೆ ಬಿಟ್ಟುಕೊಡಬೇಕಾದರೆ, ಅದಕ್ಕೆ ಶಾಸನ ಸಭೆಯ ಎರಡೂ ಸದನಗಳ ಒಪ್ಪಿಗೆ ಪಡೆಯಬೇಕಾದುದು;



> ನಂಬಿಕೆಯನ್ನು ನಾವು ವಿಶೇಷ ಉತ್ಸಾಹದಿಂದ ಸ್ವೀಕರಿಸುತ್ತೇವೆ. ಅದು ಪ್ರಶ್ನಾತೀತವೆಂದೂ ಭಾವಿಸುತ್ತೇವೆ. ನಾವೇಕೆ ನಂಬಿಕೆಗಳನ್ನು ಸ್ವೀಕರಿಸುತ್ತೇವೆ ? ಅದರ ಉದ್ದೇಶವೇನು ? ಕಾರಣಗಳೇನು ? ಎನ್ನುವುದನ್ನು ನಾವು ಅರಿತರೆ, ನಂಬಿಕೆಯನ್ನು ಅರಿಯುವುದರ ಜೊತೆಗೆ ಅದರಿಂದ ಬಿಡುಗಡೆಯನ್ನೂ ಪಡೆಯುತ್ತೇವೆ.
>
> *– ಜೆ. ಕೃಷ್ಣಮೂರ್ತಿ*

೨. ಜನತೆಯ ಅನುಕೂಲಕ್ಕೆಂದು ಹಿಂದೆ ಮುಂಸಂದಾಯದ ಪರವಾನಿಗೆ ಪಡೆದು ಒಣ ಸೌದೆಯನ್ನು ಕಾಡಿನಿಂದ ನೇರವಾಗಿ ತಾವೇ ಜಮಾಯಿಸಿ ತರಬಹುದಿದ್ದ ಪದ್ಧತಿಯ ದುರ್ಬಳಕೆಯಾಗುತ್ತಿದ್ದು ಅದರ ರದ್ದುಪಡಿ;

೩. ಬದಲಾದ ಆರ್ಥಿಕ ಪರಿಸ್ಥಿತಿಯಲ್ಲಿಯೂ ಅರಣ್ಯ ಫಸಲುಗಳ, ಅದರಲ್ಲಿಯೂ ಕೈಗಾರಿಕೆಗಳಿಗೆ ಸರಬರಾಜಾಗುತ್ತಿದ್ದ ಚೌಬೀನೆ, ಬೊಂಬು ಇತ್ಯಾದಿಗಳ ತೆರುವಳಿ ದರಗಳು (Seigniorage value) ತೀರ ಕನಿಷ್ಠವಾಗಿದ್ದು, ಅವುಗಳ ಸೂಕ್ತ 'ಊರ್ಧ್ವ ಪರಿಷ್ಕರಣ';

೪. ಮರಬಂಡವಾಳದ (Growing stock) ಕ್ಷೀಣತೆಯಿಂದ, ನೆಡುತೋಪುಗಳ ನಿರ್ಮಾಣಕ್ಕೆ ಆಯ್ದ ಸ್ಥಳಗಳನ್ನು ಸಿದ್ಧಪಡಿಸುವಾಗ ಅನುಸರಿಸುತ್ತಿದ್ದ ಪೂರ್ಣ ಕಟಾವಿನ ಪದ್ಧತಿಯನ್ನು ಪರಿಸ್ಥಿತಿ ಉತ್ತಮಗೊಳ್ಳುವವರೆವಿಗೆ ರದ್ದುಪಡಿಸಿ, ಬೇರೆ ವಿಧಾನಗಳಿಂದ ಪುನರುತ್ಪನ್ನವನ್ನು ಸಾಧಿಸುವ ಕ್ರಮದ ಜಾರಿ;

೫. ಮರಬಂಡವಾಳವನ್ನು ಉತ್ತಮಗೊಳಿಸಲು, ಅರಣ್ಯಪ್ರದೇಶಗಳಿಂದ ನಿಂತ ಮರಗಳ ಕಟಾವನ್ನು ಪರಿಸ್ಥಿತಿ ಹದಗೊಳ್ಳುವವರೆವಿಗೆ ಸ್ಥಗಿತಗೊಳಿಸಿ, ಬದಲಿಗೆ ಒಣಗಿನಿಂತ ಹಾಗೂ ಬಿದ್ದಿರುವ ಮರಗಳನ್ನು ಮಾತ್ರ ಶುದ್ಧಪಡಿಸಿ ಮಾರಾಟಕ್ಕೆ ಒದಗಿಸುವ ಕ್ರಮ;

೬. ಅರಣ್ಯ ಫಸಲುಗಳ ಮೇಲೆ 'ಅರಣ್ಯಾಭಿವೃದ್ಧಿ ಶುಲ್ಕ'ವನ್ನು ವಿಧಿಸಿ, ಅರಣ್ಯಾಭಿವೃದ್ಧಿ ಕಾರ್ಯಗಳಿಗೆ ಮುಡುಪಾಗಿಡುವ ಕ್ರಮ.

ಇವುಗಳು ಇಡೀ ದೇಶಕ್ಕೇ ಮಾದರಿಯಾಗಿ, ೧೯೮೮ರ ಅರಣ್ಯ ನೀತಿಯ ಪರಿಷ್ಕರಣ ಸಮಯದಲ್ಲಿ ಸೂಕ್ತ ರೀತಿಯಲ್ಲಿ ಅನುಸರಿಸಲ್ಪಡುವಂತಾಯಿತು.

ಯೋಜನೆಗಳೇನೇ ಇರಲಿ ಅವುಗಳ ಅನುಷ್ಠಾನದಲ್ಲಿ ಕೊರತೆಯುಂಟಾದರೆ ಗುರಿ ಮುಟ್ಟಲಾಗುವುದಿಲ್ಲ. ಇದು ಆಡಳಿತದ ಗುರುತರವಾದ ಹೊಣೆ. ಎಡವಿದರೆ ಜನತೆಗೆ ಅಪಾರ ಹಾನಿ. ಅರಣ್ಯ ರಕ್ಷಣೆಯೂ ಸರ್ಕಾರದ ಹೊಣೆ. ಆದರೂ, ಪ್ರಜಾಪ್ರಭುತ್ವದ ಇಂದಿನ ದಿನಗಳಲ್ಲಿ, ಬರಿಯ ಕಾನೂನಿಂದಲೇ ಎಲ್ಲವನ್ನೂ ಸಾಧಿಸಲು ಆಗುವುದಿಲ್ಲ. ತಿಳಿವಳಿಕೆ ಹೊಂದಿರುವ ಇಂದಿನ ಜನತೆಯ ಪೂರ್ಣ ಸಹಕಾರ ಅದಕ್ಕೂ ಹೆಚ್ಚಾಗಿ ಅರಣ್ಯಾಭಿವೃದ್ಧಿ ಕಾರ್ಯಗಳಲ್ಲಿ ಅವರ ಸಕ್ರಿಯ ಪಾಲ್ಗೊಳ್ಳುವಿಕೆ, ಬಹು ಮುಖ್ಯವಾಗಿದ್ದು, ಪರಿಷ್ಕೃತ ಅರಣ್ಯ ನೀತಿಯಲ್ಲಿ 'ಜಂಟಿ ಅರಣ್ಯ ನಿರ್ವಹಣೆ' ಎಂಬ ತತ್ವದ ಮೇಲೆ ಇದಕ್ಕೆ ಅವಕಾಶ ಕೊಡಲಾಗಿದೆ. ಇದರಲ್ಲಿ ಸರ್ಕಾರ ಮತ್ತು ಜನತೆ ಎರಡೂ ಪೂರ್ಣ ವಿಶ್ವಾಸವಿಟ್ಟು ಕಾರ್ಯಸಾಧನೆಯಾದರೆ ಮಾತ್ರ ಫಲ ಕಂಡೇವು.

ಈ ವಿಶ್ಲೇಷಣೆ ಯಾವ ಸಂಸ್ಥೆಯನ್ನಾಗಲೀ, ವ್ಯಕ್ತಿಗಳನ್ನಾಗಲಿ ಟೀಕಿಸುವ ಉದ್ದಿಶ್ಯ ಹೊಂದಿಲ್ಲ. ಇಂದಿನ ಮತ್ತು ಮುಂದಿನ ಸಮಸ್ಯೆಗಳನ್ನು ಹಿಂದಿನ ಅನುಭವಗಳಿಂದ ತಿದ್ದಿಕೊಂಡು, ಯಾವುದೇ ಕಾರಣಗಳಿಗಾಗಿ 'ಅರಣ್ಯ ನೀತಿ' ಯನ್ನು ಸಡಿಲಗೊಳಿಸದೆ, ಒಟ್ಟಿನಲ್ಲಿ ಸರ್ಕಾರದ ನಿಷ್ಠೆ ಮತ್ತು ಸಾರ್ವಜನಿಕರ ಅವಿಚ್ಛಿನ್ನ ಸಹಕಾರಗಳೊಂದಿಗೆ ನಾಡು ಹಸಿರು ತುಂಬಿ, ವನಸಂಪತ್ತಿನಿಂದ ಮತ್ತೆ ಕಂಗೊಳಿಸುವುದೆಂದು ಆಶಿಸೋಣ.

ಅಜ್ಜಂಪುರ ಕೃಷ್ಣಸ್ವಾಮಿ
೭೪, ೩ನೇ ಮೈನ್, ಬಿ.ಎಚ್.ಸಿ.ಎಸ್. ಲೇಔಟ್
ಬನ್ನೇರುಘಟ್ಟ ರೋಡ್, ಬೆಂಗಳೂರು- ೫೬೦ ೦೭೬.

# ರಂಗಾಯಣ ಒಂದು ನೋಟ

- ಸತ್ಯ

**ವೃ**ತ್ತಿ ರಂಗಭೂಮಿಯ ವೃತ್ತಿ ನಿರಂತರತೆ ಹಾಗೂ ಹವ್ಯಾಸಿ ರಂಗಭೂಮಿಯ ಪ್ರಯೋಗಶೀಲತೆಯನ್ನು ಏಕಕಾಲದಲ್ಲಿ ಮೈಗೂಡಿಸಿಕೊಂಡು, ೧೯೭೦-೮೦ರ ದಶಕದ ಆಧುನಿಕ ರಂಗಭೂಮಿಯ ಉಚ್ಛ್ರಾಯ ಸ್ಥಿತಿಯನ್ನು ಮುಂದುವರೆಸುವ ನಿಟ್ಟಿನಲ್ಲಿ ಹಾಗೂ ನಟನೆಯಲ್ಲಿ ಶ್ರೇಷ್ಠತೆಯನ್ನು ಸಾಧಿಸುವ ಮಹತ್ವಾಕಾಂಕ್ಷೆಯಿಂದ ಕರ್ನಾಟಕ ಸರ್ಕಾರ ಸ್ಥಾಪಿಸಿದ ಸಂಸ್ಥೆ ನಾಟಕ ಕರ್ನಾಟಕ ರಂಗಾಯಣ.

ಈ ರಂಗಾಯಣದ ಕಲ್ಪನೆ ಕುಡಿಯೊಡೆದಿದ್ದು ಅಂತರರಾಷ್ಟ್ರೀಯ ಖ್ಯಾತಿಯ, ನಮ್ಮವರೇ ಆದ ಖ್ಯಾತ ರಂಗತಜ್ಞ ಶ್ರೀ ಬಿ. ವಿ. ಕಾರಂತರ ಮನದಲ್ಲಿ.

ರಂಗಭೂಮಿಯಲ್ಲಿ ಶ್ರೇಷ್ಠತೆಯನ್ನು ಸಾಧಿಸುವುದು, ಕರ್ನಾಟಕ ರಂಗಭೂಮಿ ಚಳುವಳಿಯನ್ನು ಬಲಪಡಿಸುವುದು; ಸುಸಜ್ಜಿತ ರಂಗಮಾಹಿತಿ ಕೇಂದ್ರವನ್ನೂ, ರಂಗಪುಸ್ತಕ ಭಂಡಾರವನ್ನೂ ಸ್ಥಾಪಿಸಿ ಬೆಳೆಸುವುದು; ಥಿಯೇಟರ್ ಮ್ಯೂಸಿಯಂ ಒಂದನ್ನು ಸ್ಥಾಪಿಸುವುದು; ರಂಗಭೂಮಿಯನ್ನು ಕುರಿತ ಸಂಶೋಧನಾ ಕೆಲಸಕ್ಕೆ ಪುಷ್ಟಿಕೊಡಲು ಅಧ್ಯಯನ ವೇತನ, ಸಂಶೋಧನಾ ವೇತನ ನೀಡುವುದು; ಮಕ್ಕಳಿಗೆ, ಶಾಲಾ ಕಾಲೇಜು ಅಧ್ಯಾಪಕ, ಅಧ್ಯಾಪಕಿಯರಿಗೆ ಹಾಗೂ ಇತರ ರಂಗಕರ್ಮಿಗಳಿಗೆ ಅಭಿನಯ ಹಾಗೂ ರಂಗಕಲೆಗೆ ಸಂಬಂಧಿಸಿದ ತಾಂತ್ರಿಕ ಕೆಲಸಗಳನ್ನು ಕುರಿತಂತೆ ಕಮ್ಮಟಗಳನ್ನು ನಡೆಸಿ ತರಬೇತಿ ನೀಡುವುದು, ಉನ್ನತಮಟ್ಟದ ರಂಗಪತ್ರಿಕೆಯೊಂದನ್ನು ಪ್ರಾರಂಭಿಸುವುದು..... ಇತ್ಯಾದಿಗಳ ಜೊತೆಗೆ ಮೈಸೂರಿನ ರಂಗಾಯಣದಂತೆ ಕರ್ನಾಟಕದ ಪ್ರಾದೇಶಿಕ ಸಂಸ್ಕೃತಿಯ ವೈಶಿಷ್ಟ್ಯಕ್ಕೆ ತಕ್ಕಂತೆ 'ಕರಾವಳಿ', 'ಮಲೆನಾಡು', 'ಬಯಲು ಸೀಮೆ' ಮತ್ತು 'ಬೆಂಗಳೂರು' ರಂಗಾಯಣಗಳನ್ನು ಸ್ಥಾಪಿಸುವುದು ನಾಟಕ ಕರ್ನಾಟಕ ರಂಗಾಯಣದ ಉದ್ದೇಶ ಮತ್ತು ಸಂಕಲ್ಪ ಆಗಿತ್ತು.

ಹೀಗೆ ಹಲವು ಹತ್ತು ಕನಸು, ಆಲೋಚನೆಗಳನ್ನು ತುಂಬಿಕೊಂಡಿದ್ದರೂ ಪ್ರಾರಂಭವಾದದ್ದು ಮೈಸೂರಿನ ರಂಗಾಯಣ ಮಾತ್ರ.

ಕಾರಂತರ ಕಲ್ಪನೆ ಆಲೋಚನೆಗಳನ್ನು ಸರ್ಕಾರ ಅದೆಷ್ಟು ಸರಿಯಾಗಿ ಅರ್ಥಮಾಡಿಕೊಂಡಿತ್ತೋ ಇಲ್ಲವೋ, ಅಂತೂ ಅಂದಿನ ಜನತಾದಳ ಸರ್ಕಾರ ೧೯೮೯ರ ಜನವರಿ ೧೪ರಂದು ಹಲವಾರು ಅಸ್ಪಷ್ಟತೆಗಳೊಂದಿಗೆ ರಂಗಾಯಣವನ್ನು ಪ್ರಾರಂಭಿಸಿಯೇಬಿಟ್ಟಿತು. ಕಾರಂತರೂ ತಮ್ಮ ಕಲ್ಪನೆಯನ್ನು ಸಾಕಾರಗೊಳಿಸಲು ಒಂದು ವರ್ಷದ ಕಾಲ ನಿರಂತರವಾಗಿ ಶ್ರಮಿಸಿ, ಹಲವಾರು ಸಂದರ್ಶನಗಳನ್ನು ಏರ್ಪಡಿಸಿ ಸುಮಾರು ೫೦೦ ಅಭ್ಯರ್ಥಿಗಳ ಪೈಕಿ, ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳ ೨೫ ಜನ ಕಲಾವಿದರನ್ನು ಆಯ್ಕೆ ಮಾಡಿದರು.

ಪ್ರತಿಯೊಬ್ಬನಲ್ಲೂ ಪ್ರತಿಭೆ ಎನ್ನುವುದು ಒಂದು ಕಚ್ಚಾ ವಸ್ತುವಾಗಿದ್ದು, ಅದು ಸೂಕ್ತ ತರಬೇತಿ ಮತ್ತು ನಿರಂತರ ಸಾಧನೆಯಿಂದ ಮಾತ್ರ ವಿಕಾಸಗೊಂಡು ಪ್ರಕಾಶಿಸಲು ಸಾಧ್ಯವೆಂದು ನಂಬಿದ್ದ ಶ್ರೀ ಬಿ. ವಿ. ಕಾರಂತರು ತಾವು ಆಯ್ಕೆ ಮಾಡಿದ ಅಭ್ಯರ್ಥಿಗಳಿಗೆ ದೇಶ, ವಿದೇಶಗಳ ಆಯ್ದ ರಂಗತಜ್ಞರಿಂದ ಅವಶ್ಯವಾದ ಎಲ್ಲಾ ತರಬೇತಿ ನೀಡಿ ಅವರನ್ನು ಸಮರ್ಥ ರಂಗಕಲಾವಿದರನ್ನಾಗಿಸಿದರು. ಈ ಕಲಾವಿದರಿಗೆ ಮಾಸಿಕ ೮೦೦, ೯೦೦, ೧೦೦೦ ರೂಪಾಯಿಗಳನ್ನು ಕ್ರಮವಾಗಿ ಮೂರು ವರ್ಷಗಳ ಕಾಲ ನೀಡಿದರು.

> *ನಮ್ಮ ಸಧ್ಯದ ಕೇಂದ್ರ ಸರ್ಕಾರಕ್ಕೆ ಸಂಸ್ಕೃತಿಯ ನೀತಿಯೊಂದಿದೆ. ಅದು ದೇಶದ ಹಿತಕ್ಕೆ ಮಾರಕವಾದ್ದು. ಮುರಳಿ ಮನೋಹರ ಜೋಶಿ ಮತ್ತು ಉಮಾ ಭಾರತಿ ಪ್ರಾತಿನಿಧ್ಯದ ಸಂಸ್ಕೃತಿ ಹಾಗಿರುವುದು ಸಹಜವೇ. ಅದಕ್ಕೆ ಪ್ರತಿಯಾಗಿ ನೈಜ ಜನಸಂಸ್ಕೃತಿಯೊಂದನ್ನು ಪೋಷಿಸಿ ವಿಕಾಸಗೊಳಿಸಬೇಕಾದ ಜವಾಬ್ದಾರಿ ಕರ್ನಾಟಕ ಸರ್ಕಾರಕ್ಕಿದೆ ಅಥವಾ ಇರಬೇಕು. ಆದರ ಪರಿವೆ ಇಲ್ಲದ ಸರ್ಕಾರ ನಮ್ಮದು. ಅಂತಹ ಪರ್ಯಾಯ ರಚಿಸುವ ಸಾಮರ್ಥ್ಯವಿರುವ ಒಂದು ಕಲಾಸಂಸ್ಥೆ 'ರಂಗಸಮಾಜ.' ಆದರೆ ಅದರ ರೆಕ್ಕೆಗಳನ್ನು ಬಲಿಯಲು ಬಿಡದ ಪರಿಸ್ಥಿತಿ ನಮ್ಮಲ್ಲಿದೆ. ಹೀಗಿರುವಾಗ ಸರಿಯಾದ ದಾರಿ ಯಾವುದು ?*

ಆದರೆ ಸರ್ಕಾರಕ್ಕೆ ರಂಗಾಯಣವನ್ನು ಪ್ರಾರಂಭಿಸುವಾಗ ಇದ್ದ ಉತ್ಸಾಹ ಕೇವಲ ಮೂರು ವರ್ಷಗಳಲ್ಲಿ ಇಲ್ಲವಾಯಿತು. 'ರೆಪರ್ಟರಿ' ಎಂದರೇನೆಂದೇ ಅರಿಯದ ಮಂತ್ರಿಗಳು, ಅಧಿಕಾರಿಗಳು ಆ ಪದದ ಅರ್ಥವ್ಯಾಪ್ತಿಯನ್ನು ಅರ್ಥ ಮಾಡಿಕೊಳ್ಳುವ ಮೊದಲೇ ಪದವಿಯಿಂದ ನಿರ್ಗಮಿಸುತ್ತಿದ್ದರು ! ಅವರ ಗ್ರಹಿಕೆಯ ಸಾಮರ್ಥ್ಯ ಅಷ್ಟು ಮೇಲ್ಮಟ್ಟದ್ದು ! ಸರ್ಕಾರ ಕಲಾವಿದರ ತರಬೇತಿ ಮತ್ತು ಅಭ್ಯಾಸಿ ವೇತನಕ್ಕೆಂದು ನೀಡುವುದಾಗಿ ಹೇಳಿದ್ದ ಹಣವನ್ನು ಪ್ರತಿವರ್ಷ ಇಷ್ಟಿಷ್ಟು ಕಡಿತಗೊಳಿಸುತ್ತಾ ಬರತೊಡಗಿತು. 'ಬಿಳಿಯಾನೆ' ಎಂದು ಅಪಖ್ಯಾತಿಯ ಮಾತಿಗೆ ಈಡಾಗಿದ್ದ ರಂಗಾಯಣದ ಖರ್ಚುವೆಚ್ಚದ ನಿಜಕಲ್ಪನೆ ಅವರ್ಯಾರಿಗೂ ಇರಲಿಲ್ಲವೆಂಬುದು ತಿಳಿದುಬರುತ್ತದೆ.

ಕಲಾವಿದರೇನೋ ತರಬೇತಿಗೊಂಡು ರಂಗಪ್ರದರ್ಶನಕ್ಕೆ ಸಿದ್ಧರಾದರು. ಆದರೆ ಕಾರಂತರ ಕಲ್ಪನೆಯಲ್ಲಿ ಅದು 'ನೀನಾಸಂ ತಿರುಗಾಟ'ದಂತಿರದೆ, ಕಂಪೆನಿ ರಂಗಭೂಮಿಯವರಂತೆ ಪ್ರತಿಯೊಂದು ಊರಿಗೂ ಹೋಗಿ ಕನಿಷ್ಠ ಒಂದು ತಿಂಗಳು ಅಲ್ಲಿ 'ಮೊಕ್ಕಾಂ' ಮಾಡಬೇಕು ಎಂಬುದಾಗಿತ್ತು. ಈ ರೀತಿಯ ಮೊಕ್ಕಾಂಗೆ ಅಗತ್ಯವಾದ ಟೆಂಟ್, ಲಾರಿ..... ಇತ್ಯಾದಿಗಳಿಗೆ ಎಲ್ಲಿಗೆ ಹೋಗಬೇಕು ? ಕಣ್ಮುಚ್ಚಿ ಹಾಲು ಕುಡಿಯುತ್ತಿದ್ದ ಸರ್ಕಾರಕ್ಕೆ ಕಾರಂತರ ಈ ಆಲೋಚನೆಗಳೆಲ್ಲಾ 'ಒಬ್ಬ ತಿಕ್ಕಲು ಮನುಷ್ಯನ ಹತ್ತು ಮುಖಗಳಾಗಿ' ಮಾತ್ರ ಕಂಡಿತು. 'ಹೇಗೋ ಒಂದು ನಡೆಸಿಕೊಂಡು ಹೋಗ್ರಿ' ಎಂಬ ತಾತ್ಸಾರದ ಧೋರಣೆ ತಾಳಿತು. ರಂಗಾಯಣದ ಕಲಾವಿದರಿಗೂ ಇಂಥದೇ ಅಸಡ್ಡೆ, ಉಡಾಫೆಯ ಮಾತುಗಳನ್ನು ಅಧಿಕಾರಿಗಳು ಹೇಳಿದ್ದುಂಟು.

ಸರ್ಕಾರದ ಈ ಧೋರಣೆಯ ನಡುವೆಯೂ ಕಾರಂತರು ಕರ್ನಾಟಕದ ನಗರಗಳಲ್ಲಿ 'ಮೊಕ್ಕಾಂ' ಮಾಡಿ ಪ್ರದರ್ಶನಗಳನ್ನು ನೀಡಿದರು. ರಂಗಾಯಣದತ್ತ ಸಾರ್ವಜನಿಕರ ಮತ್ತು ರಂಗಾಸಕ್ತರ ಗಮನವನ್ನು ಸೆಳೆದರು.

೧೯೯೪ರಲ್ಲಿ ಯಾವ ಅರ್ಥದಲ್ಲೂ ಸಾಂಸ್ಕೃತಿಕ ನೀತಿಯೇ ಇಲ್ಲದಿದ್ದ ಅಂದಿನ ಸರ್ಕಾರದ ನೇರ ಆಡಳಿತದಲ್ಲಿದ್ದ ರಂಗಾಯಣವನ್ನು ಅದರ ಮುಷ್ಟಿಯಿಂದ ಮುಕ್ತಗೊಳಿಸುವ ನಿಟ್ಟಿನಲ್ಲಿ ಲಾಭದ ಅಪೇಕ್ಷೆ ಇಲ್ಲದಿರುವ, ರಾಜ್ಯ ಸರ್ಕಾರದಿಂದ ವಾರ್ಷಿಕ ಅನುದಾನ ಪಡೆಯುವ, ಸಾರ್ವಜನಿಕ ಸಂಸ್ಥೆಯೊಂದನ್ನು ರೂಪಿಸಿ ಅದನ್ನು 'ರಂಗಸಮಾಜ'ವೆಂದು ಕರೆದರು. ಏಳುಜನ ಪದನಿಮಿತ್ತ ಸದಸ್ಯರೂ ಹೊರರಾಜ್ಯದ ತಜ್ಞರೂ ಸೇರಿದಂತೆ ಅಭಿನಯ, ನಿರ್ದೇಶನ, ನೇಪಥ್ಯ, ನಾಟಕ ರಚನೆ, ವಿಮರ್ಶೆ, ಚಿತ್ರಕಲೆ.... ಹೀಗೆ ರಂಗಭೂಮಿಗೆ ಸಂಬಂಧಿಸಿದ ಏಳು ಜನ ಹಿರಿಯ ತಜ್ಞರು ಮತ್ತು ಒಬ್ಬ ಕೋ-ಆಪ್ಟ್ ಮಾಡಿಕೊಳ್ಳಲ್ಪಟ್ಟ ಸದಸ್ಯನೂ ಸೇರಿ ೧೫ ಜನರ ರಂಗಸಮಾಜವನ್ನು ರೂಪಿಸಿದರು. ರಂಗಾಯಣವನ್ನು 'ರಾಜ್ಯ ಮಟ್ಟದ ಪ್ರಾತಿನಿಧಿಕ ರೆಪರ್ಟರಿ' ಎಂದು ಪರಿಗಣಿಸುವಂತೆ ಮಾಡಿದರು.

ರಂಗಾಯಣ ಸರ್ಕಾರದ ನೇರ ಮುಷ್ಟಿಯಿಂದ ಮುಕ್ತವಾದರೂ ಸರ್ಕಾರದ ಆರ್ಥಿಕ ಸಹಾಯವಿಲ್ಲದೆ ಯಾವ ಕೆಲಸವೂ ಮುಂದುವರಿಯುವಂತಿರಲಿಲ್ಲ. ಮೂರು ವರ್ಷಗಳ ತರಬೇತಿಯ ನಂತರ [illegible] ಕಲಾವಿದರೆಂದು [illegible] ವೇತನಕ್ಕೆ ಅರ್ಹರಾಗಿದ್ದ ಕಲಾವಿದರನ್ನು [illegible]



*ರಂಗಸ್ಥಳ ಸಜ್ಜುಗೊಳಿಸುವ ಮುನ್ನ ಕಲಾವಿದರ ಶ್ರಮಶಕ್ತಿ*

ಅವರಿಗೆ ಅಭ್ಯಾಸೀವೇತನವನ್ನೇ ಮುಂದುವರಿಸಿ ಸರ್ಕಾರವು ಕಣ್ಮುಚ್ಚಿ ಕುಳಿತುಕೊಳ್ಳುವ ನಾಟಕವಾಡತೊಡಗಿತು. 'ರಂಗಸಮಾಜ'ವೆಂಬ ಒಂದು ಉನ್ನತ ಮಟ್ಟದ ಸೊಸೈಟಿ ಇದ್ದರೂ ಅದರಲ್ಲಿದ್ದ ಏಳು ಜನರು ಪದನಿಮಿತ್ತ ಸದಸ್ಯರೇ ಆಗಿದ್ದರಿಂದ ರಂಗಾಯಣದ ಚಟುವಟಿಕೆಗಳಲ್ಲಿ ಸರ್ಕಾರದ ನೇರ ಹಸ್ತಕ್ಷೇಪಕ್ಕೆ ಅವಕಾಶವಿತ್ತು.

ಈ ಎಲ್ಲಾ ಆರ್ಥಿಕ ಹಾಗೂ ಆಡಳಿತಾತ್ಮಕ ಸಮಸ್ಯೆಗಳ ನಡುವೆಯೂ ರಂಗಾಯಣದ ಕಲಾವಿದರು ತಮ್ಮ ಕರ್ತವ್ಯಕ್ಕೆ ಎಂದೂ ಚ್ಯುತಿ ಬರದಂತೆ ಬಹು ಎಚ್ಚರಿಕೆಯಿಂದ ಹಲವಾರು ಪ್ರಮುಖ ನಾಟಕಗಳನ್ನು ಸಿದ್ಧಪಡಿಸಿ ಕರ್ನಾಟಕದಾದ್ಯಂತ ಪ್ರದರ್ಶಿಸಿ ಶ್ಲಾಘನೆಗೆ ಪಾತ್ರವಾದರು. ರಂಗಾಯಣ ದೇಶ ವಿದೇಶಗಳಿಗೂ ತೆರಳಿ ಕರ್ನಾಟಕದ ಕೀರ್ತಿ ಪತಾಕೆಯನ್ನು ಹಾರಿಸಿ ಬಂತು. ನಾಡಿನಾದ್ಯಂತ ಅತ್ಯುತ್ತಮ ನಟನಟಿಯರನ್ನೊಳಗೊಂಡ ರಂಗತಂಡವೆಂದು ಹೆಸರು ಮಾಡಿತು. ಇಡೀ ಏಷ್ಯಖಂಡದಲ್ಲೇ ಅತ್ಯಂತ ಬದ್ಧತೆಯ ನಟನಟಿಯರನ್ನೊಳಗೊಂಡ ಅಪರೂಪದ ಅದ್ಭುತ ರಂಗತಂಡವೆಂದು ವಿದ್ವಾಂಸರ, ರಂಗತಜ್ಞರ ಪ್ರಶಂಸೆಗೆ ಒಳಪಟ್ಟಿತು.

ಇಷ್ಟೆಲ್ಲಾ ಆಗುವ ಹೊತ್ತಿಗಾಗಲೆ ಅಲ್ಲಿನ ಕಲಾವಿದರು ರಂಗಾಯಣವನ್ನು ಬಂದು ಸೇರಿ ಏಳು - ಎಂಟು ವರ್ಷಗಳು ಕಳೆದಿದ್ದವು. ತಮ್ಮ ಯೌವ್ವನದ ಅತ್ಯಮೂಲ್ಯವಾದ ಕಾಲವನ್ನು ರಂಗಾಯಣದಲ್ಲಿ ಕಳೆದಿದ್ದ ಕಲಾವಿದರಿಗೆ ತಮ್ಮ ಭವಿಷ್ಯದ ಬಗ್ಗೆ ಆತಂಕ ಕಾಡತೊಡಗಿತು. ತಮ್ಮ ಆಯ್ಕೆಯ ಸಂದರ್ಭದಲ್ಲಿ ತಿಳಿಸಿದ್ದಂತೆ ತಮ್ಮನ್ನು ಅ-ವಾಸಿ ಕಲಾವಿದರೆಂದು ಪರಿಗಣಿಸಿ ಸೂಕ್ತ ವೇತನ ನೀಡಿ ರಂಗಕರ್ಮವನ್ನು ನಿರಂತರವಾಗಿ ಯಾವುದೇ ಸಮಸ್ಯೆಗಳು ಇಲ್ಲದಂತೆ ನಡೆಸಿಕೊಂಡು ಹೋಗಲು ಅನುವು ಮಾಡಿಕೊಡಬೇಕೆಂದು ಅವರು ಒತ್ತಾಯಿಸತೊಡಗಿದರು. ಸರ್ಕಾರದ ನಿರ್ಲಕ್ಷ್ಯ ಮತ್ತು ಕಲಾವಿದರ ಬೇಡಿಕೆಗಳನ್ನು ಕುರಿತಂತೆ ತಮ್ಮ ಅಸಹಾಯಕತೆಯಿಂದಾಗಿ ಬೇಸತ್ತ ಕಾರಂತರು ರಾಜಿನಾಮೆ ನೀಡುವ ಮೂಲಕ ಸರ್ಕಾರದ ಧೋರಣೆಯನ್ನು ಪ್ರತಿಭಟಿಸಿದರು. ಮನಸ್ಸೇ ಇಲ್ಲದಿದ್ದ ಮಂತ್ರಿಗಳ ಹಾಗೂ ಕುಹಕ ಅಧಿಕಾರಿಗಳ ಮನವೊಲಿಸಲು ಯತ್ನಿಸಿ ನಿಷ್ಫಲರಾಗಿದ್ದ ಕಾರಂತರಿಗೆ ಬಹುಶಃ ಬೇರೆ ಹಾದಿ ಇರಲಿಲ್ಲ.

ಹಲವಾರು ಮಂತ್ರಿಗಳು ಬಂದರು, ಹೋದರು. ರಂಗಾಯಣದ ಸಮಸ್ಯೆ, ಅಲ್ಲಿನ ಕಲಾವಿದರ ಭವಿಷ್ಯ ಕುರಿತ ಸಮಸ್ಯೆ ಮಾತ್ರ ಹಾಗೆಯೇ ಉಳಿದಿದ್ದ ಹೊತ್ತಿನಲ್ಲಿ



*ಕಲಾವಿದರೊಡನೆ ಸಂವಾದದಲ್ಲಿ ಶ್ರೀ ಬಿ. ವಿ. ಕಾರಂತ*

ಕಾರಂತರ ಸ್ಥಳಕ್ಕೆ ನಾಮಕರಣಗೊಂಡು ಬಂದ ನಿರ್ದೇಶಕ ಹಿಂದೆ ಅಲ್ಲಿಯೇ ಅಧ್ಯಾಪಕರಾಗಿ ಒಂದಿಷ್ಟು ಕಾಲ ದುಡಿದಿದ್ದ ಶ್ರೀ ಬಸವಲಿಂಗಯ್ಯನವರು.

ಹಲವು ಹತ್ತು ಯೋಜನೆಗಳನ್ನು ರೂಪಿಸಿಕೊಂಡು ಬಂದಿದ್ದ ಬಸವಲಿಂಗಯ್ಯನವರಿಗೆ ರಂಗಾಯಣದಲ್ಲಿ ಎದುರಾದದ್ದು ನೂರಾರು ಸಮಸ್ಯೆಗಳ ಆಗರ. ಹಾಗಿರುತ್ತದೆಂಬ ಕಲ್ಪನೆ ಅವರಿಗಿದ್ದಿರಬೇಕು; ಏಕೆಂದರೆ ಅಲ್ಲೇ ಅಧ್ಯಾಪಕರಾಗಿದ್ದು ಎಲ್ಲವನ್ನೂ ಪ್ರತ್ಯಕ್ಷವಾಗಿಯೇ ಕಂಡಿದ್ದರು.

ಕಲಾವಿದರ ಅನಿಶ್ಚಿತ ಬದುಕಿನ ಹೋರಾಟಕ್ಕೆ ಅವರೂ ಮಣಿಯಬೇಕಾಯಿತು. ಎಲ್ಲ ಕಲಾವಿದರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು, ಕಲಾವಿದರ ಹೋರಾಟಕ್ಕೆ ಯಾವುದೇ ತೊಂದರೆ ಮಾಡದೆ ರಂಗಾಯಣದ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಕಾರಂತರ ಗರಡಿಯಲ್ಲಿ ಪಳಗಿದ್ದ ನುರಿತ ನಟನಟಿಯರಿಂದ ನಾಟಕಗಳನ್ನು ಮಾಡಿಸಲು ಪ್ರಾರಂಭಿಸಿದರು. ನಾಟಕ ಪ್ರದರ್ಶನದ ಜೊತೆಜೊತೆಗೇ ಕಲಾವಿದರು ತಮ್ಮ ಬದುಕು ಕುರಿತ ಸರ್ಕಾರದ ಧೋರಣೆಯನ್ನು ಪ್ರತಿಭಟಿಸತೊಡಗಿದರು. ಆರ್ಥಿಕ ಮುಗ್ಗಟ್ಟಿನ ಸಂದರ್ಭದಲ್ಲೂ ಅತ್ಯುತ್ತಮ ನಾಟಕಗಳನ್ನು ಸಿದ್ಧಪಡಿಸಿ ಅದನ್ನು ನಾಡಿನ ಜನರಿಗೆ ಉಣಿಸುತ್ತಾ ತಮ್ಮ ಕರ್ತವ್ಯದಲ್ಲಿ ಒಂದಿಷ್ಟೂ ಲೋಪ ಬರದಂತೆ ಪ್ರತಿಭಟನೆಯನ್ನು ಪ್ರಾರಂಭಿಸಿ ನಾಡಿನಾದ್ಯಂತ ರಂಗಾಸಕ್ತರ ಗಮನ ಸೆಳೆಯುವಲ್ಲಿ ಈ ಕಲಾವಿದರು ಯಶಸ್ವಿಯಾದರು. ಕಂಡ ಕಂಡ ಮಂತ್ರಿ ಮಹೋದಯರಿಗೆಲ್ಲ ಮನವಿ ಸಲ್ಲಿಸಿದರು. ಅಧಿಕಾರಿಗಳ ಮುಂದೆ ಗೋಳು ತೋಡಿಕೊಂಡರು.'ಸರಕಾರಿ ಕೆಲಸ ದೇವರ ಕೆಲಸ' ಎಂದು ಬಗೆದು ಕಾರ್ಯ ನಿರ್ವಹಿಸುತ್ತಿರುವ ವಿಧಾನಸೌಧವನ್ನು ಎಡತಾಕಿದರು. ಪ್ರತಿಭಟನೆಯನ್ನು ತೀವ್ರಗೊಳಿಸಿ ನಾಡಿನಾದ್ಯಂತ ಇರುವ ಸಾಹಿತಿ, ಕಲಾವಿದರು, ರಂಗಾಸಕ್ತರ ಒತ್ತಾಸೆಯ ಫಲವಾಗಿ 'ಅ-ವಾಸಿ ಕಲಾವಿದ'ರೆನ್ನಿಸಿಕೊಳ್ಳುವಲ್ಲಿ ಯಶಸ್ವಿಯಾದರು.

ಬಸವಲಿಂಗಯ್ಯನವರ ಅಧಿಕಾರ ಅವಧಿಯಲ್ಲಿ ರಂಗಾಯಣ ಬಹಳಷ್ಟನ್ನು ಸಾಧಿಸಿದೆ. ನಾಟಕಗಳನ್ನು ಪ್ರದರ್ಶಿಸುವುದಲ್ಲದೆ ಹಲವಾರು ತರಬೇತಿ ಶಿಬಿರಗಳು, ಸಾಕ್ಷರತೆ ಕಾರ್ಯಕ್ರಮಗಳು, ಜೊತೆಗೆ ಮಕ್ಕಳಿಗಾಗಿ 'ಚಿಣ್ಣರ ಮೇಳ' ಎಂಬ ಒಂದು ತಿಂಗಳ ಮೇಳವನ್ನು ಹಲವು ವರ್ಷ ನಡೆಸಿದೆ. ಈಗ ಬಸವಲಿಂಗಯ್ಯನವರ ಅವಧಿಯೂ ಮುಗಿಯುತ್ತಾ ಬಂದಿದೆ. ಅವರನ್ನು ಮುಂದುವರಿಸಲಾಗುತ್ತದೋ ಅಥವಾ ಬೇರೊಬ್ಬ ಲಿಂಗಯ್ಯನವರು ಯಾರಾದರೂ ಸಿಗುತ್ತಾರೋ ಕಾದು ನೋಡಬೇಕಾಗಿದೆ.




ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಕ ಮಂತ್ರಿಗಳ ಅಧ್ಯಕ್ಷತೆಯಲ್ಲಿರುವ ರಂಗಸಮಾಜ, ಈಗ ಹೊಸ ನಿರ್ದೇಶಕರಿಗಾಗಿ ಹುಡುಕಾಟ ಪ್ರಾರಂಭಿಸಿದೆ. ರಂಗಾಯಣದಂಥ ಸಾಂಸ್ಕೃತಿಕ ಮಹತ್ವದ ಸಂಸ್ಥೆಗೆ ಸೂಕ್ತ ನಿರ್ದೇಶಕರ ಆಯ್ಕೆ ಸುಲಭದ್ದಲ್ಲ. ನಿರ್ದೇಶಕ ಸ್ಥಾನದ ವ್ಯಕ್ತಿ ನಾಡಿನ ಶ್ರೇಷ್ಠ ರಂಗತಜ್ಞನೂ ಆಗಿರಬೇಕು. ಅಂತೆಯೇ ಉತ್ತಮ ಆಡಳಿತಗಾರನೂ ಆಗಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಕನ್ನಡ ರಂಗಭೂಮಿಯ ಬೆಳವಣಿಗೆಗೆ ನಿಸ್ವಾರ್ಥ ಸೇವೆ ಸಲ್ಲಿಸುವ ಮನೋಭಿಲಾಷೆಯುಳ್ಳ ಸಂಭಾವಿತನಾಗಿರಬೇಕು. ಇದು ಇಂದಿನ 'ರಂಗರಾಜಕೀಯ'ದ ದಿನಗಳಲ್ಲಿ ಕಷ್ಟಸಾಧ್ಯದ ಸಂಗತಿಯೇ. ಯಾರೇ ಬಂದರೂ ಕಲಾವಿದರ ಅತಂತ್ರ ಸ್ಥಿತಿ ಮತ್ತು ಹಣದ ಮುಗ್ಗಟ್ಟು ಮುಂದುವರೆಯುತ್ತದೆಂಬ ಭೀತಿ ಇದ್ದೇ ಇದೆ.

ನಿರಂತರವಾಗಿ ೧೨ ವರ್ಷಗಳ ಕಾಲ ದೇಶವಿದೇಶಗಳ ಪ್ರಬುದ್ಧ ರಂಗತಜ್ಞರಿಂದ, ನಾಟಕ ನಿರ್ದೇಶಕರ ಮಾರ್ಗದರ್ಶನದಲ್ಲಿ ಸೇವೆಸಲ್ಲಿಸಿ ಯಾವುದೇ ದೂರದರ್ಶನ ಅಥವಾ ಚಲನಚಿತ್ರದ ರಂಜಕ ಬದುಕಿಗೆ ಮಾರುಹೋಗದೆ ರಂಗಭೂಮಿಯಲ್ಲೇ ಉಳಿದುಕೊಂಡಿರುವ ಈ ಕಲಾವಿದರು ಬಹುಶಃ ಭಾರತೀಯ ಆಧುನಿಕ ರಂಗಸಂದರ್ಭದಲ್ಲೇ ಅದ್ವಿತೀಯರು. ಇವರಲ್ಲಿ ಅತ್ಯುತ್ತಮ ನಟನಟಿಯರಿದ್ದಾರೆ. ನಿರ್ದೇಶಕರಿದ್ದಾರೆ, ನಾಟಕಕಾರರಿದ್ದಾರೆ, ನೇಪಥ್ಯ ತಂತ್ರಜ್ಞರಿದ್ದಾರೆ. ಇವರ ಈ ಅಪಾರ ಅನುಭವದ ಪ್ರಯೋಜನ ಕನ್ನಡ ರಂಗಭೂಮಿಗೆ ಸಿಗುವಂತಾಗಲು ನಿಸ್ವಾರ್ಥ ಮಹತ್ವಾಕಾಂಕ್ಷೆಯ ನಿರ್ದೇಶಕರ ಅಗತ್ಯ ವಿಶೇಷವಾಗಿದೆ. ಇಲ್ಲಿನ ಈ ಕಲಾವಿದರನ್ನು ಸಂಪನ್ಮೂಲ ವ್ಯಕ್ತಿಗಳನ್ನಾಗಿ ನೇಮಿಸಿಕೊಂಡು ಕನ್ನಡನಾಡಿನಾದ್ಯಂತ ರಂಗಚಳುವಳಿ ತೀವ್ರಗೊಳಿಸುವುದು ಅಸಾಧ್ಯದ ಕೆಲಸವೇನಲ್ಲ. ಸಂಕಲ್ಪ ಶಕ್ತಿ ಮತ್ತು ಸರಕಾರದ ಸಂಪೂರ್ಣ ಸಹಕಾರ ಮಾತ್ರ ಅನಿವಾರ್ಯ. ಅದಕ್ಕೊಂದು ಸಾಂಸ್ಕೃತಿಕ ಪ್ರಜ್ಞೆ ಬೇಕಾಗಿದೆ. ಕಂಪ್ಯೂಟರ್ ಕೂಲಿಗಳ ಉತ್ಪಾದನೆಯೊಂದೇ ತನ್ನ ಆದ್ಯತೆಯೆಂದು ಹಲುಬುವ ಸರ್ಕಾರದಿಂದ ಇದನ್ನು ನಿರೀಕ್ಷಿಸಬಹುದೇ ಎಂಬುದೊಂದು ಯಕ್ಷಪ್ರಶ್ನೆಯಾಗಿದೆ.

ರಂಗಸಮಾಜ ಯಾವುದೇ ಹಿತಾಸಕ್ತಿಗೆ ಒಳಗಾಗದೆ, ಕಲೆಯಲ್ಲಿ ಯಾವುದೇ ರಾಜಕೀಯ ತರದೆ, ಸೂಕ್ತ ನಿರ್ದೇಶಕರನ್ನು ಆಯ್ಕೆ ಮಾಡಿ ಸದಾ ಸಮಸ್ಯೆಯ ಸುಳಿಯಲ್ಲಿ ತಿರುಗುತ್ತಿರುವ ರಂಗಾಯಣವನ್ನು ಎಲ್ಲ ಸಮಸ್ಯೆಗಳಿಂದ ಮುಕ್ತ ಮಾಡಿ ಕನ್ನಡ ನಾಡಿನಲ್ಲಿ ರಂಗಚಳುವಳಿಗೆ ಸೂಕ್ತ ಚಾಲನೆ ನೀಡಲೆಂದು ಆಶಿಸೋಣ.

* * *

*ಮಾತ್ತೆತ್ತಿದರೆ ಅಮೆರಿಕಾದ ಮಾದರಿಗಳನ್ನು ಅನುಕರಣೆ ಮಾಡಬೇಕೆಂಬ ಸಲಹೆಯನ್ನು ಉತ್ಸಾಹದಿಂದ ನೀಡುವ ರಾಜಕೀಯ ಮತ್ತು ಶೈಕ್ಷಣಿಕ ನಾಯಕರು ಕಳೆದ ಒಂದು ದಶಕದಲ್ಲಿ ನಮ್ಮ ದೇಶದಲ್ಲಿ ಬಹುವಾಗಿ ಬೆಳೆದಿದ್ದಾರೆ. ಆದರೆ ಆ ದೇಶದ ಶೈಕ್ಷಣಿಕ ಹಿನ್ನೆಲೆ ಮತ್ತು ವ್ಯವಸ್ಥೆಯನ್ನು ನಮ್ಮ ದೇಶದಲ್ಲಿ ಹಠಾತ್ತನೆ ಹುಟ್ಟುಹಾಕಲು ಸಾಧ್ಯವಾಗದೆಂಬ ತಿಳಿವಳಿಕೆ ಅವರಿಗೆ ಇದ್ದಂತೆ ತೋರುವುದಿಲ್ಲ. ಜೊತೆಗೆ ಅಂತರರಾಷ್ಟ್ರೀಯವಾಗಿ ಅಮೆರಿಕಾವು ದಕ್ಕಿಸಿಕೊಳ್ಳುವ ಸಂಪನ್ಮೂಲಗಳು ಎಣೆಯಿಲ್ಲದವು. ಆದಾಗ್ಯೂ, ನಮ್ಮ ಮಿತಿಗಳಲ್ಲೇ ವಿಶ್ವವಿದ್ಯಾಲಯಗಳು ಹಾಗೂ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಸುಧಾರಿಸಿ ಫಲಪ್ರದವಾಗುವಂತೆ ಮಾಡಲು ಸಾಧ್ಯವಿಲ್ಲವೆಂದೇನೂ ಇಲ್ಲ. ಶಿಕ್ಷಣ ಕ್ಷೇತ್ರದ ನಿರ್ವಹಣೆಯಲ್ಲಿ ಅಮೆರಿಕಾದ ವ್ಯವಸ್ಥೆಯನ್ನು ಉದಾಹರಿಸಲಾಗುತ್ತದೆ; ಆದರೆ ಅದರ ಲಕ್ಷಣಗಳನ್ನು ಬೆಳೆಸಲು ನಮ್ಮಲ್ಲಿ ಪ್ರಯತ್ನಗಳು ಅತಿಕಡಿಮೆ. ಶಿಕ್ಷಕರ ಸಂಘಗಳೆಂದರೆ ಸಿಡಿಮಿಡಿಗೊಳ್ಳುವ ಸರ್ಕಾರಗಳು, ವಿಶ್ವವಿದ್ಯಾಲಯಗಳ ಆಡಳಿತಗಾರರು ನಮ್ಮಲ್ಲಿದ್ದಾರೆ. ಅಮೆರಿಕಾದ ಮಾದರಿಯನ್ನು ಎತ್ತಿಹಿಡಿಯುವ ಇವರಿಗೆ ಆ ಮಾದರಿಯಲ್ಲಿ ಏನಿದೆ ಎಂಬ ಕಲ್ಪನೆಯೂ ಇಲ್ಲವೇನೋ! ಅದರ ಒಂದು ಸ್ಥೂಲ ಪರಿಚಯ ಮಾಡಿಕೊಡುವ ಲೇಖನ ಇಲ್ಲಿದೆ. ಅದನ್ನು ಪರಿಚಯಿಸಿರುವ ಶ್ರೀ. ದಿನೇಶ್ ಹಾಸನ್ ಸ್ವತಃ ಆ ವ್ಯವಸ್ಥೆಯಲ್ಲಿ ೨೫ ವರ್ಷಗಳಿಗೂ ಹೆಚ್ಚು ಕಾಲ ಅಧ್ಯಾಪಕರಾಗಿ ಕೆಲಸ ಮಾಡಿದ್ದಾರೆ ಮತ್ತು ಅಧ್ಯಾಪಕ ಚಳುವಳಿಗಳಲ್ಲೂ ವಿಶೇಷವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ವಿಲ್ಬರ್‌ಫೋರ್ಸ್‌ನ ಓಹಾಯೋ ಕೇಂದ್ರೀಯ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀ. ದಿನೇಶ್ ಕುಮಾರ್ 'ಹೊಸತು' ಪತ್ರಿಕೆಗಾಗಿಯೇ ಈ ಲೇಖನವನ್ನು ಸಿದ್ಧಗೊಳಿಸಿದ್ದು, ಅದನ್ನು ಶ್ರೀಮತಿ. ವೀಣಾ ಕುಮಾರ್ ಅವರು ಕನ್ನಡದಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಈ ವಿಷಯವನ್ನು ಮುಂದುವರಿಸಿ ಶ್ರೀ. ದಿನೇಶ್ ಇನ್ನೊಂದು ಲೇಖನವನ್ನು ಬರೆಯಲಿದ್ದಾರೆ.*



**ಜಾನ್ ಡ್ಯೂಯಿ (1902ರಲ್ಲಿ) - AAUPಯ ಸ್ಥಾಪಕ.**
ಕೃಪೆ : AAUPಯ Academe ಎಂಬ ದ್ವೈಮಾಸಿಕ
(ಚಿತ್ರ : ಈವಾ ವ್ಯಾಟ್ಸನ್ ಶುಟ್ಸೆ)

# ಅಮೆರಿಕಾದ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರ ಸಂಘಗಳ ಪಾತ್ರ

**ದಿನೇಶ್ ಹಾಸನ್**

ಅಮೆರಿಕಾದ ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರ ಸಂಘ (ಎ. ಎ. ಯು. ಪಿ.)ವು ೧೯೧೫ರಲ್ಲಿ ಸ್ಥಾಪಿತವಾಯಿತು. ಸ್ವಲ್ಪ ಸಮಯದಲ್ಲಿಯೇ ಉನ್ನತ ಶಿಕ್ಷಣವು ಪ್ರಜಾಸತ್ತೆಯ ಪೋಷಕ ಮತ್ತು ಅಮೆರಿಕನ್ ಮೌಲ್ಯಗಳ ತಿರುಳು ಎಂದು ಸಾಧಿಸಲು ಮೊದಲಿಟ್ಟಿತು. ಸರ್ಕಾರವು ಕಾರ್ಯನೀತಿಗಳನ್ನು ರೂಪಿಸಿ ಸಾರ್ವಜನಿಕ ಸಂಸ್ಥೆಗಳ ಮೇಲೆ ಹೇರುವುದನ್ನು ತಡೆಯಲು ಮತ್ತು ವಿಚಾರ ವಿನಿಮಯವನ್ನು ಮನಸೋ ಇಚ್ಛೆ ಸೆನ್ಸಾರ್ ಮಾಡುವುದರಿಂದ ರಕ್ಷಿಸುವುದನ್ನು ಸಂಘವು ತನ್ನ ಕಾರ್ಯಕ್ರಮವಾಗಿಸಿಕೊಂಡಿದೆ. ಸಂಘದ ಮಾರ್ಗದರ್ಶಿ ತತ್ವಗಳಾದ "ಸೇವಾವಧಿ (ಟೆನ್ಯೂರ್)" ಮತ್ತು "ಶೈಕ್ಷಣಿಕ ಸ್ವಾತಂತ್ರ್ಯ" ವನ್ನು ವೃತ್ತಿಯ ಸ್ವಯಂ ಆಡಳಿತ ಮತ್ತು ಶೈಕ್ಷಣಿಕ ಮಟ್ಟವನ್ನು ಕಾಯ್ದುಕೊಳ್ಳುವ ಅಸಾಮಾನ್ಯ ಬದ್ಧತೆಯೊಂದಿಗೇ ನೋಡಬೇಕು. ೨೦ನೇ ಶತಮಾನದ ಮಧ್ಯಂತರದಲ್ಲಿ ಮೆಕಾರ್ಥಿಸಂನ ಅಂತ್ಯವು ಸಂಘದ ಆಸಕ್ತಿಯು ಜ್ಞಾನದ ಪಡೆಯುವಿಕೆ, ಕಾಪಾಡುವಿಕೆ ಮತ್ತು ಹರಡುವಿಕೆಯಷ್ಟೇ ಅಲ್ಲದೆ ಈ ರೀತಿಯ ಚಟುವಟಿಕೆಗಳು ನಡೆಯುವ ಪರಿಸ್ಥಿಯ ಬಗ್ಗೆಯೂ ವಿಸ್ತರಿಸಲು ಅನುವು ಮಾಡಿಕೊಟ್ಟಿತು. ಅಮೆರಿಕದ ಕಾರ್ಮಿಕ ಚಳುವಳಿಯಲ್ಲಿ ಸಂಘದ ದೀರ್ಘ ಭಾಗವಹಿಸುವಿಕೆಯು ಹೀಗೆ ಪ್ರಾರಂಭವಾಯಿತು. ಕಾರ್ಮಿಕ ಚಳುವಳಿ ಪ್ರಾರಂಭವಾದದ್ದೇ ಉತ್ಪಾದಕರು ಮತ್ತು ಹಂಚಿಕೆದಾರರು ತಾವು ಮಾರಲು ಬಯಸುವ ಸರಕುಗಳಷ್ಟೇ ಮುಖ್ಯ, ಅವರ ನೌಕರರ ಭೌತಿಕ ಮತ್ತು ಮಾನಸಿಕ ಸ್ಥಿತಿಗಳೂ ಸಹ ಎಂದು ಅವರನ್ನು ಒಪ್ಪಿಸುವ ಅಮೆರಿಕನ್ ವಿಧಾನವಾಗಿ. ಅಮೆರಿಕನ್ ಕಾರ್ಮಿಕ ಒಕ್ಕೂಟ (AFL) ಮತ್ತು ಕೈಗಾರಿಕಾ ಸಂಸ್ಥೆಗಳ ಕಾಂಗ್ರೆಸ್ (CIO) ಕೆಲಸದ ಸ್ಥಳಗಳಲ್ಲಿ ರಕ್ಷಣೆ, ಸಾಕಷ್ಟು ಆರೋಗ್ಯ ಪಾಲನೆ ಮತ್ತು ಎಲ್ಲಾ ವಿಭಾಗಗಳ ನೌಕರರಿಗೆ ನಿವೃತ್ತಿ ವೇತನಗಳನ್ನು ಖಚಿತಪಡಿಸುವ ಗುರಿಯನ್ನು ಹೊಂದಿವೆ. ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಕಾನೂನು ರಚಿಸುವ ಶಾಸಕರ ಚುನಾವಣಾ ಸಮಯದಲ್ಲಿ ಗಣನೀಯವಾಗಿರುವ ತನ್ನ ಮತವನ್ನು ಉಪಯೋಗಿಸಿ ಅವರನ್ನು ಒಲಿಸಿಕೊಳ್ಳುವುದರ ಮೂಲಕ AFL-CIO ತನ್ನ ಬಹಳಷ್ಟು ಉದ್ದೇಶಗಳನ್ನು ಸಾಧಿಸಿಕೊಳ್ಳುತ್ತದೆ. ಕಾರ್ಮಿಕ ಸಮಸ್ಯೆಗಳ ಪರಿಹಾರಕ್ಕೆ ಕಾನೂನಿನ ಮೊರೆ ಹೋಗುವುದನ್ನು ಕೊನೆಯ ಮಾರ್ಗವಾಗಿ ಬಳಸುತ್ತದೆ. AFL-CIO, ಅಮೆರಿಕನ್ ಅಧ್ಯಾಪಕರುಗಳ ಒಕ್ಕೂಟ (AFT) ಮತ್ತು ರಾಷ್ಟ್ರೀಯ ಶೈಕ್ಷಣಿಕ ಸಂಘ (NEA)ಗಳೊಡನೆ ತನ್ನನ್ನು ಗುರ್ತಿಸಿ ಕೊಳ್ಳುವುದು AAUPಗೆ ವ್ಯಾವಹಾರಿಕ ಅವಶ್ಯಕತೆ ಯಾಗಿದೆ. ಯಾವುದೇ ರೀತಿಯ ಶ್ರಮಕ್ಕೆ ಸಾಕಷ್ಟು ಪರಿಹಾರ ಸಿಗಬೇಕು ಮತ್ತು ಯಾವ ರೀತಿಯ ಶ್ರಮವೇ ಆಗಿರಲಿ ಅದು ಗೌರವಕ್ಕೆ ತಕ್ಕುದು ಎಂದು AAUPಯ ಬಲವಾದ ನಂಬಿಕೆ. "AAUPಯ ಉದ್ದೇಶವೆಂದರೆ, "ಅಧ್ಯಾಪಕರು ಮತ್ತು ಸಂಶೋಧಕರ ನಡುವೆ ಹೆಚ್ಚು ಪರಿಣಾಮಕಾರಿ ಸಹಕಾರವನ್ನು ಬೆಳೆಸುವುದು... (ಮತ್ತು) ವೃತ್ತಿಯ ಉಪಯುಕ್ತತೆ ಹಾಗೂ ಗುಣಮಟ್ಟ, ಆದರ್ಶ ಮತ್ತು ಕಲ್ಯಾಣ ಕ್ರಮಗಳನ್ನು ಉತ್ತಮಪಡಿಸುವುದು". ಈ ಕಾರ್ಯಗಳನ್ನು "ಉನ್ನತ ಶಿಕ್ಷಣ ಮತ್ತು ಸಂಶೋಧನೆಯ ಉನ್ನತಿಗಾಗಿ ಆಚರಿಸಬೇಕು". ಅಮೆರಿಕಾದಲ್ಲಿ ಕಾಲೇಜು ಮತ್ತು ವಿಶ್ವವಿದ್ಯಾಲಯ ಗಳೊಡನೆ ಸಂಘವು ಹೇಗೆ ವ್ಯವಹರಿಸುತ್ತದೆ ಎಂದು ಈ ಲೇಖನವು ಸಂಕ್ಷಿಪ್ತವಾಗಿ ವಿವರಿಸುತ್ತದೆ.

ಕಾಲೇಜುಗಳ ಎಲ್ಲಾ ಅಧ್ಯಾಪಕರೂ ಸಂಘದ ಸದಸ್ಯರಲ್ಲ. ತಂತಮ್ಮ ಸಂಸ್ಥೆಗಳಲ್ಲಿ ಸಾಮೂಹಿಕ ಸಂಧಾನದ ಘಟಕಗಳು ಮತ್ತು ಸಂಘದ ಘಟಕ ಇಲ್ಲದಿದ್ದರೂ ಎಲ್ಲಾ ಪೂರ್ಣಾವಧಿ ಅಧ್ಯಾಪಕರು ಸದಸ್ಯತ್ವವನ್ನು ಪಡೆಯಲು ಅರ್ಹರಾಗಿರುತ್ತಾರೆ. ಅಮೆರಿಕಾದ ವಿಶ್ವವಿದ್ಯಾಲಯಗಳ ಕಾರ್ಮಿಕ ಚಳುವಳಿಯ ಬಗ್ಗೆ ಅಮೆರಿಕ ವಿಶ್ವವಿದ್ಯಾಲಯ ಸಂಘವು ಪ್ರಕಟಿಸಿದ ದಾಖಲೆಗಳು ಮತ್ತು ಸೆಂಟ್ರಲ್ ಸ್ಟೇಟ್ ಯೂನಿವರ್ಸಿಟಿಯ ವಿಶ್ವಸ್ಥ ಮಂಡಳಿ ಹಾಗೂ AAUP-CSUಗಳ ನಡುವಿನ ಸಾಮೂಹಿಕ ಸಂಧಾನದ ಒಪ್ಪಂದಗಳ ದಸ್ತಾವೇಜುಗಳು ಅಪಾರ ಮಾಹಿತಿ ನೀಡುತ್ತವೆ. ಅವುಗಳನ್ನು ಈ ಲೇಖನ ಬರೆಯುವಾಗ ನಾನು ಸಾಕಷ್ಟು ಬಳಸಿಕೊಂಡಿದ್ದೇನೆ.

ಅಮೆರಿಕಾದ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯಗಳು ಸ್ವಾಯತ್ತ ಸಂಸ್ಥೆಗಳು. ಪ್ರತಿಯೊಂದು ಸಂಸ್ಥೆಯೂ ತನ್ನದೇ ಧ್ಯೇಯೋದ್ದೇಶ ಗಳನ್ನು ರೂಪಿಸಿಕೊಳ್ಳುತ್ತದೆ. ಪ್ರತಿಯೊಂದು ರಾಜ್ಯ ಮತ್ತು ಸಾರ್ವಜನಿಕ ಕಾಲೇಜು ಒಂದು ವಿಶ್ವಸ್ಥ ಮಂಡಳಿಯ ಆಡಳಿತಕ್ಕೊಳಪಟ್ಟಿರುತ್ತದೆ. ಈ ಮಂಡಳಿಯು ತನ್ನ ಅಧ್ಯಕ್ಷ (ಭಾರತೀಯ

ವಿಶ್ವವಿದ್ಯಾಲಯಗಳ ಉಪಕುಲಪತಿಯ ಸಮಾನವಾದ)ರನ್ನು ನೇಮಿಸಿಕೊಳ್ಳುತ್ತದೆ. ಸಾರ್ವಜನಿಕ ವಿಶ್ವವಿದ್ಯಾಲಯಗಳಿಗೆ ರಾಜ್ಯದ ರಾಜ್ಯಪಾಲರು ವಿಶ್ವಸ್ಥರನ್ನು ನೇಮಿಸುತ್ತಾರೆ. ಆಯಾ ಸಂಸ್ಥೆಗಳಿಗೆ ಉತ್ತಮ ಶಿಕ್ಷಣದ ರೂಪುರೇಷೆಗಳನ್ನು ಒಂದು ಪ್ರಾತಿನಿಧಿಕ ಮಂಡಳಿಯು ರೂಪಿಸುತ್ತದೆ ಮತ್ತು ಅದಕ್ಕನುಸಾರವಾಗಿ ವಿಶ್ವಸ್ಥರು ತಮ್ಮ ಸಂಸ್ಥೆಗಳ ಕಾರ್ಯನೀತಿಯನ್ನು ರೂಪಿಸುತ್ತಾರೆ. ಸಾಮಾನ್ಯವಾಗಿ ಖಾಸಗಿ ಸಂಸ್ಥೆಗಳು ಒಂದು ಧಾರ್ಮಿಕ ಅಥವಾ ಸಾಮಾಜಿಕ ಸಂಸ್ಥೆಯ ಅಧೀನದಲ್ಲಿರುತ್ತವೆ. ಅನುದಾನ ನೀಡುವ ಸಂಸ್ಥೆ ವಿಶ್ವಸ್ಥ ಮಂಡಳಿಯನ್ನು ನೇಮಿಸುತ್ತದೆ. ವಿಶ್ವವಿದ್ಯಾಲಯವನ್ನು ನಡೆಸಲು ಮಂಡಳಿಯು ಒಬ್ಬ ಅಧ್ಯಕ್ಷರನ್ನು ನೇಮಿಸುತ್ತದೆ. ಇದಕ್ಕೆ ಸರ್ಕಾರದ ಅನುಮೋದನೆಯ ಅವಶ್ಯಕತೆಯೇ ಇಲ್ಲ. ಕೆಲವು ಸಂದರ್ಭಗಳಲ್ಲಿ, ಕಾಲೇಜುಗಳ ಬೋಧಕರೆಲ್ಲಾ ಅಧ್ಯಕ್ಷರನ್ನು ಆರಿಸುವಲ್ಲಿ ಸಲಹಾತ್ಮಕ ಪಾತ್ರ ವಹಿಸುತ್ತಾರೆ. ಆಡಳಿತ ವಿಷಯಗಳಿಗೆ ಸಂಬಂಧಿಸಿದಂತೆ ಅಧ್ಯಕ್ಷರು ಪೂರ್ತಿ ಹತೋಟಿ ಚಲಾಯಿಸುತ್ತಾರೆ. ಶೈಕ್ಷಣಿಕ ವಿಷಯಗಳಿಗೆ ಸಂಬಂಧಿಸಿದಂತೆ ಒಬ್ಬ ಉಪಾಧ್ಯಕ್ಷರು ಸಹಾಯಕ ರಾಗಿರುತ್ತಾರೆ. ವಿಶ್ವವಿದ್ಯಾಲಯದ ಗಾತ್ರ ಮತ್ತು ವಿಸ್ತಾರಕ್ಕೆ ಅನುಗುಣವಾಗಿ ಇತರ ಉಪಾಧ್ಯಕ್ಷರುಗಳು ಸಹ ಇರಬಹುದು.

ಶೈಕ್ಷಣಿಕ ವಿಷಯಗಳಲ್ಲಿ ಕಾಲೇಜಿನ ಅಧ್ಯಾಪಕ ಮಂಡಳಿಯದೇ ಸಂಪೂರ್ಣ ಅಧಿಕಾರ. ಮುಖ್ಯಸ್ಥರ ನಿರ್ದೇಶನದಲ್ಲಿ ಪ್ರತಿಯೊಂದು ವಿಭಾಗವೂ ಪ್ರಸ್ತುತ ಪಠ್ಯಕ್ರಮದಲ್ಲಿ ಬದಲಾವಣೆಗಳನ್ನೋ ಅಥವಾ ಹೊಸ ಪಠ್ಯಕ್ರಮವನ್ನೋ ಶೈಕ್ಷಣಿಕ ಕಾರ್ಯನೀತಿ ಸಮಿತಿಗೆ ಸೂಚಿಸುತ್ತದೆ. ಈ ಬದಲಾವಣೆಗಳು ವಿಶ್ವವಿದ್ಯಾಲಯದ ಆಶಯಗಳಿಗೆ ಮತ್ತು ರಾಷ್ಟ್ರೀಯ ಪ್ರವೃತ್ತಿಗೆ ಅನುಗುಣವಾಗಿದೆ ಎಂದು ಖಚಿತಪಡಿಸಿ ಕೊಂಡ ನಂತರ ಮತ ಚಲಾವಣೆಗೆ ಸಮಿತಿಯು ಇದನ್ನು ಕಾಲೇಜಿನ ಅಧ್ಯಾಪಕ ಮಂಡಲಿಗೆ ಒಪ್ಪಿಸುತ್ತದೆ. ಸಮಿತಿಯ ಶಿಫಾರಸ್ಸಿಗೆ ಕಾಲೇಜಿನ ಅಧ್ಯಾಪಕರ ಒಪ್ಪಿಗೆ ಇದ್ದಲ್ಲಿ ಪ್ರಸ್ತಾಪವನ್ನು ಜಾರಿಗೆ ತರಲಾಗುತ್ತದೆ. ಆಡಳಿತವು ಯಾವುದೇ ಸಂದರ್ಭದಲ್ಲೂ ಅಧ್ಯಾಪಕ ಮಂಡಳಿಯ ಮೇಲೆ ಪರಿಣಾಮ ಬೀರುವ ಏಕಪಕ್ಷೀಯ ನಿರ್ಧಾರಗಳನ್ನು ತೆಗೆದುಕೊಳ್ಳುವಂತಿಲ್ಲ. ಇಂದು ಅಮೆರಿಕವು ಹಿಂದೆಂದೂ ಕಾಣದ ಏಳ್ಗೆಯನ್ನು ಅನುಭವಿಸುತ್ತಿದ್ದರೂ ದುರದೃಷ್ಟವಶಾತ್ ಇಲ್ಲಿಯ ವಿಶ್ವವಿದ್ಯಾಲಯಗಳು ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿವೆ. ವಿಶ್ವವಿದ್ಯಾಲಯಗಳು ಒಂದು ಉದ್ಯಮದಂತೆ ನಡೆಯುವ ಅಂಟುಜಾಡ್ಯ ಎಲ್ಲೆಲ್ಲೂ ಹಬ್ಬಿದೆ. ಇತ್ತೀಚೆಗೆ ಉತ್ಪಾದಕತೆಯನ್ನು ಹೆಚ್ಚಿಸುವ ಉದ್ದೇಶ ಹೊಂದಿರುವ ತರಬೇತಿ ಮತ್ತು ಸಂಪನ್ಮೂಲಗಳನ್ನು ಕಂಪನಿಗಳು ಪ್ರಚಾರಕ್ಕೆ ತಂದಿವೆ. ಅದರ ಪ್ರಭಾವದಿಂದಾಗಿ ಮರುಳು ಶೈಕ್ಷಣಿಕ ವ್ಯವಸ್ಥಾಪಕರು ಸಹ ಸಾಮರ್ಥ್ಯವೊಂದೇ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿರುವ ರಕ್ಷಾಕವಚ ಎಂದು ಸಾರುತ್ತಾ, ಅಧ್ಯಾಪಕರನ್ನು ಮತ್ತು ಸಿಬ್ಬಂದಿಯನ್ನು ಪ್ರಚೋದಿಸಿ ವಿದ್ಯಾರ್ಥಿಗಳನ್ನು ಗ್ರಾಹಕರಂತೆ ನೋಡಲು ಕಲಿಸುತ್ತಿದ್ದಾರೆ. ತರಗತಿಯಲ್ಲಿ ಬೋಧನೆಯನ್ನು 'ತಲುಪಿಸುವವರೆಂದು' ಶಿಕ್ಷಕರನ್ನು ಕರೆಯಲಾಗುತ್ತಿದೆ. ಆರೋಗ್ಯ ಮತ್ತು ನಿವೃತ್ತಿವೇತನ ಸೌಲಭ್ಯಗಳು ನ್ಯಾಯಯುತವಾಗಿ ದೊರೆಯಬೇಕೆಂದು ನಿರೀಕ್ಷಿಸುವ ಅಧ್ಯಾಪಕನನ್ನು ಎಲ್ಲೋ ಉತ್ಖನನದಲ್ಲಿ ಕಂಡುಬಂದ ಪಳೆಯುಳಿಕೆಯೋ ಎಂಬಂತೆ ಕಾಣಲಾಗುತ್ತದೆ. ತಂತ್ರಜ್ಞಾನದ ಮಡಿಲಲ್ಲಿ ಆಡಿ ಬೆಳೆದ ಯುವ ಪರಿಣತರು ಮತ್ತು ಅಧ್ಯಾಪಕರು ಸಹ ತಮ್ಮ ವೃತ್ತಿಯ ಬಗ್ಗೆ ಇಂಥದೇ ಗ್ರಹಿಕೆ ಬೆಳೆಸಿಕೊಂಡಿದ್ದಾರೆ. ಇವರು ಉದ್ಯಮಗಳಿಂದ ಮತ್ತು ಸರ್ಕಾರಗಳಿಂದ ದೊಡ್ಡ ಮೊತ್ತದ ಅನುದಾನವನ್ನು ಆಕರ್ಷಿಸುವ ಶಕ್ತಿಯುಳ್ಳವರಾಗಿದ್ದಾರೆ. ಈ ಲೇಖನವನ್ನು ಓದುವ ಭಾರತೀಯ ಓದುಗರಿಗೆ ಅನುದಾನವನ್ನು ಆಕರ್ಷಿಸುವುದು ಲಾಭದಾಯಕ ಕೆಲಸವೆಂಬ ಭಾವನೆ ಮೂಡಬಹುದು. ಉದಾಹರಣೆಗೆ, ಒಳನಗರಗಳಲ್ಲಿ ಹೆಚ್ಚುತ್ತಿರುವ ಹಿಂಸೆಯ ಕಾರಣಗಳನ್ನು ತಿಳಿದುಕೊಳ್ಳಲು ಯಾವನೋ ಒಬ್ಬ ಪ್ರೊಫೆಸರ್ ಕೇಂದ್ರದ ಅನುದಾನಕ್ಕೆ ಅರ್ಜಿ ಹಾಕುತ್ತಾನೆಂದುಕೊಳ್ಳೋಣ. ಒಂದು ವರ್ಷದ ಅವಧಿಗೆ ಅನುದಾನದ ಮೊತ್ತ ಐದು ಲಕ್ಷ ಡಾಲರು ಎನ್ನೋಣ. ಈ ಮೊತ್ತದಲ್ಲಿ, ಸಂಶೋಧನೆಯನ್ನು ಕೈಗೊಳ್ಳುವ ವ್ಯಕ್ತಿ ತನ್ನನ್ನು ಮುಖ್ಯ ಸಂಶೋಧಕ ಎಂದು ಕರೆದುಕೊಂಡು ೪೦,೦೦೦ ಡಾಲರು ಮೊತ್ತವನ್ನು ತನ್ನ ಗೌರವ ಧನವೆಂದು ನಿಗದಿಪಡಿಸಿಕೊಳ್ಳುತ್ತಾನೆ. ಸಂಶೋಧನೆಯನ್ನು ನಡೆಸಲು ಅನುವಾಗುವಂತೆ ಅವನಿಗೆ ರಜೆ ನೀಡುವುದರ ಜೊತೆಗೆ ವಿಶ್ವವಿದ್ಯಾಲಯವು





ಚಿತ್ರದಲ್ಲಿ ಬಲ ತುದಿಯಲ್ಲಿರುವವರು ಪ್ರೊ॥ ಅಮೂಲ್ಯ ಕುಮಾರ್ ರೆಡ್ಡಿ

ಪ್ರೊ॥ ಅಮೂಲ್ಯ ಕುಮಾರ್ ರೆಡ್ಡಿಯವರು ಈ ಸಹಸ್ರಮಾನ ವರ್ಷದ (೨೦೦೦) ವೋಲ್ವೊ ಅಂತರರಾಷ್ಟ್ರೀಯ ಪರಿಸರ ಬಹುಮಾನವನ್ನು ಇತರ ಮೂರು ವಿಜ್ಞಾನಿಗಳೊಡನೆ ಹಂಚಿಕೊಂಡಿದ್ದಾರೆ. ಪ್ರೊ॥ ಅಮೂಲ್ಯ ಅವರು ಬಹುಮಾನವನ್ನು ಸ್ವೀಡನ್ನಿನ ಗೊಟೆನ್‌ಬರ್ಗ್ ನಗರದಲ್ಲಿ ಅಕ್ಟೋಬರ್ ೧೭, ೨೦೦೦ದಂದು ಸ್ವೀಕರಿಸಿದರು. ಬಹುಮಾನ ಪಡೆದ ಗೋಲ್ಡನ್‌ಬರ್ಗ್, ಯೊಹಾನ್ಸನ್, ಅಮೂಲ್ಯ ಕುಮಾರ್ ರೆಡ್ಡಿ ಮತ್ತು ರಾಬರ್ಟ್ ವಿಲಿಯಮ್ಸ್ ಅವರು "ಅಂತರರಾಷ್ಟ್ರೀಯ ಶಕ್ತಿ ಪ್ರವರ್ತನೆ" ಎಂಬ ಪರ್ಯಾಯ ಶಕ್ತಿ ಅಭಿವೃದ್ಧಿಗೊಳಿಸುವ ಸಂಸ್ಥೆಯ ಸಂಸ್ಥಾಪಕರು. ಈ ಸಂಸ್ಥೆಯ ಏಷ್ಯಾ ಕಛೇರಿ ಬೆಂಗಳೂರಿನಲ್ಲಿದೆ. ಪರಿಸರ ಕ್ಷೇತ್ರದ ಸಾಧನೆಗಾಗಿ ನೀಡಿರುವ ಈ ಬಹುಮಾನ ನೊಬೆಲ್ ಪಾರಿತೋಷಕಕ್ಕೆ ಸರಿಸಮ ಎಂದು ಪರಿಗಣಿಸಲಾಗಿದೆ.




ಗುಲ್ಬರ್ಗಾದಲ್ಲಿ ಹೊಸತು ಬಳಗದ ಸಭೆ

ಗುಲ್ಬರ್ಗಾ ನಗರದಲ್ಲಿ ನವೆಂಬರ್ ೩೦ ರಂದು 'ಹೊಸತು' ಓದುಗರ ಬಳಗದ ಸಭೆ ಜರುಗಿತು. ಲೇಖಕರು, ಪ್ರಾಧ್ಯಾಪಕರು, ವಿಜ್ಞಾನಿಗಳೇ ಮುಂತಾದ 'ಹೊಸತು' ಹಿತೈಷಿಗಳು ಉತ್ಸಾಹದಿಂದ ಭಾಗವಹಿಸಿ ಪತ್ರಿಕೆ ಕುರಿತು ತಮ್ಮ ಅಭಿಪ್ರಾಯ, ಟೀಕೆ, ಮೆಚ್ಚುಗೆ ವ್ಯಕ್ತಪಡಿಸಿದರು. 'ಹೊಸತು' ಹೆಚ್ಚು ಸಂಖ್ಯೆಯ ಓದುಗರಿಗೆ ತಲುಪುವಂತಾಗಲು ಹಲವು ಸಲಹೆ, ಸೂಚನೆಗಳನ್ನು ನೀಡಿದರು. ಸರ್ವರೀತಿಯ ಸಹಕಾರ ನೀಡುವ ಭರವಸೆ ಕೊಡುತ್ತಾ ತಾವೂ ಲೇಖನಗಳನ್ನು ಬರೆದು 'ಹೊಸತು' ಸರ್ವಾಂಗೀಣವಾಗಿ ಬೆಳೆಯುವಂತೆ ಮಾಡುವ ಆಶಯವನ್ನು ವ್ಯಕ್ತಪಡಿಸಿದರು.

ಗುಲ್ಬರ್ಗಾದಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಯ ಮ್ಯಾನೇಜರರಾದ ಶ್ರೀ ಎಸ್. ಎಂ. ಸೊನ್ನದ ಏರ್ಪಾಟು ಮಾಡಿದ್ದ ಈ ಸಮಾರಂಭದಲ್ಲಿ, 'ಹೊಸತು' ಸಂಪಾದಕ ಬಳಗದ ಶ್ರೀ ಸಿ. ಆರ್. ಕೃಷ್ಣರಾವ್ ಭಾಗವಹಿಸಿದ್ದರು.

ಸಂಶೋಧನೆಯ ನಂತರ ತನ್ನ ಸ್ವತ್ತಾಗಿ ಉಳಿಯಬಹುದಾದ ಪರಿಕರಗಳನ್ನು ಪರಿಗಣಿಸಿ ಅಧ್ಯಾಪಕನ ಮೂಲಸಂಬಳದ ಒಂದು ದೊಡ್ಡ ಮೊತ್ತವನ್ನೂ ನೀಡುತ್ತದೆ. ದೂರದೃಷ್ಟಿ ಇಲ್ಲದ ಆಡಳಿತಗಾರರು ಹಣ ತರದ ಮಾನವ ಶಾಸ್ತ್ರಗಳನ್ನು ಅಲಕ್ಷಿಸಿ ಶೈಕ್ಷಣಿಕ ಸಮಗ್ರತೆಯಲ್ಲಿ ರಾಜಿ ಮಾಡಿಕೊಳ್ಳುತ್ತಾರೆ. ಸರಿಯಾಗಿ ತರಬೇತಿ ಹೊಂದಿದ ಮತ್ತು ಪರಿಣತಿಯ ಪ್ರಾಮಾಣ್ಯ ಪಡೆದವರ ಮೇಲೆ ವೃತ್ತಿಯ ಘನತೆಯನ್ನು ಕಾಪಾಡುವ ಜವಾಬ್ದಾರಿ ಇದೆ. ಇವರಲ್ಲಿ ಹಲವರು ಅಸಾಧಾರಣ ಆಡಳಿತ ನಿಪುಣರೂ ಆಗಿರುತ್ತಾರೆ. ಸ್ವಯಂ ಪರಿಪೂರ್ಣವಾದ ಅಮೆರಿಕನ್ ವಿಶ್ವವಿದ್ಯಾಲಯಗಳು ವಿದ್ಯಾರ್ಥಿಗಳು, ಅಧ್ಯಾಪಕರು ಮತ್ತು ಆಡಳಿತದ ಸ್ವಾಮ್ಯಕ್ಕೆ ಒಳಪಟ್ಟಿರಬೇಕು. ಇಂತಹ ಘಟಕಕ್ಕೆ ವೃತ್ತಿಸಂಘಗಳ ಅವಶ್ಯಕತೆಯು ಹಿಂದೆಂದಿಗಿಂತಲೂ ಹೆಚ್ಚಾಗಿದೆ. ಹೊಸ ಪೀಳಿಗೆಯ ಶೈಕ್ಷಣಿಕ ವ್ಯವಸ್ಥಾಪಕರು ಯಾವಾಗಲೂ ಸಾಮರ್ಥ್ಯದ ತತ್ವವನ್ನು ಮುಂದೆ ಮಾಡುತ್ತಾ ಶಿಕ್ಷಣವು ವಿದ್ಯಾರ್ಥಿಗಳೆಂಬ ಗ್ರಾಹಕರಿಗೆ ಮಾರಲ್ಪಡುವ ಉತ್ಪನ್ನ ಎಂದು ಸಾರ್ವಜನಿಕರಿಗೆ ಹೇಳುತ್ತಿದ್ದಾರೆ. ಈ ಪ್ರಕ್ರಿಯೆಯಲ್ಲಿ ಅಂತಿಮವಾಗಿ ಗ್ರಾಹಕರೇ ಉತ್ಪನ್ನವೂ ಆಗುತ್ತಿದ್ದಾರೆ. ಉದ್ಯಮವು ಶಿಕ್ಷಣವನ್ನು ಅಮಾನವೀಕರಿಸುವುದನ್ನು ಎದುರಿಸಲು, ಸಾಮರ್ಥ್ಯ, ದೂರದೃಷ್ಟಿ ಮತ್ತು ವಿಷಯಗಳ ಪರಿಜ್ಞಾನ ಹೊಂದಿರುವ ಹಾಗೂ ಅರ್ಹತೆ ದೃಢೀಕರಿಸುವ ಪರಿಷತ್ತಿನ ನಂಬಿಕೆ ಗಳಿಸಬಲ್ಲ ಅಧ್ಯಾಪಕರು AAUPಯನ್ನು ಸ್ಫೂರ್ತಿಯ ಮೂಲವಾಗಿ ನೋಡುವುದು ಹೆಚ್ಚುತ್ತಿದೆ. ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಮಾರ್ಗದರ್ಶನ ಮಾಡುವುದು ಮತ್ತು ತನ್ಮೂಲಕ ಪ್ರಜಾಸತ್ತೆಯ ಯಶಸ್ಸನ್ನು ಸಾಧಿಸುವುದು ಈ ಸಂಸ್ಥೆಯ ಪ್ರಾಥಮಿಕ ಕರ್ತವ್ಯವಾಗಿದೆ.

ಹೆಚ್ಚು ಕಡಿಮೆ ಎಲ್ಲಾ ಕಾಲೇಜುಗಳಲ್ಲಿಯೂ AAUP ಘಟಕಗಳಿರುತ್ತವೆ. ಆದರೆ ಎಲ್ಲಾ ಅಧ್ಯಾಪಕರೂ ತಂತಾನೇ ಇದರ ಸದಸ್ಯರಾಗುವುದಿಲ್ಲ. AAUP ಘಟಕವು ತಮ್ಮ ಕಾಲೇಜಿನಲ್ಲಿ ಸಾಮೂಹಿಕ ಸಂಧಾನಕ್ಕೆ ಪ್ರತಿನಿಧಿ ಆಗಬೇಕೆ ಬೇಡವೇ ಎಂಬ ನಿರ್ಧಾರ ಅಧ್ಯಾಪಕರುಗಳಿಗೆ ಸೇರಿದ್ದು. ಈ ವಿಷಯದ ಬಗ್ಗೆ ಮತ ಚಲಾಯಿಸಬೇಕೆಂಬ ಕಾನೂನಿದೆ. ಸಾಮೂಹಿಕ ಸಂಧಾನದ ಸಂಘವನ್ನು ತನ್ನ ಆವರಣಕ್ಕೆ ಬಿಟ್ಟುಕೊಳ್ಳಲು ಆಡಳಿತವು ಬೇಸರಿಸುತ್ತದೆ; ಈ ರೀತಿಯ ಒಪ್ಪಂದಗಳು ಅಹಿತ ಭಾವನೆಗಳನ್ನು ಬೆಳೆಸುತ್ತವೆ ಮತ್ತು ವಿದ್ಯಾಲಯದ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ ಎಂದು ಅದರ ವಾದ.

ಸಾಮೂಹಿಕ ಸಂಧಾನ ಇರುವ ಕಾಲೇಜುಗಳಲ್ಲಿ AAUP ಘಟಕವು ಒಂದು ಪ್ರಾತಿನಿಧಿಕ ತಂಡವನ್ನು ಆರಿಸುತ್ತದೆ. ತಂಡದ ಪ್ರತಿಯೊಬ್ಬ ಸದಸ್ಯನೂ ಸಂಧಾನಕ್ಕೆ ಬರುವ ನಿರ್ದಿಷ್ಟ ವಿಷಯದ ಮೇಲೆ ಸಂಶೋಧನೆ ಮಾಡಬಹುದು. ಉದಾ : ಪ್ರೊಫೆಸರ್ 'ಎ' ಆ ಕ್ಷೇತ್ರದಲ್ಲಿರುವ ಇತರ ವಿದ್ಯಾಲಯಗಳಲ್ಲಿ ಅಧ್ಯಾಪಕರಿಗೆ ನೀಡಿರುವ ಆರೋಗ್ಯ ಸೌಲಭ್ಯಗಳ ಬಗ್ಗೆ ವಿಚಾರಿಸಬಹುದು; ಪ್ರೊಫೆಸರ್ 'ಬಿ' ಬೇಸಿಗೆ ಬೋಧನೆಗೆ ನೀಡುವ ಸಂಭಾವನೆಯ ಬಗ್ಗೆ ಮಾಹಿತಿ ಸಂಗ್ರಹಿಸಬಹುದು. ಆಡಳಿತವನ್ನು ಪ್ರತಿನಿಧಿಸುವ ತಂಡವು ಸಾಮಾನ್ಯವಾಗಿ ಕಾರ್ಮಿಕ ವಕೀಲರು ಮತ್ತು ನುರಿತ ಆಡಳಿತಗಾರರನ್ನು ಹೊಂದಿರುತ್ತದೆ. ''ಸಂಧಾನ'' ಎಂಬ ಪದವನ್ನು ಉಪಯೋಗಿಸಿದರೂ, ಆಡಳಿತ ವರ್ಗವು ಆಡಳಿತಗಾರರಾಗಿರುವ ಅಧ್ಯಾಪಕರೊಂದಿಗೆ ಸೇರಿ, ಈಗಾಗಲೇ ಇರುವ ಸೌಲಭ್ಯಗಳನ್ನು ಕಿತ್ತುಕೊಳ್ಳುವ ಪ್ರಯತ್ನ ಮಾಡುತ್ತದೆ. ಹೊಸ ಬೇಡಿಕೆಗಳಿಗೆ ಆಕ್ಷೇಪ ಎತ್ತುತ್ತದೆ. ಸಂಧಾನದಲ್ಲಿ ಒಳಗೊಂಡ ವಿಷಯಗಳ ಸಂಖ್ಯೆ ಮತ್ತು ಸಂಕೀರ್ಣತೆಯನ್ನು ಆಧರಿಸಿ ಒಂದು ಸಮಾಧಾನಕರ ಒಪ್ಪಂದವಾಗಲು ಒಂದು ವರ್ಷದಿಂದ ಮೂರು ವರ್ಷ ತೆಗೆದುಕೊಳ್ಳುತ್ತದೆ. ವಿಶ್ವವಿದ್ಯಾಲಯದ ಕೆಲಸ ತಡೆಯಿಲ್ಲದೆ ನಡೆದುಕೊಂಡುಹೋಗಲು ಅನುವಾಗುವಂತೆ ಹೊಸ ಒಪ್ಪಂದವು ಒಪ್ಪಿಗೆಯಾಗುವವರೆಗೂ ಹಳೆಯ ಒಪ್ಪಂದವೇ ಜಾರಿಯಲ್ಲಿರುತ್ತದೆ. ಸಾಮೂಹಿಕ ಸಂಧಾನದಿಂದ ಮೂಡುವ ಒಪ್ಪಂದದ ಉದ್ದೇಶ ''ಅಧ್ಯಾಪನ, ಸಂಶೋಧನೆ ಮತ್ತು ಸಾರ್ವಜನಿಕ ಸೇವೆಯ ಉತ್ತಮ ಗುಣಮಟ್ಟದ ಕಾರ್ಯಕ್ರಮವನ್ನು ನೀಡಬಲ್ಲ ಆರೋಗ್ಯಪೂರ್ಣ ಮತ್ತು ಅಭಿವೃದ್ಧಿಸಾಧ್ಯ ಸಂಸ್ಥೆಯ ಬೆಳವಣಿಗೆಗೆ'' ಸಹಾಯ ಮಾಡುವುದು. ಶೈಕ್ಷಣಿಕ ಉತ್ಕೃಷ್ಟತೆಯನ್ನು ಕಾಪಾಡಲು ಹಾಗೂ ಪ್ರಭಾವೀ ಅಧ್ಯಾಪಕರ ಮತ್ತು ಗ್ರಂಥಪಾಲಕರ ಭಾಗವಹಿಸುವಿಕೆಯನ್ನು ವರ್ಧಿಸಲು, ನ್ಯಾಯಯುತ ಉದ್ಯೋಗೀ ವಾತಾವರಣವನ್ನು ಖಾತರಿಪಡಿಸಲು, ವ್ಯಾಜ್ಯಗಳು ಉಂಟಾದಲ್ಲಿ ಶಾಂತಿಯುತ ಹೊಂದಾಣಿಕೆಯಾಗುವಂತೆ ತಂತ್ರ ಮತ್ತು ಕ್ರಮಗಳನ್ನು ಒದಗಿಸಲು ಇಂತಹ ಒಪ್ಪಂದವು ಶ್ರಮಿಸುತ್ತದೆ.

ತಮ್ಮ ಎಲ್ಲಾ ಕೆಲಸಗಳಲ್ಲಿ ಅರ್ಧದಷ್ಟಾದರೂ ತರಗತಿಯಲ್ಲಿ ಕಳೆಯುವ ಪೂರ್ಣಾವಧಿ ಅಧ್ಯಾಪಕರನ್ನು ಸಂಧಾನದ ಸಮಿತಿಯು ಹೊಂದಿರುತ್ತದೆ. ಅರೆಕಾಲಿಕ ಬೋಧಕರು, ಅಥ್ಲೆಟಿಕ್ ಕೋಚ್ ಮತ್ತು ಆಡಳಿತಗಾರರನ್ನು ಹೊರಗಿಡುತ್ತದೆ. ಸಾಮೂಹಿಕ ಸಂಧಾನದ ಫಲವಾಗಿ ಬರುವ ಒಪ್ಪಂದವು ಕಾನೂನುಬದ್ಧವಾದದ್ದು. ಆಡಳಿತ ಹಾಗೂ ಅಧ್ಯಾಪಕರ ನಡುವಣ ಸಂಬಂಧಗಳಲ್ಲಿ ಎಲ್ಲ ಸಮಸ್ಯೆಗಳೂ ಕಾನೂನುಬದ್ಧ ಒಪ್ಪಂದದ ಮೂಲಕವೇ ನಿವಾರಿಸಲು ಸಾಧ್ಯವೆಂದು ಆಡಳಿತ ಮತ್ತು ಅಧ್ಯಾಪಕ ಮಂಡಳಿ ಗುರುತಿಸುತ್ತವೆ. ಪರಸ್ಪರ ಅನುಕೂಲವಾಗುವುದಾದರೆ ಆಡಳಿತ ಮತ್ತು ಸಂಧಾನದ ಘಟಕವು ಕೆಲವು ನಿಬಂಧನೆಗಳನ್ನು ನಿರ್ದಿಷ್ಟ ಅವಧಿಯವರೆಗೆ ರೂಪಾಂತರಿಸಬಹುದು. ಬೋಧನೆ, ಸೃಷ್ಟಿ, ಶೋಧನೆ ಮತ್ತು ಜ್ಞಾನದ ವರದಿ ಮಾಡುವುದು ಅಧ್ಯಾಪಕರ ಮೂಲಭೂತ ಕರ್ತವ್ಯವೆಂದು AAUP ಘಟಕ ಮತ್ತು ಆಡಳಿತ ಗುರುತಿಸುತ್ತವೆ. ತಮ್ಮ ನಿರ್ದಿಷ್ಟ ಕರ್ತವ್ಯಗಳಿಗೆ ಚ್ಯುತಿ ಬಾರದಂತೆ ಈ ಚಟುವಟಿಕೆಗಳಲ್ಲಿ ಗ್ರಂಥಪಾಲಕರೂ ಸೇರಿಕೊಳ್ಳಬಹುದು. ಈ ಕೆಲಸಗಳು ಪರಿಣಾಮಕಾರಿಯಾಗಿರಲು ಕೆಲವು ರಕ್ಷಣೆಗಳ ಅಗತ್ಯವಿದೆ ಎಂದು ಕಂಡುಕೊಳ್ಳಲಾಗಿದೆ. ಈ ರಕ್ಷಣೆಗಳನ್ನು ಶೈಕ್ಷಣಿಕ ಸ್ವಾತಂತ್ರ್ಯ ಮತ್ತು ಸೇವಾವಧಿಯ ನಿರಂತರ ನೇಮಕಾತಿ ಎಂದು ಕರೆಯುತ್ತಾರೆ. ಸೇವಾವಧಿ ಮತ್ತು ಶೈಕ್ಷಣಿಕ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಜವಾಬ್ದಾರಿಯುತ ವೃತ್ತಿಪರತೆಯ ಪರಿಕಲ್ಪನೆಯೊಂದಿಗೇ ನೋಡಬೇಕು. ಆದುದರಿಂದ AAUP ಮತ್ತು ಆಡಳಿತಗಳ ಕಳಕಳಿ ಜವಾಬ್ದಾರಿಯುತ ವೃತ್ತಿಪರ ಸೇವೆಗೂ ವಿಸ್ತರಿಸುತ್ತದೆ.

ಉದ್ಯೋಗಿಗಳ ಆಯ್ಕೆಗೆ ಸಂಬಂಧಿಸಿದಂತೆ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕ ವೃತ್ತಿಯ ವಿವಿಧ ಹಂತಗಳಿಗೆ ಬೇಕಾದ ವಿದ್ಯಾರ್ಹತೆಯನ್ನು ಒಪ್ಪಂದವು ಸ್ಪಷ್ಟಪಡಿಸುತ್ತದೆ. ವಿಶ್ವವಿದ್ಯಾಲಯದ ಸ್ವರೂಪಕ್ಕೆ ಅನುಗುಣವಾಗಿ ಬೋಧಕರ ಹಂತದಿಂದ ಅಧ್ಯಾಪಕರುಗಳನ್ನು ನೇಮಕಾತಿ ಮಾಡಲಾಗುವುದು; ಆದರೆ ಹೆಚ್ಚಿನ ವಿಶ್ವವಿದ್ಯಾಲಯಗಳಲ್ಲಿ ಸಹಾಯಕ ಪ್ರೊಫೆಸರರ ಹಂತದಿಂದ ನೇಮಕಾತಿ ಮಾಡಲಾಗುತ್ತದೆ. ಬಡ್ತಿಯು ಸೇವಾವಧಿ ಒಂದನ್ನೇ ಅವಲಂಬಿಸಿರುವುದಿಲ್ಲ. ಪ್ರತಿಯೊಂದು ಬಡ್ತಿಗೂ ಪ್ರೊಫೆಸರ್‌ಗಳು ಬೋಧನೆ, ಸಂಶೋಧನೆ ಮತ್ತು ಸೇವೆಯಲ್ಲಿ ನಿರ್ದಿಷ್ಟ ನಿರೀಕ್ಷೆಗಳನ್ನು ಪೂರೈಸಬೇಕು. ಅಧ್ಯಾಪಕರು ಅದಕ್ಕಾಗಿಯೇ ನೇಮಿಸಲಾದ ಬಡ್ತಿ ಮತ್ತು ಸೇವಾವಧಿ ಸಮಿತಿಯ ಮುಂದೆ ಸಂದರ್ಶನಕ್ಕೆ ಬರುವ ಮೊದಲೇ ಎಲ್ಲ ಅಭ್ಯರ್ಥಿಗಳ ಅರ್ಜಿಗಳೂ ವಿಭಾಗದ ಮುಖ್ಯಸ್ಥರಿಗೆ ಮತ್ತು ಕಾಲೇಜಿನ ಡೀನ್‌ಗೆ ತಲುಪಬೇಕು. ಒಂದೊಮ್ಮೆ ಡೀನರ ಅಭಿಪ್ರಾಯ ಅಭ್ಯರ್ಥಿಗೆ ವಿರುದ್ಧವಾಗಿದ್ದಲ್ಲಿ, ಅಭ್ಯರ್ಥಿಯು ಅದನ್ನು ಪ್ರಶ್ನಿಸಿ ದಾಖಲೆಗಳನ್ನು ಒದಗಿಸಬಹುದು. ಸಮಿತಿಯು ಬಡ್ತಿಗೆ ಒಪ್ಪದೇ ಇದ್ದಲ್ಲಿ ಅಭ್ಯರ್ಥಿಯು ವಿಶ್ವಸ್ತ ಮಂಡಲಿಗೆ ಆ ಬಗ್ಗೆ ಅಹವಾಲು ಸಲ್ಲಿಸಬಹುದು. ಯಾವುದೇ ಕಾನೂನು ವ್ಯಾಜ್ಯ ಉದ್ಭವಿಸುವ ಸಂಭವ ಇಲ್ಲದಿದ್ದಲ್ಲಿ ಮಂಡಳಿಯು ಸಮಿತಿಯ ನಿರ್ಧಾರವನ್ನು



'ಟ್ವಿಡಲ್‌ಡಂ - ಟ್ವಿಡಲ್‌ಡೀ'

ಸಾಮಾನ್ಯವಾಗಿ ಎತ್ತಿಹಿಡಿಯುತ್ತದೆ. ಆದರೆ ಸಮಿತಿಯ ನಿರ್ಧಾರವನ್ನು ಸ್ವೀಕರಿಸಲು ಅಥವಾ ನಿರಾಕರಿಸಲು ಆಡಳಿತ ಮಂಡಳಿಗೆ ಹಕ್ಕಿದೆ. ವಿಶ್ವವಿದ್ಯಾಲಯದ ನಿರ್ಧಾರದ ವಿರುದ್ಧ ಅಭ್ಯರ್ಥಿಯು ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡಬಹುದು. ಇಂತಹ ಸಂದರ್ಭಗಳು ಸಾಮಾನ್ಯವಲ್ಲದಿದ್ದರೂ ಇಲ್ಲವೇ ಇಲ್ಲ ಎಂದು ಹೇಳಲಾಗುವುದಿಲ್ಲ.

ಅಧ್ಯಾಪಕರ ಸಂಘ ಮತ್ತು ವಿಶ್ವವಿದ್ಯಾಲಯದ ನಡುವಿನ ಒಪ್ಪಂದವು ಎಂತಹ ಪರಿಸ್ಥಿತಿಯಲ್ಲಿ ಒಬ್ಬ ಅಧ್ಯಾಪಕನನ್ನು ನ್ಯಾಯಸಮ್ಮತ ಕಾರಣಗಳಿಂದಾಗಿ ಶಿಸ್ತುಕ್ರಮಕ್ಕೆ ಒಳಪಡಿಸಬಹುದು ಮತ್ತು ಸೇವೆಯಿಂದ ತೆಗೆದುಹಾಕಬಹುದು ಎಂದು ಸ್ಪಷ್ಟವಾಗಿ ನಿಗದಿಗೊಳಿಸುತ್ತದೆ. ಎಲ್ಲಾ ಅಪೀಲುಗಳೂ ಮುಗಿದ ನಂತರ ತೀವ್ರವಾದ ಅಪರಾಧ ಸಾಬೀತಾದರೆ, ಅದು ಅಧ್ಯಾಪಕನನ್ನು ಉದ್ಯೋಗದಿಂದ ಕಿತ್ತುಹಾಕಲು ಕಾರಣವಾಗುತ್ತದೆ. ಯಾವುದೇ ಕಾರ್ಯ ಯೋಜನೆಯು ಪೂರ್ಣಗೊಂಡ ಮೇಲೆ, ಯಾವ ಉದ್ಯೋಗಿಯ ಸೇವೆಯ ಅವಶ್ಯಕತೆಯಿರುವುದಿಲ್ಲವೋ ಅಂತಹವರಿಗೆ ಸಾಧ್ಯವಾದಮಟ್ಟಿಗೆ ಬದಲಿ ಉದ್ಯೋಗವನ್ನು ಕಲ್ಪಿಸಬೇಕಾದ ಕರ್ತವ್ಯ ವಿಶ್ವವಿದ್ಯಾಲಯಕ್ಕಿದೆ. ಅದು ಸಾಧ್ಯವಿಲ್ಲದೆ ಇದ್ದ ಪಕ್ಷದಲ್ಲಿ ವಿಶ್ವವಿದ್ಯಾಲಯವು ಸೇವಾವಧಿಯಿಲ್ಲದವರಿಗೆ ಒಂದು ವರ್ಷದ ನೋಟೀಸೂ ಸೇವಾವಧಿಯಿರುವವರಿಗೆ ಎರಡು ವರ್ಷದ ನೋಟೀಸೂ ಕೊಡಬೇಕು. ಇಲ್ಲದಿದ್ದಲ್ಲಿ ನೋಟೀಸಿನ ಅವಧಿಯವರೆಗೆ ವಿಶ್ವವಿದ್ಯಾಲಯವು ಅಭ್ಯರ್ಥಿಗೆ ಪೂರ್ತಿ ಸಂಬಳ ಕೊಡಬೇಕು. ಶಿಸ್ತುಕ್ರಮಕ್ಕೆ ಸಂಬಂಧಿಸಿದಂತೆ ಯಾವುದೇ ಆಡಳಿತಾಧಿಕಾರಿಯೂ ಒಬ್ಬ ಅಧ್ಯಾಪಕನನ್ನು ಶಿಕ್ಷಿಸಲು ಈಗಾಗಲೇ ಸ್ಥಾಪಿತವಾಗಿರುವ ಪ್ರಕ್ರಿಯೆಗೆ ಹೊರತಾಗಿ ಏಕಪಕ್ಷೀಯ ನಿರ್ಧಾರ ತೆಗೆದುಕೊಳ್ಳುವಂತಿಲ್ಲ. ಅಧ್ಯಾಪಕನಿಗೆ ತನ್ನ ಸೇವಾ ದಾಖಲೆಯನ್ನು ಪರೀಕ್ಷಿಸುವ ಹಕ್ಕಿದೆ ಮತ್ತು ಕಾನೂನುಬಾಹಿರ ದಾಖಲೆಗಳನ್ನು ತೆಗೆದುಹಾಕುವಂತೆ ಆಗ್ರಹಪಡಿಸಲು ಸಾಧ್ಯವಿದೆ.

ಪ್ರತಿ ಸಂಸ್ಥೆಯ ಸ್ವರೂಪ ಮತ್ತು ಸಂಪನ್ಮೂಲಗಳ ಆಧಾರದ ಮೇಲೆ ಅಧ್ಯಾಪಕರ ಸಂಬಳ ನಿರ್ಧಾರವಾಗುತ್ತದೆ. ಭಾರತದಲ್ಲಿ ವಿಶ್ವವಿದ್ಯಾಲಯಗಳ ಅಧ್ಯಾಪಕರ ಸಂಬಳವನ್ನು ನಿರ್ಧರಿಸುವ ವಿಶ್ವವಿದ್ಯಾಲಯ ಅನುದಾನ ಆಯೋಗದಂತೆ ಅಮೇರಿಕದಲ್ಲಿ ರಾಷ್ಟ್ರೀಯ ಮಟ್ಟದ ಯಾವುದೇ ಅಧಿಕಾರಶಾಹಿ ಸಂಸ್ಥೆ ಇಲ್ಲ. ಅಂತರರಾಷ್ಟ್ರೀಯ ಖ್ಯಾತಿಯಿರುವ ವಿಶ್ವವಿದ್ಯಾಲಯಗಳು ಮತ್ತು ಒಳ್ಳೆಯ ಸಂಪನ್ಮೂಲವಿರುವ ಖಾಸಗಿ ಕಾಲೇಜುಗಳು ಅಧ್ಯಾಪಕರಿಗೆ ಉತ್ತಮ ಸಂಬಳವನ್ನು ಕೊಡುತ್ತವೆ. ಉದಾಹರಣೆಗೆ, ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರ ಸರಾಸರಿ ಸಂಬಳ ವರ್ಷಕ್ಕೆ ಒಂದು ಲಕ್ಷ ಡಾಲರ್ ಇರುತ್ತದೆ. ಇದಲ್ಲದೆ, ಸಂಶೋಧನೆ ಮತ್ತು ಪ್ರಕಟಣೆಗಳ ಮೂಲಕ ವಿಶ್ವವಿದ್ಯಾಲಯದ ಖ್ಯಾತಿಯನ್ನು ಹೆಚ್ಚಿಸುವ ಸಾಮರ್ಥ್ಯವಿರುವ ಅಭ್ಯರ್ಥಿಗೆ ಸರಾಸರಿ ಸಂಬಳಕ್ಕಿಂತ ಸಾಕಷ್ಟು ಹೆಚ್ಚಿನ ಸಂಬಳವನ್ನು ಆಡಳಿತವು ನಿರ್ಧರಿಸಬಹುದು. ಒಟ್ಟಾರೆ ಗಮನಿಸಿದಾಗ ಸರಾಸರಿ ಸಂಬಳ ಸುಮಾರು ೩೫,೦೦೦ ಡಾಲರ್ ಇರುವ ಖಾಸಗಿ, ಧಾರ್ಮಿಕ ಶಾಲೆಗಳು ಬಹಳ ಇವೆ. ಅಂತಹ ಶಾಲೆಗಳ ಸ್ವರೂಪ ಏನೇ ಇರಲಿ, ಬೆಲೆ ಏರಿಕೆಯನ್ನು ನಿಭಾಯಿಸಲು ಅನುವಾಗುವಂತೆ ಪ್ರತಿಯೊಂದು ವಿದ್ಯಾಲಯವೂ ಸಂಬಳವನ್ನು ಹೆಚ್ಚಿಸುತ್ತಿರುತ್ತದೆ. ಭಾರತದಲ್ಲಿರುವಂತೆ ಅನೇಕ ವೇಳೆ ಅಮೇರಿಕಾದ ವಿಶ್ವವಿದ್ಯಾಲಯಗಳೂ ಕೂಡ ಸಂಸ್ಥೆಯ 'ಘನತೆ' ಕಾಪಾಡುವ ನೆಪ ಒಡ್ಡಿ ಹಕ್ಕೊತ್ತಾಯ ತರುವ ಅಧ್ಯಾಪಕರನ್ನು ಹೊರದೂಡುವ ಪ್ರಚೋದನೆಗೆ ಒಳಗಾಗುತ್ತವೆ. ನ್ಯಾಯಯುತ ಪ್ರಕ್ರಿಯೆಯ ಸಿದ್ಧಾಂತವನ್ನು ಒಪ್ಪಿಕೊಂಡಿರುವ ಶಿಕ್ಷಣ ಸಂಸ್ಥೆಗಳು ಒಪ್ಪಂದಗಳಲ್ಲಿ ಸೂಚಿಸಿರುವಂತೆ ಪ್ರಗತಿಪರ ಶಿಸ್ತುಕ್ರಮ ಮತ್ತು ವಿಚಾರಣಾ ಕ್ರಮಗಳನ್ನು ಅನುಸರಿಸುವಂತೆ AAUP ಘಟಕವು ಪ್ರಯತ್ನಿಸುತ್ತದೆ ಮತ್ತು ಆಡಳಿತ ವರ್ಗಗಳ ದುಂಡಾವರ್ತಿ ಪ್ರವೃತ್ತಿಯನ್ನು ಹಿಮ್ಮೆಟ್ಟಿಸುತ್ತದೆ. ಯಾವುದೇ ವ್ಯಕ್ತಿಯು ತನ್ನ ಮೊದಲ ತಿದ್ದುಪಡಿ ಹಕ್ಕನ್ನು (First Amendment Rights) ಚಲಾಯಿಸಿದ್ದಕ್ಕಾಗಲಿ, ಶೈಕ್ಷಣಿಕ ಸ್ವಾತಂತ್ರ್ಯವನ್ನು ಉಪಯೋಗಿಸಿದ್ದಕ್ಕಾಗಲಿ ಕೆಲಸವನ್ನು ಕಳೆದುಕೊಳ್ಳುವಂತಿಲ್ಲ. ಏಕೆಂದರೆ ಅವು ಸಂವಿಧಾನದತ್ತವಾದ ಹಕ್ಕುಗಳು. ಸಾಬೀತಾಗಿರುವಂತಹ ನ್ಯಾಯಸಮ್ಮತ ಕಾರಣಗಳಿಗಾಗಿ ಮಾತ್ರ ಅಧ್ಯಾಪಕರ ಮೇಲೆ ಶಿಸ್ತುಕ್ರಮ ಜರುಗಿಸಬಹುದು ಇಲ್ಲವೇ ಅವರನ್ನು ಕೆಲಸದಿಂದ ತೆಗೆದುಹಾಕಬಹುದು. ಈ ಬಗ್ಗೆ ವಿಶ್ವಸ್ಥ ಮಂಡಳಿಯು ನಿರ್ಧಾರ ತೆಗೆದುಕೊಂಡ ದಿನದಿಂದಲೇ ಅಧ್ಯಾಪಕನ ಸೇವೆ ಅಂತ್ಯಗೊಳ್ಳುತ್ತದೆ. ಕೆಲಸದಿಂದ ತೆಗೆದುಹಾಕಿದ್ದಕ್ಕೆ ಸ್ಪಷ್ಟವಾದ ಮತ್ತು ನಂಬಲರ್ಹವಾದ ಸಾಕ್ಷ್ಯವನ್ನು ಸಾಬೀತುಪಡಿಸುವುದು ಆಡಳಿತದ ಜವಾಬ್ದಾರಿ. ಹೀಗೆ ಕೆಲಸದಿಂದ ತೆಗೆದುಹಾಕುವ ಮೊದಲು ಅಗತ್ಯವಿದ್ದರೆ ಅಂತಹ ಅಧ್ಯಾಪಕನನ್ನು ಅಮಾನತ್ತಿನಲ್ಲಿಡಲು ಆಡಳಿತಕ್ಕೆ ಅಧಿಕಾರವಿರುತ್ತದೆ. ಉದಾಹರಣೆಗೆ, ವ್ಯಾಜ್ಯವು ಬಗೆಹರಿಯಬೇಕಾದ ಅವಧಿಯಲ್ಲಿ ಅಧ್ಯಾಪಕನು ಕೆಲಸದಲ್ಲಿರುವುದರಿಂದ ಅವನಿಗಾಗಲಿ ಇತರರಿಗಾಗಲಿ ಹಾನಿಯಾಗುವ ಸಂಭವವಿದ್ದರೆ ಅಂತಹ ಅಧ್ಯಾಪಕನನ್ನು ಅಮಾನತ್ತಿನಲ್ಲಿಡುವುದು ಸಾಮಾನ್ಯವಾಗಿ ಅನಿವಾರ್ಯವಾಗುತ್ತದೆ. ಹೀಗೆ ತನಿಖೆ ಇನ್ನೂ ಮುಂದುವರಿಯುತ್ತಿರುವಾಗ ಅಮಾನತ್ತಿನಲ್ಲಿರುವವರಿಗೆ ಅವರ ಸಂಬಳದ ಪಾವತಿ ಆಗುತ್ತಿರುತ್ತದೆ.

ಅಧ್ಯಾಪಕರ ಕಾರ್ಯನಿರ್ವಹಣೆಯ ಮೌಲ್ಯಮಾಪನಕ್ಕೆ ಸ್ಪಷ್ಟವಾಗಿ ನಿಗದಿಪಡಿಸಿದ ಸಾಧನಗಳಾಗಲಿ ತಂತ್ರಗಳಾಗಲಿ ಇಲ್ಲದಿದ್ದಲ್ಲಿ ಆಡಳಿತವು ತನಗೆ ಸೂಕ್ತವೆನಿಸಿದ ಯಾವುದೇ ವಿಧಾನವನ್ನು ಅನುಸರಿಸಬಹುದು. ''ನ್ಯಾಯಯುತವಾಗಿ ಮತ್ತು ವಸ್ತುನಿಷ್ಠವಾಗಿ ಮೌಲ್ಯಮಾಪನ ಮಾಡಬೇಕು'' ಎಂದು ಒಪ್ಪಂದವು ಸ್ಪಷ್ಟವಾಗಿ ಸಾರುವಾಗ ಈ ವಿಧಾನವೂ ಅದರಲ್ಲಿ ಸೇರಿರುತ್ತದೆ.

AAUPಯ ಒಪ್ಪಿಗೆ ಪಡೆದ ಮೌಲ್ಯಮಾಪನದ ಪ್ರಕ್ರಿಯೆಯ ಉದ್ದೇಶಗಳು ಎರಡು : ತಮ್ಮ ವೃತ್ತಿ ನಿರ್ವಹಣೆಯನ್ನು ಯಾವತ್ತೂ ಉತ್ತಮಪಡಿಸಿಕೊಳ್ಳಲು ಅಧ್ಯಾಪಕರಿಗೆ ಸಹಾಯ ಮಾಡುವುದು ಮತ್ತು ಅಧ್ಯಾಪಕರ ಹಾಗೂ ಆಡಳಿತ ಕಾರ್ಯ ನಿರ್ವಹಣೆಯ ಬಗ್ಗೆ ಮಾಹಿತಿ ಒದಗಿಸುವುದು.

ಸಾಮಾನ್ಯವಾಗಿ ಅಧ್ಯಾಪಕರ ಮೌಲ್ಯಮಾಪನವನ್ನು ಈ ರೀತಿ ನಡೆಸಲಾಗುತ್ತದೆ : (ಅ) ಸಂಧಾನ ಘಟಕದ ಸದಸ್ಯರನ್ನು ಮೂರು ತಿಂಗಳಿಗೊಮ್ಮೆ ಅವರು ಯಾರಿಗೆ ಪಾಠ ಮಾಡುತ್ತಾರೋ ಆ ವಿದ್ಯಾರ್ಥಿಗಳು ಮೌಲ್ಯಮಾಪನ ಮಾಡುತ್ತಾರೆ. (ಆ) ಆನಂತರ ವಿಭಾಗದ ಮುಖ್ಯಸ್ಥರು, ಸೇವಾವಧಿ ಹೊಂದಿದ ಸದಸ್ಯರೊಡನೆ ಸಮಾಲೋಚಿಸಿದ ನಂತರ ವರ್ಷಕ್ಕೊಮ್ಮೆ ಸಭೆ ಸೇರಿ ಪ್ರತಿಯೊಬ್ಬ ಸೇವಾವಧಿ ಹೊಂದಿರದ ಅಧ್ಯಾಪಕರ ವೃತ್ತಿ ಬೆಳವಣಿಗೆಯನ್ನು ಪರಿಶೀಲಿಸುತ್ತಾರೆ. ಇದಲ್ಲದೆ ಅಧ್ಯಾಪಕರ ಮೊದಲ ವರ್ಷದಲ್ಲಿ ಮೊದಲ ಮೂರು ತಿಂಗಳ ಕೊನೆಯಲ್ಲಿಯೇ ಮೌಲ್ಯಮಾಪನ ಮಾಡುತ್ತಾರೆ. ಈ ರೀತಿಯ ಮೌಲ್ಯಮಾಪನವನ್ನು ಖಚಿತಪಡಿಸುವ ಜವಾಬ್ದಾರಿ ವಿಭಾಗದ ಮುಖ್ಯಸ್ಥರದು ಮತ್ತು ಸೇವಾವಧಿ ಹೊಂದಿರದ ಅಧ್ಯಾಪಕ ಮಂಡಲಿಯ ಸದಸ್ಯರದು. ಈ ವಾರ್ಷಿಕ ಸಭೆಯಲ್ಲಿ ಆಯಾ ಅಧ್ಯಾಪಕರ ವೃತ್ತಿ ನಿರ್ವಹಣೆ ಮತ್ತು ವೃತ್ತಿಗೆ ಸಂಬಂಧಿಸಿದ ಸಂಶೋಧನಾ ಯೋಜನೆಯನ್ನು ಪರಿಶೀಲಿಸಲಾಗುತ್ತದೆ. ಅವಶ್ಯಕತೆಯಿದ್ದೆಡೆಯಲ್ಲಿ ಕೊರತೆಯನ್ನು ತುಂಬಲು ಕಾರ್ಯ ಯೋಜನೆಯನ್ನು ರೂಪಿಸಿ ಅಧ್ಯಾಪನ ವೃತ್ತಿ ಬೆಳವಣಿಗೆಯಾಗುವಂತೆ ನೋಡಿಕೊಳ್ಳುತ್ತದೆ. ಪ್ರತಿ ಸಭೆಯ ಕೊನೆಯಲ್ಲಿ ಸಭಾಧ್ಯಕ್ಷರು ಸಭೆಯ ಸಾರಾಂಶವನ್ನು ತಯಾರಿಸುತ್ತಾರೆ.

ಸಾರಾಂಶದಲ್ಲಿನ ಯಾವುದೇ ವಿಷಯದ ಬಗ್ಗೆ ಭಿನ್ನಾಭಿಪ್ರಾಯವಿದ್ದರೆ ಅಧ್ಯಾಪಕ ಮಂಡಲಿಯ ಸದಸ್ಯರು ಬರವಣಿಗೆಯಲ್ಲಿ ಅದನ್ನು ಸೂಚಿಸಬಹುದು. ಅಂತಹ ಬರಹರೂಪದ ಅಭಿಪ್ರಾಯವು ಸಾರಾಂಶದ ಭಾಗವಾಗುತ್ತದೆ. ಈ ಹೇಳಿಕೆಗಳು ಆಡಳಿತವು ಸಿದ್ಧಪಡಿಸಿ ತನ್ನಲ್ಲಿ ಇರಿಸಿಕೊಳ್ಳುವ ನೌಕರ ದಾಖಲೆಯ ಭಾಗವಾಗುತ್ತದೆ. ಇದರ ಒಂದು ನಕಲನ್ನು ಸಂಬಂಧಪಟ್ಟ ಅಧ್ಯಾಪಕನಿಗೆ ಕೊಡಲಾಗುತ್ತದೆ.

ಸೇವಾವಧಿ ಖಚಿತವಾಗಿರುವ ಅಧ್ಯಾಪಕರನ್ನು ಅವರ ವಿಭಾಗದ ಸಹೋದ್ಯೋಗಿಗಳ ಸಮಿತಿಯು ಚಳಿಗಾಲದ ಕೊನೆಯಲ್ಲಿ ಮೌಲ್ಯಮಾಪನ ಮಾಡುತ್ತದೆ. ಇವರಲ್ಲಿ ವಿಭಾಗದ ಮುಖ್ಯಸ್ಥರೂ ಸೇರಿರುತ್ತಾರೆ. ಇದೇ ರೀತಿ ವಿಭಾಗ ಮುಖ್ಯಸ್ಥರ ಮೌಲ್ಯಮಾಪನವೂ ನಡೆಯುತ್ತದೆ. ಆಯಾ ವಿಭಾಗದಲ್ಲಿ ಎಷ್ಟು ಸದಸ್ಯರಿರುತ್ತಾರೆ ಎಂಬುದನ್ನು ಆಧರಿಸಿ ಮೌಲ್ಯಮಾಪನ ಸಮಿತಿಯ ಗಾತ್ರವನ್ನು ನಿರ್ಧರಿಸಲಾಗುತ್ತದೆ.

ದಿನೇಶ್ ಹಾಸನ್
ನಂ. ೮೫, ಸ್ಟಬ್ಸ್ ಮಿಲ್ಸ್ ರಸ್ತೆ, ಲಿಬನಾನ್
ಓಹಾಯೋ - ೪೫೦೩೬, ಅಮೇರಿಕ

# ವಿಕಿರಣದಿಂದ ಪರಿಸರ ಮಾಲಿನ್ಯ



ಪರಮಾಣು ವಿದ್ಯುತ್ ಕೇಂದ್ರ - ನರೋರಾ

ನಿಸರ್ಗದಲ್ಲಿ ಕಾಣಬರುವ ರಾಸಾಯನಿಕ ಧಾತುಗಳಲ್ಲಿ ಇತರ ಎಲ್ಲದಕ್ಕಿಂತ ಹೆಚ್ಚು ಪರಮಾಣು ತೂಕ ಉಳ್ಳದ್ದು ಯುರೇನಿಯಮ್. ಆ ಧಾತು, ಹೊರಗಿನ ಯಾವ ಪ್ರಚೋದನೆಯೂ ಇಲ್ಲದೆ, ತನಗೆ ತಾನೇ ಸದಾ ಒಂದು ಬಗೆಯ ತೀಕ್ಷ್ಣ ಕಿರಣಗಳನ್ನು ಸೂಸುತ್ತಾ ಇರುವುದನ್ನೂ ಆ ಕಿರಣಗಳು ದಪ್ಪನಾದ ಕಪ್ಪು ಕಾಗದದ ಹೊದಿಕೆಯ ಮೂಲಕ ತೂರಿಹೋಗಿ ಒಳಗಿರುವ ಫೋಟೊ ಫಿಲ್ಮನ್ನು ಮಸುಕುಗೊಳಿಸ ಬಲ್ಲವೆಂಬುದನ್ನೂ ಫ್ರೆಂಚ್ ವಿಜ್ಞಾನಿ, ಹೆನ್ರಿ ಬೆಕರಲ್ ೧೮೯೬ರಲ್ಲಿ ಮೊತ್ತಮೊದಲು ಗಮನಿಸಿದ. ಯುರೇನಿಯಮ್‌ನ ಈ ಗುಣಕ್ಕೆ ವಿಕಿರಣ ಪಟುತ್ವ *(radio-activity)* ಎಂಬ ಹೆಸರು ಬಂದಿತು. ಮೇರಿ ಕ್ಯೂರಿ ಮತ್ತು ಆಕೆಯ ಗಂಡ ಪಿಯರ್ ಕ್ಯೂರಿ ವಿಕಿರಣಪಟುತ್ವದಲ್ಲಿ ಆಸಕ್ತರಾಗಿ, ಪ್ರಯೋಗಗಳನ್ನು ನಡೆಸಿ, ಯುರೇನಿಯಮ್‌ಗಿಂತ ಸ್ವಲ್ಪ ಕಡಿಮೆ ಪರಮಾಣು ತೂಕ ಉಳ್ಳ ಥೋರಿಯಮ್ ಸಹ ವಿಕಿರಣಪಟು ಎಂದು ತೋರಿಸಿದರು.

ಯುರೇನಿಯಮ್ ಮತ್ತು ಥೋರಿಯಮ್ ಪರಮಾಣುಗಳು, ಅವುಗಳ ಅಧಿಕ ತೂಕದಿಂದಾಗಿ ಅಸ್ಥಿರ, ಆದ್ದರಿಂದ ಅವು ಒಂದೊಂದಾಗಿ ವಿಘಟಿಸುತ್ತಾ ಇರುತ್ತವೆ ಎಂಬುದು ಆಮೇಲೆ ಗೊತ್ತಾಯಿತು. ವಾಸ್ತವವಾಗಿ ಆ ಅಸ್ಥಿರ ಪರಮಾಣುಗಳ ಕೇಂದ್ರಭಾಗದಲ್ಲಿರುವ ಪರಮಾಣು ಬೀಜಗಳಿಂದ ಆಲ್ಫ ಕಣ, ಬೀಟ ಕಣ ಎಂಬ ಎರಡು ಬಗೆಯ ಉಪ ಪರಮಾಣು ಕಣಗಳೂ ಗಾಮ ಕಿರಣಗಳೆಂಬ ತೀಕ್ಷ್ಣ ಕಿರಣಗಳೂ ಚಿಮ್ಮಿ ಹೊರಬರುತ್ತಿರುವುದನ್ನೇ ನಾವು ವಿಕಿರಣ ಎಂದು ಗುರುತಿಸಿರುವುದು. ಆಲ್ಫ ಕಣ ಎಂಬುದು ಎರಡು ಪ್ರೋಟಾನ್ ಮತ್ತು ಎರಡು ನ್ಯೂಟ್ರಾನ್‌ಗಳಿಂದ ರೂಪುಗೊಂಡಿರುವ ಕಣ; ಬೀಟ ಕಣ ಎಂಬುದು ಕೇವಲ ಇಲೆಕ್ಟ್ರಾನ್; ಗಾಮ ಕಿರಣ ಎಂಬುದು ಸಾಮಾನ್ಯ ಬೆಳಕಿನ ಕಿರಣಗಳಂತೆ ಮತ್ತು ಎಕ್ಸ್ ಕಿರಣಗಳಂತೆಯೇ ವಿದ್ಯುತ್ಕಾಂತ ತರಂಗ; ಆದರೆ ಎಕ್ಸ್ ಕಿರಣಗಳಿಗಿಂತಲೂ ಕಡಿಮೆ ಅಲೆಯುದ್ದದ್ದು, ಆದ ಕಾರಣ ಇನ್ನೂ ತೀಕ್ಷ್ಣವಾದದ್ದು. ವಿಕಿರಣವನ್ನು ಹೊರಹಾಕಿದುದರ ಪರಿಣಾಮವಾಗಿ ಪರಮಾಣು ಬೀಜವು ಕ್ಷಯಿಸಿ ಅದಕ್ಕಿಂತ ಹಗುರವಾದ ಬೇರೊಂದು ಧಾತುವಿನ ಪರಮಾಣು ಬೀಜವಾಗುತ್ತದೆ. ೨೩೮ ತೂಕದ ಯುರೇನಿಯಮ್ ಪರಮಾಣುಗಳೂ ೨೩೨ ತೂಕದ ಥೋರಿಯಮ್ ಪರಮಾಣುಗಳೂ ಈ ರೀತಿ ಕ್ಷಯಿಸುವುದನ್ನು ಹಂತ ಹಂತವಾಗಿ ಮುಂದುವರಿಸಿ ಕೊಂಡು ಹೋಗಿ, ಕೊನೆಯಲ್ಲಿ, ೨೦೬ ತೂಕದ ಸೀಸದ ಪರಮಾಣುವಾಗಿಬಿಡುತ್ತವೆ.

ವಿಕಿರಣಪಟು ಪರಮಾಣುಗಳು ಹೊರಸೂಸುವ ವಿಕಿರಣವು ಜೀವಿಗಳ ದೇಹಕ್ಕೆ ಬಡಿದರೆ ತೀವ್ರ ದುಷ್ಪರಿಣಾಮಗಳುಂಟಾಗುತ್ತವೆ. ದೇಹದ ಮೇಲೆ ಹೆಚ್ಚಿನ ಪ್ರಮಾಣದಲ್ಲಿ ಎರಗಿದಾಗ ವಿಕಿರಣ ಬೇನೆ *(radiation sickness)* ಎಂಬ ಒಂದು ಬಗೆಯ ಅಸ್ವಸ್ಥತೆ ಉಂಟಾಗುತ್ತದೆ. ನಿಶ್ಶಕ್ತಿ, ವಾಕರಿಕೆ, ವಾಂತಿ, ಕೂದಲು ಮತ್ತು ಹಲ್ಲುಗಳು ಉದುರುವುದು, ಇವೇ ಮುಂತಾದ ರೋಗ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಕೆಲವು ದಿನಗಳಲ್ಲಿ, ಹೆಚ್ಚೆಂದರೆ ಕೆಲವು ವಾರಗಳಲ್ಲಿ, ಸಾವು ಖಂಡಿತ. ಆಕಸ್ಮಾತ್ ವಿಕಿರಣತಾಡನೆಗೆ ಗುರಿಯಾದವರು ಅಧಿಕ ಪ್ರಮಾಣದಲ್ಲಿ ಅದಕ್ಕೆ ಗುರಿಯಾಗಿ, ಈ ರೀತಿ ವಿಕಿರಣಾ ಬೇನೆಯಿಂದ ಸಾಯುವುದು ಒಂದು ದೃಷ್ಟಿಯಲ್ಲಿ ವಾಸಿ. ಏಕೆಂದರೆ, ಕಡಿಮೆ ಪ್ರಮಾಣದಲ್ಲಿ ಆಗಾಗ ವಿಕಿರಣಾತಾಡನೆಗೆ ಮೈ ಒಡ್ಡಿದರೆ ಉಂಟಾಗಬಹುದಾದ ದೀರ್ಘಕಾಲಿಕ ಪರಿಣಾಮಗಳು ತುಂಬ ಘೋರವಾದುವು. ದೇಹವನ್ನು ಹೊಕ್ಕ ವಿಕಿರಣ ಜನನೇಂದ್ರಿಯಗಳ ಮೇಲೆ ಎರಗಿ ಸಂತಾನಶಕ್ತಿಯನ್ನು ನಾಶಮಾಡಬಹುದು; ಮೂಳೆಯ ನೆಣದ ಮೇಲೆ ಎರಗಿ ಬಿಳಿಯ ರಕ್ತ ಕಣಗಳ ಉತ್ಪಾದನೆಯನ್ನು ಕುಂಠಿತಗೊಳಿಸಿ, ದೇಹದ ರಕ್ಷಣಾ ವ್ಯವಸ್ಥೆಯನ್ನು ಹಾಳುಮಾಡಬಹುದು; ಆರೋಗ್ಯದಿಂದಿರುವ ಸಾಮಾನ್ಯ ಜೀವಕೋಶಗಳನ್ನು ಕ್ಯಾನ್ಸರ್ ಕೋಶಗಳನ್ನಾಗಿ ಪರಿವರ್ತಿಸಬಹುದು; ಆನುವಂಶಿಕತಾ ದ್ರವ್ಯವನ್ನು ಮಾರ್ಪಡಿಸಿ, ಮುಂದೆ ಹುಟ್ಟುವ ಮಕ್ಕಳ ಅಂಗವಿಕಲತೆಗೆ ಕಾರಣವಾಗಬಹುದು. ವಿಕಿರಣದ ತೀಕ್ಷ್ಣತೆ ಮತ್ತು ತಾಡನೆಯ ಅವಧಿ ಹೆಚ್ಚಾದಂತೆ ಈ ಒಂದೊಂದು ಪರಿಣಾಮದ ಸಂಭವವೂ ಹೆಚ್ಚುತ್ತ ಹೋಗುವುದು. ವಿಕಿರಣವನ್ನು ಕಂಡುಹಿಡಿದ ಹೊಸದರಲ್ಲಿ ಇದೆಲ್ಲ ಗೊತ್ತಿರಲಿಲ್ಲವಾದುದರಿಂದ ಆ ಕ್ಷೇತ್ರದಲ್ಲಿ ಸಂಶೋಧನೆ ಕೈಗೊಂಡ ಅನೇಕ ವಿಜ್ಞಾನಿಗಳನ್ನು ವಿಕಿರಣ ಆಹುತಿ ತೆಗೆದುಕೊಂಡಿತು. ಮೇರಿ ಕ್ಯೂರಿ ಮತ್ತು ಆಕೆಯ ಮಗಳು ಐರೀನ್ ಜೋಲಿಯೊ ಕ್ಯೂರಿ, ಇಬ್ಬರೂ ಕ್ಯಾನ್ಸರ್ ರೋಗದಿಂದ ನರಳಿ ಸತ್ತರು. ಪ್ರಪಂಚದ ಮೊತ್ತಮೊದಲ ಪರಮಾಣು ರಿಯಾಕ್ಟರನ್ನು ನಿರ್ಮಿಸಿದ ಎನ್ರಿಕೊ ಫರ್ಮಿ ಸತ್ತದ್ದೂ ಕ್ಯಾನ್ಸರ್‌ನಿಂದಲೇ.

**ಜಿ. ಆರ್. ಲಕ್ಷ್ಮಣರಾವ್**

ವಿಕಿರಣ ಅಷ್ಟು ಅಪಾಯಕಾರಿ ಎಂದಮೇಲೆ ಭೂಮಿಯಲ್ಲಿರುವ ಯುರೇನಿಯಮ್ ಮತ್ತು ಥೋರಿಯಮ್ ಖನಿಜಗಳು ಭೂಮಿಯ ಮೇಲಿನ ಜೀವಕೋಟಿಗೆ ಅಪಾಯವಲ್ಲವೇ ಎಂಬ ಪ್ರಶ್ನೆ ಏಳುವುದು ಸಹಜ. ಆ ಅಪಾಯ ಎಷ್ಟರಮಟ್ಟಿನದು ಎಂಬುದನ್ನೂ, ಈಚಿನ ದಿನಗಳಲ್ಲಿ ಮಾನವರ ಅವಿವೇಕದಿಂದ ಅಪಾಯ ಹೇಗೆ ಹೆಚ್ಚಾಗುತ್ತಿದೆ ಎಂಬುದನ್ನೂ ವಿಚಾರ ಮಾಡಿ ಅರಿತುಕೊಳ್ಳುವುದು ಅಪೇಕ್ಷಣೀಯ.

ಧಾತು ಒಂದರ ಎಲ್ಲ ಪರಮಾಣುಗಳ ತೂಕವೂ ಒಂದೇ ಆಗಿರುವುದಿಲ್ಲ, ಅವುಗಳ ತೂಕ ಬೇರೆ ಬೇರೆ

ಆಗಿರುವುದುಂಟು. ಅಂಥ ಪರಮಾಣುಗಳನ್ನು ಆ ಧಾತುವಿನ ಐಸೊಟೋಪ್‌ಗಳೆನ್ನುತ್ತಾರೆ. ಸಾಮಾನ್ಯವಾಗಿ ನಿಸರ್ಗದಲ್ಲಿ ಕಂಡುಬರುವ ಎಲ್ಲ ಧಾತುಗಳೂ ಆ ಧಾತುವಿನ ವಿವಿಧ ಐಸೊಟೋಪ್‌ಗಳ ಮಿಶ್ರಣಗಳು. ಆ ಐಸೊಟೋಪ್‌ಗಳಲ್ಲಿ ಕೆಲವು ಸ್ಥಿರವಾದವೂ ಇನ್ನು ಕೆಲವು ಅಸ್ಥಿರವಾದವೂ ಆಗಿರಬಹುದು. ಅಸ್ಥಿರವಾದವು ಸಹಜವಾಗಿಯೇ ವಿಕಿರಣಪಟುವಾಗಿರುತ್ತವೆ. ಯುರೇನಿಯಮ್, ಥೋರಿಯಮ್‌ಗಳಂಥ ಧಾತುಗಳ ಐಸೊಟೋಪ್‌ಗಳು ಅಧಿಕ ತೂಕದವಾದ್ದರಿಂದ ಅವೆಲ್ಲವೂ ಅಸ್ಥಿರ, ಆದ್ದರಿಂದ ವಿಕಿರಣ ಪಟು. ಕಡಿಮೆ ಪರಮಾಣು ತೂಕದ ಧಾತುಗಳಲ್ಲಾದರೋ ಪರಮಾಣು ಬೀಜದಲ್ಲಿರುವ ಪ್ರೋಟಾನ್, ನ್ಯೂಟ್ರಾನ್‌ಗಳ ಸಂಖ್ಯೆಗಳನ್ನವಲಂಬಿಸಿ ಕೆಲವು ಸ್ಥಿರವಾದವೂ ಇನ್ನು ಕೆಲವು ಅಸ್ಥಿರವಾದವೂ ಇರುತ್ತವೆ.

ವಿಕಿರಣದಿಂದ ಉಂಟಾಗಬಹುದಾದ ಪರಿಸರ ಮಾಲಿನ್ಯದ ದೃಷ್ಟಿಯಿಂದ ಗಮನಿಸಬೇಕಾದ ಒಂದು ವಾಸ್ತವಾಂಶವೆಂದರೆ, ನಿಸರ್ಗದಲ್ಲಿ ಕಂಡುಬರುವ ವಿಕಿರಣಪಟು ಐಸೊಟೋಪ್‌ಗಳೆಲ್ಲವೂ ಅತಿ ದೀರ್ಘಾಯುಗಳು. ಅವುಗಳ ಅರ್ಧಾಯುಷ್ಯ ಹಲವು ಕೋಟಿ ವರ್ಷಗಳು. ಅರ್ಧಾಯುಷ್ಯ ಎಂದರೆ, ಯಾವುದೇ ವಿಕಿರಣಪಟು ಐಸೊಟೋಪು ಕ್ಷಯಿಸುತ್ತಾ ಹೋಗಿ ಪ್ರಾರಂಭದಲ್ಲಿದ್ದುದರ ಅರ್ಧದಷ್ಟಾಗಲು ತೆಗೆದುಕೊಳ್ಳುವ ಕಾಲ. ನೈಸರ್ಗಿಕ ಯುರೇನಿಯಮ್‌ನ ಮುಖ್ಯ ಐಸೊಟೋಪ್‌ಗಳು, ಶೇಕಡಾ ೯೯.೨೮ರಷ್ಟಿರುವ ಯುರೇನಿಯಮ್ ೨೩೮ ಮತ್ತು ಶೇಕಡಾ ೦.೭೨ ರಷ್ಟಿರುವ ಯುರೇನಿಯಮ್ - ೨೩೫. ಮೊದಲನೆಯದರ ಅರ್ಧಾಯುಷ್ಯ ೪೫೦ ಕೋಟಿ ವರ್ಷ, ಎರಡನೆಯದರ ಅರ್ಧಾಯುಷ್ಯ ೭೧ ಕೋಟಿ ವರ್ಷ. ಥೋರಿಯಮ್ - ೨೩೨ರ ಅರ್ಧಾಯುಷ್ಯ ೧೪೧೦ ಕೋಟಿ ವರ್ಷ.

ನಿಸರ್ಗದಲ್ಲಿ ಸಿಕ್ಕುವ ವಿಕಿರಣಪಟು ಐಸೊಟೋಪ್‌ಗಳು ಹೀಗೆ ಅತಿ ದೀರ್ಘಾಯುಗಳಾದ್ದರಿಂದ ಅವು ಕ್ಷಯಿಸುವುದು ಅತ್ಯಂತ ನಿಧಾನ; ಪರಿಸರದಲ್ಲಿ ಅವು ಹರಡುವ ವಿಕಿರಣ ಕಡೆಗಣಿಸುವಷ್ಟು ಅಲ್ಪ. ಅದೂ ಅಲ್ಲದೆ ಆ ಖನಿಜಗಳು ಭೂಮಿಯಲ್ಲಿರುವುದು ಕೆಲವೆಡೆ ಮಾತ್ರ. ಅಲ್ಲಿಯೂ ಅವು ಒಂದೆಡೆ ಸಾಂದ್ರೀಕೃತವಾಗಿರುವುದಿಲ್ಲ, ಮಣ್ಣು ಕಲ್ಲುಗಳಲ್ಲಿ ಹಂಚಿಕೊಂಡಿರುತ್ತವೆ. ಆದುದರಿಂದ ಅವು ಹೆಚ್ಚು ಕಡಮೆ ನಿರಪಾಯಕಾರಿಗಳು. ಭೂಗ್ರಹದ ಮೇಲೆ ಹಿಂದೊಮ್ಮೆ ಅಲ್ಪಾಯುಗಳಾದ ವಿಕಿರಣಪಟು ಪರಮಾಣುಗಳು ಇದ್ದಿರಬಹುದು. ಅವೆಲ್ಲ ಕ್ಷಯಿಸಿಹೋಗಿ ಭೂಮಿಯ ಮೇಲೆ ನಿರಪಾಯಕಾರೀ ವಾತಾವರಣ ಸೃಷ್ಟಿಯಾದ ಮೇಲೆ ಜೀವ ಇಲ್ಲಿ ಉದ್ಭವಿಸಿ ವಿಕಸಿಸಿರಬಹುದು ಎಂಬ ಊಹೆಗೆ ಅವಕಾಶವಿದೆ.

ವಿಕಿರಣದ ಉಪಟಳವಿಲ್ಲದೆ ಕ್ಷೇಮದಿಂದಿದ್ದ ನಮ್ಮ ಗ್ರಹದ ಮೇಲೆ ಕೃತಕವಾಗಿ ಉತ್ಪತ್ತಿ ಮಾಡಿದ ಅಲ್ಪಾಯು ವಿಕಿರಣಪಟು ಪರಮಾಣುಗಳನ್ನು ಹರಡಿ ವಿಕಿರಣ ಮಾಲಿನ್ಯವೆಂಬ ಹೊಸದೊಂದು ಪೀಡೆಯನ್ನು ಸೃಷ್ಟಿಸಿದ್ದು ೧೯೪೫ರಲ್ಲಿ. ಆ ವರ್ಷದ ಜುಲೈ ೧೬ರ ರಾತ್ರಿ ಅಮೆರಿಕದ ನ್ಯೂಮೆಕ್ಸಿಕೊದಲ್ಲಿರುವ ಅಲಮೊಗೊರ್ಡೊ ಬಳಿಯ ಮರುಭೂಮಿಯಲ್ಲಿ ಸಿಡಿಸಿದ ಪ್ರಾಯೋಗಿಕ ಪರಮಾಣು ಬಾಂಬು, ಅನಂತರ ಆಗಸ್ಟ್ ೬ ಮತ್ತು ೯ ರಂದು ಕ್ರಮವಾಗಿ ಹಿರೋಷಿಮ ಮತ್ತು ನಾಗಸಾಕಿ ನಗರಗಳನ್ನು ಧ್ವಂಸ ಮಾಡಿದ ಪರಮಾಣು ಬಾಂಬುಗಳೊಂದಿಗೆ ವಿಕಿರಣ ಮಾಲಿನ್ಯ ಅಧ್ಯಾಯ ಪ್ರಾರಂಭವಾಯಿತು.



ಮೇರಿ ಕ್ಯೂರಿ

ಪರಮಾಣು ಬಾಂಬು ಸಿಡಿದಾಗ ಬಿಡುಗಡೆಯಾಗುವ ಅಗಾಧ ಪ್ರಮಾಣದ ವಿನಾಶಕ ಶಕ್ತಿಯ ಮೂಲ, ಬೀಜ ವಿದಲನ; ಅಂದರೆ ಪರಮಾಣು ಬೀಜ ಇಬ್ಭಾಗವಾಗಿ ಸೀಳುವುದು. ಅಧಿಕ ತೂಕದ ಪರಮಾಣುಗಳ ಪೈಕಿ ಕೆಲವು ಪರಮಾಣುಗಳ ಬೀಜಗಳು ಹಾಗೆ ವಿದಲನಗೊಳ್ಳಬಲ್ಲವು. ಯುರೇನಿಯಮ್ ಐಸೊಟೋಪ್‌ಗಳ ಪೈಕಿ ಯುರೇನಿಯಮ್-೨೩೫ ಅಂಥ ವಿದಲನೀಯ ಬೀಜ. ನೈಸರ್ಗಿಕ ಯುರೇನಿಯಮ್‌ನಲ್ಲಿ ಕೇವಲ ಶೇಕಡಾ ೦.೭೨ ರಷ್ಟಿರುವ ಯುರೇನಿಯಮ್-೨೩೫ ಅನ್ನು ಪ್ರತ್ಯೇಕಿಸಿ, ಸಾಕಷ್ಟು ಗಾತ್ರದ ಉಂಡೆಯನ್ನು ತಯಾರಿಸಲಾಗಿದೆ ಅನ್ನಿ. ಒಂದು ನ್ಯೂಟ್ರಾನ್ ಆ ಗಟ್ಟಿಯನ್ನು ಹೊಕ್ಕರಾಯಿತು. ಮೊತ್ತ ಮೊದಲು ಸಿಕ್ಕ ಯುರೇನಿಯಮ್-೨೩೫ ಬೀಜದೊಳಕ್ಕೆ ಅದು ನುಗ್ಗಿ ವಿದಲನವನ್ನು ಪ್ರಚೋದಿಸುತ್ತದೆ. ಆ ಬೀಜ ಸೀಳುತ್ತದೆ; ನೂರು ನೂರಿಪ್ಪತ್ತು ತೂಕದ ಎರಡು ತುಂಡುಗಳು ಉತ್ಪತ್ತಿಯಾಗುತ್ತವೆ. ಈ ಕ್ರಿಯೆಯಲ್ಲಿ ಸ್ವಲ್ಪ ಭಾಗ ವಸ್ತು ಶಕ್ತಿಯಾಗಿ ಪರಿವರ್ತನೆಗೊಂಡು ಅಪಾರ ಶಾಖ ಬಿಡುಗಡೆಯಾಗುತ್ತದೆ. ಅದೂ ಅಲ್ಲದೆ ವಿದಲನ ಕ್ರಿಯೆಯಲ್ಲಿ ಎರಡು ಮೂರು ನ್ಯೂಟ್ರಾನ್‌ಗಳೂ ಉದುರುವುದರಿಂದ ಅವು ಇತರ ಬೀಜಗಳನ್ನು ವಿದಲಿಸುತ್ತವೆ. ಆ ವಿದಲನ ಕ್ರಿಯೆಯಲ್ಲಿ ಉದುರುವ ನ್ಯೂಟ್ರಾನ್‌ಗಳು ಇನ್ನಿತರ ಬೀಜಗಳನ್ನು ವಿದಲಿಸುತ್ತವೆ. ಈ ಬಗೆಯಲ್ಲಿ ಸರಪಳಿ ಕ್ರಿಯೆ ಬೆಳೆದು ಕ್ಷಣಾರ್ಧದಲ್ಲಿ ಗಟ್ಟಿಯಲ್ಲಿನ ಎಲ್ಲ ಪರಮಾಣು ಬೀಜಗಳೂ ವಿದಲನಗೊಂಡುಬಿಡುವುದರಿಂದ ಉಷ್ಣತೆ ಲಕ್ಷಾಂತರ ಡಿಗ್ರಿಗಳಿಗೇರುತ್ತದೆ. ಅದೇ ಪರಮಾಣು ಬಾಂಬು.

ವಿದಲನದಿಂದ ಉಂಟಾಗುವ ತುಂಡುಗಳು ನೂರು ನೂರಿಪ್ಪತ್ತು ತೂಕದ ಪರಮಾಣು ಬೀಜಗಳು. ಅವೆಲ್ಲವೂ ವಿಕಿರಣಪಟು ಮತ್ತು ಅಲ್ಪಾಯುಗಳು. ಅವುಗಳ ಅರ್ಧಾಯುಷ್ಯ ಕೆಲವು ಗಂಟೆಗಳೋ ದಿನಗಳೋ ಇರಬಹುದು. ನೂರಾರು ವರ್ಷಗಳಿರಬಹುದು. ಅಂಥ ಒಂದು ಬೀಜದ ಅರ್ಧಾಯುಷ್ಯ ಕೆಲವು ಸಾವಿರ ವರ್ಷಗಳಾಗಿದ್ದರೂ ಅದು ಅಲ್ಪಾಯು ಎಂದೇ ಲೆಕ್ಕ. ಏಕೆಂದರೆ, ಅದು ಹೊರಚೆಲ್ಲುವ ವಿಕಿರಣವೂ ಅಪಾಯಮಟ್ಟದ ಪ್ರಮಾಣದ್ದು. ಬಾಂಬಿನ ಸಿಡಿತದಿಂದ ಅಂಥ ವಿಕಿರಣಪಟು ಪರಮಾಣುಗಳು ಚದರಿ ಹೋಗಿ ಹಲವಾರು ಕಿಲೋಮೀಟರ್ ದೂರದವರೆಗೂ ಹರಡುವುದರಿಂದ ಮನುಷ್ಯರು ಆ ಪ್ರದೇಶಕ್ಕೆ ಹೋಗುವುದು ತುಂಬ ಅಪಾಯಕರ. ಅಲ್ಲಿಂದೀಚೆಗೆ ವಿವಿಧ ರಾಷ್ಟ್ರಗಳು ಪ್ರಯೋಗಾರ್ಥವಾಗಿ ನಡೆಸಿರುವ ಬೈಜಿಕಾಸ್ತ್ರ ಸ್ಫೋಟಗಳ ಸಂಖ್ಯೆ ಹಲವು ನೂರು. ಪ್ರತಿಯೊಂದು ಬಾರಿಯೂ ನೂರಾರು ಚದರ ಕಿಲೋಮೀಟರ್ ಪ್ರದೇಶದಲ್ಲಿ ವಿಕಿರಣ ಮಾಲಿನ್ಯ ಪಸರಿಸಿದೆ. ರಾಸಾಯನಿಕಗಳಿಂದ, ಮಲ ಮೂತ್ರಾದಿ ವಿಸರ್ಜನೆಗಳಿಂದ, ಕೈಗಾರಿಕಾ ತ್ಯಾಜ್ಯಗಳಿಂದ ಆಗುವ ಪರಿಸರ ಮಾಲಿನ್ಯ ನಮ್ಮ ಇಂದ್ರಿಯಗಳಿಗೆ ಗೋಚರಿಸುತ್ತದೆ. ವಿಕಿರಣ ಮಾಲಿನ್ಯವನ್ನು ಗುರುತಿಸಲು ವಿಶೇಷ ಉಪಕರಣಗಳು ಬೇಕು. ಈ ಕಾರಣದಿಂದಲೂ ಮಲಿನತೆಯಿಂದ ಜೀವನದ ಮೇಲಾಗುವ ಪರಿಣಾಮದ ದೃಷ್ಟಿಯಿಂದಲೂ ವಿಕಿರಣ ಮಾಲಿನ್ಯ ಹೆಚ್ಚು ಅಪಾಯಕಾರಿ. ವಿಕಿರಣಪಟು ಪರಮಾಣುಗಳು ಕಾಲಾನುಕಾಲದಲ್ಲಿ ಕ್ಷಯಿಸಿಹೋಗಿಬಿಡುತ್ತವೆ ಎಂಬ ವಾದವನ್ನು ಕೆಲವರು ಮುಂದಿಡಬಹುದು. ಅನೇಕ ವಿಕಿರಣಪಟು ಐಸೊಟೋಪ್‌ಗಳ ಅರ್ಧಾಯುಷ್ಯ ನೂರಾರು ವರ್ಷಗಳಾದುದರಿಂದ ಆ ವಾದವೂ ಬೆಲೆಯಿಲ್ಲದ್ದು.

## ಅಂತರ

ಇದ್ದುದೆಲ್ಲವ
ಕಬಳಿಸುವ ಆಸೆ
ಕೋಟ್ಯಾಧಿಪತಿಗೆ
ಇದ್ದುದರಲ್ಲೆ
ಹಂಚಿ ತಿನ್ನುವ ಬಯಕೆ
ದೀನಾಧಿಪತಿಗೆ

ರವಿ ಸೋ. ದೇವರಡ್ಡಿ
ಹೊನ್ನಹಮ್ಮಿಗಿ - ೫೮೨ ೧೧೮
ತಾ|| ಮುಂಡರಗಿ

ಪರಮಾಣು ಬಾಂಬಿನಲ್ಲಿ ಹಠಾತ್ತನೆ ನಡೆದುಹೋಗುವ ಸರಪಳಿ ಕ್ರಿಯೆಯನ್ನು ಹತೋಟಿಯಲ್ಲಿಟ್ಟುಕೊಂಡು ಅದನ್ನು ನಿಧಾನವಾಗಿ ನಡೆಸುವ ಏರ್ಪಾಟೇ ಬೈಜಿಕ ರಿಯಾಕ್ಟರ್ ಅಥವಾ ಪರಮಾಣು ರಿಯಾಕ್ಟರ್. ನಿಯಂತ್ರಿತವಾಗಿ ಬಿಡುಗಡೆ ಮಾಡುವ ಶಾಖದ ನೆರವಿನಿಂದ ನೀರು ಕುದಿಸಿ, ಉಗಿ ಟರ್ಬೈನ್‌ಗಳನ್ನು ಓಡಿಸಿ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗುತ್ತದೆ. ಆಧುನಿಕ ನಾಗರಿಕತೆಗೆ ಆಧಾರಪ್ರಾಯವಾದ ಶಕ್ತಿ ಆಕರಗಳಾಗಿರುವ ಕಲ್ಲಿದ್ದಲು ಮತ್ತು ಕಲ್ಲೆಣ್ಣೆಗಳು ಅಹಿತಕರ ಪರಿಸರ ಮಲಿನತೆಗೆ ಎಡೆಗೊಡುತ್ತಿವೆ ಎಂಬುದೂ ಭೂಗರ್ಭದಲ್ಲಿನ ಅವುಗಳ ದಾಸ್ತಾನು ಮುಂದಿನ ಕೆಲವು ದಶಕಗಳಲ್ಲಿ ಮುಗಿದುಹೋಗಲಿದೆ ಎಂಬುದೂ ಮಾನವ ಕುಲದ ಅರಿವಿಗೆ ಬಂದ ಸಮಯಕ್ಕೆ ಸರಿಯಾಗಿ ಪರಮಾಣು ಶಕ್ತಿಯಿಂದ ವಿದ್ಯುತ್ತು ಉತ್ಪಾದಿಸುವ ತಂತ್ರ ಕರಗತವಾದುದರಿಂದ ಪರಮಾಣು ಶಕ್ತಿಯೇ ಸಮಸ್ಯೆಗೆ ಪರಿಹಾರ ಎಂದು ಕೆಲವರು ವಾದಿಸುತ್ತಿದ್ದಾರೆ.

ಬೈಜಿಕಾಸ್ತ್ರಗಳ ಸ್ಫೋಟದ ಪರಿಣಾಮವಾಗಿ ವಿಕಿರಣ ಮಲಿನತೆಯುಂಟಾಗಿ ಪರಿಸರಕ್ಕೆ ಘಾಸಿಯುಂಟಾಗಬಹುದು. ವಿದ್ಯುದುತ್ಪಾದನೆಗೆ ಬೈಜಿಕ ಶಕ್ತಿಯನ್ನು ಬಳಸಿಕೊಳ್ಳುವುದರಲ್ಲಿ ಅಪಾಯವಿಲ್ಲ ಎಂಬುದು ಅವರ ಅಭಿಪ್ರಾಯ. ರಿಯಾಕ್ಟರುಗಳಿಗೆ ದಪ್ಪ ಕಾಂಕ್ರೀಟ್ ಹೊದಿಕೆ ಇರುವುದರಿಂದ ರಿಯಾಕ್ಟರಿನ ನೆರೆಹೊರೆಗೆ ವಿಕಿರಣದಿಂದ ಅಪಾಯ ಇಲ್ಲ ಎಂಬುದು ಅವರ ವಾದ. ಆದರೆ ಜವಾಬ್ದಾರಿಯುತ ಸಂಘ ಸಂಸ್ಥೆಗಳು ನಡೆಸಿರುವ ಸಮೀಕ್ಷೆಗಳು ಆ ವಾದವನ್ನು ಸಮರ್ಥಿಸುವುದಿಲ್ಲ. ಬ್ರಿಟಿಷ್ ಮೆಡಿಕಲ್ ಕೌನ್ಸಿಲ್‌ನವರು ಬ್ರಿಟನ್ನಿನ ಸ್ಟೆಲ್ಲಾಫೀಲ್ಡ್ ಬೈಜಿಕ ರಿಯಾಕ್ಟರ್‌ನ ನೆರೆಹೊರೆಯಲ್ಲಿಯೂ ಅಮೆರಿಕದ ಮೆಸಾಚುಸೆಟ್ಸ್ ಸಂಸ್ಥಾನದ ಸಾರ್ವಜನಿಕ ಆರೋಗ್ಯ ಇಲಾಖೆಯವರು ಪಿಲ್ಗ್ರಿಮ್ ರಿಯಾಕ್ಟರ್‌ನ ನೆರೆಹೊರೆಯಲ್ಲಿಯೂ ಸಮೀಕ್ಷೆ ನಡೆಸಿದ್ದಾರೆ. ಅಲ್ಲಿ ವಾಸಿಸುವ ಜನರಲ್ಲಿ ಮತ್ತು ಅಲ್ಲಿಯೇ ಹುಟ್ಟಿರುವ ಮಕ್ಕಳಲ್ಲಿ ರಕ್ತದ ಕ್ಯಾನ್ಸರ್, ಲ್ಯುಕೀಮಿಯಾದಿಂದ ಸಾಯುವವರ ಶೇಕಡ ದರ, ಇತರ ಕಡೆ ಕಾಣಬರುವುದರ ಐದಾರರಷ್ಟಿದೆ. ನಮ್ಮ ದೇಶದಲ್ಲಿಯೇ ರಾಜಾಸ್ತಾನದ ರವತ್‌ಬಾಟಾ ಬೈಜಿಕ ರಿಯಾಕ್ಟರ್ ನೆರೆಯಲ್ಲಿ ನಡೆಸಿರುವ ಅಧ್ಯಯನಗಳೂ ಅಂಥದೇ ಫಲಿತಾಂಶಗಳನ್ನು ನೀಡಿವೆ.

ಎಲ್ಲ ಕೈಗಾರಿಕಾ ಸ್ಥಾವರಗಳಂತೆ ಬೈಜಿಕ ರಿಯಾಕ್ಟರೂ ನಿರುಪಯುಕ್ತ ತ್ಯಾಜ್ಯ ಪದಾರ್ಥಗಳನ್ನು ಹೊರಹಾಕುತ್ತದೆ. ರಿಯಾಕ್ಟರುಗಳಿಂದ ಹೊರಬರುವ ತ್ಯಾಜ್ಯವು ವಿಕಿರಣಪಟುವಾದ್ದರಿಂದ ಬಲು ಅಪಾಯಕಾರಿ. ವಿಕಿರಣಪಟುತ್ವ ನೂರಾರು ವರ್ಷಕಾಲ ಹಾಗೆಯೇ ಇರುತ್ತದೆ. ಅದನ್ನು ಏನು ಮಾಡುವುದು ? ಇಂದು ಪ್ರಪಂಚದಲ್ಲಿ ಸುಮಾರು ನಾನ್ನೂರು ರಿಯಾಕ್ಟರುಗಳು ಕೆಲಸ ಮಾಡುತ್ತಿವೆಯಾದರೂ ವಿಕಿರಣಪಟು ತ್ಯಾಜ್ಯಗಳ ವಿಲೇವಾರಿಗೆ ಒಂದು ಸಮರ್ಪಕ ವಿಧಾನವನ್ನು ರೂಪಿಸಲು ಆಗಿಲ್ಲ. ಅದನ್ನು ಉಕ್ಕಿನ ಸಂಪುಟಗಳಲ್ಲಿಟ್ಟು ಒಂದು ಕಿಲೋಮೀಟರ್ ಆಳವಾದ ಬಾವಿಯ ತಳದಲ್ಲಿ ನಿರ್ಮಿಸಿದ ಕಾಂಕ್ರೀಟ್ ಕೋಣೆಯಲ್ಲಿಟ್ಟುಬಿಟ್ಟರೆ ಅಂತರ್ಜಲವನ್ನು ಅದು ಕಲುಷಿತಗೊಳಿಸುವುದಿಲ್ಲ ಎಂದು ಬೈಜಕವಾದಿಗಳು ಹೇಳುವುದುಂಟು. ಇದುವರೆಗೂ ಎಲ್ಲಿಯೂ ಅದನ್ನು ಮಾಡುವುದು ಯಾರಿಗೂ ಸಾಧ್ಯವಾಗಿಲ್ಲ. ತ್ಯಾಜ್ಯ ಪದಾರ್ಥ ತುಂಬಿದ ಸಂಪುಟಗಳನ್ನು ರಿಯಾಕ್ಟರ್ ನಿವೇಶನಗಳಲ್ಲಿಯೇ ಇಟ್ಟುಕೊಂಡಿದ್ದಾರೆ. ಸಂಪುಟಗಳಿಂದ ಸೋರಿ ಹೊರಬಂದ ತ್ಯಾಜ್ಯ ಪದಾರ್ಥಗಳು ನೆರೆಹೊರೆಯಲ್ಲಿ ಅಪಾಯಕಾರಿ ವಿಕಿರಣವನ್ನು ಹರಡಿದ ಸುದ್ದಿಗಳು ಬರುತ್ತಲೇ ಇವೆ.

ನಿರ್ಮಾಣಕ್ಕೆ ಹತ್ತು ವರ್ಷಗಳಷ್ಟು ಕಾಲ ಹಿಡಿಸುವ ಈ ರಿಯಾಕ್ಟರು ಮೂವತ್ತು ನಲವತ್ತು ವರ್ಷಗಳಿಗಿಂತ ಹೆಚ್ಚು ಕಾಲ ಕೆಲಸ ಮಾಡುವುದಿಲ್ಲ. ಅನಂತರ ಅದನ್ನು ಏನು ಮಾಡುವುದು ? ಇತರ ಸ್ಥಾವರಗಳನ್ನು ಕಳಚುವಂತೆ ರಿಯಾಕ್ಟರನ್ನು ಕಳಚಿ, ಬಿಡಿ ಭಾಗಗಳನ್ನು ಬೇರೆ ಏತಕ್ಕಾದರೂ ಉಪಯೋಗಿಸಿಕೊಳ್ಳುವಂತಿಲ್ಲ. ಇಡೀ ರಿಯಾಕ್ಟರ್ ವಿಕಿರಣಪಟುವಾಗಿರುತ್ತದೆ. ಅದರ ಬಳಿ ಮನುಷ್ಯರು ಸುಳಿಯುವಂತಿಲ್ಲ. ಸೋವಿಯತ್ ಯೂನಿಯನ್ನಿನ ಚೆರ್ನೋಬಿಲ್‌ನಲ್ಲಿ ಸಂಭವಿಸಿದ ರಿಯಾಕ್ಟರ್

ಅಪಘಾತದ ಸಂದರ್ಭದಲ್ಲಿ ಹಾನಿಯ ವ್ಯಾಪಕತೆಗೆ ತಡೆಹಾಕಲು, ಹೆಲಿಕಾಪ್ಟರ್‌ಗಳಿಂದ ಟನ್‌ಗಟ್ಟಲೆ ಮರಳು, ಜೇಡಿ, ಸೀಸ, ಬೋರಾನ್ ಕಾರ್ಬೈಡ್ ಮುಂತಾದವನ್ನು ರಿಯಾಕ್ಟರ್ ಮೇಲೆ ಸುರಿದು ಅದನ್ನು ಸಂಪೂರ್ಣವಾಗಿ ಮೊಹರು ಮಾಡಿದರು. ನಿವೃತ್ತ ರಿಯಾಕ್ಟರ್‌ಗಳನ್ನು ಹಾಗೆ ಮೊಹರು ಮಾಡಿಬಿಡುವುದು ಸಮಸ್ಯೆಗೆ ಒಂದು ಪರಿಹಾರ ಎಂದು ಮೇಲ್ನೋಟಕ್ಕೆ ಅನ್ನಿಸಬಹುದು. ಆದರೆ, ಸ್ವಲ್ಪ ಯೋಚಿಸಿ ನೋಡಿದರೆ ಇದು ನಗೆಪಾಟಲು. ಏಕೆಂದರೆ ಬೈಜಿಕ ಶಕ್ತಿಯೇ ಇನ್ನು ಮುಂದೆ ಪ್ರಧಾನ ಶಕ್ತಿ ಆಕರವಾಗಬೇಕೆಂದು ವಾದಿಸುವವರು ಪ್ರತಿ ಮೂವತ್ತು ನಲವತ್ತು ವರ್ಷಗಳಿಗೊಮ್ಮೆ ನೂರಾರು ಅಂಥ ರಿಯಾಕ್ಟರ್ ಸಮಾಧಿಗಳನ್ನು ನಿರ್ಮಿಸಲು ಸಿದ್ಧರಾಗಬೇಕಾಗುತ್ತದೆ. ಅಲ್ಲದೆ ಹಲವು ನೂರು ವರ್ಷಗಳ ಕಾಲ ಯಾರೂ ಅವುಗಳ ತಂಟೆಗೆ ಹೋಗದಂತೆ ಎಚ್ಚರ ವಹಿಸುವ ಜವಾಬ್ದಾರಿಯನ್ನು ಮುಂದಿನ ಅನೇಕ ಪೀಳಿಗೆಗಳಿಗೆ ಬಳುವಳಿಯಾಗಿ ನೀಡಬೇಕಾಗುತ್ತದೆ. ಸೇವಾವಧಿ ಮುಗಿದ ರಿಯಾಕ್ಟರ್‌ಗಳನ್ನು ನಿವೃತ್ತಿಗೊಳಿಸುವ ಬೇರೆ ಯಾವ ವಿಧಾನವೂ ಕಾಣಬರುತ್ತಿಲ್ಲ.

ರಿಯಾಕ್ಟರ್ ಆಕಸ್ಮಿಕಗಳ ಸುದ್ದಿ ಆಗಾಗ ಬರುತ್ತಲೇ ಇದೆ. ಬೈಜಿಕ ತಂತ್ರಜ್ಞಾನಕ್ಕೆ ಸಂಬಂಧಿಸದ ಬೇರೆ ಯಾವ ಆಕಸ್ಮಿಕವೇ ಆಗಲಿ, ಅದರ ಪರಿಣಾಮವೇನಿದ್ದರೂ ಕೆಲವು ಸಾವುನೋವುಗಳು, ಆಸ್ತಿ ನಷ್ಟ - ಇಷ್ಟಕ್ಕೆ ಸೀಮಿತವಾಗಿರುತ್ತದೆ. ರಿಯಾಕ್ಟರ್ ಅಪಘಾತದ ಪರಿಣಾಮವಾಗಿ ಇದೆಲ್ಲವೂ ಆಗುವುದಲ್ಲದೆ ಸುತ್ತಮುತ್ತಲ ಪ್ರದೇಶ ಜನವಸತಿಗೆ ಅನರ್ಹವಾಗುತ್ತದೆ. ವಿಕಿರಣಕ್ಕೆ ಮೈಯೊಡ್ಡಿದವರನೇಕರು ಕ್ಯಾನ್ಸರ್‌ನಿಂದ ವರ್ಷಗಟ್ಟಲೆ ನರಳಿ ಅನಂತರ ಸಾಯಬೇಕಾಗುತ್ತದೆ. ಮತ್ತೆ ಕೆಲವರು ಅಂಗವಿಕಲ ಮಕ್ಕಳಿಗೆ ಜನ್ಮ ನೀಡಿ ಜೀವನ ಪರ್ಯಂತ ಸಂಕಟಪಡಬೇಕಾಗುತ್ತದೆ.

ಅಪಘಾತಗಳ ಬಗ್ಗೆ ಮುನ್ನೆಚ್ಚರಿಕೆ ಕ್ರಮಗಳನ್ನು ನಿರ್ಧರಿಸುವುದಕ್ಕಾಗಿ, ಅಪಘಾತದಿಂದ ಆಗಬಹುದಾದ ಹಾನಿ ಎಷ್ಟೆಂದು ಅಂದಾಜು ಮಾಡಬಯಸುವವರು ತೀವ್ರ ದುಷ್ಪರಿಣಾಮಗಳಿಗೆಡೆಗೊಟ್ಟ ಆಕಸ್ಮಿಕ ಒಂದನ್ನು ಉದಾಹರಣೆಯಾಗಿ ತೆಗೆದುಕೊಳ್ಳಬೇಕಷ್ಟೆ. ೧೯೮೬ರಲ್ಲಿ ಚೆರ್ನೊಬಿಲ್‌ನಲ್ಲಿ ಆದ ಅಪಘಾತದ ಪರಿಣಾಮಗಳೇನೆಂದು ನೋಡೋಣ. ಅಪಘಾತದ ನೇರ ಪರಿಣಾಮವಾಗಿ ಒಂದೆರಡು ದಿನಗಳಲ್ಲಿ ಸತ್ತವರ ಸಂಖ್ಯೆ ೩೧, ಅಷ್ಟೆ. ಅಪಘಾತದ ಇತರ ಪರಿಣಾಮಗಳು ಗಮನಾರ್ಹ. ಹತ್ತು ಕಿಲೋಮೀಟರ್ ತ್ರಿಜ್ಯದೊಳಗಿದ್ದ ಜನರನ್ನೆಲ್ಲ ೨೪ ಗಂಟೆಗಳಲ್ಲಿ ದೂರ ಪ್ರದೇಶಗಳಿಗೆ ಸಾಗಿಸಬೇಕಾಯಿತು. ಪರಿಣಾಮವಾಗಿ ೪೯೦೦೦ ಜನಸಂಖ್ಯೆಯ ಪ್ರಿಪ್ಯಾಟ್ ನಗರ ಬೆಳಗಾಗುವುದರಲ್ಲಿ ಬರಿದಾಯಿತು. ಮೂವತ್ತು ಕಿಲೋಮೀಟರ್ ಒಳಗಿನ ಪ್ರದೇಶವೆಲ್ಲ ಅಪಾಯಕರ ಎಂದು ಮರುದಿನ ಘೋಷಿಸಿದ್ದರಿಂದ ನಿರ್ವಸತಿಗೊಂಡವರ ಸಂಖ್ಯೆ ೧,೩೫,೦೦೦ಕ್ಕೇರಿತು. ಅವರಲ್ಲಿ ಅನೇಕ ಸಾವಿರ ಮಂದಿಗೆ ಕ್ಯಾನ್ಸರ್ ತಗಲುವ ಸಂಭವವಿದೆ ಎಂಬುದು ಅಂದಾಜು. ೩೦ ಕಿ.ಮೀ. ತ್ರಿಜ್ಯದೊಳಗಿನ ಪ್ರದೇಶದಲ್ಲೆಲ್ಲ ೫ ಸೆ.ಮೀ.ನಷ್ಟು ಮೇಲ್ಮಣ್ಣನ್ನು ಎಬ್ಬಿ ದೂರದ ಸೈಬೀರಿಯಾಕ್ಕೆ ಸಾಗಿಸಲಾಯಿತು. ೫೦,೦೦೦ ಚ.ಕಿ.ಮೀ. ಭೂಮಿ ಮುಂದಿನ ಏಳೆಂಟು ವರ್ಷಗಳವರೆಗೆ ಕೃಷಿಗೆ ಯೋಗ್ಯವಲ್ಲವೆಂದು ಘೋಷಿಸಲಾಯಿತು. ನಿರ್ಮಲೀಕರಣ ಕಾರ್ಯಗಳಿಗೆ ತಗಲಿದ ಒಟ್ಟು ವೆಚ್ಚ ೪೦ ಬಿಲಿಯನ್ ಡಾಲರ್ - ಇಂದಿನ ವಿನಿಮಯ ದರದಲ್ಲಿ ಸುಮಾರು ೧,೪೦,೦೦೦ ಕೋಟಿ ರೂಪಾಯಿಗಳಾಯಿತು.

ಬೈಜಿಕ ರಿಯಾಕ್ಟರ್‌ಗಳನ್ನು ಕುರಿತಂತೆ ಅತ್ಯಧಿಕ ಆತಂಕಕ್ಕೆ ಕಾರಣವಾಗಿರುವ ಒಂದು ವಿಷಯವೆಂದರೆ, ಎಲ್ಲ ಬಗೆಯ ರಿಯಾಕ್ಟರ್‌ಗಳೂ ಉಪೋತ್ಪನ್ನವಾಗಿ ಪ್ಲುಟೋನಿಯಮ್ ಉತ್ಪತ್ತಿ ಮಾಡುತ್ತಿರುವುದು. ಮನುಷ್ಯ ನಿರ್ಮಿಸಿರುವ ಅತ್ಯಂತ ವಿಷಕರ ಪದಾರ್ಥ ಅದು. ರಾಸಾಯನಿಕ ವಿಷಗಳ ಪೈಕಿ ಸಯನೈಡ್ ಅತ್ಯಂತ ವಿಷಕರ ಪದಾರ್ಥಗಳಲ್ಲಿ ಒಂದು. ನಮ್ಮ ಪರಿಸರದಲ್ಲಿ ಅದು ಮಿಲಿಯನ್‌ನಲ್ಲಿ ಒಂದು ಅಥವಾ ಎರಡು ಭಾಗಕ್ಕಿಂತ ಹೆಚ್ಚಾಗಿದ್ದರೆ ಅದು ಅಪಾಯಕರ. ಪ್ಲುಟೋನಿಯಮ್ ಆದರೋ ಟ್ರಿಲಿಯನ್‌ನಲ್ಲಿ ಒಂದು ಭಾಗಕ್ಕಿಂತ ಹೆಚ್ಚಾಗಿದ್ದರೂ ಅಪಾಯಕರ. ಅಂದರೆ ಅದು ಸಯನೈಡ್‌ನ ಮಿಲಿಯನ್ ಪಟ್ಟು ವಿಷಕರ. ಮನುಷ್ಯ ದೇಹವನ್ನು ಹೊಕ್ಕರೆ ಅದು ಮೂಳೆಗಳನ್ನು ಹುಡುಕಿಕೊಂಡು ಹೋಗಿ ಮೂಳೆ ನೆಣದಲ್ಲಿ ತಂಗುತ್ತದೆ. ಅದರಿಂದ ಹೊರಡುವ ವಿಕಿರಣವು ಬಿಳಿ ರಕ್ತಕಣಗಳನ್ನು ನಾಶ ಮಾಡಿ ದೇಹದ ರಕ್ಷಣಾ ವ್ಯವಸ್ಥೆಯನ್ನು ಹಾಳುಮಾಡಬಹುದು, ಇಲ್ಲವೇ ರಕ್ತದ ಕ್ಯಾನ್ಸರ್, ಲ್ಯೂಕೀಮಿಯಕ್ಕೆ ಕಾರಣವಾಗಬಹುದು.

೧೯೪೦ರಲ್ಲಿ ಭೂಮಿಯ ಮೇಲೆ ಒಂದು ಮಿಲಿಗ್ರಾಮ್ ಪ್ಲುಟೋನಿಯಮ್ ಸಹ ಇರಲಿಲ್ಲ. ಇಂದು ನೂರಾರು ರಿಯಾಕ್ಟರುಗಳು ಕೆಲಸ ಮಾಡಿ ಒಂದು ಸಾವಿರ ಟನ್ನಿಗಿಂತ ಹೆಚ್ಚು ಪ್ಲುಟೋನಿಯಮ್ ಉತ್ಪಾದಿಸಿವೆ. ಹೆಚ್ಚು ಕಡಿಮೆ ಎಲ್ಲ ದೇಶಗಳಲ್ಲೂ ಅದರ ದಾಸ್ತಾನು ಇದೆ. ವಿಕಿರಣ ಪಟುತ್ವದಿಂದ ಅದು ಕೆಲವು ವರ್ಷಗಳಲ್ಲಿ ಕ್ಷಯಿಸಿ ಹೋಗುವುದೆಂಬ ಆಸೆಗೂ ಅವಕಾಶವಿಲ್ಲ. ಏಕೆಂದರೆ ಅದರ ಅರ್ಧಾಯುಷ್ಯ ೨೪,೪೦೦ ವರ್ಷಗಳು. ಅದು ಅವರಿವರ ಕೈಗೆ ಹೋಗದಂತೆ ಬೇರೆ ಬೇರೆ ದೇಶಗಳು ನಿರ್ಮಿಸಿಕೊಂಡಿರುವ ಭದ್ರತಾ ವ್ಯವಸ್ಥೆ ಎಷ್ಟು ಬಿಗಿಯೇ ಆಗಿರಲಿ, ಹಲ ಕೆಲವು ಗ್ರಾಮ್ ಪ್ಲುಟೋನಿಯಮ್ ಆ ಭದ್ರತಾ ವ್ಯವಸ್ಥೆಯ ಕಣ್ಣು ತಪ್ಪಿಸಿ ಸಾಮಾನ್ಯ ಜನರ ಕೈಗೆ ತಲುಪುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಸೋವಿಯತ್ ಯೂನಿಯನ್‌ನ ಪತನದ ನಂತರ ಅಲ್ಲಿಂದ ಕದ್ದು ತಂದ ಕೆಲವು ಗ್ರಾಮ್ ಪ್ಲುಟೋನಿಯಮ್ ಜರ್ಮನಿಯ ಮ್ಯೂನಿಕ್ ನಗರದ ವಿಮಾನ ನಿಲ್ದಾಣದಲ್ಲಿ ಪತ್ತೆಯಾದ ವರದಿಗಳು ಬಂದಿದ್ದುವು. ಪರಮಾಣು ಬಾಂಬ್ ನಿರ್ಮಿಸಲು ಅಷ್ಟು ಪ್ಲುಟೋನಿಯಮ್ ಸಾಲದು, ನಿಜ. ಆದರೆ ನಗರ ಒಂದರ ನೀರು ಸರಬರಾಜು ವ್ಯವಸ್ಥೆಯಲ್ಲಿ ಅದನ್ನು ಹಾಕಿ ಲಕ್ಷಾಂತರ ಜನರನ್ನು ಆಹುತಿ ತೆಗೆದುಕೊಳ್ಳಲು ಅಷ್ಟು ಪ್ಲುಟೋನಿಯಮ್ ಸಾಕು.

ಇಂದಿನ ಪೀಳಿಗೆಯವರು ಉತ್ಪಾದಿಸಿರುವ ಸಾವಿರ ಟನ್ ಪ್ಲುಟೋನಿಯಮ್ ಮುಂದೆ ಎಂದೂ ಸಾಮಾನ್ಯ ಜನರ ಪರಿಸರವನ್ನು ತಲುಪದಂತೆ ಎಚ್ಚರವಹಿಸುವ ಜವಾಬ್ದಾರಿಯನ್ನು ಮುಂದಿನ ಪೀಳಿಗೆಯವರ ಹೆಗಲ ಮೇಲೆ ಹೇರಲಾಗಿದೆ. ಮುಂದಿನ ನೂರಾರು ಪೀಳಿಗೆಗಳನ್ನು ಅಂಥ ಅತಂತ್ರ ಸ್ಥಿತಿಯಲ್ಲಿ ಬಿಟ್ಟು ಹೋಗುತ್ತಿರುವುದು ಅನೈತಿಕ ಎಂಬುದನ್ನು ಇಂದಿನ ಪೀಳಿಗೆಯವರು ಅರಿಯಬೇಕಾಗಿದೆ.

**ಪ್ರೊ.॥ ಜಿ. ಆರ್. ಲಕ್ಷ್ಮಣರಾವ್**
'ಮೈತ್ರಿ,' ೧೭ನೇ ಮುಖ್ಯ ರಸ್ತೆ, ಸರಸ್ವತಿಪುರಂ, ಮೈಸೂರು - ೫೭೦೦೦೯



# ವಯಸ್ಸಾಯಿತು; ಮುಂದೇನು?

“ವಯಸ್ಸಾಯಿತು. ಕಣ್ಣು ಸರಿಯಾಗಿ ಕಾಣದು. ಕಿವಿ ಸರಿಯಾಗಿ ಕೇಳದು. ಚರ್ಮವೆಲ್ಲಾ ಸುಕ್ಕಾಯಿತು. ಕೈ ಕಾಲುಗಳಲ್ಲಿ ಶಕ್ತಿಯಿಲ್ಲ. ಹೆಚ್ಚು ಹೊತ್ತು ನಿಲ್ಲಲು, ಓಡಾಡಲು ಆಗುವುದಿಲ್ಲ. ಮೊದಲಿನಂತೆ ಈಗ ಜೀರ್ಣ ಶಕ್ತಿಯೂ ಇಲ್ಲ, ಮಲವಿಸರ್ಜನೆಯೂ ಸರಿಯಾಗಿ ಆಗುವುದಿಲ್ಲ. ನಿದ್ರೆ ಕಡಿಮೆಯಾಗುತ್ತಿದೆ. ಸಣ್ಣಪುಟ್ಟ ಶಬ್ದಗಳಿಗೂ ಎಚ್ಚರಿಕೆಯಾಗಿ ಮತ್ತೆ ನಿದ್ರೆ ಬರುವುದಿಲ್ಲ. ಜ್ಞಾಪಕಶಕ್ತಿಯೂ ಕುಗ್ಗುತ್ತಿದೆ. ವಸ್ತುಗಳನ್ನು ಎಲ್ಲೋ ಇಟ್ಟು, ಆಮೇಲೆ ಎಲ್ಲಿಟ್ಟೆ ಎಂಬುದು ನೆನಪಿಗೆ ಬರುವುದಿಲ್ಲ. ಏನಾದರೂ ಹೊಸತನ್ನು ಕಲಿಯೋಣ ಎಂದರೆ, ಆಗುವುದಿಲ್ಲ. ಮೈಮನಸ್ಸುಗಳು ನನ್ನ ಮಾತನ್ನು ಕೇಳುವುದಿಲ್ಲ. ಆರೋಗ್ಯವೂ ಅಷ್ಟು ಚೆನ್ನಿಲ್ಲ; ಡಯಾಬಿಟಿಸ್, ಬಿ.ಪಿ., ಕೀಲುಬೇನೆ, ಒಣಕೆಮ್ಮು ಎಂದು ನಾಲ್ಕಾರು ಮಾತ್ರೆಗಳನ್ನು ತಿನ್ನಬೇಕು. ಬಾಯಿ ರುಚಿಯೇ ಕೆಟ್ಟುಹೋಗಿದೆ. ವಾರ ಎರಡುವಾರಕ್ಕೊಮ್ಮೆ ಆಸ್ಪತ್ರೆಗೆ ಹೋಗಿ, ಗಂಟೆಗಟ್ಟಳೆ ಕಾದು, ಡಾಕ್ಟರನ್ನು ಕಾಣುವ ಕರ್ಮಕ್ಕೆ ಕೊನೆಯಿಲ್ಲ. ಇದು ವೈಯಕ್ತಿಕ ತೊಂದರೆಗಳ ಮಾಲೆಯಾದರೆ, ಮನೆಯೊಳಗೆ ನಾನೊಬ್ಬ ಬೇಡದ ಪ್ರಾಣಿ; ವಸ್ತು ಎಂದರೂ ಆದೀತು. ಮಗ-ಸೊಸೆಗೆ ನನ್ನ ಮಾತು ರುಚಿಸುವುದಿಲ್ಲ. 'ನೀವು ಸುಮ್ಮನೆ ಇರಬಾರದೇ. ಎಲ್ಲದಕ್ಕೂ ಮಧ್ಯೆ ನೀವು ಬರಬೇಡಿ' ಎಂದು ಗದರಿಸುತ್ತಾರೆ. 'ಇದು ನಿಮ್ಮ ಕಾಲವಲ್ಲ, ಈಗ ಎಲ್ಲವೂ ಬದಲಾಗಿದೆ. ನಿಮಗೇನೂ ಅರ್ಥವಾಗುವುದಿಲ್ಲ. ನಿಮ್ಮ ಕಾಲದ ರೀತಿ ನೀತಿಗಳೇ ಬೇರೆ. ಈಗಿನ ರೀತಿ ನೀತಿಗಳೇ ಬೇರೆ. ಏನು ಮಾಡಬೇಕು ಮಾಡಬಾರದು ಹೇಗಿರಬೇಕು ಹೇಗಿರಬಾರದು ಎಂಬುದನ್ನು ನೀವು ಹೇಳಬೇಡಿ. ನಮಗೆ ಗೊತ್ತು' ಎಂದು ಬಾಯಿ ಮುಚ್ಚಿಸುತ್ತಾರೆ. ನನ್ನ ಸ್ನೇಹಿತರ ಮನೆಗಳಲ್ಲಿ, ಗಂಡುಮಕ್ಕಳು ತಮ್ಮ ಹೆಂಡತಿಯರೊಂದಿಗೆ ಬೇರೆ ಸಂಸಾರ ಹೂಡಿದ್ದಾರೆ. ಆರು ತಿಂಗಳಿಗೊಮ್ಮೆಯಾದರೂ ಮುದುಕ ತಂದೆ ತಾಯಿಗಳನ್ನು ನೋಡಲು ಬರುವುದಿಲ್ಲ. 'ನಿಮ್ಮ ಪಾಡಿಗೆ ನೀವಿರಿ. ನಮ್ಮ ತಲೆ ತಿನ್ನಬೇಡಿ. ನೀವು ಸ್ವತಂತ್ರವಾಗಿರಲು ಆಗದಿದ್ದರೆ, ಈಗ ಒಳ್ಳೆಯ ವೃದ್ಧಾಶ್ರಮಗಳಿವೆ. ಎಲ್ಲವನ್ನೂ ಅಚ್ಚುಕಟ್ಟಾಗಿ ಮಾಡಿ ನಿಮ್ಮನ್ನು ಅಲ್ಲಿ ಚೆನ್ನಾಗಿ ನೋಡಿಕೊಳ್ಳುತ್ತಾರೆ' ಎಂದು ಹೇಳುತ್ತಾರಂತೆ. ಮಕ್ಕಳಿದ್ದೂ ಈ ವೃದ್ಧಾಶ್ರಮಗಳಿಗೆ ನಾವು ಅನಾಥರಂತೆ ಹೋಗುವುದೇ ಎಂದು ಕಣ್ಣೀರು ಹಾಕುವ ನನ್ನ ಜೊತೆ ವಯಸ್ಕರನ್ನು ಕಂಡರೆ, ಏನು ಹೇಳುವುದೆಂದು ತೋಚದೆ ಮೂಕನಾಗುತ್ತೇನೆ. ಒಬ್ಬೊಬ್ಬರಾಗಿ ನನ್ನ ಸಹವಯಸ್ಕರು, ನನಗಿಂತ ದೊಡ್ಡವರು ಮತ್ತು ನನಗಿಂತ ಸಣ್ಣವರಿಗೆ, ಪ್ರಾಣಕ್ಕೆ ಅಪಾಯ ತರುವ ಕಾಯಿಲೆಗಳಾದ ಹಾರ್ಟ್ ಅಟ್ಯಾಕ್, ಲಕ್ವ, ಕ್ಯಾನ್ಸರ್ ಬರುವುದನ್ನು ಮತ್ತು ಅವರು ಹಾಸಿಗೆ ಹಿಡಿಯುವುದನ್ನು, ಕೆಲವರು ಕೆಲಕಾಲ ನರಳಿ, ಕೊರಗಿ, ಎಲ್ಲರಿಗೆ ಹೊರೆಯಾಗಿ 'ಛೇ ಬೇಗ ಸಾಯಬಾರದೇ' ಎನಿಸಿಕೊಂಡು ಸಾಯುವುದನ್ನು ಕಂಡು ನನಗೂ ದಿಗಿಲಾಗುತ್ತದೆ. ದೈನ್ಯತೆ ಇಲ್ಲದ ಜೀವನ, ಅನಾಯಾಸ ಮರಣವನ್ನು ಕರುಣಿಸಪ್ಪಾ ಎಂದು ನಿತ್ಯ ದೇವರಲ್ಲಿ ಪ್ರಾರ್ಥಿಸುತ್ತೇನೆ. ನಾನೆಷ್ಟು ಕಾಲ ಬದುಕಿರಬಹುದು, ನನಗೆಂತಹ ಕೊನೆ ಬರಬಹುದು ಎಂದು ಚಿಂತಿಸುತ್ತೇನೆ. ಇತ್ತೀಚೆಗೆ ಬೆಳಿಗ್ಗೆ ಮತ್ತು ರಾತ್ರಿ ಹೆಚ್ಚು ಕಾಲ ಪೂಜೆ ಮಾಡುತ್ತೇನೆ. ಪ್ರತಿದಿನ ಗುಡಿಗೆ ಹೋಗಿಬರುತ್ತೇನೆ. ಅಲ್ಲಿಯೂ ಏಕೋ ನೆಮ್ಮದಿ ಸಿಗುವುದಿಲ್ಲ. ಈ ದೇವರು-ದೇವಸ್ಥಾನ ಎಲ್ಲಾ ಬೂಟಾಟಿಕೆ - ನಿಜವಾಗಿ ದೇವರಿದ್ದಾನೆಯೇ ಎನಿಸುತ್ತದೆ. ಇಳಿವಯಸ್ಸಿನಲ್ಲಿ ಊರುಗೋಲಿನಂತೆ, ದೇವರಲ್ಲಿ ನಂಬಿಕೆ ಬೇಕು ಎಂದೂ ಅನಿಸುತ್ತದೆ. ದೇವರು ಇಲ್ಲದಿದ್ದರೆ ನನ್ನಂಥವರಿಗೆ ಈ ವಯಸ್ಸಿನಲ್ಲಿ ಬೇರೆ ಆಧಾರ ಏನಿದೆ ನೀವೇ ಹೇಳಿ ? ನನ್ನ ಹೆಂಡತಿ ಪುಣ್ಯವಂತೆ. ಮುತ್ತೈದೆ ಸಾವು ಬೇಕು ಎಂದು ಬೇಗನೆ ಹೊರಟುಬಿಟ್ಟಳು. ಈಗ ವಯಸ್ಸಾದ ಮೇಲೆ ಮಿದುಳು ಹಾಳಾಗುವ ರೋಗವೂ ಬರುತ್ತದಂತೆ. ಅಮೆರಿಕಾದ ಅಧ್ಯಕ್ಷ ರೋನಾಲ್ಡ್ ರೀಗನ್‌ನಿಗೆ, ತನ್ನ ಮನೆಯಲ್ಲೇ ಅಡುಗೆ ಮನೆ ಎಲ್ಲಿ, ಬಚ್ಚಲ ಮನೆ ಎಲ್ಲಿ ಎಂಬುದು ತಿಳಿಯುವುದಿಲ್ಲವಂತೆ. ಮಕ್ಕಳನ್ನೇ ಆತ ಗುರುತಿಸಲಾರನಂತೆ. ಬೇರೆಯವರು ಬಟ್ಟೆ ಹಾಕಿ, ಊಟ ಮಾಡಿಸಬೇಕಂತೆ. ಬೇಡಪ್ಪಾ, ಈ ರೋಗ ನನಗಿರಲಿ, ಯಾರಿಗೂ ಬರುವುದು ಬೇಡ. ವಿಜ್ಞಾನ ಎಷ್ಟೊಂದು ಮುಂದುವರೆದಿದೆ. ಮರಳುಗಾಡನ್ನು ನಂದನವನ ಮಾಡಬಹುದೆನ್ನುತ್ತಾರೆ. ಆದರೆ ಈ ವೃದ್ಧಾಪ್ಯವನ್ನು ಯಾರಾದರೂ ತಡೆಯಬಾರದೇಕೆ. ಸಾವು ಬರುವ ತನಕ, ಕೈಕಾಲು, ಹೃದಯ, ಪಿತ್ತಜನಕಾಂಗ, ಮೂತ್ರಪಿಂಡಗಳು, ಕಣ್ಣು ಕಿವಿಗಳು ಚೆನ್ನಾಗಿ ಕೆಲಸ ಮಾಡುವಂತೆ ಮಾಡಬಾರದೇಕೆ ? ಹಿಂದೆ ಕಾಯಕಲ್ಪ ಚಿಕಿತ್ಸೆ ಇತ್ತಂತೆ. ಈಗ ಅದು ಮತ್ತೆ ಬರಬಾರದೇ... ಸಮಾಜದಲ್ಲಿ ಹಿರಿಯರಿಗೆ ಮತ್ತೆ ಬೆಲೆ ಬರಬಾರದೇ.....'' ರಂಗನಾಥಯ್ಯನವರ ಸ್ವಗತ ನಡೆದೇ ಇತ್ತು. ನಮ್ಮ ದೇಶದ ಜನಸಂಖ್ಯೆಯ ಶೇ. ೮ರಷ್ಟು ಜನರಿಗೆ ರಂಗನಾಥಯ್ಯನವರದೇ ಸಮಸ್ಯೆ. 'ವಯಸ್ಸಾಯಿತು ಮುಂದೇನು ಗತಿ.... ಸಾವು ಯಾವಾಗ.... ಎಂಥಾ ಸಾವು... ಆಗ ನಮಗಾರು ಆಸರೆ-ದಿಕ್ಕು ?'

**ಡಾ|| ಸಿ. ಆರ್. ಚಂದ್ರಶೇಖರ್**

### ವೃದ್ಧಾಪ್ಯ

ಹುಟ್ಟು, ಬಾಲ್ಯ, ಯೌವನ, ಮಧ್ಯವಯಸ್ಸಿನಂತೆ ವೃದ್ಧಾಪ್ಯ ಎಲ್ಲ ಜೀವಿಗಳ ಜೀವನದಲ್ಲಿ (ಬದುಕಿದ್ದರೆ) ಕಡೆಯ ಹಂತ. ಆಕಸ್ಮಿಕ ಅಪಘಾತ, ರೋಗರುಜಿನ, ಆತ್ಮಹತ್ಯೆ, ಕೊಲೆಗಳಿಂದ ಸಾಯದೇ ಬದುಕಿದ್ದರೆ

ಪ್ರತಿಯೊಬ್ಬ ವ್ಯಕ್ತಿ ವೃದ್ಧಾಪ್ಯಕ್ಕೆ ಕಾಲಿಡುತ್ತಾನೆ. ಕೆಲವರಲ್ಲಿ ವೃದ್ಧಾಪ್ಯದ ಲಕ್ಷಣಗಳು ಐವತ್ತರ ಅಂಚಿಗೇ ಕಾಣಿಸಿಕೊಂಡು, ವೇಗವಾಗಿ ತೀವ್ರ ಸ್ವರೂಪವನ್ನು ಪಡೆದುಕೊಳ್ಳಬಹುದಾದರೆ, ಕೆಲವರಲ್ಲಿ ಅವು ಅರವತ್ತು- ಎಪ್ಪತ್ತರ ತನಕ ಕಾಣಿಸಿಕೊಳ್ಳದೇ, ಸೌಮ್ಯ ರೂಪದಲ್ಲಿದ್ದು, ಅವರು ತೊಂಬತ್ತರ ದಶಕವನ್ನು ಮುಟ್ಟಿದರೂ, ತರುಣರಂತೆಯೇ ಉತ್ಸಾಹಿಗಳಾಗಿರುತ್ತಾರೆ. ಏಕೆ ಹೀಗೆ ? ವೃದ್ಧಾಪ್ಯ ಬೇಗ ಅಥವಾ ತಡವಾಗಿ ಕಾಣಿಸಿಕೊಳ್ಳಲು ಅಥವಾ ವೃದ್ಧಾಪ್ಯದ ಪ್ರಕ್ರಿಯೆ ವೇಗವಾಗಿ ಅಥವಾ ನಿಧಾನವಾಗಿ ನಡೆಯಲು ಪ್ರೇರಕವಾಗುವ ಅಂಶಗಳತ್ತ ಜೀವ ವಿಜ್ಞಾನಿಗಳು ಹಾಗೂ ವೈದ್ಯರ ಗಮನ ಹರಿದಿದೆ. ಅವುಗಳಲ್ಲಿ ಮುಖ್ಯವಾದುವು :

೧. **ಆನುವಂಶೀಯ ಅಂಶಗಳು** : ನಮ್ಮ ದೇಹದ ಜೀವಕೋಶಗಳಲ್ಲಿರುವ ವಂಶವಾಹಿನಿಗಳು, ನಾವು ಎಷ್ಟು ಕಾಲ ಬದುಕಿರಬೇಕು, ಹಾಗೆಯೇ ಯಾವಾಗ ವೃದ್ಧರಾಗಬೇಕೆಂಬುದನ್ನು ತಾಯಿಯ ಗರ್ಭದಲ್ಲೇ ನಿರ್ಧರಿಸಿಬಿಡುತ್ತವೆ. ಜೀವನದುದ್ದಕ್ಕೂ ಜೀವಕೋಶಗಳು ಒಂದೆರಡಾಗಿ ವಿಭಜನೆಗೊಳ್ಳುತ್ತಾ, ವಯಸ್ಸಾಗಿ, ನಿತ್ರಾಣಿಯಾದ ಕೋಶಗಳ ಜಾಗದಲ್ಲಿ ಹೊಸ ತಾರುಣ್ಯದ ಜೀವಕೋಶಗಳು ಕಾಣಿಸಿಕೊಳ್ಳುತ್ತವೆ. ಆಯಾ ಅಂಗಾಂಗದ ವೈಶಿಷ್ಟ್ಯದ ಮೇಲೆ ಜೀವಕೋಶಗಳು ನೂರು ಬಾರಿ, ಇನ್ನೂರು ಬಾರಿ ವಿಭಜನೆಗೊಂಡ ನಂತರ ವಿಭಜನೆ ನಿಲ್ಲುತ್ತದೆ. ಆಗ ಆ ಅಂಗ ಸವೆಯುತ್ತಾ, ನಿತ್ರಾಣಿಯಾಗಿ, ವೃದ್ಧಾಪ್ಯದಲ್ಲಿ ಕಾಲಿಡುತ್ತದೆ. ಇದು ವ್ಯಕ್ತಿಯಿಂದ ವ್ಯಕ್ತಿಗೆ, ಕುಟುಂಬದಿಂದ ಕುಟುಂಬಕ್ಕೆ ಭಿನ್ನವಾಗಿರುತ್ತದೆ. ಹಾಗಾಗಿ ಕೆಲವು ಕುಟುಂಬಗಳಲ್ಲಿ ವೃದ್ಧಾಪ್ಯ ಬೇಗ ಕಾಣಿಸಿಕೊಂಡರೆ ಕೆಲವು ಕುಟುಂಬಗಳಲ್ಲಿ ನಿಧಾನವಾಗಿ ಕಾಣಿಸಿಕೊಂಡು ಸೌಮ್ಯವಾಗೇ ಉಳಿಯುತ್ತದೆ.

ಹಾಗೆಯೇ ಒಬ್ಬ ವ್ಯಕ್ತಿಯಲ್ಲಿ, ವಿವಿಧ ಅಂಗಾಂಗಗಳಿಗೆ ವೃದ್ಧಾಪ್ಯ ಬೇರೆ ಬೇರೆ ಸಮಯಕ್ಕೆ ಬರುವುದನ್ನು ಕಾಣುತ್ತೇವೆ. ಕಿವಿ ಇನ್ನೂ ಚೆನ್ನಾಗಿ ಕೇಳುತ್ತಿರುವಾಗಲೇ, ಕಣ್ಣಿಗೆ ಪೂರ್ಣ ಪೊರೆ ಬಂದಾಗಿರುತ್ತದೆ. ಚರ್ಮ ಸಡಿಲವಾಗಿ ಸುಕ್ಕುಗಟ್ಟಿದ್ದರೂ, ಹಲ್ಲುಗಳು ಇನ್ನೂ ಗಟ್ಟಿಯಾಗಿರುತ್ತವೆ. ಪಚನಕ್ರಿಯೆ ಚೆನ್ನಾಗಿದ್ದರೂ ಮರೆವು ಜಾಸ್ತಿಯಾಗಿರುತ್ತದೆ !

೨. **ಆಹಾರ ಸೇವನೆ - ಪೌಷ್ಟಿಕಾಂಶಗಳು** : ತಾಯಿಯ ಗರ್ಭದಲ್ಲಿ ಒಂಬತ್ತು ತಿಂಗಳು ಮತ್ತು ಮೊದಲ ಐದಾರು ವರ್ಷಗಳಲ್ಲಿ ಪ್ರಮುಖವಾಗಿ ಮತ್ತು ಆನಂತರದ ವರ್ಷಗಳಲ್ಲಿ ವ್ಯಕ್ತಿಗೆ ಸರಿಯಾದ ಪಾಲನೆ-ಪೋಷಣೆ ಸಿಕ್ಕಿತಾ ಇಲ್ಲವಾ ಎಂಬುದರ ಮೇಲೆ ದೇಹದ ರೋಗ ನಿರೋಧಕ ಶಕ್ತಿ ಮತ್ತು ಅಂಗಾಂಗಗಳು ಎಷ್ಟು ಕಾಲ ಸದೃಢವಾಗಿರುತ್ತವೆ ಅಥವಾ ದುರ್ಬಲವಾಗುತ್ತವೆ ಎಂಬುದು ನಿರ್ಧಾರವಾಗುತ್ತದೆ. (ಆನುವಂಶಿಕ ಸೂಚನೆಗಳನ್ನು ಮೀರಿ !) ಪ್ರೋಟೀನ್, ವಿಟಮಿನ್ನು, ಖನಿಜಾಂಶಗಳ ಕೊರತೆಯಿಂದ ಬೇಗ ವೃದ್ಧಾಪ್ಯ ಕಾಲಿಡಬಹುದು. ಅತಿವೃಷ್ಟಿಯಿಂದಲೂ ಅಂದರೆ ಹೆಚ್ಚು ಕೊಬ್ಬು ಸಂಗ್ರಹವಾಗಿ ಬೊಜ್ಜು ನಿಂದಾಗಿಯೂ ವೃದ್ಧಾಪ್ಯದ ಲಕ್ಷಣಗಳು ಬೇಗ ಕಾಣಿಸಿಕೊಳ್ಳಬಹುದು. ಹಿತಮಿತವಾದ ಸಮತೋಲನ ಆಹಾರವನ್ನು ಶಿಸ್ತಿನಿಂದ ವೇಳೆ ವೇಳೆಗೆ ಸರಿಯಾಗಿ ಸೇವಿಸುವುದು, ವಿಷ ಪದಾರ್ಥಗಳಿರುವ ಕೃತಕ ರಾಸಾಯನಿಕ ವಸ್ತುಗಳಿರುವ ಆಲ್ಕೋಹಾಲ್, ಹೊಗೆಸೊಪ್ಪು, ಬಣ್ಣ ಹಾಕಿದ ತಿಂಡಿ ತಿನಿಸುಗಳನ್ನು ತಿನ್ನದಿರುವುದು, ಆರೋಗ್ಯಕರ ಮಣ್ಣು, ನೀರು, ಹವೆಯಲ್ಲಿ ಬೆಳೆದ ಆಹಾರ ಪದಾರ್ಥಗಳನ್ನು ತಿನ್ನುವುದು ವೃದ್ಧಾಪ್ಯವನ್ನು ಮುಂದೂಡಲು ಅಥವಾ ಅದರ ತೀವ್ರತೆಯನ್ನು ತಗ್ಗಿಸಲು ನೆರವಾಗುತ್ತದೆ. ನಲವತ್ತರ ನಂತರವಾದರೂ, ಎಣ್ಣೆ, ಬೆಣ್ಣೆ, ಸಿಹಿ, ಕೊಬ್ಬು, ಮಸಾಲೆಗಳನ್ನು ತಗ್ಗಿಸಬೇಕು.

೩. **ಚಟುವಟಿಕೆಗಳು ಮತ್ತು ಜೀವನಶೈಲಿ** : ಏನೂ ಕೆಲಸ ಚಟುವಟಿಕೆ ಮಾಡದೇ ಕೂತು, ಮಲಗಿ ಕಾಲ ಕಳೆಯುವವರು, ದೇಹಕ್ಕೆ 'ಸುಖ' ನೀಡುತ್ತಾ ಬದುಕುವವರು ಬೇಗ ವೃದ್ಧರಾಗುತ್ತಾರೆ ! ಸದಾ ಚಟುವಟಿಕೆಯಿಂದಿರುತ್ತಾ, ಮೈ ಬಗ್ಗಿಸಿ ಕೆಲಸ

ಮಾಡುವವರು ವಯಸ್ಸಾದರೂ ಚಿಕ್ಕವರಂತೆಯೇ ಕಾಣುತ್ತಾರೆ. ಆದ್ದರಿಂದ ವೃದ್ಧಾಪ್ಯವನ್ನು ಮುಂದೂಡಲು, ಹೆಚ್ಚು ಕಾಲ ಆರೋಗ್ಯದಿಂದಿರಲು ಸದಾ ಚಟುವಟಿಕೆಯಿಂದಿರಿ, ನಿಮ್ಮ ಜೀವನಶೈಲಿಯನ್ನು ಬದಲಿಸಿಕೊಳ್ಳಿ ಎನ್ನುತ್ತದೆ ವೈದ್ಯ ವಿಜ್ಞಾನ.

**೪. ಮಿದುಳಿನಲ್ಲಾಗುವ ಬದಲಾವಣೆಗಳು** : ಇಡೀ ಶರೀರದ ಎಲ್ಲ ಅಂಗಗಳನ್ನು ಮತ್ತು ನಮ್ಮ ಮನಸ್ಸನ್ನು ನಿರ್ದೇಶಿಸಿ ನಿಯಂತ್ರಿಸುವ ಭಾಗವೇ ಮಿದುಳು. ವೃದ್ಧಾಪ್ಯಕ್ಕೆ ಕಾರಣ ನರಕೋಶಗಳಲ್ಲಿ ಆಗುವ ಕೆಲವು ರಾಸಾಯನಿಕ ಬದಲಾವಣೆಗಳು ಮತ್ತು ನರಕೋಶಗಳು ಸವೆದು ನಾಶವಾಗುತ್ತಾ ಹೋಗುವುದು. ನರವಾಹಕ ವಸ್ತುವಾದ ಅಸಿಟೈಲ್ ಕೋಲಿನ್ ವ್ಯವಸ್ಥೆಯಲ್ಲಿ ತೀವ್ರ ಕುಸಿತವನ್ನು ಕಾಣುತ್ತೇವೆ. ಕಲಿಯಲು ಮತ್ತು ಕಲಿತದ್ದನ್ನು ನೆನಪಿನಲ್ಲಿಟ್ಟುಕೊಳ್ಳಲು, ಸ್ನಾಯುಗಳ ಸಂಕುಚನಕ್ಕೂ ಅತ್ಯಗತ್ಯವಾದ ಅಸಿಟೈಲ್ ಕೋಲಿನ್ ಪ್ರಮಾಣ ಕಡಿಮೆಯಾಗುತ್ತಾ ಹೋಗುತ್ತದೆ. ಹೀಗಾಗಿ ಮರೆವು, ಸ್ನಾಯುಗಳು ದುರ್ಬಲವಾಗುವ ವೃದ್ಧಾಪ್ಯದ ಲಕ್ಷಣಗಳು ಕಾಣಿಸಿಕೊಳ್ಳತೊಡಗುತ್ತವೆ. ಇತರ ನರವಾಹಕ ವಸ್ತುಗಳಾದ ನಾರ್‌ಅಡ್ರಿನಲಿನ್, ಸೆರೋಟೋನಿನ್, ಸೊಮಾಟೋಸ್ಟಾಟಿನ್, ಕಾರ್ಟಿಕೋ-ಟ್ರೋಪಿನ್-ರಿಲೀಸಿಂಗ್ ಫ್ಯಾಕ್ಟರ್ ಹಾಗೂ ಗ್ಲೂಟ್‌ಮೇಟ್‌ಗಳೂ ಕಡಿಮೆಯಾಗುತ್ತವೆ.

ಮಿದುಳಿನ ಮೇಲ್ಪೈ (ಕಾರ್ಟೆಕ್ಸ್) ಸವೆಯತೊಡಗುತ್ತದೆ. ಹಾಗೆಯೇ ಲಿಂಬಿಕ್ ವ್ಯವಸ್ಥೆಯೂ ಸವೆತಕ್ಕೆ ಒಳಗಾಗುತ್ತದೆ. ಈ ಸವೆತವೂ ಎಲ್ಲರಲ್ಲೂ ಒಂದೇ ರೀತಿ ಇರುವುದಿಲ್ಲ. ಹಾಗೆಯೇ ಒಬ್ಬ ವ್ಯಕ್ತಿಯಲ್ಲಿ ಕೂಡ, ಮಿದುಳಿನ ಸವೆತ ಎಲ್ಲಾ ಭಾಗದಲ್ಲೂ ಒಂದೇ ರೀತಿ ಇರುವುದಿಲ್ಲ!

ಸೂಕ್ಷ್ಮದರ್ಶಿಯಡಿಯಲ್ಲಿ ಮಿದುಳಿನ ತುಣುಕನ್ನು ಇಟ್ಟು ನೋಡಿದಾಗ, ನರಕೋಶಗಳ ಹೊರಗೆ, ನರಕೋಶಗಳ ಬಾಲ ಮತ್ತು ಕೈಗಳು (ಆಕ್ಸಾನ್ಸ್ ಮತ್ತು ಡೆಂಡ್ರೈಟ್ಸ್) ಸವೆದುಹೋಗಿ, ಉಳಿದ ಉಳಿಕೆಗಳು ಚೆಕ್ಕೆಗಳಾಗಿ ಕಾಣತೊಡಗುತ್ತವೆ. ಇವನ್ನು **'ಸೆನೈಲ್ ಫ್ಲಾಕ್ಸ್'** ಎನ್ನುತ್ತಾರೆ. ಇವು ಮಿದುಳಿನ ಮುಂಭಾಗ, ಪಾರ್ಶ್ವಭಾಗ, ಕಪೋಲ ಭಾಗ, ಅಮಿಗ್ಡಿಲಾ, ಹಿಪ್ಪೋಕ್ಯಾಂಪಸ್‌ನಲ್ಲಿ ಹೆಚ್ಚು ನರಕೋಶಗಳ ಅಂಗಾಂಶಗಳು ಹಾಳಾದುದರ ಅವಶೇಷವಾಗಿ **ಹಿರನೋ ಕಾಯಗಳೂ** ಮಿದುಳಿನಲ್ಲಿ ಕಾಣತೊಡಗುತ್ತವೆ.

ಮಿದುಳಿಗೆ ರಕ್ತ ಪೂರೈಕೆ ಮಾಡುವ ಅಸಂಖ್ಯಾತ ಹಾಗೂ ೬೦ ಮೈಲುಗಳಷ್ಟು ಉದ್ದದ ರಕ್ತನಾಳಗಳು ಪೆಡಸುಗೊಂಡು (ಅತಿರೋಸ್ಕ್ಲೀರೋಸಿಸ್) ಅವುಗಳಲ್ಲಿ ರಕ್ತ ಸಂಚಾರ ನಿಧಾನವಾಗತೊಡಗುತ್ತದೆ. ಇದು ರಕ್ತದಲ್ಲಿ ಹೆಚ್ಚು ಲೊ ಡೆನ್ಸಿಟಿ ಕೊಲೆಸ್ಟೆರಾಲ್ ಇದ್ದವರಲ್ಲಿ, ಸಿಹಿಮೂತ್ರ ರೋಗಿಗಳಲ್ಲಿ, ಅಧಿಕ ರಕ್ತದೊತ್ತಡವಿರುವವರಲ್ಲಿ ಹೆಚ್ಚು.

**೫. ಚಿಂತೆ, ವ್ಯಥೆ, ಮಾನಸಿಕ ಒತ್ತಡಗಳು** : ಅತೃಪ್ತಿ, ಅಸಹಾಯಕತೆ, ಅವಮಾನ, ನಿರಾಶೆ, ಇತರರಿಂದ ತಿರಸ್ಕಾರ, ಅಪನಂಬಿಕೆಗೆ ಪಾತ್ರರಾಗುವುದು, ಚಿಂತೆ,



ವ್ಯಥೆ, ಭಯ, ಬೇಸರ, ದುಃಖ, ಕೋಪ, ಮತ್ಸರಗಳು, ಕೀಳರಿಮೆಗಳು, ಒತ್ತಡದ ಜೀವನ, ವಿವಿಧ ರೀತಿಯ ಮನೋಕ್ಲೇಶಗಳು ಮುಪ್ಪನ್ನು ಬೇಗ ತರುವುದಲ್ಲದೆ, ಮುಪ್ಪಿನ ಲಕ್ಷಣಗಳು ತೀವ್ರವಾಗುವಂತೆ ಮಾಡುತ್ತವೆ ಎಂದು ಎಲ್ಲರಿಗೂ ಗೊತ್ತಿದ್ದರೂ, ಮನಸ್ಸಿನ ಈ ಅಹಿತಕಾರಿ ಅಂಶಗಳ ನಿವಾರಣೆಗೆ ಕ್ರಮಗಳನ್ನು ಕೈಗೊಳ್ಳುವುದಿಲ್ಲ. ಪ್ರತಿನಿತ್ಯ ಹೂ ಮನಸ್ಸಿನ ಮೇಲೆ ಅತ್ಯಾಚಾರ ಮಾಡುತ್ತಲೇ ಹೋಗುತ್ತಾರೆ. ಅದನ್ನು ನೋಯಿಸಿ ನರಳಿಸುತ್ತಲೇ ಇರುತ್ತಾರೆ. ಇದು ತಪ್ಪಬೇಕು. ವೃದ್ಧಾಪ್ಯಕ್ಕೆ ಮದ್ದು 'ಮಾನಸಿಕ ನೆಮ್ಮದಿ'. ಇದ್ದುದರಲ್ಲಿ ತೃಪ್ತಿ, ಸಕಾರಾತ್ಮಕ ಧೋರಣೆ, ಸಾವಧಾನದ ಬದುಕು ಮುಪ್ಪನ್ನು ದೂರವಿಡಲು ನೆರವಾಗುತ್ತದೆ.

**ವೃದ್ಧಾಪ್ಯದ ಸಮಸ್ಯೆಗಳು** : ಇವು ಹಲವಾರು. ಹಲವು *'D'* ಗಳು ನಮ್ಮನ್ನು ಈ ಹಂತದಲ್ಲಿ ಹಣ್ಣು ಮಾಡುತ್ತವೆ. ಅವುಗಳನ್ನು ನಿವಾರಿಸಲು ಆಗದಿದ್ದರೆ ತಗ್ಗಿಸಲು ಕ್ರಮಗಳನ್ನು ನಾವೇ ಕೈಗೊಳ್ಳಬೇಕು.

೧. **ಕೊರತೆಗಳು** *Deficiencies* : ದೇಹ ಮತ್ತು ಮನಸ್ಸಿನ ಶಕ್ತಿ ಸಾಮರ್ಥ್ಯಗಳ ಕೊರತೆ, ಹಣಕಾಸಿನ ಕೊರತೆ, ಪ್ರೀತಿ-ವಿಶ್ವಾಸ-ಆಸರೆಗಳ ಕೊರತೆ ಮುಖ್ಯವಾದುವು. ಈ ಕೊರತೆ ನಿಜವಾಗಿ ವಾಸ್ತವಿಕವಾದದ್ದಾಗಿರಬಹುದು ಅಥವಾ ನಮ್ಮ ಮನಸ್ಸಿಗೆ ತೋರುವ ಅನಿಸಿಕೆ, ಭ್ರಮೆಗಳಾಗಬಹುದು. ಹೆಚ್ಚು ಬೇಕು ಎನಿಸಿದಾಗ 'ಸಾಲದು' ಎಂಬ ಭಾವನೆ ಸಹಜ ಎಂಬ ಸತ್ಯವನ್ನು ನಾವು ಅರ್ಥಮಾಡಿಕೊಳ್ಳಬೇಕು. 'ಸಾಕು' ಎನಿಸಿದರೆ, ಇದ್ದುದರಲ್ಲಿ ತೃಪ್ತಿ, ಇಷ್ಟಾದರೂ ಇದೆಯಲ್ಲ ಎಂಬ ಸಮಾಧಾನ ಈ ಕೊರತೆಯನ್ನು ನೀಗಿಸುತ್ತದೆ ಅಲ್ಲವೇ ? ಕೊರತೆಯಲ್ಲೇ ಹೊಂದಿಕೊಳ್ಳುವ ಮನೋಭಾವ ನಮಗಿರಬೇಕು. ನಮ್ಮ ಅಗತ್ಯ ನಿರೀಕ್ಷೆಗಳನ್ನು ತಗ್ಗಿಸಿಕೊಳ್ಳುವುದೇ ಪರಿಹಾರ. ಕೊರತೆಯನ್ನೇ ದೊಡ್ಡದು ಮಾಡಿಕೊಂಡು ಇದಕ್ಕಾಗಿ ಮನೆಯವರನ್ನು, ಇತರರನ್ನು ದೂರುತ್ತಾ ಕೂರಬಾರದು ಅಥವಾ ನಮ್ಮ ಅದೃಷ್ಟವನ್ನು ಹಳಿಯಬಾರದು.

೨. **ಕಾಯಿಲೆಗಳು** *Diseases* : ನಮ್ಮ ತಪ್ಪು ಜೀವನ ಶೈಲಿಯಿಂದ, ಪಿತ್ರಾರ್ಜಿತವಾಗಿಯೋ - ಸ್ವಯಾರ್ಜಿತವಾಗಿಯೋ ಬರುವ ಕಾಯಿಲೆಗಳಿಂದ ನಾವು ಧೃತಿಗೆಡಬಾರದು. ಸಿಹಿಮೂತ್ರ ರೋಗ, ಅಧಿಕ ರಕ್ತದೊತ್ತಡ, ಕೀಲು ಬೇನೆ, ಜೀರ್ಣಾಂಗಗಳ ಅನಾರೋಗ್ಯ, ಮೂತ್ರದ ತೊಂದರೆ, ಆಸ್ತಮಾ, ಹೃದ್ರೋಗಗಳಿದ್ದರೆ ಅವುಗಳನ್ನು ಹತೋಟಿಯಲ್ಲಿಟ್ಟು ಹೊಂದಾಣಿಕೆಯಿಂದ ಬದುಕುವುದು ಹೇಗೆ ಎಂಬುದನ್ನು ಒಬ್ಬ ಪರಿಚಿತ ವೈದ್ಯರ ಮಾರ್ಗದರ್ಶನದಲ್ಲಿ ಕಲಿಯಬೇಕು; ಸಾಧಿಸಬೇಕು. ಕಾಯಿಲೆ ಇದೆಯಲ್ಲಾ, ಔಷಧಿ ತಿನ್ನಬೇಕಲ್ಲ, ಪಥ್ಯ ಇರಬೇಕಲ್ಲಾ ಎಂದು ಚಿಂತೆ ಮಾಡಬಾರದು. ಅಳುಮುಖ ಮಾಡಬಾರದು.

೩. **ಖಿನ್ನತೆ** *Depression* : ಈ ಮಾನಸಿಕ ರೋಗ ಈ ವಯಸ್ಸಿನಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅತೃಪ್ತಿ, ಮಹತ್ವಾಕಾಂಕ್ಷೆಯಿಂದ ಉಂಟಾದ ವಿಫಲತೆ, ನಿರಾಶೆಗಳು, ಅತಿ ನಿರೀಕ್ಷೆಯ ಫಲವಾಗಿ ಆದ ಭ್ರಮನಿರಸನಗಳು, ನಷ್ಟ, ಅಗಲಿಕೆ, ಸಾವು, ನೋವುಗಳು, ಪ್ರೀತಿ ಆಸರೆಯ ಕೊರತೆ, ವೃದ್ಧಾಪ್ಯ ತರುವ ದುರ್ಬಲತೆ ಮತ್ತು ಅಂಗ ವೈಕಲ್ಯಗಳು ಖಿನ್ನತೆಗೆ ಸಾಮಾನ್ಯ ಕಾರಣಗಳು. ಬೇಸರ, ದುಃಖ, ಅಸಹಾಯಕತೆ, ಅಳು, ನಿರಾಶಾವಾದ, ಅನಾಸಕ್ತಿ, ಸಿಟ್ಟು, ಆಹಾರ - ನಿದ್ರಾ ತೊಂದರೆಗಳು, ಶಾರೀರಕ ನೋವು, ಸುಸ್ತುಗಳು, ಆತ್ಮಹತ್ಯೆಯ ಆಲೋಚನೆಗಳು ಖಿನ್ನತೆ ರೋಗದ ವಿಶೇಷ ಲಕ್ಷಣಗಳು. ಖಿನ್ನತೆ ಸಹಜವಾಗಿ ವೃದ್ಧಾಪ್ಯದ ನೋವು, ಅಸಹಾಯಕತೆಯನ್ನು ವೃದ್ಧಿಸುತ್ತದೆ. ಸರಳ ತೃಪ್ತ ಜೀವನ, ಜೀವನ-ಪರಿಸರದ ಒಳಿತುಗಳ ಬಗ್ಗೆ ಹೆಚ್ಚು ಗಮನ, ಮನಸ್ಸನ್ನು ತಮ್ಮೆಡೆಗೆ ಸೆಳೆಯುವ ಸಂಗೀತ, ಸಾಹಿತ್ಯ - ಸೃಜನಶೀಲ ಚಟುವಟಿಕೆಗಳು, ಧಾರ್ಮಿಕ, ಆಧ್ಯಾತ್ಮಿಕ ಚಟುವಟಿಕೆಗಳು, ಸಮಾಜ ಸೇವಾ ಕಾರ್ಯಗಳು, ಧ್ಯಾನ ಯೋಗಗಳು ಖಿನ್ನತೆಯನ್ನು ತಗ್ಗಿಸುತ್ತವೆ. ವೈದ್ಯರಿಂದ ಖಿನ್ನತೆ ನಿವಾರಕ ಔಷಧಗಳೂ ಬೇಕಾಗಬಹುದು.

೪. **ಡಿಮೆನ್ಷಿಯ** *Dementia* **ಅಥವಾ ಬುದ್ಧಿ ಚತುರತೆಗಳು ಕ್ಷೀಣಿಸುವ ಕಾಯಿಲೆ** : ಆಲ್ಜೈಮರನ ಕಾಯಿಲೆಯಲ್ಲಿ ಮಿದುಳಿನ ವಿವಿಧ ಭಾಗಗಳು, ಮುಖ್ಯವಾಗಿ ಮಿದುಳಿನ ಮೇಲ್ಪೈ, ಹೆಚ್ಚು ಸವೆಯುತ್ತದೆ. ನರ ಜೀವಕೋಶಗಳು ಶೀಘ್ರಗತಿಯಲ್ಲಿ ನಾಶವಾಗತೊಡಗುತ್ತವೆ. ಸೆನೈಲ್ ಫ್ಲಾಕ್ಸ್‌ಗಳ ಜೊತೆಗೆ ನ್ಯೂರೋಫಿಬ್ರಿಲರಿ ಟ್ಯಾಂಗಲ್ಸ್‌ಗಳು ಕಾಣಿಸಿಕೊಳ್ಳುತ್ತವೆ. ವಿಪರೀತ ಮರೆವು, ಹಿಂದೆ ಕಲಿತ ಕೌಶಲಗಳೆಲ್ಲಾ ಮರೆಯಾಗುವುದು, ವೇಳೆ-ದಿಕ್ಕು-ಸ್ಥಳ-ಜನರ ಗುರುತು ಸಿಗದೇ ಪೇಚಾಟ-ಗೊಂದಲ, ಅತಿ ಭಾವೋದ್ವೇಗಗಳು, ದೈನಂದಿನ ಚಟುವಟಿಕೆಗಳಲ್ಲೂ ಪರಾವಲಂಬನೆ, ನರಸಂಬಂಧೀ ರೋಗಲಕ್ಷಣಗಳು, ಕಡೆಕಡೆಗೆ ಪೂರ್ಣ ಮತಿಹೀನ ಸ್ಥಿತಿಯುಂಟಾಗುತ್ತದೆ. ಈ ಕಾಯಿಲೆಗೆ ಕಾರಣ ಗೊತ್ತಿಲ್ಲ. ಚಿಕಿತ್ಸೆಯೂ ಲಭ್ಯವಿಲ್ಲ. ರೋಗಿಯನ್ನು

ಉಪಚರಿಸುವುದೊಂದೇ ಉಳಿಯುತ್ತದೆ.

೫. **ಪರಾವಲಂಬಿತನ** *Dependence* : ದೇಹ ಮತ್ತು ಮನಸ್ಸಿನ ಶಕ್ತಿ ಸಾಮರ್ಥ್ಯಗಳೆಲ್ಲವೂ ಕುಗ್ಗುವುದರಿಂದ ವ್ಯಕ್ತಿಯ ಚಲನವಲನ, ಆಲೋಚನೆ-ತೀರ್ಮಾನಗಳು, ಹೊಂದಿಕೊಳ್ಳುವ ಸಾಮರ್ಥ್ಯಗಳು ಎಲ್ಲವೂ ಕಡಿಮೆಯಾಗಿ, ವೃದ್ಧರು ಪರಾವಲಂಬಿಗಳಾಗುತ್ತಾರೆ. ನಿತ್ಯಕರ್ಮಗಳನ್ನು ಮಾಡಲು, ಓಡಾಡಲು ಬೇರೆಯವರ ಸಹಾಯ ಆಸರೆ ಬೇಕಾಗುತ್ತದೆ. ವಿಭಕ್ತ ಕುಟುಂಬಗಳೇ ಹೆಚ್ಚಾಗುತ್ತಿರುವುದರಿಂದ, ಯುವಕರು, ಪ್ರೌಢರು, ಸಂಪಾದನೆಯ ಸುಖದಲ್ಲೇ ಮಗ್ನರಾಗುವುದರಿಂದ ವೃದ್ಧ ತಂದೆ-ತಾಯಿ, ಅಜ್ಜ-ಅಜ್ಜಿಯರನ್ನು ಈಗ ಕೇಳುವವರಿಲ್ಲ; ಮೂಲೆ ಗುಂಪಾಗುತ್ತಾರೆ. ವೃದ್ಧಾಶ್ರಮಗಳನ್ನು ಸೇರುತ್ತಾರೆ. ಅಲ್ಲಿಯೂ ನೆಮ್ಮದಿ ಇಲ್ಲದೆ, ಮಕ್ಕಳಿದ್ದೂ ಇಲ್ಲಿಗೆ ಬರುವಂತಾಯಿತಲ್ಲ ಎಂದು ನೋಯುತ್ತಾರೆ. ವೃದ್ಧಾಪ್ಯಕ್ಕೆ ತಯಾರಿ ಎಂದರೆ, ನಾವು ಎಷ್ಟು ಕಾಲ ಸ್ವಾವಲಂಬಿಯಾಗಿ ಬದುಕಲು ಸಾಧ್ಯವೋ ಅಷ್ಟು ಕಾಲ ಹಾಗೆಯೇ ಬದುಕಬೇಕು. ಅಂತಹ ಪರಿಸರವನ್ನು ನಿರ್ಮಾಣ ಮಾಡಿಕೊಳ್ಳಬೇಕು. ಹಿಂದೆ ವಾನಪ್ರಸ್ಥಾಶ್ರಮದಲ್ಲಿ ಅತ್ಯಂತ ಸರಳ ಜೀವನ ಮಾಡುತ್ತಾ, ದೇವರ ಧ್ಯಾನದಲ್ಲಿ ಕಾಲತಳ್ಳುತ್ತಾ, ವೃದ್ಧರು ಬದುಕುತ್ತಿದ್ದರೆ, ಇದು ಈಗಲೂ ನಮಗೆ ಮಾದರಿಯಾಗಬೇಕು. ವೃದ್ಧಾಪ್ಯದಲ್ಲಿ ನಮಗೆ ನೆರವಾಗುವ ವ್ಯಕ್ತಿಗಳನ್ನು ಸಿದ್ಧಮಾಡಿಟ್ಟುಕೊಳ್ಳಬೇಕು. ಮಗನೇ ಆಗಬೇಕು ಎಂದರೆ ಉಪಯೋಗವಿಲ್ಲ.

೬. **ಸಾವು ಮತ್ತು ಸಾವಿನ ಪ್ರಕ್ರಿಯೆ** *Death & Dying* : ನಮ್ಮಲ್ಲಿ ಸಾಕಷ್ಟು ಜನ ಸಾಯಲು ಹೆದರಿದರೆ, ಕೆಲವರು ಸಾಯುವ ಪ್ರಕ್ರಿಯೆಗೆ ಹೆದರುತ್ತಾರೆ. ಹೆದರಿ ಹೆದರಿ ನಿತ್ಯವೂ ಸ್ವಲ್ಪ ಸ್ವಲ್ಪವಾಗಿ ಸಾಯುತ್ತಾರೆ. ಸಾವು ನಮ್ಮ 'ಸ್ನೇಹಿತ'. ಅದು ಬಂದಾಗ ಸಂತೋಷದಿಂದ ಬರಮಾಡಿಕೊಳ್ಳಬೇಕು. ಸತ್ತಮೇಲೆ ಏನೋ, ಕಂಡು, ವಾಪಸು ಬಂದು ಹೇಳಿದವರಿಲ್ಲ! ಆದ್ದರಿಂದ ಸತ್ತ ನಂತರ ಸುಖವೇ ಇದ್ದೀತು ಎಂದು ತಿಳಿಯುವುದೇ ಕ್ಷೇಮಕರ. ವೃದ್ಧಾಪ್ಯದ ಭಾರ, ಕಾಯಿಲೆಗಳ ಪೀಡೆಯಿಂದ ಬದುಕು ಸಾಕಾಗಿ 'ಸಾವನ್ನು ಸ್ವಾಗತಿಸಲು' ವ್ಯಕ್ತಿ ಸಜ್ಜಾದರೆ, ಅದು ತಪ್ಪು. ಕಾನೂನು ಬಾಹಿರ ಎನ್ನುತ್ತದೆ ನಮ್ಮ ಸಮಾಜ ಮತ್ತು ನ್ಯಾಯಾಂಗ. 'ದಯಾಮರಣ' ನಮ್ಮ ಹಕ್ಕು. ಬೇಕೆನಿಸಿದಾಗ ನಮ್ಮ ಪಾಡಿಗೆ ಸಾಯಲು ಬಿಡಿ ಎನ್ನುವ ಸಜ್ಜನರ ಸಂಖ್ಯೆ ಹೆಚ್ಚುತ್ತಿದೆ. ದಯಾಮರಣಕ್ಕೆ ಅನುಕೂಲ ಮಾಡಿಕೊಡಬೇಕು ನಮ್ಮ ಸಮಾಜ ಎಂದು ವೈದ್ಯರೂ ಹೇಳುತ್ತಾರೆ.

ಹೀಗೆ 'ವಯಸ್ಸಾಯಿತು, ಮುಂದೇನು ?' ಎಂದು ಚರ್ಚೆ ಮಾಡಿದರೆ, ಅಗತ್ಯ ಸಿದ್ಧತೆ ಮಾಡಿಕೊಂಡರೆ, 'ವಯಸ್ಸಾಯಿತು, ಸಂತೋಷ! ಬದುಕಿಗೆ ವಿದಾಯ ಹೇಳುವ ಅವಧಿ ಬಂತು. ಹೋಗುವವರೆಗೆ ಹಾಯಾಗಿರುತ್ತೇನೆ' ಎಂದು ನಾವು ಹೇಳಿಕೊಳ್ಳುವಂತಾಗಬೇಕು. ಅದೇ ಜೀವನದ ದೊಡ್ಡ ಸಾಧನೆ.

**ಡಾ|| ಸಿ. ಆರ್. ಚಂದ್ರಶೇಖರ್**
ಟೈಪ್-೫, ಬ್ಲಾಕ್ ೨, ಕ್ವಾರ್ಟರ್ಸ್, ನಂ. ೧೫
ನಿಮ್ಹಾನ್ಸ್ ಕ್ವಾರ್ಟರ್ಸ್, ಬೆಂಗಳೂರು- ೫೬೦ ೦೨೯

*ಕನ್ನಡದಲ್ಲಿ ೯೨ ಮತ್ತು ಇಂಗ್ಲಿಷ್‌ನಲ್ಲಿ ೧೩ ಪುಸ್ತಕಗಳನ್ನು ಪ್ರಕಟಿಸಿರುವ ಡಾ|| ಸಿ. ಆರ್. ಚಂದ್ರಶೇಖರ್ ನಿಯತಕಾಲಿಕೆಗಳಲ್ಲಿ ೮೦೦ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ಇವರ ಕೆಲವು ಪುಸ್ತಕಗಳು ತೆಲುಗು ಮತ್ತು ಉರ್ದು ಭಾಷೆಗಳಲ್ಲಿ ಪ್ರಕಟವಾಗಿವೆ. ೧೯೭೩ರಲ್ಲಿ ಎಂ.ಬಿ.ಬಿ.ಎಸ್. ಮತ್ತು ೧೯೭೮ರಲ್ಲಿ ಎಂ.ಡಿ. ಪಡೆದ ಶ್ರೀಯುತರು ೧೯೭೪ರಿಂದ ಬೆಂಗಳೂರಿನ ನಿಮ್ಹಾನ್ಸ್‌ನಲ್ಲಿ ಚಿಕಿತ್ಸೆ, ಬೋಧನೆ ಹಾಗೂ ಸಂಶೋಧನೆಗಳಲ್ಲಿ ತೊಡಗಿದ್ದಾರೆ. ಮನೋವೈದ್ಯಕೀಯ ವಿಭಾಗದ ಹೆಚ್ಚುವರಿ ಪ್ರಾಧ್ಯಾಪಕರಾದ ಇವರಿಗೆ ಸಂದಿರುವ ಪ್ರಶಸ್ತಿಗಳು ಹಲವು. ಇತ್ತೀಚೆಗೆ ಅವರು ಯು.ಜಿ.ಸಿ.ಯ ಹರಿಓಂ ಆಶ್ರಮ ರಾಷ್ಟ್ರೀಯ ಪುರಸ್ಕಾರವನ್ನು ಪಡೆದ ಪ್ರತಿಷ್ಠಿತ ತಜ್ಞರಾಗಿದ್ದಾರೆ. ಅವರ ದೂರವಾಣಿ ಸಂಖ್ಯೆ ೬೯೯೫೦೫೯.*

# ಕುಸಿಯುತಿರುವ ರೂಪಾಯಿ

# ವ್ಯಾಪ್ತಿ ಮತ್ತು ಪರಿಣಾಮಗಳು

ಕೆ. ಎಸ್. ಕೃಷ್ಣಸ್ವಾಮಿ

*ಸುಮಾರು ಹತ್ತು ವರ್ಷಗಳ ಹಿಂದೆ, ಅಂದರೆ ೧೯೯೧-೯೨ರಲ್ಲಿ, ಡಾ|| ಮನಮೋಹನ್ ಸಿಂಗ್ ಜಾರಿಗೆ ತಂದ ಅರ್ಥಸುಧಾರಣೆಗಳಿಗೆ ಹಲವಾರು ಕಾರಣಗಳಿದ್ದುವು. ಅವುಗಳಲ್ಲಿ ಮುಖ್ಯವಾದದ್ದೊಂದು ವಿದೇಶೀ ವಿನಿಮಯದಲ್ಲುಂಟಾಗಿದ್ದ ತುರ್ತುಪರಿಸ್ಥಿತಿ. ಅಗತ್ಯವಾದ ಆಮದುಗಳು, ವರ್ಷ ವರ್ಷಕ್ಕೆ ಕಟ್ಟಬೇಕಾದ ಸಾಲದ ಕಂತುಗಳು ಮುಂತಾದ ಅನಿವಾರ್ಯ ಖರ್ಚುಗಳಿಗೆ ಬೇಕಾದಷ್ಟು ವಿದೇಶೀ ವಿನಿಮಯದ ಸಂಗ್ರಹಣೆ ಇಲ್ಲದೆ ದೇಶ ದಿವಾಳಿಯಾಗುವ ಸ್ಥಿತಿಯಲ್ಲಿತ್ತು. ಆತಂಕ ನಿವಾರಣೆಗೆ ಭಾರತ ಸರಕಾರ ಹಮ್ಮಿಕೊಂಡ ಒಂದು ಪ್ರಮುಖ ಕಾರ್ಯಕ್ರಮ ರೂಪಾಯಿಯ ಅಪಮೌಲ್ಯ. ಇದರ ಹಿನ್ನೆಲೆ ಏನು, ಆಗ ಒದಗಿಬಂದಿದ್ದ ಕಷ್ಟಸ್ಥಿತಿಯ ಪರಿಹಾರಕ್ಕೆ ಇದರಿಂದ ಆಗಬೇಕಾಗಿದ್ದ ಪ್ರಯೋಜನವೇನು, ತದನಂತರದ ಪರಿಣಾಮಗಳೇನು, -ಇವುಗಳನ್ನು ಸ್ಥೂಲವಾಗಿ ಪರಿಶೀಲಿಸುವುದು ಇಲ್ಲಿಯ ಉದ್ದೇಶ.*

೧

ಎರಡನೇ ಮಹಾಯುದ್ಧದ ನಂತರ ವಿಶ್ವಸಂಸ್ಥೆಯ ಅಂಗವಾಗಿ ಸ್ಥಾಪಿಸಲ್ಪಟ್ಟ ಅಂತರ್ರಾಷ್ಟ್ರೀಯ ಹಣಕಾಸು ನಿಧಿಗೆ *(IMF)* ಸದಸ್ಯರಾಷ್ಟ್ರಗಳಲ್ಲಿ ಚಲಾವಣೆಯಲ್ಲಿದ್ದ ನಾಣ್ಯಗಳ ಪರಸ್ಪರ ವಿನಿಮಯ ದರಗಳನ್ನು ಗೊತ್ತುಪಡಿಸುವ ಅಧಿಕಾರ ವಹಿಸಲಾಗಿತ್ತು.

ನಿಧಿಯ ಸದಸ್ಯರೆಲ್ಲಾ ತಮ್ಮ ನಾಣ್ಯದ ದರವನ್ನು ಚಿನ್ನದ ತೂಕ ಅಥವಾ ಅಮೆರಿಕದ ಡಾಲರ್ ಮೌಲ್ಯಗಳಲ್ಲಿ ಪ್ರಕಟಿಸಲು ಅನುಕೂಲವಾಗುವಂತೆ ೧೦ ಗ್ರಾಂ. ಚಿನ್ನಕ್ಕೆ ೩೫ ಅಮೆರಿಕನ್ ಡಾಲರ್ ಬೆಲೆಯಾಗಿರಿಸಿಕೊಂಡಿದ್ದರು. *IMF*ನ ಸದಸ್ಯತ್ವದ ನಂತರವೂ ಭಾರತ ರೂ. ೧ ಕ್ಕೆ ಬ್ರಿಟನ್ನಿನ ೧ ಷಿಲ್ಲಿಂಗ್ ೬ ಪೆನ್ನಿಯಂತೆ ನಿಖರವಾದ ಬೆಲೆ ಇಟ್ಟುಕೊಂಡಿದ್ದರಿಂದ ರೂಪಾಯಿಯ ಚಿನ್ನದ ಮೌಲ್ಯ ಪೌಂಡಿನ ಮುಖಾಂತರವಿತ್ತು. ರೂಪಾಯಿ-ಪೌಂಡುಗಳ ಜೋಡಣೆಯ ಕಾರಣ ಇವೆರಡರಲ್ಲಿ ಯಾವ ನಾಣ್ಯ ಅಪಮೌಲ್ಯವಾದರೂ ರೂಪಾಯಿಯ - ಚಿನ್ನದ ಸಾಮ್ಯ ಬದಲಾಯಿಸುತ್ತಿತ್ತು. *IMF* ನ ಸದಸ್ಯತ್ವದ ಸಮಯದಲ್ಲಿ ರೂಪಾಯಿಯ ಬೆಲೆ ಅಪರಂಜಿ ಚಿನ್ನ ೪.೧೫ ಗ್ರೈನ್ಸ್ ಇದ್ದುದು ಕ್ರಮೇಣ ಬದಲಾಯಿಸಿ ೧೯೬೬ರ ಅಪಮೌಲ್ಯದ ನಂತರ ರೂ. ೧ ಕ್ಕೆ ೧.೮೮ ಗ್ರೈನ್ಸ್ ಎಂದಾಯಿತು. ಅದಕ್ಕೆ ಅನುಗುಣವಾಗಿ $೧ಕ್ಕೆ ೭ ರೂ. ೫೦ ಪೈಸೆ ಬೆಲೆಯಿದ್ದಿತು.

೧೯೭೦ರ ದಶಕದಲ್ಲಿ ವಿದೇಶಿ ವಿನಿಮಯ ಕ್ಷೇತ್ರದಲ್ಲಿ ಕ್ರಾಂತಿಕಾರಕ ಬದಲಾವಣೆಗಳಾದುವು. ೧೯೭೧ರಲ್ಲಿ ಅಮೆರಿಕ ತನ್ನ ಡಾಲರ್‌ಗೂ ಚಿನ್ನಕ್ಕೂ ಇದ್ದ ಸಂಬಂಧವನ್ನು ಕಡಿದು ಅದರ ಬೆಲೆಯನ್ನು ಮಾರುಕಟ್ಟೆಯ ಏರುಪೇರುಗಳಂತೆ 'ತೇಲಾಡಲು' ಬಿಟ್ಟಿತು. ೧೯೭೩ರಲ್ಲಿ ಕಚ್ಚಾ ತೈಲದ ಬೆಲೆ ಇದ್ದಕ್ಕಿದ್ದಂತೆ ಮೇಲೇರಿದಾಗ ಎಲ್ಲಾ ದೇಶಗಳ ವಿದೇಶೀ ವಿನಿಮಯಗಳ ದರಗಳಲ್ಲೂ ಗೊಂದಲವಾಯ್ತು. ಆ ಸಮಯದಲ್ಲಿ *IMF* ತನ್ನ ಸದಸ್ಯರಿಗೆ ಒದಗಿಸುತ್ತಿದ್ದ *Special Drawing Rights (SDR.s)* ಎಂಬ ಸೌಕರ್ಯದ ಬೆಲೆಯನ್ನು ಡಾಲರ್ ಮಾತ್ರವಲ್ಲದೆ ಅಂತರ್ರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಮುಖ್ಯವಾದ ಇತರ ನಾಣ್ಯಗಳನ್ನೂ ಗಣನೆಗೆ ತೆಗೆದುಕೊಂಡು ನಿರ್ಧರಿಸುವ ಕ್ರಮವನ್ನು ಅನುಸರಿಸಿತು. ಇದೇ ಪದ್ಧತಿಯನ್ನು ೧೯೭೫ರಲ್ಲಿ ಭಾರತ ಸರ್ಕಾರವೂ ಜಾರಿಗೆ ತಂದಿತು. ನಮ್ಮ ವಿದೇಶೀ ವ್ಯಾಪಾರದಲ್ಲಿ ಮುಖ್ಯವಾದ ಮತ್ತು ಪ್ರಪಂಚದ ಮಾರುಕಟ್ಟೆಗಳಲ್ಲಿ ಶಕ್ತಿಯುತವಾಗಿದ್ದ ಕೆಲವು ನಾಣ್ಯಗಳ ದೈನಂದಿನ ಬೆಲೆಯ ಆಧಾರದ ಮೇಲೆ ರೂಪಾಯಿಯ ಸ್ಥಾನವನ್ನು ನಿಷ್ಕರ್ಷಿಸಿ, ಅದನ್ನು ಆಗಿಂದಾಗ್ಗೆ, ಸಂದರ್ಭಾನುಸಾರ ಬದಲಾಯಿಸುವ ಜವಾಬ್ದಾರಿಯನ್ನು ರಿಸರ್ವ್ ಬ್ಯಾಂಕಿಗೆ ಸರ್ಕಾರ ವಹಿಸಿತು. ೧೯೯೧ರ ಅಪಮೌಲ್ಯದ ನಂತರ ವಿದೇಶಿ ವಹಿವಾಟುಗಳಿಗೆ ಹೆಚ್ಚಾಗಿ ನಾವು ಉಪಯೋಗಿಸುವುದು ಅಮೆರಿಕಾ ಡಾಲರನ್ನು. ಇದರಿಂದಾಗಿ ಅಂತರ್ರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಡಾಲರ್‌ನ ಬೆಲೆಯ ಏರುಪೇರುಗಳನ್ನು ನೋಡಿಕೊಂಡು ರಿಸರ್ವ್ ಬ್ಯಾಂಕ್ ಈಚೀಚೆಗೆ ರೂಪಾಯಿಯ ದರವನ್ನು ಪ್ರತಿದಿನ ಪ್ರಕಟಿಸುವ ಕ್ರಮವನ್ನು ಇಟ್ಟುಕೊಂಡಿದೆ. ದರದ ಏರಿಳಿತವನ್ನು $ ೧ಕ್ಕೆ ಸಮ ಎಷ್ಟು ರೂಪಾಯಿಗಳು ಎಂದು ಅಳೆಯುವುದು ಈಗಿನ ಪದ್ಧತಿ.

ಈ ಅಳತೆಯ ಪ್ರಕಾರ ಕಳೆದ ಇಪ್ಪತ್ತು ವರ್ಷಗಳಲ್ಲಿ ರೂಪಾಯಿಯ ಬೆಲೆ ಹಿಂದೆಂದೂ ಇಲ್ಲದಷ್ಟು ಕುಸಿದಿದೆ. ೧೯೬೬ರ ಅಪಮೌಲ್ಯದ ವೇಳೆಯಲ್ಲಿ $ ೧ಕ್ಕೆ ರೂ. ೭.೫೦ ಇದ್ದುದು ಮುಂದಿನ ಹದಿನೈದು ವರ್ಷಗಳಲ್ಲಿ, ೧೯೮೧ರ ಮಾರ್ಚಿಯ ಕೊನೆಗೆ ರೂ. ೮-೯ಕ್ಕೆ - ಅಂದರೆ ಶೇಕಡಾ ೯.೨ ರಷ್ಟು ಮಾತ್ರ - ಇಳಿದಿತ್ತು. ಅಲ್ಲಿಂದೀಚೆಗೆ ಮಾರ್ಚ್ ೧೯೯೧ರ ಹೊತ್ತಿಗೆ ಉಂಟಾಗಿದ್ದ ಕುಸಿತ ಸುಮಾರು ೧೪೦%. ಆ ವರ್ಷದ ಜುಲೈನಲ್ಲಾದ ಅಪಮೌಲ್ಯದ ನಂತರ ದರದ ಇಳಿತ ಮುಂದುವರೆದು ಜನವರಿ ೨೦೦೦ ದವರೆಗೆ $ ೧ಕ್ಕೆ ೪೩.೪೮ಕ್ಕೆ ತಲುಪಿತು. ಇದುವರೆಗೂ ಈ ರೀತಿಯ ಕುಸಿತದಲ್ಲಿ ಯಾವ ಬದಲಾವಣೆಯೂ ಇಲ್ಲ. ದರದ ಮಟ್ಟ ಈಚೀಚೆಗೆ ಡಾಲರ್ ೧ಕ್ಕೆ ರೂ. ೪೬.೧೦ ಕ್ಕಿಂತ ಕಡಿಮೆಯೇ ಇರುತ್ತದೆ. ೧೯೮೧ರ ದರಕ್ಕೆ ಹೋಲಿಸಿದರೆ ಅದರಲ್ಲಾಗಿರುವ ಇಳಿತ ಶೇಕಡಾ ೪೬೩ ರಷ್ಟಾಗುತ್ತೆ! ವಿದೇಶೀ ದರದ ಸ್ಥಿತಿ ಹೀಗಿದ್ದರೆ ಅಂತರ್ದೇಶೀಯ ಬೆಲೆಗಳ ಪಾಡೇನು ? ೧೯೮೧-೮೨ರಲ್ಲಿ ಸಗಟು ಬೆಲೆಗಳ ಸೂಚ್ಯಂಕ ೧೦೦ ಆದರೆ ಸೆಪ್ಟೆಂಬರ್ ೨೦೦೦ದ ವೇಳೆಗೆ ೩೮೨ ಆಗಿತ್ತು. ಅಂದರೆ ಇಲ್ಲಿಯ ಮಾರುಕಟ್ಟೆಗಳಲ್ಲೂ ರೂಪಾಯಿ ಮೌಲ್ಯ ಸಾಕಷ್ಟು ಇಳಿದಂತಾಯಿತು.

೨

ಹಣಕ್ಕೆ ಬೇಡಿಕೆ ಇರುವುದು ಗ್ರಾಹಕರು ಅದನ್ನು ಮಾರುಕಟ್ಟೆಯಲ್ಲಿ ಇತರ ಪದಾರ್ಥಗಳನ್ನು ಕೊಳ್ಳಲು ಉಪಯೋಗಿಸುವುದರಿಂದ. ಜನರು ಬಳಸುವ ಸಾಮಗ್ರಿ

ಅಥವಾ ಸೇವೆಗಳನ್ನು ಪಡೆದುಕೊಳ್ಳಲು ತಗಲುವ ಹಣದ ಮೊತ್ತ ಹೆಚ್ಚಾದರೆ ಅವುಗಳ ಬೆಲೆ ಏರಿದಂತೆ. ಇದರ ಪ್ರತಿಮುಖ ಹಣದ ಮೌಲ್ಯ ಕಡಿಮೆಯಾಗುವುದು. ಇದಕ್ಕೆ ಕಾರಣಗಳನ್ನು ಮೂಲತಃ ದೇಶದ ಆರ್ಥಿಕ ಪರಿಸ್ಥಿತಿ ಮತ್ತು ವಿದೇಶೀ ವ್ಯಾಪಾರದ ಚಲನವಲನಗಳಲ್ಲಿ ಕಾಣಬೇಕು. ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಉತ್ಪಾದನೆಗೆ ತಗಲುವ ಖರ್ಚೂ ಹೆಚ್ಚಾಗಿ ಅದರಿಂದ ಗ್ರಾಹಕರು ಕೊಡಬೇಕಾದ ಬೆಲೆಗಳು ಹೆಚ್ಚಬಹುದು. ಅಥವಾ ಸಮಗ್ರ ಉತ್ಪನ್ನ - ವ್ಯಾಪಾರಗಳಿಗೆ ಬೇಕಾಗುವ ಮೊತ್ತಕ್ಕಿಂತ ಜಾಸ್ತಿಯಾಗಿ ಹಣ ಚಲಾವಣೆಗೆ ಬಂದರೆ ಅಂತರ್ದೇಶೀಯ ಬೇಡಿಕೆಗಳ ಒತ್ತಡದಿಂದ ಬೆಲೆಗಳು ಮೇಲೇರಬಹುದು. ಈ ಬದಲಾವಣೆಗಳೊಡನೆ ಅಂತರ್ರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಆಗುವ ಏರುಪೇರುಗಳಿಂದಲೂ ದೇಶದೊಳಗಿನ ಬೆಲೆಗಳಲ್ಲಿ ಏರಿಳಿತವಿರುತ್ತದೆ. ೧೯೭೦ರ ದಶಕದಲ್ಲಿ ಕಚ್ಚಾ ತೈಲವನ್ನು ಉತ್ಪಾದಿಸುವ ರಾಷ್ಟ್ರಗಳು ಜೊತೆಗೂಡಿದ್ದರಿಂದ ಅದರ ಬೆಲೆ ತೀವ್ರವಾಗಿ ಏರಿದುದು ಭಾರತದಲ್ಲಿ ಸರ್ವಪದಾರ್ಥಗಳ ಬೆಲೆಯ ಸೂಚ್ಯಂಕ ೧೯೭೦-೭೧ರಲ್ಲಿದ್ದ ೧೦೦ರಿಂದ ೧೯೮೧-೮೨ರ ವೇಳೆಗೆ ೨೮೧ಕ್ಕೆ, ಅಂದರೆ ಶೇಕಡಾ ೧೮೧ರಷ್ಟು, ಹೆಚ್ಚಾಗಲು ಪ್ರಮುಖ ಕಾರಣವಾಯಿತು.

ಹಲವು ದಶಕಗಳಿಂದ ನಮ್ಮ ದೇಶದಲ್ಲಿ ಹಣದುಬ್ಬರ ತಡೆಯಿಲ್ಲದೆ ಮುಂದುವರೆದಿರುವುದು ಎಲ್ಲರ ಅನುಭವ. ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳು ಆರ್ಥಿಕ ಅಭಿವೃದ್ಧಿಗಾಗಿ - ಅಥವಾ ಅಭಿವೃದ್ಧಿಯ ಹೆಸರಿನಲ್ಲಿ - ಹಿಡಿತವಿಲ್ಲದೆ ಮಾಡುತ್ತಿರುವ ಖರ್ಚು, ಎಲ್ಲಾ ಕ್ಷೇತ್ರಗಳಲ್ಲೂ ಕೆಳದರ್ಜೆಯ, ಕೀಳುಮಟ್ಟದ ಉತ್ಪಾದನೆ, ವ್ಯಾಪಾರಿಗಳು ಅನುಸರಿಸುವ ರೀತಿನೀತಿಗಳು, ಹಣವಂತರ ಅಬ್ಬರದ ಜೀವನ ಶೈಲಿ, ಮಧ್ಯಮ ವರ್ಗದವರ ಅನವಶ್ಯಕ ಸಾಂಪ್ರದಾಯಿಕ ಖರ್ಚು, ಪ್ರಜಾಸಂಖ್ಯೆಯ ಒತ್ತಡದಿಂದ ಅವಶ್ಯಕ ವಸ್ತುಗಳಿಗಾಗುವ ಅಸಾಧ್ಯ ಬೇಡಿಕೆ - ಇತ್ಯಾದಿಗಳಿಂದ ಬೆಲೆಗಳ ಏರಿಕೆ ನಿರಂತರವಾಗಿದೆ. ಈ ತರಹ ಬೆಲೆಗಳ ಏರುವಿಕೆ ಪರದೇಶಗಳಲ್ಲೂ ಇರಬಹುದು. ಆದರೆ ಹೊರದೇಶಗಳಿಗಿಂತ ನಮ್ಮ ದೇಶದಲ್ಲಿ ಬೆಲೆ ತೀವ್ರವಾಗಿ ಏರಿದಾಗ ವಿದೇಶೀ ಮಾರುಕಟ್ಟೆಗಳಲ್ಲಿ ರೂಪಾಯಿಯ ವಿನಿಮಯ ದರ ಕುಸಿಯುವುದು. ಇದರಿಂದ ನಮಗೆ ಆಮದುಗಳು ತುಟ್ಟಿಯಾಗಿ ವಿದೇಶಿಯರಿಗೆ ನಮ್ಮ ರಫ್ತುಗಳು ಅಗ್ಗವಾಗಿ ಮೂರು ವಿಧದ ಪರಿಣಾಮಗಳಾಗುವ ನಿರೀಕ್ಷೆಯಿರುತ್ತದೆ. ಮೊದಲನೆಯದಾಗಿ, ಆಮದು-ರಫ್ತುಗಳಲ್ಲಿ ಸಮತೆ ಕಡಿಮೆಯಾಗುವುದು; ಅದಕ್ಕೆ ಸಂಬಂಧಿಸಿದಂತೆ, ಎರಡನೆಯದಾಗಿ, ವಿದೇಶೀ ವಿನಿಮಯದ ನಿವ್ವಳ ಖರ್ಚು ಕಡಿಮೆಯಾಗಿ ಅದರ ಸಂಗ್ರಹಣೆ ಸಾಧಿಸುವುದು. ಮೂರನೆಯದಾಗಿ ದೇಶದಲ್ಲಿನ ಬೆಲೆಗಳ ಏರಿಕೆಯಿಂದ ಅನವಶ್ಯಕ ಖರ್ಚುಗಳಿಗೆ ಎಲ್ಲಾ ಕ್ಷೇತ್ರಗಳಲ್ಲೂ ತಡೆ ಹಾಕುವುದು. ಇಂತಹ ಪರಿಣಾಮಗಳನ್ನು ಗಣನೆಯಲ್ಲಿಟ್ಟುಕೊಂಡು ಸರ್ಕಾರ ತಾನೇ ಮುಂದುವರೆದು ರೂಪಾಯಿಯ ವಿನಿಮಯದರವನ್ನು ತಗ್ಗಿಸಬಹುದು, ಅಥವಾ ಮಾರುಕಟ್ಟೆಯ ಒತ್ತಡಗಳಿಂದ ಕೆಳಗಿಳಿಯಲು ಬಿಡಬಹುದು. ಕಳೆದ ಇಪ್ಪತ್ತು ವರ್ಷಗಳಲ್ಲಿ ಭಾರತ ಸರ್ಕಾರ ಇವೆರಡು ನೀತಿಗಳನ್ನೂ ಅನುಸರಿಸಿದೆ. ೧೯೮೦ರ ದಶಕದಲ್ಲಿ ಭಾರತ ಸರ್ಕಾರ ರೂಪಾಯಿಯ ಅಪಮೌಲ್ಯವನ್ನು ಸ್ವಂತವಾಗಿ ಕೈಗೊಳ್ಳಲಿಲ್ಲ; ವಿದೇಶೀ ವಿನಿಮಯದ ಬೇಡಿಕೆಗಳಿಗೆ ಅವಕಾಶ ಕಲ್ಪಿಸಿ ರೂಪಾಯಿಯ ಬೆಲೆ ಕುಸಿಯುವಂತೆ ಮಾಡಿತು. ಆದರೆ ೧೯೯೧-೯೨ರ ಉದಾರೀಕರಣದ ಅಂಗವಾಗಿ ರೂಪಾಯಿಯನ್ನು ತಾನೇ ಅಪಮೌಲ್ಯ ಮಾಡಿ ನಂತರ ಮಾರುಕಟ್ಟೆಯ ಏರುಪೇರುಗಳಂತೆ ಅದನ್ನು ಸರಿಪಡಿಸುವ ಜವಾಬ್ದಾರಿಯನ್ನು ರಿಸರ್ವ್ ಬ್ಯಾಂಕಿಗೆ ಬಿಟ್ಟಿದೆ.

೩

೧೯೯೧ರ ಮಧ್ಯಂತರದಲ್ಲಿ ರೂಪಾಯಿಯನ್ನು ಅಪಮೌಲ್ಯ ಮಾಡಲು ಇದ್ದ ಕಾರಣಗಳೇನು ? ಆ ಹಂತದಲ್ಲಿ IMF ಮತ್ತು ವಿಶ್ವಬ್ಯಾಂಕಿನ ಒತ್ತಡಕ್ಕೆ ಸರ್ಕಾರ ಸುಲಭವಾಗಿ ಮಣಿದು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳ ನೀತಿಯನ್ನು ಏಕೆ ಅನುಸರಿಸಬೇಕಾಯಿತು ? ಇವುಗಳಿಗೆ ಉತ್ತರ ಕಂಡುಬರುವುದು ೧೯೮೦ರ ದಶಕದಲ್ಲಾಗಿದ್ದ ಆರ್ಥಿಕ ಪರಿವರ್ತನೆಗಳಲ್ಲಿ.

ಉದಾರೀಕರಣ ಮತ್ತು ಖಾಸಗೀಕರಣಗಳು ೧೯೯೧ರ ನಂತರ ವೇಗವಾಗಿದ್ದರೂ ಅವು ಹಿಂದಿನ ದಶಕದಲ್ಲಿ ರಾಜೀವ್ ಗಾಂಧಿ ಪ್ರಧಾನಿಯಾಗಿದ್ದಾಗಲೇ ಪ್ರಾರಂಭವಾಗಿದ್ದವು. ಕೈಗಾರಿಕಾ ಕ್ಷೇತ್ರದಲ್ಲಿ ಖಾಸಗೀವಲಯ ಹೆಚ್ಚಾಗಿ ಭಾಗವಹಿಸಲು ಅನುಕೂಲವಾಗುವಂತೆ ಅನೇಕ ಸೌಕರ್ಯಗಳನ್ನು ಸರ್ಕಾರ ಒದಗಿಸಿತು. ಇವುಗಳಲ್ಲಿ ಯಂತ್ರೋಪಕರಣ, ಕಚ್ಚಾ ಪದಾರ್ಥಗಳ ಆಮದುಗಳಲ್ಲದೆ ಹೊರದೇಶಗಳಲ್ಲಿ ಸಾಲಮಾಡುವ ಅವಕಾಶ ಕೂಡ ಸೇರಿತ್ತು. ಪರಿಣಾಮವಾಗಿ ಖಾಸಗೀ ಕ್ಷೇತ್ರದ ವಿದೇಶೀ ಸಾಲದ ಮೊತ್ತ (ಅನಿವಾಸಿ ಭಾರತೀಯರು ಬ್ಯಾಂಕ್‌ಗಳಲ್ಲಿಟ್ಟಿರುವ ಠೇವಣಿ ಸೇರಿ) $ ೩೦,೪೫೧ ಮಿಲಿಯನ್ ಆಗಿದ್ದು ಭಾರತದ ಒಟ್ಟು ವಿದೇಶೀ ಸಾಲದ ( $ ೭೫,೮೫೭ ಮಿಲಿಯನ್ ) ಶೇಕಡಾ ೪೦ಕ್ಕೂ ಮೀರಿತ್ತು. ಇದರಲ್ಲಿ ಒಂದು ವರ್ಷಕ್ಕಿಂತ ಕಡಿಮೆ ಅವಧಿಯ ಸಾಲದ್ದೇ ಹೆಚ್ಚು ಪಾಲು. ಅದನ್ನು ತೀರಿಸಲು ಬೇಕಾದ ವಿದೇಶಿ ವಿನಿಮಯದ ಜೊತೆಗೆ ದೀರ್ಘಾವಧಿಯ ಸಾಲದ ಕಂತುಗಳು ಮತ್ತು ವಿದೇಶೀ ಬಜೆಟ್‌ನಲ್ಲಿದ್ದ ಖೋತಾಗಳಿಗೂ ಹಣವನ್ನು ಒದಗಿಸಬೇಕಾಗಿತ್ತು. ಆದರೆ ಇವೆಲ್ಲಕ್ಕೂ ಸಾಕಾಗುವ ವಿದೇಶಿ ವಿನಿಮಯದ ಸಂಪಾದನೆ, ಅಥವಾ ಸಂಗ್ರಹಣೆ ಇರಲಿಲ್ಲ. ಸಹಾಯಕ್ಕಾಗಿ **IMF** ವಿಶ್ವಬ್ಯಾಂಕ್ ಮತ್ತು ಇತರ ದೇಶಗಳ ಸರ್ಕಾರಗಳನ್ನು ಸಂಪರ್ಕಿಸುವುದು ಅನಿವಾರ್ಯವಾಯಿತು.

ಈ ತುರ್ತು ಪರಿಸ್ಥಿತಿಯಲ್ಲಿ ಭಾರತ ತನ್ನಲ್ಲಿದ್ದ ಚಿನ್ನವನ್ನು ಸ್ವಲ್ಪ ಮಾರಿ ಹಣವನ್ನು ಪಡೆಯಿತು. ಇದು ಸಾಲದೇ ಬಂದಾಗ **IMF** ಮುಂತಾದವರು ಒಟ್ಟಾರೆ ಹಾಕಿದ ಷರತ್ತುಗಳನ್ನು ಒಪ್ಪಿದ್ದರ ಫಲ ಡಾ|| ಮನಮೋಹನ್ ಸಿಂಗರ ಸುಧಾರಣೆಗಳು. ೧೯೯೧ರ ಜೂನ್ ವೇಳೆಗೆ ಭಾರತದ ವಿದೇಶಿ ವಿನಿಮಯದ ಸಂಗ್ರಹವಿದ್ದುದು $ ೧,೧೨೪ ಮಿಲಿಯನ್ ಮಾತ್ರ. ಆ ವರ್ಷದಲ್ಲಿ ಕಟ್ಟಬೇಕಾಗಿದ್ದ ಸಾಲದ ಕಂತುಗಳ ಪ್ರಮಾಣ ಸುಮಾರು $ ೩,೧೦೦ ಮಿಲಿಯನ್; ಅಲ್ಲದೆ ಆಮದು-ರಫ್ತು ಇತ್ಯಾದಿಗಳಲ್ಲಿಯ ವಾರ್ಷಿಕ ಖೋತಾ $ ೫,೦೦೦ ಮಿಲಿಯನ್‌ಗಿಂತ ಹೆಚ್ಚಾಗಿತ್ತು. ರೂಪಾಯಿಯ ಕುಸಿತದ ನಿರೀಕ್ಷಣೆಯಿಂದ ಅನಿವಾಸಿ ಭಾರತೀಯರು ತಮ್ಮ ಠೇವಣಿಗಳನ್ನು ವಾಪಸು ಪಡೆಯುವ ಆತುರದಲ್ಲಿ ರೂಪಾಯಿನ ಮೇಲಿನ ಒತ್ತಡವನ್ನು ಮತ್ತಷ್ಟು ಹೆಚ್ಚಿಸಿದರು. ವಿದೇಶೀ ಸಾಲವನ್ನು ಪಡೆಯುವ ಮುನ್ನ ತನ್ನಲ್ಲಿರುವ ನ್ಯೂನತೆಗಳನ್ನು ಪರಿಹರಿಸಿಕೊಳ್ಳಬೇಕೆಂಬುದು **IMF** ಮತ್ತಿತರರ ವಾದವಾಗಿತ್ತು. ಈ ಪರಿಹಾರಗಳೇನೆಂದರೆ : (೧) ರೂಪಾಯಿಯ ಮೌಲ್ಯವನ್ನು ಕಡಿಮೆ ಮಾಡಿ ರಫ್ತುಗಳನ್ನು ಪ್ರೋತ್ಸಾಹಿಸಿ, ಆಮದುಗಳನ್ನು ತಡೆಯುವುದು; (೨) ಆರ್ಥಿಕ ವ್ಯವಹಾರಗಳಲ್ಲಿ ಸರ್ಕಾರದ ಪಾತ್ರವನ್ನು ಸಂಕುಚಿತ ಮಾಡಿ ಖಾಸಗೀ ಕ್ಷೇತ್ರವನ್ನು ವಿಸ್ತರಿಸುವುದು; (೩) ಸರ್ಕಾರದ ಬಜೆಟ್‌ನಲ್ಲಿರುವ ಖೋತಾವನ್ನು ತ್ವರಿತವಾಗಿ ಇಳಿಸುವುದು; (೪) ವಿದೇಶೀ ವ್ಯಾಪಾರ, ವ್ಯವಹಾರಗಳಿಗಿರುವ ಸುಂಕ ಇತ್ಯಾದಿ ತಡೆಗಳನ್ನು ಕಡಿಮೆ ಮಾಡಿ ಜಾಗತೀಕರಣದಲ್ಲಿ ಸಕ್ರಿಯವಾಗಿ ಭಾಗವಹಿಸುವುದು.

ಒಂದಲ್ಲ ಒಂದು ರೀತಿ ೧೯೯೧-೯೨ರಿಂದ ಭಾರತದ ಎಲ್ಲಾ ಸರ್ಕಾರಗಳೂ ಈ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿವೆ. ಈಗಿನ ಅರ್ಥಮಂತ್ರಿ ಯಶವಂತ ಸಿನ್ಹಾರವರಂತೂ ಆರ್ಥಿಕ ಸುಧಾರಣೆಗಳ ಎರಡನೆಯ ಕಂತನ್ನು ಜಾರಿಗೆ ತರಲು ಅತ್ಯಾತುರದಲ್ಲಿದ್ದಾರೆ. ೧೯೯೧ರ ಜುಲೈನಲ್ಲಿ ರೂಪಾಯಿಯನ್ನು ಪ್ರತಿ ಸಲ ಶೇಕಡಾ




ಸಾರ್ವಜನಿಕ ಉದ್ಯಮಗಳ ಹರಾಜಿಗೇ ಒಬ್ಬ ಕೇಂದ್ರ ಸಚಿವ !

೧೮ರಂತೆ ಎರಡು ಬಾರಿ ಅಪಮೌಲ್ಯ ಮಾಡಿದುದರಿಂದ $೧ನ ಬೆಲೆ ೧೯೯೧ರ ಮಾರ್ಚಿಯಲ್ಲಿದ್ದ ರೂ. ೧೯.೬೪ರಿಂದ ೧೯೯೨ರ ಮಾರ್ಚಿ ವೇಳೆಗೆ ರೂ. ೩೧.೨೩ ರಷ್ಟಾಯಿತು - ಅಂದರೆ ಶೇಕಡಾ ೫೯ರಷ್ಟು ಏರಿತು. ಈ ಏರಿಕೆ ಮುಂದುವರೆದು ಈಗ ದರ $ ೧ ಕ್ಕೆ ರೂ. ೪೬ ಕ್ಕಿಂತ ಹೆಚ್ಚಾಗಿದೆ. ಕಳೆದ ಹತ್ತು ವರ್ಷಗಳಲ್ಲಿ ರೂಪಾಯಿಯ ಕುಸಿತ ಕೆಲವೊಮ್ಮೆ ಜೋರಾಗಿ ಕೆಲವೊಮ್ಮೆ ನಿಧಾನವಾಗಿರಬಹುದು; ಆದರೆ ಅಂತರ್‍ರಾಷ್ಟ್ರೀಯ ಹಣ ಪ್ರಪಂಚದಲ್ಲಿ ಅದರ ಪ್ರಗತಿ ಕೆಳಮುಖವಾಗಿದೆಯೇ ಹೊರತು ಬೇರೆ ಇಲ್ಲ.

ಕೆಲವರು ಇದು ವಿಷಾದಕರವಲ್ಲ, ಇದರಿಂದ ಆರ್ಥಿಕ ಸ್ಥಿತಿಯಲ್ಲಿ ಒಳ್ಳೆಯ ಬೆಳವಣಿಗೆಗಳು ಉಂಟಾಗಲು ಅವಕಾಶವಿರುತ್ತದೆ ಎಂದು ವಾದಿಸುತ್ತಾರೆ. ಅಪಮೌಲ್ಯದಿಂದ ರಫ್ತುಗಳಿಗೆ ಉತ್ತೇಜನ ದೊರೆತು ಆಮದುಗಳಿಗೆ ತಡೆಯಿರುವುದರಿಂದ ವಿದೇಶಿ ವಿನಿಮಯದ ಸಂಪಾದನೆಗೆ ಬಹಳ ಅನುಕೂಲವಿರುತ್ತದೆ ಎನ್ನುವುದು ಅವರ ಅಭಿಪ್ರಾಯ. ೧೯೯೧ರ ನಂತರ ಸ್ವಲ್ಪ ಕಾಲ ಇದರಂತೆ ಆಗಿದ್ದೇನೋ ನಿಜ; ಆದರೆ ಭಾರತ ದೇಶದ ಆಮದುಗಳು ಮುಕ್ಕಾಲುಪಾಲು ಅತ್ಯವಶ್ಯಕವಾಗಿ ಬೇಕಾಗುವ ವಸ್ತುಗಳು - ಕಚ್ಚಾತ್ತೈಲ, ತಾಮ್ರ ಮತ್ತು ಮಿಶ್ರಲೋಹಗಳು, ಯಂತ್ರ ಸಾಮಗ್ರಿಗಳು, ರಾಸಾಯನಿಕ ವಸ್ತುಗಳು, ವಜ್ರದ ಹರಳುಗಳು ಮತ್ತು ಆಹಾರ ಸಾಮಗ್ರಿಗಳು. ಬೆಲೆ ಹೆಚ್ಚಾಯಿತೆಂದು ಅವುಗಳ ಆಮದನ್ನು ತೀವ್ರವಾಗಿ ಇಳಿಸುವಂತಿರಲಿಲ್ಲ; ಪರಿಣಾಮವಾಗಿ ದೇಶದಲ್ಲಿ ಗ್ರಾಹಕರು ಮತ್ತು ವ್ಯಾಪಾರೋದ್ಯಮಿಗಳು ಭರಿಸಬೇಕಾದ ಖರ್ಚುಗಳು ಹೆಚ್ಚಿ ದೇಶೀಯ ಮಾರುಕಟ್ಟೆಯಲ್ಲಿ ಬೆಲೆಗಳು ಏರಿ, ರೂಪಾಯಿಯ ಮೌಲ್ಯ ಮತ್ತಷ್ಟು ಕುಸಿಯಿತು. ರೂಪಾಯಿಯ ಅಪಮೌಲ್ಯವಾದ ಮೇಲೆ ದೇಶದ ರಫ್ತಿನಿಂದ ದೊರಕುತ್ತಿದ್ದ ಆದಾಯವೇನೋ ಹೆಚ್ಚಿತು. ಆದರೆ ಇದು ಬರಿಯ ಅಪಮೌಲ್ಯದ ಫಲವಾಗಿರಲಿಲ್ಲ. ರಫ್ತನ್ನು ಹೆಚ್ಚಿಸಲು ಸರ್ಕಾರ ಕೆಲವು ನೇರ ಸೌಕರ್ಯಗಳನ್ನೂ ಒದಗಿಸಿತ್ತು. ರೂಪಾಯಿಯ ಲೆಕ್ಕದಲ್ಲಿ ದೇಶದ ನಿರ್ಯಾತದಿಂದ ಆದಾಯ ೧೯೯೧-೯೨ ರಲ್ಲಿ ಸುಮಾರು ರೂ. ೪೪,೦೦೦ ಕೋಟಿ ಇದ್ದುದು ೧೯೯೫-೯೬ರ ವೇಳೆಗೆ ರೂ. ೧೦೬,೦೦೦ ಕೋಟಿಗಿಂತ ಹೆಚ್ಚಾಗಿತ್ತು. ಆದರೆ ಅದೇ ಅಂತರದಲ್ಲಿ ದೇಶದ ಆಮದುಗಳ ಖರ್ಚು ಸುಮಾರು ರೂ. ೪೮,೦೦೦ ಕೋಟಿಯಿಂದ ರೂ. ೧೨೩,೦೦೦ ಕೋಟಿಗೆ ಏರಿತ್ತು! ಅಲ್ಲಿಂದ ಮುಂದೆ ರಫ್ತು - ಆಮದುಗಳಿಗಿರುವ ಅಂತರ ಹೆಚ್ಚುತ್ತಿದೆಯೇ ಹೊರತು ಕಡಿಮೆಯಾಗುತ್ತಿಲ್ಲ. ಇದು ೧೯೯೧-೯೨ರಲ್ಲಿದ್ದ ರೂ. ೩೮೧೯ ಕೋಟಿಯಿಂದ ೧೯೯೫-೯೬ರ ವೇಳೆಗೆ ರೂ. ೧೬,೩೨೫ ಕೋಟಿಗೆ ಏರಿ ಈಗ ರೂ. ೩೫,೦೦೦ ಕೋಟಿಗೆ ಮೀರಿದೆ. ಅಂದರೆ ಅಪಮೌಲ್ಯದ ಮೂಲಕ ವಿದೇಶೀ ವ್ಯಾಪಾರದಲ್ಲಿದ್ದ ಖೋತಾವನ್ನು ಕಡಿಮೆ ಮಾಡುವ ಸಾಧ್ಯತೆ ಕಡಿಮೆ. ಈಚೀಚೆಗೆ ವಿಶ್ವ ಮಾರುಕಟ್ಟೆಗಳಲ್ಲಿ ಕಚ್ಚಾ ತೈಲದ ಬೆಲೆ ಎಂದಿಗಿಂತಲೂ ಹೆಚ್ಚಾಗಿರುವಾಗ ರೂಪಾಯಿ ದರದ ಕುಸಿತದಿಂದ ನಮಗೆ ನಿವ್ವಳ ಲಾಭವಾಗುವುದೆಂದು ಭಾವಿಸುವುದು ತಪ್ಪು.

ರೂಪಾಯಿಯ ೧೯೯೧-೯೨ರ ಅಪಮೌಲ್ಯದ ತರುವಾಯ **IMF** ವಿಶ್ವಬ್ಯಾಂಕ್ ಮತ್ತು ಇತರರಿಂದ ಧನ ಸಹಾಯ ಒದಗಿಬರುವ ನಿರೀಕ್ಷೆಯಿದ್ದುದು ಬಹುಪಾಲು ಕೂಡಿಬಂದಿತು. **IMF** ನಿಂದ ಅಲ್ಪಾವಧಿ ಸಾಲಗಳು, ವಿಶ್ವಬ್ಯಾಂಕ್ ಮತ್ತು ಇತರರಿಂದ ದೀರ್ಘಾವಧಿ ಸಾಲಗಳು ದೊರೆತುದರಿಂದ ವರ್ಷಾನುವರ್ಷಕ್ಕೆ ಬೇಕಾಗುವ ವಿದೇಶೀ ವಿನಿಮಯದ ಜೊತೆಗೆ ಅದರ ಸಂಗ್ರಹಣೆಯೂ ಸಾಧ್ಯವಾಯ್ತು. ವಿನಿಮಯದ ಸಂಗ್ರಹಣೆ ೧೯೯೧ರ ಜೂನ್ ಕೊನೆಯಲ್ಲಿ $ ೨,೩೮೩ ಮಿಲಿಯನ್ ಇದ್ದುದು ಆ ವರ್ಷದ ಅಂತ್ಯಕ್ಕೆ $ ೯,೨೮೭ ಮಿಲಿಯನ್ ತಲುಪಿತು. ಅಲ್ಲಿಂದೀಚೆಗೆ ವಿದೇಶದಿಂದ ಬರುವ ಸಾಲ, ಹೂಡಿಕೆ ಇತ್ಯಾದಿಗಳು ಸೇರಿ ಸಂಗ್ರಹಣೆ ಸೆಪ್ಟಂಬರ್ ೨೦೦೦ದಲ್ಲಿ $ ೩೨,೫೦೦ ಮಿಲಿಯನ್‌ಗೂ ಮೀರಿತ್ತು - ಅಥವಾ ರೂ. ೧,೪೮,೪೦೦ ಕೋಟಿಗಿಂತ ಹೆಚ್ಚಾಗಿತ್ತು! ಆದರೆ ಅದೇ ಅಂತರದಲ್ಲಿ ದೇಶದ

ವಿದೇಶೀ ಸಾಲದ ಹೊರೆ, ಪ್ರತಿವರ್ಷದ ಕಂತುಗಳನ್ನು ಕಟ್ಟಿದ ಮೇಲೂ, ೧೯೯೧ರ ಮಾರ್ಚಿಯಲ್ಲಿದ್ದ ಸುಮಾರು $ ೮೩,೮೦೦ ಮಿಲಿಯನ್ (ರೂ. ೧,೬೩,೦೦೦ ಕೋಟಿ) ಇಂದ ೧೯೯೯ರ ಸೆಪ್ಟೆಂಬರ್ ವೇಳೆಗೆ $ ೯೮,೨೦೦ ಮಿಲಿಯನ್‌ಗೆ (ರೂ. ೪,೧೭,೦೦೦ ಕೋಟಿಗೆ) ಏರಿತ್ತು! ಸಾಧಾರಣವಾಗಿ ದೇಶದ ವಿನಿಮಯ ಸಂಗ್ರಹಣೆ ಹೆಚ್ಚಾದಾಗ ಅದರ ನಾಣ್ಯಕ್ಕೆ ವಿದೇಶೀ ಮಾರುಕಟ್ಟೆಗಳಲ್ಲಿ ಹೆಚ್ಚಿನ ದರ ದೊರಕಬೇಕು. ಆದರೆ ರೂಪಾಯಿಯ ವಿಷಯದಲ್ಲಿ ಹಾಗಾಗಲಿಲ್ಲ. ಅಂತರ್‍ರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ರೂಪಾಯಿಯ ಬೆಲೆ ತಗ್ಗುವುದು ಹೇಗೆ ಮುಂದುವರೆ ದಿದೆಯೆಂದು ಈ ಮೊದಲೇ ತಿಳಿಸಿದೆ. ಅದಕ್ಕೆ ಮುಖ್ಯ ಕಾರಣಗಳಲ್ಲೊಂದು ವಿದೇಶೀ ಸಾಲದ ಹೊರೆ. ಮೊದಲಿಗಿಂತ ಕಡಿಮೆಯಾಗಿದ್ದರೂ ನಮ್ಮ ನಿರ್ಯಾತದಿಂದ ದೊರಕುವ ವಿನಿಮಯದಲ್ಲಿ ಶೇಕಡಾ ೧೮-೨೦ರಷ್ಟು ಈ ಖರ್ಚಿಗೆ ಈಗ ಮೀಸಲಾಗಿದೆ. ಅಲ್ಲದೆ ಸಾಲದ ಹೊರೆಯನ್ನು ಹೆಚ್ಚಿಸಬಾರದೆಂಬ ಕಾರಣಕ್ಕೆ ಅನೇಕ ಕ್ಷೇತ್ರಗಳಲ್ಲಿ ವಿದೇಶೀಯರು ಬಂಡವಾಳ ಹೂಡಲು ಸರ್ಕಾರ ಅವಕಾಶ ಕಲ್ಪಿಸುತ್ತಿದೆ. ಬಹುರಾಷ್ಟ್ರೀಯ ಕಂಪೆನಿಗಳು ಈ ಸವಲತ್ತುಗಳನ್ನು ಉಪಯೋಗಿಸಿಕೊಂಡು ಅನೇಕ ಕೈಗಾರಿಕೆಗಳಲ್ಲಿ ಪ್ರಮುಖ ಪಾತ್ರಧಾರಿಗಳಾಗುತ್ತಿದ್ದಾರೆ. ಇದರ ದೀರ್ಘಾವಧಿ ಪರಿಣಾಮ ದೇಶಕ್ಕೆ ಒಳ್ಳೆಯದಾಗಿ ರುತ್ತೆಂದು ಭಾವಿಸುವುದು ತಪ್ಪು. ವಿದೇಶೀ ಬಜೆಟ್ ಮೇಲೆ ಅದರ ಹೊರೆಯೇನೂ ಕಡಿಮೆಯಾಗುವುದಿಲ್ಲ.

ರೂಪಾಯಿಯ ದರವನ್ನು ಈಗ ಮಾರುಕಟ್ಟೆಯ ಏರುಪೇರುಗಳಿಗೆ ಬಿಟ್ಟಿರುವುದರಿಂದ ಅದರ ಮೇಲೆ ಒತ್ತಡ ಜಾಸ್ತಿಯಾದಾಗ ರಿಸರ್ವ್ ಬ್ಯಾಂಕು ಮಾರುಕಟ್ಟೆಯಲ್ಲಿ ಮುಖ್ಯವಾಗಿ ಅಮೆರಿಕನ್ ಡಾಲರನ್ನು ಮಾರುವ ಅಥವಾ ಕೊಳ್ಳುವ ಪ್ರಕ್ರಿಯೆ ಇಟ್ಟುಕೊಳ್ಳಬೇಕಾಗುತ್ತದೆ. ಆದರೆ ರೂಪಾಯಿಯ ಬೆಲೆ ಕುಸಿಯುವುದೆಂಬ ನಿರೀಕ್ಷಣೆ ಪ್ರಬಲವಾದಾಗ ರಿಸರ್ವ್ ಬ್ಯಾಂಕಿಗೆ ಅದನ್ನು ತಡೆಗಟ್ಟುವುದು ಕಷ್ಟಸಾಧ್ಯ. ಅಂತಹ ಸ್ಥಿತಿಯಲ್ಲಿ ರಫ್ತುದಾರರು ತಾವು ಸಂಪಾದಿಸಿದ ವಿನಿಮಯವನ್ನು ಇಲ್ಲಿಗೆ ರವಾನಿಸುವುದರ ಬದಲು ಹೊರದೇಶದಲ್ಲಿ ಒಂದಲ್ಲ ಒಂದು ರೀತಿ ತಡೆದಿರಿಸಿರುತ್ತಾರೆ. ಇನ್ನೊಂದೆಡೆ ಆಮದುಗಳಿಗಾಗಲಿ, ಸಾಲ ತೀರಿಸುವಿಕೆಗಾಗಲಿ ಮುಂದೆ ಬೇಕಾಗುವ ವಿನಿಮಯವನ್ನು ಕೊಳ್ಳುವ, ಅಥವಾ ಆ ಸಂಬಂಧದ ಒಪ್ಪಂದಗಳ ಚಟುವಟಿಕೆಗಳು ಹೆಚ್ಚಿ ಡಾಲರ್ ಅಥವಾ ಇತರ ವಿದೇಶೀ ಮುದ್ರೆಗಳಿಗೆ ಬೇಡಿಕೆ ಇದ್ದಕ್ಕಿದ್ದಂತೆ ಮೇಲೇರುತ್ತದೆ. ಪರಿಸ್ಥಿತಿ ಹೀಗಾದಾಗ ಮಾರುಕಟ್ಟೆಯಲ್ಲಿ ಹಸ್ತಕ್ಷೇಪ ಮಾಡುವುದರ ಬದಲು ರಿಸರ್ವ್ ಬ್ಯಾಂಕು ತಟಸ್ಥವಾಗಬಹುದು. ಅಂದರೆ ರಿಸರ್ವ್ ಬ್ಯಾಂಕಿನ ನಿಲುವು ರೂಪಾಯಿಯ ಬೆಲೆ ತಗ್ಗುವುದರಿಂದ ಅದರ "ನಿಜ"ವಾದ ವಿನಿಮಯದ ದರ ತಿಳಿದು, ತದನಂತರ ಎಲ್ಲವೂ ಒಂದು ಹದಕ್ಕೆ ಬರುವುದೆಂದು. ಒಂದು ವಿಧದಲ್ಲಿ ಇದು ಅಸಹಾಯಕತೆಯ ಕುರುಹು; ಅಂತರ್‍ರಾಷ್ಟ್ರೀಯ ಶಕ್ತಿಗಳನ್ನೆದುರಿಸಲು ನಮ್ಮಲ್ಲಿ ಸಾಕಷ್ಟು ಸಲಕರಣೆ ಸಂಪನ್ಮೂಲಗಳಿಲ್ಲವೆಂದು ಒಪ್ಪಿಕೊಂಡಂತೆ. ಇದು ಪ್ರತ್ಯಕ್ಷವಾದಾಗ ರೂಪಾಯಿಯ ಕುಸಿತ ಎಲ್ಲಿ ನಿಲ್ಲುವುದೆಂದು ಹೇಳಲು ಅಸಾಧ್ಯ. ದಕ್ಷಿಣ ಅಮೆರಿಕಾದ ಅನೇಕ ರಾಷ್ಟ್ರಗಳು, ಈಚೀಚೆಗೆ ಏಷಿಯಾ ಖಂಡದಲ್ಲಿ ಥಾಯ್ಲೆಂಡ್, ಇಂಡೋನೇಸಿಯಾ, ಮಲೇಸಿಯಾ, ದಕ್ಷಿಣ ಕೊರಿಯಾ ಮುಂತಾದ ದೇಶಗಳ ನಾಣ್ಯಗಳು ತೀಕ್ಷ್ಣವಾಗಿ ಅಪಮೌಲ್ಯ ಮಾಡಿದ ನಂತರವೂ ಕುಸಿದ ಅನುಭವ ಪ್ರಪಂಚಕ್ಕೆ ತಿಳಿದಿದೆ. $ ೧ ಕ್ಕೆ ಈಗ ರೂ. ೪೬ಕ್ಕಿಂತ ಹೆಚ್ಚಾಗಿರುವ ದರ ಇನ್ನೂ ಎಷ್ಟು ಜಾರುವು ದೆನ್ನುವುದು ಭವಿಷ್ಯದ ಒಡಲಲ್ಲಿದೆ!

೪

ರೂಪಾಯಿಯ ಕುಸಿತದಿಂದ ಲಾಭವಾಗ ಬೇಕಾದರೆ ಅದರಿಂದ ನಮ್ಮ ದೇಶದ ರಫ್ತಿನ ಪ್ರಮಾಣ ತ್ವರಿತವಾಗಿ ಹೆಚ್ಚಿ ದೇಶದಲ್ಲಿ ಆರ್ಥಿಕ ಪ್ರಗತಿ ಚುರುಕಾಗಬೇಕು. ಹಾಗಾಗಬೇಕಾದರೆ ರಫ್ತು ಸಾಮಗ್ರಿ ಅಥವಾ ಸೇವೆಗಳು ಯಾವ ತರಹದವಾಗಿರಬೇಕು ? ಮೊದಲಾಗಿ, ಅವುಗಳಿಗೆ ವಿದೇಶೀ ಮಾರುಕಟ್ಟೆಗಳಲ್ಲಿ ಒಳ್ಳೆಯ ಬೇಡಿಕೆಯಿದ್ದು ಬೆಲೆ ಕಡಿಮೆಯಾದಾಗ ಹೆಚ್ಚು ಪ್ರಮಾಣದಲ್ಲಿ ಮಾರಾಟವಾಗುವಂತಹದಾಗಬೇಕು. ಬೆಲೆ ಕಡಿಮೆಯಾದಾಗ ಕೊಳ್ಳುವ ಪ್ರಮಾಣ ಚೆನ್ನಾಗಿ ಮೇಲೇರದಿದ್ದರೆ ಬರುವ ಆದಾಯ ವಿದೇಶೀ ವಿನಿಮಯದ ಲೆಕ್ಕದಲ್ಲಿ ಅಷ್ಟೇನೂ ಲಾಭದಾಯಕ ವಾಗಲಾರದು. ಎರಡನೆಯದಾಗಿ, ನಮ್ಮೊಡನೆ ವಿದೇಶೀ ಮಾರುಕಟ್ಟೆಗಳಲ್ಲಿ ಪೈಪೋಟಿಯ ಮೇಲೆ ಪೂರೈಕೆ ಮಾಡುವ ಇತರ ದೇಶಗಳು ತಮ್ಮ ನಿಲುವನ್ನು ಬದಲಾಯಿಸಿದರೆ ನಮ್ಮ ಸಂಪಾದನೆಗೆ ತೊಂದರೆ ಆಗುತ್ತದೆ. ಭಾರತದಿಂದ ರಫ್ತಾಗುವ ಕಬ್ಬಿಣದ ಅದಿರು, ಕಾಫೀಬೀಜಗಳು, ಟೀ ಸೊಪ್ಪು, ಕೃಷಿ ಉತ್ಪನ್ನಗಳು, ಮೀನು, ತಯಾರಾದ ಉಡುಪುಗಳು ಇತ್ಯಾದಿಗಳಿಗೆ ಬೇರೆ ದೇಶಗಳಿಂದ ಸಾಕಷ್ಟು ಪೈಪೋಟಿಯಿದೆ. ಬೆಲೆ ಕಡಿಮೆ ಮಾಡುವುದರಿಂದ ಅನುಕೂಲವಿದ್ದರೂ ಸಾಕಷ್ಟು ಫಲ ದೊರಕಬೇಕಾದರೆ ಇತರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಕಡೆ ಯದಾಗಿ, ರಫ್ತಾಗುವ ಸಾಮಗ್ರಿ-ಸೇವೆಗಳ ತಯಾರಿಕೆಗೆ ಆಮದು ವಸ್ತುಗಳ ಆವಶ್ಯಕತೆ ಕಡಿಮೆಯಿರಬೇಕು. ಹೀಗಿದ್ದರೆ ನಿರ್ಯಾತದ ಪ್ರಮಾಣ ಹೆಚ್ಚಿದಂತೆ ತಯಾರಿಕೆಗೆ ಬೇಕಾದ ಕಚ್ಚಾವಸ್ತುಗಳು, ಸಲಕರಣೆಗಳು, ಕಾರ್ಮಿಕರುಗಳಿಗೆ ಬೇಡಿಕೆ ಹೆಚ್ಚಿ ಹಲವಾರು ಕ್ಷೇತ್ರಗಳ ಚಟುವಟಿಕೆಗೆ ಬೆಂಬಲ ದೊರಕುತ್ತದೆ.

ಈಚೀಚೆಗೆ ವಿಕಾಸಗೊಂಡಿರುವ ಮಾಹಿತಿ ತಂತ್ರಜ್ಞಾನದಿಂದ ನಿರ್ಯಾತದ ಸಂಪಾದನೆ ಹೆಚ್ಚಾಗಲು ಅನುಕೂಲವಾಗಿದೆ. ಆದರೆ ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಉತ್ಪನ್ನವಾಗುವ ಸಾಮಗ್ರಿಗಳಿಗೆ ಮೇಲೆ ಹೇಳಿದ ಕಾರಣಗಳಲ್ಲಿ ಒಂದಲ್ಲ ಒಂದು ಅಡಚಣೆ ಇದೆ. ಭಾರತದ ರಫ್ತುಗಳಲ್ಲಿ ಒಡವೆ ವಸ್ತುಗಳು ಸಾಕಷ್ಟು ಮುಂದುವರೆದಿದ್ದರೂ ಅವುಗಳ ಪ್ರಮಾಣ ಹೆಚ್ಚಿದಂತೆ ವಜ್ರದ ಹರಳುಗಳ ಅಥವಾ ಚಿನ್ನದ ಆಮದು ಹೆಚ್ಚುವುದರಿಂದ ನಿವ್ವಳ ಲಾಭ ವಿದೇಶೀ ವಿನಿಮಯದ ಲೆಕ್ಕದಲ್ಲಿ ಕಡಿಮೆ. ತಯಾರಾದ ಉಡುಪುಗಳಿಗೆ ವಿದೇಶೀ ಮಾರುಕಟ್ಟೆಯಲ್ಲಿ ತೀಕ್ಷ್ಣವಾದ ಪೈಪೋಟಿಯಿರು ವುದರಿಂದ ಆ ಮೂಲಕ ಲಾಭ ಪಡೆಯುವುದು ಸುಲಭವಲ್ಲ. ಕೃಷಿ ಉತ್ಪನ್ನಗಳು, ಮೀನು ಇತ್ಯಾದಿಗಳಿಗೆ ಬೇರೆ ದೇಶಗಳಲ್ಲಿ ಸುಂಕಗಳು ಏನೇ ಇದ್ದರೂ ಆರೋಗ್ಯ, ಪರಿಸರ ಸಂರಕ್ಷಣೆ ಮುಂತಾದ ಕಾರಣ ಗಳಿಗಾಗಿ ನಿರ್ಬಂಧಗಳಿವೆ. ಇವೆಲ್ಲದರ ಜೊತೆ, ನಮ್ಮ ದೇಶದ ವ್ಯಾಪಾರಿಗಳು ಹೊರದೇಶಗಳಲ್ಲಿ ಒಳ್ಳೆಯ ಹೆಸರು ತೆಗೆದುಕೊಂಡಿಲ್ಲ. ಒಟ್ಟಿನಲ್ಲಿ ರೂಪಾಯಿಯ ಕುಸಿತದಿಂದ ನಮ್ಮ ರಫ್ತಿನ ಆದಾಯ ಕುಸಿತದ ಪ್ರಮಾಣ ದಷ್ಟಾಗಲಿ, ಅದಕ್ಕಿಂತ ಹೆಚ್ಚಾಗಿ ಆಗಲಿ ವೃದ್ಧಿಸುವುದೆಂದು ಭಾವಿಸುವುದು ಅತಾರ್ಕಿಕ. ಆದರೆ ಆಮದುಗಳ ಬೆಲೆ ಹೆಚ್ಚುವುದು ನಿಸ್ಸಂಶಯ; ಅವುಗಳ ಪ್ರಮಾಣ ಕಡಿಮೆ ಆಗುವುದೆನ್ನುವುದೇನೂ ಖಚಿತವಲ್ಲ.

ರೂಪಾಯಿಯ ವಿದೇಶೀ ವಿನಿಮಯದ ದರ ಕುಸಿದಂತೆ ಇಲ್ಲಿಯ ಆಸ್ತಿಪಾಸ್ತಿಗಳು ವಿದೇಶೀಯರಿಗೆ ಸುಲಭ ಬೆಲೆಗೆ ದೊರೆಯುತ್ತವೆ. ಉದಾರೀಕರಣ ಮತ್ತು ಜಾಗತೀಕರಣದ ಅಂಗವಾಗಿ ಕೇಂದ್ರ ಸರ್ಕಾರ ವಿದೇಶೀಯರಿಗೆ ಭಾರತದಲ್ಲಿ ಬಂಡವಾಳ ಹೂಡಲು ನಾನಾ ತರಹದ ಆಮಿಷಗಳನ್ನು ಒಡ್ಡುತ್ತಿದೆ. ಈ ಮೊದಲು ಇಲ್ಲಿಯ ಕಂಪೆನಿಗಳ ಜೊತೆ ಅಲ್ಪಸಂಖ್ಯೆಯ ಷೇರುದಾರರಾಗಿದ್ದ ವಿದೇಶೀ ಕಂಪೆನಿಗಳು ಈಚೀಚೆಗೆ ಎಲ್ಲವನ್ನೂ ತಮ್ಮ ಸಂಪೂರ್ಣ ಸ್ವಾಧೀನಕ್ಕೆ ತೆಗೆದು ಕೊಳ್ಳುತ್ತಿದ್ದಾರೆ ಅಥವಾ ಇಲ್ಲಿ ತಮ್ಮದೇ ಆದ ಹೊಸ ನಿಗಮಗಳನ್ನು ಸ್ಥಾಪಿಸುತ್ತಿದ್ದಾರೆ. ಇಂತಹ ಬೆಳವಣಿಗೆ ಯಿಂದ ನಮ್ಮ ವಿದೇಶೀ ಆದಾಯ ಹೆಚ್ಚಿ ರೂಪಾಯಿಯ ಶಕ್ತಿ ಹೆಚ್ಚುವುದೆಂಬ ಭರವಸೆ ಏನೂ ಇಲ್ಲ. ಹೊಸ ತಂತ್ರಜ್ಞಾನಗಳನ್ನು ಉಪಯೋಗಿಸಿ, ಇಲ್ಲಿಯ ಅಗ್ಗದ ಕಾರ್ಮಿಕವರ್ಗದ ಸಹಾಯದಿಂದ ದೇಶೀಯ ಮಾರುಕಟ್ಟೆಯಲ್ಲಿ ಲಾಭ ಪಡೆಯುವುದೇ ಅವರ ಮುಖ್ಯ ಉದ್ದೇಶ. ಈ ಲಾಭದ ಹೊರೆ ಬೀಳು ವುದು ದೇಶ ಸಂಪಾದಿಸುವ ವಿದೇಶೀ ವಿನಿಮಯದ ಮೇಲೆ !! ಎಲ್ಲಕ್ಕಿಂತ ಗಂಭೀರವಾದ ಪ್ರಶ್ನೆ : ಈ ತರಹ ಬೆಳವಣಿಗೆಗಳು ಮುಂದುವರೆದರೆ ನಮ್ಮ ದೇಶದ ಆರ್ಥಿಕ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುವುದಿಲ್ಲವೆ ?

ರೂಪಾಯಿಯ ಕುಸಿತದಿಂದ ದೇಶದ ಮಾರುಕಟ್ಟೆಗಳಲ್ಲಿ ಬೆಲೆಗಳು ಏರಲು ತೊಡಗುವುದೆಂದು ಮೊದಲೇ ತಿಳಿಸಿದೆ. ಅದರೊಡನೆ ಮಾಹಿತಿ ತಂತ್ರಜ್ಞಾನ, ಬ್ಯಾಂಕು ಮತ್ತು ಇತರ ಹಣಕಾಸು ಸಂಸ್ಥೆಗಳು, ವ್ಯಾಪಾರ ಇತ್ಯಾದಿಗಳೊಡನೆ ಸರ್ಕಾರೀ ಮತ್ತು ಖಾಸಗೀ ಕ್ಷೇತ್ರಗಳಲ್ಲಿ ವೇತನ, ಸಂಪಾದನೆಗಳು ಸಮಾಜದ ಕೆಲವು ಹಂತಗಳಲ್ಲಿ ತೀವ್ರವಾಗಿ ಹೆಚ್ಚಾಗಿವೆ. ಅದರೊಡನೆ ಅವರ ಜೀವನ ಶೈಲಿಗಳು ಬದಲಾಯಿಸಿ "ಕನ್ಸೂಮರಿಸಂ" ವ್ಯಾಪ್ತಿ ಬೆಳೆದಿರುವುದನ್ನು ನೋಡಬಹುದು. ಇಂತಹ ಪರಿಸರದಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಉದ್ಯಮಿಗಳಿಗೆ ಅನುಕೂಲವಾಗುವಂತೆ ಬ್ಯಾಂಕ್ ಮತ್ತು ಇತರ

ಹಣಕಾಸು ಸಂಸ್ಥೆಗಳು ಸಾಲಗಳಿಗೆ ತಗಲುವ ಬಡ್ಡಿದರಗಳನ್ನು ಇಳಿಸಲಾಗಿದೆ. ಅದಕ್ಕೆ ಸರಿಯಾಗಿ ಠೇವಣಿದರಗಳೂ ಇಳಿದು ದೇಶದ ಒಟ್ಟಾರೆ ಉಳಿತಾಯಕ್ಕೆ ಧಕ್ಕೆಯಾಗಿರುವುದು ಚಿಂತೆಗೆ ಕಾರಣ. ದೇಶದ ಸಮಗ್ರ ಉತ್ಪನ್ನದ ಶೇಕಡಾ ೨೪.೬ ಕ್ಕೆ ೧೯೯೫-೯೬ರಲ್ಲಿ ತಲುಪಿದ್ದ ಸಮಗ್ರ ಉಳಿತಾಯ ೧೯೯೮-೯೯ಕ್ಕೆ ಶೇಕಡಾ ೨೧.೪ ಕ್ಕೆ ಇಳಿದಿತ್ತು. ಅಂದರೆ ೧೯೯೧-೯೨ರಲ್ಲಿದ್ದ ಮಟ್ಟ (೨೨.೧) ಕ್ಕಿಂತ ಕಡಿಮೆ. ಕಳೆದ ಎರಡು ವರ್ಷಗಳಲ್ಲಿ ಈ ಸ್ಥಿತಿಯಲ್ಲಿ ಬದಲಾವಣೆ ಏನೂ ಇಲ್ಲ. ಮೂಲಭೂತ ಸೌಕರ್ಯಗಳ ಬೆಳವಣಿಗೆಗೆ (infrastructure development) ಅಗಾಧವಾದ ಹೂಡಿಕೆಯ ಅವಶ್ಯಕತೆ ಇರುವಾಗ ದೇಶದ ಸಮಗ್ರ ಉಳಿತಾಯ ಹೀಗೆ ಕೆಳಮಟ್ಟದಲ್ಲಿ ನಿಂತಿರುವುದು ಅಪಾಯಕರ. ಪರಿಸ್ಥಿತಿಯನ್ನು ಉತ್ತಮಗೊಳಿಸಲು ಸರ್ಕಾರ ವಿದೇಶೀ ಬಂಡವಾಳಗಾರರು, ಬಹುರಾಷ್ಟ್ರೀಯ ಕಂಪೆನಿಗಳು, ಅನಿವಾಸಿ ಭಾರತೀಯರುಗಳಿಗೆ ದೇಶದಲ್ಲಿ ತಮ್ಮ ಹೂಡಿಕೆಯನ್ನು ಹೆಚ್ಚಿಸಲು ಕೈ ಬೀಸಿ ಕರೆಯುತ್ತಿದೆಯೇ ಹೊರತು ನಮ್ಮ ಸ್ವಂತ ಉಳಿತಾಯ ಹೆಚ್ಚಿಸಿ ತನ್ಮೂಲಕ ಹೂಡಿಕೆಯನ್ನು ಬೆಳೆಸಲು ಪ್ರಯತ್ನಿಸುತ್ತಿಲ್ಲ. ಸರ್ಕಾರದಲ್ಲಿ ಅನವಶ್ಯಕ ಖರ್ಚು ಕಡಿಮೆ ಮಾಡಿ ಆ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಅನೇಕ ಮೂಲಭೂತ ಸೌಕರ್ಯಗಳಲ್ಲಿ ಉಳಿತಾಯವನ್ನು ಉಪಯೋಗಿಸುವ ಪ್ರಯತ್ನಕ್ಕಿಂತ ತಮ್ಮಲ್ಲಿರುವ ಉದ್ದಿಮೆಗಳನ್ನು ಖಾಸಗೀಕರಣ ಮಾಡುವ ಆತುರ ಹೆಚ್ಚಾಗಿದೆ. ಒಬ್ಬರು ಮಂತ್ರಿ ಮಹೋದಯರೇ ಈ ಕಾರ್ಯದ ಜವಾಬ್ದಾರಿ ವಹಿಸಿದ್ದಾರೆ !

ಈ ಪರಿಣಾಮಗಳೆಲ್ಲಾ ರೂಪಾಯಿಯ ಕುಸಿತದಿಂದ ಮಾತ್ರ ಆಗಿದೆಯೆಂದು ಹೇಳುತ್ತಿಲ್ಲ. ಸರ್ಕಾರದ ರೀತಿನೀತಿಗಳು, ಖಾಸಗೀ ಕ್ಷೇತ್ರದ ನಡೆವಳಿಕೆಗಳು, ಅಂತರ್ರಾಷ್ಟ್ರೀಯ ಬದಲಾವಣೆಗಳು, ಪ್ರಕೃತಿ ವಿಕೋಪದಿಂದ ದೇಶದ ಉತ್ಪನ್ನದಲ್ಲಿ ಆಗಿರುವ ಏರುಪೇರುಗಳು, ಸಮಾಜದ ವ್ಯಕ್ತಿಗಳು, ಇನ್ನೂ ಅನೇಕ ಕಾರಣಗಳಿಂದ ಆರ್ಥಿಕ ಸ್ಥಿತಿಯಲ್ಲಿ ಪದೇ ಪದೇ ಬದಲಾವಣೆಗಳಾಗುತ್ತಿರುತ್ತವೆ. ಇವೆಲ್ಲದರ ಪರಿಣಾಮಗಳು ಏನೇ ಇರಲಿ, ರೂಪಾಯಿಯ ಬೆಲೆ ದೇಶದಲ್ಲಿ ಹಾಗೂ ವಿದೇಶೀ ಮಾರುಕಟ್ಟೆಗಳಲ್ಲಿ ಕುಸಿದಾಗ ಆ ಪರಿಣಾಮಗಳು ತೀಕ್ಷ್ಣವಾಗುತ್ತವೆ ಅಥವಾ ಅವುಗಳನ್ನು ಎದುರಿಸಲು ಬೇಕಾದ ಶಕ್ತಿ ಕುಂಠಿತವಾಗುತ್ತದೆ. ಜೊತೆಗೆ ಸಮಾಜದಲ್ಲಿ ಅಭಿವೃದ್ಧಿ ಕಾರ್ಯಗಳಲ್ಲಿ ಭಾಗವಹಿಸಲು ಉತ್ಸಾಹ ಕುಂದುತ್ತದೆ. ರೂಪಾಯಿಯ ಮೌಲ್ಯವನ್ನು ಕಾಪಾಡುವುದರಲ್ಲಿ ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್‌ಗಳ ಜವಾಬ್ದಾರಿ ಹೆಚ್ಚು; ಇವೆರಡು ಸಂಸ್ಥೆಗಳು ಇದುವರೆಗೆ ತಮ್ಮ ಕಾರ್ಯಕ್ರಮಗಳನ್ನು ಈ ಸಂಬಂಧದಲ್ಲಿ ಸಮರ್ಪಕವಾಗಿ ನಡೆಸಿರುವರೆಂದು ಹೇಳಲಾಗುವುದಿಲ್ಲ. ಮುಂದೆ ಏನಾಗುವುದೋ ಕಾದು ನೋಡಬೇಕು.

### ಮೂಲಗಳು


1. R.B.I. Bombay : ***History of the Reserve Bank of India*** *: (Pub. RBI, Bombay) 1970 CHs. 19 and 20.*

2. Muneesh Kapur : "India's External Sector since Independence : from Inwardness to Openness." *in* ***RBI Occasional Papers*** *Vol. 18 Nos. 2 & 3. June-Sept. 1997 pp. 385-419.*

3. Reserve Bank of India, Bombay : ***Handbook of Statistics nn Indian Economy*** *(Pub. RBI Bombay) 1999*

4. Government of India : *Economic Survey : 1999-2000 :* ***Min. of Finance*** *GOI, 2000*



**ಕೆ. ಎಸ್. ಕೃಷ್ಣಸ್ವಾಮಿ**
(ನಿವೃತ್ತ ಡೆಪ್ಯುಟಿ ಗವರ್ನರ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯ)
ಸಿ-೬೦೧, 'ಆದರ್ಶ ಗಾರ್ಡನ್ಸ್', ಜಯನಗರ ೮ನೇ ಬ್ಲಾಕ್
೪೭ನೇ ಕ್ರಾಸ್, ಬೆಂಗಳೂರು - ೫೬೦ ೦೮೨

# ಔಷಧಿ ಬೆಲೆಗಳು ಅಂದು ಇಂದು

ಡಾ॥ ಪ್ರಕಾಶ್ ಸಿ. ರಾವ್



ಔಷಧಿ ಉಪಯೋಗ ಇಂದು ನಮ್ಮ ಜೀವನದ ಅವಿಭಾಜ್ಯ ಅಂಗವಾಗಿಹೋಗಿದೆ. ಔಷಧಿ ಬೆಲೆಗಳು ಏರುತ್ತಿರುವುದು ಎಲ್ಲರ ಗಮನಕ್ಕೆ ಬಂದಾಗಿದೆ. 'ಎಲ್ಲ ಪದಾರ್ಥಗಳ ಬೆಲೆಗಳು ಏರುತ್ತಿವೆ, ರೂಪಾಯಿಯ ಮೌಲ್ಯ ಕುಸಿಯುತ್ತಿದೆ' ಎಂದು ಸಮಾಧಾನ ಪಟ್ಟುಕೊಳ್ಳುತ್ತೇವೆ. ಔಷಧಿ ಬೆಲೆಗಳೇಕೆ ಏರುತ್ತಿವೆ, ಅದನ್ನು ತಡೆಗಟ್ಟಲು ಸಾಧ್ಯವೇ ಎಂಬುದು ಜನರ ಗಮನ ಸೆಳೆಯುತ್ತಿಲ್ಲ.

ಸ್ವಾತಂತ್ರ್ಯಪೂರ್ವ ಸಮಯದಲ್ಲಿ ಹಾಗೂ ಸ್ವಾತಂತ್ರ್ಯದ ನಂತರದ ಕೆಲವು ವರ್ಷಗಳಲ್ಲಿ ನಾವು ಹೊರದೇಶಗಳಿಂದ ಔಷಧಿಗಳನ್ನು ಆಮದು ಮಾಡಿ ಕೊಳ್ಳುತ್ತಿದ್ದೆವು. ಆ ಔಷಧಿಗಳಿಗೆ ನಾವು ಕೊಡುತ್ತಿದ್ದ ಬೆಲೆ, ಜಗತ್ತಿನ ಎಲ್ಲ ರಾಷ್ಟ್ರಗಳಿಗಿಂತ ಅತಿ ಹೆಚ್ಚಾಗಿದ್ದಿತು ಎಂದು ಕೆಫೋವರ್ ಸಮಿತಿ (೧೯೫೨) ವರದಿ ಮಾಡಿದೆ. ಸಾಮಾನ್ಯವಾಗಿ ಔಷಧಿ ಬೆಲೆಯು ಕಚ್ಚಾ ವಸ್ತುವಿನ ಬೆಲೆ, ಬಳಸುವ ಔಷಧಿಯನ್ನು *(Formulation)* ತಯಾರಿಸಲು ತಗಲುವ ಕೂಲಿ, ಉದ್ದಿಮೆಯ ಖರ್ಚು, ಲಾಭ, ಔಷಧಿ ಮೇಲೆ ವಿಧಿಸುವ ಕರ, ಸಾಗಾಣಿಕೆಗೆ ತಗಲುವ ವೆಚ್ಚ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಆದರೆ ಅಂದಿನ ಬೆಲೆ ಯಾವ ಆಧಾರವೂ ಇಲ್ಲದ ಫ್ಯಾನ್ಸಿ ಬೆಲೆಯಾಗಿತ್ತು ಹಾಗೂ ಸರಕಾರವೂ ಸೇರಿ ಯಾರೂ ಅದನ್ನು ಪ್ರಶ್ನಿಸಲಿಲ್ಲ. 'ಔಷಧಿಗಳು ದೊರೆಯುತ್ತಿವೆಯಲ್ಲ, ಅಷ್ಟೇ ಸಾಕು' ಎಂದು ನಂಬಿದವರು ಅನೇಕರು.

ಆದರೆ ಈ ವಿಷಯ ಸಂಸತ್ತಿನಲ್ಲಿ ಚರ್ಚೆಗೆ ಬಂದಾಗ, ''ನಾವು ಸ್ವಾವಲಂಬಿಗಳಾಗಲು ಸಾರ್ವಜನಿಕ ಕ್ಷೇತ್ರದ ಔಷಧಿ ಉದ್ಯಮವನ್ನು ಸ್ಥಾಪಿಸಬೇಕು'' ಎಂದು ತೀರ್ಮಾನಿಸಲಾಯಿತು. ೬೦ ರ ದಶಕದಲ್ಲಿ ಎಚ್.ಎ.ಎಲ್. ಹಾಗೂ ಐ.ಡಿ.ಪಿ.ಎಲ್. ಸ್ಥಾಪನೆಯಿಂದ ಇದು ಸಾಧ್ಯವಾಯಿತು. ಅಂದಿನಿಂದ ಭಾರತದಲ್ಲಿ ಔಷಧಿ ಬೆಲೆಗಳು ಕಡಿಮೆಯಾದವು. ೧೯೭೦ರಲ್ಲಿ ಭಾರತೀಯ ಪೇಟೆಂಟ್ ಕಾನೂನು ಜಾರಿಗೆ ಬಂದ ನಂತರ, ಔಷಧಿ ಬೆಲೆಗಳು ಇನ್ನೂ ಕಡಿಮೆಯಾದುದಲ್ಲದೆ ಔಷಧಿ ಕ್ಷೇತ್ರದಲ್ಲಿ ಭಾರತ ಬಹುಮಟ್ಟಿಗೆ ಸ್ವಾವಲಂಬನೆಯನ್ನು ಸಾಧಿಸಿತು.

೧೯೭೦ರ ನಂತರ

*ಔಷಧಿ ಬೆಲೆಗಳು ಕಡಿಮೆಯಾದವು - ಜಗತ್ತಿನಲ್ಲಿ ಅತಿ ಕಡಿಮೆ ಬೆಲೆ ಭಾರತದಲ್ಲಿ*
*ಔಷಧಿಗಳನ್ನು ರಫ್ತು ಮಾಡಲಾಯಿತು - ೧೪ ದೇಶಗಳಿಗೆ*
*ಮೂಲ ಔಷಧಿ ತಯಾರಿಕೆ -೩೫೦ ಕೋಟಿ ರೂ. ೧೯೭೦*
*೬೫೬೦ ಕೋಟಿ ರೂ. ೧೯೯೨-೯೩*

ಭಾರತದ ಔಷಧಿ ಬೆಲೆ ನಿಯಂತ್ರಣ ವ್ಯವಸ್ಥೆ ಮೊದಲಬಾರಿಗೆ ೧೯೬೨ರಲ್ಲಿ ಜಾರಿಗೆ ಬಂದಿತು. ಈ ವ್ಯವಸ್ಥೆಗೆ ಯಾವ ವೈಜ್ಞಾನಿಕ ಆಧಾರವೂ ಇರಲಿಲ್ಲ. ನಂತರ ೧೬ ಮಾರ್ಚ್ ೧೯೭೦ರಂದು ಔಷಧಿ ಬೆಲೆ ನಿಯಂತ್ರಣ ಆಜ್ಞೆ ಜಾರಿಗೆ ಬಂದಿತು. ಆ ಸಮಯದಲ್ಲಿ ರಾಷ್ಟ್ರದಲ್ಲಿ ಯಾವ ಔಷಧಿ ನೀತಿಯೂ ಇರಲಿಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು.

ಭಾರತ ಬಡರಾಷ್ಟ್ರವಾದ್ದರಿಂದ, ಜನರ ಆದಾಯದಲ್ಲಿ ವ್ಯತ್ಯಾಸಗಳಿದ್ದುದರಿಂದ, ಜನಾರೋಗ್ಯ ಸರಕಾರದ ಜವಾಬ್ದಾರಿಯಾಗಿದ್ದರಿಂದ, ಔಷಧಿ ಬೆಲೆಗಳನ್ನು ನಿಯಂತ್ರಣ ಮಾಡುವುದು ಸರಕಾರದ ಕರ್ತವ್ಯವಾಗಿತ್ತು. ಯೂರೋಪ್, ಅಮೇರಿಕ, ಮಧ್ಯಪ್ರಾಚ್ಯ, ಆಸ್ಟ್ರೇಲಿಯ, ಜಪಾನ್ ಹಾಗೂ ಇತರೇ ಪೂರ್ವದ ರಾಷ್ಟ್ರಗಳಲ್ಲಿ ಔಷಧಿಗಳ ಬೆಲೆಯನ್ನು ಸರಕಾರವೇ ನಿಯಂತ್ರಿಸುತ್ತದೆ. ಭಾರತದಲ್ಲಿ ೧೯೭೦ರಿಂದ ಔಷಧಿ ಬೆಲೆಗಳು ಸರಕಾರದಿಂದ ನಿಯಂತ್ರಿಸಲ್ಪಡುತ್ತ ಬಂದರೂ, ಕ್ರಮೇಣ ಅದು ಔಷಧಿ ಕಂಪನಿಗಳಿಂದ ನಿಯಂತ್ರಿಸಲ್ಪಡುತ್ತಿದೆ ಎಂಬುದು ಆಶ್ಚರ್ಯಕರವಲ್ಲವೇ ?

| ವರ್ಷ | ಔಷಧಿ ನಿಯಂತ್ರಣ |
|---|---|
| ೧೯೭೦ | ಎಲ್ಲಾ ಔಷಧಿಗಳು |
| ೧೯೭೯ | ೩೭೯ |
| ೧೯೮೭ | ೧೪೨ |
| ೧೯೯೫ | ೭೪ |

ಔಷಧಿ ಕಂಪನಿಗಳು ಸರಕಾರದ ಮೇಲೆ ಒತ್ತಡ ಹೇರಿ ಔಷಧಿ ನಿಯಂತ್ರಣವನ್ನು ಸಡಿಲಗೊಳಿಸುತ್ತಾ ಬಂದಿವೆ. ಇತರೇ ಪದಾರ್ಥದ ಬೆಲೆಗಳು ಹೆಚ್ಚುತ್ತಿದ್ದು ಔಷಧಿ ಬೆಲೆಗಳು ಹೆಚ್ಚುತ್ತಿಲ್ಲ ಎಂದು ಔಷಧಿ ಕಂಪನಿಗಳು ವಾದ ಮಾಡುತ್ತಾ ಬಂದಿವೆ. ಭಾರತೀಯ ರಿಸರ್ವ್ ಬ್ಯಾಂಕ್‌ನ ಒಂದು ಅಧ್ಯಯನದ ಪ್ರಕಾರ, ಔಷಧಿ ಉದ್ಯಮ ಈಗಾಗಲೇ ಸಾಕಷ್ಟು ಲಾಭ ಮಾಡುತ್ತಿದ್ದು, ಹೆಚ್ಚು ಲಾಭವನ್ನು ಕೇಳಲು ಕಾರಣವಿಲ್ಲ ಎಂಬುದು ಸ್ಪಷ್ಟವಾಗಿದೆ. ಆದರೂ ಭಾರತದಲ್ಲಿ ೧೯೭೮ ರಿಂದ ಬಹುರಾಷ್ಟ್ರೀಯ ಕಂಪನಿಗಳು ಔಷಧಿ ಬೆಲೆಗಳು ಹೆಚ್ಚಬೇಕೆಂಬ ಘೋಷಣೆಯನ್ನು ಹಾಕುತ್ತಿದ್ದು, ಇದರೊಂದಿಗೆ ಭಾರತೀಯ ಖಾಸಗೀ ಔಷಧಿ ಉದ್ಯಮವೂ ಸೇರಿಕೊಂಡಿದೆ. ಈ ಔಷಧಿ ಕಂಪನಿಗಳು ಔಷಧಿ ನಿಯಂತ್ರಣವನ್ನು ಸಂಪೂರ್ಣವಾಗಿ ತೆಗೆದುಹಾಕಲು ಸರಕಾರಕ್ಕೆ ಮನವಿ ಮಾಡಿವೆ !

ಈಗ ಔಷಧಿ ಬೆಲೆಗಳ ಮೇಲೆ 'ನಿಯಂತ್ರಣ ಕಾನೂನು' ಪರಿಣಾಮ ಬೀರುತ್ತಿಲ್ಲವಾದ್ದರಿಂದ ಔಷಧಿ ಬೆಲೆಗಳು ಏರುತ್ತಲಿವೆ ಹಾಗೂ ಔಷಧಿ ನಿಯಂತ್ರಣ ಕಾನೂನು ಅನೇಕ ಗೊಂದಲಗಳನ್ನು ಉಂಟುಮಾಡಿದ್ದರಿಂದ ಅದು ಔಷಧಿ ಕಂಪನಿಗಳಿಗೆ ಲಾಭದಾಯಕವಾಗಿ ಪರಿಣಮಿಸಿದೆ.

ಔಷಧಿ ನಿಯಂತ್ರಣ ಕಾನೂನು ಕೇವಲ ಅಗತ್ಯ ಔಷಧಿಗಳ ಮೇಲೆ ಜಾರಿಯಾದ್ದರಿಂದ (ಜನೆರಿಕ್ ಔಷಧಿಗಳು) ಔಷಧಿ ಕಂಪನಿಗಳು ಹೆಚ್ಚು ಅನಗತ್ಯ ಔಷಧಿಗಳನ್ನೇ ತಯಾರಿಸುತ್ತ ಬಂದಿವೆ.

ಔಷಧಿ ಬೆಲೆ ನಿಯಂತ್ರಣ ಕೆಲವು ಔಷಧಿ ಪ್ಯಾಕ್‌ಗಳಿಗೆ (೧೦ ಮಾತ್ರೆಗಳು, ೨೦೦

**CEREBRA**




# Our Customers have always deemed our quality to be world-class...

## Here's more authentic proof !

# ISO 9002

## CERTIFICATION




From day one, quality has been the driving force at Cerebra. Our PC was one of the first few to achieve exacting DOT/DOE certifications. And they are being used by many leading MNCs, corporate houses, PSUs, I.T. companies, banks and hospitals.

The Cerebra Server, launched just a few months ago has evoked exceptional response. And this success is being followed up with the launch of a series of high-end machines. *Ultra X Servers and Workstations based on Xeon™ Processor. Ultra FT (Fault Tolerance) Server based on Pentium® II Processor.*

With a well-knit service network spread across the country, we are a rapidly growing I.T. solutions company. ***An ISO 9002 certified company for Production, Installation and Servicing of Computers, Accessories and Software.***

*Product Profile : PCs, Servers, Desktops, Workstations, Peripherals, Software*




**Cerebra Integrated Technologies Ltd.**

HEAD OFFICE : No. 24, 12th Main, 1st Block Rajajinagar, Bangalore-560 010.
Ph: 3323054 3329990, 3328171, 3322490 Fax : 080-3327313
E-mail: cerebra@... Website www.cerebracomputers.com







Microsoft OEM System Builder Partner

*All logos are registered trademarks and belong to their respective owners.*

**Reseller/Dealer enquiries solicited.**

**Configured to Perform**

BRANCHES ■ **Chennai**: Ph : 4933235 Fax 4933235, E-mail cerebra@vsnl.com ● **Coimbatore:** Ph: 446369, E-mail: cerebra@md3.vsnl.net.in ■ **Goa:** Ph: 437588, Fax : 220554, E-mail: ● **Hyderabad**: ... ● **Secunderabad:** Ph 7814025, Fax 7815971 ● **Mumbai:** Ph 2033115, 2033117 Fax 2065937, E-mail: dchopra@giasbma.vsnl.net.in ● **New Delhi** (Noida): Ph: ... 116695 E-mail cerebra@giasdl01.vsnl.net.in ● **Pune:** Ph. 378463, E-mail cerebra@pn2.vsnl.net.in **Support centres all over the country.**

| ಔಷಧಿ | ಪ್ರಮಾಣ | ೧೯೮೦ರ ಬೆಲೆ (ರೂ.ಗಳು) | ೧೯೯೫ರ ಬೆಲೆ | ಶೇಕಡಾ ಹೆಚ್ಚಳ | ೨೦೦೦ ಬೆಲೆ (ರೂ.ಗಳು) | [illegible] ಹೆಚ್ಚಳ |
|---|---|---|---|---|---|---|
| ಜೆಲ್ಯೂಸಿಲ್ | ೧೭೦ ಮಿ.ಲಿ. | ೬.೧೧ | ೧೩..೨೯ | ೧೧೭.೮೭ | ೧೫.೫೦ | ೨೫೪.೦೯ |
| | | ಪ್ರತ್ಯಾಮ್ಲ/ *Antacid* ಒಂದು ಅನಗತ್ಯ ಔಷಧಿ | | | | |
| ಬೊಸ್ಕೊಪಾನ್ | ೧೦ ಮಾತ್ರೆ | ೩.೪೨ | ೮.೪೭ | ೧೪೭.೬೬ | ೧೭.೪೦ | ೫೦೮.೮ |
| | | ಹೊಟ್ಟೆನೋವು ಕಡಿಮೆ ಮಾಡುವ ಔಷಧಿ | | | | |
| ಕ್ರಿಮ್ಯಾಫಿನ್ | ೨೧೦ ಮಿ.ಲಿ | ೫.೬೨ | ೨೩.೧೦ | ೩೧೧.೦೧ | ೨೪.೦೭ | ೪೩೯.೫ |
| | | ಮಲಬದ್ಧತೆಗೆ ಉಪಯೋಗಿಸುವ ಔಷಧಿ | | | | |
| ವಾಲಾಮೈಸಿನ್ | ೩೦ ಮಿ.ಲಿ | ೪.೨೯ | ೧೭.೦ | ೨೯೬.೨೭ | ೨೦.೦ | ೪೬೬.೨ |
| | | ಆಂಟಿ ಬಯಾಟಿಕ್ | | | | |
| ಲೆನಾಕ್ಸಿನ್ | ೧೦ ಮಾತ್ರೆ | ೦.೯೧ | ೨.೦೨ | ೧೨೧.೯೮ | ೫.೮೫ | ೬೪೨.೮೫ |
| | | ಹೃದಯರೋಗಕ್ಕೆ ಉಪಯೋಗಿಸುವ ಔಷಧಿ | | | | |
| ಟ್ಯಾಂಜಸೆಡ್ | ೧೦೦ | ೫.೦೮ | ೩೨.೯೦ | ೫೪೭.೬೪ | ೪೦.೧ | ೭೯೦.೦ |
| | | ಹೃದಯರೋಗಕ್ಕೆ ಉಪಯೋಗಿಸುವ ಔಷಧಿ | | | | |
| ಆರ್‌ಲಿಡಿನ್ | ೨೫ | ೬.೧೧ | ೩೧.೫೦ | ೪೧೫.೫೫ | ೪೮.೦ | ೭೮೫.೬ |
| | | ರಕ್ತನಾಳ ಹಿಗ್ಗಿಸಲು ಉಪಯೋಗಿಸುವ ಔಷಧಿ | | | | |
| ಎಂಡೋಪಾ | ೧೦ | ೬.೧೫ | ೩೦.೪೯ | ೩೯೫.೭೭ | ೩೦.೪೮ | ೪೯೫.೬ |
| | | ರಕ್ತದ ಏರೊತ್ತಡ ಕಡಿಮೆ ಮಾಡುವ ಔಷಧಿ | | | | |
| ಎಲೆಕ್ಸಾಲ್ | ೮೦ ಗ್ರಾಂ | ೪.೧೮ | ೧೭.೫೫ | ೩೧೯.೮೬ | ೨೬.೨೯ | ೬೨೮.೯ |
| | | ಓ. ಆರ್. ಎಸ್. ಪುಡಿ - ಒಂದು ಅನಗತ್ಯ ಔಷಧಿ | | | | |
| ಗೈನೇ ಸೀವೀಪಿ | ೨೫ | ೯.೨೨ | ೨೩.೪೩ | ೧೫೪.೧೨ | ೪೭.೫ | ೫೧೫.೨ |
| | | ರಕ್ತಸ್ರಾವ ಹತೋಟಿಗೆ ಉಪಯೋಗಿಸುವ ಔಷಧಿ - ಅನಗತ್ಯ ಔಷಧಿ | | | | |
| ಕಾಲ್‌ಪಾಲ್ | ೧೦ | ೧.೪೫ | ೩.೧೦ | ೧೧೩.೭೯ | ೪.೭೯ | ೬೯೪.೬ |
| | | ನೋವು ಹಾಗೂ ಜ್ವರ ಹತೋಟಿ ತರಲು ಉಪಯೋಗಿಸುವ ಔಷಧಿ | | | | |
| ಗಾರ್ಡಿನಾಲ್ | ೩೦ ಮಿ. ಗ್ರಾಂ/ ೫೦೦ | ೧೧.೧೨ | ೩೦.೮೨ | ೧೧೭.೧೬ | ೩೫೦.೦೦ | ೩೧೪೭.೫ |
| | | ಅಪಸ್ಮಾರ ಕಾಯಿಲೆ ಹತೋಟಿಗೆ ಉಪಯೋಗಿಸುವ ಔಷಧಿ | | | | |
| ನೈಟ್ರಾವೆಟ್ | ೫ ಮಿ.ಗ್ರಾಂ / ೧೦ | ೨.೫ | ೭.೩ | ೧೯೨.೦ | ೯.೫೬ | ೩೮೨.೪ |
| ಕಾಮೋಡ್ | [illegible] ಮಿ.ಗ್ರಾಂ / ೧೦ | ೦.೭೨ | ೬.೬೫ | ೮೨೩.೬೧ | ೬.೮೮ | ೯೫೫.೬ |
| | | ಮಾನಸಿಕ ರೋಗದಲ್ಲಿ ಉಪಯೋಗಿಸುವ ಔಷಧಿ | | | | |
| ಲಿಬ್ರಿಯಂ | ೧೦ ಮಿ. ಗ್ರಾಂ | ೧.೩೦ | ೬.೦೦ | ೪೦೭.೬೯ | | |
| | | ಮಾನಸಿಕ ರೋಗದಲ್ಲಿ ಉಪಯೋಗಿಸುವ ಔಷಧಿ | | | | |
| ಲೈನೊರಾಲ್ | ೨೦<br>೦.೦೧ | ೧.೦೫ | ೧೮.೭೦ | ೧೬೮೦.೯೫ | ೨೧ | ೨೦೦೦.೦ |
| | ೨೦<br>೦.೦೫ | ೧.೯೪ | ೨೩.೬೦ | ೧೧೧೬.೪೯ | ೩೭ | ೧೯೦೭.೨ |
| | | ಹಾರ್ಮೋನ್ ಔಷಧಿ | | | | |
| ವೈಸಿಲೋನ್ | [illegible] ಮಿ.ಗ್ರಾಂ | ೨.೧೫ | ೪.೯೪ | ೧೨೯.೭೭ | ೭.೬೩ | ೩೫೪.೯ |
| | | ಸ್ಟೀರಾಯ್ಡ್ ಔಷಧಿ | | | | |
| ಡಯಾನಿಲ್ | ೧೦ | ೧.೭೧ | ೩.೫೪ | ೧೦೭.೧೨ | ೬.೦೮ | ೩೫೫.೬ |
| | | ರಕ್ತದಲ್ಲಿಯ ಸಕ್ಕರೆಯನ್ನು ಹತೋಟಿಗೆ ತರುವ ಔಷಧಿ | | | | |
| ಎಲ್‌ಟ್ರಾಕ್ಸಿನ್ | ೧೦೦ | ೨.೭೪ | ೨೦.೪೦ | ೬೪೪.೫೩ | ೨೧.೬೯ | ೭೯೧.೬ |
| | | ಥಯಿರಾಯಿಡ್ ರೋಗವನ್ನು ಹತೋಟಿಗೆ ತರುವ ಔಷಧಿ | | | | |
| ಬಿಸ್ಕರ್‌ಪೆನ್ ಇಂಜೆಕ್ಷನ್ | ೧ | ೧.೧೨ | ೮.೯೮ | ೮೦೧.೭೯ | ೮.೪೨ | ೭೫೧.೭೮ |
| | | ಆಂಟಿಬಯಾಟಿಕ್ | | | | |
| ರೆಸೊಂಚಿನ್ | ೧೦ | ೧.೯೯ | ೮.೧೦ | ೩೦೭.೦೪ | ೮.೧೦ | ೩೦೭.೦೪ |
| | | ಮಲೇರಿಯಾ ರೋಗ ಹತೋಟಿಗೆ ಉಪಯೋಗಿಸುವ ಔಷಧಿ | | | | |
| ಬೇಯರ್ಸ್ ಟಾನಿಕ್ | ೨೦೦ ಮಿ.ಲಿ. | ೬.೩೮ | ೨೬.೬೩ | ೩೧೭.೪೦ | ೩೫.೧೬ | ೫೫೧.೦೯ |
| | | ಅನಗತ್ಯ ಔಷಧಿ | | | | |
| ಡೆಕ್ಸಾರೇಂಜ್ | ೨೮೦ ಮಿ.ಲಿ | ೧೦.೨೯ | ೪೭.೩೦ | ೩೫೯.೬೭ | ೫೫.೬ | ೫೪೦.೪ |
| | | ರಕ್ತ ವೃದ್ಧಿಸಲು ಉಪಯೋಗಿಸುವ ಔಷಧಿ - ಅನಗತ್ಯ ಔಷಧಿ | | | | |
| ಕ್ಯಾಲ್ಸಿಯಂ ಸ್ಯಾಂಡೋಜ್ | ೫೦ | ೫.೦೯ | ೧೦.೫೧ | ೧೦೬.೪೮ | ೫೪.೧೬ | ೧೦೬೪.೦ |
| | | ಕ್ಯಾಲ್ಸಿಯಂ ಕೊರತೆಯುಂಟಾದಾಗ ಉಪಯೋಗಿಸುವ ಔಷಧಿ | | | | |
| ಆ್ಯಬ್ಡೆಕ್‌ಹನಿ | ೧೫ ಮಿ.ಲೀ | ೩.೪೧ | ೧೩.೭೦ | ೩೦೧.೭೬ | ೧೬ | [illegible] |
| | | ವಿಟಮಿನ್ ಹನಿ - ಅನಗತ್ಯ ಔಷಧಿ | | | | |

★ ಕೆಲವು ಔಷಧಿಗಳ ಘಟಕಗಳನ್ನು ಬದಲಿಸಿದ್ದಾರೆ.
★ ಕೆಲವು ಔಷಧಿಗಳ ಘಟಕಗಳ ಪ್ರಮಾಣವನ್ನು ಬದಲಿಸಿದ್ದರೂ, ಮೊದಲು ಲಭ್ಯವಿದ್ದ ಪ್ರಮಾಣದ ಮೇಲೆ ಬೆಲೆಯನ್ನು ತೀರ್ಮಾನಿಸಲಾಗಿದೆ.

ಮಿ.ಲೀ ದ್ರಾವಣ) ಮಾತ್ರ ಸೀಮಿತವಾಗಿದ್ದರಿಂದ ಔಷಧಿ ಕಂಪನಿಗಳು, ಪ್ಯಾಕ್ ಬದಲಿ ಮಾಡಿ (೧೪ ಮಾತ್ರೆಗಳು ೬೦ ಮಿ.ಲೀ. ದ್ರಾವಣ) ಔಷಧಿ ಬೆಲೆ ನಿಯಂತ್ರಣವನ್ನು ತಪ್ಪಿಸಿಕೊಂಡಿವೆ.

ದೊಡ್ಡ ಔಷಧಿ ಕಂಪನಿಗಳು ಸಣ್ಣ ಔಷಧಿ ಕಂಪನಿಗಳಿಗೆ ತಮ್ಮ ಔಷಧಿಗಳನ್ನು ಮಾರಿ, ಔಷಧಿ ಬೆಲೆ ನಿಯಂತ್ರಣ ಕಾನೂನಿನ ಪ್ರಭಾವವನ್ನು ತಪ್ಪಿಸಿಕೊಂಡಿವೆ.

ಔಷಧಿ ಬೆಲೆಗಳನ್ನು ಹತೋಟಿಯಲ್ಲಿ ತರಲು ಇತ್ತೀಚೆಗೆ ಔಷಧಿ ಬೆಲೆ ಪ್ರಾಧಿಕಾರ *(National Pharmaceutical Pricing Authority)* ಅಸ್ತಿತ್ವಕ್ಕೆ ಬಂದಿದ್ದರೂ ಔಷಧಿ ಬೆಲೆ ನಿಯಂತ್ರಣವಾಗುತ್ತಿಲ್ಲ ಹಾಗೂ ಅನೇಕ ಔಷಧಿಗಳ ಬೆಲೆಗಳು ಏರುತ್ತಿವೆ.

| | | |
|---|---|---|
| ರಿಫಾಂಪಿಸಿನ್ | (ಕ್ಷಯರೋಗಕ್ಕೆ) | ೩೬% ಹೆಚ್ಚಳ |
| ಇಥಾಂಬ್ಯುಟಾಲ್ | (ಕ್ಷಯರೋಗಕ್ಕೆ) | ೭೫% ಹೆಚ್ಚಳ |
| ಕ್ಲೋಫಿಜಮಿನ್ | (ಕುಷ್ಠರೋಗಕ್ಕೆ) | ೩೭% ಹೆಚ್ಚಳ |

ಈ ರೀತಿ ಔಷಧಿಗಳ ಬೆಲೆಗಳನ್ನು ಹೆಚ್ಚಿಸಿ, ಔಷಧಿ ಕಂಪನಿಗಳು ಲಾಭ ಗಳಿಸಿದ್ದನ್ನು ಸುಪ್ರೀಂ ಕೋರ್ಟು ಖಂಡಿಸಿ, ಲಾಭವನ್ನು ಹಿಂತೆಗೆದುಕೊಳ್ಳಲು ಸರ್ಕಾರಕ್ಕೆ ಆದೇಶ ನೀಡಿದರೂ, ಸರಕಾರದಿಂದ ಆ ಲಾಭವನ್ನು ಹಿಂತೆಗೆದುಕೊಳ್ಳಲು ಆಗಿಲ್ಲ!

ಔಷಧಿ ಬೆಲೆ ಹತೋಟಿಯಲ್ಲಿರಲು ನಮ್ಮ ಪೇಟೆಂಟ್ ಕಾನೂನು ಮಹತ್ವದ ಪಾತ್ರ ವಹಿಸುತ್ತಿದೆ. ಈಗ ಪೇಟೆಂಟ್ ಕಾನೂನನ್ನು ಬದಲಿಸುವ ಪ್ರಯತ್ನಗಳು ನಡೆಯುತ್ತಿವೆ. ಪೇಟೆಂಟ್ ಕಾನೂನು ನಿಷ್ಕ್ರಿಯವಾದಲ್ಲಿ, ಹೊಸ ಪೇಟೆಂಟ್ ಜಾರಿಗೆ ಬಂದಲ್ಲಿ (೨೦೦೫) ಔಷಧಿ ಬೆಲೆಗಳು ಏನಾಗಬಹುದೆಂದು ಜನರೇ ಊಹಿಸಬಹುದಾಗಿದೆ.

ಈ ಎಲ್ಲಾ ಬೆಳವಣಿಗೆಗಳ ಮಧ್ಯೆಯೂ, ಭಾರತದಲ್ಲಿ ಔಷಧಿ ಬೆಲೆಗಳು ಬೇರೆ ದೇಶಗಳಿಗೆ ಹೋಲಿಸಿದಲ್ಲಿ ಕಡಿಮೆಯಾಗಿಯೇ ಉಳಿದಿವೆ. ಆದರೆ ಈ ಬೆಲೆಗಳು ಏರುತ್ತಿರುವುದನ್ನು ಕೋಷ್ಟಕಗಳಿಂದ ನಾವು ಗಮನಿಸಬೇಕಾಗಿದೆ.

| | ರ್‍ಯಾನಿಟಡಿನ್ ೧೫೦ ಮಿ.ಲೀ. ೧೦ ಮಾತ್ರೆ | ಡೈಕ್ಲೋ ಫೆನ್ಯಾಕ್ ೫೦ ಮಿ.ಲೀ. ೧೦ ಮಾತ್ರೆ |
|---|---|---|
| ಭಾರತ | ೭.೧೬ ರೂ. | ೫.೬೪ |
| ಯು.ಕೆ. | ೩೨೦.೮೫ ರೂ. | ೧೨೫.೮೮ |
| ಯು. ಎಸ್.ಎ. | ೭೩೯.೬೦ ರೂ. | ೫೦೬.೬೮ |

ಅನೇಕ ಜನಪರ ಸಂಘಟನೆಗಳು ಬೆಲೆ ಏರಿಕೆ ವಿರುದ್ಧ ಪ್ರತಿಭಟನೆಯನ್ನು ಮಾಡುತ್ತಿವೆ. ವ್ಯಾಪಕ (ರಾಷ್ಟ್ರವ್ಯಾಪಿ) ಪ್ರತಿಭಟನೆಯಿಂದ ಮಾತ್ರ ಔಷಧ ಬೆಲೆ ನಿಯಂತ್ರಣ ಸಾಧ್ಯವಾಗಬಹುದಾಗಿದೆ.

ಡಾ|| ಪ್ರಕಾಶ್ ಸಿ. ರಾವ್
ನಂ. ೭೩/೨, ೧ನೇ ರಿಸರ್‌ವಾಯರ್ ಬ್ಲಾಕ್
ರಾಜಾಜಿನಗರ, ಬೆಂಗಳೂರು-೫೬೦ ೦೧೦




ಪಡುವಣದ ಮುಸುಕಿಗೆ
ಹಡಗು ಚಲಿಸುತ್ತಿದೆ
ದೂರದಲಿ ಮಿಣಮಿಣಿಸೊ
ದಿಕ್ಸೂಚಿ ಕಡೆಗೆ.
ಗಿಜಿಗುಡುವ ಹಡಗೊಳಗೆ
ಮದುವೆ ಸಂಭ್ರಮವಿತ್ತು
ಮದುಮಕ್ಕಳಾಲಿಂಗನದ
ಘಮ ಘಮವು ಚಿಮ್ಮಿತ್ತು.
ಹೊರಟ ಮರುಗಳಿಗೆಯಲೆ
ಅಪಶಕುನದಾರಂಭ.
ಚಂಡಮಾರುತವೆರಗಿ
ಗುಂಡಿಗೆಗಳು ತುಂಡಾಗಿ
ಕೋಟಿ ಕಣ್ಗಳ ನವಿಲಿನಂತೆ,
ಕಡಲ ನರ್ತನದ ರಂಗವಲ್ಲಿ.
ನಭವೆ ನಾಲಿಗೆ ಚಾಚಿ ಹೋಳಿಯಾಗಿ
ಭಯದ ಬಣ್ಣಗಳೆರಚಿ ಕಾಮರೂಪಿ.

ತಳದೊಳಗೆ ಹುದುಗಿದ್ದ
ಹಿಮಗಡ್ಡೆಗಳು ಕೆರಳಿ
ಹಡಗಿನಂಚಿಗೆ ಬಡಿದು
ದಿಂಡುರುಳು ಸೇವೆ ಒಡಲಿನೊಳಗೆ.

ಬಿರುಕು ಬಿಟ್ಟರೂ ಹಡಗು
ತೆವಳುತಿದೆ ಗುರಿತಪ್ಪಿ ಯಾವೂರಿಗೋ
ನಾವಿಕನ ಭರವಸೆಯ
ಮಾತಿನ ಚಿಪ್ಪುಗಳು ಕಡಲೊಳಗೆ.
ಅಪರೂಪದಾಲಾಪ ಹಾಡೋ
ಪಂಡಿತರೆಲ್ಲ ಪೋಪ್ ಮೆಚ್ಚಿಗೆಗಾಗಿ
[illegible] ವಾಗಳ
[illegible] ಗೀತ

ಪಕ್ಕವಾದ್ಯದ ಪಟುಗಳೂ ವಟುಗಳೂ
ಅಮಲೇರಿ ತಮಟೆ ಹರಿವಂತೆ
ಕಿವುಡೇರಿ ಶಬ್ದ ತೂರೆವಂತೆ
ಭೋಗಲಾಲಸೆಯಾಸೆ ಹಲವರೆದೆಗೆ.

ಅಲೆಗಳಾಹಾಕಾರ ಎದೆಮಟ್ಟ
ಏರಿದರೂ ಏದುಸಿರ ಭಯದಲ್ಲಿ
ತೇಲ್ಮುಳುಗಿ ಪಯಣಿಗರು
ಪ್ರಾಣವೆಂಬೀ ತಾಯ್ತತದ ಆಸೆಯಲ್ಲಿ.

ಅಪರೂಪದೀ ಅವಕಾಶದಲೆಗಳಲಿ
ತರತರ ತರಂಗಗಳು ಮನಸಿನೊಳಗೆ.
ಏಳು ಸಾಗರ ಈಜಿ ನಕ್ಷತ್ರದೊಡವೆಗಳ
ನಾಗಲೋಕದ ಸೊಗಸು ಕನಸಿನೊಳಗೆ.
ಮೀಸಲ ಹಣತೆ ಹಚ್ಚಿ ಬೆಳಕು
ನೋಡುವ ಮೊದಲೆ ವಿಧ್ಯುಕ್ತ
ವಿದ್ಯುತ್ತಿನಾಲಿಂಗನ; ಕಲೆಯ
ಕಂಪನದಲ್ಲಿ ಚಿಗುರಗಾನ.
ಹಡಗಿನೀ ಲೋಕದಲಿ ನಾವಿಕನೆ
ಧೀರ, ನಡೆನುಡಿ ಗಂಭೀರ
ಒಡಕಿನ ಯಾನಕ್ಕೆ ಪಯಣಿಗರ
ಎದೆಯೊಳಗೆ ಮೌನಬಂಗಾರ.
ಮೌನಗರ್ಭವ ಸೀಳಿ ಧರೆಗಿಳಿದ
ಕಂದನಿಗೆ ಪ್ರಾಣಧಾತುವೆ ಮಾಯ
ರಕ್ತಚೆಲ್ಲಿದ ತಾಯ್ಗೆ ಶವಯಾತ್ರೆ, ಜಾತ್ರೆ
ಲೋಕಚೆಂಡನು ಮಾಡೊ ಘೋರ ಉಪಾಯ.
ಒಡೆದ ಹಡಗನು ನಡೆಸೋ
ಶೂರನಿಗೆ ಸನ್ಮಾನ; ಬಹು ಪರಾಕು
ವಂದಿಮಾಗಧರ ಕುಂದಲಿಗಳು
ನೂರು ಬಿಳಿಯರೂರಿನಲಿ ಶಂಖನಾದ.

ಆಕಾಶದಲಿ ಕುಂತ ಹಡಗುಕಳ್ಳರ ಆಟ
ಮುಗಿಯದಿದ್ದರು ಆಸೆ ತವಕದೋಟ
ಮುಳುಗಿದ್ದ ಮನುಜರನು ಮೀನು ಮೊಸಳೆಗೆ
ಎಸೆದು ವಜ್ರಹವಳಗಳ ದೋಚುವಾಟ.

ಎಲ್. ಹನುಮಂತಯ್ಯ
ನಂ. ೨೭, ೭ನೇ ಮುಖ್ಯ ರಸ್ತೆ, ೫ನೇ ಕ್ರಾಸ್, ರಾಜಾಜಿನಗರ
ಕೈಗಾರಿಕಾ ನಗರ, ಬೆಂಗಳೂರು - ೪೪

# ಸುಗಂಧ ಲೋಕ

ಡಾ|| ಎಂ. ಆರ್. ಎಸ್. ಮೂರ್ತಿ

ನಮ್ಮ ಮೈಸೂರು ರಾಜ್ಯ ಶ್ರೀಗಂಧದ ಗುಡಿಯೆಂದೇ ನಮ್ಮೆಲ್ಲರ ಹೆಮ್ಮೆ. ದೇವರಿಗೆ ಅರ್ಪಿಸುವ ಗಂಧ, ಅಕ್ಷತೆ, ಪತ್ರ ಮತ್ತು ಪುಷ್ಪಗಳಲ್ಲಿ ಮೊದಲನೆಯದು ಸುಗಂಧ, ಕಡೆಯದು ಸುವಾಸಿತ ಪುಷ್ಪ. ಮೈಸೂರು ಮಲ್ಲಿಗೆಯ ಕಂಪು ಇನ್ನಾವ ಹೂವಿಗೂ ಇಲ್ಲವೆಂದು ನಮ್ಮ ಹಮ್ಮು. ನರಸಿಂಹಸ್ವಾಮಿಯವರ ಕವನ ಮೈಸೂರು ಮಲ್ಲಿಗೆಗೆ ತನ್ನದೇ ಸೌರಭ ಇದೆ, ನಿಜ. ಆದರೂ, ಕವನ ಮಲ್ಲಿಗೆಯ ಸಖ್ಯದಿಂದ ವಿಶೇಷ ಕಳೆ ಪಡೆದಿದೆಯೆಂದು ಖಂಡಿತಾ ಹೇಳಬಹುದು. ಮೈಯ್ಯಿಗೆ ಗಂಧ ಪೂಸಿಕೊಳ್ಳುವ ಗೀಳು ತುಳಸೀ ಮಾಲೆ ಧರಿಸುವ ಶ್ರೀಕೃಷ್ಣ ಪರಮಾತ್ಮನಿಂದ ಹಿಡಿದು ನಮ್ಮೆಲ್ಲರಿಗೂ ಅಂಟಿರುವ ಗೀಳು. ಬೇಸಿಗೆಯಲ್ಲಿ ಕಾದು ಕೆಂಡವಾದ ಮಣ್ಣಿನ ಮೇಲೆ ಮೊದಲ ಮಳೆ ಹನಿ ಬಿದ್ದಾಗ, ಅದರಿಂದ ಹೊಮ್ಮುವ ವಾಸನೆ ಯಾರಿಗೆ ತಾನೇ ಹುಚ್ಚು ಹಿಡಿಸುವುದಿಲ್ಲ? ನಮ್ಮ ಕಣ್ಣು ಕಟ್ಟಿದರೂ, ನೂರಾರು ಹೂವುಗಳನ್ನು, ಹಣ್ಣುಗಳನ್ನು ನಾವು ವಾಸನೆಯಿಂದಲೇ ಗುರುತಿಸಬಲ್ಲೆವು. ವಸಂತ ಕಾಲದಲ್ಲಿ ಗಾಳಿಯಲ್ಲಿ ತೇಲಿಬರುವ ಮಾವಿನ ಕಂಪು ಸವಿಯದವರು ಯಾರಿದ್ದಾರೆ ? ಮನೆಗೆ ಬರುತ್ತಿದ್ದಂತೇ, ಅಮ್ಮ ಮಾಡಿದ ಅಡುಗೆಯನ್ನು ನಮ್ಮ ಮೂಗೇ ಪತ್ತೆ ಮಾಡಿಬಿಡುತ್ತದೆ. ಈಗ ಬೆಂಗಳೂರಿನ ಎಲ್ಲೆಡೆ ತಲೆಯೆತ್ತುತ್ತಿರುವ ಯಾವುದಾದರೂ ಬಹುಮಹಡಿ ಕಟ್ಟಡವನ್ನು ಪ್ರವೇಶಿಸಿ ನಿಧಾನವಾಗಿ ವರ್ತುಲ ಹಜಾರಗಳಲ್ಲಿ ನಡೆಯಿರಿ. ಒಂದೊಂದು ಮನೆಯಿಂದ ಒಂದೊಂದು ವಾಸನೆ ಮೂಗಿಗೆ ಬಡಿಯುತ್ತದೆ. ಮನೆಯ ಗುಟ್ಟುಗಳನ್ನು ತಿಳಿಸುತ್ತದೆ. ನಮ್ಮ ಕನ್ನಡದ ರತ್ನನಿಗೆ 'ಕುಡುದುಬುಟ್ಟಾಂದ್ರೆ ತೊದಲ್ತದಣ್ಣ, ನಾಲ್ಗೆ ಬಾಳ ಗೋಳು' ಎಂಬ ಚಿಂತೆ. ಮಾತನಾಡದಿದ್ದರೂ, ಮೈಲುದ್ದಕ್ಕೆ ದುರ್ವಾಸನೆ ಪಸರಿಸುವುದು ಅಮಲಿನಲ್ಲಿರುವ ಅವನಿಗೆ ತಿಳಿಯುವುದಿಲ್ಲ. ನಮ್ಮ ಪಂಚೇಂದ್ರಿಯಗಳಲ್ಲಿ ವಾಸನೆ ನಿಜಕ್ಕೂ ದೊಡ್ಡ ಶಕ್ತಿಯೆಂದೇ ಗಣಿಸಬೇಕು. ಸುವಾಸನಾಯುಕ್ತ ಎಣ್ಣೆ ಗಿಡಗಳ ಬಗ್ಗೆ ಸಂಶೋಧನೆ ನಡೆಸಲೆಂದೇ ಮೀಸಲಾದ ಒಂದು ಸಂಸ್ಥೆ ಲಕ್ನೋ ನಗರದಲ್ಲಿದೆ. ಸುಗಂಧದೆಣ್ಣೆಗಳ ರಫ್ತು ನಮ್ಮ ದೇಶಕ್ಕೆ ಬಹಳ ವಿದೇಶೀ ವಿನಿಮಯ ದೊರಕಿಸಿಕೊಡಬಹುದಾದ ಉದ್ಯಮವಾಗಬಲ್ಲದು.

ಸುವಾಸಿತ ದ್ರವ್ಯಗಳ ಬಳಕೆ ನಮ್ಮ ಸಾಮಾಜಿಕ ಬದುಕಿನಲ್ಲಿ ಹಾಸುಹೊಕ್ಕಾಗಿ ಬೆರೆತಿದೆ. ಮದುವೆ ಮನೆಗೆ ಹೋಗುತ್ತಿದ್ದಂತೆ ರೇಷ್ಮೆ ಸೀರೆಯುಟ್ಟ ಚೆಲುವಿನ 'ಸುವಾಸಿನಿಯರು' ನಮ್ಮ ಮೇಲೆ ಸುಗಂಧ ದ್ರವ್ಯ ಚಿಮುಕಿಸಲೇಬೇಕು. ಇತ್ತೀಚೆಗೆ ದೊಡ್ಡ ಜನರ ಮನೆಯ ಮದುವೆಗಳಲ್ಲಿ ಸುಗಂಧದ ಚಿಲುಮೆಯನ್ನೇ ನಿರ್ಮಿಸಿ, ಅದರ ಮೇಲೆ ಗಾಳಿ ಬೀಸಿ ಬರುವ ಜನರ ಮೇಲೆಲ್ಲಾ ತಾನೇ ತಾನಾಗಿ ಹನಿಯುವಂತೆ ಮಾಡಿರುತ್ತಾರೆ. ಇಂತಹ ಚಿಲುಮೆಗಳಿಗೆ 'ಸುವಾಸಿನಿಯರ' ಚಲುವಿದೆಯೇ ಎಂಬುದು ಅನುಮಾನ. ಇಂತಹ ಕೂಟಗಳಲ್ಲಿ 'ಸುವಾಸಿನಿ' ಎನ್ನುವುದು ನಿಜವಾಗಿಯೂ ಅನ್ವರ್ಥನಾಮವೇ. ಎಲ್ಲ ಹೆಂಗಳೆಯರೂ, ಹಳೆಯ ಮುತ್ತೈದೆಯಿರಲಿ, ನವ ಕನ್ಯೆಯಿರಲಿ, ತಮ್ಮದೇ ಸುವಾಸನೆಯಿಂದ ಬೆಡಗಿನ ವಾತಾವರಣ ಮೂಡಿಸುತ್ತಾರೆ. 'ವಾಸನೆ' ನಮ್ಮಲ್ಲಿ ಎಷ್ಟು ಆಳವಾಗಿ ಬೇರುಬಿಟ್ಟಿದೆಯೆಂದರೆ, ಬದುಕಿನ ಮೂಲ ಹಂಬಲಿಕೆಗಳಿಗೆ 'ಮಣ್ಣಿನ ವಾಸನೆ' ಎನ್ನುತ್ತೇವೆ. ಪುನರ್ಜನ್ಮದ ವಾಸನೆಯೂ ನಮಗೆ ಇರುತ್ತದಂತೆ ! ಯಾರಾದರೂ ಕುತಂತ್ರ ನಡೆಸುತ್ತಿದ್ದರೆ 'ಕೊಳೆತ ಮೀನಿನ ವಾಸನೆ ಬರುತ್ತಿದೆ' ಎಂಬರ್ಥದ ನಾಣ್ಣುಡಿ ಇಂಗ್ಲಿಷಿನಲ್ಲಿದೆ.

ಸುಗಂಧ ದ್ರವ್ಯಗಳ ಬಳಕೆ ಬಹು ಪುರಾತನ ಕಾಲದಿಂದಲೂ ಇರುವಂತೆ ತೋರುತ್ತದೆ. ನಮ್ಮ ದೇಶದಲ್ಲಿ ಮಾತ್ರವಲ್ಲದೆ ದೈವಾರಾಧನೆಯಲ್ಲಿ ಎಲ್ಲ ಸಮಾಜಗಳಲ್ಲೂ ಜನ ಸುಗಂಧ ಧೂಮ ಉರಿಸುತ್ತಾರೆ. ದೇವರಿಗೇಕೆ ಈ ಗಂಧದ ಮೋಹ ಎಂಬುದು ನಮಗೆ ತಿಳಿದಿಲ್ಲ. ಕೆಲವರು ದೈವತೃಪ್ತಿಗಾಗಿ ಅಗ್ನಿಯಲ್ಲಿ ಹೋಮ ಮಾಡುತ್ತಿದ್ದ ಪ್ರಾಣಿಗಳ ಮಾಂಸ ಸುಡುವಾಗ ಹೊಮ್ಮುತ್ತಿದ್ದ ದುರ್ವಾಸನೆಯನ್ನು ತಡೆಯಲು ಸುಗಂಧ ದ್ರವ್ಯಗಳ ಬಳಕೆ ಬಂದಿರಬಹುದೆಂದು ಊಹಿಸುತ್ತಾರೆ.

ನಮ್ಮ ಮೂಗಿನ ತೃಪ್ತಿಗಾಗಿ ಸಂಹಾರವಾಗುವ ಪ್ರಾಣಿಗಳಿಗೆ, ಸಸ್ಯಗಳಿಗೆ ಲೆಕ್ಕವಿಲ್ಲ. ಅನೇಕ ಗಂಡು ಪ್ರಾಣಿಗಳು ಅದೇ ಜಾತಿಗೆ ಸೇರಿದ ಹೆಣ್ಣನ್ನು ಆಕರ್ಷಿಸಲು ಬಗೆಬಗೆಯ ವಾಸನಾಯುಕ್ತ ಧಾತುಗಳನ್ನು ಹೊರಸೂಸುತ್ತವೆ. ಈ ಧಾತುಗಳೆಲ್ಲ ನಮ್ಮ ಮೂಗಿಗೂ ಹಿತವಾಗಬೇಕೆಂದೇನೂ ಇಲ್ಲ. ನತದೃಷ್ಟ ಪ್ರಾಣಿಯಾಗಿದ್ದರೆ, ಅದು ಸೂಸುವ ಧಾತು ನಮ್ಮ ಮೂಗಿಗೆ ಹಿಡಿಸುತ್ತದೆ. ಪ್ರಾಣಿಯ ಸಂತತಿ ಅಪಾಯಕ್ಕೆ ಒಳಗಾಗುತ್ತದೆ. ಇಂತಹ ಒಂದು ಪ್ರಾಣಿ, ನಮ್ಮ ಬಹು ಮೆಚ್ಚಿನ ಕಸ್ತೂರಿಯನ್ನು ಪೂರೈಸುವ ಕಸ್ತೂರಿ ಮೃಗ. ಹಿಮಾಲಯದ ತಪ್ಪಲಿನ ತಂಪು ಹವೆಯಲ್ಲಿ ವಾಸಿಸುವ ಕಸ್ತೂರಿ ಮೃಗದ ಗಂಡುಗಳ ಹೊಟ್ಟೆಯಲ್ಲಿರುವ ಸಣ್ಣ ಚೀಲದಲ್ಲಿ ಹೆಣ್ಣನ್ನು ಆಕರ್ಷಿಸುವ ಈ ಕಸ್ತೂರಿ ಸಂಗ್ರಹವಾಗುತ್ತದೆ. ಇದನ್ನು ಗಂಡಸರು ಹಚ್ಚಿಕೊಂಡರೆ, ಹೆಂಗಸರಿಗೆ ತಡೆಯಲಾರದ ಬಯಕೆ ಉಂಟಾಗಿ, ಗಂಡಸಿನ ತೆಕ್ಕೆಯಲ್ಲಿ ಬಂದು ಬೀಳುತ್ತಾರೆ ಎಂಬ ಪ್ರಚಾರ ನೀವು ಕೇಳಿರಬಹುದು. ಕಸ್ತೂರಿಗೆ ಚಿನ್ನದ ಬೆಲೆ ಇದೆಯೆಂದ ಮೇಲೆ ಕಸ್ತೂರಿ ಮೃಗದ ಗತಿ ಏನೆಂಬುದನ್ನು ಹೇಳಬೇಕಾಗಿಲ್ಲ. ಇದೇ ರೀತಿ, ಹೊಟ್ಟೆಯಲ್ಲಿ ಸುಗಂಧ ಧಾತುವನ್ನು ಶೇಖರಿಸುವ ಸ್ಪೆರ್ಮ್ ವೇಲ್ ಎಂಬ ತಿಮಿಂಗಲ ಅವಸಾನದ ಅಂಚನ್ನೇ ತಲುಪಿತ್ತು. ಇದರ ಹೊಟ್ಟೆಯಲ್ಲಿರುವ ಎಣ್ಣೆಯ ಘಮಕ್ಕೆ ಮೊದಲು ಮರುಳಾದವರು ಅರಬ್ಬರು. 'ಅಂಬರ್ಗಿಸ್' ಎನ್ನುವ ಈ ತೈಲವನ್ನೂ, ಕಸ್ತೂರಿಯನ್ನೂ ಈಗ ರಾಸಾಯನಿಕ ಮಾರ್ಗದಿಂದ ಸಂಶ್ಲೇಷಿಸಲು ಸಾಧ್ಯವಿರುವುದರಿಂದ, ಈ ಪ್ರಾಣಿಗಳು ಪೂರ್ಣ ನಾಶಹೊಂದಿಲ್ಲ. ಇದೆಲ್ಲಕ್ಕಿಂತ ಸ್ವಾರಸ್ಯಕರವಾದ ಸುಗಂಧದ ಕತೆ ಪುನುಗು ಬೆಕ್ಕಿನಿಂದ ದೊರೆಯುವ ಧಾತುವಿನದು. ಈ ಮಾಂಸಾಹಾರಿ ಬೆಕ್ಕು ರಾತ್ರಿ ಜೀವಿ. ಗಂಡು ಹಾಗೂ ಹೆಣ್ಣುಗಳ ಜನನೇಂದ್ರಿಯಗಳಲ್ಲಿ ಮೇಣದಂತಹ ವಸ್ತು ಇರುತ್ತದಂತೆ. ಈ ವಸ್ತು ಸಹಿಸಲಸಾಧ್ಯವಾದ ಮಲದ ವಾಸನೆ ಹೊಂದಿರುತ್ತದೆ. ವಾರಕ್ಕೆರಡು ಬಾರಿ ಶೇಖರಿಸಬಹುದಾದ ಇದನ್ನು ಅತ್ಯಲ್ಪ ಪ್ರಮಾಣದಲ್ಲಿ ತೈಲಾಧಾರಿತ ಸುಗಂಧಗಳಿಗೆ ಬೆರಸಿದರೆ, ಸುಗಂಧದ ಗುಣ ಹೆಚ್ಚುವುದಲ್ಲದೆ ತೈಲ ಆವಿಯಾಗುವುದು ನಿಧಾನವಾಗಿ, ಗಂಧ ಬಹುಕಾಲ ನಿಲ್ಲುತ್ತದಂತೆ !

ಹೂವು, ಹಣ್ಣು, ಕಾಂಡ, ಬೇರು ಮುಂತಾದ ಎಲ್ಲ ಭಾಗಗಳಲ್ಲೂ ಒಂದಲ್ಲ

ಒಂದು ಸಸ್ಯ ಸುವಾಸನಾಭರಿತ ತೈಲಗಳನ್ನು ಸಂಗ್ರಹಿಸುತ್ತದೆ. ಈ ತೈಲವನ್ನು ಭಟ್ಟಿ ಇಳಿಸುವ ಮೂಲಕ ಶುದ್ಧೀಕರಿಸಬಹುದು. ಗುಲಾಬಿ ಹೂವಿನ ಎಸಳಿನಿಂದ ಪಡೆಯುವ ಅತ್ತರ್ ಬಹು ಜನಪ್ರಿಯವಾಗಿದೆ. ಸುಮಾರು ೧೦೦ ಕಿಲೋಗ್ರಾಂ ಗುಲಾಬಿ ಹೂವಿನಿಂದ ೨೫ ಗ್ರಾಂ. ಎಣ್ಣೆ ಪಡೆಯಬಹುದು. ಹಿಂದಿನ ಕಾಲದಲ್ಲಿ ಬಳಸುತ್ತಿದ್ದ ಹೆಚ್ಚಿನ ಸುಗಂಧಗಳು ಎಣ್ಣೆಯ ಮಾಧ್ಯಮದಲ್ಲಿ ದೊರೆಯುತ್ತಿದ್ದವು. ಗಂಧದೆಣ್ಣೆ ನಮಗೆ ಚಿರಪರಿಚಿತ. ಸುಗಂಧದೆಣ್ಣೆಗಳನ್ನು ಅನೇಕ ನಿಂಬೆಜಾತಿಯ ಹಣ್ಣಿನ ಸಿಪ್ಪೆಯಿಂದಲೂ, ನಿಂಬೆ ಹುಲ್ಲಿನಿಂದಲೂ ಪಡೆಯಬಹುದು. ಈ ಎಣ್ಣೆಗಳು ನೀರಿನೊಟ್ಟಿಗೆ ಬೆರೆಯುವುದಿಲ್ಲ. ನಿಮ್ಮ ಕರವಸ್ತ್ರಕ್ಕೆ ಗಂಧದೆಣ್ಣೆಯ ಒಂದು ತೊಟ್ಟನ್ನು ಹಾಕಿ ಹತ್ತು ಸಲ ಒಗೆದರೂ ಸುವಾಸನೆ ಪೂರ್ಣ ನಾಶವಾಗುವುದಿಲ್ಲ. ಈಚೆಗೆ ರಾಸಾಯನಿಕ ಕಾರ್ಖಾನೆಗಳಲ್ಲಿ ತಯಾರಾಗಿ ಮಾರುಕಟ್ಟೆ ಸೇರುವ ಅನೇಕ ಸುಗಂಧ ದ್ರವ್ಯಗಳನ್ನು ಆಲ್ಕೋಹಾಲಿನಲ್ಲಿ ಕರಗಿಸಿರುತ್ತಾರೆ. ಆಲ್ಕೋಹಾಲ್ ಎಣ್ಣೆಯಲ್ಲ, ಅಮಲು ಬರಿಸುವ ಮದ್ಯದ ಸಾರ. ಇದು ಸುಲಭವಾಗಿ ಆವಿಯಾಗಬಲ್ಲದು. ನೀರಿನೊಡನೆ ಬೆರೆಯುತ್ತದೆ. ಆಲ್ಕೋಹಾಲಿನಲ್ಲಿ ಕರಗಿಸಿದ ಸುಗಂಧಗಳನ್ನು ಪೂಸಿಕೊಂಡಾಗ ತೀವ್ರ ವಾಸನೆ ಸೂಸಿದರೂ ದಿನವಿಡೀ ನಿಲ್ಲಲಾರದು. ಆದರೆ, ಹೆಂಗಳೆಯರು ತಮ್ಮ ಜಂಬದ ಚೀಲದಲ್ಲಿ ಇಂತಹ ಬಾಟಲಿಗಳನ್ನಿಟ್ಟುಕೊಂಡು ಆಗಿಂದಾಗ್ಗೆ ಪೂಸಿಕೊಳ್ಳುತ್ತಿರಬಹುದು, ಕೆಲವರು ಕುಪ್ಪತಕಾಲಗಳಲ್ಲಿ ತುಟಿಗೆ ರಂಗೇರಿಸಿಕೊಳ್ಳುವಂತೆ.

'ಕಲೋನ್' ಎಂದು ಕರೆಸಿಕೊಳ್ಳುವ ಆಲ್ಕೋಹಾಲ್ ಆಧಾರಿತ ಸುಗಂಧಗಳ ವ್ಯಾಪಾರ, ಮುನ್ನೂರು ವರ್ಷಗಳ ಹಿಂದೆ ಪ್ರಾರಂಭವಾಗಿ, ಹೆಚ್ಚುತ್ತಲೇ ಬರುತ್ತಿದೆ. ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿ ಫ್ರಾನ್ಸಿನ ಜನ ಬಹಳ ಹೆಸರು ಗಳಿಸಿದವರು. ಈ ಸಮಾಜದ ಘ್ರಾಣ ಪಂಡಿತರು ಪರಿಮಳವನ್ನು ಮೂರು ಗುಂಪುಗಳನ್ನಾಗಿ ವಿಂಗಡಿಸುತ್ತಾರೆ. ಮೊದಲನೆಯ ಗುಂಪಿನವು ಮೂಗಿನಿಂದ ನೇರವಾಗಿ ತಲೆಗೆ ಏರಿ ನಾಗಾಲೋಟದ 'ತೀವ್ರ' ಅನುಭವ ನೀಡುವಂಥವು. ಇನ್ನು ಕೆಲವು ಸಂಜೆಯ ತಂಪಿನಲ್ಲಿ ಕೇಳಿಸಿಯೂ ಕೇಳಿಸದಂತೆ ಮುದ ನೀಡುವ, ದೂರದಲ್ಲೆಲ್ಲೋ ಹಾಡಿದ ಇಂಪಿನ ದನಿಯಂತೆ 'ಮಂದ'. ಇನ್ನು ಕೆಲವು ಆ ತುದಿಯೂ ಅಲ್ಲದ, ಈ ತುದಿಯೂ ಅಲ್ಲದ 'ಮಧ್ಯಮ'. ಒಳ್ಳೆಯ ಪರಿಮಳ ಎನ್ನಿಸಿಕೊಳ್ಳಬೇಕಾದರೆ, ಬಾಟಲಿ ತೆಗೆಯುತ್ತಿದ್ದಂತೇ ಮೂಗಿಗೆ ಆಗುವ ಅನುಭವ, ವಾಸನೆ ಅಂಟಿದ ನಂತರ ಅದು ಒಳಗೇ ಉಳಿದು ಆಗಿಂದಾಗ್ಗೆ ಜ್ಞಾಪಿಸುವ ಪರಿ ಇವೆಲ್ಲವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಇಂತಹ 'ಕಲೋನ್' ತಯಾರಿಸುವ ದೈತ್ಯ ಕಂಪೆನಿಗಳು ಶನೇಲ್, ಕೋಟಿ, ಗೆರ್ಲನ್, ಹೆಲೆನ ರೂಬಿನ್‌ಸ್ಟೈನ್, ಏವೋನ್ ಮುಂತಾದವು. ಈ ಎಲ್ಲ ಕಂಪೆನಿಗಳೂ ಪಾಶ್ಚಿಮಾತ್ಯ ದೇಶಗಳಲ್ಲಿ ಎಷ್ಟು ವ್ಯಾಪಾರ ಮಾಡಬಹುದೋ ಅಷ್ಟನ್ನೂ ಮಾಡುತ್ತಿವೆ. ಅಲ್ಲಿಯ ಎಲ್ಲ ಹೆಂಗಳೆಯರಿಗೂ ಹುಚ್ಚು ಹಿಡಿಸಿಯಾಗಿದೆ. ಇನ್ನು ತಮ್ಮ ಕಾರ್ಯಕ್ಷೇತ್ರ ಹೆಚ್ಚಿಸಿಕೊಳ್ಳಲು ಅವು ನಮ್ಮ ದೇಶದಂಥ ಬಡ, ತೃತೀಯ ಜಗತ್ತಿನ ದೇಶಗಳಿಗೆ ಲಗ್ಗೆಯಿಕ್ಕಬೇಕು. ಇದಕ್ಕೆ ಅತಿ ಸೂಕ್ತ ಉಪಾಯ ಎಂದರೆ, ನಮ್ಮ ತರುಣಿಯರಲ್ಲಿ ಒಬ್ಬಳನ್ನು ವಿಶ್ವಸುಂದರಿಯನ್ನಾಗಿ ಆಯ್ಕೆ ಮಾಡುವುದು, ಅವಳನ್ನು ಸೆಂಟಿನ, ಇತರ ಶೃಂಗಾರ ಸಾಮಗ್ರಿಗಳ ಹೊಳೆಯಲ್ಲಿ ಮುಳುಗಿಸುವುದು ! ಇದರ ಗೀಳು ಜನರಿಗೆ ಅಂಟಿ ತಮ್ಮ ಹಣವನ್ನು ಮೂಗಿನ ತೃಪ್ತಿಗಾಗಿ ಬಳಸುವಂತೆ ಅವರನ್ನು ಪ್ರಚೋದಿಸಲು ಹಣದ ಹೊಳೆಯನ್ನೇ ಹರಿಸುವುದು. ನಮ್ಮಲ್ಲೂ ಇತ್ತೀಚೆಗೆ ಸುಗಂಧ ದ್ರವ್ಯಗಳ ಬಳಕೆ ವ್ಯಾಪಕವಾಗಿ ಬೆಳೆಯುತ್ತಿದೆ. ನಮ್ಮ ದೇಶದ ಉದಾರ ಆಮದು ನೀತಿಯಿಂದಾಗಿ ದೇಶದ ಎಲ್ಲೆಡೆ ಹೊರದೇಶಗಳ ಸೆಂಟುಗಳು ಕಾಣಸುತ್ತಿವೆ. ಇವುಗಳಲ್ಲಿ ಒಂದು ಭಾಗ ಅಲ್ಲಿಯ ಬಾಟಲಿಗಳಿಗೆ ಇಲ್ಲಿಯ ಸೆಂಟನ್ನು ತುಂಬಿರುವುದು ಎನ್ನುವ ಮಾತು ಬೇರೆ ಬಿಡಿ.

ಮೂಗು ನಾಲಿಗೆಗಿಂತ ಅತಿ ಚತುರ ಎಂಬುದು ನಮ್ಮೆಲ್ಲರಿಗೂ ತಿಳಿದೇ ಇರುವ ವಿಷಯ. ಹಿಂದಿನ ಕಾಲದಲ್ಲಿ, ಎಲ್ಲ ಕಾಯಿಲೆಗಳಿಗೂ ಕಹಿ ಔಷಧ ಕೊಡುವ ಪದ್ಧತಿಯನ್ನು ವೈದ್ಯರು ರೂಢಿಸಿಕೊಂಡಿದ್ದರು. ಅಮ್ಮನ ಬಲಾತ್ಕಾರಕ್ಕೆ ಕಹಿ ಔಷಧವನ್ನು ಕುಡಿಯಲೇಬೇಕಾದಾಗ, ಮೂಗು ಮುಚ್ಚಿಕೊಂಡು ಕುಡಿಯುತ್ತಿದ್ದುದು ಹೆಚ್ಚಿನ ಹಿರಿಯರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿರುವ ಸಂಗತಿ. ನಮಗೆಲ್ಲಾ ಬರಿಯ ಮಾವಿನಕಾಯಿ ಉಪ್ಪಿನಕಾಯಿಯಾದರೆ ಸಾಲದು. ಅದು ಅಪ್ಪೆ ಮಿಡಿಯೇ ಆಗಿರಬೇಕು. ಈ ಮಿಡಿ ತೃಪ್ತಿಪಡಿಸುವುದು ನಮ್ಮ ಮೂಗನ್ನೇ ಹೊರತು ನಾಲಿಗೆಯನ್ನಲ್ಲ. ನಾಲಿಗೆಗೆ ನಾಲ್ಕಾರು ರುಚಿಗಿಂತ ಹೆಚ್ಚೇನೂ ತಿಳಿದಿಲ್ಲ. ಆದರೆ ನಮ್ಮ ಘ್ರಾಣಶಕ್ತಿಯಾದರೋ ಮಿತಿಯಿಲ್ಲದ್ದು.

ನಮ್ಮ ಘ್ರಾಣಶಕ್ತಿ ಇಂದು ನಮಗೆ ಹೆಚ್ಚು ಉಪಯುಕ್ತವಲ್ಲ. ಆದ್ದರಿಂದಲೇ, ಹುಟ್ಟು ಕುರುಡರು ಗುರುತಿಸುವಂತೆ ಘ್ರಾಣಶಕ್ತಿ ಇಲ್ಲದ ಕೆಲ ಜನರೊಂದಿಗೆ ನಿಕಟ ಸಂಬಂಧ ಹೊಂದಿದ್ದರೂ ನಮಗೆ ಸುಲಭವಾಗಿ ಗುರುತಿಸಲಾಗುವುದಿಲ್ಲ. ಡಾರ್ವಿನ್ನನ ವಿಕಾಸವಾದದ ಪ್ರಕಾರ, ನಮಗೆ ಅಗತ್ಯವಿಲ್ಲದ ಗುಣಗಳು ಕಾಲಕ್ರಮದಲ್ಲಿ (ಎಂದರೆ ಲಕ್ಷಾಂತರ ವರ್ಷಗಳಲ್ಲಿ) ನಶಿಸುತ್ತವೆ. ಆದ್ದರಿಂದ ಇಷ್ಟು ಪ್ರಬಲ ಘ್ರಾಣಶಕ್ತಿಯಿರಬೇಕಾದರೆ ಅದು ಹಿಂದೊಮ್ಮೆ ನಮಗೆ ಬಹಳ ಅಗತ್ಯವಾಗಿದ್ದಿರಬೇಕು. ಕಾಡು ಪ್ರಾಣಿಗಳು ಬದುಕುಳಿಯಲು ಘ್ರಾಣಶಕ್ತಿಯನ್ನೇ ನೆಚ್ಚುತ್ತವೆ. ಮಾಂಸಾಹಾರಿ ಪ್ರಾಣಿಗಳು ವಾಸನೆಯಿಂದಲೇ ತಮ್ಮ ಬೇಟೆಯನ್ನು ಗುರುತಿಸುತ್ತವೆ. ಕೆಲವು ಪ್ರಾಣಿಗಳು ಕೊಳೆಯುವ ಮಾಂಸದ ಜಾಡನ್ನೇ ಹಿಡಿದು ತಮ್ಮ ಆಹಾರ ಗಿಟ್ಟಿಸಿಕೊಳ್ಳುತ್ತವೆ. ಈ ಕಾಡು ಪ್ರಾಣಿಗಳ ಪರಿಸರದಲ್ಲಿ ಬದುಕುತ್ತಿದ್ದ ಕಾಲದಲ್ಲಿ, ನಮ್ಮ ಮೂಗಿಗೂ ಬಹಳ ಜವಾಬ್ದಾರಿ ಇದ್ದಿರಬೇಕು. ನಮ್ಮ ಪ್ರಾಣ ಮೂಗಿನ ಕೈಯಲ್ಲೇ ಇದ್ದಿರಬೇಕು. ಆ ಪರಿಸರದಲ್ಲಿ ಮೂಗು ಬಲಿಷ್ಠವಾಗಿ ಬೆಳೆದಿರಬಹುದು. ಈಗ ಅಷ್ಟೇನೂ ಅಗತ್ಯವಿಲ್ಲದಿದ್ದರೂ, ಆ ಹಳೆಯ ವಾಸನೆ ಇನ್ನೂ ಹೋಗಿಲ್ಲ.

ನಾವು ನಮ್ಮ ಘ್ರಾಣಶಕ್ತಿಯನ್ನು ಉದಾಸೀನ ಮಾಡಿದ್ದರೂ, ಪ್ರಾಣಿ ಪ್ರಪಂಚ ಇದನ್ನು ಅನೇಕ ಬಗೆಯಲ್ಲಿ ಬಳಸಿಕೊಳ್ಳುತ್ತದೆ. ಇರುವೆಗಳು ಗೂಡಿನಿಂದ ಹೊರಬಂದು ಆಹಾರ ಅರಸಿ ಅಡ್ಡಾಡುತ್ತವೆ. ಆಹಾರ ದೊರೆತ ನಂತರ ಗೂಡಿಗೆ ಮರಳಲು ಸಾಧ್ಯವಾಗುವಂತೆ ದಾರಿಯುದ್ದಕ್ಕೂ ತಮ್ಮದೇ ವಾಸನೆ ಸುರಿಸುತ್ತಾ ಚಲಿಸುತ್ತವೆ. ಅದೇ ವಾಸನೆಯ ಹಾದಿಯಲ್ಲಿ ಇತರ ಇರುವೆಗಳೂ ಆಹಾರದ ತಾಣಕ್ಕೆ ತಲುಪುವಲ್ಲಿ



ಯಶಸ್ವಿಯಾಗುತ್ತವೆ. ಗಂಡು ಕೀಟಗಳನ್ನು ತಮ್ಮೆಡೆ ಆಕರ್ಷಿಸಲು ಹೆಣ್ಣು ಕೀಟಗಳು 'ಫೆರಮೋನ್' ಎಂಬ ಸುವಾಸನೆಯನ್ನು ಸೂಸುತ್ತವೆ. ಗಂಡು ಕೀಟ ಈ ವಾಸನೆಯನ್ನು ಗುರುತಿಸುವುದರಲ್ಲಿ ಅಪ್ರತಿಮ ಚಾತುರ್ಯ ಪ್ರದರ್ಶಿಸುತ್ತದೆ. ಒಂದು ಹೆಣ್ಣು ಕೀಟ ಸುರಿಸುವ ಫೆರಮೋನ್ ಅದರ ಸುತ್ತಲಿನ ನೂರಾರು ಮೀಟರುಗಳಲ್ಲಿರುವ ಎಲ್ಲ ಗಂಡುಗಳಿಗೆ ಸಂದೇಶ ಮುಟ್ಟಿಸಬಲ್ಲದು. ಕೆಲವು ಮಾಂಸಾಹಾರಿ ಪ್ರಾಣಿಗಳು ಒಂಟಿಯಾಗಿ ಜೀವಿಸಬೇಕಾಗುತ್ತದೆ. ಹಲವಾರು ಪ್ರಾಣಿಗಳು ಕಾಡಿನ ಒಂದೇ ಭಾಗದಲ್ಲಿ ಬೀಡುಬಿಟ್ಟರೆ, ಯಾವುದಕ್ಕೂ ಹೊಟ್ಟೆ ತುಂಬ ಆಹಾರ ದಕ್ಕಲಾರದು. ಇಂತಹ ಸಮಯದಲ್ಲಿ ಸುಮ್ಮನೆ ಕಿತ್ತಾಡಿ ಪರಸ್ಪರ ಜೀವಹಾನಿ ಮಾಡಿಕೊಳ್ಳುವುದನ್ನು ತಪ್ಪಿಸಲು ವಾಸನೆಯನ್ನೇ ಸಂಕೇತವಾಗಿ ಬಳಸುತ್ತವೆ. ತಮ್ಮದಾಗಿಸಿ ಕೊಳ್ಳಬೇಕಾದ ಪ್ರದೇಶದಲ್ಲಿ ಅಲ್ಲಲ್ಲಿ ಮೂತ್ರವನ್ನೋ ಮಲವನ್ನೋ ವಿಸರ್ಜಿಸಿ, ಅದರ ವಾಸನೆಯನ್ನೇ ತಮ್ಮ ಮಾಲಿಕತ್ವದ ಕುರುಹಾಗಿ ಸ್ಥಾಪಿಸುತ್ತವೆ. ನಾಯಿ ಕಂಡಕಂಡಲ್ಲಿ ಮೂತ್ರಿಸುವುದೂ ಈ ಕಾರಣಕ್ಕಾಗಿಯೇ. ಆದರೆ ನಮ್ಮ ಸಮಾಜದೊಡನೆ ಕೂಡಿ ಬದುಕಲು ಕಲಿತ ನಾಯಿಗೆ ಇದು ಹಳೆಯ ಮರೆಯಲಾರದ ಚಟವೇ ವಿನಹ ಬದುಕುಳಿಯಲು ಬೇಕಾದ ಉಪಾಯವಾಗಿ ಉಳಿದಿಲ್ಲ, ನಮ್ಮ ಘ್ರಾಣಶಕ್ತಿಯಂತೆ.

ನಮಗೆ ವಾಸನೆ ತಿಳಿಯಬೇಕಾದರೆ, ವಾಸನೆಯಿರುವ ಧಾತು ಅನಿಲದ ರೂಪದಲ್ಲಿ ನಮ್ಮ ಮೂಗಿನೊಳಗಿನ ಮೇಲ್ಭಾಗವನ್ನು ತಲುಪಬೇಕು. ಮೂಗಿನ ಈ ಭಾಗದಲ್ಲಿ ವಾಸನೆಯನ್ನು ಗ್ರಹಿಸುವ ಕೋಶಗಳಿರುತ್ತವೆ. ಅನಿಲದಲ್ಲಿರುವ ಅಣುಗಳು ಕೋಶ ತಲುಪಿದಾಗ, ಮೆದುಳಿಗೆ ಸಂದೇಶ ಹರಿಯುತ್ತದೆ. ವಾಸನೆಯ ಅನುಭವ ನಮಗಾಗುತ್ತದೆ. ಆದರೆ, ಈ ಸಂದೇಶ ಹೇಗೆ ಪ್ರಾರಂಭವಾಗುತ್ತದೆ ಎನ್ನುವುದರ ಬಗ್ಗೆ ವೈಜ್ಞಾನಿಕ ಪರೀಕ್ಷೆಗಳನ್ನು ನಡೆಸಲು ಅಗತ್ಯವಾಗಿ ಬೇಕಾದ ಪ್ರಾಯೋಗಿಕ ಸಲಕರಣೆಗಳು ಕಳೆದ ದಶಕದಲ್ಲಷ್ಟೇ ಲಭ್ಯವಾಗಿವೆ.

ಲಿಪಿಡ್ ಅಣುಗಳಿಂದ ರಚಿತವಾದ ಪ್ಲಾಸ್ಮಾ ಪೊರೆಗಳು ಪ್ರಾಣಿಗಳ ಎಲ್ಲ ಜೀವಕೋಶಗಳನ್ನೂ ಕೋಟೆಗಳಂತೆ ಸುತ್ತುವರೆದು ಹೊರ ಪರಿಸರದಿಂದ ಪ್ರತ್ಯೇಕಿಸುತ್ತವೆ. ನಮ್ಮ ಮೂಗಿನ ಘ್ರಾಣೇಂದ್ರಿಯ ಗಳಲ್ಲಿರುವ ಕೋಶಗಳೂ ಹೀಗೆಯೇ ಪ್ಲಾಸ್ಮಾ ಪೊರೆಯಿಂದ ಆವೃತವಾಗಿವೆ. ಈ ಪೊರೆಯನ್ನು ಹೆಚ್ಚಿನ ಅಣುಗಳು ದಾಟಲಾರವು. ನಮಗೆ ವಾಸನೆಯ ಅನುಭವ ನೀಡುವ ಅಣುಗಳೂ ಘ್ರಾಣೇಂದ್ರಿಯ ಕೋಶಗಳ ಒಳಗೆ ಬರಲಾರವು. ಆದ್ದರಿಂದ ಈ ಅಣುಗಳು ನೇರವಾಗಿ ತಮ್ಮ ಪ್ರಭಾವವನ್ನು ಬೀರುವುದು ಸಾಧ್ಯವಿಲ್ಲ.

ನಮ್ಮ ಮನೆಗಳಲ್ಲಿ, ಹೊರಗಿಂದ ಬಂದ ಜನ ತಾವು ಬಂದಿದ್ದೇವೆಂದು ತಿಳಿಸಲು ವಿದ್ಯುತ್ ಗುಂಡಿಯನ್ನು ಅಮುಕುತ್ತಾರೆ. ಮನೆಯ ಒಳಗೆ ವಿದ್ಯುತ್ ಗಂಟೆ ಬಾರಿಸಿ, ಅತಿಥಿಗಳ ಆಗಮನವನ್ನು ಸಾರುತ್ತದೆ. ಇದೇ ರೀತಿ, ನಮಗೆ ವಾಸನೆಯ ಅನುಭವ ಕೊಡುವ ಅಣುಗಳು ಕೂಡಾ ಜೀವಕೋಶದ ಒಳಕ್ಕೆ ಸಂದೇಶ ಕಳುಹಿಸಬಲ್ಲವು. ಜೀವಕೋಶದ ಒಳಗಿನಿಂದ ಹೊರಗಿನವರೆಗೆ ಚಾಚಿಕೊಂಡಿರುವ ದೈತ್ಯಾಕಾರದ ಪ್ರೋಟೀನ್ ಅಣುಗಳು ಘ್ರಾಣೇಂದ್ರಿಯ ಕೋಶಗಳ ಪ್ಲಾಸ್ಮಾ ಪೊರೆಗೆ ಅಂಟಿಕೊಂಡಿರುತ್ತವೆ. ಇಂತಹ ಪ್ರೋಟೀನುಗಳ ಜೀವಕೋಶದಿಂದ ಹೊರಗೆ ಚಾಚಿರುವ ಭಾಗಕ್ಕೆ ಅನಿಲ ರೂಪದಲ್ಲಿ ಬಂದ ಅಣು ಅಂಟಿಕೊಂಡರೆ, ಅಂಟಿಕೊಂಡ ಘಟನೆಯ ಸಂದೇಶ ಪ್ರೋಟೀನ್ ಅಣುವಿನ ಮೂಲಕ ಜೀವಕೋಶದ ಒಳಕ್ಕೆ ತಲುಪುತ್ತದೆ. ಜೀವಕೋಶದ ಒಳಗೆ, G ಪ್ರೋಟೀನ್ ಎನ್ನುವ ಇನ್ನೊಂದು ಅಣು ಪ್ಲಾಸ್ಮಾ ಪೊರೆಯಲ್ಲಿರುವ ಪ್ರೋಟೀನಿನ ಜೀವಕೋಶದ ಒಳಗಿರುವ ಭಾಗಕ್ಕೆ ಅಂಟಿಕೊಂಡಿರುತ್ತದೆ. ಸಾಧಾರಣವಾಗಿ G ಪ್ರೋಟೀನಿಗೆ GDP ಎಂಬ ಸಣ್ಣ ಅಣು ಅಂಟಿಕೊಂಡಿರುತ್ತದೆ. ಹೊರಗೆ ಅಣು ಅಂಟಿಕೊಂಡೊಡನೆ, G ಪ್ರೋಟೀನ್ GDP ಅಣುವನ್ನು ಕಳಚಿಕೊಂಡು, GTP ಎಂಬ ಇನ್ನೊಂದು ಅಣುವಿಗೆ ಅಂಟಿಕೊಳ್ಳುತ್ತದೆ. GTP ಧರಿಸಿದೊಡನೇ, G ಪ್ರೋಟೀನ್ ಕಾರ್ಯಶೀಲವಾಗಿ, ತಾನು ಅಂಟಿ ಕೊಂಡಿದ್ದ ಪ್ಲಾಸ್ಮಾ ಪೊರೆಯ ಪ್ರೋಟೀನನ್ನು ತ್ಯಜಿಸಿ, ಜೀವಕೋಶದ ಒಳಗಿರುವ ಅನೇಕ ಅಣುಗಳನ್ನು ಪ್ರಚೋದಿಸಲು ಪ್ರಾರಂಭಿಸುತ್ತದೆ. ಇದರಿಂದ ಚಟುವಟಿಕೆಯ ಸರಪಣಿಯೇ ಪ್ರಾರಂಭವಾಗಿ ನರಕೋಶಗಳ ಮುಖಾಂತರ ಮೆದುಳಿಗೆ ಸಂದೇಶ ರವಾನಿಸಲ್ಪಡುತ್ತದೆ. ಅಲ್ಪಕಾಲದಲ್ಲಿಯೇ, G ಪ್ರೋಟೀನ್ GTP ಅಣುವನ್ನು ಕಳೆದುಕೊಂಡು, ಪುನಃ GDP ಅಣುವಿಗೇ ಅಂಟಿಕೊಂಡು ತನ್ನ ಸ್ವಸ್ಥಾನವಾದ ಪ್ಲಾಸ್ಮಾ ಪೊರೆಯಲ್ಲಿರುವ ಪ್ರೋಟೀನ್ ಅಣುವಿಗೆ ಅಂಟಿಕೊಳ್ಳುತ್ತದೆ. ಮುಂದಿನ ಸಂದೇಶಕ್ಕಾಗಿ ಕಾಯುತ್ತದೆ. ಇಂತಹ ಅತಿ ಸೂಕ್ಷ್ಮ ಅಣು ಕಾರ್ಯಗಳನ್ನು ಪರೀಕ್ಷಿಸಲು 'ಪಾಚ್ ಕ್ಲಾಂಪ್' ಎಂಬ ಸಲಕರಣೆ ಇತ್ತೀಚೆಗಷ್ಟೇ ಲಭ್ಯವಾಗಿದೆ. ಆದ್ದರಿಂದಲೇ ಈ ಬಗ್ಗೆ ಸಂಶೋಧನೆಗಳು ಕಳೆದ ದಶಕದಲ್ಲಷ್ಟೇ ನಡೆದಿವೆ.

ನಮ್ಮ ಮೂಗಿಗೆ ವಾಸನೆ ಕೊಡುವ ಎಲ್ಲ ಅಣುಗಳೂ ಪ್ಲಾಸ್ಮಾ ಪೊರೆಯಲ್ಲಿರುವ ಪ್ರೋಟೀನ್ ಅಣುಗಳಿಗೆ ಅಂಟಿಕೊಳ್ಳುವ ಸ್ವಭಾವ ಹೊಂದಿರಬೇಕು. ಅಂಟಿಕೊಳ್ಳಲು ಅವುಗಳ ರಚನೆ, ಪ್ಲಾಸ್ಮಾ ಪೊರೆಯಲ್ಲಿ ಹೂತಿರುವ ಪ್ರೋಟೀನಿನ ಹೊರಭಾಗಕ್ಕೆ ಪೂರಕವಾಗಿ ಹೊಂದಿಕೊಳ್ಳುವಂತಿರಬೇಕು. ಅಂತಹ ಅಣುರಚನೆಯುಳ್ಳ ವಸ್ತುಗಳಿಗೆ ಮಾತ್ರ ವಾಸನೆ ಇರುವುದು ಸಾಧ್ಯ. ನಮ್ಮ ಘ್ರಾಣೇಂದ್ರಿಯದ ಜೀವಕೋಶಗಳಲ್ಲಿ ಸುಮಾರು ನೂರು ಬೇರೆ ಬೇರೆ ಬಗೆಯ ಪ್ರೋಟೀನ್ ಅಣುಗಳು ಪೊರೆಗೆ ಅಂಟಿಕೊಂಡಿರುತ್ತವೆ. ಆದ್ದರಿಂದ, ನೂರು ಬಗೆಯ ಅಣುಗಳು ನಮಗೆ ವಾಸನೆಯ ಅನುಭವ ಕೊಡಬಲ್ಲವು. ಇದರಿಂದ ನಮಗೆ ಬರಿಯ ನೂರು ವಾಸನೆಗಳನ್ನು ತಿಳಿಯುವ ಶಕ್ತಿ ಇದೆಯೆಂದು ತೀರ್ಮಾನಿಸಬಾರದು. ಬರಿಯ ಕೆಂಪು, ಹಸಿರು, ನೀಲಿ ಮೂರು ಬಣ್ಣಗಳನ್ನು ಮಿಶ್ರಮಾಡಿ ನೂರಾರು ಬಣ್ಣಗಳನ್ನು ತಯಾರಿಸಲು ಸಾಧ್ಯವಿರುವಂತೆ, ನಮ್ಮ ಮೆದುಳು ನೂರು ಅಣುಗಳನ್ನು ಗುರುತಿಸುವುದಲ್ಲದೆ, ಆ ಅಣುಗಳ ಮಿಶ್ರಣಗಳನ್ನು ಬೇರೆ ಬೇರೆಯಾಗಿ ಗುರುತಿಸಿ ನಮಗೆ ಲಕ್ಷಾಂತರ ವಾಸನೆಗಳ ಅನುಭವವನ್ನು ನೀಡುತ್ತದೆ.

ಕಂಪು ನೀಡುವ ಅಣುಗಳು ಸುಲಭವಾಗಿ ಅನಿಲ ರೂಪಕ್ಕೆ ತಿರುಗುವ ಸ್ವಭಾವ ಪಡೆದಿರುತ್ತವೆ. ಈ ಎಲ್ಲ ಅಣುಗಳೂ ಗಾತ್ರದಲ್ಲಿ ಸಣ್ಣವು. ೩೦ರಿಂದ ೫೦ ಪರಮಾಣುಗಳ ರಾಸಾಯನಿಕ ಬಂಧದಿಂದ ಕೂಡಿರುತ್ತವೆ. ಗಂಧದೆಣ್ಣೆಯಲ್ಲಿ ಸುಮಾರು ೫೦ ಬಗೆಯ ಕಂಪು ನೀಡುವ ಅಣುಗಳಿರುತ್ತವೆ. ಈ ಅಣುಗಳನ್ನೆಲ್ಲಾ ಬೇರ್ಪಡಿಸಿ, ಅವುಗಳಲ್ಲಿ ಸುವಾಸನೆಯಿರುವ ಅಣುಗಳನ್ನು ಗುರುತಿಸುವ ರಾಸಾಯನಿಕ ಮಾರ್ಗಗಳಿವೆ. ಈ ಅಣುಗಳ ರಚನೆಯನ್ನು ನಿರ್ಧರಿಸಲು ರಕ್ತಾತೀತ, ನೇರಳಾತೀತ ವರ್ಣಮಾಪನ (infra red and ultraviolet spectroscopy), ಅಣುಕೇಂದ್ರ ಅಯಸ್ಕಾಂತೀಯ ಸಹಸ್ಪಂದನ ವರ್ಣಮಾಪನ (nuclear magnetic resonance spectroscopy), ಕ್ಷ-ಕಿರಣ ಸ್ಫಟಿಕ ತಂತ್ರ (X-ray crystallography) ಮುಂತಾದ ತಂತ್ರಗಳಿವೆ. ಇಂತಹ ಪ್ರಯೋಗಗಳಿಂದ ಮೊದಲು ನಾವು ಪ್ರಕೃತಿಯಿಂದ ಪಡೆಯುತ್ತಿದ್ದ ಅನೇಕ ಬಗೆಯ ಸುವಾಸಿತ ದ್ರವ್ಯಗಳನ್ನು ರಾಸಾಯನಿಕ ಸಂಶ್ಲೇಷಣೆ ಯಿಂದ ಪಡೆಯಬಹುದಾಗಿದೆ. ಇನ್ನು ಮುಂದೆ ಘ್ರಾಣೇಂದ್ರಿಯದ ಮೇಲೆ ನಡೆಸುವ ವೈಜ್ಞಾನಿಕ ಸಂಶೋಧನೆಗಳ ಫಲವಾಗಿ ನಮ್ಮ ಮನಸ್ಸಿಗೆ ಆಹ್ಲಾದ ಕೊಡುವ ಗುಣವುಳ್ಳ ಹೊಸಬಗೆಯ ಸುಗಂಧಗಳು ದೊರೆಯಬಹುದು. ಇದರಿಂದ ಈಗಾಗಲೇ ವರ್ಷಂಪ್ರತಿ ಕೋಟ್ಯಾಂತರ ಡಾಲರುಗಳ ಲಾಭ ಗಳಿಸುತ್ತಿರುವ ಸಂಸ್ಥೆಗಳು ಇನ್ನೂ ಹೆಚ್ಚಿನ ಲಾಭ ಪಡೆಯುವುವು.

ಎಂ. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೧೨

## ಕ್ಷಮೆ

ಸರ್ವಾಧಿಕಾರಿಯೊಬ್ಬ ಕೊನೆಯುಸಿರೆಳೆಯುತ್ತಿದ್ದ.

ಪಾದ್ರಿ ಅವನನ್ನು ಕೇಳಿದ : ''ನಿನ್ನೆಲ್ಲಾ ಶತ್ರುಗಳನ್ನು ಕ್ಷಮಿಸುವೆಯಾ ?''

''ನನಗೆ ಶತ್ರುಗಳಾರೂ ಇಲ್ಲ'' ಉತ್ತರಿಸಿದ ಸರ್ವಾಧಿಕಾರಿ.

''ಅದು ಹೇಗೆ ?'' ಕೇಳಿದ ಪಾದ್ರಿ.

''ಅವರನ್ನೆಲ್ಲಾ ಗುಂಡು ಹೊಡೆದು ಮುಗಿಸಿದ್ದೇನೆ'' ಉತ್ತರಿಸಿದ ಸರ್ವಾಧಿಕಾರಿ.



# ಶಬ್ದಮಾಲಿನ್ಯ

ಪರಿಸರವಾದಿಗಳು ಈಗಾಗಲೇ ಪರಿಸರ ಮಾಲಿನ್ಯಕ್ಕೆ ಸಂಬಂಧಿಸಿದ ವೃಕ್ಷನಾಶ, ಜಲರಸಾಯನ, ವನ್ಯಪ್ರಾಣಿಗಳ ವಿನಾಶ, ಹುಳಿ ಮಳೆ, ಕಾಡಿನ ಒತ್ತುವರಿ, ಬೃಹತ್ ಸರೋವರ ಯೋಜನೆ ಮೊದಲಾದ ಹತ್ತಾರು ಅಂಶಗಳನ್ನು ಚರ್ಚಿಸಿದ್ದಾರೆ. ಅಲ್ಲದೆ ಶಬ್ದಮಾಲಿನ್ಯದ ಬಗೆಗೂ ಅವರು ಸಾಕಷ್ಟು ಚಿಂತಿಸಿದ್ದಾರೆ.

ಆದರೆ ಶಬ್ದಮಾಲಿನ್ಯದ ಒಂದೇ ಮುಖ ಅವರಿಗೆ ಕಂಡಿದೆ. ಅದೆಂದರೆ ವಾಹನ ಸಂಚಾರದಲ್ಲಿ ವಾಹನಗಳ ಗಡಚಿಕ್ಕುವ ಶಬ್ದ ಮತ್ತು ಹಾರನ್‌ಗಳ ಅವಾಂತರ. ನಮ್ಮ ಸುತ್ತ ಇರುವ ಶಬ್ದಮಾಲಿನ್ಯಗಳ ಬಗೆಗೆ ನಾನು ಸ್ವಲ್ಪ ತಲೆಕೆಡಿಸಿಕೊಂಡಿದ್ದೇನೆ. ಈ ಶಬ್ದಮಾಲಿನ್ಯ ಹಲವು ಬಗೆಯವು. ಒಂದು ನಮ್ಮ ಹಳ್ಳಿಗಳಲ್ಲಿ ಅನಗತ್ಯವಾದ ಪೋಲಿ ಶಬ್ದಗಳನ್ನು ಜನ ಬಳಸುವುದು. ನಗರಗಳಲ್ಲಿ ಇದಿಲ್ಲವೆಂದಲ್ಲ. ಆದರೆ ಸ್ವಲ್ಪ ಸುಧಾರಿತ ಆವೃತ್ತಿ ನಗರಗಳಲ್ಲಿ ಪ್ರಚಾರದಲ್ಲಿದೆ. ಈ ಶಬ್ದಗಳು ಅತಿ ಬಳಕೆಯಿಂದ ತಮ್ಮ ವಾಚ್ಯಾರ್ಥವನ್ನು ಕೂಡ ಕಳೆದುಕೊಂಡು ಕ್ಲೀಷೆಗಳಾಗಿಬಿಟ್ಟಿವೆ. ಅವಕ್ಕೆ ಅರ್ಥ ಸಂಪೂರ್ಣವಾಗಿ ಮಾಸಿಹೋಗಿದೆ. ಕುಮಾರವ್ಯಾಸ ಹೇಳುವಂತೆ 'ಮಾತು ಹೊಲಸಿನ ಗಂಧ'ವಾಗಿ ಕೇಳಿಸಿಕೊಳ್ಳುವವರಿಗೆ ದುರ್ನಾತವನ್ನು ಬೀರುತ್ತದೆ. ಪ್ರಪಂಚದ ಎಲ್ಲ ಭಾಷೆಗಳಲ್ಲೂ ಇಂಥ 'ಹಾಲು ತೀರಿದ ಬತ್ತುಗೆಚ್ಚಲಿನ' ಶಬ್ದ ಸುರಧೇನುಗಳು ಮೆರೆದಾಡುತ್ತಿವೆ.

ಎರಡನೆಯ ಶಬ್ದಮಾಲಿನ್ಯ ನಮ್ಮ ಸಾಮಾಜಿಕ ವ್ಯವಹಾರದ ಒಂದು ಸ್ಮಾರಕವಾಗಿ ಬರುತ್ತದೆ. ನಮ್ಮ ಜನಕ್ಕೆ – ನನಗೂ ಸೇರಿ – ಮೆಲ್ಲಗೆ ಮಾತಾಡುವ ಅಭ್ಯಾಸವೇ ಇಲ್ಲ. ಬಸ್ ಸ್ಟಾಪುಗಳಲ್ಲಿ ಪ್ಲಾಟ್ ಫಾರ್ಮ್‌ಗಳಲ್ಲಿ, ಕಚೇರಿಗಳ ಟೀ ಸ್ಟಾಲ್‌ಗಳಲ್ಲಿ, ಪಾರ್ಕು, ಶಾಲೆ ಕಾಲೇಜುಗಳಲ್ಲಿ, ನದೀ, ಸಮುದ್ರ ತೀರಗಳಲ್ಲಿ ಮನೆಮನೆಗಳಲ್ಲಿ ಮಾತು ಅನಾವಶ್ಯಕ ಪ್ರಮಾಣದಲ್ಲಿ ಏರುದನಿಯಲ್ಲಿ ಸಾಗುತ್ತದೆ. ಗಂಡ-ಹೆಂಡಿರ, ತಂದೆ ಮಕ್ಕಳ ನಡುವೆ ನಡೆಯುವ ಜಗಳ ಕೂಡ ಅಕ್ಕಪಕ್ಕದ ನಾಲ್ಕಾರು ಬೀದಿಗಳಿಗೆ ಕೇಳಿಸುವ ರೀತಿಯಲ್ಲಿ ರಾವಣ (=ಧ್ವನಿವರ್ಧಕ) ಸ್ಪರ್ಶವನ್ನು ಪಡೆದಿರುತ್ತದೆ. ಒಂದು ಮಗುವನ್ನು ಗದರಿಸುವಾಗಲೂ ನಮ್ಮ ಶಬ್ದಗಳು ಸಾವಿರ ಮೈಲಿ ವೇಗದಲ್ಲಿ ಗಾಳಿಯನ್ನು ಸೀಳುತ್ತ ಅಬ್ಬರಿಸುತ್ತವೆ. ಇದರ ದುರಂತವೆಂದರೆ ನೀವು ಗಂಟಲನ್ನು ಜೋರುಮಾಡಿದರೆ ಸಂವಾದಕಾರರು ಕಂಠವನ್ನು ಇನ್ನಷ್ಟು ಉಬ್ಬಿಸಿ ಪ್ರತ್ಯುತ್ತರದಲ್ಲಿ 'ಧ್ವನಿಪೂರ್ಣ' ಮಾತುಗಳನ್ನಾಡುತ್ತಾರೆ. ಮಾತು ಕಾವೇರುತ್ತ ಹೋಗಿ ಕೊನೆಗೆ ಸಮುದಾಯಧ್ವನಿಯೂ ಸೇರಿಕೊಂಡು ಅಬ್ಬರವಾಗುತ್ತದೆ. ನಾನು ಎಷ್ಟೋ ಸಲ ಗಮನಿಸಿದ್ದೇನೆ. ಇಷ್ಟು ಗಟ್ಟಿಯಾಗಿ ಮಾತಾಡುವ ಅಗತ್ಯವಿದೆಯೆ? ಮಾತು ನಮ್ಮ ತುಟಿಯಂಚಿನಿಂದ ಬರದೆ ನಮ್ಮ ಎದೆ ಸೀಳಿಕೊಂಡು ಏಕೆ ಬರಬೇಕು? ಕೇಳುವವರ ಕಿವಿಯ ತಮಟೆ ಒಡೆದುಹೋಗುವ ಪ್ರಮಾಣದಲ್ಲಿ ಏಕೆ ಶಬ್ದ ವಾಹನವನ್ನು ನುಗ್ಗಿಸಬೇಕು? ಸರಳವಾಗಿ ಶಾಂತವಾಗಿ ಮೈದಾನದ ಪ್ರದೇಶದಲ್ಲಿ ಹರಿಯುವ ನದಿಯಂತೆ ಮಧುರವಾಗಿ ಜುಳುಜುಳನೆ ಏಕೆ ಹರಿಯಬಾರದು? ರಾಜ ರಸ್ತೆಗಳಲ್ಲಿ ಹೇಗೆ ಸಾಗಬೇಕು, ಸಂದುಗೊಂದುಗಳಲ್ಲಿ ಹೇಗೆ ತೆವಳಬೇಕು, ಇಕ್ಕಟ್ಟಿನ ಬೀದಿಗಳಲ್ಲಿ ಹೇಗೆ ನಿಭಾಯಿಸಬೇಕು, ಹಳ್ಳ-ದಿಣ್ಣೆಗಳಲ್ಲಿ ಯಾವ ಗೇರ್ ಹಾಕ್‌ಬೇಕು ಇಂಥ ಶಬ್ದ ಸಂಚಾರದ ಬಾಲಪಾಠವೂ ನಮಗೆ ಆಗಿಲ್ಲ. ದನಿ ಎತ್ತರಿಸಿದಾಗೆಲ್ಲ ವಿವೇಕದ ರೋಡ್ ಹಂಪ್ ಹಾಕಿಕೊಂಡರೆ ವೇಗವನ್ನು ಇಳಿಸಬಹುದು ಎಂಬ ಸಂಚಾರೀ ನಿಯಮ ಕೂಡ ನಮಗೆ ಗೊತ್ತಿಲ್ಲ. ನಮ್ಮ ಮಾತಿನ ಸಂಚಾರಕ್ಕೆ ಹಸಿರು ಹಳದಿ ಕೆಂಪು ಸೂಚನೆಗಳನ್ನು ಕೊಡುವ, ನಿಲ್ಲಿಸುವ, ಮೆಲ್ಲನೆ ಮುಂದರಿಯುವ, ವೇಗವಾಗಿ ಸಾಗುವ ಶಿಸ್ತನ್ನು ನಮಗೆ ಯಾರೂ ಕಲಿಸಿಲ್ಲ. 'ಮಾತು ಬೆಳ್ಳಿ ಮೌನ ಬಂಗಾರ' ಎಂಬ ಗಾದೆಯನ್ನು ಕೂಡ ನಾವು ಗಹಗಹಿಸಿ ನಕ್ಕು ಭಯಾನಕವಾಗಿ ಚಪ್ಪಾಳೆ ತಟ್ಟಿ ಭೇಷ್ ಭೇಷ್ ಎಂದು ಸ್ವಾಗತಿಸುತ್ತೇವೆ. ಇರುವಲ್ಲಿಂದಲೇ ಕಿರುಚಿಕೊಳ್ಳುವುದು, ದೂರದಲ್ಲಿ ಹೋಗುತ್ತಿರುವವನನ್ನು ಭಾರಿಯ ಚಪ್ಪಾಳೆಯಿಂದ ಹಿಂದಿರುಗಿ ನೋಡುವಂತೆ ಮಾಡುವುದು, ಅವನ ಜೊತೆಗೆ ಆ ಬೀದಿಯಲ್ಲಿ ಹಿಂದೆ ಮುಂದೆ ಹೋಗುತ್ತಿರುವವರೆಲ್ಲ ತಿರುಗಿ ನೋಡುವಂತೆ ಮಾಡುವುದು ನಮಗೆ ಹೆಮ್ಮೆಯ ವಿಷಯವಾಗಿದೆ. ಪಾರ್ಕ್‌ನಂತಹ ನಿಶ್ಶಬ್ದವಾಗಿರಬೇಕಾದ ಸ್ಥಳದಲ್ಲಿ ಕೂಡ ನಮ್ಮ ಮಾತಿನ ಧಾರೆ ಸುತ್ತಮುತ್ತಣ ಪ್ರಶಾಂತಪ್ರಿಯರ ಕೊರಳನ್ನು ಕೊಯ್ಯುತ್ತಿರುತ್ತದೆ. ಈ ಶಬ್ದದ ಅಬ್ಬರ ನಮಗೆ ಎಷ್ಟು ಹಿತವಾಗಿದೆಯೆಂದರೆ ಯಾವುದಾದರೂ ಒಂದು ಶ್ರದ್ಧಾಂಜಲಿ ಸಭೆಗೆ ಹೋಗಿ ನೋಡಬೇಕು. ''ಮೃತರ ಗೌರವಾರ್ಥ ಈಗ ದಯವಿಟ್ಟು ಎಲ್ಲರೂ ಎದ್ದು ನಿಂತು ಒಂದು ನಿಮಿಷ ಮೌನವನ್ನು ಆಚರಿಸಬೇಕು'' ಎಂದು ಸ್ವಾಗತಕಾರನು ಕೋರುತ್ತಾನಷ್ಟೆ. ಜನರೂ ಕೂಡಲೇ ಗೌರವದಿಂದ ಎದ್ದು ನಿಲ್ಲುವುದು ನಿಜ. ಆದರೆ ಆ ಒಂದು ಕಿರು ನಿಮಿಷದ ಬ್ರಹ್ಮಾಂಡ ಅವಧಿಯನ್ನು ಕಳೆಯಲು ಜನಕ್ಕೆ ಸಾಧ್ಯವೇ ಆಗುವುದಿಲ್ಲವಲ್ಲ. ''ಕ್ಷಣವೊಂದು ಯುಗವಾಗಿ'' ಎಂಬ ದಾಸರ ಮಾತು ನಮ್ಮ ಅನುಭವಕ್ಕೆ ಬರುತ್ತದೆ. ಒಳಗೊಳಗೇ ಚಡಪಡಿಸುವ, ಗಡಿಯಾರ ನೋಡುವ, ಶೂನ್ಯವನ್ನು ದೃಷ್ಟಿಸುವ ಆಕಡೆ ಈಕಡೆ ಕಣ್ಣು ಹಾಕುವ ಮೈಚಟುವಟಿಕೆಗಳು ಸಾಮೂಹಿಕವಾಗಿ ಆರಂಭವಾಗುತ್ತವೆ. ಇದಕ್ಕೆಲ್ಲ ಮೂಲ ಕಾರಣ ನಮಗೆ ಮೌನದ, ಕುವೆಂಪು ಹೇಳುವ ಸದ್ದಿಲಿತನದ (ಶಬ್ದ ರಹಿತತೆ) ಓ ನಾಮ ಕೂಡ ಗೊತ್ತಿಲ್ಲ. ಹೃದಯ ಸಂವಾದ ಅಂಗಾಂಗ ಸಂವಾದ ಮೊದಲಾದ

ಅ. ರಾ. ಮಿತ್ರ

ಒಳಸೇತುವೆಗಳಿಂದಲೂ ಅರ್ಥದ ನದಿಯನ್ನು ದಾಟಬಹುದು ಎಂಬ ಅಂಶವೇ ನಮ್ಮಲ್ಲಿ ಅನೇಕರಿಗೆ ಗೊತ್ತಿರುವಂತಿಲ್ಲ. ಆಸ್ಪತ್ರೆಯ ಆವರಣದಲ್ಲಿ ಬೂಟು ಸಪ್ಪಳ ಮಾಡುತ್ತ ಬರುವವರನ್ನು ನರ್ಸುಗಳು ಡಾಕ್ಟರುಗಳು ಹೇಗೆ ಕೆಕ್ಕರಿಸಿ ನೋಡುತ್ತಾರೋ ಹಾಗೆಯೇ ನಾಲಿಗೆಯ ರಸ್ತೆಯಲ್ಲಿ ಶಬ್ದದ ಬೂಟು ಧರಿಸಿ ಬರುವವರನ್ನು ನಾವೇಕೆ ಕೆಕ್ಕರಿಸಿ ನೋಡುವುದಿಲ್ಲ? ಅವನಿಗೆ ಪಾಠ ಕಲಿಸಲೆಂದೇ ನಾವೇಕೆ ತುಂಬ ತಗ್ಗಿದ ದನಿಯಲ್ಲಿ ಎದುರುತ್ತರ ಕೊಡುವುದಿಲ್ಲ?

ಮೂರನೆಯದಾಗಿ, ಸಾರ್ವಜನಿಕ ವೇದಿಕೆಗಳಲ್ಲಿ ಮಹಾಸಮಾರಂಭಗಳಲ್ಲಿ ಚುನಾವಣಾ ಕಾರ್ಯಕ್ರಮಗಳಲ್ಲಿ ನಡೆಯುವ ಶಬ್ದಗಳ ಮಾರಣಹೋಮ. ಅತಿಶಯೋಕ್ತಿಗಳಿಂದ ತುಂಬಿದ ವಾಗಾಡಂಬರದ ಭೋರ್ ನೀರಿನ ಪರಿಚಯವಾಗಬೇಕಾದರೆ ನೀವು ಇಂಥ ಸಮಾರಂಭಕ್ಕೆ ಹಾಜರಿ ಹಾಕಬೇಕು.

*''ಮಾತು ಹೊಕ್ಕುಳ ಬಳ್ಳಿ ಸಂಪರ್ಕ ತಪ್ಪಿ*
*ಮೆರೆಯುವ ವೈಖರಿಯ ವಾಗ್‌ವಿಲಾಸಕ್ಕೆ*
*ಮೂಕಳು ಸರಸ್ವತಿ''*

ಎಂದು ನಾವೆಲ್ಲ ನಿಟ್ಟುಸಿರುಬಿಡುವ ರೀತಿಯಲ್ಲಿ ಇವರು ಮಾತಾಡುತ್ತಾರೆ. ತನ್ನ ಮೆದುಳಿಗಾಗಲಿ ನಿಮ್ಮ ಮೆದುಳಿಗಾಗಲಿ ಸ್ವಲ್ಪವೂ ಶ್ರಮಕೊಡದೆ ಭೋರ್ಗರೆಯುವ ಈ ಶಬ್ದಮಾಲಿನ್ಯದಿಂದಾಗಿ ನಮ್ಮ ಶ್ರವಣಾಸಕ್ತಿಯೇ ಉಡುಗಿಹೋಗುತ್ತದೆ. ತಮ್ಮ ಮಾತಿನಲ್ಲಿ ಬೆಳೆಗಿಂತ ಕಳೆಯೇ ಜಾಸ್ತಿ ಎಂಬುದು ಕೂಡ ಈ ಶಬ್ದ ರೈತರಿಗೆ ಗೊತ್ತಾಗದಿರುವುದು ಒಂದು ದುರಂತ. ಎದುರಿಗೆ ಧ್ವನಿವರ್ಧಕವನ್ನಿಟ್ಟುಕೊಂಡು ಏರುಕಂಠದಲ್ಲಿ ಹರಿಯುವ 'ಶಬ್ದ ವರ್ಷ'ವನ್ನು ಕೇಳಲಾರದೆ ನೀವೆಲ್ಲ ಅನ್ಯಮನಸ್ಕತೆಯ ಛತ್ರಿ ಹಿಡಿದು ಪಾರಾಗಬೇಕಾಗುತ್ತದೆ.

ನಾಲ್ಕನೆಯದು ಸಾಹಿತಿಗಳ ಭಾಷಣದ ಮೂಲಕ ಉಂಟಾಗುವ ಶಬ್ದಮಾಲಿನ್ಯ. ಇವರು ಭಾರಿಯ ಗ್ರಂಥಗಳನ್ನು ರಚಿಸಿ ಕಾಡಿನ ಬೊಂಬುಗಳನ್ನೆಲ್ಲ ನುಂಗಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಆದರೆ ಈ ವೃಕ್ಷ ಭಕ್ಷಕರು ಅಷ್ಟಕ್ಕೇ ತೃಪ್ತರಾಗದೆ ಶಾಬ್ದಿಕ

> *ಕೊಟ್ಟಣದಲ್ಲಿನ ಭತ್ತದ ಕಾಳು ಒನಕೆಯ ಪೆಟ್ಟಿನಿಂದ ನೋಯುತ್ತದೆ. ಆದರೆ ಒಮ್ಮೆ ಈ ಕಠಿಣ ಪರೀಕ್ಷೆ ಮುಗಿದರೆ ಅದರ ಬಿಳುಪು ಎಷ್ಟು ಸೊಗಸು ! ಇದೇ ರೀತಿ ಜಗತ್ತಿನ ಇತರರೊಡನೆ ನಮ್ಮ ಜೀವನ. ಒಂದು ಜೀವ ಮನುಷ್ಯನಾಗಿರಲು ದುರದೃಷ್ಟದ ಉಳಿಪೆಟ್ಟಿನಲ್ಲಿ ನೋಯಲೇಬೇಕು.*
>
> ***- ಹೋ ಚಿ ಮಿನ್***

ಮಳೆಗಾಲವನ್ನು ಸೃಷ್ಟಿ ಮಾಡುತ್ತಾರೆ. ಇವರಿಗೆ ಕಾಲ ಪ್ರಜ್ಞೆ ಇರುವುದಿಲ್ಲ. ಜನ ಕೇಳುತ್ತಿದ್ದಾರೆಯೇ? ನಿದ್ದೆ ಮಾಡುತ್ತಿದ್ದಾರೆಯೆ ? ತಟಸ್ಥರಾಗಿದ್ದಾರೆಯೆ ? ಎಂದು ಆಲೋಚಿಸುವ ಪ್ರವೃತ್ತಿಯೂ ಇವರಿಗಿರುವುದಿಲ್ಲ. ತನ್ನದಾದ ಮೇಲೆ ಇನ್ನೂ ಹಲವರು ಬಾಯಿಬಿಡಲು ಕಾದಿದ್ದಾರೆ ಎಂಬ ಸಣ್ಣ ಸಂಗತಿ ಕೂಡ ಇವರಿಗೆ ಹೊಳೆಯುವುದಿಲ್ಲ.

ನಮ್ಮ ಸಾಹಿತ್ಯ ಸಮಾರಂಭಗಳೆಂದರೆ ವಿಚಾರವನ್ನು ಹಿಂದಿಕ್ಕಿ ಮೆರೆಯುವ ಮಾತಿನ ಜಾಲಗಳು. ಯಾವುದೇ ಸಾಹಿತ್ಯ ಕಾರ್ಯಕ್ರಮವನ್ನು ಏರ್ಪಡಿಸಿದವರಿಗೂ ಸಕಾಲಕ್ಕೆ ಕಾರ್ಯಕ್ರಮವನ್ನು ಆರಂಭಿಸಬೇಕೆಂಬ ಪ್ರಾಥಮಿಕ ತಿಳಿವಳಿಕೆ ಕೂಡ ಇರುವುದಿಲ್ಲ. ಎಷ್ಟೋ ಹೊತ್ತಾದ ಮೇಲೆ ಒಬ್ಬ ವೇದಿಕೆಯ ಮೇಲೆ ಬಂದು ಸ್ವಾಗತ ಭಾಷಣ ಮಾಡುತ್ತಾನೆ. ಆಮೇಲೆ 'ಪ್ರಾರ್ಥನೆ' ಎನ್ನುತ್ತಾನೆ. ನಾಲ್ಕಾರು ಕೋಕಿಲ ವರ್ಣದ ಕಂಠಗಳು ವೇದಿಕೆಯ ಮೇಲೆ ಬಂದು ಅಬ್ಬರಿಸುತ್ತವೆ. ನಿಮ್ಮನ್ನು ಧ್ಯಾನ ಮೌನಗಳಲ್ಲಿ ಇಡಬೇಕಾದ ಪ್ರಾರ್ಥನಾಗೀತೆ ಮುಗಿದಕೂಡಲೇ ಗಡಚಿಕ್ಕುವ ಚಪ್ಪಾಳೆಯ ಶಬ್ದಮಾಲಿನ್ಯ.

ಪ್ರಾರ್ಥನೆ ಮಾಡಿಸಿದ ವ್ಯಕ್ತಿ ಮತ್ತೆ ವೇದಿಕೆಯ ಮೇಲೆ ಬರುತ್ತದೆ. ಆ ವ್ಯಕ್ತಿಗೆ ಈಗ ನಿರ್ವಾಹಕರು, ನಿರೂಪಣಕಾರರು ಎಂಬ ಹೊಸ ಹೆಸರಿದೆ. ಈತ (ಈಕೆ) ನಿಜವಾಗಿ 'ಶಬ್ದ ಭಯಂಕರ' ಎಂಬ ಪ್ರಶಸ್ತಿಗೆ ಯೋಗ್ಯನಾದ ವ್ಯಕ್ತಿ. ಸಭಾಧ್ಯಕ್ಷರಿಗೆ ಕೆಲಸವೇ ಇಲ್ಲದ ಹಾಗೆ ಅವರ ಕಾರ್ಯಕ್ರಮ ಘೋಷಣೆಯ ಕಾರ್ಯವನ್ನು ತಾನೇ ನಿರ್ವಹಿಸುತ್ತಾನೆ. ಭಾಷಣಕಾರರಿಗೆ ಕಾಲಮಿತಿ ಹೇರುವ ಈ ಮನುಷ್ಯ ತಾನು 'ಕಾಲಾತೀತ' ಎಂದು ಭ್ರಮಿಸಿರುತ್ತಾನೆ. ಮುಂದಿನ ಭಾಷಣಕಾರರನ್ನು ಬಾಯಿಗೆ ಬಂದಂತೆ ಹೊಗಳುತ್ತಾನೆ. ಭಿತ್ತಿ ಇಲ್ಲದೆ ಚಿತ್ತಾರ ಬರೆಯುತ್ತಾನೆ. ಒಬ್ಬ ಪಾದ್ರಿಗೆ ಇಂಥ ಅನುಭವವಾಯಿತಂತೆ. ಅವನಿಗೆ ಬೇರೆ ಊರಿಗೆ ವರ್ಗವಾಯಿತು. ಒಂದು ಬೀಳ್ಕೊಡಿಗೆಯ ಸಮಾರಂಭ ಏರ್ಪಡಿಸಿದಾಗ ಒಬ್ಬ ಆ ಪಾದ್ರಿಯನ್ನು ತುಂಬ ಹೊಗಳುತ್ತ ಅರ್ಧಗಂಟೆ ಮಾತಾಡಿದನಂತೆ. ಪಾದ್ರಿ ಉತ್ತರ ಕೊಡುವ ಸಂದರ್ಭದಲ್ಲಿ ಹೀಗೆ ಹೇಳಿದನಂತೆ:

''ಓ ದೇವರೆ! ನನ್ನನ್ನು ಅತಿಶಯವಾಗಿ ಹೊಗಳಿ ಹಾಡಿದ ಈ ಭಾಷಣಕಾರನನ್ನು ದಯವಿಟ್ಟು ಕ್ಷಮಿಸು. ಹಾಗೆಯೇ ಈತನ ಬಾಯಿಂದ ಬಂದ ಪ್ರಶಂಸೆಯ ಮಾತುಗಳನ್ನು ಇಷ್ಟು ಹೊತ್ತು ಮೌನವಾಗಿ ಕೇಳಿ ಸಂತೋಷಪಟ್ಟ ನನ್ನನ್ನು ಕ್ಷಮಿಸು.''

ನಿರೂಪಕನು ಮೊದಲನೆಯವನ ಭಾಷಣ ಮುಗಿದ ಕೂಡಲೇ ಮತ್ತೆ ಹಾಜರಾಗುತ್ತಾನೆ. ಅವರು ಹೇಳಿದ ಅಂಶಗಳನ್ನು ತಾನು ಗ್ರಹಿಸಿದ ರೀತಿಯಲ್ಲಿ ವ್ಯಾಖ್ಯಾನ ಮಾಡುವ ಜವಾಬ್ದಾರಿಯನ್ನು ಅವನೇ ತೆಗೆದುಕೊಂಡು ಭಾಷಣವನ್ನು ಭೀಕರವಾಗಿ ವಿಶ್ಲೇಷಿಸುತ್ತಾನೆ. ಕೇಳಿದ್ದೇ ಕೇಳಿ ಸಭಾಸದರ ತಲೆ ಜಡ್ಡುಕಟ್ಟುವುದರಿಂದ ಇವಕ್ಕೆ ಸೆಮಿ 'ನಾರು'ಗಳು ಎಂದು ಹೆಸರು ಕೊಟ್ಟಿರುವುದು ಸಾರ್ಥಕ! ಅನೇಕ ಭಾಷಣಗಳನ್ನು ಕೇಳುವಾಗ ನಿಮಗೆ

*''ಮೊಗ್ಗು ಹೂವುಗಳೆನಿತೊ*
*ಹೀಚು ಕಾಯಿಗಳೆನಿತೊ*
*ಮಾಗದ ಕಸುಕು ಕಾಯಿಗಳು ಎನಿತೊ?''*

ಎಂದು ಸಂಕಟಪಡುವಂತಾಗುತ್ತದೆ.

ಅನೇಕ ಭಾಷಣಕಾರರು ಬರಿಯ ಶಬ್ದ ರವಾನೆಯ ಗುಮಾಸ್ತರುಗಳು ಅಷ್ಟೆ. ತಾವಾಡುವ ಮಾತು ಭಾವಕ್ಕೆ ಜೀತ ಮಾಡಬೇಕು ಎಂಬ ಆಶಯವೇ ಇವರಿಗೆ ಇರುವುದಿಲ್ಲ.

*ಮರಗಿಡವೆನಿತನೊ ಸುತ್ತುತ*
*ಸಂಜೆಗೆ ಬರದಿರ್ಪುದೆ ಗೂಡಿಗೆ ಹಕ್ಕಿ?*

ಎಂದು ಸಹನೆಯಿಂದ ನೀವು ಆ ಭಾಷಣಕಾರ ತಾರ್ಕಿಕವಾಗಿ ಮುಕ್ತಾಯ ಮಾಡುತ್ತಾನೆಂದು ಭಾವಿಸುತ್ತೀರಿ. ಆದರೆ ಶಬ್ದಗಳ ಡಬ್ಬದ ಮೆಟ್ಟಿಲುಗಳನ್ನೇರುವ ಆ ಮಾತುಗಾರನಿಗೆ ಅಂಥ ಹಟವೂ ಇಲ್ಲ ಅವಸರವೂ ಇಲ್ಲ.

ಪುಣ್ಯಕ್ಕೆ ಇಂದಿನ ದಿನಗಳಲ್ಲಿ ಭಾಷಣ ಕೇಳಲು ಬರುವವರ ಸಂಖ್ಯೆಯೂ ಕಡಮೆಯಾಗಿದೆ. ಶಾಬ್ದಿಕರು ಕಿವಿಯ ಬಾಧೆಗೆ ಕಾರಣರಾಗಿರುವುದು ಜನರಿಗೆ ಗೊತ್ತಾಗಿರುವುದರಿಂದ ಜನ ಈಗ ಭಾಷಣಕಾರರನ್ನು ದೂರವಿರಿಸಿ ಕ್ಷೇಮವಾಗಿದ್ದಾರೆ. ಭಾಷಣಗಳ ಮೂಲಕ ರವಾನೆಯಾಗುವ ಭೀಕರ ಶಬ್ದ ಹಿಂಸೆಯನ್ನು ಅನುಭವಿಸಿ ಅನುಭವಿಸಿ ಜನ ಈಗ

*'ಮಾತಿನಲ್ಲಿದು ಸಾಚ ಇದು ಮೋಸ*
*ಎಂದು ಹೇಳುವುದು ಬಡಪಾಯಿ ಕಿವಿಗಲ್ಲ*
*ಸುಲಭ'*

ಎಂದು ಕಿವಿ ಮುಚ್ಚಿ ಬೇರೆ ಕಾರ್ಯಗಳಲ್ಲಿ ತೊಡಗುತ್ತಾರೆ.

ಜನ ಏಕೆ ಇಷ್ಟು ದೊಡ್ಡ ಪ್ರಮಾಣದ ಶಬ್ದ ತರಂಗಗಳನ್ನು ಎಬ್ಬಿಸುತ್ತಾರೆ ಎಂಬುದು ನನಗಿನ್ನೂ ಅರ್ಥವಾಗಿಲ್ಲ. ಇಂಗ್ಲಿಷಿನಲ್ಲಿ 'Speak only if you can improve upon silence' ಎಂಬ ಸೂಕ್ತಿಯಿದೆ. ಮೌನದಿಂದ ಸಂವಹನಗೊಳಿಸಲು ಪ್ರಯತ್ನಿಸು. ಅದು ಸಮರ್ಥ ಸಂವಾಹಕ. ಅದಕ್ಕಿಂತ ಚೆನ್ನಾಗಿ ಸಂವಹನೆ ಮಾಡಬಹುದು ಎನಿಸಿದಾಗ ಮಾತ್ರ ಮಾತಾಡು ಎಂದು ಈ ಸೂಕ್ತಿ ಹಿತವಚನ ಹೇಳುತ್ತದೆ. 'ಮೌನಕ್ಕೆ ಮಾತುಂಟೆ ಉಂಟು ಉಂಟು' ಎಂದು ಬೇಂದ್ರೆಯವರು ಹೇಳಿ ಅನಗತ್ಯ ಶಬ್ದಮಾಲಿನ್ಯವನ್ನು ತಪ್ಪಿಸಿ ಎನ್ನುತ್ತಾರೆ.

ಮೌನಶಬ್ದದಲ್ಲಿ ಎಷ್ಟು ಶಕ್ತಿಯಿರುತ್ತದೆಂಬುದನ್ನು ಕುಮಾರವ್ಯಾಸನ ದ್ರೌಪದಿ ಒಮ್ಮೆ ತೋರಿಸಿಕೊಡುತ್ತಾಳೆ.

ದುರ್ವಾಸ ಪ್ರಕರಣದಲ್ಲಿ ಧರ್ಮರಾಯನ ಮಾನ ಉಳಿಸಲು ದ್ರೌಪದಿ ಶ್ರೀಕೃಷ್ಣನನ್ನು ಧ್ಯಾನಿಸುತ್ತಾಳಷ್ಟೆ. ಅವಳು ಕುಟೀರದ ಒಳಭಾಗಕ್ಕೆ ಹೋಗಿ ತನ್ನ ದೇಹವನ್ನೇ ಧ್ಯಾನ ಮಂದಿರವನ್ನಾಗಿ ಮಾಡಿಕೊಂಡು ಧ್ಯಾನ ಭಂಗಿಯಲ್ಲಿ ಶ್ರೀಕೃಷ್ಣ ಚಿಂತನೆಯಲ್ಲಿದ್ದಾಳೆ. ಅವಳ ಅಕ್ಕೆ (ದುಃಖ)ಯನ್ನು ಸೈರಿಸದೆ ಶ್ರೀಕೃಷ್ಣ ಬರುತ್ತಾನೆ. ಖಗರಾಜ ಕೇತನದ ಅವನ ರಥ ಬಂದುದನ್ನು ದೂರದಿಂದ ನೋಡಿದ ಪಾಂಡವರು ಓಡಿಬಂದು ಧೌಮ್ಯಾದಿಗಳು ಶ್ರೀಕೃಷ್ಣನಿಗೆ ಭಕ್ತಿಭಾವದಿಂದ ನಮಿಸುತ್ತಾರೆ. ಜನರ ಘೋಷ ಮುಗಿಲು ಮುಟ್ಟಿದೆ, ಬ್ರಾಹ್ಮಣರು ಉಚ್ಚಕಂಠದಲ್ಲಿ ಕೃಷ್ಣಸ್ತುತಿ ಮಾಡುತ್ತಿದ್ದಾರೆ. ಆದರೆ ಹತ್ತಿರದಲ್ಲೇ ಒಳಮನೆಯಲ್ಲಿದ್ದ ದ್ರೌಪದಿಯು ಕಟ್ಟಿಕೊಂಡಿದ್ದ ಧ್ಯಾನದ ಕೋಟೆಯನ್ನು ಆ ಶಬ್ದಕ್ಕೆ ಭೇದಿಸಲಾಗಲಿಲ್ಲ. ಕೃಷ್ಣನಿಗೆ ಈ ಶಾಬ್ದಿಕ ನಗಾರಿ ಹಿಡಿಸುವುದಿಲ್ಲ. ಅವನು ಆ ಜನರನ್ನೆಲ್ಲ ದಾಟಿ ದ್ರೌಪದಿಯ ಬಳಿಗೆ ಬರುತ್ತಾನೆ. ಆದರೂ ದ್ರೌಪದಿಗೆ ತಿಳಿಯದು. ಧ್ಯಾನಗೋಚರನಾಗಿ ವನಿತೆಯ ಮಾನಸದಲ್ಲಿ ಇರುವ ಪರಮಹಂಸನಾದ ಶ್ರೀಕೃಷ್ಣನ ಎದುರಿಗೆ ಈಗ ಮಾನುಷಾಕೃತಿಯಲ್ಲಿ ಬಂದು ಬಾಹ್ಯರಚನೆಯಲ್ಲಿ ಮೈದೋರುವ ಕೃಷ್ಣ ಕಾಣಲೇ ಇಲ್ಲ. ಆಗ ಕೃಷ್ಣನೇ ಹತ್ತಿರ ಬಂದು ಆ ಮಾನಿನಿಯ ಮೈದಡವಿ ಮಾತನಾಡಿಸಬೇಕಾಯಿತು. ಅಂದರೆ ಶಬ್ದಕ್ಕಿಂತ ಹೆಚ್ಚಿನದನ್ನು ಮೌನ ಸಾಧಿಸುತ್ತದೆ ಎಂಬುದನ್ನು ಸುತ್ತಣ ಜನರಿಗೆ ದ್ರೌಪದಿ ತೋರಿಸಿಕೊಟ್ಟಳು. ಆದರೆ ಹೀಗೆ ಮೌನವಾಗಿ ಶಬ್ದಭಾಷ್ಯವನ್ನು ಬರೆಯುವ ಶಕ್ತಿ ನಮಗೆಲ್ಲಿ ಬರಬೇಕು? ಬಂದರೂ ನಮ್ಮನ್ನು ಕೇಳುವವರು ಯಾರು? ಏಕೆಂದರೆ ಪು. ತಿ. ನ. ಹೇಳುವಂತೆ ಅಂತರ್ಮುಖರೂ ಆತ್ಮಾರಾಮರೂ ಆದ ಕೋಮಲ ಮನಸ್ಕರಿಗೆ ಈಗ ಪುರಸ್ಕಾರ ಕಡಿಮೆ.

ಗಂಟಲಿಗೆ ಪ್ರಾಧಾನ್ಯವಿರುವ ಸಮಾಜ ನಮ್ಮದು. ತಮಟೆಯಂತೆ ಸದ್ದು ಮಾಡುತ್ತಲೇ ಹೋಗೋಣ. ಇತರ ಮಾಲಿನ್ಯಗಳ ಜತೆಗೆ ನಮ್ಮದೊಂದು ಶಬ್ದ ಮಾಲಿನ್ಯವೂ ಸೇರಿದರೆ ಶೋಭೆಯಲ್ಲವೆ?

**ಪ್ರೊ|| ಅ. ರಾ. ಮಿತ್ರ**
ನಂ. ಬಿ. ೬, ಕೆ.ಎಚ್.ಬಿ. ಕಾಲೋನಿ, ಪುಟ್ಟೇನಹಳ್ಳಿ
ಯಲಹಂಕ, ಬೆಂಗಳೂರು - ೫೬೦ ೦೬೪

# ಮಾತು ಸೋತ ಕ್ಷಣ

ವೈದೇಹಿ

ಅಷ್ಟು ವಯಸ್ಸಾದವರು ಮಾತಾಡಿಸಲು ಬರುತ್ತಾರೆ ಅಂತ ಅವರು ಯಾರೂ ಎಣಿಸಿರಲೇ ಇಲ್ಲ. ಕರಕೊಂಡು ಬಂದಾತ ಅವರನ್ನು ಕಾರಿನಿಂದ ಇಳಿಸಿಕೊಳ್ಳುವಾಗ ನೋಡಿ ಒಮ್ಮೆ ಎಲ್ಲ ಅಚ್ಚರಿಗೊಂಡರು. ''ಅ್ಲ! ಆ ಇವರಲ್ಲವೆ !'' ''ಹೇಗೆ - ಮರೆತೇಹೋಗಿದ್ದರಲ್ಲ!'' ''ಒಂದು ರೀತಿಯಲ್ಲಿ ಸತ್ತೇ ಹೋದಂತೆ ಇದ್ದರಲ್ಲ. ಮರೆಯುವುದೆಂದರೆ ಮತ್ತೆ ಏನು !'' ''..... ಇನ್ನೂ ಇದ್ದಾರೆ ಹಾಗಾದರೆ !''

ಗುಸುಗುಸು ಎಲ್ಲ ಮುಗಿದುಹೋದರೂ ಆತ ಇನ್ನೂ ಕಾರಿನಿಂದ ಇಳಿಯುವುದರಲ್ಲಿಯೇ ಇದ್ದಾರೆ. ಕೈಕೋಲು ಒಮ್ಮೆ ಹೊರಗಿಟ್ಟು, ಊರಿಕೊಂಡು



ಹೊರಬರಲು ಯತ್ನಿಸಿ, ಒಳಗಿಟ್ಟು ಕಾಲು ಹೊರಗಿಡಲು ಯತ್ನಿಸಿ, ಆದರೂ ಇಳಿಯಲು ಆಗದೆ ಉರುಡುತ್ತ ಇದ್ದಾರೆ. ಮುಪ್ಪೆಲ್ಲ ಮುಖದ ಪದರಪದರದಲ್ಲೇ ಮನೆ ಮಾಡಿದೆಯೊ ಎಂಬಂತೆ ಕಾಣುವ ವೃದ್ಧ. ಕರಕೊಂಡು ಬಂದವ ಸೊಂಟ ಹಿಡಿದುಕೊಂಡ. ಅಂತೂ ಹೆಜ್ಜೆಯನ್ನು ಗಟ್ಟಿ ಊರಿ ನಿಂತರು. ಹೆಜ್ಜೆ ಜಾರಿಸುತ್ತ ಧೂಳಿನ ಸಣ್ಣ ಆವರಣ ಸೃಷ್ಟಿಯಾಗುತ್ತಿದ್ದಂತೆ ಮುಂದೆ ಮುಂದೆ ಬಂದರು. ಗುಸುಗುಸು ಮರೆತು ನೋಡುತ್ತ ಇದ್ದ ಮನೆ ಮಂದಿಯೆಲ್ಲ ತಮಗೇ ಅರಿಯದಂತೆ ಎದ್ದುನಿಂತರು. 'ಶೋಕದ ಮನೆ'ಯೆಂದು ಅದುವರೆಗೆ ಅನಿಸದಂತೆ ಇದ್ದರಲ್ಲವೆ ಎಲ್ಲ. ವಯಸ್ಸಾಗಿ ಸತ್ತವರ ಮನೆಯಲ್ಲಿ ಮದುವೆ ಮನೆಯ ತರಹ ಗೌಜು ತುಂಬಿಕೊಳ್ಳುತ್ತದೆ. ನಡುನಡುವೆ ಅಲ್ಲಲ್ಲಿ ತೇವಗೊಂಡಂಥ ಮೌನವೋ, ನೆನಪಿನ ಹನಿ ಹೊಳೆವ ಕಂಗಳೋ ಥಳಕು ಮೀಟುತ್ತಿರುತ್ತವೆ. ಸಾವಿನ ಗಾಢತೆ ಗೂಢತೆ ಮೂಢತೆಗಳೆಲ್ಲ ಹೊತ್ತು ಕಳೆಯುವ ನಗೆ ಚರ್ಚೆ ಚಿಮ್ಮಿಸುತ್ತಿರುತ್ತವೆ. ಹೀಗೆಯೇ ಇತ್ತು ಆ ಮನೆಯೂ ಕೂಡ. ಹೀಗಿದ್ದ ಮನೆ ಈಗ ಈ ವೃದ್ಧ ತಮ್ಮನ್ನು ಮಾತಾಡಿಸಲು ಬರುತ್ತಿರುವುದು ನೋಡಿ ಕ್ಷಣ ಸ್ತಬ್ಧವಾಗಿದೆ. ಈ ಸ್ತಬ್ಧತೆ ಅವರ ಆಗಮನದ ವಿಸ್ಮಯವೋ, ದುಃಖದ್ದೋ, ದುಃಖ ಲೇಪನದ್ದೋ 'ಮಾತಾಡಿಸಲು' ಬಂದೊಡನೆ ಸಹಜವಾಗಿ ಚಿಮ್ಮುವ ಮೃತರ ನೆನಪೋ - ಹೀಗೇ, ಇದರಿಂದ ಅಂತ ಹೇಳುವುದು ಹೇಗೆ ?

ವೃದ್ಧ ಮಾತಾಡಿಸಲು ಬಂದಾರು ಎಂಬ ಕಲ್ಪನೆ ಕೂಡ ಇರಲಿಲ್ಲವಲ್ಲ. ಅವರಲ್ಲಿಗೆ ಸುದ್ದಿ ಕಳಿಸಿರಲೇ ಇಲ್ಲ. ಸುದ್ದಿ ಕಳಿಸುವಷ್ಟು ಹತ್ತಿರದವರಲ್ಲ. ಅಂದಿಗರೂ ಅಲ್ಲ. ಮೃತೆಯಾದರೂ ಅವರನ್ನು ನೆನೆಸಿಕೊಂಡದ್ದಾಗಲೀ ಅವರ ಕುರಿತು ಎರಡು ಸಾಲು ಪ್ರಸ್ತಾಪಿಸಿದ್ದಾಗಲೀ ಇಲ್ಲ. ಒಂದಾನೊಂದು ಕಾಲದಲ್ಲಿ ಈ ಮನೆಗೆ ಬಂದು ಹೋಗುತ್ತಿದ್ದವರು ಎಂಬುದು ಬಿಟ್ಟರೆ ಮತ್ತೆ ಇನ್ನು ಯಾವ ಬಾಂಧವ್ಯವೂ ಕಾಣುತ್ತಿಲ್ಲ.

ಏಣಿ ಮೆಟ್ಟಿಲ ಕೆಳಗೆ ಕುಳಿತು ಅವರು ಬರುವುದನ್ನೇ ನೋಡುತ್ತ ಕುಳಿತಿದ್ದ ಯಾರೋ ಮೌನದ ಬೆಪ್ಪು ಒಡಿಸುವಂತೆ ಪುನಃ ಒಮ್ಮೆ,

''ಅಯ ! ಈ ಜನ ಇನ್ನೂ ಇದೆಯ !'' ಎಂದರು.

ಮೆಲ್ಲ ಒಂದು ನಗೆ ಮೆಲುಗಾಳಿಯಂತೆ ಎಲ್ಲರ ಮುಖದ ಮೇಲೆ ಹಾಸಿಹೋಯಿತು. ಸಾಲದೆಂಬಂತೆ –

''ಬರುವುದು ನೋಡಿದರೆ ತಾನು ಅಮರ ಎನ್ನುವ ಹಾಗಿದೆ !''

ಅವರು ಹಾಗೆ ಹೇಳಿದ್ದು ಮಾತ್ರ ಎಲ್ಲರಿಗೂ ಸಹಮತವಾಗಲಿಲ್ಲ. ಕೆಲವರು ''ಏನದು, ಹಾಗೆನ್ನುವುದು !'' – ಎಂಬಂತೆ ಲೊಚಗುಟ್ಟಿದರು. ಮನುಷ್ಯ ಒಳ್ಳೆಯವ, ಸಭ್ಯ, ಗೌರವಸ್ಥ, ತನ್ನ ಬದುಕಿನಲ್ಲಿ ನಾಲ್ಕು ಜನರಿಗೆ ಕೈಲಾದ್ದು ಮಾಡಿ ಸೈ ಎನಿಸಿಕೊಂಡವ, ಹೆಸರು ಗಳಿಸಿದವ, ಅಂಥವನ ಬಗ್ಗೆ ಮಾತಾಡಲು ಒಂದು ಇದು ಬೇಡವ ?

''ಇಷ್ಟು ವಯಸ್ಸಾದರೂ ಹೇಗಿದ್ದಾರಲ್ಲ! ಇನ್ನು ಪ್ರಾಯದ ಕಾಲದಲ್ಲಿ ಹೇಗಿದ್ದರೋ.....''

ವ್ಯಕ್ತಿ ಮನೆಗೆ ಹತ್ತಿರಾದರು. ಕರಕೊಂಡು ಬಂದಾತ ಅವರನ್ನು ಹಿಡಿದುಕೊಂಡಿದ್ದ. ಮನೆ ಮುಂದೆ ನಿಂತು ಒಮ್ಮೆ ಸುತ್ತ ನೋಡಿದರು. ಮೆಲ್ಲ ಮೆಟ್ಟಲೇರಿದರು. ಮನೆಯ ಯಜಮಾನರು ತಲೆ ಬಾಗಿಲಲ್ಲೆ ಕೈಮುಗಿದು ನತಮಸ್ತಕರಾಗಿ ದುಃಖದಂತೆ ನಿಂತರು. ''ಬನ್ನಿ ಬನ್ನಿ'' ಎನ್ನುವಂತಿಲ್ಲ. ಸಾವಿನ ಮನೆ.

ವೃದ್ಧರು ಬಾಗಿಲೊಳಗೆ ಬಂದರು. ನಿಂತ ಎಲ್ಲರೂ ಈಗಷ್ಟೇ ಎದ್ದು ಗೌರವ ಸೂಚಿಸಿದಂತೆ ಒಮ್ಮೆ ನಿಂತಲ್ಲೇ ಪದಬದಲಿಸಿದರು. ವೃದ್ಧರು ಮತ್ತೊಮ್ಮೆ ಸುತ್ತ ನೋಡುತ್ತಾ ದೀರ್ಘವಾಗಿ ನಿಡುಸುಯ್ದರು. ಅದನ್ನು ಆಯಾಸದ ಉಸಿರು ಎನ್ನುವ ಹಾಗೆಯೇ ಇಲ್ಲ – ಎಂತಹ ಅಮಾಯಕರೂ ಸಹ. ಉಸಿರಿನಲ್ಲೇ ಜೀವಿಗಳ ಭಾವಸ್ಥಾಯಿ ಹೇಗೆ ಅಡಗಿರುತ್ತದೆ !

ಅಲ್ಲಿದ್ದ ಕುರ್ಚಿಯಲ್ಲಿ ತಾನಾಗಿ ಹೋಗಿ ಕುಳಿತ ವೃದ್ಧರು ಎಲ್ಲರಿಗೂ ಕುಳಿತುಕೊಳ್ಳಿ ಎಂಬಂತೆ ಕೈ ಮಾಡಿದರು. ಕರಕೊಂಡು ಬಂದಾತ ತಳಿಕಂಡಿಗೆ ಆತು ನಿಂತ.

ಮಾತು ಮೂಡದು. ಮೂಡಿದರೂ ಹೊರ ಹೊರಡದು. ಮಾತು ಹೊರಡದ ಗಳಿಗೆಯೇ ನಿರ್ವಾತ ಗಳಿಗೆಯೇ ? ಎಂತಲೇ ಬಹುಶಃ ಎಲ್ಲ ಉಸಿರುಗಟ್ಟಿದವರಂತೆ ನೋಡುತ್ತಲೇ ನಿಂತರು. ಮೌನದ ಬೀಗ ಅಂಥಲ್ಲಿ ಒಡೆಯುವವರು ಯಾರು. ಯಜಮಾನನನ್ನು ಬಿಟ್ಟರೆ ? ಆತ ತುಸು ಹೊತ್ತು ಕಳೆದು ಮೆಲುದನಿಯಲ್ಲಿ ಕೇಳಿದ.

''ಎಷ್ಟು ಹೊತ್ತಿಗೆ ಹೊರಟದ್ದೊ''

ಕರಕೊಂಡು ಬಂದಾತನೂ ಮೆಲುದನಿಯಲ್ಲಿ ''ಬೆಳಗಿನ ಜಾವ. ಇಷ್ಟು ಹೊತ್ತಾಯಿತು...... ರಸ್ತೆ ಒಂದು ಹಾಳಾಗಿದೆಯೆಂದರೆ !''

''ಹೂಂ. ಕಾರನ್ನು ಸೈಕಲಿನ ಹಾಗೆ ಹೊಡಕೊಂಡು ಬರಬೇಕು...... ಹೊಂಡ......''

ವೃದ್ಧರು ಏನೋ ಹೇಳಲಿಕ್ಕಿರುವುದನ್ನು ಹೇಳಲು ಜೋಡಿಸಿಕೊಳ್ಳುವಂತೆ ದೃಷ್ಟಿ ಅತ್ತಿತ್ತ ಹೊರಳಿಸಿ ತುಟಿಯನ್ನು ತೆರೆದು ಮುಚ್ಚಿ ತೆರೆದು ಮುಚ್ಚಿ ಮಾಡುತ್ತಿದ್ದರು. ಏನು ಹೇಳುತ್ತಾರೋ.....

ಕಾದರೆ,

ಏನೂ ಇಲ್ಲ. ದವಡೆಹಲ್ಲು ಒಳಗೇ ಕಚ್ಚಿಕೊಂಡ ಬಿಗಿಗೆ ಮುಖದ ಹೊರಚರ್ಮ ಸ್ನಾಯುಗಳು ಒಮ್ಮೆ ಮೇಲೆ ಕೆಳಗೆ ಕಂಪಿಸಿ ಚಲಿಸಿದುವು. ಮುದಿಗೆನ್ನೆಯ ನಿರಿಗೆ ಒಮ್ಮೆ ತತ್ತರ ಅಲ್ಲಾಡಿತು. ನಿಶ್ಶಬ್ದವನ್ನು ಶ್ಯೂ ಅಂತ ಓಡಿಸುವಂತೆ ''ಆಸರು...'' – ಎಂದ ತಗ್ಗು ದನಿಯಲ್ಲಿ ಯಜಮಾನ. ಸಾವಿನ ಮನೆ; ಆಸರು ಕೇಳಲೂ ಅಲ್ಲ, ಬಿಡಲೂ ಅಲ್ಲ ಎಂಬ ಸಂದಿಗ್ಧ ಕಂತಿದ ದನಿಯಲ್ಲಿ. ಕುರ್ಚಿಯ ಕೈ ಆಧರಿಸಿದ ಬೆರಳೆತ್ತಿ ಇಳಿಸಿದರು ವೃದ್ಧ 'ಬೇಡ' ಎಂಬಂತೆ.

ಯಾರೋ ಪಿಸುಪಿಸು ''ಸಾವಿನ ಮನೆಯಲ್ಲಿ ಕೆಲವರು ನೀರು ಸಹ ಮುಟ್ಟುವುದಿಲ್ಲ.''

ಕಲ್ಲಿನಂತೆ ಕುಳಿತಿದ್ದರು ವೃದ್ಧರು. ಇದು ಹೀಗೆ ಎಷ್ಟು ಹೊತ್ತು? ಎಲ್ಲಿಯೂ ನೋಡದೆ ಏನೂ ಕೇಳದೆ. ಏನೋ ಮಾತು ಜೋಡಿಸಿಕೊಳ್ಳುವಂತೆ ಕಂಡು ಒಂದು ಮಾತೂ ಆಡದೆ ! ಇದು ನೋಡಿ ಮುಗಿಯುವ ಬಾಬತ್ತು ಅಲ್ಲವೆಂಬಂತೆ ಕೆಲವರು ಒಳನಡೆದರು. ಒಳಹೋದರೆ ಉಸಿರಾಡಬಹುದು. ಅಂಥದ್ದೇನೂ ಶೋಕವಿಲ್ಲದ 'ಶೋಕದ ಮನೆ'ಗೆ ಇದ್ದಕ್ಕಿದ್ದಂತೆ ಆಗಮಿಸಿ ಶೋಕ ಮೌನದ ಅಂಗಿ ತೊಡಿಸಿದ ವೃದ್ಧನ ಪರಿಯನ್ನು ಲಘುವಾಗಿ ನೆನೆದು ನಗಬಹುದು.

ಹೊರಗೆ –

ಮಾತು ಹೂತೇ ಹೋದಂತೆ ನೋಡುತ್ತ ನಿಂತವರು ಸಾಕಾಗಿ ಅಲ್ಲಲ್ಲೇ ಕುಳಿತರು. ಉಸಿರ ಸದ್ದು ಕೂಡ ಕೇಳುವ ವಾತಾವರಣದಲ್ಲಿ ಅದು ಕೇಳದಂತೆ ಮೂಗುಬಾಯಿಗೆ ಅಂಗೈ ಅಡ್ಡ ಹಿಡಿದುಕೊಂಡರು. ಅರ್ಧಗಂಟೆಯೇ ಕಳೆದಿರಬಹುದೆ ? ವೃದ್ಧರ ಕಣ್ಣು ಇನ್ನೂ ಮಾತು ಜೋಡಿಸಿಕೊಳ್ಳುವ ಹೋರಾಟದಲ್ಲಿ ಅತ್ತ ಇತ್ತ ಚಲಿಸುತ್ತಲೇ ಇತ್ತು.

ಯಜಮಾನ, ಮಾತು ಹೀಗೆ ಒಂದಾಗುವುದು ಸಹಜ. ತಾನು ಅರ್ಥ ಮಾಡಿಕೊಂಡೆ ಅಂತ ಸೂಚಿಸುವಂತೆ ''...... ಎಷ್ಟೆಂದರೂ ಒಂದೇ ಹೊಕ್ಕಿ ಹೊರಟ ಮನೆಯಲ್ಲವೆ !'' ಎಂದ. ಅವರು ಅವನತ್ತ ತುಸುವೇ ವಾಲಿ ಮೆಲ್ಲ ತಲೆ ಬೀಸಿದರು. ಗಂಟಲ ಸ್ನಾಯುವೊಮ್ಮೆ ಮೇಲೆ ಕೆಳಗೆ ಚಲಿಸಿತು. ಒಡಲ ಮಾತೊಂದು ಚಿಮ್ಮಿ ಗಂಟಲ ಬುಡಕ್ಕೇ ಬಂದಂತೆ, ಕೆಳಗೆ ದಬ್ಬಿಸಿಕೊಂಡಂತೆ.

ಮೇಲೆದ್ದರು ವೃದ್ಧ. ಎತ್ತಿಡಲಾರದ ಹೆಜ್ಜೆಯನ್ನು ಚಾರಿಸುತ್ತ ಯಜಮಾನ ಕೈ ಹಿಡಿದುಕೊಂಡಿರುವಂತೆ ಒಳಗೆ ನಡೆದರು. ''ಮನೆಯೊಳಗೆಲ್ಲ ಓಡಾಡುವ ಹಂಬಲವೋ ಏನು ಕತೆಯೋ.'' ಹಿಂದೆಯೇ, ಅವರನ್ನು ಕರೆದುಕೊಂಡು ಬಂದಾತ ಮತ್ತು ಉಳಿದವರು. ಶೋಕಗೀತೆಯೊಂದರ ಸಾಲು ಹೊರಟ ಹಾಗೆ ಹೋಗುತ್ತ ಯಜಮಾನ ಹೇಳುತ್ತ ಇದ್ದ–

''ತ್ರಾಣ ಅಂಬುದು ಚೂರೂ ಇರಲಿಲ್ಲ. ಮತ್ತೆ ಕಾಯಿಲೆಗೀಯಿಲೆ ಏನೂ ಇರಲಿಲ್ಲಪ್ಪ. ತ್ರಾಣವೇ ಕುಸಿಯುತ್ತ ಬಂತು. ಓಲ್ಡೇಜ್. ಏನೂ ಮಾಡಲಿಕ್ಕಾಗುವುದಿಲ್ಲವಲ್ಲ.....''

ವೃದ್ಧರು ಕ್ಷಣ ನಿಂತರು. ಮುಖಪೂರ್ತಿ ಅವನ ಕಡೆಗೆ ತಿರುಗಿಸಿದರು. ಆತನೂ ನಿಂತು ''ಹೋಗಿದ್ದು ಒಂದು ಲೆಕ್ಕಕ್ಕೆ ಬಿಡುಗಡೆಯೇ. ಇನ್ನೂ ಇದ್ದಿದ್ದರೆ ಕಷ್ಟವೇ ಇತ್ತು.......''

ಆಗ ಆಚೆಯಿಂದೊಂದು ದನಿ ಕಣ್ಣೀರ ಕಂಠ ಕಳಕುತ್ತ ''ಆದರೂ.... ಇನ್ನು ಇಲ್ಲವೇ ಇಲ್ಲ ಅಂದರೆ ! ..... ಆಕೆ ಮಲಗಿದ್ದಲ್ಲೇ ಇದ್ದರೂ ಅಡ್ಡಿಲ್ಲವಿತ್ತು. ಒಬ್ಬರಲ್ಲ ಒಬ್ಬರು ನೋಡಿಕೊಳ್ಳುತ್ತಿದ್ದೆವು...... ಊ್ಹ್......''

ವೃದ್ಧರು ನಡಿಗೆ ಮುಂದರಿಸಿದರು.

.... ಕಾಲು ಚಾರಿಸಿ ಚಾರಿಸಿ ಬಂದು ನಿಂತದ್ದು ಆ ಕೋಣೆಯ ಎದುರು. ಯಜಮಾನ ತಡೆದು ನಿಂತು ''ಇದೇ. ಇದೇ ಕೋಣೆಯಲ್ಲೇ ಇದ್ದಳು. ಕಡೆಯವರೆಗೂ'' - ಎಂದ ಹಸಕು ದನಿಯಲ್ಲಿ.

''ಓ ! ಈ ಕೋಣೆಯೆಂದರೆ ಅದೇನು ಒಂದು ಇದ್ದೋ, ದೇವರೇ ! ಇನ್ನು ಒಬ್ಬರಿಗೂ ಅದನ್ನು ಬಿಟ್ಟು ಕೊಡಲಿಲ್ಲವಲ್ಲ ಕಡೆಯವರೆಗೂ ! ನಾನಿವನ ಹತ್ತಿರ ಹೇಳಿದೆ ಮೊನ್ನೆ. 'ಕೋಣೆ ಹೊರಗೆ ಗೋಡೆ ಮೇಲೆ ಅವಳ ಹೆಸರು ಕೆತ್ತಿಸಿಬಿಡು' ಅಂತ.....'' – ಬಿಗಿ ವಾತಾವರಣದ ವಿರೋಧಿ ಧ್ವನಿಯಲ್ಲಿ ಯಾರೋ ಹೇಳಿ ನಗೆಯಾಡಿದರು. ಕೆಲ ನಗೆಯಲೆಗಳು ಅಲ್ಲಲ್ಲಿ ಪುಳಪುಳನೆ ಎದ್ದು ಮರೆಯಾದವು. ವೃದ್ಧರು ಕೋಣೆ ಬಾಗಿಲಿನ ದಾರಂದ ಆಧರಿಸಿ ನಿಂತರು. ಎತ್ತಲಾರದ ಹೆಜ್ಜೆ. ಅಂತೂ ಎತ್ತಿ ಹೊಸಿಲು ದಾಟಿದರು. ಜೊತೆಗೇ, ಯಜಮಾನ.

ಒಳಗೆ ಬಂದು ಕೋಣೆಯನ್ನಿಡೀ ಕಣ್ಣಲ್ಲಿ ತುಂಬಿಸಿಕೊಳ್ಳುವಂತೆ ನೋಡಿದರು. ಮೂಲೆಯಲ್ಲಿ ಮಂಚದ ಮೇಲೆ ಹಾಸಿಗೆಯನ್ನು ಮಡಚಿಟ್ಟದ್ದರು. ಇನ್ನದನ್ನು ಬಿಡಿಸಿ ಹೊಸ ಹಾಸು ಹಾಕುವುದು ಸೂತಕ ಕಳೆದ ಮೇಲೆಯೇ. ಹಳೆಯ ಕಾಲದ ಮಂಚ. ಒಡತಿ ತೀರಿದಳೆಂದು ಮರುಗುತ್ತ ತಿಂಡಿ ತೀರ್ಥ ಬಿಟ್ಟು ಮಲಗಿದ ನಾಯಿಯಂತೆ – ಸುಮ್ಮನಿತ್ತು. ಸೊಳ್ಳೆ ಪರದೆಯ ಫ್ರೇಮಿನ ಮೇಲೆ ಆಕೆಯ ಹಳೆಯ ಸೀರೆಗಳೆರಡು, ಇದ್ದದ್ದೇ ಮರೆತಂತೆ ಇದ್ದವು. ವೃದ್ಧರು ಹತ್ತಿರ ಬಂದು ಮಂಚದ ಕಟ್ಟನ್ನು ಎರಡೂ ಕೈಯಿಂದ ಹಿಡಿದು ಬಾಗಿ ನಿಂತು ಉಸಿರು ಸುಧಾರಿಸಿಕೊಂಡರು. ಏನೋ ಈಗ ನುಡಿದೇ ಬಿಡುವೆನೆಂಬಂತೆ ತಟ್ಟನೆ ತಲೆ ಎತ್ತಿದರು. ಎದುರು ಅವರನ್ನೇ ನೋಡುತ್ತ ನಿಂತಿರುವ ಇಡಿ ಹಿರಿಯ ಕಿರಿಯ ಗಡಣ. ಏನು ಕಂಡಿತೋ, ಮಾತು ತೆರೆದುಕೊಳ್ಳಲೇ ಇಲ್ಲ. ಮತ್ತೆರಡು ಉಸಿರು



ದೀರ್ಘ ಎಳೆದುಕೊಂಡರು.

ಕರಕೊಂಡು ಬಂದಾತ ತುಸು ದುಗುಡದಿಂದ ಬಳಿ ಬಂದು "ನೀರು ಬೇಕೆ ? ಕಾರಲ್ಲಿದೆ." ವೃದ್ಧರು ಬೇಕೆನ್ನಲೂ ಇಲ್ಲ, ಬೇಡವೆನ್ನಲೂ ಇಲ್ಲ. ಆತನಿಗೆ ತಂದುಕೊಡುವ ಧೈರ್ಯ ಬರಲೂ ಇಲ್ಲ. ಮತ್ತೆ ಹಿಂದೆ ಹೋಗಿ ಬಾಗಿಲ ಬಳಿ ಕೈಕಟ್ಟಿ ನಿಂತ. ಎರಡು ಹೆಜ್ಜೆ ಮುಂದಿಟ್ಟು ತನ್ನದೇ ಆನಿಕೆ ಮೇಲೆ ಸರಿದು ಮಂಚದ ಮೇಲೆ ಕುಳಿತರು.

> ಕಲಿಯಿರಿ, ಓದಿರಿ, ಒಳ್ಳೆಯ ಪುಸ್ತಕಗಳನ್ನು ಓದಿ. ಉಳಿದದ್ದನ್ನು ಜೀವನಾನುಭವಕ್ಕೆ ಬಿಡಿ.
>
> *– ಫ್ಯೊದರ್ ದೊಸ್ತೋಯೆವ್‌ಸ್ಕಿ*

"ಹೌದು..... ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ" – ಎಂದ ಯಜಮಾನ. ಅವರು ಅಲ್ಲಿ ಕುಳಿತದ್ದು ಇದೀಗ ಯುಕ್ತವಾಯಿತು ಎಂಬ ಸಮಾಧಾನದಲ್ಲಿ. ಮಾತ್ರ, ಹಾಗೆ ಹೇಳಿ ಆತ ಮುಗಿಸಿದನೋ ಇಲ್ಲವೋ ವೃದ್ಧರ ಎದೆಯ ಗುಡಾರದೊಳಗಿಂದ ತಿದಿಯೊತ್ತಿಯೊತ್ತಿ ಬಂದಂತೆ ಉಸ್ಸಂ.... ಉಸ್ಸಂ.... ಉಸ್ಸಂ.... ಉಸ್ಸಂ.... ತಡೆ ತಡೆದ ತುಂಡು ತುಂಡಾದ ಉಸಿರು. ಸಶಬ್ದ. ಇಷ್ಟರವರೆಗೆ ಒಳಗೇ ಮುಲುಗುತ್ತಿದ್ದ ಯಾವುದೋ ಬಿಡುಗಡೆಗೆ ಹಾತೊರೆಯುವಂತೆ. ಏನದು. ಕೇವಲ ವೃದ್ಧಾಪ್ಯದ ನರಳಿಕೆಯಂತೂ ಅಲ್ಲ. ಹಾಗಿದ್ದರೆ ಅದು ಆಗಿಂದಲೇ ಕೇಳಿಸಬೇಕಿತ್ತಷ್ಟೆ. ಈಗ ಕೇಳಿಸುತ್ತಿದೆ; ಅರರೆ ದುಃಖ ಕಾಣಸುತ್ತಿದೆ ಕೇಳಿಸುತ್ತಿದೆ....

"ಆಯಾಸ ಮಾಡಿಕೊಳ್ಳುತ್ತೀರಿ..... ಒಂದು ಗುಟುಕು"

ಈ ಸಲ ಹಿರಿಯರೊಬ್ಬರು ಗಟ್ಟಿಯಾಗಿಯೇ ನುಡಿದರು.

"ಸಾವಿನ ಮನೆಯಲ್ಲಿ ಹಾಗೆಲ್ಲ ಕುಡಿಯಲು ಕೊಡುವ ರಿವಾಜೂ ಇಲ್ಲ, ಕುಡಿಯುವ ರಿವಾಜೂ ಇಲ್ಲ."–

ಹೆಗಲ ಮೇಲಿನ ಟವೆಲು ತೆಗೆದು ನಡುಗು ಕೈಯಲ್ಲಿ ಕಿವಿ ವರೆಸಿಕೊಂಡರು ವೃದ್ಧರು. ಯಜಮಾನನ ಕಡೆ ತಿರುಗಿ ಕುಡಿಯಲು ತನ್ನಿ ಎಂಬಂತೆ ಸನ್ನೆ ಮಾಡಿದರು. "ಓಡಿ. ಒಂದು ಲೋಟ ಸ್ಟ್ರಾಂಗ್ ಕಾಫಿ ತನ್ನಿ" – ಯಜಮಾನ ಪಿಸುವಾಗಿ ಹೇಳಿ ಮುಗಿಸುವುದರೊಳಗೆ ಯಾರೋ ಭಂಗನೆ ಓಡಿ ಬಿಸೀ ಕಾಫಿ ತಯಾರಿಸಿ ತಂದರು. ಲೋಟಕ್ಕೆ ಸ್ವಲ್ಪವೇ ಬಗ್ಗಿಸಿ ವೃದ್ಧಭಕ್ತಿಯಿಂದ ಬಾಗಿ ಅವರಿಗೆ ಕೊಟ್ಟರು. ನಡುಗು ಬೆರಳುಗಳಲ್ಲಿ ಲೋಟ ಹಿಡಿದು ಕುಡಿಯತೊಡಗಿದರು ವೃದ್ಧರು. ಪ್ರತಿ ಗುಟುಕಿಗೂ ಉಸ್ಸಂ.... ಪ್ರತಿ ಗುಟುಕಿಗೂ ಉಸ್ಸಂ.....

ಅತ್ತ, ಕರಕೊಂಡು ಬಂದಾತ ಬಾಗಿಲ ಬಳಿ ಮನೆಯ ಕೆಲವರೊಡನೆ ತಗ್ಗು ದನಿಯಲ್ಲಿ ಮಾತು ಬಿಚ್ಚಿದ್ದ. "ತೀರಿಕೊಂಡ ಸುದ್ದಿ ಕೇಳಿದ ದಿವಸದಿಂದ ಕರಕೊಂಡು ಹೋಗು ಕರಕೊಂಡು ಹೋಗು ಅಂತ. ಒಂದೇ ಸಮ. ಇವತ್ತು ಎಲ್ಲಾ ಕೆಲಸ ಬದಿಗೆ ದೂಡಿ ಹೊರಟೇಬಿಟ್ಟೆ. ಮುದುಕರು. ನಾಳೆ ಅಂದರೆ....."

"ಹೌದೌದು, ಹೌದಪ್ಪ"

" ಆಮೇಲೆ ನಾನು ಕೈ ಕೈ....."

"ಅಯ್ಯೋ ಹೌದು ಮತ್ತೆ. ಒಳ್ಳೆಯದಾಯಿತು. ಅವರ ಆಸೆ ತೀರಿತು"

"ಈ ಮನೆಯನ್ನು ಇಷ್ಟು ಹಚ್ಚಿಕೊಂಡಿದ್ದಾರೆಂತ ಅಂದುಕೊಂಡೇ ಇರಲಿಲ್ಲ ನಾವು"

"ಹೂಂ. ನೀವು ಯಾರೂ."

"ಛೆ! ಏನು ಮಾತಾಡುವವರು ಹಿಂದೆಲ್ಲ! ಗಂಟೆಗಟ್ಟಲೆ. ಬಂದರೆ ಒಮ್ಮೆ ಮನೆಯಿಡೀ ಗಲಗಲ. ನಾನಿದ್ದೆನಲ್ಲ, ಕಂಡಿದ್ದೆನಲ್ಲ! ಆಗಿನ್ನೂ ಚಿಕ್ಕ ವಯಸ್ಸು ನಂಗೆ. ಸರೀ ನೆನಪಿದೆ.... ಈಗ ಒಂದು ಮಾತು ಆಡಲಿಕ್ಕಾಗದೆ ಪಡುವ ಕಷ್ಟ ಕಂಡರೆ !....."

"ಅಯ್ಯಪ್ಪ. ಪ್ರಾಯ ಒಂದು ಆಗಲೇಬಾರದು. ಅರ್ವತ್ತು ತುಂಬಿದ ಕೂಡಲೇ ಪಟಕ್ಕನ್ನಬೇಕು"

ಅರ್ವತ್ತು ಮೀರಿದವರೊಬ್ಬರು ಎಡೇಯಲ್ಲಿ ಕೇಳಿದರು.

"ಹಾಗದರೆ ನಾನಿನ್ನು ಹೋಗಬಹುದೆನ್ನುತ್ತೀಯ ?"

ನಿಂತ ನೀರಿನಡಿಯ ಒಳಾಂತರ ಹರಿವಿನಂತೆ ನಗೆಯೊಂದು ಸಣ್ಣಗೆ ಉರುಳುತ್ತ ಸರಸರ ಸುಳಿದುಹೋಯಿತು.

ಕರಕೊಂಡು ಬಂದಾತ ನಿಧಾನವಾಗಿ, ಒಗಟು ಕಂಡವನಂತೆ ''ಮಾತು, ಆಡುತ್ತಿದ್ದರೆ – ಅಷ್ಟು ? .... ಏನೋಪ್ಪ''

ಇಷ್ಟವ್ಕೂ ಈತ ಯಾರು ? ಅದೇ ಕೇಳಿಲ್ಲ, ಕೇಳದೆ ಹೇಗೆ ?

''ಏನಾಗಬೇಕು, ಅವರಿಗೆ, ನೀವು ?''

''....ಏನು ಆಗಬೇಕಂತ ಉಂಟ ? ನಿಮಗೆ ಬೇರೆ ಕಸುಬಿಲ್ಲ'' – ಪ್ರಶ್ನೆಯನ್ನು ತಟ್ಟಿ ಹಾರಿಸಿದ ಆತ !

ಕಾಫಿ ಮುಗಿಸಿದ ವೃದ್ಧರು ಅಲ್ಲಿಂದೆದ್ದರು. ಯಜಮಾನರು ಕೈ ಹಿಡಿಯಲು ಹೋದರೆ ಬೇಡ ಎಂಬಂತೆ ಕೊಸರಿಕೊಂಡು ಬೀಳು ನಡಿಗೆ ಚಾರಿಸುತ್ತ ಮನೆ ಹಿಂಬದಿ ಜಗಲಿಗೆ ಹೋಗಿ ಕಂಬಕ್ಕೊರಗಿ ಕುಳಿತರು. ನೋಡುತ್ತಿದೆ ಕಣ್ಣು, ನೋಡುತ್ತಿಲ್ಲ. ಕೇಳುತ್ತಿದೆ ಕಿವಿ, ಕೇಳುತ್ತಿಲ್ಲ. ತಿದಿಯೊತ್ತಿದಂತೆ ಉಸಿರು ಮೇಲೆ ಕೆಳಗೆ ಆಗುತ್ತಿದ್ದರೂ ಅದು ಉಸಿರಿನ ಆಟ ಅಲ್ಲ....

ಅಲ್ಲಿಯೇ ಆಚೆಗೆ ಯಜಮಾನನು ಬಂದು ಕುಳಿತ. ಆಕೆ ತೀರಿಕೊಂಡಂದಿನಿಂದ ದಿನಗಳು ಯಾಂತ್ರಿಕವಾಗಿ ಸರಿದುಹೋಗಿದ್ದುವಲ್ಲ. ಶವ ಎತ್ತುವಾಗಲೂ ಸುಡುವಾಗಲೂ – ಇದೆಲ್ಲ ಆಗಲೇಬೇಕಾದ್ದು ಆಗುತ್ತಿದೆ ಎಂಬ ನಿರ್ಲಿಪ್ತಿಯಲ್ಲಿ ಎಲ್ಲ ನಡೆದುಹೋಗಿತ್ತು. ಆದರೆ ಈಗ ಎದುರು ಕಂಬಕ್ಕೊರಗಿ ಅನಾಥನಂತೆ ಕುಳಿತ ವೃದ್ಧನೆದುರು ಎಲ್ಲವೂ ಮತ್ತೊಮ್ಮೆ ಮನದೆದುರು ಜರುಗುತ್ತಿದೆ. ಪ್ರತಿಕ್ಷಣವೂ ಇಲ್ಲಿಂದ ಹಿಂದೋಡಿ ಆ ದಿನದ ಕ್ಷಣಗಳನ್ನು ಎಬ್ಬಿಸಿ ಕೂಡಿಸುತ್ತಿದೆ. ತನಗೇ ಅರಿವಾಗದಂತೆ ಯಜಮಾನನ ಮುಖ ಗಂಭೀರವಾಗಿದೆ. ಗಾಂಭೀರ್ಯ ಹೊತ್ತು ಹೊತ್ತು ತಡೆಯಲಾರದೆ –

ಬಿಕ್ಕಿದ ಯಜಮಾನ ಬಿಕ್ಕಿ ಬಿಕ್ಕಿ ಅಳತೊಡಗಿದ. ಸಾಂಕ್ರಾಮಿಕ ಗುಣದ ಅಳು ಸುತ್ತ ಪಸರಿಸುತ್ತ ಎಲ್ಲರೂ ಬಿಕ್ಕಿ ಬಿಕ್ಕಿ ಅಳತೊಡಗಿದರು. ಈ ಅಳುವಿನಲ್ಲಿ ಸತ್ತ ವ್ಯಕ್ತಿಗಾಗಿ ಎಷ್ಟು, ಸ್ವಂತದ ಯಾವುದೋ ಒಳ ನೋವಿನಂಶ ಎಷ್ಟು, ವೃದ್ಧ ಕಟ್ಟಿದ ತತ್ಕಾಲದ ಶೋಕ ವಾತಾವರಣದ ಪಾಲೆಷ್ಟು – ಗೊತ್ತು ಹಚ್ಚಲಿಕ್ಕೇ ಆಗದು. ಬಿಕ್ಕುವ ಅಳು ದನಿ ಕೆರಳಿ ರೋದನವಾಯಿತು. ಒಂದುಗೂಡಿದ ರೋದನದ ದನಿ ಮನೆಯನ್ನು ಯಥಾರ್ಥಕ್ಕೂ ಶೋಕದ ಛಾಯೆಯಡಿ ಕೂಡಿಸಿತು. ಕರಕೊಂಡು ಬಂದಾತನ ಕಂಗಳೂ ತಂತಾನೇ ತೊಯ್ದವು. ವೃದ್ಧರು ಕಂಬಕ್ಕೊರಗಿ ಮೂಕ ಕಿವುಡರಂತೆ ಕುಳಿತೇ ಇದ್ದರು. ಅಳು ಹತ್ತಿಕ್ಕಿಕೊಳ್ಳುತ್ತ ಯಜಮಾನ, ವೃದ್ಧ ಕೇಳದೆಯೂ, ಮೃತೆಯ ಕೊನೆಯ ದಿನಗಳನ್ನು ವಿವರಿಸತೊಡಗಿದ. ಆಕೆಯ ನಿತ್ರಾಣ ಸ್ಥಿತಿ, ಅನುಪಾನ, ದಿನಚರಿ – ಕಟ್ಟ ಕಡೆಯ ಗಳಿಗೆಯವರೆಗೂ ಆಕೆಯ ಮನಸ್ಥಿತಿ.... ಕೊನೆಯ ಉಸಿರು, ಮರಣದ ನಂತರದ ಕಣ್ಣು, ಮುಖದ ಕಳೆ....

ಕಂಬ ಬಿಟ್ಟು ಎರಡೂ ಕೈಯನ್ನು ಜಗಲಿಯ ನೆಲಕ್ಕಾನಿಸಿ ಕುಳಿತಲ್ಲೇ ಸಂತೈಕೆಯಂತೆ ತನ್ನನ್ನೇ ತೂಗುತ್ತ ಕೇಳುತ್ತಿದ್ದ ವೃದ್ಧರು – ಈಗ ಖಂಡಿತ ಏನೋ ನುಡಿಯುತ್ತಾರೆ. ಆ ಆಸೆ ಕಣ್ಣಲ್ಲಿ ಇಣುಕುತ್ತಿದೆ. ಕಂಠ ಸ್ನಾಯುವಿನಲ್ಲಿ ಕಂಪಿಸುತ್ತಿದೆ. ತಕ್ಕ ಉಸಿರಿನ ಗತಿಗಾಗಿ ಕಾಯುತ್ತಿದೆ...... ಘನಗೊಂಡ ನುಡಿಗಳು ಕರಕರಗಿ ಬರುತ್ತಿವೆ. ಬರುವ ದಾರಿಯಲ್ಲಿವೆ ಎಂಬಂತೆ ಕಂಬನಿ ಸುಕ್ಕುಗಲ್ಲದ ಪದರದ ಮೇಲೆ ತಡೆತಡೆದು ಉದುರತೊಡಗಿತು. ಮುಚ್ಚಿದ್ದ ತುಟಿ ಸುತ್ತಣ ನಿರಿಗೆಗಳನ್ನು ಸರಿಸುತ್ತ ನಿಧಾನ ತೆರೆಯಿತು. ತೆರೆಯಿತು ಬಾಯಿ, ಮಾತಿಗಾಗಿ ಕಳೆಯಿತು. ಏನು ಹೇಳಲಿಕ್ಕಿದೆಯೊ ಕಣ್ಣೊರಸಿಕೊಳ್ಳುತ್ತ ಎಲ್ಲ ಅವರನ್ನೇ ತದೇಕ ನೋಡತೊಡಗಿದರೆ – ಹೊತ್ತು ಕಳೆಯಿತೇ ಹೊರತು, ಒಂದೂ ಶಬ್ದ ಹೊರಬರಲಿಲ್ಲ. ಇಕ್ಕಳದಲ್ಲಿ ಬಾಯಿ ಕಳೆಸಿ ಹಿಡಿದಂತೆ, ಕಳೆದದ್ದು ಕಳೆದ ಹಾಗೇ ನಿಂತುಬಿಟ್ಟಿತು. ಮುಚ್ಚಲೂ ಬಾರದು. ಮಾತೂ ಹೊರಡದು..... ಕಳೆದ ಬಾಯಿಯನ್ನು ಮುಚ್ಚುವ ಕಷ್ಟದಲ್ಲಿ ವೃದ್ಧರ ಮೈ ಬೆವರಿ ಮುಖ ಹಣ್ಣು ಹಣ್ಣಾಯಿತು..... ಎಷ್ಟು ಹೊತ್ತು..... ಹೀಗೆ ಉಸಿರು ಏನನ್ನೋ ಅದುಮಿ ಅದುಮಿ ಮೇಲೆ ತಳ್ಳುತ್ತಿದೆ.... ಏನದು...

ಹಿರಿಯರಾರೋ ''ಅಷ್ಟು ಮನಸ್ಸಿಗೆ ತಕೊಳ್ಳಬೇಡಿ'' – ಎನ್ನುತ್ತ ಸಮಾಧಾನ ಮಾಡಲು ಮುಂದೆ ಬಂದರೆ ''ಹುಷಾರ್'' – ಎಂಬಂತೆ ಕೈಮಾಡಿದರು ವೃದ್ಧ, ಕಳೆದ ಬಾಯಿಯನ್ನು ಮುಚ್ಚುವ ಸಾಹಸದ ನಡುವೆಯೇ.

ಅಂತೂ ಉಸಿರು ತಹಬಂದಿಗೆ ಬಂತು. ನಿಧಾನ ನಿಧಾನವಾಗಿ ಬಾಯಿಯ ಸ್ನಾಯು ಯಥಾಸ್ಥಿತಿಗೆ ತಲುಪಿತು. ತುಟಿ ಮುಚ್ಚಿತು.

ವೃದ್ಧ ಎದ್ದುನಿಂತರು. ಕರಕೊಂಡು ಬಂದಾತನ ಬಳಿ ಹೋಗೋಣ ಎಂಬಂತೆ ಸನ್ನೆ ಮಾಡಿದರು. ಆತ ಮರೆತೆ ಎಂಬಂತೆ ಭುಜ ಹಾರಿಸಿ ಬಗಲ ಚೀಲದಿಂದ ಪೊಟ್ಟಣ ತೆಗೆದು - ದುಃಖದ ಮನೆಗೆ ತರುವ ತಿನಿಸು, ವೃದ್ಧ ಹೇಳಿದ್ದೋ, ತಾನೇ ತಂದದ್ದೋ – ಜಗಲಿಯ ಮೇಲಿಟ್ಟು ಅವರ ಹಿಂದೆ ನಡೆದ. ಎಲ್ಲರೂ ಮಂತ್ರಮುಗ್ಧರಂತೆ ಅವರನ್ನು ಹಿಂಬಾಲಿಸಿದರು. ಯಜಮಾನ ಕಾರು ಬಾಗಿಲು ತೆರೆದು ನಿಂತರೆ, ಕರಕೊಂಡು ಬಂದಾತ ವೃದ್ಧರಿಗೆ ಒಳಗೆ ಕುಳಿತುಕೊಳ್ಳಲು ನೆರವಾದ.

ವಿದಾಯದ ಕೈ ಎತ್ತಿದರು ವೃದ್ಧರು. ಕೈ ಮುಗಿದು ನಿಂತಿದ್ದ ಯಜಮಾನನ ಭುಜ ತಟ್ಟಿದರು. ಮತ್ತೊಮ್ಮೆ ಇಡೀ ಮನೆಯನ್ನು ಒಡಲಲ್ಲಿ ಸೇರಿಸಿಕೊಳ್ಳುವಂತೆ ದೃಷ್ಟಿ ಅಗಲಿಸಿ ಅಗಲಿಸಿ ನೋಡಿದರು.

ಕೊನೆಯ ಪ್ರಯತ್ನವೆಂಬಂತೆ ಏನೋ ಹೇಳಲು ಹವಣಿಸಿದರೆ ? ತುಟಿ ತೆರೆಯಲೊಲ್ಲದು. ಪ್ರಯತ್ನಿಸಿದಷ್ಟು ನಿರಿಗೆಗಳನ್ನೆಲ್ಲ ಸೇರಿಸಿ ಹೊಲಿದಂತೆ ಮತ್ತಷ್ಟು ಬಿಗಿದುಕೊಂಡಿತೇ ಹೊರತು ಬಾಯಿ ಬಿಡಲೊಲ್ಲದು. ಹೇಳಲಿಕ್ಕಿರುವುದು ಗಂಟಲಲ್ಲೇ ಕಟ್ಟಿದಂತೆ ಕಂಠದ ಸ್ನಾಯು ಮತ್ತೆ ಹೊರಳಿದಂತೆ ಕಂಡಿತು. ಡ್ರೈವರನಿಗೆ 'ಹೊರಡು' ಎಂಬಂತೆ ಸನ್ನೆ ಮಾಡಿದರು.

ವೈದೇಹಿ
'ಇರುವಂತಿಗೆ', ಅನಂತನಗರ, ೨ನೇ ಸ್ಟೇಜ್, ಮಣಿಪಾಲ್ - ೫೭೬ ೧೧೯

# ನಾಲ್ಕು ರುಬಾಯಿಗಳು

೧

ಹಾ, ಪ್ರಿಯೆ, ಹಿಂದಿನ ನೋವು ನೀಗುವ,
ಮುಂಬರುವ ಭಯವ ತೊಲಗಿಸುವ ಮಧು ತುಂಬು ಬಟ್ಟಲಲಿ.
''ನಾಳೆ'' ಎಂದೆಯಾ ? ನಾಳೆ ಏಕೆ ?
ನಾಳೆ ನಾನೇ ನಿನ್ನೆಯ ಸಾವಿರಾರು ವರ್ಷಗಳಲಿ ಲೀನನಾದೇನು.

೨

ಎಲ್ಲ ಮುಗಿದು, ನಾವೂ ಮಣ್ಣು ಸೇರುವ ಮುನ್ನ
ಇರುವದೆಲ್ಲವ ಹೀರಿ ಕುಡಿಯೋಣ, ಬಾ.
ಇಲ್ಲವೆಂದರೆ ಮಣ್ಣಿನೊಳು ಮಣ್ಣು; ಮಣ್ಣಡಿ ನಾವು;
ಮಧುವಿಲ್ಲ, ಹಾಡಿಲ್ಲ, ಹಾಡುಗಾರನಿಲ್ಲ, ಕೊನೆಯೂ ಇಲ್ಲ.

೩

ಹೃದಯದಲಿ ಬೆಚ್ಚಗೆ ಬೈತಿಟ್ಟ ಆಸೆಯು
ಮಣ್ಣುಗೂಡಬಹುದು, ಇಲ್ಲವೆ ಅರಳಬಹುದು.
ಆದರೆ – ಮರುಭೂಮಿಯ ಮರಳ ಮೇಲೆ ಸ್ವಲ್ಪ ಹೊತ್ತು ತಂಗಿ, ತಂಪು ನೀಡಿ
ಹೊರಟು ಹೋಗುವ ಹಿಮದಂತೆ – ಬಹುಬೇಗ ಕರಗಿ ಮಾಯವಾಗಿ ಬಿಡುತ್ತದೆ.

೪

ಕಾರವಾನಗಳು ಬಂದು ತಂಗುವ ದಾರಿಬದಿಯ ಹಳೆಯ ವಸತಿಗೃಹದಂತಿರುವ
ಈ ಲೋಕಕ್ಕೆ ಹಗಲು ಮತ್ತು ರಾತ್ರಿ ಎಂಬ ಎರಡು ಬಾಗಿಲುಗಳು.
ಹೇಗೆ ವೈಭವದಿ ಮೆರೆದ ಸುಲ್ತಾನರೆಲ್ಲ - ಒಬ್ಬರಾದ ಮೇಲೊಬ್ಬರು - ಇಲ್ಲಿ
ಗಂಟೆ ಎರಡು ಗಂಟೆಗಳ ಕಾಲ ತಂಗಿದ್ದು ತಮ್ಮ ದಾರಿ ಹಿಡಿದು
ಹೋದರು ನೋಡು !

ಮೂಲ : ಉಮರ್ ಖಯ್ಯಾಮ್

ಕನ್ನಡಕ್ಕೆ : ಶ್ರೀನಿವಾಸ್ ಎ. ಸುತ್ರಾವೆ
೧೬೧೪/೧೮, ಮಹಡಿ, ''ಸಿದ್ದೇಶ್ವರ ನಿಲಯ''
ವಿದ್ಯಾನಗರ, ದಾವಣಗೆರೆ- ೫೭೭೦೦೫

ನೇಮಿಚಂದ್ರ

# ವಿಜ್ಞಾನ ರಂಗದ ದುರಂತ ನಾಯಕಿ ರೋಸಲಿಂಡ್ ಎಲ್ಸೀ ಫ್ರಾಂಕ್ಲಿನ್



ಇಂದು ಜೆನಿಟಿಕ್ ರಂಗ 'ಕ್ಲೋನಿಂಗ್' ತನಕ ತಲುಪಿದೆ. ಮನುಷ್ಯ ದೇಹದ ನೀಲಿ ನಕಾಶೆ - 'ಹ್ಯೂಮನ್ ಜೀನೋಮ್' ಸಿದ್ಧವಾಗಿದೆ. ಜೆನಿಟಿಕ್ ರಂಗದ ಅಡಿಪಾಯ ಹಾಕಿದವರಾಗಿ ವ್ಯಾಟ್ಸನ್ ಮತ್ತು ಕ್ರಿಕ್ ಅವರ ಹೆಸರುಗಳು ಪತ್ರಿಕೆಯಲ್ಲಿ ಧಾರಾಳವಾಗಿ ಕೇಳಿಬಂದಿವೆ. ೧೯೫೩ರಲ್ಲಿ ಡಿ. ಎನ್. ಎ. ರಚನೆಯನ್ನು ಕಂಡುಹಿಡಿದ ವಿಜ್ಞಾನಿಗಳಾದ ಇವರಿಗೆ, ೧೯೬೨ರಲ್ಲಿಯೇ ನೊಬೆಲ್ ಪ್ರಶಸ್ತಿ ಲಭಿಸಿತ್ತು. ಈ ಎಲ್ಲ ಸಡಗರದ ನಡುವೆ ಡಿ. ಎನ್. ಎ. ರಚನೆಯನ್ನು ಕಂಡುಹಿಡಿಯುವಲ್ಲಿ ಪ್ರಮುಖ ಪಾತ್ರವಹಿಸಿದ ಮಹಿಳಾ ವಿಜ್ಞಾನಿ ರೋಸಲಿಂಡ್ ಹೆಸರು ನಮಗೆಲ್ಲೂ ಕೇಳಿಬರುವುದಿಲ್ಲ.

ಒಂದೂವರೆ ದಶಕದ ಹಿಂದೆ 'ಭಾರತೀಯ ವಿಜ್ಞಾನ ಮಂದಿರ'ದ ಗ್ರಂಥಾಲಯದಲ್ಲಿ ವಿಜ್ಞಾನಿ ವ್ಯಾಟ್ಸನ್ ಅವರ 'ಡಬಲ್ ಹೆಲಿಕ್ಸ್' ಪುಸ್ತಕ ಸಿಕ್ಕಿತ್ತು. ಡಿ. ಎನ್. ಎ. ರಚನೆಯನ್ನು ಕಂಡುಹಿಡಿಯುವತ್ತ ಒಂದು ವೇಗದ ಸ್ಪರ್ಧೆಯೇ ಏರ್ಪಟ್ಟಂತೆ, ಆ ಪಂದ್ಯದಲ್ಲಿ ಗೆದ್ದು ನಿಂತ ತಮ್ಮ ವಿವರಗಳನ್ನು ಮುಚ್ಚುಮರೆಯಿಲ್ಲದೆ ಬಿಚ್ಚಿ ತೆರೆದಿಟ್ಟ ದಿಟ್ಟ ಪುಸ್ತಕವಾಗಿ 'ಡಬಲ್ ಹೆಲಿಕ್ಸ್' ಕಂಡಿತ್ತು. ಆದರೆ ಇಲ್ಲಿ ನನ್ನ ಗಮನ ಸೆಳೆದದ್ದು ರೋಸಲಿಂಡ್ ಫ್ರಾಂಕ್ಲಿನ್ ಅವರ ಚಿತ್ರಣ. ನನಗಾಗ ರೋಸಲಿಂಡ್ ಬಗ್ಗೆ ಈ ಪುಸ್ತಕ ಹೇಳುವುದಷ್ಟನ್ನು ಬಿಟ್ಟರೆ ಮತ್ತೇನೂ ತಿಳಿದಿರಲಿಲ್ಲ. ಆದರೂ, ಅದಾಗಲೆ ಮೃತಳಾಗಿದ್ದ ರೋಸಲಿಂಡಳನ್ನು ಹಟಮಾರಿ ಹೆಣ್ಣಾಗಿ, ಕೆಟ್ಟ ರೀತಿಯಲ್ಲಿ ಚಿತ್ರಿಸಿದ ರೀತಿ ದಿಗ್ಭ್ರಮೆ ಹುಟ್ಟಿಸಿತ್ತು. ಆಕೆಯ ವೇಷಭೂಷಣ, ದಪ್ಪ ಕನ್ನಡಕಗಳನ್ನು ಟೀಕಿಸುತ್ತಾ 'ತುಟಿಗೆ ಬಣ್ಣ ಕೂಡಾ ಹಚ್ಚದ, ಹೆಣ್ತನವೊಂದೂ ಕಾಣದ ಹೆಣ್ಣೆಂದು' ವ್ಯಾಟ್ಸನ್ ಬಣ್ಣಿಸಿದ್ದರು ! ಓರ್ವ ವಿಜ್ಞಾನಿಯನ್ನು ಆತ ನೋಡುವ ಅಸಡ್ಡೆಯ ರೀತಿ ಅಚ್ಚರಿ ತರಿಸಿತ್ತು.

೧೯೬೮ರಲ್ಲಿ ಹೊರೇಸ್ ಫ್ರೀಲಾಂಡ್ ಜಡ್ಸನ್ ಅವರ ಲೇಖನ 'ದಿ ಲೆಜೆಂಡ್ ಆಫ್ ರೋಸಲಿಂಡ್' ಓದುವ ಅವಕಾಶ ದೊರೆಯಿತು. 'ಡಿ. ಎನ್. ಎ. ರಚನೆಯನ್ನು ಕಂಡುಹಿಡಿಯುವ ಪಂದ್ಯದಲ್ಲಿದ್ದ ಏಕೈಕ ಮಹಿಳಾ ವಿಜ್ಞಾನಿಯನ್ನು ನೊಬೆಲ್ ಪ್ರಶಸ್ತಿಯಿಂದ ವಂಚಿಸಲಾಯಿತೆ ?' ಎಂಬ ಪ್ರಶ್ನೆಯನ್ನು ಜಡ್ಸನ್ ಎತ್ತಿದ್ದರು. ಇದೀಗ ರೋಸಲಿಂಡ್ ನನ್ನ ಕುತೂಹಲ, ಆಸಕ್ತಿ, ಅಧ್ಯಯನದ ವಿಷಯವಾದರು. ಡಿ. ಎನ್. ಎ. ಸಂಶೋಧನೆಯನ್ನು ಕುರಿತಂತೆ 'ನೇಚರ್' ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಮೂಲ ಪ್ರಬಂಧಗಳನ್ನೆಲ್ಲ ಹುಡುಕಿ ಸಂಗ್ರಹಿಸಿದೆ. ಆಕೆಯ ವಿಜ್ಞಾನ ಬದುಕಿನ ಚಿತ್ರ ಸ್ಪಷ್ಟವಾಗಿ ಮೂಡಿದರೂ, ಆಕೆಯ ವೈಯಕ್ತಿಕ ಬದುಕಿನ ವಿವರಗಳು ದೊರೆಯಲಿಲ್ಲ. ರೋಸಲಿಂಡ್ ಡಿ. ಎನ್. ಎ. ಕುರಿತು ಸಂಶೋಧನೆ ನಡೆಸಿದ ಲಂಡನ್ನಿನ 'ಕಿಂಗ್ಸ್ ಕಾಲೇಜ್'ಗೆ ಭೇಟಿ ಇತ್ತರೂ ಹೆಚ್ಚಿನ ವಿವರಗಳು ತಿಳಿದುಬರಲಿಲ್ಲ. ಆದರೆ ಚಾರಿಂಗ್ ರಸ್ತೆಯಲ್ಲಿದ್ದ ಮಹಿಳಾ ವಿಷಯಕ್ಕೇ ಮೀಸಲಾದ 'ಸಿಲ್ವರ್ ಮೂನ್' ಪುಸ್ತಕದಂಗಡಿಯಲ್ಲಿ ನನಗೆ ದೊರೆಯಿತು ರೋಸಲಿಂಡ್ ಬಗ್ಗೆ ಪ್ರಕಟವಾದ ಏಕೈಕ ಪುಸ್ತಕ, ಆನ್ ಸೈರ್ ಅವರ 'ರೋಸಲಿಂಡ್ ಅಂಡ್ ಡಿ. ಎನ್. ಎ.' ರೋಸಲಿಂಡ್ ದಂತಕತೆ ಮೆಲ್ಲನೆ ತೆರೆದುಕೊಂಡಿತು. ಆನ್ ಸೈರ್ ಹೇಳುವಂತೆ 'ಗೆದ್ದವರು ಎಲ್ಲವನ್ನೂ ಬಾಚಿಕೊಂಡಿದ್ದರು.' ಇಂದು ರೋಸಲಿಂಡ್ ಅವರ ಬದುಕು ಮತ್ತು ಸಾಧನೆಯನ್ನು, 'ಗಂಡುರಂಗ'ದಲ್ಲಿ ಹೆಣ್ಣು ಪಡುವ ಪಾಡಿನ ಶ್ರೇಷ್ಠ ಉದಾಹರಣೆಯಾಗಿ ಸ್ತ್ರೀವಾದಿಗಳು ಗುರುತಿಸುತ್ತಿದ್ದಾರೆ.

ರೋಸಲಿಂಡ್ ಫ್ರಾಂಕ್ಲಿನ್ ನೊಬೆಲ್ ಪಾರಿತೋಷಕ ಪಡೆದ ಬ್ರಿಟನ್ನಿನ ಮೊಟ್ಟಮೊದಲ ಮಹಿಳೆಯಾಗಬೇಕಿತ್ತು. ಡಿ. ಎನ್. ಎ.ಯ ರಚನೆಯನ್ನು ಕಂಡುಹಿಡಿಯುವಲ್ಲಿ ಈಕೆಯ ಪಾತ್ರ ಅಪೂರ್ವವಾದ್ದು. ಎಲ್ಲಾ ಜೀವಜಂತುಗಳಲ್ಲೂ ಇರುವ ಜೈವಿಕ ವಸ್ತು ಈ ಡಿ. ಎನ್. ಎ. ಆದರೆ ೧೯೬೨ರಲ್ಲಿ ಡಿ. ಎನ್. ಎ. ರಚನೆಯ ಸಂಶೋಧನೆಗೆ ನೊಬೆಲ್ ಪಾರಿತೋಷಕ ಸಿಗುವಷ್ಟರಲ್ಲಿ ರೋಸಲಿಂಡ್ ತೀರಿಕೊಂಡ ಕಾರಣ, ಎಲ್ಲರೂ ಈಕೆಯನ್ನು, ಈಕೆಯ ಚಾರಿತ್ರಿಕ ಕೊಡುಗೆಯನ್ನು ನಿರಾಯಾಸವಾಗಿ ಮರೆತರು. ಬ್ರಿಟನ್ನಿನ ಈ ವಿಜ್ಞಾನಿ ಅತ್ಯಂತ ಪ್ರತಿಭಾವಂತ ಸ್ಫಟಿಕಶಾಸ್ತ್ರಜ್ಞೆ. ಈಕೆ ಭೌತ ರಸಾಯನಶಾಸ್ತ್ರ ಮತ್ತು ಅಣು ಜೀವಶಾಸ್ತ್ರಕ್ಕೆ ವಿಶೇಷ ಕೊಡುಗೆ ನೀಡಿದ ಸಂಶೋಧಕಿ.

ಜುಲೈ ೨೫, ೧೯೨೦ರಂದು ಲಂಡನ್ನಿನ ಮೇಲ್ಮಧ್ಯಮ ವರ್ಗದ ಯಹೂದಿ ಕುಟುಂಬದಲ್ಲಿ ರೋಸಲಿಂಡ್ ಜನಿಸಿದಳು. ಒಬ್ಬ ಅಣ್ಣ, ಇಬ್ಬರು ತಮ್ಮಂದಿರು, ಎಂಟು ವರ್ಷದ ನಂತರ ಹುಟ್ಟಿದ ಓರ್ವ ತಂಗಿ. ಅಣ್ಣ ತಮ್ಮಂದಿರ ನಡುವೆ ಆಡುತ್ತಾ, ಗಂಡು ಹುಡುಗರಿಗೆ ದೊರೆತ ಎಲ್ಲ ಅವಕಾಶಗಳನ್ನು ಪಡೆದ ಸಂತಸದ ಬಾಲ್ಯ ರೋಸಲಿಂಡಳದು. ರೋಸಲಿಂಡ್ ಲಂಡನ್ನಿನ ಪ್ರತಿಷ್ಠಿತ 'ಸೇಂಟ್ ಪಾಲ್ ಹೆಣ್ಣು ಮಕ್ಕಳ ಶಾಲೆ'ಯಲ್ಲಿ ವ್ಯಾಸಂಗ ಮಾಡಿದಳು. ಹದಿನೈದನೇ ವರ್ಷದಲ್ಲಿಯೇ ರೋಸಲಿಂಡ್, ತಾನು ವಿಜ್ಞಾನಿಯಾಗಬೇಕೆಂದು ನಿರ್ಧರಿಸಿದಳು. ತಂದೆಗೆ ಹೆಣ್ಣು ಮಗು, ವಿಜ್ಞಾನ ಓದಿ ಉದ್ಯೋಗ ಹಿಡಿಯುವ ಅಗತ್ಯವೇನು ಎನಿಸಿತ್ತು, ಆಕೆಗೆ ಹಣ ಗಳಿಸುವ ಅನಿವಾರ್ಯವಿರಲಿಲ್ಲ. ಆಕೆಯ ಎಲ್ಲ ಅಗತ್ಯಗಳನ್ನೂ ಪೂರೈಸಬಲ್ಲ ಸ್ಥಿತಿವಂತ ಕುಟುಂಬ. ಆ ಕಾಲದಲ್ಲಿ ವಿಜ್ಞಾನ ರಂಗದಲ್ಲಿ ಮಹಿಳೆಗೆ ತೆರೆದ ಸ್ವಾಗತವಿರಲಿಲ್ಲ. ಮಹಿಳೆಯರಿಗೆ ಕೆಲಸ ಸಿಗುತ್ತಿದ್ದುದೇ ಕಡಮೆ. 'ರಾಯಲ್ ಸೊಸೈಟಿ'ಯಂತಹ ಪ್ರತಿಷ್ಠಿತ ಸಂಸ್ಥೆಗಳು ಮಹಿಳೆಯರನ್ನು ಗಣನೆಗೇ ತೆಗೆದುಕೊಂಡಿರಲಿಲ್ಲ. ತಂದೆಗೆ, ಉನ್ನತ ವ್ಯಾಸಂಗ ವ್ಯರ್ಥವಾಗಿ ಕಂಡಿತ್ತು. ಆದರೂ ಆಕೆಯ ವಿದ್ಯಾಭ್ಯಾಸಕ್ಕಾಗಲಿ, ಸಂಶೋಧನೆಗಾಗಲಿ ಯಾರೊಬ್ಬರೂ ಅಡ್ಡಬರಲಿಲ್ಲ.

೧೯೩೮ರಲ್ಲಿ ಕೇಂಬ್ರಿಜ್‌ನ ನ್ಯೂವಾಲ್ ಕಾಲೇಜಿನಲ್ಲಿ ರೋಸಲಿಂಡ್ ಓದಿದಳು. ೧೯೪೧ರಲ್ಲಿ ಕೇಂಬ್ರಿಜ್‌ನಿಂದ ಪದವೀಧರಳಾಗಿ, ಅಲ್ಲಿಯೇ ರೊನಾಲ್ಡ್ ನಾರಿಶ್ ಅವರ ಕೆಳಗೆ ಅನಿಲ-ಅವಸ್ಥೆಯ ವರ್ಣಕಲಿಪಿಯ (gas-phase chromatography) ಸಂಶೋಧನೆಗೆ ನಿಂತಳು. ಅಲ್ಲಿ ಡಿ. ಎಚ್. ಬ್ಯಾಂಗ್ಯಾಮ್ ಅವರ ಕೆಳಗೆ ತನ್ನ ಭೌತ ರಸಾಯನಶಾಸ್ತ್ರದ ಪಾಂಡಿತ್ಯವನ್ನು ಕಲಿತಳು ಮತ್ತು ಇಂಗಾಲೀಕರಿಸಿದ ಕಲ್ಲಿದ್ದಿಲಿನ ಭೌತಿಕ ರಚನೆಯನ್ನು ಕಂಡುಹಿಡಿಯುವತ್ತ ತೊಡಗಿದಳು. ೧೯೪೫ರಲ್ಲಿ

ರೋಸಲಿಂಡ್ 'ಬ್ರಿಟಿಷ್ ಕೋಲ್ ಯುಟಲೈಸೇಷನ್ ರಿಸರ್ಚ್ ಅಸೋಸಿಯೇಷನ್' ಸೇರಿದಳು. ಕೇಂಬ್ರಿಜ್‌ನಲ್ಲಿ ಡಾಕ್ಟರೇಟ್ ಪದವಿ ಪಡೆದ ರೋಸಲಿಂಡ್, ೧೯೪೭ರಿಂದ ೧೯೫೦ರವರೆಗೆ ಪ್ಯಾರೀಸಿನ ಸರಕಾರಿ ಪ್ರಯೋಗಶಾಲೆಯಲ್ಲಿ ಅಸ್ಫಟಿಕ ಇಂಗಾಲಗಳ ಕ್ಷ-ಕಿರಣ ಚದುರಿಕೆಯನ್ನು ಕುರಿತು ಸಂಶೋಧನೆ ನಡೆಸಿದ್ದು, ಇಂಗಾಲಗಳ ಈ ಕ್ಷ-ಕಿರಣ ವಿವರ್ತನೆಯ ಚಿತ್ರಗಳ ಸವಿಸ್ತಾರದ ವಿಶ್ಲೇಷಣಾ ವಿಧಾನವನ್ನು ಕಂಡುಹಿಡಿದಳು. ಈ ವಿಧಾನ ಕಲ್ಲಿದ್ದಲಿನ ರಚನೆಯನ್ನು -ಮತ್ತಷ್ಟು ನಿಖರವಾಗಿ, ಪರಿಮಾಣಾತ್ಮಕವಾಗಿ ವಿವರಿಸುವ ಸಾಧನವಾಯಿತು. ಗ್ರಾಫೈಟ್ ಆಗಿ ಪರಿವರ್ತನೆಯಾಗುವ ಇಂಗಾಲಗಳು ಮತ್ತು ಹಾಗೆ ಪರಿವರ್ತನೆಯಾಗದ ಇಂಗಾಲಗಳ ನಡುವಿನ ವ್ಯತ್ಯಾಸವನ್ನು ತನ್ನ ಸಂಶೋಧನಾ ಸರಣಿಗಳಲ್ಲಿ ನಿಖರವಾಗಿ ತೋರಿಸಿದಳು. ಈ ಸಂಶೋಧನೆಗಳು ಹಳೆಯ 'ಕಲ್ಲಿದ್ದಲ ಕಿಟ್ಟ'ದ ಕೈಗಾರಿಕೆಗೂ ಹೊಸ ಗ್ರಾಫೈಟ್ ಕೈಗಾರಿಕೆಗೂ ಮೂಲಭೂತ ಆಸಕ್ತಿಯ ಅಧ್ಯಯನವಾದವು. ಈ ರಂಗಕ್ಕೆ ಈಕೆಯ ಕೊಡುಗೆ ಗಣನೀಯವಾದದ್ದು. ಈಕೆ ಅಧಿಕ ತ್ರಾಣದ ಇಂಗಾಲದ ಎಳೆಗಳ (high strength carbon fibres) ವಿಜ್ಞಾನ ಮತ್ತು ತಂತ್ರಜ್ಞಾನ ಕಂಡುಹಿಡಿದವರಲ್ಲಿ ಮುಖ್ಯಳು.

ವಿವಾಹ ಹಾಗೂ ತಾಯ್ತನ ತನ್ನ ವಿಜ್ಞಾನದ ಬದುಕಿಗೆ ಅಡ್ಡಿ ಬರುವುದೆಂದು ಗಟ್ಟಿಯಾಗಿ ಭಾವಿಸಿದ್ದ ರೋಸಲಿಂಡ್ ಅವಿವಾಹಿತಳಾಗಿ ಉಳಿವ ನಿರ್ಧಾರವನ್ನು ತೆಗೆದುಕೊಂಡಳು. ಬಹಳಷ್ಟು ಪ್ರತಿಭಾವಂತ ಮಹಿಳಾ ವಿಜ್ಞಾನಿಗಳು ವಿವಾಹವಾಗಿ ತಮ್ಮ ಸಂಶೋಧನಾ ರಂಗದಿಂದ ದೂರವಾದದ್ದನ್ನು ಕಂಡಿದ್ದಳು. ಮಕ್ಕಳನ್ನು ಆಯಾಗಳ ಬಳಿ ಬಿಟ್ಟು, ಸಂಶೋಧನೆಯಲ್ಲಿ ತೊಡಗುವುದು ಈಕೆಗೆ ಅಸಾಧುವಾಗಿ ಕಾಣುತ್ತಿತ್ತು. ಈ ಎಲ್ಲ ವೈಯಕ್ತಿಕ ಚಿಂತನೆಗಳು, ರೋಸಲಿಂಡ್ ಅವಿವಾಹಿತಳಾಗಿ ಉಳಿಯುವಂತೆ ಪ್ರೇರೇಪಿಸಿದ್ದವು.

ಕ್ಷ-ಕಿರಣ ವಿವರ್ತನಾ ತಂತ್ರದಲ್ಲಿ ತಜ್ಞಳಾದ ರೋಸಲಿಂಡ್, ಇದೇ ತಂತ್ರವನ್ನು ಮುಂದೆ ಡಿ. ಎನ್. ಎ.ಯ ರಚನೆಯ ಅಧ್ಯಯನಕ್ಕೆ, ಅನೇಕ ವೈರಾಣುಗಳ ಅಧ್ಯಯನಕ್ಕೆ ಬಳಸಿದಳು. ಈ ತಂತ್ರ ಸ್ಫಟಿಕಗಳನ್ನು ನಿರೂಪಿಸುವ ಅಣುಗಳಲ್ಲಿ, ಪರಮಾಣುಗಳ ಮೂರು ಆಯಾಮದ ರಚನೆಯನ್ನು ಕಂಡುಹಿಡಿಯಲು ಅತಿ ಮುಖ್ಯವಾದ ಸಾಧನ. ರೋಸಲಿಂಡಳ ಕಲ್ಲಿದ್ದಿಲಿನ ರಚನೆಯನ್ನು ಕುರಿತ ಸಂಶೋಧನೆ ಈಕೆಯನ್ನು ಚಾರ್ಲ್ಸ್ ಕೋಲ್ಸನ್ ಅವರ ಪರಿಚಯಕ್ಕೆ ತಂದಿತು. ಈತನ ಮೂಲಕ ರ್‍ಯಾಂಡಾಲ್ ಅವರ ಪರಿಚಯವಾಯಿತು. ೧೯೫೧ರಲ್ಲಿ ರೋಸಲಿಂಡ್‌ಗೆ ಲಂಡನ್ನಿನ ಕಿಂಗ್ಸ್ ಕಾಲೇಜಿನಲ್ಲಿ 'ರ್‍ಯಾಂಡಾಲ್ ಜೀವಭೌತಶಾಸ್ತ್ರದ ವಿಭಾಗ'ದಲ್ಲಿ ಕ್ಷ-ಕಿರಣ ವಿವರ್ತನೆಯ ವಿಭಾಗವೊಂದನ್ನು ನಿರ್ಮಿಸಲು ಆಹ್ವಾನ ಬಂದಿತು. ಜನವರಿ ೧೯೫೧ರಲ್ಲಿ ರೋಸಲಿಂಡ್, ಇಲ್ಲಿಗೆ ಆಗಮಿಸಿದಳು. ಇಲ್ಲಿ ಈಕೆ ಡಿ. ಎನ್. ಎ.ಯ ರಚನೆಯನ್ನು ವಿಶ್ಲೇಷಿಸಲು ಅಧಿಕ ವಿಘಟನ ಶಕ್ತಿಯ ಕ್ಷ-ಕಿರಣ ಕ್ಯಾಮರಾವೊಂದನ್ನು ನಿರ್ಮಿಸಿದಳು. ಅದು ಡಿ. ಎನ್. ಎ. ರಚನೆಯ ಬಗ್ಗೆ ಬಿರುಸಿನ ಸಂಶೋಧನೆ ನಡೆದ ವರ್ಷ. ೧೯೫೧ರ ಸುಮಾರಿಗೆ ನಮ್ಮ ಜೀವಕೋಶದಲ್ಲಿರುವ ವರ್ಣತಂತುಗಳಲ್ಲಿ ಕಾಣಬರುವ ದಾರದಂತಹ ಡಿ. ಎನ್. ಎ. ನಮ್ಮ ವಂಶವಾಹಿ ಸಂಕೇತಗಳನ್ನು ಪೀಳಿಗೆಯಿಂದ ಪೀಳಿಗೆಗೆ ಕೊಂಡೊಯ್ಯುತ್ತೆಂದು ತಿಳಿದುಬಂದಿತ್ತು. ಆದರೆ ತನ್ನನ್ನು ತಾನೇ ನಕಲು ಮಾಡಿಕೊಳ್ಳಬಲ್ಲ ಈ ಡಿ. ಎನ್. ಎ. ಅಣುವಿನ ರಚನೆ ನಿಗೂಢವಾಗಿ ಉಳಿದಿದ್ದು, ವಿಜ್ಞಾನಿಗಳ ಕುತೂಹಲ ಕೆರಳಿಸಿತ್ತು. ಅಮೆರಿಕದಲ್ಲಿ ಮಹಾನ್ ರಸಾಯನಶಾಸ್ತ್ರಜ್ಞ ಲೈನಸ್ ಪಾಲಿಂಗ್ ಈ ಡಿ. ಎನ್. ಎ.ಯತ್ತ ತನ್ನ ಗಮನಹರಿಸಿದ್ದ. ಲಂಡನ್ನಿನ ಕಿಂಗ್ಸ್ ಕಾಲೇಜಿನಲ್ಲಿ ಮಾರಿಸ್ ವಿಲ್ಕಿನ್ಸ್ ಮತ್ತು ರೋಸಲಿಂಡ್ ಫ್ರಾಂಕ್ಲಿನ್ ಇದೇ ಸಮಸ್ಯೆಯನ್ನು ಬಗೆಹರಿಸುವತ್ತ ತೊಡಗಿದ್ದರು. ಇತ್ತ ಕೇಂಬ್ರಿಜ್‌ನಲ್ಲಿ ಫ್ರಾನ್ಸಿಸ್ ಕ್ರಿಕ್ ಮತ್ತು ಜೇಮ್ಸ್

ವ್ಯಾಟ್ಸನ್ ಇದೇ ವಿಷಯದಲ್ಲಿ ಸಂಶೋಧನೆಗೆ ಇಳಿದಿದ್ದರು. ಈ ಡಿ. ಎನ್. ಎ. ರಚನೆಯನ್ನು ಕಂಡುಹಿಡಿವ ಪಂದ್ಯದಲ್ಲಿ ಗೆಲ್ಲುವ ಆತುರ ಅವಸರ ವ್ಯಾಟ್ಸನ್‌ದು. ೧೯೫೧ರಲ್ಲಿ ವ್ಯಾಟ್ಸನ್ ಮತ್ತು ಕ್ರಿಕ್ ಡಿ. ಎನ್. ಎ. ರಚನೆಯನ್ನು ಕುರಿತು ಬರೆದ ವೈಜ್ಞಾನಿಕ ಪ್ರಬಂಧ ಎಷ್ಟು ಹಾಸ್ಯಾಸ್ಪದವಾಗಿತ್ತೆಂದರೆ ಬಲು ಪೇಚಾಟಕ್ಕೆ ಸಿಕ್ಕಿಸಿ, ಕಿರಿಕಿರಿಗೊಂಡ ಪ್ರಯೋಗ ಶಾಲೆಯ ನಿರ್ದೇಶಕರಾದ ಸರ್ ಲಾರೆನ್ಸ್ ಬ್ರಾಗ್ 'ಡಿ. ಎನ್. ಎ.ಯ ತಂಟೆಗೆ ಹೋಗಬೇಡಿ, ಡಿ. ಎನ್. ಎ.ಯ ಸಮಸ್ಯೆ ಕಿಂಗ್ಸ್ ಕಾಲೇಜಿಗೆ ಸೇರಿದ್ದು' ಎಂದು ಆಜ್ಞೆ ಹೊರಡಿಸಿದ್ದರು !

ಆದರೆ ಇತ್ತ ಕಿಂಗ್ಸ್ ಕಾಲೇಜಿನಲ್ಲಿ ರೋಸಲಿಂಡ್ ಮತ್ತು ಆಕೆಯ ಸಹೋದ್ಯೋಗಿ ಮಾರಿಸ್ ವಿಲ್ಕಿನ್ಸ್ ಅವರ ನಡುವೆ ಸೌಹಾರ್ದದ ಸಂಬಂಧವಿರಲಿಲ್ಲ. ರೋಸಲಿಂಡ್ ಕಿಂಗ್ಸ್ ಕಾಲೇಜಿಗೆ ಸೇರಿದಾಗ, ರ್‍ಯಾಂಡಾಲ್, ಡಿ. ಎನ್. ಎ. ಸಮಸ್ಯೆಯನ್ನು ರೋಸಲಿಂಡ್‌ಗೆ ಒಪ್ಪಿಸಿದ್ದರು. ಹೊಸ ಸಲಕರಣೆಗಳನ್ನು ತರಿಸಿ ರೋಸಲಿಂಡ್ ತ್ವರೆಯಿಂದ ಸಂಶೋಧನೆಯಲ್ಲಿ ತೊಡಗಿದ್ದಳು. ಆ ಸಮಯದಲ್ಲಿ ವಿಲ್ಕಿನ್ಸ್ ರಜೆಯಲ್ಲಿದ್ದು, ಈ ಮೊದಲು ಆತ ಆ ವಿಷಯವನ್ನು ಕುರಿತಂತೆ ಸಂಶೋಧನೆ ನಡೆಸಿದ್ದು, ಹಿಂತಿರುಗಿ ಬಂದಾಗ ರೋಸಲಿಂಡ್ ತನಗೆ ಸಹಾಯಕಳಾಗಿ ಕೆಲಸ ಮಾಡುವ ಬದಲು, ಸಮಾನವಾಗಿ ಸಂಶೋಧನೆಗೆ ತೊಡಗಿದ್ದು ಅವರಿಬ್ಬರ ನಡುವಿನ ಘರ್ಷಣೆಗೆ ಮೂಲ ಕಾರಣವಾಗಿತ್ತು. ರೋಸಲಿಂಡ್ ಓರ್ವ ಪದವೀಧರ ವಿದ್ಯಾರ್ಥಿ ಗಾಸ್ಲಿಂಗ್‌ನೊಡನೆ ಸಂಶೋಧನೆ ಆರಂಭಿಸಿದಳು. ರೋಸಲಿಂಡ್ ಅತಿ ಬುದ್ಧಿವಂತ ಪ್ರಯೋಗಶೀಲ ವಿಜ್ಞಾನಿ. ವಿಶ್ರಾಂತಿ ಯಿಲ್ಲದೆ, ಹಗಲಿರುಳೂ ದುಡಿದ ಶ್ರಮಜೀವಿ. ಪ್ರತಿ ಪ್ರಯೋಗವೂ ಗಂಟೆಗಟ್ಟಲೆ ಜರುಗುವಂಥದ್ದು. ಜೀವಂತ ಜೀವಕೋಶಗಳಲ್ಲಿರುವ ಡಿ. ಎನ್. ಎ. ಒದ್ದೆಯಾಗಿರುತ್ತದೆ. ಅದು ಒಣಗಿದೊಡನೆ ಅದರ ರಚನೆಯೂ ಬದಲಾಗುತ್ತದೆ. ಡಿ. ಎನ್. ಎ. ಎಳೆಯನ್ನು ಒಂದೇ ವಿಧದಲ್ಲಿ ಒದ್ದೆಯಾಗಿಡುವ ಕೆಲಸ ಕಡು ಶ್ರಮದ್ದು. ಕೆಲವೇ ತಿಂಗಳುಗಳಲ್ಲಿ ಡಿ. ಎನ್. ಎ.ಯ ಹೊಸದೊಂದು 'ಕ್ಷ-ಕಿರಣ ವಿವರ್ತನ ಚಿತ್ರ' ಸಿಗತೊಡಗಿತು. ರೋಸಲಿಂಡ್ ಡಿ. ಎನ್. ಎ.ಯ 'ಎ' ರೂಪದ ಚಿತ್ರವನ್ನು ಪಡೆದಳು. ಅದರೊಡನೆಯೇ ತೀವ್ರ ಒದ್ದೆತನದಲ್ಲಿ ರಚನೆಯ ನಮೂನೆ ಬಹಳಷ್ಟು ಬದಲಾಗಿ, ಸರಳವಾಗಿ ಶಿಲುಬೆ ರೂಪದ್ದಾಗಿ ಕಂಡುಬಂದು ಮತ್ತೊಂದು ಹೊಸ ವಿಧದ 'ಬಿ' ರೂಪದ ರಚನೆ ಗೋಚರಿಸಿತು. ಇದು ರೋಸಲಿಂಡಳ ಅತಿ ಯಶಸ್ವೀ ಪ್ರಯೋಗ. ೧೯೫೧ರ ಜನವರಿಯಲ್ಲಿ ಡಿ. ಎನ್. ಎ. ಕುರಿತು ಸಂಶೋಧನೆ ಪ್ರಾರಂಭಿಸಿದ್ದ ರೋಸಲಿಂಡ್ ನವೆಂಬರ್ ತಿಂಗಳ ಹೊತ್ತಿಗೆ ಡಿ. ಎನ್. ಎ.ಯ ಒಂದು ರೂಪ ಸುರಳಿ ಆಕಾರದ್ದೆಂದು ಪ್ರಕಟಿಸಿದಳು. ರೋಸಲಿಂಡಳ ಕ್ಷ-ಕಿರಣ ವಿವರ್ತನಾ ಚಿತ್ರಗಳು ಡಿ. ಎನ್. ಎ. ಅಣುರಚನೆಯತ್ತ ಹಿಡಿದ ಪ್ರಮುಖ ಸುಳಿವಾಗಿತ್ತು. ರೋಸಲಿಂಡಳ ಈ ಚಿತ್ರಗಳು ಡಿ. ಎನ್. ಎ. ರಚನೆಗೆ ಹಿಡಿದ ಕೀಲಿಕೈಯಾಗಿತ್ತು. ಅದೇ ನವೆಂಬರ್ ತಿಂಗಳಿನಲ್ಲಿ ರೋಸಲಿಂಡ್ ತನ್ನ ಸಂಶೋಧನೆಯ ಬಗ್ಗೆ ಪ್ರವಚನವನ್ನು ನೀಡಿದಾಗ, ಆ ಪ್ರೇಕ್ಷಕರಲ್ಲಿ ವ್ಯಾಟ್ಸನ್ ಕೂಡ ಇದ್ದ. ರೋಸಲಿಂಡ್ ಅತಿ ಎಚ್ಚರಿಕೆಯಿಂದ ತಯಾರಿಸಿದ ಪ್ರಬಂಧದ ವಿಷಯವನ್ನು ಗಮನವಿಟ್ಟು ಕೇಳುವ ಬದಲು 'ರೋಸಲಿಂಡ್ ಆ ದಪ್ಪ ಕನ್ನಡಕ ತೆಗೆದು, ಕೂದಲನ್ನು ನವೀನ ರೀತಿಯಲ್ಲಿ ಶೃಂಗರಿಸಿಕೊಂಡರೆ ಎಷ್ಟು ಚೆನ್ನಾಗಿ ಕಾಣುತ್ತಿತ್ತು' ಎಂದು ಯೋಚಿಸುತ್ತಾ ವ್ಯಾಟ್ಸನ್ ಕುಳಿತಿದ್ದ. ರೋಸಲಿಂಡಳ ಪ್ರವಚನ ಕೇಳಿ ಹಿಂತಿರುಗಿದ ವ್ಯಾಟ್ಸನ್ ತಟ್ಟನೆ ತನ್ನ ಪ್ರಯೋಗಶಾಲೆಗೆ ಹೋಗಿ ಕ್ರಿಕ್‌ನೊಡನೆ ಡಿ. ಎನ್. ಎ. ಮಾದರಿಯೊಂದನ್ನು ರಚಿಸಿ, 'ಡಿ. ಎನ್. ಎ. ರಚನೆಯನ್ನು ಕಂಡುಹಿಡಿದುದಾಗಿ ಸಂಭ್ರಮದಿಂದ ಘೋಷಿಸಿಬಿಟ್ಟ. ಆ ಮಾದರಿಯನ್ನು ನೋಡಲು ಹೋದ ರೋಸಲಿಂಡ್, ನೋಡಿದೊಡನೆಯೇ ಅದು ತಪ್ಪಾಗಿರುವುದನ್ನು ಗುರುತಿಸಿ, ಕಿರಿಕಿರಿಗೊಂಡು ರೇಗಿಕೊಂಡೇ ಹಿಂತಿರುಗಿದಳು. ರೋಸಲಿಂಡಳ ಪ್ರಯೋಗಗಳ ವಿಷಯಗಳನ್ನು ಟಿಪ್ಪಣಿ ತೆಗೆದುಕೊಂಡಿದ್ದ ವ್ಯಾಟ್ಸನ್ ತಪ್ಪು ತಪ್ಪಾಗಿ ನೆನಪಿನಲ್ಲಿಟ್ಟುಕೊಂಡಿದ್ದ.



ರೋಸಲಿಂಡ್ ಎಲ್ಸೀ ಫ್ರಾಂಕ್ಲಿನ್

೧೯೫೨ರಲ್ಲಿ ರೋಸಲಿಂಡ್ 'ಬಿ' ಮಾದರಿಯ ವಿನೂತನವಾದ ರಚನೆಯ ಅತ್ಯುತ್ತಮ ಚಿತ್ರಗಳನ್ನು ಪಡೆಯುವಲ್ಲಿ ಯಶಸ್ವಿಯಾದಳು. ಆದರೆ ಆಕೆಯ ಕೆಲಸ ಪುರುಷ ಜಗತ್ತಿನಲ್ಲಿ ಪ್ರಾಮುಖ್ಯ ಪಡೆಯಲಿಲ್ಲ. ಕಿಂಗ್ಸ್ ಕಾಲೇಜಿನಲ್ಲಿ ಆ ಸಮಯದಲ್ಲಿ ಅನೇಕ ಮಹಿಳೆಯರಿದ್ದರೂ, ತನ್ನ ಕೆಲಸದಲ್ಲಿ ತೀವ್ರವಾಗಿ ತೊಡಗುವ, ಅಷ್ಟೇ ಗಟ್ಟಿತನದಿಂದ, ಆತ್ಮವಿಶ್ವಾಸದಿಂದ ಮುನ್ನುಗ್ಗುವ ರೋಸಲಿಂಡ್ ಈ ಪುರುಷ ಜಗತ್ತಿನಲ್ಲಿ ಬಹಳಷ್ಟು ಏಕಾಂಗಿಯಾಗಿ ಉಳಿದಳು. ಒಂದಿಷ್ಟು ಮುಂಗೋಪದ ಈ ಹುಡುಗಿ ಸಂಪೂರ್ಣ ತನ್ನದೇ ಜಗತ್ತಿನಲ್ಲಿ ಒಂಟಿಯಾಗಿ ಕೆಲಸ ಮಾಡತೊಡಗಿದಳು. ತನ್ನ ಸಂಶೋಧನೆಯ ಕೆಲಸದಲ್ಲಿ ತೀವ್ರವಾಗಿ ತೊಡಗುತ್ತಿದ್ದ ರೋಸಲಿಂಡಳದು ಹೆಚ್ಚು ಜನರೊಡನೆ ಬೆರೆಯುವ, ಹೊರಗೆ ಓಡಾಡುವ ವ್ಯಕ್ತಿತ್ವವಲ್ಲ. ಕಡು ಪರಿಶ್ರಮಿ ಸಂಶೋಧಕಿಯಾದ ರೋಸಲಿಂಡ್ ಸದಾ ತನ್ನ ಕೆಲಸದಲ್ಲಿ ತೊಡಗಿದ್ದು, ಯಾವ ಔತಣ, ಸಂತೋಷ ಕೂಟಗಳಿಗೂ ಹೋಗುತ್ತಿರಲಿಲ್ಲ.

ರೋಸಲಿಂಡಳ ಸಂಶೋಧನೆ ಮುಂದುವರೆದಂತೆ ವಿಲ್ಕಿನ್ಸ್ ನೊಡನೆಯ ಸಂಬಂಧವೂ ಬಿಗುವಾಗುತ್ತಾ ಅವರ ನಡುವೆ ಶೀತಲ ಯುದ್ಧ ಮುಂದುವರೆದಿತ್ತು. ಈ ಸಮಯದಲ್ಲಿ ನಡೆದ ಒಂದು ಘಟನೆ ವ್ಯಾಟ್ಸನ್ ಮತ್ತು ಕ್ರಿಕ್ ಅವರನ್ನು ಅದೃಷ್ಟದ ಹಾದಿಗೆ ತಳ್ಳುವುದರಲ್ಲಿ ಯಶಸ್ವಿಯಾಯಿತು. ವ್ಯಾಟ್ಸನ್ ಮತ್ತು ಕ್ರಿಕ್, ರೋಸಲಿಂಡಳ ಸಹಸಂಶೋಧಕ ಮಾರಿಸ್ ವಿಲ್ಕಿನ್ಸ್ ಮೂಲಕ, ಆಕೆ ಕಟು ಪರಿಶ್ರಮದಿಂದ ಪಡೆದ ಡಿ. ಎನ್. ಎ.ಯ 'ಬಿ' ರೂಪದ ಅತ್ಯುತ್ತಮ ಕ್ಷ-ಕಿರಣ ವಿವರ್ತನೆಯ ಚಿತ್ರವನ್ನು, ಸಂಶೋಧನಾ 'ದತ್ತಾಂಶ'ಗಳನ್ನು ಗಳಿಸಿದರು. ಅವುಗಳ ಆಧಾರದ ಮೇಲೆ ಡಿ. ಎನ್. ಎ.ಯ 'ಜೋಡಿ ಸುರುಳಿ' ರಚನೆಯನ್ನು ಪ್ರಕಟಿಸಿಬಿಟ್ಟರು. ರೋಸಲಿಂಡಳಿಗೆ ತಿಳಿಯದಂತೆ ಆಕೆಯ ಸಂಶೋಧನಾ ಪ್ರಬಂಧಗಳನ್ನೂ ವ್ಯಾಟ್ಸನ್ ಮತ್ತು ಕ್ರಿಕ್ ಅವರಿಗೆ ತೋರಿಸಲಾಗಿತ್ತು. ೧೯೫೩, ಮಾರ್ಚ್ ೧೨ ಕೇಂಬ್ರಿಜ್ ವಿಶ್ವವಿದ್ಯಾಲಯದ ಕೊಠಡಿಯೊಂದರಲ್ಲಿ ವ್ಯಾಟ್ಸನ್ ಮತ್ತು ಕ್ರಿಕ್ ಹೆಮ್ಮೆಯಿಂದ ತಮ್ಮ ಡಿ. ಎನ್. ಎ.

ರಚನೆಯ ಮಾದರಿಯನ್ನು ಪ್ರದರ್ಶಿಸಿದರು. ಡಿ. ಎನ್. ಎ. ರಚನೆಯ ಬಗ್ಗೆ ಎರಡು ವರ್ಷಗಳ ಕಾಲ ತೀವ್ರ ಸಂಶೋಧನೆ ನಡೆಸಿದ್ದ ರೋಸಲಿಂಡ್ ಅದೇ 'ಜೋಡಿ ಸುರುಳಿ ರಚನೆ'ಯ ಬಲು ಹತ್ತಿರವಿದ್ದಳು. ವ್ಯಾಟ್ಸನ್ ಮಾದರಿಯೆದುರು ಬೆರಗುಗಣ್ಣಿನಿಂದ ನಿಂತು ನೋಡಿದಳು. ತನ್ನ ಲೆಕ್ಕಕ್ಕೆ ಸಂಪೂರ್ಣ ಹೊಂದಿ ನಿಂತ ಮಾದರಿ ಅದು. ಯಾವ ರೀತಿಯಲ್ಲೂ ತನ್ನ ಗಣಿತಕ್ಕೆ, ಗುಣಾಕಾರಕ್ಕೆ ವ್ಯತಿರಿಕ್ತವಾಗದೆ ನಿಂತ ಮಾದರಿ. ತನ್ನದೇ ಕ್ಷ-ಕಿರಣ ಚಿತ್ರಗಳು, ಸಂಶೋಧನಾ ದತ್ತಾಂಶಗಳು ವ್ಯಾಟ್ಸನ್ ಕೈ ತಲುಪಿದ್ದು ರೋಸಲಿಂಡ್‌ಗೆ ಆಗ ತಿಳಿದಿರಲಿಲ್ಲ. ಆಕೆಯ ಚಿತ್ರಗಳಲ್ಲಿ ರೋಸಲಿಂಡ್ ಕಾಣದ ಕೆಲವು ಅಂಶಗಳನ್ನು ಕ್ರಿಕ್ ಗುರುತಿಸಿದ್ದ. ಅಚ್ಚರಿಯಿಂದ ರೋಸಲಿಂಡ್ ಮನದಲ್ಲೇ ಗುಣಿಸಿ ನೋಡಿದರೆ ಅವು ತನ್ನ ಸಂಶೋಧನೆಯೊಡನೆ ಹೋಲುತ್ತಿದ್ದವು. ರೋಸಲಿಂಡಳ ಪ್ರಬಂಧದಲ್ಲಿ ಹೊಸ ಅಂಶಗಳನ್ನು ಗುರುತಿಸುವಲ್ಲಿ ಕ್ರಿಕ್ ಹಿಂದೆ ಸ್ಫಟಿಕಶಾಸ್ತ್ರದಲ್ಲಿ ನಡೆಸಿದ್ದ ಸಂಶೋಧನೆ ಸಹಾಯಕವಾಗಿತ್ತು. ಡಿ. ಎನ್. ಎ. ರಚನೆಯನ್ನು ಕುರಿತು ೧೯೫೩ರಲ್ಲಿ 'ನೇಚರ್' ಪತ್ರಿಕೆಯಲ್ಲಿ ವ್ಯಾಟ್ಸನ್ ಮತ್ತು ಕ್ರಿಕ್, ವಿಲ್ಕಿನ್ಸ್ ಮತ್ತು ಸ್ಟೋಕ್ಸ್ ಹಾಗೂ ರೋಸಲಿಂಡ್ ಮತ್ತು ಗಾಸ್ಲಿಂಗ್ ಅವರ ಮೂರು ಪ್ರಬಂಧಗಳು ಪ್ರಕಟವಾದವು.

ವ್ಯಾಟ್ಸನ್ ಮತ್ತು ಕ್ರಿಕ್ ಅವರ ಡಿ. ಎನ್. ಎ. ಮಾದರಿಗೆ ರೋಸಲಿಂಡ್ ಅತಿ ಮುಖ್ಯ ದತ್ತಾಂಶಗಳನ್ನು ಒದಗಿಸಿದ್ದಲ್ಲದೆ, ಅವರ ಮೊದಲ ಅಪ್ರಕಟಿತ ಡಿ. ಎನ್. ಎ. ಮಾದರಿಯ ತಪ್ಪುಗಳನ್ನು ಎತ್ತಿ ತೋರಿಸಿ ವಿವರಿಸಿದ್ದಳು. ತಮ್ಮ ಸಂಶೋಧನೆಯ ಯಶಸ್ಸಿಗೆ ಮೂಲ ಕಾರಣವಾದ ರೋಸಲಿಂಡಳ 'ದತ್ತಾಂಶ'ಗಳಿಗಾಗಿ ಕೃತಜ್ಞತೆ ವ್ಯಕ್ತಪಡಿಸುವ ಬದಲು ವ್ಯಾಟ್ಸನ್, ತಾನು ಬರೆದ 'ದಿ ಡಬಲ್ ಹೆಲಿಕ್ಸ್' ಪುಸ್ತಕದಲ್ಲಿ, ಆದಾಗಲೇ ಮೃತಳಾಗಿದ್ದ ರೋಸಲಿಂಡಳನ್ನು ಹಟಮಾರಿ ಹೆಣ್ಣಾಗಿ ಕೆಟ್ಟ ರೀತಿಯಲ್ಲಿ ಚಿತ್ರಿಸಿದ. ರೋಸಲಿಂಡ್ ಬಗ್ಗೆ ಈ ಪುಸ್ತಕದಲ್ಲಿ ಆತ ತೋರುವ ಅಸಡ್ಡೆ, ಅಹಂಕಾರ ದಿಗ್ಭ್ರಮೆಗೊಳಿಸುತ್ತವೆ. ಸಾಲದಕ್ಕೆ ಆಕೆಯ ಬುದ್ಧಿಮತ್ತೆಯ ಬಗ್ಗೆ ಮಾತೆತ್ತದೆ, ಆಕೆಯನ್ನು 'ತಕರಾರಿನ ಹಟಮಾರಿ ಗಡುಸು ಹೆಣ್ಣು' ಎಂಬ ಚಿತ್ರ ನೀಡಿದ್ದು ಸತ್ಯಕ್ಕೆ ಬಹಳ ದೂರವಿದ್ದು, ಮಹಿಳಾ ವಿಜ್ಞಾನಿಗಳ ಬಗ್ಗೆ ಪುರುಷ ಪ್ರತಿಕ್ರಿಯೆಯ ಉದಾಹರಣೆಯಾಗಿ ನಿಂತಿದೆ. ವ್ಯಾಟ್ಸನ್‌ನ ಈ ಪುಸ್ತಕ ರೋಸಲಿಂಡ್ ಮರಣಿಸಿದ ಹತ್ತು ವರ್ಷಗಳ ನಂತರ ಪ್ರಕಟವಾದದ್ದು. ಆಕೆಯ ಹೆಣ್ತನವನ್ನು ಟೀಕಿಸುವಷ್ಟೇ ಕಟುವಾಗಿ, ಆಕೆಯ ವೈಜ್ಞಾನಿಕ ಸಂಶೋಧನೆ ತಪ್ಪು ಹಾದಿಯಲ್ಲಿತ್ತೆಂದು ಒತ್ತಿ ಹೇಳುವುದು ವ್ಯಾಟ್ಸನ್‌ಗೆ ಮುಖ್ಯವಾಗಿ ಕಾಣುತ್ತದೆ. ಆತನ ಈ ಬಗೆಯ ವರ್ಣನೆಯನ್ನು ಕಟುವಾಗಿ ಟೀಕಿಸಿದ ಫ್ರೆಂಚ್ ವಿಜ್ಞಾನಿ, ಸೂಕ್ಷ್ಮಜೀವಶಾಸ್ತ್ರಜ್ಞ, ಆಂಡ್ರೆ ಲ್ವೋಫ್, 'ರೋಸಲಿಂಡಳ ವ್ಯಕ್ತಿಚಿತ್ರ ಅತ್ಯಂತ ಕ್ರೂರವಾಗಿದೆ. ಆಕೆಯ ಉಡುಗೆ ತೊಡುಗೆ ವ್ಯಕ್ತಿತ್ವದ ಬಗ್ಗೆ ವ್ಯಾಟ್ಸನ್‌ನ

> ಮಾನವ ಜೀವಕ್ಕೆ ನಾವು ಅತ್ಯಂತ ಹೆಚ್ಚಿನ ಮಹತ್ವವನ್ನು ನೀಡುತ್ತೇವೆ. ಭವ್ಯ ಭವಿಷ್ಯದ ಕನಸನ್ನು ಕಾಣುತ್ತೇವೆ. ಆ ಭವಿಷ್ಯದಲ್ಲಿ ಮಾನವ ಸಂಪೂರ್ಣ ಶಾಂತಿ ಮತ್ತು ಸ್ವಾತಂತ್ರ್ಯಗಳನ್ನು ಅನುಭೋಗಿಸುತ್ತಾನೆ. ಇಂತಹ ನಂಬಿಕೆಯುಳ್ಳ ನಾವು ಮಾನವನ ರಕ್ತ ಹರಿಸಬೇಕಾಗಿ ಬಂದುದಕ್ಕೆ ವ್ಯಥಿಸುತ್ತೇವೆ. ಆದರೆ ಸರ್ವರಿಗೂ ಸ್ವಾತಂತ್ರ್ಯವನ್ನು ದಕ್ಕಿಸಿಕೊಟ್ಟು ಮಾನವನಿಂದ ಮಾನವನ ಶೋಷಣೆಯು ಅಸಾಧ್ಯವನ್ನಾಗಿಸುವ ಮಹಾನ್ ಕ್ರಾಂತಿಯ ಬಲಿಪೀಠದಲ್ಲಿ ಇದು ಅನಿವಾರ್ಯವಾಗಿದೆ. ಕ್ರಾಂತಿ ಚಿರಾಯುವಾಗಲಿ.
>
> *ಭಗತ್ ಸಿಂಗ್ ಮತ್ತು ದತ್*
> *ಕೇಂದ್ರ ಶಾಸನ ಸಭೆಯಲ್ಲಿ ತೂರಿದ ಕರಪತ್ರದಿಂದ*

ಟೀಕೆಗಳು ಒಪ್ಪುವಂತಹುವಲ್ಲ. ಆತನ ಯಶಸ್ಸೆಲ್ಲ, ಸಂಶೋಧನೆಯೆಲ್ಲ ರೋಸಲಿಂಡಳ ಸ್ಫುಟವಾದ ಕ್ಷ-ಕಿರಣ ಚಿತ್ರಗಳಿಂದಲೇ ಆರಂಭವಾದದ್ದು. ರೋಸಲಿಂಡಳ ಸಂಶೋಧನಾ ಫಲಿತಾಂಶಗಳನ್ನು ವ್ಯಾಟ್ಸನ್ ಬಳಸಿಕೊಂಡಿದ್ದ ಎಂಬ ಕಾರಣಕ್ಕಾದರೂ ರೋಸಲಿಂಡಳ ಬಗ್ಗೆ ಕಿಂಚಿತ್ತು ಕೃತಜ್ಞತಾ ಭಾವ ಇರಬೇಕಿತ್ತು' ಎಂದು ಬರೆದಿದ್ದಾರೆ. ವಿಜ್ಞಾನರಂಗದಲ್ಲಿ ಮಹಿಳೆ ಬಹಳಷ್ಟು ಹೊರಗಿನವಳಾಗಿ ಕಾಣುತ್ತಿದ್ದಳು. ತಮ್ಮ ಪುರುಷ ಜಗತ್ತಿನಲ್ಲಿ ಪ್ರಯೋಗಶಾಲೆಯಲ್ಲಿ ದುಡಿಯುವ ಹೆಣ್ಣು ಒಂದು ರೀತಿ ವಿಚಿತ್ರವಾಗಿ ಕಾಣುತ್ತಿದ್ದಳು. ೧೯೭೧ರಲ್ಲಿ ಎಲಿಜಬೆತ್ ಜೇನ್ವೆ ತನ್ನ 'ಮ್ಯಾನ್ಸ್ ವರ್ಲ್ಡ್, ವುಮೆನ್ಸ್ ಪ್ಲೇಸ್' ಎಂಬ ಪುಸ್ತಕದಲ್ಲಿ ರೋಸಲಿಂಡ್ ಕುರಿತ ವ್ಯಾಟ್ಸನ್‌ನ ಹೇಳಿಕೆಗಳನ್ನು 'ವಿಜ್ಞಾನ ರಂಗದಲ್ಲಿ ಮಹಿಳೆಯರತ್ತ ಇರುವ ಪುರುಷ ಪೂರ್ವಾಗ್ರಹದ ನೇರ ಸ್ವರೂಪ'ವಾಗಿ ಉಲ್ಲೇಖಿಸಿದಳು. ಸರಿಯಾದ ಸಹೋದ್ಯೋಗಿ ಇಲ್ಲದೆ, ಸಹೋದ್ಯೋಗಿ ವಿಲ್ಕಿನ್ಸ್‌ನೊಡನೆ ಕಹಿಯಾದ ಸಂಬಂಧ, ಫಲಿತಾಂಶಗಳನ್ನು ಒಬ್ಬಳೇ ವಿಶ್ಲೇಷಿಸಲು ಸೆಣಸಿದ್ದು, ಆಕೆಯ ಕ್ಷ-ಕಿರಣ ಚಿತ್ರಗಳು ವ್ಯಾಟ್ಸನ್ ಕೈ ಸೇರಿದ್ದು, ಕೆಲವೇ ದಿನಗಳ ಅಂತರದಲ್ಲಿ ಆತ ಡಿ. ಎನ್. ಎ. ರಚನೆಯನ್ನು ಕಂಡುಹಿಡಿದ ವಿಜ್ಞಾನಿಯ ಪಟ್ಟ ಗಳಿಸಿದ್ದು ರೋಸಲಿಂಡ್ ಪಾಲಿನ ದುರಂತ.

ರೋಸಲಿಂಡ್ ಡಿ. ಎನ್. ಎ. ರಚನೆಯ ಒಡಪನ್ನು ಒಡೆಯುವಲ್ಲಿ, ಅದರ ಜೋಡಿ ಸುರುಳಿ ರಚನೆಯನ್ನು ಕಂಡುಹಿಡಿಯುವಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿದ್ದಳು. ಆಕೆಯ ಜಾಗರೂಕ ಹಾಗೂ ವ್ಯವಸ್ಥಿತ ಸಂಶೋಧನಾ ಕೆಲಸ ಡಿ. ಎನ್. ಎ.ಯ ಎರಡು ಸ್ಥಿತಿಗಳನ್ನು ಗುರುತಿಸಲು ಕಾರಣವಾಗಿತ್ತು. ರೋಸಲಿಂಡ್ ಭೌತ ರಸಾಯನಶಾಸ್ತ್ರದ ಹಿನ್ನೆಲೆಯಿಂದ ಬಂದಾಕೆ. ಈಕೆ ಡಿ. ಎನ್. ಎ. ಕಣದ 'ಎ' ಮತ್ತು 'ಬಿ' ಎಂಬ ಎರಡು ಸ್ಥಿತಿಗಳನ್ನು ಗುರುತಿಸಿದ್ದಲ್ಲದೆ, ಡಿ. ಎನ್. ಎ.ಯ 'ಬಿ' ರೂಪವನ್ನು ಕಂಡುಹಿಡಿದಳು. ಅಷ್ಟಲ್ಲದೆ ತನ್ನ ಸಂಶೋಧನೆಯ ಆರಂಭದಿಂದಲೂ ಡಿ. ಎನ್. ಎ. ರಚನೆಯ ಮಾದರಿಯಲ್ಲಿ ಫಾಸ್‌ಫೇಟ್ ಗುಂಪು ಕಣದ ಹೊರಗಿರುತ್ತದೆ ಎಂದು ಕಂಡುಹಿಡಿದಿದ್ದಳು. ಈಕೆ ವಿವರ್ತನೆಯ ಚಿತ್ರಗಳ ಪರಿಮಾಣಾತ್ಮಕ ಅಧ್ಯಯನಕ್ಕೆ ಬುನಾದಿ ಹಾಕಿದಳು. ಈಕೆಯ ಕ್ಷ-ಕಿರಣ ಚಿತ್ರಗಳಿಂದ ವ್ಯಾಟ್ಸನ್ ಮತ್ತು ಕ್ರಿಕ್ ಡಿ. ಎನ್. ಎ.ಯ ಜೋಡಿ ಸುರುಳಿ ಮಾದರಿಯನ್ನು ತಲುಪಿದಾಗ, ಅದೇ ಉತ್ತರದ ಬಲು ಹತ್ತಿರದಲ್ಲಿದ್ದ ರೋಸಲಿಂಡ್‌ಗೆ ಅದು ಅಚ್ಚರಿ ತರಿಸಲಿಲ್ಲ. ತಟ್ಟನೆ ಈ ಮಾದರಿ ಸರಿ ಇದೆ ಎಂದು ಕಂಡುಕೊಂಡು ಡಿ. ಎನ್. ಎ.ಯ 'ಎ' ಮತ್ತು 'ಬಿ' ಎರಡೂ ರೂಪಗಳ ಕ್ಷ-ಕಿರಣ ಚಿತ್ರಗಳೊಡನೆ ಜೋಡಿ ಸುರುಳಿ ಮಾದರಿ ಸಂಗತವಾಗಿದೆ ಎಂದು ತೋರಿಸಿದಳು. ವ್ಯಾಟ್ಸನ್ ತನ್ನ ಪುಸ್ತಕ 'ದಿ ಡಬಲ್ ಹೆಲಿಕ್ಸ್'ನಲ್ಲಾಗಲಿ, ಡಾ॥ ಎಲ್. ಡಿ. ಹ್ಯಾಮಿಲ್ಟನ್ 'ನೇಚರ್' ಪತ್ರಿಕೆಗೆ ೧೯೬೮ರಲ್ಲಿ ಬರೆದ ತಮ್ಮ ಲೇಖನದಲ್ಲಾಗಲೀ ರೋಸಲಿಂಡಳ ವೈಜ್ಞಾನಿಕ ಕೊಡುಗೆಗೆ ನ್ಯಾಯ ಒದಗಿಸಲಿಲ್ಲ. ಆಕೆಯ ದೃಷ್ಟಿಕೋನ 'ಸುರುಳಿ ಮಾದರಿ'ಗೆ ವಿರುದ್ಧವಿತ್ತೆಂದು ಸಾರಿ, ಜೆನಿಟಿಕ್ಸ್ ರಂಗಕ್ಕೆ ಅಡಿಪಾಯವಾದ ಡಿ. ಎನ್. ಎ. ಕುರಿತ ಸಂಶೋಧನೆಗೆ ಆಕೆಯಿತ್ತ ಅಮೂಲ್ಯ ಕೊಡುಗೆಯನ್ನು ಉಲ್ಲೇಖಿಸದೆ ಕೈಬಿಟ್ಟರು.

ವ್ಯಾಟ್ಸನ್ ನೀಡಿದ ಚಾರಿತ್ರಿಕ ಘಟನೆಗಳ ತಿದ್ದುಪಡಿಯನ್ನು ರೋಸಲಿಂಡಳ ಕೊನೆಯ ವಿದ್ಯಾರ್ಥಿ ಆರನ್ ಕ್ಲಗ್ ರೋಸಲಿಂಡಳ ಪ್ರಕಟಿತ ಫಲಿತಾಂಶಗಳೊಡನೆ, ಅಪ್ರಕಟಿತ ಸಂಶೋಧನಾ ರಿಪೋರ್ಟುಗಳು ಹಾಗೂ ಪ್ರಯೋಗಶಾಲೆಯ ನೋಟು ಪುಸ್ತಕಗಳ ವಿಷಯಗಳನ್ನು ವಿಶ್ಲೇಷಿಸಿ ಪ್ರಕಟಿಸಿದ. ರೋಸಲಿಂಡ್, ವ್ಯಾಟ್ಸನ್‌ನ ಕತೆ ಬಿತ್ತರಿಸುವಷ್ಟು 'ಜೋಡಿ ಸುರುಳಿ' ರಚನೆಯಿಂದ ದೂರವಿರಲಿಲ್ಲ ಎಂದು ಪುರಾವೆಗಳೊಡನೆ ತೋರಿಸಿದ. ವ್ಯಾಟ್ಸನ್‌ನ ಸಹೋದ್ಯೋಗಿ ಕ್ರಿಕ್ ಕೂಡಾ ರೋಸಲಿಂಡ್ ಜೋಡಿ ಸುರುಳಿಯ ಅತಿ ಹತ್ತಿರವಿದ್ದು ಅದೇ ಸಮಯಕ್ಕೆ ಆಕೆ ಕಿಂಗ್ಸ್ ಕಾಲೇಜನ್ನು ಬಿಡಬೇಕಾದ ಪರಿಸ್ಥಿತಿ ಬಂದದ್ದನ್ನು ವಿವರಿಸಿದ.

ಫ್ರಾಂಕ್ಲಿನ್ 'ಬಿ' ಮಾದರಿ ಸುರಳಿ ರೂಪದಲ್ಲಿದೆ ಎಂದು ಹಿಂದೆಯೇ ಗುರುತಿಸಿದ್ದಳು. ಆದರೆ 'ಎ' ಮಾದರಿ ಅಷ್ಟು ಸರಳವಾಗಿ ಸುರುಳಿ ಮಾದರಿ ಎಂದು ನಿರ್ಣಾಯಕವಾಗಿ ಹೇಳಲು ಸಾಧ್ಯವಾಗದಾಗ, 'ಇದು ಸುರಳಿ ಅಲ್ಲದಿರಬಹುದೆ ?' ಎಂಬ ಪ್ರಶ್ನೆ ಮಾಡಿಕೊಂಡ ಸಂಶೋಧನೆಯ ಹಂತವಿತ್ತು. ಹಾಗೆಂದು 'ಫ್ರಾಂಕ್ಲಿನ್ ಸುರುಳಿ ಮಾದರಿಗೆ ವಿರುದ್ಧವಿದ್ದಳು ಎಂಬುದು ಸಮರ್ಪಕವಲ್ಲ' ಎಂದು ಕ್ಲಗ್ ಪುರಾವೆಗಳೊಡನೆ ೧೯೬೮ರಲ್ಲಿ 'ನೇಚರ್' ಪತ್ರಿಕೆಯಲ್ಲಿ ಪ್ರಕಟಿಸಿ ವಿವರಿಸಿದ. ವ್ಯಾಟ್ಸನ್ ಹೇಳಿಕೊಂಡಿರುವಂತೆ ಜೋಡಿ ಸುರುಳಿ ಮಾದರಿಯನ್ನು ತಲುಪುವ ಹಿಂದೆ ಅವರ ಯಾವ ಮಹತ್ತರದ ತರ್ಕವೂ

ಇರಲಿಲ್ಲ. ರೋಸಲಿಂಡ್, ಜೀವಶಾಸ್ತ್ರೀಯವಾಗಿ ಗಣಿಸಲೇಬೇಕಾದ ಸಂಶೋಧನಾ ಪುರಾವೆಗಳೂ ಇರಲಿಲ್ಲ. 'ಡಿ. ಎನ್. ಎ. ಸುರುಳಿ ಅಲ್ಲದಿರಬಹುದು' ಎಂಬ ಹಂತಕ್ಕೆ ಮೊದಲು 'ಡಿ. ಎನ್. ಎ. ಸುರುಳಿಯಾಕಾರದ್ದು' ಎಂಬ ಹಂತವೂ ಆಕೆಯ ಸಂಶೋಧನೆಯಲ್ಲಿ ಹಾದಿತ್ತು. ನವೆಂಬರ್ ೧೯೫೧ರಲ್ಲಿ ಈಕೆ ನೀಡಿದ ಪ್ರವಚನದಲ್ಲಿ ಆಕೆಯು ಸುರುಳಿಯಾಕಾರದ ಪರವಿದ್ದದ್ದು ಸ್ಪಷ್ಟವಿತ್ತು. ಫ್ರಾಂಕ್ಲಿನ್ ೧೯೫೮ರಲ್ಲಿ ಸತ್ತಾಗ ಆಕೆಯ ನೋಟುಪುಸ್ತಕಗಳನ್ನು ಕ್ಲಗ್‌ಗೆ ಕೊಡಲಾಗಿತ್ತು. ಆಕೆಯೊಡನೆ ನಿಕಟವರ್ತಿಯಾಗಿ ದುಡಿದು, ಆಕೆಯ ನೋಟುಪುಸ್ತಕಗಳನ್ನು ಅಧ್ಯಯಿಸಿದ ಕ್ಲಗ್, ಆಕೆಯ ಅತ್ಯಮೂಲ್ಯ ಕೊಡುಗೆಯತ್ತ ಬೆಳಕು ಚೆಲ್ಲಿದ.

ತಮ್ಮ ಜೀವನದ ಕೊನೆಯ ಐದು ವರ್ಷಗಳನ್ನು ರೋಸಲಿಂಡ್ ಬರ್ಕ್‌ಬೆಕ್ ಕಾಲೇಜಿನಲ್ಲಿ ಕಳೆದಳು. ಮಾರ್ಚ್ ೧೯೫೩ರಲ್ಲಿ ರೋಸಲಿಂಡ್ ಕಿಂಗ್ಸ್ ಕಾಲೇಜನ್ನು ಬಿಟ್ಟು ಬರ್ಕ್‌ಬೆಕ್ ಕಾಲೇಜಿಗೆ ಸೇರಿ ಅಲ್ಲಿ ತಂಬಾಕಿನ ವೈರಾಣುವಿನ ರಚನೆಯ ಅಧ್ಯಯನಕ್ಕೆ ತೊಡಗಿದಳು. ಈ ಮುಂಚೆ ವಿಜ್ಞಾನಿಗಳು ತಿಳಿದಂತೆ ವೈರಾಣು ಘನವಸ್ತುವಲ್ಲ, ಅದು ನಿಜದಲ್ಲಿ ಒಂದು ಟೊಳ್ಳಾದ ಕೊಳವೆ ಎಂದು ರೋಸಲಿಂಡ್ ತೋರಿಸಿದಳು. ಈ ವೈರಾಣುವಿನಲ್ಲಿ ಆರ್. ಎನ್. ಎ. ಸುರುಳಿಯ ಸರಿಯಾದ ಸ್ಥಳವನ್ನೂ ಕಂಡುಹಿಡಿದಿದ್ದು ಈಕೆಯ ಮಹತ್ತರದ ಸಾಧನೆಯಾಗಿತ್ತು. ರೋಸಲಿಂಡ್ ಪೋಲಿಯೋ ವೈರಾಣುವನ್ನು ಕುರಿತೂ ಸಂಶೋಧನೆ ಆರಂಭಿಸಿದ್ದಳು. ರೋಸಲಿಂಡ್ ಪ್ರಯೋಗಶೀಲೆ. ಸೂಕ್ಷ್ಮ ಅವಲೋಕನ ಶಕ್ತಿ ಇದ್ದವಳು. ಈ ದಿಟ್ಟ ಪ್ರಯೋಗಶೀಲೆಗೆ, ಊಹೆಯ ಆಧಾರದ ವಿಧಾನಗಳು ಅಷ್ಟು ಸರಿ ಕಂಡಿರಲಿಲ್ಲ. ಈಕೆ ಅನುಗಮನ ವಿಧಾನವನ್ನು ಹೆಚ್ಚು ಅನುಸರಿಸುತ್ತಿದ್ದು, ಈ ಅನುಗಮನ ವಿಧಾನ ಕಲ್ಲಿದ್ದಿಲು ಮತ್ತು ತಂಬಾಕಿನ ವೈರಾಣುಗಳ ಅಧ್ಯಯನದಲ್ಲಿ ಈಕೆಗೆ ಯಶಸ್ಸು ತಂದುಕೊಟ್ಟಿತ್ತು. ಆದರೆ ಇದೇ ಅನುಗಮನ ವಿಧಾನ ಡಿ. ಎನ್. ಎ. ಸಂಶೋಧನೆಯಲ್ಲಿ ಇತರರು ಈಕೆಗಿಂತ ಮುಂದೆ ಹೋಗಲು ಅವಕಾಶ ಮಾಡಿಕೊಟ್ಟಿತು. ಏಪ್ರಿಲ್ ೧೯೫೨ರಲ್ಲಿ ದೊರೆತ ಒಂದು ಹುಸಿ ಚಿತ್ರದಲ್ಲಿ ಡಿ. ಎನ್. ಎ. ಸುರುಳಿಯಾಕಾರದಲ್ಲಿರಲು ಸಾಧ್ಯವೇ ಇಲ್ಲವೆಂದು ಆಕೆಗೆ ತೋರಿತ್ತು. ಇತರರು ಈ ಸುರುಳಿಯಾಕಾರಕ್ಕೆ ಹೊಂದದ ದತ್ತಾಂಶವನ್ನು ಸರಿ ಇಲ್ಲವೆಂದು ನಿರಾಕರಿಸಿ ಮುಂದೆ ಹೋದಾಗ, ರೋಸಲಿಂಡ್ ಸುರುಳಿ ರಚನೆಗೆ ಮತ್ತಿತರ ಪುರಾವೆಗಳನ್ನು ಸಮರ್ಥನೆಗಳನ್ನು ಕಂಡುಹಿಡಿಯುವಲ್ಲಿ ತೊಡಗಿದ್ದಳು.

ಮೂವತ್ತರ ವರ್ಷಗಳಲ್ಲೇ ಕ್ಯಾನ್ಸರಿಗೆ ತುತ್ತಾದ ರೋಸಲಿಂಡ್ ತನ್ನ ೩೭ನೇ ವಯಸ್ಸಿನಲ್ಲಿ ಏಪ್ರಿಲ್ ೧೬, ೧೯೫೮ರಲ್ಲಿ ತೀರಿಕೊಂಡಳು. ಹೊಸ ತಾಂತ್ರಿಕ ಅನ್ವೇಷಣೆಗಳು ಮತ್ತು ನಿಖರವಾದ, ಖಚಿತವಾದ ತಂತ್ರಗಳನ್ನು ಸಂಕೀರ್ಣ ಬೃಹದಣುಗಳ (macromolecules) ಸಂಶೋಧನೆಯಲ್ಲಿ ಬಳಸಿದ್ದು ವಿಜ್ಞಾನಕ್ಕೆ ಈಕೆ ನೀಡಿದ ಮುಖ್ಯ ಕೊಡುಗೆ. ಆಕೆಯ ಎಲ್ಲ ಕೆಲಸದಲ್ಲಿ ನಿಖರತೆ ಮತ್ತು ಪರಿಪೂರ್ಣತೆ ಎದ್ದು ಕಾಣುತ್ತಿತ್ತು. ಕ್ಯಾನ್ಸರಿನಿಂದ ನರಳುತ್ತಿದ್ದರೂ, ಸಾವು ನಿಕಟವಿದೆ ಎಂಬ ಅರಿವಿದ್ದರೂ, ಕೊನೆಯ ದಿನದವರೆಗೂ ದುಡಿದ ಮಹಾನ್ ವಿಜ್ಞಾನಿ ಈಕೆ. ತನ್ನ ಸಾವಿನ ಹೊತ್ತಿಗಾಗಲೇ ಈಕೆ ಕೈಗಾರಿಕಾ ರಸಾಯನಶಾಸ್ತ್ರಜ್ಞೆಯಾಗಿಯೂ, ಅಣುಜೀವ ಶಾಸ್ತ್ರಜ್ಞೆಯಾಗಿಯೂ ಅಂತರರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದ್ದರೂ, ರೋಸಲಿಂಡಳ ಮೇಧಾವಿತನಕ್ಕೆ ತಕ್ಕ ಪುರಸ್ಕಾರ ದೊರೆಯಲಿಲ್ಲ. ಮತ್ತೆ ನಾಲ್ಕು ವರ್ಷಗಳ ಕಾಲ ಬದುಕಿದ್ದರೆ ನೊಬೆಲ್ ಪಾರಿತೋಷಕದಲ್ಲಿ ಭಾಗಿಯಾಗಬೇಕಿದ್ದ ಈಕೆ, ತನ್ನ ಅಕಾಲ ಸಾವಿನಲ್ಲಿ ಅಜ್ಞಾತಳಾದಳು.

ಆನ್ ಸೈರ್ ಅವರ ಪುಸ್ತಕ ವಿಜ್ಞಾನ ರಂಗದಲ್ಲಿ ಕಡೆಗಾದರೂ ರೋಸಲಿಂಡ್‌ಗೆ ಸಲ್ಲಬೇಕಾದ ಜಾಗವನ್ನು ನೀಡುವತ್ತ ಶ್ರಮಿಸುತ್ತದೆ. 'ವ್ಯಾಟ್ಸನ್ ಅವರ ಪುಸ್ತಕದಲ್ಲಿ ರೋಸಲಿಂಡ್ ಸಿಡುಕಿನ ಸ್ತ್ರೀವಾದಿಯಾಗಿ ಕಾಣುತ್ತಾಳೆ. ಈ ಪುಸ್ತಕದ ತುಂಬಾ, ಅತಿ ಸೂಕ್ಷ್ಮ ಸುಳ್ಳುಗಳು ಒಂದಕ್ಕೊಂದು ಹೆಣೆದುಕೊಂಡು ನಿರ್ದಿಷ್ಟ ದಿಕ್ಕಿನತ್ತ ಸಾಗುತ್ತವೆ. ಅವೆಲ್ಲವೂ ನಿಜವಲ್ಲದ, ವಿಜ್ಞಾನಿ ರೋಸಲಿಂಡ್ ಫ್ರಾಂಕ್ಲಿನ್‌ಗೆ ಯಾವ ರೀತಿಯೂ ಹೊಂದದ ಹಟಮಾರಿ 'ರೋಸಿ'ಯ ಕಾಲ್ಪನಿಕ ಪಾತ್ರವನ್ನು ಸೃಷ್ಟಿಸುತ್ತವೆ. ವೈಜ್ಞಾನಿಕ ಪತ್ರಿಕೆಗಳಲ್ಲಿ, ಜನಪ್ರಿಯ ಮಾಧ್ಯಮಗಳಲ್ಲಿ ರೋಸಲಿಂಡಳ ವ್ಯಕ್ತಿತ್ವವನ್ನು, ಆಕೆಯ ಕೊಡುಗೆಯನ್ನು, ಒಂದೋ ಉದಾಸೀನದಿಂದ ನೋಡಿದ್ದಾರೆ, ಇಲ್ಲವೆ ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆ. ಇವೆರಡಕ್ಕೂ ಮೂಲ ಸಾಮಗ್ರಿ ಒದಗಿಸಿರುವುದು, ವ್ಯಾಟ್ಸನ್. ಆಕೆಯ ಹಟಮಾರಿ ಸ್ವಭಾವ 'ಆಂಟಿ ಹೆಲಿಕಲ್' ಬಲೆಯಲ್ಲಿ ಸಿಕ್ಕಿಕೊಂಡಿತ್ತು ಎಂಬುದು ಕೇವಲ ವ್ಯಾಟ್ಸನ್ ಅವರ ಭ್ರಮೆಯಾಗಿತ್ತು. 'ಹೆಲಿಕಲ್ ಸಿದ್ಧಾಂತ' ತನ್ನೊಬ್ಬನದೆಂದು ಸಾರುವ ತಮ್ಮ ಮೇಧಾವಿತನವನ್ನು ಕೊಚ್ಚಿಕೊಳ್ಳುವ ಅಪರೋಕ್ಷ ಬಗೆಯಾಗಿತ್ತು' ಎಂದು ಆನ್ ಸೈರ್ ತೀವ್ರವಾಗಿ ಟೀಕಿಸಿದ್ದಾರೆ.

'ನಿಜ, ರೋಸಲಿಂಡ್ ಪಂದ್ಯದಲ್ಲಿ (ಅಲ್ಲೊಂದು ಪಂದ್ಯ ಇತ್ತೆಂದು ಭಾವಿಸಿದರೆ), ಸೋತಿದ್ದಳು, ಆದರೆ ಸೋತದ್ದು ಅಲ್ಪ ಅಂತರದಲ್ಲಿ. ಒಂದು ನಿಮಿಷ ಯೋಚಿಸಿ: ರೋಸಲಿಂಡ್ ಚಿತ್ರಗಳು, ಮಾಹಿತಿ ದೊರಕದೆ ಇದ್ದಿದ್ದರೆ, ತಮ್ಮದೇ ಪ್ರಯೋಗ ಮತ್ತು ಮಾಹಿತಿಯನ್ನು ಸೃಷ್ಟಿಸಿಕೊಳ್ಳುವಂತಿದ್ದರೆ, ವ್ಯಾಟ್ಸನ್ ಮತ್ತು ಕ್ರಿಕ್ ಈ ಸಂಶೋಧನೆಗೆ ಎಷ್ಟು ವರ್ಷಗಳನ್ನು ತೆಗೆದುಕೊಳ್ಳುತ್ತಿದ್ದರು, ಪಂದ್ಯದಲ್ಲಿ ಗೆಲ್ಲುತ್ತಿದ್ದರೆ ?' ಎಂಬೆಲ್ಲ ಪ್ರಶ್ನೆಗಳನ್ನು ಆನ್ ಸೈರ್ ಎತ್ತುತ್ತಾರೆ.

ರೋಸಲಿಂಡ್ ಸತ್ತ ನಾಲ್ಕು ದಶಕಗಳಾಚೆಗೆ, ವ್ಯಾಟ್ಸನ್ ಅವರ ಜೀವಿತ ಕಾಲದಲ್ಲಿಯೇ ಆಕೆಯ ಸಂಶೋಧನೆಗೆ ನ್ಯಾಯ ಒದಗಿಸುವ ಪ್ರಯತ್ನ ನಡೆದಿರುವುದು ಸ್ತ್ರೀವಾದಿಗಳಿಗೆ ಒಂದಿಷ್ಟು ಸಮಾಧಾನ ತಂದಿರುವ ವಿಷಯ.

ನೇಮಿಚಂದ್ರ,
ನಂ. ೪೦೧, 'ವಿಜಯ ಟವರ್', ೨ನೇ ಮೈನ್
ಆರ್. ಪಿ. ಸಿ. ಲೇ ಔಟ್, ವಿಜಯನಗರ ೨ನೇ ಹಂತ
ಬೆಂಗಳೂರು - ೪೦

ಕಾಂಗ್ರೆಸ್ ಕಚೇರಿ

ಅಖಂಡ ಇಪ್ಪತ್ತೈದು ವರ್ಷ ಸಿ.ಎಮ್. ಆಗಿ ಬಹು ದಾಖಲೆ ನಿರ್ಮಿಸಿದರು!

ಅಂಥ ಕುರ್ಚಿ ನನಗ್ಯಾವಾಗ ಸಿಗಬಹುದೇನ್ರೀ ಅಂತ ಈ ಪಕ್ಷದಲ್ಲಿ ನಾನು ಇಪ್ಪತ್ತೈದು ವರ್ಷದಿಂದ ಸ್ಥಿರವಾಗಿದ್ದು ದಾಖಲೆ ನಿರ್ಮಿಸಿದ್ದೇನ್ರೀ!

# ಶಿವಾಜಿಯ ರಾಯಗಢ ಒಂದು ಸುಂದರ ಕವನ

ಡಾ|| ಎನ್. ಗಾಯತ್ರಿ

**ಮ**ಹಾರಾಷ್ಟ್ರದ ಇಬ್ಬರು ಮಹಾನ್ ವ್ಯಕ್ತಿಗಳು ಚರಿತ್ರೆಯಲ್ಲಿ ಅಮರರು. ಭಾವನಾತ್ಮಕವಾಗಿ ಶಿವಾಜಿ ಮಹಾರಾಷ್ಟ್ರದ ಸಂಸ್ಕೃತಿಯ ಸಂಕೇತವಾದರೆ, ವೈಚಾರಿಕವಾಗಿ ಅಂಬೇಡ್ಕರ್ ದಲಿತರ, ನೊಂದವರ ಪ್ರತಿನಿಧಿಯಾಗಿ ಸ್ವಾಭಿಮಾನದ ಸಂಕೇತವಾದವರು. ಈ ಎರಡೂ ಮಹಾನ್ ಚೇತನಗಳಿಗೆ ಸಂಬಂಧಪಟ್ಟ ಮಹಾರಾಷ್ಟ್ರದ ಮಹಾಡ್ ಮತ್ತು ರಾಯಗಢದತ್ತ ಪ್ರವಾಸ ಬೆಳೆಸುವ ಸದವಕಾಶ ನನ್ನ ಪಾಲಿನದಾಗಿತ್ತು. ಅಂಬೇಡ್ಕರ್‌ರವರ ಹೋರಾಟದ ಕರ್ಮಭೂಮಿಯಾದ ಮಹಾಡ್‌ನಲ್ಲಿಯೇ ಅವರು ಮೊದಲ ಬಾರಿಗೆ ದಲಿತರೊಡಗೂಡಿ ಶಿವನ ದೇವಾಲಯ ಪ್ರವೇಶಿಸಿದ್ದು ಜೊತೆಗೆ ಚೌದಾರ್‌ತಳೆಯಲ್ಲಿ ಮೊದಲಬಾರಿಗೆ ಹರಿಜನರೊಂದಿಗೆ ಸರೋವರದ ನೀರಿಗೆ ಕೈಹಾಕಿದ್ದು. ಆಗ್ಗೆ ಆ ದೊಡ್ಡ ಕಲ್ಯಾಣಿಯಲ್ಲಿ ನಾಯಿ, ಹಂದಿ ನೀರು ಮುಟ್ಟಬಹುದಿತ್ತು; ಆದರೆ ಮಹಾರರು ಹಾಗೆ ಮಾಡುವಂತಿರಲಿಲ್ಲ. 'ಅಂತ್ಯಜ'ರಿಗೆ ನಿಷಿದ್ಧವಾಗಿದ್ದ ಕೊಳ ಅದಾಗಿತ್ತು. ಈಗ 'ತಳೆ'ಯ ಬಳಿ ಡಾ|| ಅಂಬೇಡ್ಕರರ ಪ್ರತಿಮೆ ಇದೆ. ಇಂತಹ ಚಾರಿತ್ರಿಕ ಸ್ಥಳವಾದ ಮಹಾಡ್‌ಗೆ ಹನ್ನೆರಡು ಮೈಲಿಯಷ್ಟೇ ಹತ್ತಿರದಲ್ಲಿ ಇತಿಹಾಸ ಪ್ರಸಿದ್ಧವಾದ ಶಿವಾಜಿಯ 'ರಾಯಗಢ' ಕೋಟೆಯಿದೆ.



ಶಿವಾಜಿಯ ಸಮಾಧಿ

ಹದಿನೇಳನೇ ಶತಮಾನದಲ್ಲಿ ಸಾಮ್ರಾಟ್ ಛತ್ರಪತಿ ಶಿವಾಜಿಯ ರಾಜಧಾನಿಯಾಗಿ ಮೆರೆದ ರಾಯಗಢದ ಮುಂಚಿನ ಹೆಸರು **ರಾಯಿರಿ**. ಹನ್ನೆರಡನೇ ಶತಮಾನದಲ್ಲಿ ಇದು ಚಿಕ್ಕ ಚಿಕ್ಕ ಮರಾಠ ಸೇನಾಧಿಪತಿಗಳ ಮತ್ತು ಪಾಳೇಗಾರರ ಆಳ್ವಿಕೆಯಲ್ಲಿತ್ತು. ಹದಿನಾಲ್ಕನೇ ಶತಮಾನದಲ್ಲಿ ಇವರು ವಿಜಯನಗರದ ರಾಜರ ಒಡೆತನವನ್ನು ಒಪ್ಪಿಕೊಂಡಿದ್ದರು. ಹದಿನೈದನೇ ಶತಮಾನದ ಮಧ್ಯಭಾಗದಲ್ಲಿ ಎರಡನೆಯ ಅಲ್ಲಾವುದ್ದೀನ್ ಷಾ ಬಹಮನಿ (೧೪೩೪-೧೪೫೭)ಯು **ರಾಯಿರಿ**ಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿದ್ದ. ೧೪೮೯ರಲ್ಲಿ ರಾಯಿರಿಯನ್ನು ಅಹಮದ್‌ನಗರದ ನಿಜಾಮ್‌ಶಾಹಿ ರಾಜರುಗಳ ಕೈಗೆ ಹಸ್ತಾಂತರಿಸಲಾಯಿತು. ಮೊಘಲರು ಅಹಮದ್‌ನಗರವನ್ನು ಹೋರಾಡಿ ವಶಪಡಿಸಿಕೊಂಡು ಬಿಜಾಪುರದ ಆದಿಲ್‌ಶಾಹಿ ದೊರೆಗಳಿಗೆ ಒಪ್ಪಿಸಿದರು. ಬಿಜಾಪುರದ ಅರಸರು ಇದನ್ನು **ಇಸ್ಲಾಂಗಢ್** ಎಂದು ಕರೆದು ಜಂಜಿರಾದ ಸಿದ್ದಿಗಳಿಗೆ ಆಳಲು ಒಪ್ಪಿಸಿದರು. ಕೆಲವು ಕಾಲ ಜಾವಳಿಯ ಮೋರ್‌ಗಳು ಬಿಜಾಪುರದ ಅರಸರ ಪ್ರತಿನಿಧಿಗಳಾಗಿ ಇದನ್ನು ಆಳುತ್ತಿದ್ದರು. ಆದರೆ ಮುಂದೆ ಮೋರ್‌ಗಳ ಮತ್ತು ಶಿವಾಜಿಯ ನಡುವೆ ನಡೆದ ಯುದ್ಧದಲ್ಲಿ ೧೬೫೬ರಲ್ಲಿ ರಾಯಿರಿಯನ್ನು ಸಂಪೂರ್ಣವಾಗಿ ಶಿವಾಜಿ ಆಕ್ರಮಿಸಿಕೊಂಡ. ಬಿಜಾಪುರದ ಅರಸೊತ್ತಿಗೆಯನ್ನು ಪ್ರಶ್ನಿಸಿದ್ದಷ್ಟೇ ಅಲ್ಲ, ಕೊಂಕಣದ ಹೆದ್ದಾರಿಯನ್ನು ತೆರೆದು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದ.

ಶಿವಾಜಿ ತನ್ನ ಆಳ್ವಿಕೆಯಲ್ಲಿದ್ದ ಮೂವತ್ತು ದುರ್ಗಗಳಲ್ಲಿ ರಾಯಿರಿಯನ್ನೇ ತನ್ನ ಆಳ್ವಿಕೆಗೆ ರಾಜಧಾನಿಯನ್ನಾಗಿ ಮಾಡಿಕೊಳ್ಳಲು ಮುಖ್ಯ ಕಾರಣ ಆ ದುರ್ಗದ ಭೌಗೋಳಿಕ ಸ್ವರೂಪವೇ ಆಗಿದೆ. ಕಲ್ಲಿನ ಗೋಡೆಗಳಿಂದ ಸುತ್ತುವರೆದ, ವ್ಯಾಪಾರಕ್ಕೆ ಅನುವಾಗುವಂತೆ ಹೆದ್ದಾರಿಗೆ ಹತ್ತಿರವಾದ ರಾಯಿರಿಯನ್ನೇ ಶಿವಾಜಿ ಸೂಕ್ತ ಜಾಗವೆಂದು ನಿರ್ಧರಿಸಿರಬಹುದು. ಅತ್ಯಂತ ಬಲಿಷ್ಠವಾದ, ಸಮತಟ್ಟಾದ ಬೆಟ್ಟದ ಶಿಖರವು ಸುಮಾರು ಒಂದು-ಒಂದೂವರೆ ಮೈಲಿಯಷ್ಟು ವ್ಯಾಪ್ತಿಯ ಭೂ ಪ್ರದೇಶದಲ್ಲಿ ರಕ್ಷಿಸಲು ಸುಲಭವೆನಿಸುವ, ಹಾಗೆಯೇ ವಾಸಕ್ಕೆ ಕಟ್ಟಡಗಳನ್ನು ನಿರ್ಮಿಸಿಕೊಳ್ಳುವ ಅನುಕೂಲವನ್ನು ಹೊಂದಿದೆ.

೧೬೬೨ರಲ್ಲಿ ಛತ್ರಪತಿ ಶಿವಾಜಿಯು ಈ ಬೆಟ್ಟದ ಹೆಸರನ್ನು ರಾಯಿರಿಯಿಂದ ರಾಯಗಢಕ್ಕೆ ಬದಲಾಯಿಸಿದ. ಕಲ್ಯಾಣದ ಗವರ್ನರ್ ಆಗಿದ್ದ ಆಭಾಜಿ ಸೋಂದೇವ್‌ನಿಗೆ ಕೋಟೆಯನ್ನು ಸಂಪೂರ್ಣವಾಗಿ ವಾಸಕ್ಕೆ ತಕ್ಕುದನ್ನಾಗಿ ಮಾಡಲು ಕಟ್ಟಡಗಳನ್ನು, ರಸ್ತೆಗಳನ್ನು ನಿರ್ಮಿಸಲು ಆಜ್ಞಾಪಿಸಿದ. ಅದರಂತೆ ಸುಮಾರು ೩೦೦ ಕಲ್ಲಿನ ಮನೆಗಳನ್ನು ನಿರ್ಮಿಸಲಾಯಿತಂತೆ. ಅರಮನೆಗಳು, ಭವ್ಯ ಬಂಗಲೆಗಳು, ಕಛೇರಿಗಳು, ಟಂಕಸಾಲೆ, ಕಣಜಗಳು, ಪಹರೆ ಕಾಯುವ ಎರಡು ಸಾವಿರ ಸೈನಿಕರಿಗೆ ವಾಸದ ಸ್ಥಳಗಳು, ಎಲ್ಲವನ್ನೂ ಒದಗಿಸಲಾಯಿತು. ಹಾಗೆಯೇ ಸ್ನೇಹಿತರಿಗೆ ಹತ್ತಿ ಬರಲು ಅನುವಾಗುವಂತೆ ಮತ್ತು ಶತ್ರುಗಳಿಗೆ ಪ್ರವೇಶ ದುರ್ಗಮವಾಗುವಂತೆ ದುರ್ಗದ ಎಲ್ಲ ಪ್ರವೇಶಗಳನ್ನೂ ಮುಚ್ಚಿ ಭದ್ರತೆಯನ್ನು ಕಾಪಾಡುವಂತೆ ರಚಿಸಲಾಗಿದೆ. ೧೬೬೪ರಲ್ಲಿ ಸೂರತ್‌ನಲ್ಲಿ ಕೊಳ್ಳೆ ಹೊಡೆದ ಸಂಪತ್ತನ್ನೆಲ್ಲ ತಂದು ರಾಯಗಢವನ್ನು ಸಮೃದ್ಧಗೊಳಿಸಿ ಅಧಿಕಾರದ ಮುಖ್ಯ ಸ್ಥಳವನ್ನಾಗಿ ಮಾಡಿಕೊಂಡ. ಅದೇ ವರ್ಷ ತಂದೆ ಶಹಾಜಿಯ ಸಾವಿನ ನಂತರ ರಾಯಗಢಕ್ಕೆ ಬಂದು ನೆಲೆಸಿದ ಶಿವಾಜಿ, 'ರಾಜ' ಎನ್ನುವ ಬಿರುದು ಪಡೆದು ಅವನ ಹೆಸರಿನಲ್ಲಿ ನಾಣ್ಯಗಳನ್ನು ಮುದ್ರಿಸಿದ.

ಮಹಾಡ್‌ನಿಂದ ರಾಯಗಢದತ್ತ ಸಾಗಿದಾಗ ದಾರಿಯಲ್ಲಿ ಕೋಂಜರ್ ಎಂಬ ಹಳ್ಳಿ ಸಿಗುತ್ತದೆ. ಇಲ್ಲಿಯವರೆಗೂ ವಾಹನಗಳು ಹೋಗುವ ರಸ್ತೆಯಿದೆ. ಈ ರಸ್ತೆಯಲ್ಲಿ ಸಾಗುವಾಗ ಇಕ್ಕೆಲಗಳಲ್ಲೂ ಕಣ್ಣಿಗೆ ಹಸಿರೇ ಹಸಿರು (ಸೆಪ್ಟೆಂಬರ್-

ಅಕ್ಟೋಬರ್‌ನಲ್ಲಾದರೆ). ಸಮೃದ್ಧವಾದ ಮಾವಿನಗಿಡಗಳು ಮತ್ತು ನಿತ್ಯ ಹರಿದ್ವರ್ಣದ ಕಾಡುಗಳೇ ಎಲ್ಲೆಲ್ಲೂ. ಅಚ್ಚ ಹಸಿರಿನಿಂದ ಹಿಡಿದು ಕಂದು ಹಸಿರಿನವರೆಗೂ ಹಬ್ಬಿದ ದಟ್ಟ ಹಸಿರು. ಅವುಗಳ ಮಧ್ಯೆ ಅಲ್ಲಲ್ಲಿ ಕಾಡು ಹೂಗಳ ಸಂಭ್ರಮ. ಕೋಂಜರ್‌ನಿಂದ ಕಾಲ್ನಡಿಗೆಯಲ್ಲಿ ಹೊರಟ ನಮಗೆ ಪಾಖಡ್ ಸಿಕ್ಕುತ್ತದೆ. ಪಾಖಡ್ ಸಮೀಪಿಸಿದಾಗ ಅದರ ನೆಲದಲ್ಲಿ ನಿಂತು ಸುತ್ತ ಕಣ್ಣು ಹಾಯಿಸಿದಾಗ ಎತ್ತೆತ್ತಲೂ ಮತ್ತೆ ಹಸಿರಿನ ಸಾಮ್ರಾಜ್ಯ ಮೆರೆದಿತ್ತು. ಕಣ್ಣೋಟ ಮೇಲಕ್ಕೆ ಚಾಚಿದಾಗ ಅತ್ಯಂತ ಬೃಹತ್ತಾದ ದುರ್ಗ ಕಣ್ಣಿಗೆ ಬೀಳುತ್ತದೆ. ಕಣ್ಣು ಸೋಲುವಷ್ಟು ಎತ್ತರ ಮತ್ತು ಅಗಲ ಇರುವ ಈ ಬೆಟ್ಟ ಮತ್ತು ಕೋಟೆ ಮನುಷ್ಯನ ಕಲ್ಪನೆಗೂ ನಿಲುಕಲು ಕಷ್ಟವೇ ಎನಿಸುತ್ತದೆ. ಶಿವಾಜಿಯ ಕಾಲದ ಸೈನಿಕರು ಸಾವಿರಾರು ಸಂಖ್ಯೆಯಲ್ಲಿ, ಕತ್ತಿ ಹಿಡಿದು, ಆ ಹಾದಿಯಲ್ಲಿ ಅಡ್ಡಾಡಿರಬಹುದೆಂಬ ಚಿತ್ರ ಕಣ್ಣ ಮುಂದೆ ಹಾಯುತ್ತದೆ. ಗತಕಾಲದ ಭೂತಗಳಾಗಿ ಮರಾಠ ಚರಿತ್ರೆ ನಮ್ಮ ಮುಂದೆ ಬಿಚ್ಚಿಕೊಳ್ಳುತ್ತದೆ.



*ಅಂಗಡಿ ಬೀದಿಯಲ್ಲಿ ನಾಗಸೆಟ್ಟಿಯ ವ್ಯಾಪಾರ ಸ್ಥಳ*

ಪಾಖಡ್‌ಗೆ ಒಂದು ಮೈಲು ದೂರದಲ್ಲಿ ಜೀಜಾಬಾಯಿಯ ನೆನಪಿನ ಸ್ಮಾರಕವಿದೆ. ಜೀಜಾಬಾಯಿಯ ಸಮಾಧಿಯ ಈ ಸ್ಥಳವು ಮಟ್ಟಸವಾದ ಕಟ್ಟೆಯಂತಿದ್ದು, ಅಲ್ಲಿ ಮೂರು ಅಡಿ ಎತ್ತರದ ಕಲ್ಲಿನ ಕಂಬಗಳಿವೆ. ಈ ಸ್ಮಾರಕವು ಸರಳವಾಗಿದ್ದು ಕಲ್ಲಿನ ಗೋಡೆಯಿಂದ ಸುತ್ತುವರಿದಿದೆ. ಇದು ಕೇಂದ್ರ ಸರ್ಕಾರದ ಪ್ರಾಚ್ಯಶಾಸ್ತ್ರ ಇಲಾಖೆಯಿಂದ ಸಂರಕ್ಷಿಸಲ್ಪಟ್ಟಿದೆ. ಈ ಸ್ಮಾರಕವನ್ನು ನೋಡುತ್ತಾ ಹಾಗೆಯೇ ಮುಂದುವರಿದರೆ, ಜೀಜಾಬಾಯಿಯ ಅರಮನೆಯ ಅವಶೇಷಗಳು ಕಾಣಸಿಗುತ್ತವೆ. ಮಣ್ಣು, ಗಾರೆ, ಮರಳುಗಳಿಂದ ಕಟ್ಟಲ್ಪಟ್ಟ ೬ ಇಂಚು ದಪ್ಪದ ಮುರಿದು ಬಿದ್ದ ಕಾಂಪೌಂಡ್ ಗೋಡೆಗಳು ನಮ್ಮನ್ನು ಸ್ವಾಗತಿಸುತ್ತವೆ. ಹೊರಗಿನವರಿಂದ ರಕ್ಷಣೆ ಪಡೆಯುವುದಕ್ಕೋಸ್ಕರ ಬಂದೂಕುಗಳನ್ನು ಇಡುವ ತೂತುಗಳನ್ನು ಈ ಗೋಡೆಗಳಲ್ಲಿ ನೋಡಬಹುದು. ಜೀಜಾಬಾಯಿಯ ಅರಮನೆಯ ಒಟ್ಟು ಸ್ವರೂಪದ ಅಗಾಧತೆ ನಮಗೆ ಈ ಅವಶೇಷಗಳಿಂದ ದೊರೆಯದಿದ್ದರೂ ಉನ್ನತವಾದ ಕಟ್ಟಡ ಇದಾಗಿತ್ತು, ಎಂಬುದನ್ನು ಊಹಿಸಬಹುದು.

ಜೀಜಾಬಾಯಿಯ ಅರಮನೆಯ ಅವಶೇಷಗಳಿಂದ ಒಂದು ದೊಡ್ಡ ಹಜಾರವಿದ್ದುದನ್ನು ಗುರುತಿಸಬಹುದು. ಬದಿಗಳಲ್ಲಿ ಕೊಠಡಿಗಳು ಮತ್ತು ದೇವರ ಮನೆಯನ್ನೂ ಇಲ್ಲಿನ ಅವಶೇಷಗಳಿಂದ ಗುರುತಿಸಬಹುದು. ಈ ಆವರಣದಲ್ಲಿ ಎರಡು ಬಾವಿಗಳಿವೆ. ಔರಂಗಜೇಬನ ಕಾಲದಲ್ಲಿ ಬಂದ ಪರ್ಷಿಯನ್ ಚರಿತ್ರಕಾರ ಖಾಫಿಖಾನನ ವರದಿಯಂತೆ ಈ ಬಾವಿಗಳಲ್ಲಿ ಒಂದನ್ನು ಸಾರ್ವಜನಿಕರ ಅನುಕೂಲಕ್ಕಾಗಿ ಬಳಕೆಗೆ ಕೊಡಲಾಗಿತ್ತು. ಮತ್ತೊಂದನ್ನು ಅರಮನೆಯವರು ಬಳಸುತ್ತಿದ್ದರು. ೬' x ೧೦' ಅಡಿಗಳ ಅಳತೆಯ ಆಯಾಕಾರದ ಬಾವಿಯಿದು. ಒಂದು ಕಡೆ ಬಾವಿಯೊಳಗೆ ಹೋಗುವುದಕ್ಕೆ ಕಲ್ಲಿನ ಮೆಟ್ಟಿಲುಗಳಿವೆ; ಮತ್ತೊಂದು ಕಡೆ, ಬಾವಿಯಿಂದ ನೀರೆತ್ತಬಲ್ಲ ಏತಗಳಿವೆ. ಮೆಟ್ಟಿಲಿನ ಮೇಲಿರುವ ಬಾವಿಯ ಭಾಗದಲ್ಲಿ ೪' x ೧೦' ಅಡಿಗಳ ಅಳತೆಯ ಕಲ್ಲಿನ ಜಗಲಿಯಿದೆ. ಖಾಫಿಖಾನ್ ತನ್ನ ಪುಸ್ತಕದಲ್ಲಿ ಬರೆದಿರುವಂತೆ, ಶಿವಾಜಿ ಈ ಜಾಗಕ್ಕೆ ಬಂದು ಸ್ವಲ್ಪ ಹೊತ್ತು ಆಗಾಗ ಕುಳಿತಿರುತ್ತಿದ್ದನಂತೆ. ಅಲ್ಲಿ ಬರುವ ಮಕ್ಕಳು ಮತ್ತು ಸಾರ್ವಜನಿಕರಿಗೆ ಹಣ್ಣುಗಳನ್ನು ಹಂಚುತ್ತಿದ್ದನಂತೆ. ಸಾಂಬಾಜಿಯ ಸಾವಿನ ನಂತರ, ಸುಮಾರು ೧೬೯೧ರ ಸುಮಾರಿಗೆ, ಶಿವಾಜಿ ಇಲ್ಲಿ ವಾಸಿಸುತ್ತಿದ್ದಿರಬಹುದು. ಈಗ ಇಲ್ಲಿ ಪಾಳಾಗಿ ಬಿದ್ದಿರುವ ಅರಮನೆಯ ಅವಶೇಷಗಳನ್ನು ಗಮನಿಸಿದಾಗ ಕಾಲದ ಭರಾಟೆಯಲ್ಲಿ ನಶಿಸಿ ಹೋಗಿರಬಹುದಾದ ರಾಜಮನೆತನದ ಕತೆಯು ವಿಷಾದವನ್ನು ಮೂಡಿಸುತ್ತದೆ.

ಹೀಗೆ ಪಾಖಡ್‌ನಿಂದ ಒಂದೂವರೆ ಮೈಲು ಪೂರ್ವಕ್ಕೆ ಸಾಗಿದರೆ ವಾಡಿ ಸಿಗುತ್ತದೆ. ಸಮುದ್ರ ತಟದಿಂದ ೬೦೦ ಅಡಿ ಮೇಲಿರುವ ಈ ಸ್ಥಳದಿಂದ ನಾಲ್ಕು ಮೈಲಿ ಕಾಲ್ನಡಿಗೆಯಲ್ಲಿಯೇ ನಡೆಯುತ್ತಾ ಸಾಗಿದರೆ ೨,೨೫೦ ಅಡಿಗಳ ಮೇಲ್ಭಾಗದಲ್ಲಿ ರಾಯಗಢವಿದೆ. ಕೆಳಹಂತದಲ್ಲಿ ಈ ಹಾದಿಯು ಉರುಟಾಗಿದ್ದು ಮೇಲೆ ಹೋಗುತ್ತಾ, ಹೋಗುತ್ತಾ ಕಲ್ಲಿನ ಕಿತ್ತುಹೋದ ಮೆಟ್ಟಿಲುಗಳ ಹಾದಿ ಸಿಗುತ್ತದೆ. ವಾಡಿಯಿಂದ ಕಾಲು ಮೈಲು ನಡೆಯುತ್ತಲೇ ಉದ್ಯಾನವನದ ಕುರುಹುಗಳು ಕಾಣಸಿಗುತ್ತವೆ. ಇದು ಹಿಂದೆ ಶಿವಾಜಿಯ ಉದ್ಯಾನವನವಾಗಿತ್ತು. ಅದೇ ಮುಖ್ಯ ದಾರಿಯಲ್ಲಿ ಸಾಗುವಾಗ ಎಡಕ್ಕೆ ಒಂದು ಚಿಕ್ಕ ಕಾಲು ಹಾದಿ ಕಾಣುತ್ತದೆ. ಅದು 'ನಾನಾ ದರ್‌ವಾಜಾ' (ಚಿಕ್ಕ ಬಾಗಿಲು). ಇದು ಒರಟಾದ ಮತ್ತು ೬೦೦ ಅಡಿಗಳ ಎತ್ತರದಲ್ಲಿರುವ ಚಿಕ್ಕ ಗೋಡೆಯಾಗಿದೆ. ಈಗ ಅಲ್ಲಿ ಮುಖ್ಯ ಬಾಗಿಲು ಕಾಣಸದಿದ್ದರೂ ಆ ದರ್‌ವಾಜಾದ ಒಳಭಾಗದಲ್ಲಿ ಹನ್ನೆರಡು ಮತ್ತು ಹದಿನಾಲ್ಕು ಅಡಿ ಎತ್ತರದ ಎರಡು ಕಮಾನಿನಾಕಾರದ ರಚನೆಗಳನ್ನು ಕಾಣಬಹುದು. ಅವು ಪಹರೆಯವರ ತಾಣಗಳಾಗಿದ್ದುವು.

ನಾನಾ ದರ್‌ವಾಜಾದಿಂದ ೧೦೦೦ ಅಡಿಗಳ ಎತ್ತರದಲ್ಲಿ 'ಮೋಟಾ ದರ್‌ವಾಜಾ' ಅಥವಾ 'ಮಹಾ ದರ್‌ವಾಜಾ' ಸಿಕ್ಕುತ್ತದೆ. ಈ ದೊಡ್ಡ ಬಾಗಿಲಿನ ಮೂಲಕ ಪೂರ್ವಕ್ಕೆ ಮುಕ್ಕಾಲು ಮೈಲು ಕಡಿದಾದ ಬೆಟ್ಟವನ್ನು ಹತ್ತಿ ಬಂದರೆ, ಅಲ್ಲಿ ಮುಸಲ್ಮಾನ ಸಂತ ಮಾದರ್‌ನ ಸಮಾಧಿ ಸಿಕ್ಕುತ್ತದೆ. ಅದರ ಎದುರಿಗಿರುವ ಕಬ್ಬಿಣದ ಕಂಬವೇ **ಮಾಲಕ್ಕಂಬ** ಅಥವಾ ಜಿಮ್ನಾಸ್ಟಿಕ್ ಕಂಬ. ಈ ಕಂಬದ ಎದುರು ಒಂದು ಗೋಳಾಕಾರದ ಜಲಾಶಯ ಕಂಡುಬರುತ್ತದೆ. ೧೨೯/೭೫ ಅಡಿಗಳ ಜಲಾಶಯ ಇದು. ಇದರಿಂದ ನೂರು ಗಜಗಳಷ್ಟು ಕೆಳಗೆ ಸಾಗಿದರೆ, **ಗಂಗಾಸಾಗರ** ಜಲಾಶಯದ ತಾಣ ಕಣ್ಣಿಗೆ ಬೀಳುತ್ತದೆ. ಈ ಜಲಾಶಯದ ನೀರು ಅತ್ಯಂತ ಸಿಹಿಯಾಗಿದ್ದು, ಇಡೀ ಕೋಟೆಯ ಮೇಲಿದ್ದ ಎಲ್ಲಾ ರಕ್ಷಣಾ ಪಡೆಗೂ ನೀರು ಸರಬರಾಜಿನ ಮುಖ್ಯ ನೆಲೆಯಾಗಿತ್ತಂತೆ.

ಗಂಗಾಸಾಗರದಿಂದ ಹತ್ತು ಗಜ ದಕ್ಷಿಣಕ್ಕೆ ಸಾಗಿದರೆ, ಎತ್ತರಕ್ಕೆ ಮುಖ ಮಾಡಿ ನಿಂತ ಎರಡು ಪಾಳು ಬಿದ್ದ ಕಟ್ಟಡಗಳು ಕಾಣಸಿಗುತ್ತವೆ. ಅದು ಐದು ಮಹಡಿ ಕಟ್ಟಡಗಳಾಗಿದ್ದು ಚಿತ್ತಾರವಾದ ಕೆತ್ತನೆಯಿಂದ ಕೂಡಿದ್ದಾಗಿದೆ. ಹನ್ನೆರಡು ಭಾಗಗಳಲ್ಲಿ ಚೂಪಾದ ಕಿಟಕಿಗಳನ್ನು ಹೊಂದಿದ್ದು ಮುಸ್ಲಿಂ ಶೈಲಿಯಲ್ಲಿ ಕಟ್ಟಲ್ಪಟ್ಟಿದೆ. ಈ ಕಟ್ಟಡದ ಒಳಗೆ ಒಂದು ಕೊಠಡಿ ಹನ್ನೆರಡು ಅಡಿ ಡಯಾಮೀಟರ್‌ನ ಗೋಳಾಕಾರದ ಮೇಲ್ಛಾವಣಿಯನ್ನು ಹೊಂದಿದೆ ಇಲ್ಲಿಂದ ಪಶ್ಚಿಮಕ್ಕೆ

ಮೂವತ್ತೊಂದು ಮೆಟ್ಟಿಲುಗಳ ಅಟ್ಟವೊಂದಿದೆ. ಅದು ಫಾಕ್ಕಿ ದರ್‌ವಾಜಾಗೆ ತಲುಪುತ್ತದೆ. ಆರು ಅಡಿ ಅಗಲದ ಈ ಬಾಗಿಲಿಂದ ಹೊರಕ್ಕೆ ಹೊರಟರೆ ಬಾಲೆ ಕಿಲ್ಲಾ ಅಥವಾ ಕೋಟೆಯತ್ತ ದಾರಿ ಕ್ರಮಿಸುತ್ತದೆ. ಈ ದಾರಿಯಲ್ಲಿ ಸಾಗಿದರೆ ಪಾಳುಬಿದ್ದ ಕಟ್ಟಡಗಳ ಎರಡು ಸಾಲು ನಮಗೆ ಎದುರಾಗುತ್ತವೆ. ಇದರಲ್ಲಿ ಬಲಭಾಗದಲ್ಲಿ ಏಳು ದೊಡ್ಡ ಕಟ್ಟಡಗಳ ಅವಶೇಷಗಳು ಕಾಣಸಿಗುತ್ತವೆ. ಇದು ಅಂತಃಪುರದ ಸ್ತ್ರೀಯರ ನಿವಾಸಗಳಾಗಿದ್ದವು. ಎಡ ಭಾಗದ ಕೊಠಡಿಗಳು ಸೇವಕರ ಮತ್ತು ಪಹರೆಯವರ ಕುಟುಂಬದ ನಿವಾಸ ಸ್ಥಳಗಳು.

ದೊಡ್ಡ ಬಾಗಿಲಿನ ಮೂಲಕ ದಕ್ಷಿಣಕ್ಕೆ ಸಾಗಿದರೆ ಅಲ್ಲೊಂದು ವಿಶಾಲವಾದ ಹಾದಿ ಸಿಗುತ್ತದೆ. ಇದು ಅರಮನೆಯ ಸ್ತ್ರೀಯರ ಸಂಜೆ ವಿಹಾರದ ಕಾಲುದಾರಿಯಾಗಿತ್ತು. ಅದರ ಎಡಕ್ಕಿರುವ ಹಾದಿ ರಾಜನ ಒಡ್ಡೋಲಗದ ಕಛೇರಿಗೆ ಮುಟ್ಟುತ್ತದೆ. ರಾಜನ ಒಡ್ಡೋಲಗಕ್ಕೆ ಹೆಬ್ಬಾಗಿಲು ಇಲ್ಲ. ಆದರೂ ಅದರ ಪೂರ್ವಕ್ಕೆ ಇರುವ ಮೂವತ್ತು ಅಡಿಗಳ ದಪ್ಪದ ಗೋಡೆಯು ಹಿಂದೆ ಬಾಗಿಲು ಇದ್ದಿರಬಹುದಾದ ಸೂಚನೆಯನ್ನು ಕೊಡುತ್ತದೆ. ಈ ಗೋಡೆಗಳು ಸುಮಾರು ೧೨೦/೫೦ ಅಡಿಗಳಷ್ಟು ವಿಶಾಲವಾದ ಜಾಗವನ್ನು ಸುತ್ತುವರೆದಿದ್ದು ಅದು ಸಭಾಂಗಣದ ಕಲ್ಪನೆಯನ್ನು ಮೂಡಿಸಲು ಸಮರ್ಥವಾಗಿದೆ. ಈ ಜಾಗದ ಮಧ್ಯ ಭಾಗದಲ್ಲಿರುವ ಮಣ್ಣಿನ ಗುಡ್ಡೆಯ ಭಾಗವೇ ಶಿವಾಜಿಯ ಸಿಂಹಾಸನವಿದ್ದ ಜಾಗ. ಅಲ್ಲಿ ಒಂದು ಜಗುಲಿಯಂತಹ ರಚನೆಯಿದೆ. ಅಲ್ಲಿ ಕಲ್ಲಿನ ಸಿಂಹಾಸನವನ್ನು ಇಡಲಾಗಿದೆ. (ಅದು ಈಚಿನ ದಶಕದ ರಚನೆ. ಮೊದಲಿಗೆ ಅಲ್ಲಿ ಕೇವಲ ಒಂದು ಕಲ್ಲಿನ ಆಸನವಿತ್ತು.) ಈ ಸಿಂಹಾಸನದ ಮೇಲೆ ತಮಾಷೆ ಗಾಗಿಯೂ ಯಾರೂ ಕೂಡುವಂತಿಲ್ಲ. ಕಾವಲುಗಾರ ನಮ್ಮನ್ನು ಎಚ್ಚರಿಸುತ್ತಲೇ ಇರುತ್ತಾನೆ. ೬೦ರ ದಶಕದಲ್ಲಿ ನಮ್ಮ ಸ್ನೇಹಿತರೊಬ್ಬರ ಅಧ್ಯಾಪಕರು (ಅವರು ಕೇರಳದ ಕ್ರಿಶ್ಚಿಯನ್) ಆಗ್ಗೆ ಇದ್ದ ಆಸನದ ಮೇಲೆ ಕೂತು ಬೇರೆಯವರಿಗೆ ಮುಜುಗರ ಉಂಟಮಾಡಿದ್ದರಂತೆ. ಶಿವಾಜಿಗೆ ಅವಮಾನವಾಯಿತೆಂದು ಯಾರೂ ಗೊಣಗಲಿಲ್ಲ, ಕೂಗಾಡಲಿಲ್ಲ. ಈಗಿನ ವಾತಾವರಣವೇ ಬೇರೆ. ಈ ಸಭಾಂಗಣವಿರುವ ಜಾಗ ಬಹಳ ಅಚ್ಚರಿ ಯನ್ನುಂಟುಮಾಡುತ್ತದೆ. ಸಿಂಹಾಸನದ ಜಗುಲಿಯ ಮೇಲೆ ನಿಂತು ಯಾರೇ ಸಹಜ ಧ್ವನಿಯಲ್ಲಿ ಮಾತನಾಡಿದರೂ ಸಭಾಂಗಣದ ತುದಿಗೂ ಸ್ಪಷ್ಟವಾಗಿ ಧ್ವನಿವರ್ಧಕದಲ್ಲಿ ಮಾತನಾಡಿದಂತೆ ಕೇಳುತ್ತದೆ. ಶಿವಾಜಿಯ ರಾಜಸಭೆ ನಡೆಯುತ್ತಿದ್ದುದು ಇಲ್ಲಿಯೇ ಎನ್ನುತ್ತಾರೆ.

ಈ ಸಿಂಹಾಸನದ ಎರಡೂ ಬದಿಯ ಕಟ್ಟಡಗಳೂ ಉಗ್ರಾಣಗಳಾಗಿದ್ದವು. ಸಭಾಂಗಣದ ಕೊನೆಯಲ್ಲಿ ಎರಡು ಗೋಡೆಗಳ ಕೊಠಡಿಯಿದ್ದು ಅದನ್ನು ನಗ ನಾಣ್ಯಗಳನ್ನು ಸಂರಕ್ಷಿಸುವ ಕಣಜವಾಗಿ ಬಳಸುತ್ತಿದ್ದರು. ಸಭಾಂಗಣದ ಮುಂಭಾಗದಲ್ಲಿ ತೆರೆದ ವಿಶಾಲ



*ಶಿವಾಜಿಯ ಸಿಂಹಾಸನವಿರುತ್ತಿದ್ದ ಸ್ಥಳ*

ಜಾಗವಿದ್ದು ನೀರಿನ ಚಿಲುಮೆಯ ಅವಶೇಷಗಳಿವೆ. ಇದರ ಮುಂದೆ 'ನಗಾರ್ ಖಾನಾ' ನಗಾರಿಯ ಬಾಗಿಲು ಇದೆ. ಮುಖ್ಯದ್ವಾರದ ಎಡಭಾಗದಲ್ಲಿ ಕೆಳಗಿನ ಹಂತದಲ್ಲಿ 'ರಂಗಮಹಲ್' ಇದ್ದಿರಬಹುದಾದ ಜಾಗವೂ, ಅವಶೇಷಗಳೂ ಇವೆ. ಈ ಭಾಗದಲ್ಲಿಯೇ ಶಿವಾಜಿಯ ಅಂತರಂಗದ ನಿವಾಸಗಳೂ ಇದ್ದವು.

ನಗಾರ್‌ಖಾನಾದ ಪೂರ್ವಭಾಗದಲ್ಲಿ ಒಣಗಿದ ಒಂದು ಜಲಾಶಯದ ತಾಣ ಕಣ್ಣಿಗೆ ಬೀಳುತ್ತದೆ. ಇದು **ಕುಶಾವರ್ತ**. ಈ ಕೊಳದ ಹತ್ತಿರದಲ್ಲಿಯೇ **ಸಿರಿಗೊಂಡ** ಕಾಣಿಸುತ್ತದೆ. ಇದು ಹಲವಾರು ಪಾಳುಬಿದ್ದ ಕಟ್ಟಡಗಳ ತಾಣ. ಇಲ್ಲಿ ಮಂತ್ರಿ, ಮಹಾಜನಗಳ ನಿವಾಸಗಳಿದ್ದವು. ಬ್ರಿಟಿಷರ ಗುಂಡಿನ ಧಾಳಿಯಿಂದ ಈ ಕಟ್ಟಡಗಳು ನೆಲಸಮವಾಗಿರಬಹುದು. ಅರಮನೆಯಿಂದ ಇನ್ನೂರು ಹೆಜ್ಜೆ ಮುಂದಡಿಯಿಟ್ಟರೆ ಮಾರುಕಟ್ಟೆಯ ಜಾಗ ಸಿಕ್ಕುತ್ತದೆ. ಇದು ಖಂಡಿತ ವಿಶಿಷ್ಟವಾದ ಜಾಗವಾಗಿ ಕಾಣಿಸುತ್ತದೆ. ಎರಡೂ ಬದಿಗಳಲ್ಲಿ ಇಪ್ಪತ್ತೆರಡು ಅಂಗಡಿಗಳ ಸಾಲು. ೪೦ ಅಡಿ ರಸ್ತೆಯು ಈ ಎರಡು ಸಾಲುಗಳ ನಡುವಿನ ಅಂತರವಾಗಿದೆ. ಬೆಂಗಳೂರಿನ ಅವೆನ್ಯೂ ರೋಡಿನ ಅಂಗಡಿ ಬೀದಿ ನೋಡಿದ ನಮಗೆ ಶಿವಾಜಿಯ ಕಾಲದ ಈ ಮಾರುಕಟ್ಟೆಯ ಬೀದಿಗಳು ಬೆರಗು ಹುಟ್ಟಿಸುತ್ತವೆ. ಅಕ್ಕ ಪಕ್ಕದ ರಾಜ್ಯಗಳಿಂದಲೂ ವರ್ತಕರು ವ್ಯಾಪಾರಕ್ಕಾಗಿ ಇಲ್ಲಿ ಬರುತ್ತಿದ್ದು ಪ್ರತಿಯೊಬ್ಬರಿಗೂ ಅವರದೇ ಆದ ಮಳಿಗೆಗಳಿದ್ದುವಂತೆ. ನಾಗಶೆಟ್ಟಿಯೆಂಬ ಕರ್ನಾಟಕದ ವರ್ತಕನ ಅಂಗಡಿಯನ್ನೂ ಇಲ್ಲಿ ನೋಡಬಹುದು. ಅವನು 'ನಾಗ' ಶೆಟ್ಟಿ ಎಂಬುದಕ್ಕೆ ಪುರಾವೆ ಈಗಲೂ ಚೆನ್ನಾಗಿ ಕಾಣುತ್ತದೆ.

ಮಾರುಕಟ್ಟೆ ಬೀದಿಯಿಂದ ಮೇಲಕ್ಕೆ ಸಾಗಿದರೆ ಗಜಶಾಲೆ ಸಿಗುತ್ತದೆ. ಅದರ ಬಲಕ್ಕೆ ಬ್ರಾಹ್ಮಣರ ವಾಸಸ್ಥಾನಗಳಿದ್ದಲ್ಲಿ ಅವಶೇಷಗಳು, ಅವರು ಬಳಸುತ್ತಿದ್ದ ಒಂದು ಹೊಂಡ ಕಾಣಸಿಗುತ್ತದೆ. ಅರಮನೆಯಿಂದ ಅರ್ಧ ಮೈಲಿ ದೂರದಲ್ಲಿ ಉತ್ತರಕ್ಕೆ ಮಹದೇವ ಜಗದೀಶ್ವರನ ದೇವಾಲಯದ ಗೋಡೆಗಳು ಕಾಣಸಿಗುತ್ತವೆ. ಅದರ ಹೊರಭಾಗದಲ್ಲಿ ಸುಂದರವಾಗಿ ಕೆತ್ತಿರುವ, ಮೂರು ಅಡಿ ಎತ್ತರ ಮತ್ತು ಅಗಲವಿರುವ ಆಂಜನೇಯನ ವಿಗ್ರಹವಿದೆ. ಈ ದೇವಾಲಯವನ್ನು ಜಗದೀಶ್ವರ ದೇವಾಲಯವೆಂದೇ ಕರೆಯುತ್ತಾರೆ. ಶಿವಾಜಿಯ ಸಿಂಹಾಸನಾರೋಹಣದ ದಿನಾಂಕವನ್ನೇ ಹೊತ್ತಿರುವ ಒಂದು ಸಂಸ್ಕೃತ ಶಿಲಾಶಾಸನವಿದೆ. ಮಹಾದೇವ ದೇವಾಲಯದ ಸುತ್ತಲೂ ನಾಟ್ಯ ಕನ್ನಿಕೆಯರ ನಿವಾಸ ಸ್ಥಾನಗಳು ಇವೆ. ಈ ದೇವಾಲಯದ ಪೂರ್ವಭಾಗದಲ್ಲಿ ಅಷ್ಟಮುಖಗಳ ಕಲ್ಲಿನ ಎತ್ತರದ ಚಚ್ಚೌಕದ ಜಗುಲಿಯಿದೆ. ಅದು ಶಿವಾಜಿಯ ಸಮಾಧಿ. ಈ ಜಾಗದಲ್ಲಿ ಈಚೆಗೆ ಶಿವಾಜಿಯ ಎದೆಯ ಮಟ್ಟದ ಪ್ರತಿಮೆಯನ್ನಿರಿಸಲಾಗಿದೆ. ಇದರ ಮುಂಭಾಗದಲ್ಲಿಯೇ ಶಿವಾಜಿಯ ನೆಚ್ಚಿನ ನಾಯಿ 'ವಾಘ್ಯಾ'ನ (ಹುಲಿ) ಸಮಾಧಿ ಸ್ತಂಭವಿದೆ. ಶಿವಾಜಿಯು ಸತ್ತನಂತರ ಅವನ ಚಿತೆಯ ಮೇಲೆಯೇ ಅವನ ನೆಚ್ಚಿನ ನಾಯಿ ವಾಘ್ಯಾ ಹಾರಿಕೊಂಡಿತೆಂಬ ಕಥೆಯಿದೆ. ಆ ನಾಯಿಯ ವಿಧೇಯತೆಗೆ ಸ್ಮಾರಕವಾಗಿ ನಿಂತಿದೆ ಈ ಸಮಾಧಿ. ೧೨ ಅಡಿ ಎತ್ತರದ ಕಂಬದ ಮೇಲೆ ನಾಯಿಯ ಪ್ರತಿಮೆಯೊಂದಿದೆ.

ಈ ಅವಶೇಷಗಳಿಗೆ ಅರ್ಧ ಮೈಲಿಯಾಚೆ ಕೆಲವು ಕಟ್ಟಡಗಳು ಹಾಳುಬಿದ್ದಿವೆ. ಅವುಗಳು ಬಹುಶಃ ಅತಿಥಿಗಳಿಗೆಂದೇ ಕಟ್ಟಿಸಿದವಾಗಿರಬಹುದು. ಅವುಗಳಲ್ಲಿ ಒಂದು ಕಟ್ಟಡದಲ್ಲಿ ಶಿವಾಜಿಯ ಸಿಂಹಾಸನಾ ರೋಹಣದ ಉತ್ಸವಕ್ಕೆ ಬಂದ ಇಂಗ್ಲಿಷ್ ರಾಯಭಾರಿಯ ಮನೆ ಇದ್ದಿತೆಂದು ಹೇಳುತ್ತಾರೆ. ಈ ಅವಶೇಷಗಳ ಪೂರ್ವಕ್ಕೆ 'ಕಾಲಾಕುಂಡ್' ಅಥವಾ ಕಪ್ಪುಕೊಳವಿದೆ. ಇದನ್ನು ಹಾದುಹೋದಲ್ಲಿ ಪೂರ್ವದ

ಅಂಚಿಗೆ ಪ್ರಸಿದ್ಧವಾದ **ಟಕ್‌ಮಕ್** ಸಿಕ್ಕುತ್ತದೆ. ಕೈದಿಗಳಿಗೆ ಉಗ್ರಶಿಕ್ಷೆ ನೀಡಬೇಕಾಗಿಬಂದಾಗ ಅವರನ್ನು ಇಲ್ಲಿಂದ ಕೆಳಕ್ಕೆ ಎಸೆಯಲಾಗುತ್ತಿತ್ತಂತೆ. ಮತ್ತೊಂದು ಮುಖ್ಯ ಸ್ಥಳ **ಹಿರ್ಕಣೀ ಪಾಯಿಂಟ್**. ಈ ಜಾಗವು ಅರಮನೆಯ ಜಾಗದಿಂದ ಇನ್ನೂರು ಅಡಿಗಳಷ್ಟು ಕೆಳಭಾಗದಲ್ಲಿ ಗೋಡೆಗಳಿಂದ ರಕ್ಷಿಸಲ್ಪಟ್ಟಿದೆ. ಈ ಜಾಗದ ಮಹತ್ವವೆಂದರೆ, ಹಿರ್ಕಣೀಯೆಂಬ ಹಾಲು ಮಾರುವ ಗೌಳಿಗಿತ್ತಿಯೊಬ್ಬಳು ಕೆಳಗಿನ ಹಳ್ಳಿಯಿಂದ ಪ್ರತಿನಿತ್ಯ ಹಾಲು ಮಾರಲು ಬರುತ್ತಿದ್ದಳಂತೆ. ಒಂದು ದಿನ ಹಾಲು ಮಾರಿ ಮರಳಿ ಮನೆಗೆ ಹೋಗಬೇಕೆಂದಾಗ ಎಲ್ಲ ಬಾಗಿಲುಗಳೂ ಮುಚ್ಚಿಬಿಟ್ಟಿದ್ದವಂತೆ. ಹಸುಗೂಸನ್ನು ಮನೆಯಲ್ಲಿ ಬಿಟ್ಟು ಬಂದಿದ್ದ ಹಿರ್ಕಣೀ ಅಂದೇ ರಾತ್ರಿ ಮನೆಗೆ ಹೋಗಬೇಕಿತ್ತು. ಅವಳು ಹೇಗೋ ಬೆಟ್ಟದಿಂದಿಳಿದು ಆ ರಾತ್ರಿ ಮನೆ ತಲುಪಿದಳು. ಮಾರನೆಯ ದಿನ ವಿಷಯ ತಿಳಿದ ಶಿವಾಜಿ ಅವಳಿಗೆ ಬರಹೇಳಿ ಅವಳು ಮನೆಗೆ ಹೋದ ದಾರಿ ಮತ್ತು ರೀತಿಯನ್ನು ವಿಚಾರಿಸಿಕೊಂಡ. ನಂತರ ಆ ಜಾಗದಲ್ಲಿ ಬುರುಜೊಂದನ್ನು ಕಟ್ಟಿ ಅದಕ್ಕೆ ಅವಳ ಹೆಸರಿಟ್ಟ. ಹಿರ್ಕಣೀಯ ಸಾಹಸವನ್ನು ಅದೇ ಜಾಗದಲ್ಲಿ ನಾವು ಮಾಡಲು ಯತ್ನಿಸಿದರೆ ಸಫಲರಾಗುತ್ತೇವೆಂಬ ಖಾತ್ರಿ ಖಂಡಿತ ಇಲ್ಲ. ಅವಳ ಮಗುವಿನ ಕರೆಯ ಮಹತ್ವ ಇನ್ನೆಷ್ಟಿರಬೇಕು !

೧೬೭೪ರಿಂದ ೧೬೮೦ರವರೆಗೆ ರಾಯಗಢದಲ್ಲಿ ಭವ್ಯವಾಗಿ ರಾಜ್ಯಭಾರ ನಡೆಸಿದ ಶಿವಾಜಿಯ ಸಿಂಹಾಸನಾರೋಹಣ ಅವನ ನಲವತ್ತೇಳನೇ ವಯಸ್ಸಿನಲ್ಲಿ ೧೬೭೪ರಲ್ಲಿ ನಡೆಯಿತು. ಶಿವಾಜಿಯ ರಾಜ್ಯಭಾರದ ವೈಭವವೇನೆಂಬುದು ಹೊರಲೋಕಕ್ಕೆ ಗೊತ್ತಾಗುವ ಸಂಭ್ರಮದ ಸನ್ನಿವೇಶ ಇದಾಗಿತ್ತು. ಶಿವಾಜಿಯ ವಿಚಕ್ಷಣತೆ, ದಕ್ಷತೆ ಮತ್ತು ಸಮೃದ್ಧಿಯ ಸ್ಥೂಲ ಪರಿಚಯದ ಕತೆಯನ್ನು ಈಗಲೂ ರಾಯಗಢದ ಪ್ರತಿಯೊಂದು ಅವಶೇಷವೂ ಧ್ವನಿಪೂರ್ಣವಾಗಿ ಸೂಚಿಸುತ್ತದೆ. ಬೆಳಗಿನಿಂದ ಸಂಜೆಯವರೆಗೆ ಶಿವಾಜಿಯ ಈ ತಾಣದಲ್ಲಿ ಅಡ್ಡಾಡಿದ ನಮಗೆ ಹದಿನೇಳನೇ ಶತಮಾನದ ಮರಾಠರ ಚರಿತ್ರೆಯ ಒಂದು ತುಣುಕು ತೆರೆದಿಟ್ಟ ಪುಸ್ತಕದಂತೆ ನಮ್ಮ ಮುಂದೆ ಬಿಚ್ಚಿಕೊಂಡಿತು. ತುಂತುರು ಹನಿಗಳ ಮಳೆಯ ನಡುವೆ, ಗತಕಾಲದ ನೆನಪಿನೊಂದಿಗೆ, ಭಾರವಾದ ಮನಸ್ಸಿನಿಂದ ಬೆಟ್ಟದಿಂದ ಇಳಿಯುತ್ತಾ ಹೊರಟಂತೆ ಚರಿತ್ರೆಯೆಲ್ಲವೂ ಜೀವಂತ ಮೂರ್ತಿಗಳಾಗಿ ನಮ್ಮೊಂದಿಗೆ ನಡೆಯುತ್ತಾ ಬಂದಂತೆ ಭಾಸವಾಯಿತು. ಶಿವಾಜಿಯ ರಾಣಿಯರ ಸರಸ ಸಲ್ಲಾಪ, ಜೀಜಾಬಾಯಿಯ ಮಾತೃವಾತ್ಸಲ್ಯ ಮನಸ್ಸಿನಲ್ಲಿ ಗುಂಯ್‌ಗುಡುತ್ತಿತ್ತು. ಗೌಳಿಗಿತ್ತಿ ಹಿರ್ಕಣೀಯ ಮಾತೃವಾತ್ಸಲ್ಯದ ಅಗಾಧತೆ, ಶಿವಾಜಿಯ ನಾಯಿ ವಾಘ್ಯಾನ ವಿಧೇಯತೆ ಮನಸ್ಸನ್ನು ಆರ್ದ್ರಗೊಳಿಸಿತು. ಶಿವಾಜಿಯ ಸಾವಿರಾರು ಸೈನಿಕರು ಕತ್ತಿ ಹಿಡಿದು ಆ ಬೆಟ್ಟಗುಡ್ಡಗಳಲ್ಲಿ ಅಡ್ಡಾಡುತ್ತಿರುವುದನ್ನು ನೆನಪಿಸಿಕೊಂಡು ಇಳಿಯುತ್ತಾ ನಡೆದಾಗ ಅಲ್ಲಲ್ಲಿ ಬೆಟ್ಟಗಳ ನಡುವೆ ಚಿಮ್ಮಿದ ಜಲಧಾರೆಗಳು ಮೋಹಕವಾದ ಅನುಭವ ಪ್ರಪಂಚವನ್ನೇ ನಮ್ಮ ಮುಂದೆ ತೆರೆದು ಶಿವಾಜಿಯ ವೈಭವದ ಜಗತ್ತಿಗೆ ನಮ್ಮನ್ನು ಕರೆದೊಯ್ದವು. ಇವೆಲ್ಲವುಗಳ ನೆನಪುಗಳನ್ನು ತಲೆಯಲ್ಲಿ ಹೊತ್ತು ಕೆಳಗೆ ಪಾಖಡ್‌ಗೆ ಬಂದಾಗ ನಮಗೆಂದು ಸಿದ್ಧವಾಗಿ ನಿಂತಿದ್ದ ಜೀಪು ನಮ್ಮನ್ನು ವಾಸ್ತವಕ್ಕೆ ಕರೆದೊಯ್ದಿತು. ಈಗ ರಾಯಗಢ ನಮಗೆ ಕೇವಲ ಒಂದು ನೆನಪು, ಸುಂದರ ನೆನಪು. ವಿಶಿಷ್ಟ ಅನುಭವವನ್ನು ಕಟ್ಟಿಕೊಡಬಲ್ಲ ಸುಂದರ ಕವನವಿದ್ದಂತೆ.

[redacted] ಎನ್. ಗಾಯತ್ರಿ,
೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ
ಬೆಂಗಳೂರು-೫೬೦ ೦೮೫



# ಅತಿ ಪುರಾತನ ನೆಲ

ಲಾಲ್‌ಬಾಗಿನ ಪೆನಿನ್‌ಸುಲಾರ್ ನೈಸ್. ೨೯೫ ಕೋಟಿ ವರ್ಷ ಹಳೆಯದು !

ಕನ್ನಡ ನಾಡನ್ನು ಚಿನ್ನದ ನಾಡು, ಗಂಧದ ಗುಡಿ ಎಂದು ಹಾಡಿ ಹೊಗಳಿದರು ಆಚಾರ್ಯ ಬಿ. ಎಂ. ಶ್ರೀ. ತಮ್ಮ 'ಮೈಸೂರು ಮಕ್ಕಳು' ಕವನದಲ್ಲಿ. ನಾಲುಮಡಿ ಕೃಷ್ಣನ ಮೈಸೂರಲ್ಲಿ ಶ್ರೀ ಅವರಿಗೆ ಅದ್ಭುತಗಳೇ ಕಂಡವು. ಕರ್ನಾಟಕದ ಹೆಸರಿನೊಂದಿಗೆ ಈ ಗುಣವಾಚಕಗಳು ಈಗ ಹಾಸುಹೊಕ್ಕಾಗಿ ಬೆರೆತುಬಿಟ್ಟಿವೆ. ಪ್ರಾಕೃತಿಕ ಸಂಪತ್ತಿನಿಂದ ಒಂದು ನಾಡನ್ನು ಗುರುತಿಸುವುದು ಅತ್ಯಂತ ಸಹಜವೇ. ಚಿಲಿ ಎಂದೊಡನೆ ಪೆಟ್ಲುಪ್ಪು, ಅರಬ್ ರಾಷ್ಟ್ರ ಎಂದೊಡನೆ ಅತುಲ ತೈಲ ಸಂಪನ್ಮೂಲದ ಚಿತ್ರಣ ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ, ಅಲ್ಲವೆ ? ನೈಸರ್ಗಿಕ ಸಂಪತ್ತು ಯಾವುದೇ ದೇಶದ ಪ್ರಗತಿಗೆ ಬುನಾದಿ; ಕೈಗಾರಿಕೆಗಳು ನಿಂತಿರುವುದೇ ಆಯಾ ನೆಲದಲ್ಲಿ ದೊರೆಯುವ ಕಚ್ಚಾ ವಸ್ತುಗಳನ್ನು ಅವಲಂಬಿಸಿ. ನಮ್ಮ ದೇಶದ ಒಂದೊಂದು ರಾಜ್ಯವೂ ತನ್ನದೇ ಆದ ನೆಲ, ಜಲದಂತೆ ಖನಿಜ ಸಂಪನ್ಮೂಲವನ್ನು ಹೊಂದಿದೆ. ಅಸ್ಸಾಂನಲ್ಲಿ ತೈಲ ದೊರೆಯುತ್ತದೆ; ನಮ್ಮಲ್ಲಿ ಅದರ ಸುಳಿವೂ ಇಲ್ಲ. ನಮ್ಮ ರಾಜ್ಯವೊಂದೇ ಇಡೀ ರಾಷ್ಟ್ರದಲ್ಲಿ ಚಿನ್ನವನ್ನು ಉತ್ಪಾದಿಸುತ್ತಿದೆ. ಬೇರೆಲ್ಲೂ ಸ್ವರ್ಣ ಸಿರಿ ಈ ಪ್ರಮಾಣದಲ್ಲಿಲ್ಲ. ಬಿಹಾರ, ಒರಿಸ್ಸಾ, ಬಂಗಾಳಗಳು ಕಲ್ಲಿದ್ದಲು ಸಂಪನ್ಮೂಲಗಳ ಮೇಲೆ ತೇಲುತ್ತಿವೆ. ಇವಿಲ್ಲದೆ ಹೋಗಿದ್ದಲ್ಲಿ ರೈಲುಗಳನ್ನು ಕನಸಿನಲ್ಲೂ ಕಾಣಲು ಅವಕಾಶವಿರಲಿಲ್ಲ. ಸತುವು, ಸೀಸದ ದೊಡ್ಡ ನಿಕ್ಷೇಪಕ್ಕೆ ರಾಜಸ್ಥಾನವೇ ಮೂಲ. ತಮಿಳುನಾಡಿನಲ್ಲಿ ಲಿಗ್ನೈಟ್ ಕಲ್ಲಿದ್ದಲು, ಒರಿಸ್ಸದ ಕಬ್ಬಿಣದ ಅದುರು ಒಂದೊಂದೂ ಆಯಾ ರಾಜ್ಯದ ಪ್ರಗತಿಯ ಮುಖವನ್ನೇ ಬದಲಾಯಿಸಿವೆ.

ಕರ್ನಾಟಕದ ಚರಿತ್ರೆಯನ್ನು ಕ್ರಿ. ಪೂ. ೩ನೇ ಶತಮಾನದ ಮೌರ್ಯರ ಆಡಳಿತದಿಂದಲೇ ಗುರುತಿಸುತ್ತೇವೆ. ಭೂಚರಿತ್ರೆಯನ್ನು ಕೂಡ ವಿವಿಧ ಕಾಲಘಟ್ಟಗಳನ್ನಾಗಿ ನಾವು ನೋಡಬಹುದು. ವ್ಯತ್ಯಾಸವಿಷ್ಟೇ, ಚರಿತ್ರೆ ನಮ್ಮನ್ನು ಲಿಖಿತ ದಾಖಲೆಗಳ ಆಧಾರದ ಮೇಲೆ ಕೆಲವು ಸಾವಿರ ವರ್ಷಗಳ ಹಿಂದಕ್ಕೆ ಸರಿಸುತ್ತದೆ. ಭೂಚರಿತ್ರೆ ಕೂಡ ಕಾಲದ ವ್ಯಾಪ್ತಿಗೆ ಅತೀತವಲ್ಲ. ಇಲ್ಲಿ ಸಾವಿರ ವರ್ಷಕ್ಕೆ ಜಾಗವಿಲ್ಲ. ಏನಿದ್ದರೂ ದಶಲಕ್ಷ, ಕೋಟಿಗಳಿಗಷ್ಟೇ ಇಲ್ಲಿ ಬೆಲೆ. ಭೂಚರಿತ್ರೆಯ ಪುಟಗಳೆಂದರೆ ಶಿಲೆಯಲ್ಲಿ ಮುದ್ರಿತವಾಗಿರುವ ಘಟನೆಗಳು. ಭಾಷೆ ಮತಿವಂತ ಮಾನವನ ಆವಿಷ್ಕಾರ. ಆದರೆ ಭೂಚರಿತ್ರೆಯಲ್ಲಿ ಮೌನ ಸಂಜ್ಞೆಗಳೇ ನಮಗೊದಗುವ ಪರಿಕರ. ಯಾವ ಯಾವ ಕಾಲದಲ್ಲಿ ಯಾವ ಯಾವ ಘಟನೆ ನಡೆದಿದೆ ಎಂದು ಶಿಲಾಪುಟಗಳೇ ನಮಗೆ ಹೇಳಬೇಕು; ಅರ್ಥಾತ್ ಸಂಜ್ಞೆಗಳನ್ನು ಅರ್ಥ ಮಾಡಿಕೊಳ್ಳಲು ನಾವು ಪ್ರಯತ್ನಿಸಬೇಕು. ಶಿಲಾ ಪುಟಗಳನ್ನು ಕ್ರಮವಾಗಿ ಜೋಡಿಸಿದರೆ ಭೂಚರಿತ್ರೆಯ ಅಧ್ಯಾಯಗಳನ್ನು ಕ್ರಮಾಗತವಾಗಿ ಅಧ್ಯಯನ ಮಾಡಬಹುದು. ಒಮ್ಮೊಮ್ಮೆ ಹೀಗಾಗುವುದುಂಟು. ಎಲ್ಲ ಘಟನೆಗಳನ್ನೂ ಭೂಗೋಳದ ಎಲ್ಲ ಭಾಗದ ಶಿಲೆಗಳೂ ಮುದ್ರಿಸಿಕೊಂಡಿರುವುದಿಲ್ಲ. ನಿಸರ್ಗ ಭೂಮಿಯನ್ನು ಒಂದೇ ಘಟಕ ಎಂದೇ ಪರಿಗಣಿಸುತ್ತದೆ. ಕೆಲವೆಡೆ ಕೇವಲ ಮೊದಲ ಅಧ್ಯಾಯ ಮಾತ್ರ ಲಭ್ಯ. ಮತ್ತೆಲ್ಲೋ ಕೊನೆಯ ಅಧ್ಯಾಯಕ್ಕಷ್ಟೇ ಪ್ರಾಶಸ್ತ್ಯ. ಒಂದೆಡೆ ನೆಲ ಸಾಗರದ ಮೇಲೆ ಮಾಡಿದ ಆಕ್ರಮಣ ಶಿಲೆಗಳಲ್ಲಿ ಪಡಿಮೂಡಿರುತ್ತದೆ, ಮತ್ತೆಲ್ಲೋ ಭುಗಿಲೆದ್ದು ಜ್ವಾಲಾಮುಖಿಗಳು ತೋರಿದ ಆಟಾಟೋಪ ಅಚ್ಚಳಿಯದೆ ಶಿಲೆಯಲ್ಲಿ ತನ್ನ ಹಸ್ತಾಕ್ಷರ ಹಾಕಿರುತ್ತದೆ. ಭೂಗೋಳದ ತುಂಬೆಲ್ಲ ಚೆಂದಿ ಚೆಂದಿಯಾಗಿ ಹೋಗಿರುವ ಶಿಲೆಗಳಲ್ಲಿ ಘಟನೆಗಳೂ ಹರಿದು ಹಂಚಿಹೋಗಿವೆ. ಭೂವಿಜ್ಞಾನಿಯ ಮೂಲ ಕೆಲಸವೆಂದರೆ ಇವೆಲ್ಲವನ್ನೂ ಕೂಡಿಸಿ ಭೂವಿಕಾಸವನ್ನು ಕುರಿತು ಸ್ಪಷ್ಟ ಚಿತ್ರಣ ಪಡೆಯುವುದು.

ಟಿ. ಆರ್. ಅನಂತರಾಮು

ಕರ್ನಾಟಕದ ಭೂಚರಿತ್ರೆಗೆ ಉಳಿದ ಭಾಗದ ನೆಲಕ್ಕಿಂತ ಒಂದು ತೂಕ ಹೆಚ್ಚು. ಇಲ್ಲಿನ ಬಂಗಾರದ ನಿಕ್ಷೇಪದಿಂದಲ್ಲ; ಮೌರ್ಯರು ಆಳಿದರೆಂಬ ಕಾರಣಕ್ಕಲ್ಲ; ಪಶ್ಚಿಮಘಟ್ಟಗಳ ವನಸಿರಿಯಿಂದಲೂ ಅಲ್ಲ; ಕಡಲ ತಡಿಯಿಂದಲೂ ಅಲ್ಲ. ಇಲ್ಲಿನ ಶಿಲೆಗಳು ನಮ್ಮನ್ನು ಭೂವಿಕಾಸದ ಆದಿಮ ಸ್ಥಿತಿಗೆ ಒಯ್ಯುತ್ತವೆ ಎಂಬ ಕಾರಣಕ್ಕಾಗಿ. ನಮ್ಮ ನೆಲದ ಚರಿತ್ರೆಯಲ್ಲೂ ಆದಿ ಪರ್ವವಿದೆ, ಗದಾ ಪರ್ವವಿದೆ, ಹಾಗೆಯೇ ಶಾಂತಿ ಪರ್ವವೂ ಇದೆ. ಈ ಒಂದೊಂದೂ ಪರ್ವ ಕಾಲದಲ್ಲಿ ಇಲ್ಲಿನ ನೆಲ, ಜಲ ನಿರಂತರ ಬದಲಾವಣೆ ಕಂಡಿವೆ. ಆದರೂ ಮೂಲ ಸ್ವರೂಪ ಸಂಪೂರ್ಣವಾಗಿ ಅಳಿಸಿಹೋಗದಂತೆ ಎಲ್ಲೋ ಕೊಂಡಿಗಳನ್ನು ಉಳಿಸಿದೆ; ಭೂಚರಿತ್ರೆಯನ್ನು ಅಡಗಿಸಿಟ್ಟುಕೊಂಡಿದೆ. ದಕ್ಷಿಣ ಭಾರತದ ಪೀಠಭೂಮಿಯಲ್ಲಿ ಕರ್ನಾಟಕಕ್ಕೆ ವಿಶಿಷ್ಟ ಸ್ಥಾನ. ಮಾವಿನಕಾಯಿಯ ಓಟೆಯಂತೆ. ಇದು ಗಟ್ಟಿ ಭೂಮಿ.

ಭೂಮಿ ಗ್ರಹವಾಗಿ ಮೈದಳೆದು ತನ್ನ ಅಕ್ಷದ ಮೇಲೆ ತಾನೇ ಗಿರಿಕಿ ಹೊಡೆಯುತ್ತ ಸೂರ್ಯನನ್ನು ಪರಿಭ್ರಮಿಸಲು ಪ್ರಾರಂಭಿಸಿದ್ದು ಇಂದು ನಿನ್ನೆಯಲ್ಲ, ನಾನ್ನೂರರವತ್ತು ಕೋಟಿ ವರ್ಷಗಳ ಹಿಂದೆ. ಹುಟ್ಟಿದ ನಂತರ ಮೊದಲ ನೂರು ಕೋಟಿ ವರ್ಷಗಳು ತನ್ನ ಕಾಯವನ್ನು ಹೊಂದಾಣಿಕೆ ಮಾಡಿಕೊಳ್ಳುವುದರಲ್ಲೇ ಮಗ್ನವಾಗಿತ್ತು. ಮುಂದೆ ಧಾತುಗಳು ಕೂಡಿದಂತೆ, ಗರ್ಭ, ಮಧ್ಯಗೋಳ, ಚಿಪ್ಪನ್ನು ರೂಪಿಸುತ್ತ ವಿಕಾಸದ ಅಂಬೆಗಾಲಿಟ್ಟಿತು. ಆಂತರಿಕ ಒತ್ತಡ ಉಷ್ಣತೆಯನ್ನು ನಿಭಾಯಿಸಿಕೊಂಡು ಜೀವ ಮಿಟುಕುವ ಘಳಿಗೆಗಾಗಿ ಭಾರಿ ಸಿದ್ಧತೆ ಮಾಡಿಕೊಂಡಿತು. ಈ ಹಂತದ ಭೂಮಿಯ ಸ್ಥಿತಿಯನ್ನು ನಮ್ಮ ಮುಂದೆ ತೆರೆದಿಡುವ

ಶಿಲೆಗಳು ಕರ್ನಾಟಕದಲ್ಲಿವೆ. ಎಂದೇ ದೂರದ ಆಸ್ಟ್ರೇಲಿಯದಿಂದ, ಇಂಗ್ಲೆಂಡಿನಿಂದ, ಕೆನಡದಿಂದ, ಜರ್ಮನಿಯಿಂದ ಭೂ ವಿಜ್ಞಾನಿಗಳು ಈಗಲೂ ತಂಡ ತಂಡದಲ್ಲಿ ಕರ್ನಾಟಕಕ್ಕೆ ಬರುತ್ತಲೇ ಇದ್ದಾರೆ. ಈ ನೆಲದ ಭೂ ಇತಿಹಾಸವನ್ನು ಕೆನಡದ ಪೀಠ ಭೂಮಿಗೋ, ಉತ್ತರ ಧ್ರುವದ ಗ್ರೀನ್‌ಲೆಂಡಿನ ನೆಲಕ್ಕೋ ಹೋಲಿಸಿ ನೂರಾರು ಸಂಶೋಧನಾ ಪ್ರಬಂಧಗಳನ್ನು ಬರೆದಿದ್ದಾರೆ. ದಶಕ ದಶಕಗಳಿಂದ ವಿಚಾರಗೋಷ್ಠಿ ನಡೆಸಿದ್ದಾರೆ. ಈ ನೆಲದ ಪ್ರಾಚೀನತೆ ಕಂಡು ಬೆರಗಾಗಿದ್ದಾರೆ.

ಗೊರೂರು ಎಂದೊಡನೆ ನಮಗೆ ಮೊದಲು ನೆನಪಿಗೆ ಬರುವುದು ಖ್ಯಾತ ಸಾಹಿತಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಹೆಸರು. ಇದೇ ಗೊರೂರು ಈಗ ಅಮೆರಿಕ, ಇಂಗ್ಲೆಂಡ್, ಕೆನಡ, ಬ್ರಿಟನ್ನಿನ ಭೂ ವಿಜ್ಞಾನಿಗಳಿಗೂ ಪರಿಚಿತ ಹೆಸರು. ಏಕೆಂದರೆ ಇಡೀ ಭಾರತ ಉಪಖಂಡದಲ್ಲಿ ಕರ್ನಾಟಕದ ಗೊರೂರು ಶಿಲೆಗಳೇ ಅತ್ಯಂತ ಪ್ರಾಚೀನವೆಂಬುದನ್ನು ಭೂ ವಿಜ್ಞಾನಿಗಳು ಪ್ರಮಾಣೀಕರಿಸಿ ತಿಳಿಸಿದ್ದಾರೆ. ಪ್ರಾಚೀನವೆಂದರೆ ? ಹೌದು. ನೂರು ಅಥವಾ ಸಾವಿರ ವರ್ಷಗಳಲ್ಲ. ೩೩೫೮ದಶಲಕ್ಷ ವರ್ಷ. ಇನ್ನೂ ಸಂಕ್ಷಿಪ್ತಗೊಳಿಸಿದರೆ ೩೩೫.೮ ಕೋಟಿ ವರ್ಷ. ವಿಕಿರಣಪಟು ಖನಿಜಗಳು ಶಿಲೆಯಲ್ಲಿ ಕ್ಷಯಿಸುವ ದರವನ್ನು ಆಧಾರವಾಗಿಟ್ಟುಕೊಂಡು ಮಾಡಿದ ಗಣನೆಯ ಫಲಿತಾಂಶ ಇದು. ನಮ್ಮ ಸಾಧಾರಣ ಕಲ್ಪನೆಗೆ ಈ ವಿಸ್ತೃತ ಕಾಲಮಾನ ನಿಲುಕದು. ಏಕೆಂದರೆ ಈ ಶಿಲೆಗಳು ಮೈದಳೆದಾಗ ಭಾರತದ ಸ್ಥಿತಿ ಹೇಗಿತ್ತು ಗೊತ್ತೆ? ಅದು ಸ್ವತಂತ್ರವಾದ ಭೂಭಾಗವೇ ಆಗಿರಲಿಲ್ಲ. ಅವಿಭಕ್ತ ಕುಟುಂಬದ ಸದಸ್ಯನಂತೆ ಅಖಂಡವಾಗಿ ಭೂಗೋಳಕ್ಕೆ ಅಂಟಿಕೊಂಡಿತ್ತು. ಅದರ ಅಸ್ತಿತ್ವ ಪ್ರಕಟವಾಗುವ ಸ್ಥಿತಿಯಲ್ಲೂ ಇರಲಿಲ್ಲ. ಅಂಟಾರ್ಕ್‌ಟಿಕಾ, ಆಫ್ರಿಕ, ಆಸ್ಟ್ರೇಲಿಯ, ದಕ್ಷಿಣ ಅಮೆರಿಕ, ಉಪಖಂಡ ಭಾರತ ಎಲ್ಲವೂ ಒಂದೇ ಮುದ್ದೆಯಲ್ಲಿ ಅಂಟಿಕೊಂಡಂತೆ ಇದ್ದುವು. ಪ್ರತ್ಯೇಕತೆಯ ಸೂಚನೆಯೂ ಇರಲಿಲ್ಲ. ಇದನ್ನೇ ವಿಜ್ಞಾನಿಗಳು 'ಗೊಂಡ್ವಾನ ಮಹಾಖಂಡ' ಎಂದಿದ್ದಾರೆ. ಖಂಡಗಳೆಲ್ಲವೂ ಒಂದೇ ನೆಲವನ್ನು ಹಂಚಿಕೊಂಡಿದ್ದವು. ಈ ಕಾರಣದಿಂದಾಗಿಯೇ ಆಸ್ಟ್ರೇಲಿಯದಲ್ಲಿ ಚಿನ್ನ ದೊರೆಯುವ ಶಿಲೆಯಲ್ಲೇ ನಮ್ಮಲ್ಲೂ ಚಿನ್ನ ದೊರೆಯುತ್ತದೆ. ದಕ್ಷಿಣ ಅಮೆರಿಕದಲ್ಲಿ ದೊರೆಯುವ ಪ್ರಾಚೀನ ಜೀವಿಗಳ ಪಳೆಯುಳಿಕೆಗಳು ನಮ್ಮ ದೇಶದ ಕಲ್ಲಿದ್ದಲಲ್ಲೂ ದೊರೆಯುತ್ತವೆ. ನಮ್ಮ ಬೆಂಗಳೂರಿನ ಸುತ್ತಮುತ್ತ ಇರುವ ಕಲ್ಲೇ ಅಂಟಾರ್ಕ್‌ಟಿಕದಲ್ಲೂ ದೊರೆಯುತ್ತದೆ. ತಮಿಳುನಾಡಿನಲ್ಲಿ ದೊರೆಯುವ ಶಿಲೆಗಳು ಶ್ರೀಲಂಕಕ್ಕೂ ವಿಸ್ತರಿಸಿವೆ. ಈ ಸಂಬಂಧ ಎಂದಿನದೋ ಕರಾರುವಾಕ್ಕಾಗಿ ತಿಳಿಯದು. ಆದರೆ ೧೫೦ ದಶಲಕ್ಷ ವರ್ಷಗಳ ಹಿಂದಿನವರೆಗೂ ಗೊಂಡ್ವಾನ ಖಂಡ ಅಸ್ತಿತ್ವದಲ್ಲಿತ್ತು. ಆನಂತರ ಖಂಡಗಳಾಗಿ ಬಿರಿದು, ದೂರ ಸರಿದು, ಒಂದೊಂದು ಖಂಡವೂ ತನ್ನದೇ ಆದ ಲಕ್ಷಣವನ್ನು ಉಳಿಸಿಕೊಂಡವು, ಬೆಳೆಸಿಕೊಂಡವು, ಅಲ್ಲಲ್ಲೇ ಅಳಿಸಿಕೊಂಡವು. ಅಂತೂ ಸ್ವತಂತ್ರವಾಗಿ ನಿಂತವು ಇಂದಿನ ನೆಲೆಯಲ್ಲಿ.


ಬಾದಾಮಿಯ ಸುತ್ತಮುತ್ತ ಎದ್ದುಕಾಣುವ ಮರಳುಕಲ್ಲು

ನೀವು ಲಾಲ್‌ಬಾಗಿಗೆ ಭೇಟಿ ನೀಡಿದ್ದರೆ ಅಲ್ಲಿ ಕೆಂಪೇಗೌಡ ಸ್ಥಾಪಿಸಿರುವ ಗೋಪುರವನ್ನು ನೋಡೇ ಇರುತ್ತೀರಿ. ಗೋಪುರ ನಿಂತಿರುವುದು ಪಟ್ಟೆರೂಪದ ಶಿಲೆಯ ಮೇಲೆ. ಇದನ್ನು ಪೆನಿನ್‌ಸುಲಾರ್ ನೈಸ್ ಅನ್ನುತ್ತಾರೆ. ಏಕೆಂದರೆ ದಕ್ಷಿಣ ಭಾರತದಲ್ಲಿ ಇದೇ ಪ್ರಧಾನವಾದ ಶಿಲೆ. ಇದು ಮೈದಳೆದು ೨೯೫ ಕೋಟಿ ವರ್ಷಗಳಾಗಿವೆ. ಇದಾದ ನಂತರ ಕರ್ನಾಟಕದ ನೆಲ ಬಹುದೊಡ್ಡ ಬದಲಾವಣೆ ಕಂಡಿತು. ಇಡೀ ನೆಲವನ್ನು ಸೀಳಿದಂತೆ ದೊಡ್ಡ ದೊಡ್ಡ ಬಿರುಕುಗಳಾದವು. ಒಂದೊಂದು ಸಮುದ್ರ ಎನ್ನಬಹುದಾದಷ್ಟು ದೊಡ್ಡವು. ನದಿಗಳು ಶಿಲೆಯನ್ನು ಕೊಚ್ಚಿ ತಂದು ಅದರೊಳಕ್ಕೆ ಸುರಿದವು. ಸಮುದ್ರ ತಳದಿಂದ ಜ್ವಾಲಾಮುಖಿಗಳೆದ್ದು ಲಾವಾರಸ ಕಾರಿದವು. ಜೊತೆ ಜೊತೆಗೆ ಮಡ್ಡಿಶಿಲೆ ತುಂಬಿತು. ಭೂಚಲನೆಯ ಪರಿಣಾಮವಾಗಿ ಶಿಲೆ ಮೇಲೆದ್ದು ಈ ಎಲ್ಲ ಭಾಗಗಳಲ್ಲೂ ಪರ್ವತವಾಗಿ ನಿಂತವು. ಇಂದಿನ ಪಶ್ಚಿಮಘಟ್ಟ, ಗದುಗಿನಿಂದ ಹಿಡಿದು ಶ್ರೀರಂಗಪಟ್ಟಣದವರೆಗೂ ಸಾಗಿರುವ ಚಿತ್ರದುರ್ಗ ಬೆಟ್ಟಸಾಲು, ಅತ್ತ ಧಾರವಾಡದಿಂದ ಹಿಡಿದು ಶಿವಮೊಗ್ಗದವರೆಗೆ, ಇತ್ತ ಹಟ್ಟಿಯಿಂದ ಹಿಡಿದು ಕೋಲಾರದವರೆಗೆ ಎಲ್ಲೆಲ್ಲೂ ಬೆಟ್ಟಸಾಲು. ಕಾಲನ ಹೊಡೆತಕ್ಕೆ ಸಿಕ್ಕಿ ಈಗ ಅವು ಸವೆದಿವೆ, ಕೆಲವೆಡೆ ನೆಲಮಟ್ಟ ತಲುಪಿವೆ. ಭೂಮಿಯ ಒಡಲಿನಿಂದ ಲೋಹಧಾತುಗಳನ್ನು ತಂದು ಲಾವಾರಸ, ಶಿಲೆಯ ಸಂದಿಗೊಂದಿಗಳಲ್ಲಿ ಸಂಚಯಿಸಿತು. ಅದರ ಫಲವೇ ನಮ್ಮ ಕೋಲಾರ, ಹಟ್ಟಿಯ ಚಿನ್ನದ ನಿಕ್ಷೇಪಗಳು, ಚಿತ್ರದುರ್ಗದ ತಾಮ್ರದ ನಿಕ್ಷೇಪಗಳು. ಎಲ್ಲ ಕಡೆಯೂ ಈ ಕ್ರಿಯೆ ಪುನರಾವರ್ತನೆಯಾಗಲಿಲ್ಲ. ಸಾಗರದ ತಳದಲ್ಲಿ ಸಂಚಯನವಾಗಿದ್ದ ಮಡ್ಡಿಯ ಜೊತೆ ಸುಣ್ಣ ಶಿಲೆ, ಕಬ್ಬಿಣ ಮತ್ತು ಮ್ಯಾಂಗನೀಸ್ ಲೋಹಗಳು ಘನೀಭವಿಸಿದುವು. ಇಲ್ಲಿಯೂ ಭೂಮಿ ಚಲನೆ ತೋರಿತು, ಸಾರಾಸಗಟಾಗಿ ಸಂಚಯನ ಶಿಲೆಯೆಲ್ಲವನ್ನೂ ಮೇಲಕ್ಕೆತ್ತಿತು. ಬಾಬಾಬುಡನ್‌ಗಿರಿ, ಶಿವಮೊಗ್ಗ, ಬಳ್ಳಾರಿ ಈ ಜಾಡಿನಲ್ಲಿ ಯಥೇಚ್ಛ ಕಬ್ಬಿಣ, ಮ್ಯಾಂಗನೀಸ್ ನಿಕ್ಷೇಪಗಳು ಶಿಲೆಯ ಜೊತೆಜೊತೆಗೇ ಮೈದಳೆದವು. ನೆಲ, ಜಲವನ್ನು ಆಕ್ರಮಿಸುವುದು, ಜನ ನೆಲವನ್ನು ಕುಗ್ಗಿಸುವುದು ಭೂಚರಿತ್ರೆಯಲ್ಲಿ ಪುನರಾವರ್ತಿಸುವ ಘಟನೆಗಳು. ಕರ್ನಾಟಕದಲ್ಲಿ ೨೯೦೦ರಿಂದ ೨೬೦೦ ದಶಲಕ್ಷ ವರ್ಷಗಳವರೆಗಿನ



*ರಾಯಚೂರು ಬಳಿ ಗ್ರಾನೈಟ್ ಶಿಲೆಯ ಶಿಥಿಲೀಕರಣ*

ಅವಧಿಯಲ್ಲಿ ಬಹು ಮುಖ್ಯವಾದ ಲೋಹ ನಿಕ್ಷೇಪಗಳೆಲ್ಲವೂ ಮೈದಳೆದಿವೆ.

ಬೆಂಗಳೂರು - ಮೈಸೂರು ಮಾರ್ಗದಲ್ಲಿ ರಾಮನಗರದ ಬೆಟ್ಟ ಸಾಲು ಯಾರನ್ನಾದರೂ ಥಟ್ಟನೆ ಸೆಳೆಯುತ್ತದೆ. ಇದು ದಕ್ಷಿಣದಲ್ಲಿ ರಾಮನಗರದಿಂದ ಪ್ರಾರಂಭಿಸಿ, ಉತ್ತರದಲ್ಲಿ ಬಳ್ಳಾರಿ ದಾಟಿ ಸುಮಾರು ಐದು ನೂರು ಕಿಲೋ ಮೀಟರು ಉದ್ದಕ್ಕೂ ತಲೆ ಎತ್ತಿ ನಿಂತಿರುವ ವಿಶಿಷ್ಟ ಲಕ್ಷಣ. ಶಿವಗಂಗೆ, ಸಿದ್ಧಗಂಗೆ, ಸಿದ್ಧರಬೆಟ್ಟ, ಸಾವನದುರ್ಗ, ಮಧುಗಿರಿ, ಪಾವಗಡ ಬೆಟ್ಟಗಳಿರುವುದು ಇದೇ ಸಾಲಿನಲ್ಲಿ. ಕರ್ನಾಟಕದ ಪೀಠ ಭೂಮಿ ಅತೀವ ಶಾಖಕ್ಕೊಳಗಾಗಿ, ಉದ್ದಕ್ಕೂ ಸೀಳಿ ಅದರ ಮೂಲಕ ಶಿಲಾಪಾಕ ಮೇಲೆದ್ದು ಘನೀಭವಿಸಿದಾಗ ರಾಮನಗರ ಬೆಟ್ಟ ಸಾಲು ಮೈದಳೆಯಿತು. ಇದು ಹುಟ್ಟಿ ೨೪೦೦ ದಶಲಕ್ಷ ವರ್ಷಗಳಾಗಿವೆ. ಇದಕ್ಕೆ ಹೋಲಿಸಿದಲ್ಲಿ, ಮೈಸೂರಿನ ಚಾಮುಂಡಿಬೆಟ್ಟದ ಪ್ರಾಯ ೭೬೦ ದಶಲಕ್ಷ ವರ್ಷಗಳು. ಇದು ಭೂ ವಿಜ್ಞಾನಿಗಳ ದೃಷ್ಟಿಯಲ್ಲಿ ಕಿರಿಪ್ರಾಯದ ಬೆಟ್ಟ. ಆದರೆ ಹಿಮಾಲಯ ಪರ್ವತ ಹುಟ್ಟುವುದನ್ನೂ ಇದು ಕಂಡಿದೆ. ಈಗ್ಗೆ ೨೫೦೦ರಿಂದ ೧೬೦೦ ದಶಲಕ್ಷ ವರ್ಷಗಳ ನಡುವೆ ಉತ್ತರ ಕರ್ನಾಟಕ ಭಾಗದಲ್ಲಿ ಬೆಳಗಾಂನಿಂದ ಹಿಡಿದು ಬಿಜಾಪುರದವರೆಗೆ ಬಹು ವಿಶಾಲವಾದ ತಗ್ಗು ಮೂಡಿತ್ತು. ಇದು ಕೂಡ ಸಾಧಾರಣ ಸಾಗರವೇ. ಅಲ್ಲಿ ಸುಣ್ಣ ಶಿಲೆ, ಜೇಡು, ಮರಳು ಶಿಲೆ ಮುಂತಾದವು ಸ್ತರ ರೂಪದಲ್ಲಿ ಸಂಚಯಿಸಿದವು. ಬೆಟ್ಟವಾಗಿ ಮೇಲೆದ್ದವು. ಮಳೆ, ಗಾಳಿ, ಬಿಸಿಲಿನ ಹೊಡೆತಕ್ಕೆ ಸಿಕ್ಕಿ ಮತ್ತೆ ನೆಲಮಟ್ಟಕ್ಕೆ ಬಂದವು. ನಿಸರ್ಗ ನಿಸರ್ಗವನ್ನೇ ಮಸೆಯುತ್ತ ಬಂತು. ಈಗ ಈ ಭಾಗವೆಲ್ಲ ಬಟಾಬಯಲು. ಎಲ್ಲೆಲ್ಲೂ ಸುಣ್ಣ ಶಿಲೆ. ಬಾದಾಮಿಯ ಗುಹಾಂತರ ದೇವಾಲಯ ಇರುವುದು ಮರಳುಗಲ್ಲಿನಲ್ಲೇ. ಸೂಕ್ಷ್ಮವಾಗಿ ಗಮನಿಸಿದರೆ ಈ ಶಿಲೆಗಳ ಮೇಲೆ ಸಾಗರದಲೆಗಳು ಮುದ್ರೆಯೊತ್ತಿರುವುದನ್ನು ಯಾರೊಬ್ಬರೂ ಕಾಣಬಹುದು.

ಗುಲ್ಬರ್ಗ, ಬೆಳಗಾಂ, ಬೀದರ್ ಎಂದೊಡನೆ ಥಟ್ಟನೆ ನೆನಪಿಗೆ ಬರುವುದು ಅಲ್ಲಿನ ಎರೆಮಣ್ಣು. ಹತ್ತಿ ಮತ್ತು ತಂಬಾಕು ಬೆಳೆಗೆ ಇದೇ ಜೀವ ದ್ರವ್ಯ. ಈ ಕರಿ ನೆಲದ ಹಿಂದೆ ರೋಚಕ ಭೂಚರಿತ್ರೆಯೇ ಅಡಗಿದೆ.

ಕಾಲ ಹಿಂದಕ್ಕೆ ಸರಿಯುವುದಿಲ್ಲ, ನಿಜ. ಆದರೆ ಯೋಚಿಸಲು ಅಡ್ಡಿಯೇನೂ ಇಲ್ಲವಲ್ಲ. ಈಗ್ಗೆ ೬೫ ದಶಲಕ್ಷ ವರ್ಷಗಳ ಹಿಂದಿನ ಘಟನೆ. ಭಾರತದ ಗುಜರಾತು, ಆಂಧ್ರದ ಗೋದಾವರಿ ಕಣಿವೆ ಈ ಎಲ್ಲೆಡೆಯಲ್ಲೂ ಬೃಹತ್ ದೇಹಿಗಳಾದ ಡೈನೋಸಾರ್‌ಗಳು ಅಡ್ಡಾಡಿದ್ದವು. ನೀರು, ನೆಲ, ಜಲ, ಬಾನು ಎಲ್ಲೆಲ್ಲೂ ಇವುಗಳದೇ ಸಾಮ್ರಾಜ್ಯ. ಇತ್ತ ಮಧ್ಯಭಾರತದಲ್ಲಿ ಇಡೀ ಭೂಮಿಯೇ ಬುಸುಗುಟ್ಟಿತು. ನೆಲ ಬಿರಿದಿತು. ಅಸಂಖ್ಯ ಜ್ವಾಲಾಮುಖಿಗಳು ಲಾವಾರಸ ಕಾರುತ್ತ ಭೂಚಿಪ್ಪಿನ ಮೇಲೆ ವಿಶಾಲವಾಗಿ ಹಬ್ಬುತ್ತಿದ್ದವು. ಲಾವಾರಸ ಹೆಪ್ಪುಗಟ್ಟುತ್ತಿತ್ತು. ಈ ಪ್ರವಾಹದಲ್ಲಿ ಮುಳುಗಿಹೋದ ಭೂಲಕ್ಷಣಗಳೆಷ್ಟೋ ಇಂದಿಗೂ ಗಣನೆಗೆ ನಿಲುಕುವುದಿಲ್ಲ. ಸಣ್ಣ ಮಡುವುಗಳಲ್ಲಿ, ಹೊಂಡಗಳಲ್ಲಿ, ಕುಣಿದು ಕುಪ್ಪಳಿಸುತ್ತಿದ್ದ ಜಲಚರಗಳು ನಿರ್ನಾಮವಾದವು. ಅದರ ಮೇಲೆ ಮತ್ತೆ ಲಾವಾರಸದ ಪರದೆ. ಹೀಗೆಯೇ ಬೆಳೆಯುತ್ತಾ ಹೋಯಿತು. ಹೀಗೆ ಬೆಳೆದ ಲಾವಾರಸದ ಸ್ತರವೇ ದಖನ್ ಟ್ರ್ಯಾಪ್. ಇದು ಆಕ್ರಮಿಸಿದ ಜಾಗ ಐದು ಲಕ್ಷ ಚ.ಕಿ.ಮೀ. ಯಾವುದೋ ಕ್ಷುದ್ರಗ್ರಹವೊಂದು ಈ ಭಾಗದ ನೆಲಕ್ಕೆ ಬಡಿದಾಗ ಭೂಚಿಪ್ಪನ್ನು ದಾಟಿ ಭೂಗರ್ಭದಿಂದ ಶಿಲಾರಸ ಉಕ್ಕುವಂತೆ ಮಾಡಿರಬಹುದು ಅಥವಾ ಸರಿಯುವ ಭೂಖಂಡಗಳು ಜ್ವಾಲಾಮುಖಿಯ ಮೇಲೆ ಸಾಗುಪಟ್ಟಿಯಂತೆ ಸಾಗಿದಾಗ ಇಡೀ ನೆಲವೇ ಅಗ್ನಿಗಾಹುತಿಯಾಗಿರಬಹುದು ಎಂಬೆಲ್ಲ ಪರಿಕಲ್ಪನೆಗಳಿವೆ. ಕಾರಣ ಏನೇ ಇರಲಿ, ಮಧ್ಯಭಾರತವಂತೂ ಯುದ್ಧಭೂಮಿಯಾಗಿತ್ತು. ಎಲ್ಲೆಲ್ಲೂ ಬೆಂಕಿ, ಶಿಲಾರಸದ ಅಟ್ಟಹಾಸ. ಭಾರತ ಉಪಖಂಡದ ಭೂಚರಿತ್ರೆಯಲ್ಲಿ ದಖನ್ ಟ್ರ್ಯಾಪ್ ಶಿಲೆಗಳ ಹುಟ್ಟು ಬಹುದೊಡ್ಡ ಘಟನೆ. ಉಡುಪಿ ಜಿಲ್ಲೆಯ ಮಲ್ಪೆ ತೀರಕ್ಕೆ ಮೂರು ಕಿಲೋಮೀಟರು ಸಾಗರದ ಒಳಭಾಗದಲ್ಲಿ ಸುಂದರವಾದ ಮೂರು ಬಿಡಿ ಬಿಡಿ ದ್ವೀಪಗಳಿವೆ. ಒಟ್ಟಾರೆ ಇವನ್ನು ಸಂತ ಮೇರಿ ದ್ವೀಪ ಎನ್ನುತ್ತಾರೆ. ಇಲ್ಲಿರುವ ಕಂಬಾಕೃತಿಯ ಬಸಾಲ್ಟ್ ಶಿಲೆಗಳು ನಿಸರ್ಗದ ಅತಿ ಸೂಕ್ಷ್ಮ ಕಲಾಚಾತುರ್ಯಕ್ಕೆ ಕೈಗನ್ನಡಿಯಂತಿವೆ. ಹಿಂದೆ ಲಾವಾ ಪ್ರವಾಹ ಈ ಭಾಗದವರೆಗೆ ಹರಡಿದ್ದನ್ನು ಇವು ಸಾರುತ್ತವೆ.

ಮುಂದೆ ಕರ್ನಾಟಕದ ನೆಲ ಮತ್ತೊಂದು ಬಗೆಯ ಬದಲಾವಣೆಗೂ ಸಿದ್ಧವಾಯಿತು. ಪಶ್ಚಿಮ ಘಟ್ಟದಲ್ಲಿ ಹುಟ್ಟುವ ಬಹುತೇಕ ನದಿಗಳು – ಕೃಷ್ಣಾ, ತುಂಗಭದ್ರಾ, ಕಾವೇರಿ, ಕಪಿಲಾ ಇವೇ ಮುಂತಾದವು ಅರಬ್ಬೀ ಸಮುದ್ರಕ್ಕೆ ತುಂಬ ಹತ್ತಿರವಾಗಿದ್ದರೂ ಅವು ಹರಿಯುವುದು ಪೂರ್ವದೆಡೆಗೆ, ಸೇರುವುದು ಬಂಗಾಳಕೊಲ್ಲಿಗೆ. ಏಕೆ ಹೀಗೆ ? ಏಕೆಂದರೆ ಸುಮಾರು ೫೫ ದಶಲಕ್ಷ ವರ್ಷಗಳ ಹಿಂದೆ ಇಡೀ ಪಶ್ಚಿಮ ಘಟ್ಟವೇ ಉತ್ಥಾನವಾಯಿತು. ಈ ಮೇಲೇರುವಿಕೆಯಿಂದಾಗಿ ನದಿಗಳ ಉಗಮಬಿಂದುಗಳೇ ಬದಲಾದವು. ಹರಿಯುವ ಪಾತ್ರಗಳು ಬದಲಾದವು. ಅಷ್ಟೇ ಅಲ್ಲ, ಪಶ್ಚಿಮ ಕರಾವಳಿಯ ಸ್ವರೂಪವನ್ನೇ ನೋಡಿ, ಅದು ಕತ್ತಿಯಲ್ಲಿ ಕತ್ತರಿಸಿದಷ್ಟು ನೇರವಾಗಿದೆ. ಕಡಿದುಹೋದ ಭಾಗ ಕುಸಿತವಾಗಿ ಸಮುದ್ರದಲ್ಲಿ ಮುಳುಗಿಹೋಗಿದೆ. ಪರುಶುರಾಮ ತನ್ನ ಕೊಡಲಿಯಿಂದ ಈ ಭಾಗವನ್ನು ಕಡಿದ ಎಂಬ ಪೌರಾಣಿಕ ಕಲ್ಪನೆ ಇದೆ. ಅದೇನೇ ಇರಲಿ, ದೊಡ್ಡ ಪ್ರಮಾಣದಲ್ಲಿ ಶಿಲಾಸ್ತರ ಇಲ್ಲಿ ಭಂಗವಾಗಿ ಕೆಳಕ್ಕೆ ಕುಸಿದಿರುವುದಂತೂ ನಿಜ. ಹಿಂದೆ ಸಮುದ್ರದ ಅಲೆಯಿಂದ ಸವೆದ ತೀರದ ಭಾಗವನ್ನು ಈಗಲೂ ಕಾಣಬಹುದು. ಸಾಗರಮಟ್ಟವೇ ಕಳೆದ ೫೫ ದಶಲಕ್ಷ ವರ್ಷಗಳಿಂದೀಚೆಗೆ ಭಾರಿ ಏರುಪೇರಾಗಿದೆ. ಉತ್ತರ ಕರ್ನಾಟಕದ ಅಪ್ಸರ ಕೊಂಡ ಈ ಘಟನೆಯನ್ನು ನಮ್ಮ ಮುಂದೆ ಪ್ರತ್ಯಕ್ಷವಾಗಿ ತೆರೆದಿಟ್ಟಿದೆ.

ಗೊರೂರು ಬಳಿಯ ಶಿಲೆ ನಮ್ಮನ್ನು ೩೩೫ ಕೋಟಿ ವರ್ಷಗಳ ಹಿಂದಕ್ಕೆ ಸರಿಸಿದರೆ, ದಕ್ಷಿಣ ಕನ್ನಡ, ಬೆಳಗಾಂ ಮುಂತಾದೆಡೆ ಸತತವಾಗಿ ತೀರ ಪ್ರದೇಶದ ಆರ್ದ್ರ ಹವಾಗುಣದಲ್ಲಿ ಎಲ್ಲ ಶಿಲೆಗಳೂ ಬದಲಾಗುತ್ತಿವೆ. ಈ ಬದಲಾವಣೆ ನಮ್ಮನ್ನು ವರ್ತಮಾನದ ನೈಸರ್ಗಿಕ ವಿದ್ಯಮಾನದತ್ತ ಸೆಳೆಯುತ್ತದೆ. ಪರಿವರ್ತನೆ ನಿಸರ್ಗದ ಸಹಜ ವಿದ್ಯಮಾನ. ಇದನ್ನೆ ಅಲ್ಲವೇ ನಮ್ಮ ಡಿ.ವಿ.ಜಿ. ಅವರು ಸುಂದರ ಶಬ್ದಗಳಲ್ಲಿ ಪಡಿಮೂಡಿಸಿರುವುದು :

*ಹುಳು ಹುಟ್ಟಿ ಸಾಯುತಿರೆ, ನೆಲ ಸವೆದು ಕರಗುತಿರೆ ।*
*ಕಡಲೊಳೆತ್ತಲೊ ಹೊಸ ದ್ವೀಪವೇಳುವುದು ॥*
*ಕಳೆಯುತೊಂದಿರಲಿಲ್ಲಿ, ಬೆಳೆವುದಿನ್ನೊಂದೆಲ್ಲೊ ।*
*ಅಳಿವಿಲ್ಲ ವಿಶ್ವಕ್ಕೆ - ಮಂಕುತಿಮ್ಮ ॥*

**ಟಿ. ಆರ್. ಅನಂತರಾಮು**
ನಂ. ೨೭೧೦, ೬ನೇ ಮುಖ್ಯ ರಸ್ತೆ, ಕುಮಾರಸ್ವಾಮಿ ಬಡಾವಣೆ, ೨ನೇ ಹಂತ, ಬೆಂಗಳೂರು - ೫೬೦ ೦೭೮

# ರಂಗಭೂಮಿಯಲ್ಲಿ ಮಹಿಳೆ

ಡಾ॥ ವಿಜಯಾ

*ಕಲೆಯೊಂದು ಅರಳುವುದು ಯಾವುದೇ ಒತ್ತಡಗಳಿಲ್ಲದಾಗ. ಸಾಮೂಹಿಕ ಪರಿಶ್ರಮದಿಂದ ಅರಳುವ ರಂಗಭೂಮಿಯಂಥ ಕಲೆ ಹರಕೆಯ 'ಕೊಂಡ'ವನ್ನೇ ಹಾಯ್ದು ಬಂದಿದೆ. ಸ್ತ್ರೀ-ಪುರುಷರು ಸಮಸಮವಾಗಿ ಭಾಗವಹಿಸಿ ಎಲ್ಲ ಕಲೆಗಳ ಸಮಾವೇಶದಲ್ಲಿ ಅರಳಬೇಕಾದ ಕಲೆ ರಂಗ 'ಹಿತೈಷಿ'ಗಳೆಂದು ಹೇಳಿಕೊಂಡ ಕೆಲವರ ಸ್ವತ್ತಾಗಿ ಅವರು ಹಾಕಿದ ನಿಯಮದಂತೆ ನಡೆಯಲಾರದೆ ನಲುಗಿ ನಲುಗಿ ಮತ್ತೆ ಮತ್ತೆ ಚಿಗುರುತ್ತ ಬಂದಿದೆ. ಈ ಹಳವಂಡದಲ್ಲಿ ಆಡಿಸಿದವರ ಸೂತ್ರದಡಿ ಆಡುತ್ತ, 'ಬಳಸಿ'ಕೊಂಡವರ ನೆರಳಲ್ಲಿ 'ತನ್ನತನ'ದ ಹುಡುಕಾಟ ನಡೆಸಿದ ಸ್ತ್ರೀ ಇದ್ದಾಳೆ! ಈ ಲೇಖನದಲ್ಲಿ ಮಹಾರಾಷ್ಟ್ರ ರಂಗಭೂಮಿಯಲ್ಲಾದ ಚರ್ಚೆಯನ್ನು ಆಧರಿಸಿ ಒಟ್ಟಾರೆ ರಂಗಭೂಮಿಯಲ್ಲಿ ಸ್ತ್ರೀ ಕುರಿತ ಒಂದು ಹುಡುಕಾಟ, ಪಕ್ಷಿನೋಟ ಇದೆ.*

ರಂಗಭೂಮಿಯಲ್ಲಿ ಸ್ತ್ರೀಯರನ್ನು ಹುಡುಕುತ್ತ ಹೊರಟಾಗ ಹಲವು ಅತ್ಯಾಶ್ಚರ್ಯಕರ ಅಂಶಗಳು ಬೆಳಕಿಗೆ ಬರುತ್ತವೆ. ಮೇಲುನೋಟಕ್ಕೆ ಸ್ತ್ರೀಯರ ಪ್ರವೇಶದಿಂದ ರಂಗಭೂಮಿಯಲ್ಲಿದ್ದ ಒಗ್ಗಟ್ಟಿಗೆ ಧಕ್ಕೆ ಬಂತು, ನೈತಿಕ ಮೌಲ್ಯಗಳು ಕುಸಿದವು ಎಂದು ಕೆಲವು ಉದಾಹರಣೆಗಳ ಸಹಿತ ಹೇಳುವುದುಂಟು. ಇಂಥ ಒಮ್ಮುಖದ, ಸಮಸ್ಯೆಯನ್ನು ಆಳವಾಗಿ ಪರಿಶೀಲಿಸದೆ ಬಿಡುವ ತೀರ್ಮಾನಗಳನ್ನು ನಿರ್ಲಕ್ಷಿಸಬೇಕಾಗುತ್ತದೆ.

ರಂಗಭೂಮಿಯ ಹಿರಿಯ ಕಲಾವಿದರಾಗಿದ್ದ ಹಾರ್ಮೋನಿಯಂ ಶೇಷಗಿರಿರಾಯರಂಥವರೂ ಸ್ತ್ರೀಯರ ಪ್ರವೇಶವಾದ ಮೇಲೆ ಸರ್ವನಾಶವಾಯಿತು ಎಂದದ್ದೂ ಇದೆ. ಇರಲಿ.

ನೆರೆಯ ಮಹಾರಾಷ್ಟ್ರದೊಂದಿಗೆ ನಮ್ಮ ಕೊಡುಕೊಳ್ಳುವಿಕೆ ಅಧಿಕ. ಆ ಹಂಗಿನಿಂದ ಹೊರಬಂದು ತನ್ನ 'ಕನ್ನಡತನ'ಕ್ಕಾಗಿ ಹೋರಾಡಿದ್ದು ಇಂದು ಇತಿಹಾಸ. ಆದರೆ ಅನೇಕ ವಿಷಯಗಳನ್ನು ಒಪ್ಪಿಕೊಂಡೇ ಬಂದಿದ್ದೇವೆ. ಮಹಾರಾಷ್ಟ್ರದ ಪ್ರಭಾವ ನೆರಳಾಗಿ ಕಾಡಿದೆ ಎಂಬುದೂ ಅಷ್ಟೇ ನಿಜ. ಮಹಾರಾಷ್ಟ್ರ ರಂಗಭೂಮಿ ಸ್ತ್ರೀಯನ್ನು 'ಬಳಸಿ'ದ ಬಗೆಯನ್ನು ಗಂಭೀರವಾಗಿ ಚರ್ಚಿಸಲಾಗಿದೆ. ಆ ಅಂಶಗಳು ನಮಗೂ ಪ್ರಸ್ತುತವಾಗುತ್ತವೆ.

ದಾಖಲೆಗಳ ಪ್ರಕಾರ ಸ್ತ್ರೀಯನ್ನು ಪಕ್ಕಕ್ಕೆ ಸರಿಸಲಾಗಿದೆ. ಆಕೆಯ ಕಲೆಯನ್ನು ಕೊಡುಗೆ ಎಂದು ಪರಿಗಣಿಸದೆ ನಿಕೃಷ್ಟವಾಗಿ ಕಾಣಲಾಗಿದೆ. ಆದರೆ ರಂಗಭೂಮಿ ಉಳಿಯಬೇಕಾದರೆ ಸ್ತ್ರೀ ಅನಿವಾರ್ಯ ಅನ್ನುವಂಥ ಪ್ರಸಂಗಗಳಲ್ಲಿ ತನ್ನ ಧೋರಣೆಗಳನ್ನು ಬದಲಾಯಿಸಿಕೊಂಡು, ಜಾಣ ತೀರ್ಮಾನ ವ್ಯಾಖ್ಯಾನಗಳನ್ನು ಮಾಡಲಾಗಿದೆ. ಇದೆಲ್ಲದರ ಹಿಂದೆ ಪುರುಷ ಪ್ರಧಾನ ಸಮಾಜದ ಸ್ವಾರ್ಥವೇ ಅಡಗಿದೆ.

ಸಾಮಾನ್ಯವಾಗಿ ಕಂಪೆನಿಯ ಒಡತಿಯರಾಗಿ, ರಂಗ ಕಲಾವಿದೆಯರಾಗಿ ಸ್ತ್ರೀಯರ ಕೊಡುಗೆ ಏನೆಂಬುದನ್ನು ಹೇಳದೆ ಮರೆಮಾಚಲಾಯಿತು. ರಂಗೇತಿಹಾಸದಲ್ಲಿ ಕೂಡಾ ಇಂಥ ಸಂಗತಿಗಳಿಗೆ ಒಂದೋ ಎರಡೋ ವಾಕ್ಯಗಳಿಗಿಂತ ಹೆಚ್ಚು ಸ್ಥಳಾವಕಾಶವಿಲ್ಲ. ಆದರೆ ಸ್ತ್ರೀ ವೇಷವನ್ನು ನಿಭಾಯಿಸಿದ ಪುರುಷ ಕಲಾವಿದರ ಬಗ್ಗೆ ರಂಗುರಂಗಾಗಿ ಹೇಳಲಾಗಿದೆ. ಮೋಹ ಪರವಶತೆಯಿಂದ ಮಾತನಾಡುವವರೆಗೆ ಅದು ಸಾಗುತ್ತದೆ. ಕನ್ನಡ ರಂಗಭೂಮಿಯಲ್ಲಿ ಕೂಡಾ ಈ ವೈಭವ ಮೆರೆದಿದೆ. ಆರ್. ನಾಗೇಂದ್ರರಾಯರ ಸ್ತ್ರೀ ವೇಷ ಸ್ತ್ರೀ ಪಾತ್ರಧಾರಿಗಳನ್ನೇ ನಾಚಿಸುವಂಥದು ಎನ್ನುವವರೆಗೆ ಮಾತುಗಳಿವೆ.

ಬಹು ಪ್ರಯಾಸದಿಂದ ಕಂಪೆನಿ ಕಟ್ಟಿದವರ ಬಗ್ಗೆ, ಮೊದಮೊದಲು ರಂಗಪ್ರವೇಶ ಮಾಡಿದ ಸ್ತ್ರೀಯರ ಬಗ್ಗೆ ಗುರುತಿಸಿದ, ಸರಿಯಾಗಿ ಹೇಳಿದ ಉದಾಹರಣೆಗಳು ಇಲ್ಲವೆಂದೇ ಹೇಳಬಹುದು. ಒಂದು ವೇಳೆ ಪ್ರಸ್ತಾಪಿಸಿದರೂ ಅವರು 'ವೇಶ್ಯೆ'ಯರು ಎಂಬ ಧೋರಣೆಯ ಮಾತು. ಆ ಮಾತೂ ಆಡಲಾಗದೆ 'ದೇವದಾಸಿ' ಎಂಬ ಪದ ಪ್ರಯೋಗದಲ್ಲಿ ಗಾಂಭೀರ್ಯ ಕಂಡುಕೊಳ್ಳುವುದುಂಟು. ಸೂಳೆ, ವೇಶ್ಯೆ ಬಳಸಿದರೆ ಒರಟು ಎಂಬ ಕಾರಣ ಇರಬಹುದು. ಪುರುಷ ಪಾತ್ರಗಳನ್ನು ಸ್ತ್ರೀಯರೇ ನಿರ್ವಹಿಸಿದ ಹಿಂದಿನ ಕಾಲದ ಪ್ರಸಂಗದಲ್ಲಿ ಅಪಹಾಸ್ಯ ಮಾಡಲಾಗಿದೆ. ಪುರುಷರ ಸ್ತ್ರೀ ವೇಷ ವಿಶೇಷ ಮನ್ನಣೆಗೆ ಪಾತ್ರವಾಗುವುದಾದರೆ ಸ್ತ್ರೀಯರ ಪುರುಷ ವೇಷವೇಕೆ ಅಪಹಾಸ್ಯಕ್ಕೆ ಈಡಾಗುತ್ತದೆ ?

ಮಹಾರಾಷ್ಟ್ರ ರಂಗಭೂಮಿ ಬಹುತೇಕ ಲೋಕಮಾನ್ಯ ತಿಲಕರ ಸಿದ್ಧಾಂತಗಳನ್ನು ಸ್ವೀಕರಿಸಿತು. ತಿಲಕರ ಒತ್ತು ದೇಶಪ್ರೇಮಕ್ಕೆ, ಸ್ವಾತಂತ್ರ್ಯಕ್ಕೆ. ಅವರು ಸಮಾಜ ಸುಧಾರಣೆಯನ್ನು ಅದರ ಜೊತೆಗೆ ಸೇರಿಸಿಕೊಳ್ಳಲಿಲ್ಲ. ಹಾಗೆ ಎರಡನ್ನೂ ಗುರಿಯಾಗಿಟ್ಟುಕೊಂಡು ಕೆಲಸ ಮಾಡಿದ ಭಂಡಾರ್ಕರ್, ಅಗರ್‌ಕರ್ ಮೊದಲಾದವರ ಪ್ರಭಾವ ರಂಗಭೂಮಿಯ ಮೇಲೆ ಆದಂತಿಲ್ಲ. ತಿಲಕರು ಸ್ತ್ರೀ ವಿರೋಧಿಯಲ್ಲದಿರಬಹುದು, ಪರವಾಗಿಯಂತೂ ಇರಲಿಲ್ಲ. ಎಂದೂ ಆಕೆಗೆ ಕನಿಷ್ಠ ಸ್ಥಾನವೇ ಅವರ ದೃಷ್ಟಿಯಲ್ಲಿ.

ಆ ದಿನಗಳಲ್ಲಿ ರಚಿತವಾದ ನಾಟಕಗಳಲ್ಲಿ ಸಮಾಜ ಸುಧಾರಣೆಯ ಅಂಶಗಳು ಇದ್ದರೂ ಅವು ಗಂಭೀರವಾಗಿ ನಿರೂಪಿತವಾಗುತ್ತಿರಲಿಲ್ಲ. ಸುಧಾರಣೆಯ ಮಾತೆಲ್ಲ ಪಾಶ್ಚಾತ್ಯ ಪ್ರಭಾವದಿಂದ ಬಂದದ್ದು. ಅದು ಒಮ್ಮುಖವಾದ ವರ್ಣನೆ ಎಂತಲೇ ಭಾವಿಸಲಾಗಿತ್ತು. ಮತ್ತು ಅಂಥ ಪಾತ್ರ- ಸನ್ನಿವೇಶಗಳ ಚಿತ್ರಣಗಳು ಅಧಿಕವಾಗಿ ಇದ್ದವು. ಆ ದಿನಗಳಲ್ಲಿ ಸಮಾಜ ಸುಧಾರಣೆಗೆ ಹೆಸರಾದ ಜಸ್ಟಿಸ್ ರಾನಡೆಯಂಥವರು ವಿಧವಾ ವಿವಾಹವನ್ನು ಬೆಂಬಲಿಸಿದವರು. ಆದರೆ ಅವರು ಪುಟ್ಟ ಹುಡುಗಿಯನ್ನು ಮದುವೆಯಾದರು. ಇಂಥ ಸಂಗತಿಗಳು ಪ್ರಗತಿಪರ ಚಿಂತನೆಯನ್ನು ಸಾರಾಸಗಟಾಗಿ ಮೂದಲಿಸಲು ನೆರವಿಗೆ ಬಂದವು. ರಂಗದ ಮೇಲೆ ಇಂಥ ವಿಷಯಗಳ

ಚರ್ಚಾಕೂಟವೆ ಇದ್ದಂತೆ ನಾಟಕಗಳು ರಚಿತವಾದದ್ದಿದೆ. ಕನ್ನಡದಲ್ಲಿ ಶ್ರೀರಂಗರೂ ಇಂಥ ನಾಟಕ ಬರೆದಿದ್ದಾರೆ. ಸಮಾಜ ಸುಧಾರಕರ ಮುಖವಾಡಗಳನ್ನು ಕಳಚಿ ಹಾಕುವ ರಭಸದಲ್ಲಿ ಪ್ರೊಗ್ರೆಸಿವ್ ಆದುದನ್ನೆಲ್ಲ ನಿರಾಕರಿಸುವ ಸಡಗರವೆ ವಿಜೃಂಭಿಸಿತು. ಆ ದಿನಗಳಲ್ಲಿಯ ಪ್ರಗತಿಪರ, ಸ್ತ್ರೀಪರ ಎಂಬ ಹಣೆಪಟ್ಟಿ ಹೊತ್ತ ನಾಟಕಗಳು ಇವತ್ತಿನ ನಿಕಷದಲ್ಲಿ ಕೇವಲ ತೋರಿಕೆ, ಔದಾರ್ಯ, ಅನುಕಂಪಗಳಂತೆ ಕಾಣುತ್ತವೆ. ಅವು ಇರುವ ಹಾಗೆ ಸ್ವೀಕರಿಸುವುದು ತುಸು ಕಷ್ಟವೇ ಆಗುತ್ತದೆ.

೧೯೧೨ರಲ್ಲಿ ನಡೆದ ರಂಗಭೂಮಿ ಕುರಿತ ಸಮ್ಮೇಳನವೊಂದರಲ್ಲಿ ಮಧುರಾಬಾಯಿ ಎಂಬ ಕಲಾವಿದೆ ಪುರುಷರು ಸ್ತ್ರೀ ಪಾತ್ರಗಳನ್ನು ನಿರ್ವಹಿಸುವುದನ್ನು ಕುರಿತು ಆ ಹಾವಭಾವ, ಒಯ್ಯಾರಗಳೆಲ್ಲ ಅಸಹ್ಯವಾಗಿವೆ, ಯಾವ ಸ್ತ್ರೀಯೂ ಹಾಗೆ ವರ್ತಿಸುವುದಿಲ್ಲ ಎನ್ನುತ್ತಾರೆ ಮತ್ತು ಆ ನಟರು ಕುತ್ತಿಗೆಯಿಂದ ತೀರಾ ಕೆಳಕ್ಕೆ ಇರುವ ರವಿಕೆ (ಲೋ ನೆಕ್)ಯನ್ನು ತೊಡುವುದಾಗಲೀ, ಕುಚ ಪ್ರದೇಶವನ್ನು ಅಸಭ್ಯವಾಗಿ ಎತ್ತಿ ತೋರುವಂತೆ ಸೆರಗು ಹಾಕುವುದಾಗಲೀ, ಮೈ ಕುಣಿಸುವುದಾಗಲೀ ಒಂದು ಕೆಟ್ಟ 'ಅಣಕು' ಅನ್ನಬಹುದಲ್ಲದೆ ಅದು ಯಾವುದೇ ಬಗೆಯ ಸ್ತ್ರೀಯನ್ನು ಹೋಲುವುದಿಲ್ಲ ಎನ್ನುತ್ತಾರೆ. ಚಿಕ್ಕ ಪ್ರಾಯದ ಹುಡುಗರು ಪ್ರೌಢೆಯರ ಪಾತ್ರ ವಹಿಸುವುದು ಆ ಪಾತ್ರದ ಘನತೆಯನ್ನು ತುಂಬಿಕೊಡಲಾಗದೆ ಕೆಟ್ಟ ಪ್ರದರ್ಶನವಾಗುತ್ತದೆ ಮತ್ತು ಸ್ತ್ರೀ ಪಾತ್ರವೆಂದರೆ ಕೇವಲ ಮೋಹಕತೆ, ಪ್ರಚೋದಕ ಭಂಗಿ ಎಂದು ಭಾವಿಸುವುದು, ಆಭರಣಗಳನ್ನೆಲ್ಲ ಧರಿಸಿ ಒಯ್ಯಾರ ಮಾಡಿದರೆ ಉತ್ತಮ ಸ್ತ್ರೀ ಪಾತ್ರ ನಿರ್ವಹಿಸಿದಂತೆ ಎಂದು ಭಾವಿಸುವ ಪುರುಷರ ಈ ಅಸಹ್ಯಕರ ವರ್ತನೆಯನ್ನು ಸ್ತ್ರೀಯರಂತೂ ಒಪ್ಪುವುದು ಸಾಧ್ಯವೇ ಇಲ್ಲ ಎನ್ನುತ್ತಾರೆ.

ಕರ್ನಾಟಕದಲ್ಲಿ ಕೂಡಾ ಮೈಸೂರು ವಿಶ್ವವಿದ್ಯಾಲಯದಲ್ಲಿ ದೊಡ್ಡ ಹುದ್ದೆಯಲ್ಲಿದ್ದ ಕನಕಲಕ್ಷ್ಮಮ್ಮ, ಎಂ. ಎ. ಅವರು 'ರಂಗಭೂಮಿ' ಪತ್ರಿಕೆಯಲ್ಲಿ "..... ನಾಯಕೀ ವೇಷಧಾರಿಗೆ ೪೦ ವರುಷಗಳಾಗಿ ಸುಕ್ಕು ಬಂದಿರುವ ಸುಂದರ ಮುಖ !! ಹೃದಯದಲ್ಲಿಯಾದರೋ ಒಂದು ಘನ ಭಾವಕ್ಕೆ ಅವಕಾಶವಿಲ್ಲದ ಅಜ್ಞಾನದಿಂದಲೂ ಗರ್ವದಿಂದಲೂ ಕೂಡಿದ ಮನಸ್ಸು. ಇವರು ಪರಮ ಪೂಜ್ಯಳೂ, ತೇಜಸ್ವಿನಿಯೂ ಆದ ಶಕುಂತಳೆ, ಸುಭದ್ರ, ದ್ರೌಪದಿ – ಅಥವಾ ಈ ಶ್ರೇಷ್ಠತರ ಸ್ತ್ರೀಯರ ಪಾತ್ರವನ್ನು ಅಭಿನಯಿಸುವಿಕೆ ! ಎಂದಾದರೂ ಪುರುಷನು ಸ್ತ್ರೀಯರ ವಿವಿಧ ಮನೋಭಾವಗಳನ್ನು ಅನುಭವಿಸಬಲ್ಲನೆ ? ಸರ್ವತೋಮುಖರಾದ ಕವಿಗಳು ಯಾರೋ ಒಬ್ಬಿಬ್ಬರು ಕೇವಲ ಪ್ರತಿಭಾ ಶಕ್ತಿಯಿಂದ ಸ್ತ್ರೀಯರ [illegible] ಪರಿಚಯವನ್ನು ಮಾಡಿಯಾರು. ಆದರೆ ಸ್ತ್ರೀ ಪಾತ್ರವನ್ನು ವಹಿಸಿ, ಸ್ತ್ರೀ ಜನ್ಮಕ್ಕೆ, [illegible] ಗೌರವಕ್ಕೆ ಅವಮಾನ ತರುತ್ತಾ ರಂಗಭೂಮಿಯನ್ನು 'ಅಪಮಾನಿಸುವ [illegible] [illegible] ? ಸ್ತ್ರೀ ಸ್ವಭಾವಕ್ಕೆ,

ಸ್ತ್ರೀಯರಿಗೆ ನೈಜವಲ್ಲದ ಹಾವಭಾವ ವಿಲಾಸ, ಅಲಂಕಾರಗಳಿಂದ ಪ್ರಕೃತಿಗೆ ಅಪಮಾನ ಮಾಡುವ ಈ 'ಪುರುಷ ಸ್ತ್ರೀ'ಯರ ವಿಲಾಸ..... ನಿಜವಾಗಿಯೂ ಸ್ತ್ರೀಯು ಪ್ರೇಮಕಾಂತನ ದರ್ಶನದಿಂದ ಮೈಮರೆತು..... ಸ್ತಬ್ಧಳಾಗುವ ಸಂಭವವಿರುವುದೇ ವಿನಹ, ಓರೆನೋಟಗಳಿಂದಲೂ, ಹುಬ್ಬನ್ನು ಹಾರಿಸುವುದರಿಂದಲೂ ತನ್ನ ಪ್ರೇಮವನ್ನು ಪ್ರಕಟಿಸುವುದಿಲ್ಲ...... ಇಂಥ ಪೊಳ್ಳು ಪ್ರೇಮದ ಅಭಿನಯದಿಂದಾಗಿ ಪೂಜ್ಯತೆಯು ಹಾಳಾಗಿಹೋಗಿದೆ. ನಾಟಕವನ್ನು, ನಾಟಕದಲ್ಲಿ ಪಾತ್ರ ವಹಿಸುವವರನ್ನು ತುಚ್ಛವಾಗಿ ಕಾಣುವದು ಈ ಕಾರಣಕ್ಕಾಗಿಯೇ..... ಅನೇಕ ಸ್ತ್ರೀಯರು ಕಲಾಭಿಮಾನಿಗಳಾಗಿ ಪಾತ್ರವನ್ನು ವಹಿಸುವುದಕ್ಕೆ ಸಿದ್ಧರೇ ಆಗಿದ್ದರೂ, ಈ ವಿಧವಾದ ರಂಗಸ್ಥಳದ ಅಪಮಾನದಿಂದಾಗಿ ಎಲ್ಲರನ್ನೂ ಹಿಂದೆಳೆಯುತ್ತಿದೆ......" ಎಂದು ಚರ್ಚಿಸುತ್ತಾರೆ. (ನನ್ನ ಊಹೆ ನಿಜವಾದರೆ ಈ ಕನಕಲಕ್ಷ್ಮಮ್ಮನವರು ವರದಾಚಾರ್ಯರ ಸೋದರ ಸೊಸೆ ಮತ್ತು ಕನ್ನಡದ ಮೊದಲ ವಾಕ್ಚಿತ್ರಗಳಲ್ಲೊಂದಾದ 'ಧ್ರುವಕುಮಾರ'ದಲ್ಲಿ ಸುಮತಿಯ ಪಾತ್ರ ವಹಿಸಿದ್ದವರು. ಇವರು ರಂಗಭೂಮಿಯ ಬಗ್ಗೆ ಬರೆದ ಅನೇಕ ಲೇಖನಗಳನ್ನು ಓದುವ ಅವಕಾಶ ಸಿಕ್ಕು, ಹೊಸ ವಿಚಾರಗಳಿಗೆ ತೆರೆದುಕೊಳ್ಳುವುದು ಸಾಧ್ಯವಾಯಿತು.)

ಮರಾಠಿ ರಂಗಭೂಮಿಯ ಸ್ವರ್ಣಯುಗವೆಂದು ಗುರುತಿಸಲಾದ ೧೯೦೩ರಿಂದ ೧೯೧೫ರವರೆಗೆ ಬಾಲಗಂಧರ್ವ, ಕೇಶವರಾವ್ ಭೋಸ್ಲೆ, ವಿಷ್ಣು ಮೊದಲಾದವರು ಸ್ತ್ರೀ ಪಾತ್ರ ನಿರ್ವಹಿಸುತ್ತಿದ್ದರು. ಅದೆಂಥ ಮರುಳು ಕವಿದಿತ್ತೆಂದರೆ ಸ್ತ್ರೀ ಪಾತ್ರ ಸ್ತ್ರೀಯರೇ ನಿರ್ವಹಿಸುವ ಬಗ್ಗೆ ಆಗ ಯಾರೂ ಯೋಚಿಸಿಯೂ ಇಲ್ಲ. ಈ ಕಾಲಘಟ್ಟದಲ್ಲಿ ಅಪ್ಪಿ ತಪ್ಪಿ ಸ್ತ್ರೀಯರ ರಂಗಪ್ರವೇಶವಾಗಿದ್ದರೆ, ಅದು ವೇಶ್ಯೆಯರೆ ಎಂದು




ನಂಬಲಾಗಿತ್ತು.

ಪ್ರಸಿದ್ಧ ರಂಗೇತಿಹಾಸಕಾರ ಅಂಬಜಿ ಕುಲಕರ್ಣಿಯವರು ಸ್ತ್ರೀಯರು ರಂಗಪ್ರವೇಶ ಮಾಡಿದರೆ ಏನಾಗುತ್ತದೆಂಬುದನ್ನು ಹೀಗೆ ಊಹಿಸುತ್ತಾರೆ. ರಾಧಾಕೃಷ್ಣರ ನಾಟಕವನ್ನು ತೆಗೆದುಕೊಂಡು ಸ್ತ್ರೀಯೊಬ್ಬಳು ರಾಧೆಯಾಗಿ ಎದುರಿಗೆ ನಿಂತರೆ ಸ್ತ್ರೀ - ಪುರುಷರು ಮೋಹಪರವಶರಾಗಿ ಬಿಡುತ್ತಾರೆ. ಪರದೆ ಮೇಲೆದ್ದರೂ ರಂಗಪ್ರವೇಶ ಮಾಡಲಾಗದೆ ಹೋಗುತ್ತಾರೆ. ಪ್ರೇಕ್ಷಕರು ರೊಚ್ಚಿಗೆದ್ದು ಮಾಲೀಕರನ್ನು ತರಾಟೆಗೆ ತೆಗೆದುಕೊಳ್ಳಬಹುದು ಮತ್ತು ಪುರುಷರ ಸ್ತ್ರೀ ಪಾತ್ರ ಮಾತ್ರ 'ಕಲೆ'ಯಾಗುತ್ತದೆ. ಸ್ತ್ರೀಯರೇ ಸ್ತ್ರೀ ಪಾತ್ರವಹಿಸಿದರೆ 'ಕಲೆ' ಆಗುವುದಿಲ್ಲ ಎಂದೂ ಹೇಳುತ್ತಾರೆ. ಕುಲಕರ್ಣಿಯವರ ಗ್ರಂಥ ಬಹುಮನ್ನಣೆ ಪಡೆದ ಕೃತಿ ಎಂದು ತಿಳಿದುಬರುತ್ತದೆ.

ಆದರೆ ಕಾಲ ಎಲ್ಲವನ್ನು ತಿರುವು ಮುರುವು ಮಾಡಬಲ್ಲದು. ರಂಗಭೂಮಿಯಲ್ಲಂತೂ ತೀವ್ರ ಬದಲಾವಣೆಗಳು ಬಂದವು. ಭಾರತೀಯರು ಪಾಶ್ಚಾತ್ಯ ಸಾಹಿತ್ಯ ವಿಚಾರಗಳಿಗೆ ತೆರೆದುಕೊಳ್ಳುತ್ತ ಹೋದಂತೆ ತಮ್ಮೊಳಗೆ ಇದ್ದ 'ಅಸಹಜ'ಗಳನ್ನು ಗುರುತಿಸಲಾರಂಭಿಸಿದರು. ಹಾಗೆ ರಂಗಭೂಮಿಯಲ್ಲೂ ತಾವು ಅದುವರೆಗೆ ಕೊಂಡಾಡಿಕೊಂಡು ಬಂದ ಪುರುಷರ ಸ್ತ್ರೀ ವೇಷವೇ ಎಲ್ಲವೂ ಅಲ್ಲ ಎಂದು ಗ್ರಹಿಸತೊಡಗಿದರು. ಆ ಹೊತ್ತಿಗೆ ಸ್ವಲ್ಪ ಸ್ವಲ್ಪವಾಗಿಯೇ ಆದರೂ ಸ್ತ್ರೀ ಶಿಕ್ಷಣ, ಸಾಮಾಜಿಕ ಕಾರ್ಯಗಳಲ್ಲಿ ಅವರ ಭಾಗವಹಿಸುವಿಕೆ ಪ್ರಾರಂಭವಾಗಿತ್ತು. ಸಾಮಾಜಿಕವಾಗಿ, ಸಾರ್ವಜನಿಕವಾಗಿ ಗೌರವದ ಸ್ಥಾನದಲ್ಲಿ ಆಕೆ ನಿಲ್ಲಬಲ್ಲವಳಾಗಿದ್ದಳು.

ರಂಗಭೂಮಿಯ ಪ್ರೇಕ್ಷಕ ಪುರುಷಸ್ತ್ರೀಯರ ಅಸಹಜತೆಯಿಂದ ಬೇರೆಯಾದ ಸ್ತ್ರೀಯರೇ ನಿರ್ವಹಿಸುವ ಪಾತ್ರಗಳನ್ನು ಬಯಸುತ್ತಿದ್ದ. ಸ್ತ್ರೀಯರ ಪ್ರವೇಶ ಅನಿವಾರ್ಯ ಎಂಬ ಹಿನ್ನೆಲೆಯಲ್ಲಿ ಬೇಕೆ - ಬೇಡವೆ ಎಂಬುದೆ ಒಂದು ದೊಡ ಚರ್ಚೆ. ಅದು ೧೯೨೫ - ೩೩ರ ಅವಧಿ. ಚಲನಚಿತ್ರದ ಆವಿಷ್ಕಾರವಾಗಿತ್ತು. ಅತ್ಯಂತ ಪ್ರಬಲ ಪ್ರತಿಸ್ಪರ್ಧಿಯನ್ನು ಎದುರಿಸುವ ಸವಾಲು ರಂಗಭೂಮಿಗೆ. ಸ್ತ್ರೀಯರು ಪ್ರವೇಶಿಸದಿದ್ದರೆ ತಾವೇ ಉಳಿಯುವುದು ಸಾಧ್ಯವಿಲ್ಲ ಎಂಬ ಸ್ಥಿತಿಯಲ್ಲಿ ಕೆಲವು 'ಒಪ್ಪಂದ'ಗಳಿಗೆ ಬರಲಾಯಿತು. ಎಲ್ಲೆಂದರಲ್ಲಿ ತಾನೆತಾನಾಗಿ ನುಸುಳಿ ಆಧಿಕ್ಯ ಸ್ಥಾಪಿಸಿಕೊಳ್ಳುವ ಪುರುಷ ಪ್ರಧಾನ ಮೌಲ್ಯಗಳು ಇಲ್ಲಿಯೂ ಕೆಲಸ ಮಾಡಿದವು. ಅನುಕೂಲ ನೋಡಿಕೊಂಡು ತೀರ್ಮಾನ ಕೊಟ್ಟವು.

ಮಹಾರಾಷ್ಟ್ರದ 'ರಂಗಭೂಮಿ' ಪತ್ರಿಕೆಯಲ್ಲಿ ಒಂದು ಬಹಿರಂಗ ಚರ್ಚೆಯಾಗಿ ಸಾರ್ವಜನಿಕರು, ರಂಗ ತಜ್ಞರು ಎಲ್ಲರೂ ಚರ್ಚಿಸಿದರು. ಅವರ ಮುಂದೆ ಇದ್ದ ನೈತಿಕ ಮೌಲ್ಯ, ಅನುಕೂಲ, ಅನಾನುಕೂಲ ಮತ್ತು ರಂಗಭೂಮಿಯ ಉಳಿವಿನ ಪ್ರಶ್ನೆಗಳಲ್ಲಿ ರಂಗಭೂಮಿಯ ಉಳಿವಿಗಾಗಿ ಸ್ತ್ರೀಯರ ಪ್ರವೇಶ ಅಗತ್ಯ ಎಂಬ ತೀರ್ಮಾನಕ್ಕೆ ಬಂದರು.

ಎಲ್ಲಕ್ಕಿಂತ ಮಿಗಿಲಾಗಿ ಬರಬರುತ್ತ ಪುರುಷರ ಸ್ತ್ರೀ

ಪಾತ್ರಗಳು ಅಶ್ಲೀಲ ಅಸಭ್ಯದ ಮಟ್ಟ ಮುಟ್ಟಿದ್ದವು. ಅಂಥದೆ ನಾಟಕಗಳು, ಸಂಭಾಷಣೆ ರಚನೆಯಾಗ ತೊಡಗಿತ್ತು. ಇವನ್ನೆಲ್ಲ ತಪ್ಪಿಸಲು ಸ್ತ್ರೀಯರು ರಂಗಪ್ರವೇಶ ಮಾಡಲಿ, ಆದರೆ ನೈತಿಕ ಮೌಲ್ಯ ಕುಸಿಯುತ್ತದೆಂಬ ಚಿಂತೆ ಅವರಿಗೆ.

ಅವರಾಗಲೆ ವಿದ್ಯಾವಂತ ಸ್ತ್ರೀಯರನ್ನು 'ಕುಲೀನ'ರೆಂದು ಪರಿಗಣಿಸಿದ್ದರು. ಸ್ತ್ರೀಯೊಬ್ಬಳು ರಂಗದ ಮೇಲೆ ಕೂಡಾ ಪರ ಪುರುಷನನ್ನು 'ಪತಿ' ಎಂದು ಭಾವಿಸುವುದಾಗಲೀ, ಹಾಗೆ ಅಭಿನಯಿಸುವುದಾಗಲೀ ಅನೈತಿಕ ಸಂಗತಿಯೇ ಆಗುತ್ತದೆ ಎಂಬ ನಂಬಿಕೆ ಮತ್ತೂ ಮುಂದೆ ಹೋಗಿ ಒಂದು ವೇಳೆ ಅಭಿನಯಿಸುವ ದಿನಗಳಲ್ಲಿ ಆಕೆ ಬಹಿಷ್ಠೆಯಾದರೆ ಎಂಥ ಕೆಟ್ಟ ಪುರುಷನೆ ಆದರೂ ಆಕೆಯನ್ನು ಮುಟ್ಟುವಂತಿಲ್ಲ, ಮಾತಾಡುವಂತಿಲ್ಲ. ಇಂಥ ದಿನಗಳಲ್ಲಿ ಕಂಪೆನಿ ಪ್ರದರ್ಶನ ನಿಲ್ಲಿಸಬೇಕೆ ? ಎಂಬುದೂ ಚರ್ಚೆಯಾಯಿತು. ಒಂದು ವೇಳೆ ಹಾಗೂ ರಂಗದ ಮೇಲೆ ತಂದರೆ ಭರತಮುನಿಯ ನಾಟ್ಯಶಾಸ್ತ್ರಕ್ಕೇ ಅಪಮಾನವಾಗುತ್ತದೆ ಎಂದೂ ಹೇಳಲಾಯಿತು.

ರಂಗ ಕಲೆ ಉಳಿಯಬೇಕಾದರೆ ಸ್ತ್ರೀಯರ ಪ್ರವೇಶವಾಗಲಿ, ಆದರೆ ಕುಲೀನ ಸ್ತ್ರೀಯರಾದರೆ ಅವನ ನೈತಿಕ ಮೌಲ್ಯ ನಾಶವಾಗುತ್ತದೆ. ಆದ್ದರಿಂದ ವೇಶ್ಯೆಯರು, ವಿಧವೆಯರು, ರಂಗಕ್ಕೆ ಬಂದರೆ ಸರಿಯಾದೀತು ಎಂದುಕೊಂಡರು. ಕೆಲವರ ಪಾಲಿಗೆ ತಾವು ವೇಶ್ಯೆಯರನ್ನು 'ಕುಲೀನ'ರಾಗಿಸಿ ಸಮಾಜ ಸುಧಾರಣೆ ಮಾಡುತ್ತಿದ್ದೇವೆಂಬ ಅಭಿಮಾನವೂ ಉಕ್ಕಿತ್ತು. ಕುಲೀನ ಸ್ತ್ರೀಯರು ರಂಗಕ್ಕೆ ಬಂದರೆ ಪುರುಷನ ನೈತಿಕತೆಗೆ ಧಕ್ಕೆಯಿಲ್ಲ ಎಂಬ ಸಮಾಧಾನ ಒಂದೆಡೆಯಾದರೆ ವೇಶ್ಯೆಯರಿಗೆ ನೀವು 'ನೀತಿವಂತ'ರಾಗಿರಬೇಕು. ಒಬ್ಬನೆ ಪುರುಷನಿಗೆ ನಿಷ್ಠರಾಗಿರಬೇಕು ಅಥವಾ ಮತ್ತೊಂದು 'ಕುಲೀನ' ವಂಶದ ಹುಟ್ಟಿಗೆ ಕಾರಣವಾಗುತ್ತೇನೆಂಬ ಮನಸ್ಸುಳ್ಳವಳಾಗಿರಬೇಕು ಎಂದು ಬೋಧಿಸಿದರು.

'ವೇಶ್ಯೆ'ಯರ ಮನಸ್ಸು ಯಾವಾಗಲೂ ಕೆಟ್ಟ ಯೋಚನೆ (Evil thoughts) ಮಾಡುವುದರಿಂದ ಅವರು ಎಂಥ ಪಾತ್ರ, ಭಾವಾಭಿನಯವನ್ನೂ ನಿರ್ವಹಿಸ ಬಲ್ಲರು ಎಂಬ ಶಿಫಾರಸ್ಸು ಇತ್ತು ! ಕೆಲವರಿಗೆ ವೇಶ್ಯೆಯರಿಗಿಂತ ವಿಧವೆಯರಿಗೆ ಕೊಂಚ ತರಬೇತಿ ಕೊಟ್ಟು ರಂಗಪ್ರವೇಶ ಮಾಡಿಸುವುದೇ ಸರಿ ಎಂದೂ ತೋರಿತ್ತು.

ಆ ಹೊತ್ತಿಗೆ ಜನಪ್ರಿಯ ಸ್ತ್ರೀ ವೇಷಧಾರಿ ಪುರುಷರಿಗೆಲ್ಲ ವಯಸ್ಸಾಗಿ ಹೋಗಿತ್ತು. ಹೊಸ ತಯಾರಿಗೆ ಸ್ತ್ರೀ ವೇಷ ಹೊಂದಲಿಲ್ಲ, ಆ ತಯಾರಿ ಇರಲಿಲ್ಲ, ಮುಖ್ಯವಾಗಿ ಪ್ರೇಕ್ಷಕನಿಗೆ ಅದು ಬೇಡವಾಗಿತ್ತು. ಇಂಥ ಸಂದರ್ಭದಲ್ಲಿ ರಂಗ ಸಿದ್ಧಾಂತಿಗಳು ಹೀಗೆ ವ್ಯಾಖ್ಯಾನಿಸಿದರು: ''ದೇಶ ಬಹು ದೊಡ್ಡ ಸಮಸ್ಯೆಯನ್ನು ಎದುರಿಸುತ್ತಿದೆ. ಯುವ ಜನಾಂಗ ಧೀರೋದಾತ್ತವಾಗಬೇಕು. ರಂಗಭೂಮಿಯಲ್ಲಿ ಸ್ತ್ರೀ ವೇಷ ಧರಿಸಿ, ಅನುಕರಣ ಮಾಡಿದರೆ ಅವರ ಶೌರ್ಯವೇ ನಾಶವಾದೀತು. ಆದ್ದರಿಂದ ಸ್ತ್ರೀಯರೇ ಸ್ತ್ರೀ ಪಾತ್ರ ನಿರ್ವಹಿಸಲಿ. ಅವರೇನು ಯುದ್ಧ ಮಾಡಬೇಕೇ, ಪೌರುಷದ ಅಗತ್ಯವಿದೆಯೆ ?.....'' ಮತ್ತು ''ಇವರೆಲ್ಲ 'ಕುಲೀನ' ಸ್ತ್ರೀಯರಾದ್ದರಿಂದ ಯಾವ ಪುರುಷನ ಪರಿಶುದ್ಧತೆಗೂ ಧಕ್ಕೆಯಿಲ್ಲ.''

ಸ್ತ್ರೀಯರಿಗೆ ರಂಗಪ್ರವೇಶ ಅವರದೇ ಅಪೇಕ್ಷೆ, ಅಭಿವ್ಯಕ್ತಿಗಾಗಿ ತುಡಿತ ಎಂಬ ಅಂಶವೇ ಇಲ್ಲೆಲ್ಲೂ ಕಾಣುವುದಿಲ್ಲ. ಮತ್ತೆ ಸ್ತ್ರೀ ಪಾತ್ರವೆಂದರೆ ಹೀಗೇ ಇರಬೇಕೆಂಬ ಪುರುಷನ ಆಲೋಚನೆಗಳೆ ಇಲ್ಲೂ ಹೇರಲ್ಪಟ್ಟವು. ಅತಿಯಾದ ಅಲಂಕಾರ, ಒಯ್ಯಾರ, ಸಂಗೀತ ಭಾವ - ಭಂಗಿಗಳು ಇಲ್ಲವೆ ಅತಿ ದೈನ್ಯ - ಅಳು ಆಕೆಯ ನಿರ್ವಹಣೆಗೆ ಮೀಸಲಾದವು. ಅವನು ಹೇಳಿಕೊಟ್ಟ ಮಾತನ್ನು ಹೇಳುವ, ಅವನ ಮೌಲ್ಯವೇ ತನ್ನ ಮೌಲ್ಯ ಅಂದುಕೊಂಡ ಸ್ತ್ರೀ ಮಾತ್ರ ರಂಗದ ಮೇಲಿದ್ದಳು !

ಇದರ 'ಕುಲೀನ' ಸ್ತ್ರೀ ಪರಿಕಲ್ಪನೆಗೆ ಇನ್ನೊಂದು ದೃಷ್ಟಿಕೋನವೂ ಇತ್ತು. ಅವರು ಮೊದಲು ಭಾವಿಸಿದ ಹಾಗೆ ವೇಶ್ಯೆಯರನ್ನೂ ರಂಗದ ಮೇಲೆ ತರುವುದು ಕಷ್ಟವಾಯಿತು. ಆಕೆ ಒಂದು ರಾತ್ರಿಗೆ ಒಂದು ಸಾವಿರ ರೂಪಾಯಿಗೆ ಕಡಿಮೆ ಇಲ್ಲದಂತೆ ದುಡಿಯಬಲ್ಲವಳಾಗಿದ್ದಳು. ರಂಗಭೂಮಿಯ ಜನರಿಗೆ ತಿಂಗಳಿಗೆ ೧೫೦ ರೂಪಾಯಿ ಕೊಡುವುದೇ ಪ್ರಯಾಸದ ಸಂಗತಿ. ಹೀಗಾದಾಗ ಮತ್ತು ಅವರು ಪರಿಭಾವಿಸಿದ ವಿದ್ಯಾವಂತ 'ಕುಲೀನ' ಸ್ತ್ರೀಯರು ಸಂಖ್ಯೆಯಲ್ಲಿ ಕಡಿಮೆ, ಎಲ್ಲರೂ ರಂಗಾಸಕ್ತರಲ್ಲವಾದ್ದರಿಂದ ಅವರು ಬೇರೆ ಬೇರೆ ವರ್ಗದ ಸ್ತ್ರೀಯರನ್ನು ಒಬ್ಬನಿಗೆ ನಿಷ್ಠಳಾಗಿರುವುದರಿಂದ 'ಕುಲೀನೆ' ಎಂದುಕೊಂಡು ಸ್ವಾಗತಿಸಲು ಸಿದ್ಧರಾದರು. ಇಂಥ 'ನೀತಿವಂತ', 'ನೈತಿಕ ಮೌಲ್ಯ'ವುಳ್ಳ ಬದುಕನ್ನು ನಡೆಸುವಂತ ಒಂದು ಕಲಾವಿದ ಪರಂಪರೆಯನ್ನೇ ಈ ಮಧ್ಯಮ ವರ್ಗದ ಪುರುಷ ಮೌಲ್ಯಗಳು ಹುಟ್ಟು ಹಾಕಿದವು.


ನಿಶ್ಚಿಂತೆಯಿಂದ ಬರೆಯಿರಿ...
ನಿಮ್ಮ ಸಾಹಿತ್ಯಕ್ಕೆ ಮರಣೋತ್ತರವಾಗಿ ಪ್ರಶಸ್ತಿ ಪಡೆಯಲು ನಾನು ಪ್ರಯತ್ನಿಸ್ತೀನಿ.

ಹೀಗೆ ಒತ್ತಾಯಪೂರ್ವಕವಾಗಿ ಒಂದು ಗೊತ್ತಾದ ಬದುಕಿಗೆ ತನ್ನನ್ನು ಹೊಂದಿಸಿಕೊಂಡು 'ಕುಲೀನ'ಳಾಗಿ ರಂಗ ತಯಾರಿ ಪಡೆದ ಸ್ತ್ರೀಯರು ಇಂದೂ ಇದ್ದಾರೆ. ಹೇಳಿಕೊಳ್ಳಲು, ಹೊರಬರಲು ಸಂಕೋಚಪಡುತ್ತಾರೆ ಎಂದು ದಾಖಲೆಗಳು ಹೇಳುತ್ತವೆ. ಆದರೆ ಇಂಥ ಆರೋಪಿತ ಪಟ್ಟ, ತರಬೇತಿಯಂಥ ನಿಯಮಗಳು ಯಾವ ಪುರುಷ ಕಲಾವಿದನಿಗೂ ಅನ್ವಯವಾಗಲಿಲ್ಲ ಎಂಬುದನ್ನು ಗಮನಿಸಿ.

೧೯೧೫ರಲ್ಲಿ ಇಂಥ ಸಂಗತಿಗಳಿಗೆ ಪ್ರತಿಕ್ರಿಯಿಸಲು ಸಂಘಟನೆಯೊಂದು ವೇದಿಕೆ ಕಲ್ಪಿಸಿತು. ಬಹುತೇಕ ಕಲಾವಿದೆಯರು ಭಾಗವಹಿಸಲು ಹಿಂಜರಿದರು. ಇಬ್ಬರು, ಮೂವರು ಮಾತ್ರ ಸ್ಪಂದಿಸಿದರು. ಅವರ ಅಭಿಪ್ರಾಯಗಳ ಸಾರಾಂಶವೆಂದರೆ ಕಲಾವಿದೆ ಕಲಾವಿದನನ್ನೇ ವಿವಾಹವಾಗಬೇಕು. ಆಗ ಸಮಸ್ಯೆಗಳು ಕಡಿಮೆ. ಹಾಗಿಲ್ಲವಾದರೆ ವಿವಾಹವೇ ಆಗದೆ ಕಲೆಯಲ್ಲಿ ತೊಡಗಿಕೊಂಡುಬಿಡಬೇಕು. ಇಂಥ ಅನೇಕ ಪ್ರಸಂಗಗಳು ನಮ್ಮೆದುರಿಗಿವೆ. ಅದಕ್ಕಿಂತಲೂ ಮಿಗಿಲಾಗಿ ಕಲಾವಿದೆಯರ ಅಭಾವ ಇರುವಾಗ ಇನ್ನೊಂದು ಕಂಪೆನಿ ಹಣದ ಆಮಿಷವೊಡ್ಡಿ ಕರೆದೊಯ್ದರೇನು ಗತಿಯೆಂದು ಮಾಲೀಕರೆ ಮದುವೆಯಾಗಿಬಿಡುವುದನ್ನೂ ಕಾಣುತ್ತೇವೆ. ಅಲ್ಲಿ ವಯಸ್ಸಿನ ಪರಿವೆಯಿಲ್ಲ. ಆಕೆ ಆತನ ಎಷ್ಟನೆಯ ಹೆಂಡತಿ ಎಂಬುದೂ ಪರಿಗಣಿತವಾಗುವುದಿಲ್ಲ. ಆಕೆಗೂ ಒಂದು 'ಸುರಕ್ಷತೆ' ಬೇಕಾಗಿ ಅಂಥ ಬದುಕನ್ನು ಒಪ್ಪಿಕೊಳ್ಳುವ ಸಾಧ್ಯತೆಗಳೂ ಇವೆ. ಇವೆಲ್ಲ ವೈಯಕ್ತಿಕ ಬದುಕಿನ ಬಗೆಗಾದರೆ ಯಮುನಾಬಾಯಿ ಎಂಬ ಕಲಾವಿದೆ ನೇರವಾಗಿ ನಾಟಕ ರಚನೆಯನ್ನು ಕುರಿತೆ ಮಾತಾಡುತ್ತಾರೆ. ಆಕೆಯ ಆಕ್ಷೇಪಣೆಗಳು ಗಂಭೀರವಾಗಿ ಪರಿಗಣಿಸಬೇಕಾದಂಥವಾಗಿವೆ.

ಆ ದಿನಗಳಲ್ಲಿಯ ಅತ್ಯಂತ ಪ್ರಸಿದ್ಧ ನಾಟಕಕಾರ ಖಾಡಿಲ್ಕರ್. ಆದರೆ, ಆತನ ಪಾತ್ರಗಳನ್ನು ಸಮರ್ಥವಾಗಿ ರಂಗದ ಮೇಲೆ ಮೂಡಿಸುತ್ತಿದ್ದವರು ಬಾಲಗಂಧರ್ವರು. ಇವರೆಲ್ಲ ಪ್ರಶ್ನಾತೀತರು. ಆದರೆ ಯಮುನಾಬಾಯಿ ಹೇಳುತ್ತಾರೆ : ಪುರುಷ ಸ್ತ್ರೀ ಪಾತ್ರವನ್ನು ಸರಿಯಾಗಿ ಚಿತ್ರಿಸಲಾರ. ಅದಕ್ಕೆ ಖಾಡಿಲ್ಕರ್ ಏನೂ ಅಪವಾದವಲ್ಲ. ಅವರ 'ಮೇನಕಾ' ನಾಟಕದಲ್ಲಿ ಸ್ತ್ರೀತ್ವಕ್ಕೆ, ಮಾತೃತ್ವಕ್ಕೆ ಅಪಮಾನವಾಗುವಂಥ ರೀತಿಯಲ್ಲಿ ಸ್ತ್ರೀ ಸ್ವಭಾವ ಚಿತ್ರಿತವಾಗಿದೆ. ಮೇನಕೆ ವಿಶ್ವಾಮಿತ್ರನ ಬಳಿ ನನ್ನನ್ನು ನಿನ್ನ ಮಗುವಿನ ತಾಯಿಯಾಗುವಂತೆ ಅನುಗ್ರಹಿಸು ಎಂದು ಬೇಡಿಕೊಳ್ಳುವುದನ್ನು ಅತಿರೇಕ ಮಾಡಿ ಚಿತ್ರಿಸಲಾಗಿದೆ ಎನ್ನುತ್ತಾ ''..... ಎಲ್ಲ ಸ್ತ್ರೀಯರೂ ಮಾತೃತ್ವವನ್ನು ಅಪೇಕ್ಷಿಸುತ್ತಾರೆ. ಆದರೆ ಅದಕ್ಕಾಗಿ ಪುರುಷನ ಬಳಿ ಗೋಳಾಡಿ, ಬೇಡುವುದಿಲ್ಲ. ಅದು ಅವಳ ಸ್ತ್ರೀತ್ವಕ್ಕೇ ಅಪಮಾನ. ಇದೆಲ್ಲ ಖಾಡಿಲ್ಕರ್‌ರಂಥ ಪುರುಷ ನಾಟಕಕಾರ ಹೇಗೆ ಅರ್ಥಮಾಡಿಕೊಳ್ಳಬಲ್ಲ ?

# ಕಣ್ಮನ ಸೆಳೆಯುವ ಕೌಶಾನಿ

ಮ. ಶ್ರೀ. ಮುರಳಿ ಕೃಷ್ಣ

ಬೇಸಿಗೆಯ ಬೇಗೆಯನ್ನು ತಾಳಲಾರದೆ "ಸಾಕಪ್ಪ ಈ ಬಿಸಿಲು ಯಾವುದಾದರೂ ಗಿರಿಧಾಮಕ್ಕೆ ಹೋಗೋಣ" ಎಂಬ ಮಾತನ್ನು ಕೇಳುತ್ತಿರುತ್ತೇವೆ. ಹೆಚ್ಚಿನ ಮಂದಿ ದಕ್ಷಿಣ ಭಾರತದ ಊಟಿ, ಕೊಡೈಕೆನಾಲ್ ಅಥವಾ ಉತ್ತರ ಭಾರತದ ಶಿಮ್ಲಾ, ಮಸೂರಿ, ಡಾರ್ಜಿಲಿಂಗ್ ಮುಂತಾದ ದೊಡ್ಡ ಹಾಗೂ ಹೆಸರುವಾಸಿ ಗಿರಿಧಾಮಗಳಿಗೆ ಮುಗಿಬೀಳುತ್ತಾರೆ. ಅತಿಯಾದ ವ್ಯಾಪಾರೀಕರಣದ ಪ್ರಭಾವವಿದು. ಇಂತಹ ತಾಣಗಳನ್ನು ಭೇಟಿ ಮಾಡಿದ ತರುವಾಯ ಯಾವ ಸ್ಥಳಕ್ಕೆ ಹೋಗಬೇಕು ಎಂಬ ಜಿಜ್ಞಾಸೆ ಹುಟ್ಟುವುದು ಸಹಜ.

ಆದರೆ ನಮ್ಮ ದೇಶದಲ್ಲಿ ಸಣ್ಣ ಸಣ್ಣ ಗಿರಿಧಾಮಗಳಿಗೆ ಏನೂ ಕೊರತೆಯಿಲ್ಲ. ಆದರೆ ಅವು ಹೆಚ್ಚು ಪ್ರಚಾರಕ್ಕೆ ಬಾರದೆ ಮೂಲೆಗುಂಪಾಗಿವೆ. ನಗರಗಳ ಯಾಂತ್ರಿಕ ಜೀವನದಿಂದ ಬೇಸತ್ತವರಿಗೆ ಈ ತರಹದ ತಾಣಗಳು ಚೇತೋಹಾರಿಯಾಗಿರುತ್ತವೆ. ದೊಡ್ಡ ಗಿರಿಧಾಮಗಳ ತಳುಕು ಬಳುಕುಗಳು ಇಲ್ಲದಿದ್ದರೂ, ಅಲ್ಲಿ ಪರಿಸರ ಹೆಚ್ಚಾಗಿ ಹಾನಿಗೀಡಾಗದೆ ತಮ್ಮದೇ ಸೊಬಗನ್ನು ಹೊಂದಿರುತ್ತವೆ. ಇಂತಹ ತಾಣಗಳಲ್ಲಿ ಒಂದಾದ ಕೌಶಾನಿಗೆ ಹೋಗುವ ಅವಕಾಶ ಕಳೆದ ವರ್ಷದ ಬೇಸಿಗೆಯಲ್ಲಿ ದೊರೆಯಿತು.



ಕೌಶಾನಿಯಿರುವುದು ಉತ್ತರ ಪ್ರದೇಶದಲ್ಲಿ (ಈಗ ಆ ರಾಜ್ಯದ ಬೆಟ್ಟ ಪ್ರದೇಶಗಳ ಜಿಲ್ಲೆಗಳನ್ನೊಳಗೊಂಡ ಉತ್ತರಾಂಚಲ ರಾಜ್ಯ ಅಸ್ತಿತ್ವಕ್ಕೆ ಬಂದಿರುವುದರಿಂದ, ಈ ನೂತನ ರಾಜ್ಯಕ್ಕೆ ಸೇರ್ಪಡೆಯಾಗಿದೆ.) ಈ ರಾಜ್ಯಗಳಲ್ಲಿರುವ ಹಿಮಾಲಯವನ್ನು ಕುಮಾವ್ ಹಾಗೂ ಗಢವಾಲ್ ಪ್ರದೇಶಗಳೆಂದು ಗುರುತಿಸುತ್ತಾರೆ. ಕುಮಾವ್ ಹಿಮಾಲಯದ ಪರ್ವತ ಶ್ರೇಣಿಯಲ್ಲಿದೆ ಕೌಶಾನಿ.

ನೈನಿತಾಲ್, ಅಲ್ಮೋರಾ, ರಾಣಿಖೇತ್, ಬಾಗೇಶ್ವರದಿಂದ ಕ್ರಮವಾಗಿ ೧೧೬ ಕಿ.ಮೀ., ೫೧ ಕಿ.ಮೀ., ೭೦ ಕಿ.ಮೀ. ಹಾಗೂ ೪೦ ಕಿ.ಮೀ ದೂರದಲ್ಲಿದೆ ಕೌಶಾನಿ. ಇದರ ಎತ್ತರ ಸುಮಾರು ೬೩೦೦ ಅಡಿ (೧೮೯೦ ಮೀಟರ್). ನಾವು ನೈನಿತಾಲ್‌ನ್ನು ಕೇಂದ್ರವಾಗಿಟ್ಟುಕೊಂಡು, ಬೆಳಿಗ್ಗೆ ಸುಮಾರು ೮ ಗಂಟೆಗೆ ಬಿಟ್ಟೆವು. ಅಲ್ಮೋರಾದಲ್ಲಿ ಒಂದು ಗಂಟೆ ಊಟಕ್ಕಾಗಿ ನಿಂತೆವು. ಕೌಶಾನಿ ತಲುಪಿದಾಗ ಸಂಜೆ ನಾಲ್ಕು ಗಂಟೆಯಾಗಿತ್ತು. ಪೂರ್ತಿ ಪಯಣ ಗಿರಿ ಪ್ರದೇಶದಲ್ಲೇ ಸಾಗಿದ್ದರಿಂದ, ಹೆಚ್ಚಿನ ಸಮಯ ಬೇಕಾಯಿತು. ನಾವು ಮಿನಿ ಬಸ್‌ನಲ್ಲಿ ಪಯಣಿಸಿದ್ದರಿಂದ, ಕಾಲುಗಳನ್ನು ಚಾಚಲು ಸ್ಥಳಾವಕಾಶ ಕಡಿಮೆಯಿತ್ತು. ಇದರಿಂದ ಸ್ವಲ್ಪ ತ್ರಾಸಾಯಿತು. ಆದರೂ ರಸ್ತೆಯ ಇಕ್ಕೆಲಗಳಲ್ಲಿ ಕಂಡುಬರುತ್ತಿದ್ದ ಕಣಿವೆಯ ರುದ್ರ ರಮಣೀಯ ದೃಶ್ಯಗಳು, ಮೆಟ್ಟಿಲೋಪಾದಿಯಲ್ಲಿದ್ದ ಗದ್ದೆಗಳು, ಮನೋಹರ ಗಿರಿ ಶ್ರೇಣಿಗಳು, ದೂರದಲ್ಲಿ ಕಾಣುತ್ತಿದ್ದ ಹಿಮ ಶಿಖರಗಳು, ಪಚ್ಚೆ ಪರಿಸರ, ಇವು ತ್ರಾಸನ್ನು ಬಹಳ ಮಟ್ಟಿಗೆ ಶಮನಗೊಳಿಸಿದವು.

ಮಹಾತ್ಮಾ ಗಾಂಧೀಜಿ ೧೯೨೯ರಲ್ಲಿ ಕೌಶಾನಿಗೆ ಭೇಟಿ ನೀಡಿದರು. ಅಲ್ಲಿನ ಡಾಕ್ ಬಂಗ್ಲೆಯಲ್ಲಿ ತಂಗಿದ್ದರು. ಸುಮಾರು ಎರಡು ವಾರಗಳ ಕಾಲ ವಾಸ್ತವ್ಯ ಹೂಡಿದ್ದರು. ಅನಾಸಕ್ತಿ ಯೋಗದ ಬಗ್ಗೆ ಭಗವದ್ಗೀತೆಗೆ ಅವರ ಸ್ವಂತದ ಒಂದು ಭಾಷ್ಯವನ್ನು ಬರೆದರು. ಅವರಿದ್ದ ಡಾಕ್ ಬಂಗಲೆ ನಂತರ ಅನಾಸಕ್ತಿ ಆಶ್ರಮವಾಯಿತು. ಗಾಂಧೀಜಿಯವರ ಜೀವನ ವೃತ್ತಾಂತಗಳನ್ನೊಳಗೊಂಡ ವಸ್ತು ಸಂಗ್ರಹಾಲಯವೊಂದು ಅಲ್ಲಿದೆ.

ಕುಮಾವ್ ಹಾಗೂ ಕೌಶಾನಿಯ ನಿಸರ್ಗ ರಮಣೀಯತೆಗೆ ಮಾರುಹೋಗಿದ್ದರು ಗಾಂಧೀಜಿ. "ಮನುಷ್ಯ ಏನೆಲ್ಲಾ ಮಾಡಬಹುದೋ, ಅವುಗಳನ್ನೆಲ್ಲಾ ಮೀರುತ್ತದೆ ಈ ಬೆಟ್ಟಗಳ ಪ್ರಕೃತಿಯ ಔದಾರ್ಯ. ಇಲ್ಲಿನ ಅನುಪಮ ಸೌಂದರ್ಯವನ್ನು ಸವಿದ ಮೇಲೆ ಬಹುಶಃ ಮನುಷ್ಯನಿಗೆ ಆಸೆ, ಆಕಾಂಕ್ಷೆಗಳೇ ಉಳಿಯುವುದಿಲ್ಲವೇನೊ ! ವಿಷಯ ಹೀಗಿರಬೇಕಾದರೆ, ಜನ ಏಕೆ ಸ್ವಿಟ್ಸರ್‌ಲ್ಯಾಂಡ್‌ಗೆ ಹೋಗುತ್ತಾರೆ ? ಪ್ರಪಂಚದಲ್ಲಿರುವ ಇತರ ಸುಂದರ ಸ್ಥಳಗಳು ಈ ಗುಡ್ಡಗಾಡು ಪ್ರದೇಶದ ಚೆಲುವಿಗೆ ಸಾಟಿಯಿಲ್ಲವೇನೋ ?" ಎಂದು ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು.

ಗಾಂಧೀಜಿಯವರು ಮಹಾನ್ ದೇಶಭಕ್ತರಾಗಿದ್ದರು, ಆದ್ದರಿಂದ ಇಂತಹ ಅಭಿಮತವನ್ನು ವ್ಯಕ್ತಪಡಿಸಿದರು ಎಂದು ನಾವು ಹೇಳಬಹುದು. ಆದರೆ ವಿಶ್ವವಿಶ್ರುತ ಪರ್ವತಾರೋಹಿ ಟಿ. ಜಿ. ಲಾಂಗ್‌ಸ್ಟಾಫ್ ಸಹ ಕುಮಾವ್‌ನ ಸುಂದರತೆಯನ್ನು "ಈ ಪ್ರದೇಶ ಇಡೀ ಏಷ್ಯಾದಲ್ಲೇ ಅತ್ಯಂತ ಸೊಬಗಿನಿಂದ ಕೂಡಿದೆ" ಎಂದು ಬಣ್ಣಿಸಿದ್ದಾನೆ. ಆಗ ಇದ್ದ ಪರಿಸರಕ್ಕೂ ಈಗ್ಗೂ ಬಹಳ ವ್ಯತ್ಯಾಸಗಳಿರಬಹುದು. ಏಕೆಂದರೆ ಎಲ್ಲೆಡೆ ಪರಿಸರ ನಾಶವಾಗಿರುವಂತೆ ಇಲ್ಲೂ ಆಗಿದೆ. ಆದರೆ ಪ್ರಮಾಣ ಮಾತ್ರ ಕಡಿಮೆ.

ಸರಳಾ ಬೆಹನ್ (ಮಿಸ್ ಕ್ಯಾಥರೀನ್ ಮೇರಿ) ಗಾಂಧೀಜಿಯ ಶಿಷ್ಯೆಯಾಗಿದ್ದಳು. ಈಕೆ ಇಲ್ಲಿ ಲಕ್ಷ್ಮೀ ಆಶ್ರಮವನ್ನು ಸ್ಥಾಪಿಸಿದಳು. ಈಗಲೂ ಅದು ಗುಡ್ಡಗಾಡು ಮಹಿಳೆಯರ ಶ್ರೇಯೋಭಿವೃದ್ಧಿಗೆ ಶ್ರಮಿಸುತ್ತಿದೆ.

ಹಿಂದಿ ಸಾಹಿತ್ಯ ಕ್ಷೇತ್ರದ ಪ್ರತಿಭಾನ್ವಿತ ಖ್ಯಾತ ಕವಿ ಸುಮಿತ್ರಾನಂದನ್ ಪಂತ್ ಜನಿಸಿದ್ದು ಕೌಶಾನಿಯಲ್ಲಿ. ಅವರು ತಮ್ಮ ಬಾಲ್ಯವನ್ನು ಇಲ್ಲಿ ಕಳೆದರು. ಇದು ಈ ತಾಣದ ಮತ್ತೊಂದು ವಿಶೇಷ.

ಇಲ್ಲಿ ಹಿಮಾಲಯದ ಸುಮಾರು ೩೫೦ ಕಿ.ಮೀ. ಉದ್ದದ ಹಿಮಾಚ್ಛಾದಿತ ಗಿರಿಶ್ರೇಣಿಯ ನೋಟ ಲಭ್ಯ. ವಾತಾವರಣ ತಿಳಿಯಾಗಿದ್ದರೆ ತ್ರಿಶೂಲ್ (೨೩೪೦೬ ಅಡಿ), ನಂದಾ ದೇವಿ (೨೫೬೬೦ ಅಡಿ), ನಂದಾ ಘುಂಟಿ (೨೧೨೮೦ ಅಡಿ), ನೀಲಕಾಂತ್ (೨೩೨೦೦ ಅಡಿ), ಚೋಕಂಬ (೨೩೮೦೦ ಅಡಿ), ಪಂಚುಲಿ, ನಂದಾ ಕೋಟ್ ಮುಂತಾದ ಶಿಖರಗಳು ಕಾಣುತ್ತವೆ. ಮುಂಜಾನೆ ಹಾಗೂ ಸಂಜೆಯ ವೇಳೆಯಲ್ಲಿ ಅಂಬರದಲ್ಲಿ ನೇಸರ ಮೂಡಿಸುವ ಕುಂಚದ ಕಲೆಯನ್ನು ನೋಡಲು ಕಂಗಳಿಗೆ ಹಬ್ಬ.

ನಾವು ಅಲ್ಲಿ ತಂಗಿದ ರಾತ್ರಿ ಒಂದು ಗಂಟೆಯ ಕಾಲ ಜಡಿ ಮಳೆ ಸುರಿಯಿತು. ಪರ್ವತ ಪ್ರದೇಶದ ಮಳೆಯ ಅನುಭವವಾಯಿತು. ಇಡೀ ರಾತ್ರಿ ವಿದ್ಯುಚ್ಛಕ್ತಿ ಇರಲಿಲ್ಲ.

ಕೌಶಾನಿಯ ಸುತ್ತಮುತ್ತಲಿನ ಗಿರಿಗಳಲ್ಲಿ ಚಾರಣವನ್ನು ಮಾಡಬಹುದು. ಪ್ರವಾಸಿಗರಿಗೆ ತಂಗಲು ಕುಮಾವ್ ಮಂಡಲ್ ವಿಕಾಸ್ ನಿಗಮದ ಅತಿಥಿ ಗೃಹಗಳಿವೆ (ದಿನವೊಂದಕ್ಕೆ ದರ - ಕಾಟೇಜಿಗೆ (ಕುಟೀರ) ರೂ. ೯೦೦/-, ನಾಲ್ಕು ಹಾಸಿಗೆಗಳ ಕೊಠಡಿಗೆ - ರೂ. ೮೫೦/- ಡಬ್ಬಲ್ ಕೊಠಡಿಗೆ - ರೂ. ೬೫೦/- ಹಾಗೂ ಡಾರ್ಮಿಟರಿಗೆ ರೂ. ೬೦/-). ಅನಾಸಕ್ತಿ ಆಶ್ರಮದಲ್ಲಿ ದಿನವೊಂದಕ್ಕೆ ಕೊಠಡಿಯ ಬಾಡಿಗೆ ರೂ. ೮೦/-

ಕೌಶಾನಿಯ ಪ್ರಕೃತಿ ಶ್ರೀಮಂತಿಕೆ ಹೆಚ್ಚು ಕಾಲ ನಿರಾತಂಕವಾಗಿ ಉಳಿದು, ಇದು ಇತರ ಪ್ರಸಿದ್ಧ ಗಿರಿಧಾಮಗಳು ಹಿಡಿದಿರುವ ಹಾದಿ ಹಿಡಿಯದಿರಲಿ ಎಂದು ಆಶಿಸೋಣ.

ಮ. ಶ್ರೀ. ಮುರಳಿ ಕೃಷ್ಣ
ನಂ. ೧೦೦, ೨ನೇ "ಎ" ಕ್ರಾಸ್, ಗವೀಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯

**ಭಾರತೀಯ** ತತ್ತ್ವಶಾಸ್ತ್ರ ಪರಂಪರೆಯಲ್ಲಿ ಚಾರ್ವಾಕರದು ವಿಶಿಷ್ಟ ಸ್ಥಾನ. ಲೋಕಾಯತರೆಂಬ ಹೆಸರೂ ಅವರಿಗಿದೆ. ವೇದದ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲವೆಂಬ ಕಾರಣಕ್ಕೆ ಅವರು ನಾಸ್ತಿಕರೆಂಬ ಹಣೆಪಟ್ಟಿ ಧರಿಸಿದ್ದಾರೆ. ವಿಷಯಸುಖಕ್ಕೆ ಅಂಟಿಕೊಂಡವರೆಂದು ಅವರನ್ನು ಹೀಯಾಳಿಸುವುದು ರೂಢಿಯಲ್ಲಿದೆ. ಚಾರ್ವಾಕರ ಮೂಲ ಆಶಯವನ್ನು ಪ್ರತಿನಿಧಿಸುವ ವಾಕ್ಯವೆಂದು ಒಂದು ಶ್ಲೋಕವನ್ನು ಉದಾಹರಿಸುವುದುಂಟು. ಅದು ಹೀಗಿದೆ:

ಯಾವಜ್ಜೀವೇತ್ ಸುಖಂ ಜೀವೇತ್ ಋಣಂ ಕೃತ್ವಾ ಘೃತಂ ಪಿಬೇತ್।
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ॥

ಇದು ಸಾಯಣ-ಮಾಧವ ವಿರಚಿತ **ಸರ್ವದರ್ಶನ ಸಂಗ್ರಹ**ದಲ್ಲಿದೆ. ''ಜೀವಿಸಿರುವವರೆಗೆ ಸುಖವಾಗಿ ಜೀವಿಸಬೇಕು; ಸಾಲ ಮಾಡಿಯಾದರೂ ಸರಿ ತುಪ್ಪವನ್ನು ಉಣ್ಣಬೇಕು. ಶರೀರವು ಸುಟ್ಟು ಬೂದಿಯಾದ ಮೇಲೆ ಅದು ಮರಳಿ ಬರುವುದಿನ್ನೆಲ್ಲಿ!'' ಎಂಬುದು ಇದರ ಸಾಮಾನ್ಯಾರ್ಥ. ಈ ಶ್ಲೋಕದ ಮೊದಲ ಎರಡು ಪಾದಗಳು ವಿಷ್ಣುಧರ್ಮೋತ್ತರ ಪುರಾಣದಲ್ಲಿ ಮೊದಲಿಗೆ ಬಂದಿವೆ (೧.೧೦೮.೧೮). ಅದು ಸುಮಾರು ೫ನೆಯ ಶತಮಾನದ ಗ್ರಂಥ. ಅಲ್ಲಿಯ ಶ್ಲೋಕದ ಉಳಿದ ಭಾಗ ಬೇರೆ ಇದೆ; *ಋಣಂ ಕೃತ್ವಾ*........ ಎಂಬುದಕ್ಕೆ ಬದಲಾಗಿ *ನಾಸ್ತಿ ಮೃತ್ಯೋರಗೋಚರಃ* ಎಂದಿದೆ. ಅಂದರೆ, ಯಾವುದೂ ಮೃತ್ಯುವಿಗೆ ತುತ್ತಾಗದಿರದು, ಎಂಬರ್ಥ. ತುಪ್ಪ ತಿನ್ನುವ ಪ್ರಸಂಗ ಇಲ್ಲಿ ಬಂದಿಲ್ಲ.

ಎಂಟರಿಂದ ಹದಿನಾರನೆಯ ಶತಮಾನದವರೆಗೆ ಇದೇ ಶ್ಲೋಕವು ಭಾಗಶಃ ಅಥವಾ ಪೂರ್ತಿಯಾಗಿ ಬೇರೆ ಹತ್ತು-ಹನ್ನೆರಡು ಗ್ರಂಥಗಳಲ್ಲಿ ಉಪಲಬ್ಧವಾಗಿದೆ. ಆದರೆ ೧೪ನೆಯ ಶತಮಾನದ ವೇದಾಂತಿ ಮಾಧವಾಚಾರ್ಯರನ್ನುಳಿದು ಬೇರೆ ಯಾರೂ ಈ 'ಋಣಂ ಕೃತ್ವಾ.......' ಭಾಗವನ್ನು ಸೇರಿಸಿಕೊಂಡಿಲ್ಲ. ಎಲ್ಲರೂ 'ನಾಸ್ತಿ ಮೃತ್ಯೋಃ ಅಗೋಚರಃ' ಎಂದೇ ಉಲ್ಲೇಖಿಸಿದ್ದಾರೆ. ಈ ಶ್ಲೋಕವನ್ನು ಆಲಸಿಗಳು, ನೀತಿಬಾಹಿರರು, ದೈವಶ್ರದ್ಧೆ ಇಲ್ಲದವರು, ಮರಣೋತ್ತರದ ಜೀವನದ ಬಗ್ಗೆ ಅನಾಸಕ್ತರು, ಒಳಿತು-ಕೆಡುಕುಗಳ ಪ್ರಜ್ಞೆ ಇಲ್ಲದವರು, ಎಂದು ವಿಧವಿಧವಾಗಿ ಅವರು ಮೂದಲಿಕೆಗೆ ಗುರಿಯಾಗಿದ್ದಾರೆ. ಹರಿಭದ್ರ, ಕೃಷ್ಣಮಿಶ್ರ, ಹೇಮಚಂದ್ರ, ಶ್ರೀಹರ್ಷ, ಮುಂತಾದವರು ಹೀಗೆ ಮೂದಲಿಸುವವರಲ್ಲಿ ಸೇರಿದ್ದಾರೆ. ಮರಣೋತ್ತರದ ಬಗ್ಗೆ ಇವರೆಲ್ಲಾ ಚಾರ್ವಾಕರನ್ನು ಸರಿಯಾಗಿಯೇ ಅರ್ಥೈಸಿದ್ದಾರೆ; ಏಕೆಂದರೆ ಶ್ಲೋಕದಲ್ಲಿ ಸ್ಪಷ್ಟವಾಗಿ ಪುನರ್ಜನ್ಮವನ್ನು ನಿರಾಕರಿಸಲಾಗಿದೆ. ಸತ್ತ ನಂತರದ ಸುಖದ ಬಗ್ಗೆ ಚಾರ್ವಾಕರಿಗೆ ನಂಬಿಕೆ ಇಲ್ಲವೆಂಬುದು ಸರಿಯಾದ ಮಾತು. ಅಂದರೆ, ಸುಖವೇನಾದರೂ ಇದ್ದರೆ ಅದು ಈ ಜೀವನಕಾಲದಲ್ಲಿರಬೇಕು, ಬೇರೆಲ್ಲೂ ಅಲ್ಲ, ಎಂಬುದು ಈ ಶ್ಲೋಕದ ಇಂಗಿತ.

ಭೌತವಾದಿಗಳು ಯಾವಾಗಲೂ ವಿಷಯಸುಖದ ಪ್ರತಿಪಾದಕರೆಂಬ ಆಪಾದನೆಗೆ ಗುರಿಯಾಗಿದ್ದಾರೆ; ಭಾರತದಲ್ಲಿ ಹಾಗೂ ಬೇರೆ ಕಡೆ. ಭಾವನಾವಾದಿಗಳು ಮಾತ್ರ ಅದಕ್ಕೆ ಕಟ್ಟುಬೀಳುವುದಿಲ್ಲವೆಂಬ ಐತಿಹ್ಯ ಸರ್ವೇಸಾಮಾನ್ಯವಾದ್ದು. ಇದು ಎಷ್ಟರಮಟ್ಟಿಗೆ ನಿಜವೆಂಬುದು ಪ್ರತಿಯೊಬ್ಬರ ಅನುಭವಕ್ಕೂ ಬರಲು ಸಾಧ್ಯವಿರುವುದರಿಂದ ಅದರ ಬಗ್ಗೆ ವ್ಯಾಖ್ಯಾನ ಅನಗತ್ಯ.

ಬೌದ್ಧ ತ್ರಿಪಿಟಕಗಳಲ್ಲಿ ಅಜಿತ ಕೇಸಕಂಬಳಿ ಎಂಬುವವನನ್ನು ಬುದ್ಧನ ಹಿರಿಯ ಸಮಕಾಲೀನನೆಂದು ಹೇಳಲಾಗಿದೆ. ಅವನೂ ಒಂದು ರೀತಿಯ ಸಾಧುವೇ! ಕೂದಲಿಂದ ಮಾಡಿದ ಕಂಬಳಿ ಅವನ ಉಡುಪು. ಅದರಿಂದ ಬೇಸಿಗೆಯಲ್ಲಿ ಹೆಚ್ಚು ಬೇಗೆ ಮತ್ತು ಚಳಿಗಾಲದಲ್ಲಿ ಹೆಚ್ಚು ಚಳಿ. ಅವನ ದೇಹದಂಡನೆಯ ವಿಧಾನ ಅದು. ಅಥವಾ, ತೊಡುವುದಕ್ಕಿಂತ ತೊಡದಿರುವುದೇ ಮೇಲು ಎನಿಸುವಂತಹ ರೀತಿಯ ಉಡುಪು, ಎನ್ನಬಹುದು. ಅವನೂ ಒಂದು ರೀತಿಯ ಭೌತವಾದಿಯೇ; ಒಳಿತು-ಕೆಡಕು, ದೈವ, ಪುನರ್ಜನ್ಮ, ಇತ್ಯಾದಿಗಳನ್ನು ನಗಣ್ಯವೆಂದು ತಳ್ಳಿಹಾಕಿದವನು. ದೀರ್ಘನಿಕಾಯದ **ಸಾಮಞ್ಞ ಫಲಸುತ್ತ**ದಲ್ಲಿ ಅವನ ಮಾತು ಬರುತ್ತದೆ. ಜೈನ

# ಚಾರ್ವಾಕರ 'ಸುಖಂ ಜೀವೇತ್' ಎಂದರೇನು ?

*ಮಾನ್ಯ ಡಿ. ವಿ. ಜಿ. ಯವರು ತಮ್ಮ 'ಉಮರನ ಒಸಗೆ'ಯ ಪೀಠಿಕೆಯಲ್ಲಿ ನಮ್ಮ ತತ್ತ್ವವೇತ್ತರ ದ್ವಿಮುಖನೀತಿಯನ್ನು ಎತ್ತಿ ತೋರಿಸಿದ್ದಾರೆ. ''ಇನ್ನೊಂದು ವೀಸೆ ಅವರೆಕಾಯಿ ಹಾಕಪ್ಪ'' ಎಂದು ಹೇಳುತ್ತಲೇ ''ರಾಮ ರಾಮ, ಇದೇನು ಜಗತ್ತು, ಇದೇನು ಮೋಹ'' ಎಂದು ಜಪ ಮಾಡುತ್ತಿರುತ್ತಾರೆ. ವಿಷಯಾಸಕ್ತಿಗೂ ವಿಷಯ ಲೋಲುಪತೆಗೂ ವ್ಯತ್ಯಾಸವಿದೆ. ಚಾರ್ವಾಕ ದರ್ಶನವನ್ನು ಟೀಕಿಸಲೆಂದು ಅವರು ನಂಬದಿದ್ದ ಅನೇಕ ಅಂಶಗಳನ್ನು ಅವರ ಮೇಲೆ ಹೇರಲಾಗಿದೆ. ಕಲ್ಕತ್ತಾ ವಿಶ್ವವಿದ್ಯಾನಿಲಯದ ಆನಂದಮೋಹನ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾದ ಪ್ರೊ॥ ರಾಮಕೃಷ್ಣ ಭಟ್ಟಾಚಾರ್ಯ ಅವರು ಈ ಬಗ್ಗೆ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. 'ಹೊಸತು' ಗಾಗಿಯೇ ಬರೆಯಲಾದ ಪ್ರಸ್ತುತ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಡಾ॥ ಜಿ. ರಾಮಕೃಷ್ಣ.*

**ಪ್ರೊ॥ ರಾಮಕೃಷ್ಣ ಭಟ್ಟಾಚಾರ್ಯ**

ಮಾಧವಾಚಾರ್ಯರು ತಮ್ಮ ಕೃತಿಯಲ್ಲಿ ಎರಡು ಬಾರಿ ಬಳಸಿದ್ದಾರೆ: ಒಮ್ಮೆ 'ನಾಸ್ತಿ ಮೃತ್ಯೋರಗೋಚರಃ' ಎಂದು; ಆಮೇಲೆ ಏನೆನ್ನಿಸಿತೋ! ಚಾರ್ವಾಕರ ತಲೆಯ ಮೇಲೆ ಗೂಬೆ ಕೂರಿಸಲು ಇದೇ ಸರಿ ಎನಿಸಿರಬೇಕು, ಆಗ 'ಋಣಂ ಕೃತ್ವಾ....' ಭಾಗವನ್ನು ಸೇರಿಸಿದ್ದಾರೆ. 'ಸುಖವಾಗಿ ಬಾಳಿರಿ' ಎಂಬ ಭಾಗ ಮಾತ್ರ ಎಲ್ಲ ಉಲ್ಲೇಖಗಳಲ್ಲೂ ಇರುವುದು ನಿಜ. ಚಾರ್ವಾಕರ ಆಶಯ ಏನಾಗಿದ್ದಿತು? ವಿಷಯಸುಖವನ್ನು ಜೀವನದ ಪರಮಾಶಯವೆಂದು ಅವರು ತಿಳಿಯಲಿಲ್ಲವೆ?

ಇದಕ್ಕೆ ಉತ್ತರ ಕೊಡಲು ಒಂದು ಪರಿಮಿತಿ ಇದೆ. ಅದೇನೆಂದರೆ, ಸ್ವತಃ ಚಾರ್ವಾಕರದ್ದೇ ಎನ್ನಬಹುದಾದ ಯಾವ ಗ್ರಂಥವೂ ನಮ್ಮಲ್ಲಿಲ್ಲ. ಅವರು ಹೇಳಿದ್ದೆನ್ನಲಾದ್ದು ಅವರನ್ನು ಟೀಕಿಸುವವರ ಗ್ರಂಥಗಳಲ್ಲಿ ದೊರೆಯುತ್ತದೆ. ಅದೇ ನಮಗಿರುವ ಆಧಾರ! ಲೋಕಾಯತ ದರ್ಶನದ ಪ್ರತಿಪಾದಕರು ಯಾರೂ ಗ್ರಂಥಗಳನ್ನು ರಚಿಸಲಿಲ್ಲವೆ ಮತ್ತು ರಚಿಸಿದ್ದರೆ ಅವು ಏನಾದುವು ಎಂಬ ಪ್ರಶ್ನೆಯನ್ನು ಇಲ್ಲಿ ಎತ್ತಿಕೊಳ್ಳುವುದಿಲ್ಲ, ಮೇಲೆ ಉದ್ಧರಿಸಲಾದ ಶ್ಲೋಕದ ಬಗ್ಗೆ ಮಾತ್ರ ಕೆಲವು ಮಾತುಗಳನ್ನು ಹೇಳೋಣ: ಈ ವಾಕ್ಯವನ್ನಾಧರಿಸಿ ಜೈನರೂ ಸೇರಿದಂತೆ ಅನೇಕ ತತ್ತ್ವಶಾಸ್ತ್ರಜ್ಞರು ಚಾರ್ವಾಕರನ್ನು ಒಂದು ತರಹದ ತಿಂಡಿಪೋತರೆಂದು ವ್ಯಾಖ್ಯಾನಿಸಿದ್ದಾರೆ. ಅವರು ದಾರ್ಶನಿಕರು ಅವನ ಚಿಂತನೆಯನ್ನು ಕಟುವಾಗಿ ಟೀಕಿಸಿದರು: ''ಹೀಗೆ ತಮ್ಮ ಅನುಭೋಗಕ್ಕಾಗಿ ಏನೇನೋ ಸುಖಗಳನ್ನು ಕಂಡುಕೊಂಡವರು'', ಎಂದು. ಬಟ್ಟೆಯೂ ಇಲ್ಲದ ಆ 'ಸುಖ' ಅಷ್ಟು ದುಷ್ಟವಾದ ವಿಷಯಸುಖವಾಗಿ ಕಂಡದ್ದು ದೊಡ್ಡ ಆಶ್ಚರ್ಯ!

ಸ್ವಾರಸ್ಯವೆಂದರೆ, ಸಾಂಖ್ಯದರ್ಶನದ ಪ್ರತಿಪಾದಕರನ್ನೂ ಹೀಗೇ ದೂಷಿಸಲಾಗಿದೆ. ಅವರಿಗೆ ಆರೋಪಿಸಲಾಗಿರುವ ಒಂದು ಶ್ಲೋಕ ಹೀಗಿದೆ :

ಹಸ ಪಿಬ ಲಲ ಮೋದ ನಿತ್ಯಂ ವಿಷಯಾನ್ ಉಪಭುಂಜ ಕುರು ಚ ಮಾ ಶಂಕಾಮ್।
ಯದಿ ವಿದಿತಂ ತೇ ಕಪಿಲಮತಂ ತತ್ ಪ್ರಾಪ್ಸ್ಯಸೇ ಮೋಕ್ಷಸೌಖ್ಯಂ ಚ ॥

ಸಾಂಖ್ಯಕಾರಿಕೆಯ ಮೇಲಿನ ಮಾಠರ ವೃತ್ತಿಯಲ್ಲಿ ಉದ್ಧರಿಸಲಾಗಿರುವ ಶ್ಲೋಕ ಇದು. 'ನಗು, ಕುಡಿ, ಆಡು, ಸುಖಪಡು, ವಿಷಯ ಸುಖವನ್ನು ಪಡೆ; ಯಾವ ಅಂಜಿಕೆಯೂ ಬೇಡ. ಕಪಿಲನ ದರ್ಶನ ನಿನಗೆ ತಿಳಿದಿದ್ದರೆ ಸುಖವೂ ದೊರೆಯುತ್ತದೆ, ಮೋಕ್ಷವೂ ಪ್ರಾಪ್ತವಾಗುತ್ತದೆ.' ನಿಜಕ್ಕೂ ಸಾಂಖ್ಯದರ್ಶನದ ತಿರುಳೇ ಇದು?

ಅಥವಾ ಅವರನ್ನು ದೂಷಿಸಲು ಈ ಮಾತನ್ನು ಅವರ ಬಾಯಿಗೆ ತುರುಕಲಾಗಿದೆಯೆ?

ಮೂಲಭೂತವಾದ ಪ್ರಶ್ನೆ ಇದು : ದೈವ, ಪುನರ್ಜನ್ಮ, ಇತ್ಯಾದಿಗಳನ್ನು ನಿರಾಕರಿಸುವವರ ವಿರುದ್ಧ ಮಾಡಲಾಗಿರುವ ಆರೋಪಗಳಲ್ಲಿ ಹುರುಳೆಷ್ಟು? ಅಥವಾ, ಅವನ್ನು ನಿರಾಕರಿಸಿದ ಅಪರಾಧಕ್ಕಾಗಿ ಅವರು ಬೇರೆಲ್ಲಾ ಆರೋಪಗಳನ್ನೂ ಹೊರಬೇಕಾಯಿತೆ? ಇದನ್ನು ಪರಾಮರ್ಶೆ ಮಾಡುವಾಗ ಪ್ರಾಚೀನ ಗ್ರೀಸ್‌ನಲ್ಲಿ ಎಪಿಕ್ಯೂರಸ್‌ನ ಸಿದ್ಧಾಂತವು ಎದುರಿಸಿದ ಸನ್ನಿವೇಶವನ್ನು ಮನನ ಮಾಡಿಕೊಳ್ಳಬಹುದು. ಅವನನ್ನು ವಿಷಯಸುಖದ ಆರಾಧಕನೆಂದು ಕರೆಯಲಾಯಿತು. ಹೊರೇಸ್ ಎಂಬ ಕವಿ ಅವನ ಬಗ್ಗೆ ಎಂತಹ ನಿಕೃಷ್ಟಭಾವನೆ ತಾಳಿದ್ದಾನೆಂದರೆ 'ಎಪಿಕ್ಯೂರಸ್‌ನ ಹಂದಿ ರೊಪ್ಪ' ಎಂದು ಅವನ ಚಿಂತನೆಯನ್ನು ಬಣ್ಣಿಸುತ್ತಾನೆ. ಈಗಂತೂ ಇಂಗ್ಲಿಷ್‌ನಲ್ಲಿ 'ಎಪಿಕ್ಯೂರಿಯನ್' ಎಂಬ ಪದಕ್ಕೆ ಇರುವ ಅರ್ಥ ಅದೇ: ವಿಷಯಸುಖದ ಉಚ್ಚ ಮಾದರಿಯನ್ನು ಅರಿತವನು, ಎಂದು. ಪಾಪ, ಎಪಿಕ್ಯೂರಸ್ ಹೇಳಿದ್ದೇ ಬೇರೆ, ಇವರು ಅರ್ಥೈಸಿದ್ದೇ ಬೇರೆ. ಅವನ ಮಾತುಗಳು ಸಾಮಾನ್ಯವಾಗಿ ಹೀಗಿವೆ : ''ಸುಖವು ಆತ್ಯಂತಿಕ ಆಶಯ; ಆದರೆ ಎಲ್ಲ ಸುಖದಲ್ಲೂ ದುಃಖವು ಹೇಗೋ ಸೇರಿಕೊಂಡಿದೆ. ಆದ್ದರಿಂದ ತೀವ್ರತೆಯನ್ನು ಬಿಡಬೇಕು. ಸುಖವೆಂಬುದು ವಿಷಯಸುಖದಿಂದ ದೊರೆಯುವಂಥದಲ್ಲ; ಅದು ಸಂಯಮ ಮತ್ತು ಶಾಂತಚಿತ್ತದಿಂದ ಬರುವಂಥದು.'' ಹೀಗೆ ಬೋಧಿಸಿದವನು ವಿಷಯಸುಖದ ಆರಾಧಕನು ಹೇಗಾದ? ಇದು ಅವನ ಇತರ (ಭೌತವಾದಿ) ಪ್ರತಿಪಾದನೆಗಳನ್ನು ಧಿಕ್ಕರಿಸಲು ಕಂಡುಕೊಂಡ ಪ್ರಚಾರೋಪಾಯ. ಸೈಮನ್ ಬ್ಲ್ಯಾಕ್‌ಬರ್ನ್ ಇದನ್ನು ಸುದೀರ್ಘವಾಗಿ ಚರ್ಚಿಸಿದ್ದಾನೆ. ಎಪಿಕ್ಯೂರಸ್ ಸ್ವತಃ ಭೋಜನಪ್ರಿಯನೂ ಅಲ್ಲ, ಪಾನಪ್ರಿಯನೂ ಅಲ್ಲ. ಬರ್ಟ್ರಂಡ್ ರಸೆಲ್ ಹೇಳುವಂತೆ ಅವನು ತಿನ್ನುತ್ತಿದ್ದುದು ತುಣುಕು ರೊಟ್ಟಿ; ಹಬ್ಬದ ದಿನಗಳಲ್ಲಿ ಸ್ವಲ್ಪ ಬೆಣ್ಣೆ ಬಳಸಿದ್ದಿರಬಹುದು, ಅಷ್ಟೆ. ಅವನು 'ಸುಖ'ವನ್ನು ಬೋಧಿಸಿದ; ಆದರೆ ಅದು 'ತಿನ್ನು, ಕುಡಿ, ಕಾಮುಕನಾಗು' ಎನ್ನುವ ಅರ್ಥದಲ್ಲಿ ಅಲ್ಲ. ಎಫ್. ಎ. ಲಾಂಗ್ ಎಂಬ ವಿದ್ವಾಂಸ ಅದನ್ನು ಸ್ಪಷ್ಟಪಡಿಸಿರುವುದು ಹೀಗೆ : ''ಎಪಿಕ್ಯೂರಸ್ ತನ್ನ ಗುರು ಅರಿಸ್ಟಿಪೋಸ್‌ನಿಂದ ಬಹಳ ಕಲಿತಿದ್ದ; ಆದರೆ ಆತನ ವಿರೋಧಿಯೂ ಆಗಿದ್ದ. ದೈಹಿಕ ಸುಖಕ್ಕಿಂತಲೂ ಬೌದ್ಧಿಕ ಸುಖವು ಮಹತ್ವಾದದ್ದು ಎಂಬುದರ ಬಗ್ಗೆ ಭೇದ ಬಂದಿದ್ದು. ಮನಸ್ಸು ವರ್ತಮಾನದಿಂದಲ್ಲದೆ ಭೂತ-ಭವಿಷ್ಯತ್ತುಗಳಿಂದಲೂ ಪ್ರಚೋದನೆ ಪಡೆಯುತ್ತದಾದ್ದರಿಂದ ಬೌದ್ಧಿಕ ಸುಖವೇ ಶ್ರೇಷ್ಠವೆಂದು ಗುರುವಿನ ಅಭಿಪ್ರಾಯ. ದೈಹಿಕ ಸುಖಕ್ಕೂ ಮಹತ್ವವಿದೆಯೆಂದು ವಾದಿಸಿದ ಎಪಿಕ್ಯೂರಸ್ ಮೌಲ್ಯಗಳ ಪಾಲನೆ ಸಹ ಸುಖಕ್ಕಾಗಿ ಎಂದು ಭಾವಿಸಿದ್ದ. ದೇಹಾರೋಗ್ಯಕ್ಕೆ ಔಷಧಿ ಇದ್ದಂತೆ ಮಾನಸಿಕ ಆರೋಗ್ಯಕ್ಕೆ ಮೌಲ್ಯಗಳು ಬೇಕೆಂದು ಆತನ ನಂಬಿಕೆ. ಅಲ್ಲದೆ, ಸುಖದ ಅನುಭವದಲ್ಲಿ ಶಾಶ್ವತವಾದ್ದು ಮೌಲ್ಯ; ಬೇರೆಲ್ಲವೂ ನಶಿಸುತ್ತವಾದ್ದರಿಂದ ಸುಖದಿಂದ ಅವನ್ನು ಬೇರ್ಪಡಿಸಬಹುದು, ಆದರೆ ಮೌಲ್ಯವು ಬೇರ್ಪಡುವುದಿಲ್ಲ.''

ಇದನ್ನು ವಿಷಯಲೋಲುಪತೆ ಎನ್ನಬಹುದೆ? ಆತನ ಶ್ರದ್ಧೆ ಖಂಡನೆಗೆ ಅರ್ಹವಾಗಿದೆಯೆ? ಮನೋಶಿಯಸ್ ಎಂಬ ತನ್ನೊಬ್ಬ ಸ್ನೇಹಿತನಿಗೆ ಬರೆದ ಪತ್ರದಲ್ಲಿ ಎಪಿಕ್ಯೂರಸ್ ಹೇಳುತ್ತಾನೆ: ''ಸುಖವು ಪ್ರಮುಖವಾದ ಒಳಿತೆಂದು ಹೇಳುವಾಗ ನಾವು ಯಾರೋ ಲಂಪಟನೊಬ್ಬನ ಸುಖಕ್ಕೆ ಅದನ್ನು ಸಮೀಕರಿಸುತ್ತಿಲ್ಲ. ವಿಷಯಸುಖವೇ ನಮ್ಮ ಅರ್ಥವೆಂದು ಭಾವಿಸುವವರು ದಡ್ಡರು. ಇಲ್ಲವೇ, ನಮ್ಮ ಅಭಿಪ್ರಾಯಗಳನ್ನು ಒಪ್ಪದಿರುವುದರಿಂದ ಇದಕ್ಕೆ ವಕ್ರವಾದ ಅರ್ಥ ನೀಡುತ್ತಾರೆ. ನಾನು ಹೇಳುವುದು ನೋವಿನಿಂದ ಮುಕ್ತವಾದ ಶಾರೀರಿಕ ಸ್ವಾತಂತ್ರ್ಯ ಮತ್ತು ಗೊಂದಲವಿಲ್ಲದ ಚೈತನ್ಯದ ಮಾತು. ಕುಡಿದು ಅಮಲಿನಲ್ಲಿರುವುದರಿಂದ ಅಂತಹ ಜೀವನಸೌಖ್ಯ ಲಭಿಸುವುದಿಲ್ಲ. ನಮಗೆ ಬೇಕಾದ್ದು ಚಿಂತನ, ಅವಲೋಕನ. ನಮ್ಮ ಎಲ್ಲ ಆಯ್ಕೆಗಳಿಗೂ ಏನೋ ಒಂದು ಕಾರಣವಿರಬೇಕಲ್ಲವೆ? ಅಂತೆಯೇ ಯಾವುದನ್ನು ವರ್ಜಿಸುತ್ತೇವೋ ಅದಕ್ಕೂ ಸಹ. ಅದರಿಂದಲ್ಲವೇ ಸುಖ ದೊರೆಯುವುದು?''

ಈ ಹಿನ್ನೆಲೆಯಿಂದ ಚಾರ್ವಾಕರತ್ತ ದೃಷ್ಟಿ ಹರಿಸೋಣ. ನಮ್ಮಲ್ಲಿ ಚಾರ್ವಾಕಸೂತ್ರವೆಂಬ ಗ್ರಂಥವೊಂದಿದ್ದಿತೆಂಬುದು ಅದರ ಕೆಲವು ವ್ಯಾಖ್ಯಾನಕಾರರ ತುಣುಕುಗಳಿಂದ ತಿಳಿದುಬರುತ್ತದೆ. ಆ ತುಣುಕುಗಳು ಇತರ ಕೆಲವು ಗ್ರಂಥಗಳಲ್ಲಿ ಉದ್ಧೃತಗೊಂಡಿವೆ. ಅವನ್ನು ನೋಡಿದರೆ ಚಾರ್ವಾಕ ಗ್ರಂಥಗಳು ನಾವಿಂದು ಭಾವಿಸಿರುವುದಕ್ಕಿಂತಲೂ ವಿಪುಲವಾಗಿಯೇ ಇದ್ದುದೆಂಬುದು ಖಚಿತವಾಗುತ್ತದೆ. ಪುರಂದರ, ಕಂಬಲಾಶ್ವತರ, ಅವಿದ್ಧಕರ್ಣ ಮತ್ತು ಉದ್ಭಟ, ಇವರೆಲ್ಲಾ ಅಂತಹ ಚಾರ್ವಾಕ ಗ್ರಂಥಗಳ ಕರ್ತೃಗಳು. ಭೌತವಾದವನ್ನು ಖಂಡತುಂಡವಾಗಿ ವಿರೋಧಿಸುವ ಜೈನ ದಾರ್ಶನಿಕ ವಾದಿದೇವ ಸೂರಿಯು ಉದ್ಭಟನನ್ನು ಬಹಳ ಗೌರವದಿಂದ ''ಜರದ್ವಿಜನ್ಮಾ ಮಹಾನುಭಾವ'' ಎಂದು ಉಲ್ಲೇಖಿಸುತ್ತಾನೆ. ಕೇವಲ ವಿಷಯಲೋಲುಪತೆಯ ಪ್ರತಿಪಾದಕರಾಗಿದ್ದರೆ ಚಾರ್ವಾಕರೇಕೆ ತರ್ಕ ಮತ್ತು ಪ್ರಮಾಣಶಾಸ್ತ್ರಗಳನ್ನು ಕುರಿತು ವಾದ ಮಾಡಬೇಕಾಗಿತ್ತು?

ಇದೆಲ್ಲಾ ಏನು ತೋರಿಸುತ್ತದೆ? ಚಾರ್ವಾಕರನ್ನು ಹಂಗಿಸುವಂತೆ ಅವರ ಮೇಲೆ ಮಾಡಲಾಗಿರುವ ಆಪಾದನೆಗಳು ತೀರಾ ಅವಿವೇಕದ ಪ್ರಚಾರದ ಮಾತುಗಳು, ಎಂದು. ಇಹದಲ್ಲಿಲ್ಲದ ಸುಖ ಬೇರಾವುದೂ ಇಲ್ಲವೆಂದು ಹೇಳಿದರೆ ಅವರು ಸುಖಲೋಲುಪರೆಂದು ತೀರ್ಮಾನಿಸುವುದು ಬಾಲಿಶವೆನಿಸುತ್ತದೆ. ಮೈಸೂರಿನ ಪ್ರೊಫೆಸರ್ ಎಂ. ಹಿರಿಯಣ್ಣನವರು ಸೂಚಿಸಿರುವಂತೆ ''ಯಾವಜ್ಜೀವೇತ್ ಸುಖಂ ಜೀವೇತ್'' ಎಂಬುದು ವೈದಿಕ ವಿಧಿಯಾದ ''ಯಾವಜ್ಜೀವಂ ಅಗ್ನಿಹೋತ್ರಂ ಜುಹೋತಿ'' (ಆಜೀವಪರ್ಯಂತ ಅಗ್ನಿಗೆ ಹವಿಸ್ಸನ್ನು ಅರ್ಪಿಸುತ್ತಾನೆ) ಎಂಬುದರ ಅಣಕ, ಅಷ್ಟೆ. ಮುಂದುವರಿದು ಹಿರಿಯಣ್ಣನವರು ಹೇಳಿರುವುದಿದು: ''ಪ್ರಾಚೀನ ಭಾರತದಲ್ಲಿ ಪ್ರಚಲಿತವಾಗಿದ್ದ ಮುಕ್ತ ಪರ್ಯಾಲೋಚನೆ ಮತ್ತು ಕಠಿಣವಾದ ವ್ರತಗಳ ವಿರುದ್ಧವಾಗಿಯೇ ಚಾರ್ವಾಕರ ತೀವ್ರ ವಾದಗಳು ಉಗಮವಾಗಿವೆಯೆಂದು ಭಾವಿಸಿದರೂ ಆ ಚಿಂತನೆಯು ಮೊದಲಿಗೆ ಆಕ್ಷೇಪಣೀಯವಾದ ನಿಯಮಗಳನ್ನು ಒಳಗೊಂಡಿತ್ತೆಂದು ಹೇಳುವುದು ತಪ್ಪಾಗುತ್ತದೆ. ಈಗ ಅದು ನಮಗೆ ಲಭ್ಯವಿರುವ ರೂಪದಲ್ಲಿ ಏನೋ ಕೊರತೆ ಇರುವುದು ಮೊದಲ ದೃಷ್ಟಿಗೇ ಗೋಚರವಾಗುತ್ತದೆ''.

ಚಾರ್ವಾಕರ ವಿರುದ್ಧವಾಗಿ ಮಾಡಲಾಗುವ ಒಂದು ಆಪಾದನೆ ಅವರು ಹೊಟ್ಟೆಬಾಕರು ಎಂಬುದು; ಇದು ಎಷ್ಟು ಮಿಥ್ಯಾಪವಾದವೆಂಬುದನ್ನು ಬೇರೊಂದು ರೀತಿಯಲ್ಲೂ ತೋರಿಸಬಹುದು. ಬೃಹಸ್ಪತಿ ಸೂತ್ರವೆಂಬ ಪುಟ್ಟ ಗ್ರಂಥ ಹಾಗೂ ಗುಣರತ್ನನಂತಹ ಲೇಖಕರು ಚಾರ್ವಾಕರ ಬಗ್ಗೆ ಹೇಳುವುದೇನು? ಮಾಂಸ ತಿನ್ನಿರೆಂದು ಜನಕ್ಕೆ ಹೇಳುತ್ತಿದ್ದರು ಮತ್ತು ಸ್ವತಃ ತಾವು ಹಾಗೆ ಮಾಡುತ್ತಿದ್ದರು, ಎಂದು. ಆದರೆ ಪದ್ಮಪುರಾಣದಲ್ಲಿ ಬರುವ ಒಂದು ವಿವರದ ಪ್ರಕಾರ ಚಾರ್ವಾಕರು ಮಾಂಸ ತಿನ್ನುವವರನ್ನು ಹಾಗೂ ಮದ್ಯ ಸೇವಿಸುವವರನ್ನು ಖಂಡಿಸುತ್ತಿದ್ದರು. ವೈದಿಕ

*ಶೂನ್ಯದಿಂದ 'ವಸ್ತು'ಗಳನ್ನು ಸೃಷ್ಟಿಸುತ್ತೇವೆಂದು ಹೇಳಿಕೊಳ್ಳುವ ದೇವಮಾನವರು ಈವರೆಗೆ ಸೃಷ್ಟಿಸಿರುವುದು ಈ ಜಗತ್ತಿನಲ್ಲಿರುವುದನ್ನೇ. ತಮ್ಮ ಶರೀರದಲ್ಲಿ ಅಡಗಿಸಿಕೊಳ್ಳಲಾಗುವಂಥ ವಸ್ತುಗಳನ್ನು ಮಾತ್ರ. ಮಿಕ್ಕದ್ದನ್ನು ಅವರು ಖಾಲಿ ಪಾತ್ರೆಗಳಿಂದ, ಪೆಟ್ಟಿಗೆಗಳಿಂದ ತೆಗೆದು 'ಆಟ' ತೋರಿಸುತ್ತಾರೆ. ಇನ್ನು ಕೆಲವನ್ನು ಬಟ್ಟೆಯಿಡಿಯಿಂದ, ಮಣ್ಣು ಅಥವಾ ಮರಳಿನಿಂದ ತೆಗೆದು ತೋರಿಸುತ್ತಾರೆ. ಅವರೆಲ್ಲಾ ವಿಜ್ಞಾನದ ಫಲಶ್ರುತಿಯನ್ನು ಬಳಸಿಕೊಳ್ಳುತ್ತಿದ್ದಾರಾದರೂ ಯಾರೊಬ್ಬರೂ ಗುಂಡುಸೂಜಿಯಿಂದ ಹಿಡಿದು ಬಾಹ್ಯಾಕಾಶ ನೌಕೆಯವರೆಗೆ ಯಾವುದೇ ವಸ್ತುವನ್ನು ಸೃಷ್ಟಿಸಿಲ್ಲ.*

*-ಬಿ. ಪ್ರೇಮಾನಂದ*
*(ವಿಜ್ಞಾನ ಮತ್ತು ಪವಾಡ)*

ದೇವತೆಗಳು ವಿವಾಹಿತರೆಂಬುದೂ ಚಾರ್ವಾಕರಿಗೆ ಅಹಿತವೆಂದು ಕಾಣಿಸುತ್ತಿತ್ತಂತೆ (ಸೃಷ್ಟಿಖಂಡ, ಅಧ್ಯಾಯ ೧೮). ಸರ್ವದರ್ಶನಸಂಗ್ರಹದಲ್ಲಿ ಬರುವ ಒಂದು ಮಾತಿನಲ್ಲೂ ಸಹ ಚಾರ್ವಾಕರು ಮಾಂಸಭಕ್ಷಣೆಯು ರಾಕ್ಷಸ ಪ್ರೇರಣೆಯ ಪರಿಣಾಮವೆಂದು ಟೀಕಿಸಿರುವುದು ಕಂಡುಬರುತ್ತದೆ (ಮಾಂಸಾನಾಂ ಖಾದನಂ ತದ್ವತ್ ನಿಶಾಚರಸಮೀರಿತಮ್).

ಇಂತಹ ವೈರುಧ್ಯಗಳಿರುವಾಗ ಚಾರ್ವಾಕರ ಬಗ್ಗೆ ಏನು ತೀರ್ಮಾನ ಕೈಗೊಳ್ಳಬೇಕು? ಕೆಲವರು ಮಾಂಸಾಹಾರಿಗಳಾಗಿದ್ದರು, ಇನ್ನು ಕೆಲವರು ಅದರ ವಿರೋಧವಾಗಿದ್ದರು ಎಂದೆ? ಕೆಲವರು ಕಾಪಾಲಿಕರಂತೆ ಲೈಂಗಿಕತೆಯನ್ನು ಆಚರಿಸುತ್ತಿದ್ದರು, ಇನ್ನು ಕೆಲವರು ಲೈಂಗಿಕತೆಗೆ ವಿಮುಖರಾಗಿದ್ದರು ಎಂದೆ? ಈ ರೀತಿಯ ತೀರ್ಮಾನಗಳಿಗೆ ನುಗ್ಗದಿರುವುದೇ ಕ್ಷೇಮವೆಂದು ತೋರುತ್ತದೆ. ಚಾರ್ವಾಕರ ವಿರೋಧಿಗಳು ಅವರ ಅಭಿಪ್ರಾಯಗಳ ಕಲಸು ಮೇಲೋಗರ ಮಾಡಿಟ್ಟರೆಂಬುದು ನಿಜವಾದ ಸಂಗತಿ. ಎಲ್ಲ ಅವೈದಿಕ ಸಂಪ್ರದಾಯಗಳಿಗೂ ಇದೇ ಶಾಸ್ತಿ ಆಯಿತೆಂಬುದು ಗಮನಾರ್ಹವಾಗಿದೆ. ಅವರನ್ನು ತೃಣಸಮಾನ ಮಾಡಲು ಇದೊಂದು ತಂತ್ರ, ಅಷ್ಟೆ.

''ಭೌತವಾದ'' ಎಂಬುದಕ್ಕೆ ಎರಡರ್ಥಗಳಿವೆ : ಒಂದು, ತತ್ತ್ವಶಾಸ್ತ್ರದ ಅರ್ಥ; ಇನ್ನೊಂದು, ಜನಪ್ರಿಯಗೊಳಿಸಲಾದ ಅರ್ಥ. ಭೌತವಾದಿ ದಾರ್ಶನಿಕರಿಗೂ ಸಾಮಾನ್ಯಾರ್ಥದ ಭೌತವಾದಿಗಳಿಗೂ ವ್ಯತ್ಯಾಸವಿಲ್ಲವೆಂಬಂತೆ ತೋರ್ಪಡಿಸಿ ಇಬ್ಬರನ್ನೂ ಸುಖಲೋಲುಪರನ್ನಾಗಿ ಚಿತ್ರಿಸಿದ್ದು ಒಂದು ವ್ಯಂಗ್ಯ. ಭಾವನಾವಾದಿಗಳಾದರೋ ಬಹಳ ಉಚ್ಚಸ್ವಭಾವದವರೆಂಬ ಕಲ್ಪನೆಯೂ ಇದರೊಟ್ಟಿಗೆ ಪ್ರಚಾರಕ್ಕೆ ಬಂದಿದೆ. ಭಾವನಾವಾದಿಗಳಿಗೂ ಆದರ್ಶವಾದಿಗಳಿಗೂ ವ್ಯತ್ಯಾಸವಿಲ್ಲವೆಂಬಂತೆ ಚಿತ್ರಿಸುವುದು ಎಷ್ಟು ತಪ್ಪೋ, ಭೌತವಾದಿ ದಾರ್ಶನಿಕನಿಗೂ ಜನಪ್ರಿಯ ಸುಖಬೋಧಕನಿಗೂ ವ್ಯತ್ಯಾಸವಿಲ್ಲವೆಂದು ಬಗೆಯುವುದು ಅಷ್ಟೇ ತಪ್ಪು. ವಿದ್ವಾಂಸರು ಕೂಡ ಇದನ್ನು ಗಮನಿಸದಿರುವುದರಿಂದ ಭೌತವಾದಿಗಳೆಂದರೆ ವಿಷಯಲಂಪಟರೆಂಬ ಮೂರ್ಖತನದ ಅಪಪ್ರಚಾರವು ಜನಸಾಮಾನ್ಯರ ಮನಸ್ಸಿನಲ್ಲಿ ಹೇಗೋ ತಳವೂರಿಬಿಟ್ಟಿದೆ.

ಚಾರ್ವಾಕರ ಮತವೆಂದು ಇನ್ನೊಂದಂಶವನ್ನು ಮುಂದಿಡಲಾಗುತ್ತದೆ. ಅದು ಕಾಮವೊಂದೇ ಪುರುಷಾರ್ಥವೆಂಬ ಮಾತು (ಕಾಮ ಏವ ಏಕಃ ಪುರುಷಾರ್ಥಃ). ಗುಣರತ್ನನ ಪ್ರಕಾರ ಚಾರ್ವಾಕರಿಗೆ ಕಾಮವನ್ನು ಬಿಟ್ಟು ಬೇರೆ ಧರ್ಮವಾವುದೂ ಮಾನ್ಯವಲ್ಲ (ಧರ್ಮಂ ಕಾಮಾತ್ ಅಪರಂ ನ ಮನ್ಯತೇ). ಕೃಷ್ಣಮಿಶ್ರನ **ಪ್ರಬೋಧಚಂದ್ರೋದಯ**ದಲ್ಲಿ ಚಾರ್ವಾಕರು ಕಾಮ ಮತ್ತು ಅರ್ಥ ಎಂಬ ಎರಡು ಪುರುಷಾರ್ಥಗಳನ್ನು ಒಪ್ಪುತ್ತಾರೆಂದು ಚಿತ್ರಿಸಲಾಗಿದೆ. ಈ ವ್ಯತ್ಯಾಸವನ್ನು ಹೇಗೆ ಅರ್ಥೈಸಬೇಕು? ಲೋಕಾಯತ ಪರಂಪರೆಯ ಎರಡು ಕವಲುಗಳನ್ನು ಇದು ಪ್ರತಿನಿಧಿಸುತ್ತದೆ ಎನ್ನೋಣವೆ? ವಾರ್ಡರ್ ಎಂಬುವನ ಪ್ರಕಾರ, ಹೌದು. ಇಲ್ಲವಾದರೆ, ಅರ್ಥವು ಕಾಮದ ಪೂರ್ತೈಕೆಗೆ ಸಾಧನವೆಂದು ಹೇಳಬೇಕಾದೀತು. ನಿಜವಾಗಿ ನೋಡಿದರೆ, ಚಾರ್ವಾಕರು ಪುರುಷಾರ್ಥಗಳ ಬಗ್ಗೆ ಯಾವ ನಿಲುವನ್ನು ತಳೆದಿದ್ದರೆಂಬುದನ್ನು ನಮ್ಮ ಗ್ರಂಥಗಳು ಪ್ರಾಮಾಣಿಕವಾಗಿ ದಾಖಲಿಸಿಯೇ ಇಲ್ಲ. ಮೊಟ್ಟಮೊದಲು, ಚಾರ್ವಾಕರು ವೈದಿಕ ಸಂಪ್ರದಾಯವಾದಿಗಳಂತೆ ಪುರುಷಾರ್ಥಗಳು ನಾಲ್ಕು ಎಂಬ ಧಾಟಿಯಲ್ಲಿ ಮಾತನಾಡುತ್ತಿದ್ದರೇ ಎಂಬುದೇ ಸಂಶಯಾಸ್ಪದವಾಗಿದೆ. ವೈದಿಕ ಉಡುಗೆಯನ್ನು ಚಾರ್ವಾಕರಿಗೆ ತೊಡಿಸಹೊರಡುವುದೇ ಶುದ್ಧ ಅವಿವೇಕ.

ಸಾಯಣ-ಮಾಧವನು ಚಾರ್ವಾಕ ದರ್ಶನದ ಬಗ್ಗೆ ಹೇಳಿರುವುದನ್ನೇ ನೋಡಿ: ಅವನ ಪ್ರಕಾರ ಅರ್ಥ-ಕಾಮಗಳು ಚಾರ್ವಾಕರ ಪುರುಷಾರ್ಥಗಳು (ಅರ್ಥಕಾಮೌ ಏವ ಪುರುಷಾರ್ಥಮನ್ಯಮಾನಾಃ). ಮೊದಲು ಇದನ್ನು ಹೇಳಿ ಆಮೇಲೆ ಹೇಳಿರುವುದೇನು? ''ಸ್ತ್ರೀಯ ಆಲಿಂಗನದಿಂದ ಲಭಿಸುವ ಸುಖವೊಂದೇ ಪುರುಷನ ಅಂತಿಮಸುಖ'' (ಅಂಗನಾ ಆಲಿಂಗನಾತ್ ಜನ್ಯ ಸುಖಮೇವ ಪುಮರ್ಥತಾ). ಒಬ್ಬನೇ ಕರ್ತೃ, ಒಂದೇ ಕೃತಿಯಲ್ಲಿ ಹೀಗೆ ಚಾರ್ವಾಕ ದರ್ಶನದ ಬಗ್ಗೆ ಭಿನ್ನಭಿನ್ನವಾಗಿ ಪ್ರತಿಪಾದಿಸುವುದರ ಸಂಚೇನು?

ಇನ್ನೊಂದು ಸ್ವಾರಸ್ಯವನ್ನು ಗಮನಿಸಿ: ವೈದಿಕ ಮತ್ತು ಜೈನ ಸಂಪ್ರದಾಯಗಳ ದಾರ್ಶನಿಕರು ಚಾರ್ವಾಕರ ಬಗ್ಗೆ ಹೀಗೆಲ್ಲಾ ವೈರುಧ್ಯಗಳಿಂದ ಕೂಡಿದ ದೂಷಣೆಗಳನ್ನು ಮಾಡುವಂತೆ ಬೌದ್ಧ ದಾರ್ಶನಿಕರು ಎಲ್ಲೂ ಮಾಡಿಲ್ಲ. ಚಾರ್ವಾಕರು ನಂಬಿದರೆನ್ನಲಾದ ಪುರುಷಾರ್ಥ ಅಥವಾ ಅಪವರ್ಗದ ಮಾತೇ ಬೌದ್ಧ ದರ್ಶನದ ಗ್ರಂಥಗಳಲ್ಲಿ ಎಲ್ಲೂ ಪ್ರಸ್ತಾಪಕ್ಕೆ ಬಂದಿಲ್ಲ. ಅವರೂ ಚಾರ್ವಾಕರ ವಿರೋಧಿಗಳೇ ಆದರೂ ಬೌದ್ಧ ದಾರ್ಶನಿಕರು ಚಾರ್ವಾಕರ ತಥಾಕಥಿತ ಪುರುಷಾರ್ಥಗಳ ಬಗ್ಗೆ ಏನೂ ಹೇಳದಿರುವುದು ಚಾರ್ವಾಕರು ಆ ಬಗ್ಗೆ ವೈದಿಕರಂತೆ ಪ್ರತಿಪಾದಿಸಿಲ್ಲದಿರುವುದರ ಸೂಚನೆ.

ಒಟ್ಟಿನಲ್ಲಿ ಹೇಳುವುದಾದರೆ ಚಾರ್ವಾಕ ದರ್ಶನವು ಇಹದ ತತ್ತ್ವಶಾಸ್ತ್ರ; ಪರದ ಚಿಂತೆ ಅದಕ್ಕಿಲ್ಲ. ಇಹದ ಚಿಂತನೆ ಮಾಡುವಾಗ ಸಹಜವಾಗಿಯೇ ತರ್ಕ, ಪ್ರಮಾಣ, ಸತ್ತ್ವ, ನೈತಿಕತೆ, ಇತ್ಯಾದಿಗಳ ಬಗ್ಗೆ ಅವರು ನಿರ್ದಿಷ್ಟವಾದ ನಿಲುವುಗಳನ್ನು ಪ್ರಕಟಿಸಿದ್ದಾರೆ. ದೈವಶ್ರದ್ಧೆ, ಕರ್ಮವಿಪಾಕ, ನಿಸರ್ಗಾತೀತವಾದ ದೈವೀ ಪ್ರತೀಕಾರ, ಪುನರ್ಜನ್ಮ, ಇತ್ಯಾದಿಗಳಿಗೆ ಆ ದರ್ಶನದಲ್ಲಿ ಸ್ಥಾನವಿಲ್ಲವೆಂದಾಕ್ಷಣ ಅದು ಅನೈತಿಕವಾದ್ದು, ಲಂಪಟತನ ಬೋಧಿಸುವಂಥದು ಎಂದು ಜರಿಯುವುದು ಅತಾರ್ಕಿಕವಾಗುತ್ತದೆ. ತತ್ತ್ವಶಾಸ್ತ್ರ ಚಿಂತನೆಯ ಶಿಸ್ತಿಗೆ ಇದು ಹೊರತಾದ ಪದ್ಧತಿ. ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ಸುಖಲೋಲುಪತೆಯ ಚಿತ್ರಣವಿದೆ. ಅಂತಹ ಚಿತ್ರಣವು ಚಾರ್ವಾಕರಿಗೆ ಅನ್ವಯವಾಗುವಂಥದೆಂದು ಹೇಳಲು ನಮ್ಮ ದಾರ್ಶನಿಕ ಪರಂಪರೆಯಲ್ಲಿ ಯಾವೊಂದು ಅಂಗೀಕಾರಾರ್ಹವಾದ ಪುರಾವೆಯೂ ಇಲ್ಲ.

ಪ್ರೊ॥ ರಾಮಕೃಷ್ಣ ಭಟ್ಟಾಚಾರ್ಯ
೩. ಮೋಹನಲಾಲ್ ರಸ್ತೆ, ಕಲ್ಕತಾ - ೭೦೦ ೦೨೪

---

*(ಪುಟ ೨೩೫ರಿಂದ ಮುಂದುವರೆದಿದೆ)*

ಬಾಲಗಂಧರ್ವರಂಥ ಪುರುಷರು ಸ್ತ್ರೀ ವೇಷ ಹಾಕಿದ್ದರಿಂದ ಆತನಿಗೆ ಇದು ಅಪಮಾನದ ಸಂಗತಿ ಆಗಿರಲಾರದು. ಇದೇ ರೀತಿ ಖಾಡಿಲ್ಕರ್ ಅವರ 'ಸ್ವಯಂವರ' ನಾಟಕದ ರುಕ್ಮಿಣಿ, ದ್ರೌಪದಿಯರ ಪಾತ್ರಗಳೂ ಚಿತ್ರಿತವಾಗಿವೆ.....'' ಎನ್ನುತ್ತಾರೆ. ಇಂಥ ಪಾತ್ರಗಳನ್ನು ಅಭಿನಯಿಸುವುದಿಲ್ಲ ಎನ್ನುವ ಧೈರ್ಯ ಬೇಕು ಎಂದೂ ಹೇಳುತ್ತಾರೆ. ಈಗಾಗಲೇ ಪ್ರಸ್ತಾಪಿಸಿರುವ ಕನಕಲಕ್ಷ್ಮ್ಮನವರು ಕೂಡಾ ನಾಟಕ ರಚನೆ ಕುರಿತು ಕೆಲವು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದೇವರುಗಳನ್ನೇ ರಂಗಭೂಮಿಯಲ್ಲಿ ವೈಭವಿಸಿ ತೋರಿಸಿದ ಬಗ್ಗೆ ಆಕ್ಷೇಪಿಸುತ್ತಾರೆ ಮತ್ತು ರಾಮನ ಗುಣಗಳನ್ನು ಹೊಗಳುವ ಕಾರಣಕ್ಕಾಗಿ ವೈಭವಿಸುವುದರಿಂದಾಗಿ ರಾವಣನ ಗುಣ ಪ್ರಶಂಸೆಗೆ ದಾರಿಯೇ ಮುಚ್ಚಿಹೋಯಿತು ಎನ್ನುತ್ತಾರೆ. ''....ರಾವಣನ ಅಗಾಧ ಪ್ರಣಯ, ಪರಾಕ್ರಮ, ತನ್ನ ಇಷ್ಟ ಸಿದ್ಧಿಗಾಗಿ ಪ್ರಾಣಗಳನ್ನು ತೃಣಮಾತ್ರವನ್ನಾಗಿ ಕಾಣುವ ಸಂಕಲ್ಪ ಶಕ್ತಿ, ಅವನ ನೈಜವಾದ ದೈವಭಕ್ತಿ ಇವುಗಳನ್ನು ಚಿತ್ರಿಸುವುದಕ್ಕೇ ಆಸ್ಪದವಿಲ್ಲ. ರಾವಣನು ಕ್ರೂರನೂ ಮದಾಂಧನೂ ಎಂದು ಹೇಳುವುದನ್ನು ಮಾತ್ರ ನೋಡಿಯಾಯಿತು....'' ಎನ್ನುತ್ತಾರೆ.

ಇದು ಹೇಳಿದಷ್ಟೂ ಮುಗಿಯದ ಕಥೆ. ಮುಖ್ಯವಾಗಿ ಇದು ರಂಗಭೂಮಿಯಲ್ಲಿ ಸ್ತ್ರೀಯರನ್ನು 'ಬಳಸಿ'ದ ವೈಖರಿ. ರಂಗಪ್ರಿಯರು, ರಂಗಾಸಕ್ತರು, ರಂಗಭೂಮಿಯ ಹಿತೈಷಿಗಳು ಕಾಲಕಾಲಕ್ಕೆ ಸಿದ್ಧಾಂತವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಿ ವ್ಯಾಖ್ಯಾನಿಸುತ್ತ, ಇದೇ ಸ್ತ್ರೀ ಸಮುದಾಯದ ಅರಳುವ, ಅರಳಿಸುವ ಮನಸ್ಸನ್ನೇ ಕೊಂದರು. ಯಾರು ಕೊಟ್ಟರು ಇವರಿಗೆ ಈ ಅಧಿಕಾರವನ್ನು ?

*(ಈ ಲೇಖನ ಸಿದ್ಧಪಡಿಸುವಾಗ ಬಳಸಿಕೊಂಡಿರುವ ಮಾಹಿತಿಯನ್ನು ಒದಗಿಸಿದ್ದ ಗಿರೀಶ್ ಕಾರ್ನಾಡರಿಗೆ ಕೃತಜ್ಞತೆಗಳು. ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲೀ ಮತ್ತು ಭಾರದ್ವಾಜರು ಸಂಪಾದಿಸುತ್ತಿದ್ದ 'ರಂಗಭೂಮಿ' ಪತ್ರಿಕೆಗಳ ಸೌಜನ್ಯದಿಂದ)*

ಡಾ॥ ವಿಜಯಾ
ನಂ ೮, ೨೫ನೇ ಮುಖ್ಯ ರಸ್ತೆ, ಮುನೇಶ್ವರ ಬ್ಲಾಕ್
ಗಿರಿ ನಗರ, ಬೆಂಗಳೂರು - ೫೬೦ ೦೮೫




# ಸ್ವರ್ಗದ ಕಲ್ಪನೆಗೆ ಬೇರೊಂದು ಆಯಾಮ

ಡಾ|| ಬಿ. ಎಂ. ಪುಟ್ಟಯ್ಯ

*ಕಳೆದ ದಶಕದಲ್ಲಿ ಜಾನಪದ, ಬುಡಕಟ್ಟು ಮತ್ತು ಕೆಳಸಮುದಾಯಗಳನ್ನು ಕುರಿತ ಅಧ್ಯಯನಗಳಿಗೆ ವಿಶೇಷವಾದ ಚಾಲನೆ ಒದಗಿದೆ. ಈ ಚಾಲನೆಯೊಳಗೆ ಒಂದು ಬಗೆಯ ವ್ಯಾಮೋಹಪೂರಿತ ಆಸಕ್ತಿ ಅಡಗಿದೆ. ತಾತ್ವಿಕ ಎಚ್ಚರಿಕೆಯಿಂದ ಕೆಲವರು ಆಸಕ್ತಿ ತೋರಿದರೆ, ಮತ್ತೆ ಕೆಲವರು ಅತಿ ಮುಗ್ಧ ಬೆರಗಿನಿಂದ ಆಸಕ್ತಿಯನ್ನು ಪ್ರಕಟಿಸಿದ್ದಾರೆ. ಇದಲ್ಲದೆ ಸಾಮ್ರಾಜ್ಯಶಾಹಿ ಹಿತಾಸಕ್ತಿಯ ಅಕಡೆಮಿಕ್ ವಲಯವೂ ಇದರಲ್ಲಿ ಯಜಮಾನಿಕೆಯಿಂದ ಮತ್ತು ಸಂಭ್ರಮದಿಂದ ಕ್ರಿಯಾಶೀಲವಾಗಿದೆ. ಈ ಹಿನ್ನೆಲೆಯಲ್ಲಿ ಕೆಳ ಸಮುದಾಯಗಳ ಸಾವಿನಾಚರಣೆಯನ್ನು ವಿವರಿಸುವುದು ಮತ್ತು ಅಲ್ಲಿ ನಿಷ್ಪನ್ನಗೊಳ್ಳುವ ಆಲೋಚನೆಗಳನ್ನು ತಾತ್ವಿಕವಾಗಿ ಮಂಡಿಸುವುದು ಈ ಲೇಖನದ ಉದ್ದೇಶ.*

ಕೆಳ ಸಮುದಾಯಗಳ ಅಧ್ಯಯನಕ್ಕಾಗಿ ಕುತೂಹಲಭರಿತ ನುಗ್ಗಾಟ ಮತ್ತು ದಿಢೀರ್ ಧಾಳಿಯಂತಹ ಪರಿಸ್ಥಿತಿ ಇಂದು ನಮ್ಮ ಮಧ್ಯೆ ನಿರ್ಮಾಣವಾಗಿದೆ. 'ಅಧ್ಯಯನದ ದೃಷ್ಟಿಯಿಂದ ನಿರ್ಲಕ್ಷ್ಯಕ್ಕೆ ಒಳಗಾಗಿತ್ತು' ಎಂಬ ಒಂದೇ ಕಾರಣವನ್ನು 'ವರ'ವೆಂಬಂತೆ ಪರಿಗಣಿಸಲಾಗಿದೆ. 'ನಿರ್ಲಕ್ಷ್ಯ ವಲಯ'ವನ್ನು ಬರಹದಲ್ಲಿ ದಾಖಲುಗೊಳಿಸುವುದನ್ನೇ ಒಂದು ಗುಣಾತ್ಮಕ ಮೌಲ್ಯವಾಗಿ ವೈಭವೀಕರಿಸಲಾಗಿದೆ. ಚಿತ್ರಕಲೆ, ಚಲನಚಿತ್ರ ಮತ್ತು ಸಂಗೀತ ಮುಂತಾದ ಕ್ಷೇತ್ರಗಳಲ್ಲೂ ಇದಕ್ಕೆ ಪೂರಕವಾದ ಲಕ್ಷಣಗಳೇ ಕಾಣುತ್ತಿವೆ. ರಾಜಕೀಯ ವಲಯದಲ್ಲಿ ಹಿಂದುಳಿದ, ಕೆಳಜಾತಿ ಮತ್ತು ಮಹಿಳೆಯರನ್ನು ಮೀಸಲಾತಿ ಆಧಾರದ ಮೇಲೆ ಆರಿಸುವ ಪದ್ಧತಿ ಒಂದು ಹಂತದಲ್ಲಿ ಜಾರಿಗೆ ಬಂದಿದೆ. ಈ ಎಲ್ಲಾ ಪ್ರಕ್ರಿಯೆಗಳ ಒಂದು ಸಾಮಾನ್ಯ ಪರಿಣಾಮವೆಂದರೆ, 'ನಿರ್ಲಕ್ಷ್ಯಕ್ಕೆ ಒಳಗಾಗಿತ್ತು' ಎಂಬುದೇ ತನ್ನ ಪ್ರಧಾನ ಲಕ್ಷಣಗಳನ್ನು ಕಳಚಿಕೊಂಡು 'ಜನಪ್ರಿಯತೆ'ಯ ಸ್ವರೂಪವನ್ನು ಪಡೆದಿರುವುದು. ಹಾಗಾಗಿ ಜಾನಪದ, ಬುಡಕಟ್ಟು ಮತ್ತು ಕೆಳ ಸಮುದಾಯಗಳ ಬದುಕಿನ ವಿವರಗಳನ್ನು - ಮಾಹಿತಿಗಳನ್ನು ದಾಖಲಿಸುವುದೆಂದರೆ ಅವನ್ನು ಜನಪ್ರಿಯಗೊಳಿಸುವ ಕ್ರಿಯೆಯೇ ಆಗಿದೆ. ಹೀಗೆ ಜನಪ್ರಿಯಗೊಳ್ಳುವ ಪ್ರಕ್ರಿಯೆಯಲ್ಲಿ ಘಟಿಸುವ ಸೈದ್ಧಾಂತಿಕ ಅಪಾಯಗಳ ಬಗ್ಗೆ ನಮಗಿನ್ನೂ ಯಾವುದೇ ಎಚ್ಚರಿಕೆ ಮೂಡಿಲ್ಲ. ಈ ಅಪಾಯದ ಪ್ರಧಾನ ಲಕ್ಷಣವೆಂದರೆ ಸ್ಥಾಪಿತ ನುಡಿಗಟ್ಟುಗಳು ಮತ್ತು ಧೋರಣೆಗಳು ಯಜಮಾನಿಕೆಯಿಂದ ಮೇಲುಗೈ ಪಡೆಯುವುದಾಗಿದೆ. ಈ ಅಪಾಯದಿಂದ ಪಾರಾಗಲು ಕೆಳ ಸಮುದಾಯಗಳ ವಿವಿಧ ಆಚರಣೆಗಳ ಗರ್ಭದಲ್ಲಿ ಅಡಗಿರುವ ಚಿಂತನ ಕ್ರಮಗಳ ನಾಡಿಮಿಡಿತಗಳನ್ನು ಗುರುತಿಸಬೇಕಾಗಿದೆ. ಜೊತೆಗೆ ಅಕಡೆಮಿಕ್ ವಲಯದಲ್ಲಿ ಜಾರಿಗೊಳ್ಳುತ್ತಿರುವ ಸೈದ್ಧಾಂತಿಕ ಹಿನ್ನೆಲೆಯ ಸಂಚುಗಳನ್ನು ಬಯಲುಗೊಳಿಸಬೇಕಾಗಿದೆ. ಯಾಕೆಂದರೆ, ಸಾಮ್ರಾಜ್ಯಶಾಹಿಯ ಜಾಗತೀಕರಣ ಪ್ರಕ್ರಿಯೆಯು ವಿವಿಧ ಜನವರ್ಗಗಳ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನುಂಟುಮಾಡಿದೆ. ನಿರ್ದಿಷ್ಟವಾಗಿ ಶೈಕ್ಷಣಿಕ ಮತ್ತು ಸೈದ್ಧಾಂತಿಕ ವಲಯದಲ್ಲಿ ಸಾಮ್ರಾಜ್ಯಶಾಹಿ ಹಿತಾಸಕ್ತಿಯ ಆಲೋಚನೆಗಳು ಉನ್ನತ ಹಂತದಲ್ಲಿ ಜಾರಿಯಾಗುತ್ತಿವೆ. ಹೀಗೆ ಜಾರಿಯಾಗುತ್ತಿರುವ ಬಹುಮುಖೀ ಚಹರೆಗಳನ್ನು ಗುರುತಿಸುವ, ಅನುಮಾನಿಸುವ ಮತ್ತು ಪ್ರಶ್ನಿಸುವ ಗಂಭೀರತೆ ಇನ್ನೂ ದಟ್ಟವಾಗಿ ಮೂಡಿಲ್ಲ, ಅಥವಾ ಅವನ್ನು 'ವರ'ವೆಂತಲೂ ಪರಿಗಣಿಸುವ ರೂಢಿ ಇದೆ. ಇಂಥ ಸಂಕೀರ್ಣ ಪರಿಸ್ಥಿತಿಯಲ್ಲಿ ಕೆಳಸಮುದಾಯಗಳ ಸಾವಿನಾಚರಣೆಯನ್ನು ಕುರಿತು ಇಲ್ಲಿ ಚರ್ಚಿಸಲಾಗುವುದು.

'ಸಾವು'- ಎಂಬುದು ಅಂಜಿಕೆ, ಅಳುಕು, ಭಯ, ಕುತೂಹಲ, ಕಲ್ಪನೆ, ಊಹೆ ಹೀಗೆ ಏನೇನನ್ನೋ ಉಂಟುಮಾಡುತ್ತದೆ. ಅಥವಾ ಸಾವು ಉಂಟುಮಾಡಬಹುದಾದ ಸಂಕೀರ್ಣ ಭಾವನೆಗಳನ್ನು, ತುಡಿತಗಳನ್ನು ಮತ್ತು ಮಾನಸಿಕ ಸ್ಥಿತಿಯ ಪ್ರತಿಕ್ರಿಯೆಗಳನ್ನು ಸರಳೀಕರಿಸಿ ಗುರುತಿಸುವುದೂ ಕೆಲವೊಮ್ಮೆ ಕಷ್ಟವಾಗಬಹುದು. ಸಾವು ಎಂದರೇನು ? ಸಾವು ಹೇಗೆ ಸಂಭವಿಸುತ್ತದೆ ? ಸತ್ತ ನಂತರ ಏನು ? ಹೀಗೆ ಹತ್ತು ಹಲವು ಪ್ರಶ್ನೆಗಳು ಒಂದರ ಮೇಲೊಂದು ಏಳುತ್ತವೆ. ಇದಕ್ಕೆ ಸಂಬಂಧಪಟ್ಟ ಉತ್ತರವನ್ನು ಅಥವಾ ವಿವರಣೆ-ವಿಶ್ಲೇಷಣೆಯನ್ನು ಶುದ್ಧ ವಿಜ್ಞಾನದ ಶಾಖೆಯೂ ನೀಡಿಲ್ಲ. ಸಾವಿಗೆ ಸಂಬಂಧಪಟ್ಟ ಹಲವು ಪ್ರಶ್ನೆಗಳು ಪ್ರಧಾನವಾದ ಎರಡು ನೆಲೆಗಳಲ್ಲಿ ಬಿಚ್ಚಿಕೊಳ್ಳುತ್ತವೆ. ಒಂದು : ಜೈವಿಕ ಸಂಬಂಧಿ ನೆಲೆ, ಮತ್ತೊಂದು, ಸಾಮಾಜಿಕ ಸಂಬಂಧಿ ನೆಲೆ. ಜೈವಿಕ ಸಂಬಂಧಿ ಆಯಾಮವು ವ್ಯಕ್ತಿಗತ ನೆಲೆಯಲ್ಲಿ ಪ್ರಯೋಗಾಲಯದ ಫಲಿತಾಂಶವನ್ನು ನಿರೀಕ್ಷಿಸುತ್ತದೆ. ಸಾಮಾಜಿಕ ಸಂಬಂಧಿ ಆಯಾಮವು ಸಾಮುದಾಯಿಕ ನೆಲೆಯಲ್ಲಿ ಜನಸಮುದಾಯಗಳು ಹೊಂದಿರುವ ನಂಬಿಕೆಗಳ ಮತ್ತು ಆಚರಣೆಗಳ ಸಂಕೀರ್ಣ ಜಗತ್ತನ್ನು ಅಪೇಕ್ಷಿಸುತ್ತದೆ. ಪ್ರಸ್ತುತ ಈ ಲೇಖನದಲ್ಲಿ ಎರಡನೇ ನೆಲೆಯನ್ನು ಕುರಿತು ಚರ್ಚಿಸಲಾಗುವುದು.

ಸಾವು ಒಬ್ಬ ವ್ಯಕ್ತಿಯ ಜೈವಿಕ ಸಂಬಂಧಿ ಸ್ಥಿತಿಯಲ್ಲಿ ಘಟಿಸುತ್ತದೆ. ತಕ್ಷಣ ಇದಕ್ಕೆ ಪ್ರತಿಕ್ರಿಯಿಸುವ ಪ್ರಕ್ರಿಯಾತ್ಮಕ ಪರಿಸ್ಥಿತಿಯು ಕೌಟುಂಬಿಕ ಮತ್ತು ಸಾಮುದಾಯಿಕ ಜಗತ್ತಾಗಿ ಪರಿವರ್ತನೆಯಾಗುತ್ತದೆ. ಹಾಗಾಗಿ ಸಾವಿನ ಸುತ್ತ ಇರುವ ನಂಬಿಕೆಗಳು, ಆಚರಣೆಗಳು ಮತ್ತು ನಿಷೇಧಗಳು ಸಮುದಾಯಗಳ ಬದುಕಿನಲ್ಲಿ ಅಡಗಿವೆ. ಸಮುದಾಯಗಳ ಸಾವಿನಾಚರಣೆಯನ್ನು ಕುರಿತು ಆಲೋಚಿಸುವುದೆಂದರೆ, ಮತ್ತೊಂದು ರೀತಿಯಲ್ಲಿ ಅವರ ಬದುಕನ್ನು ಮತ್ತು ಬದುಕಿನೊಳಗೆ ಅಡಗಿರುವ ಆಲೋಚನಾ ಕ್ರಮಗಳನ್ನು ಗುರುತಿಸುವುದೆಂದೇ ಅರ್ಥ. ಈ ಹಿನ್ನೆಲೆಯಲ್ಲಿ ಕೆಳಸಮುದಾಯಗಳಲ್ಲಿ 'ಸತ್ತ ನಂತರ ಏನು ?' ಎಂಬ ಬಗ್ಗೆ ಇರುವ ನಂಬಿಕೆ ಮತ್ತು ಆಚರಣೆಗಳನ್ನು ಇಲ್ಲಿ ಪರಿಶೀಲಿಸಲಾಗುವುದು.

'ಸತ್ತವರು ಮುಂದೇನಾಗುತ್ತಾರೆ ?' ಇದು ಅತ್ಯಂತ ಸಹಜವಾದ ಮತ್ತು ಕುತೂಹಲದ ಪ್ರಶ್ನೆ. ಸತ್ತವರು ಮುಂದೆ ಏನಾಗುತ್ತಾರೆ ಎಂಬುದಕ್ಕೆ ಸಮುದಾಯಗಳು ಮತ್ತು ಸಮಾಜ ಅನೇಕ ಬಗೆಯ ನಂಬಿಕೆಗಳನ್ನು ಹೊಂದಿವೆ. ಅವುಗಳನ್ನು ಹೀಗೆ ಗುರುತಿಸಬಹುದು :

★ ಸತ್ತವರು ಯಾರಿಗೂ ಕಾಣದಂತೆ ಆಕಾಶಕ್ಕೆ ಹೋಗುತ್ತಾರೆ.

★ ಸತ್ತವರು ಕೈಲಾಸಕ್ಕೆ/ವೈಕುಂಠಕ್ಕೆ ಹೋಗುತ್ತಾರೆ.

★ ಸತ್ತವರು ಯಮಲೋಕಕ್ಕೆ ಹೋಗುತ್ತಾರೆ.

★ ಬದುಕಿದ್ದಾಗ ಒಳ್ಳೆಯದು ಮಾಡಿದ್ದರೆ ಅಂಥವರು ಮಾತ್ರ ಸ್ವರ್ಗಕ್ಕೆ ಹೋಗುತ್ತಾರೆ, ಬದುಕಿದ್ದಾಗ ಕೆಟ್ಟದ್ದನ್ನು ಮಾಡಿದ್ದರೆ ಅವರು ನರಕಕ್ಕೆ ಹೋಗುತ್ತಾರೆ.

★ ಸತ್ತವರು ಈಗಾಗಲೇ ಸತ್ತಿರುವ ಹಿರಿಯರ ಜೊತೆ ಸೇರುತ್ತಾರೆ.

★ ಸತ್ತವರು ಕೊಲೆಗೆ (ಸತ್ತ ಹಿರಿಯರು ಎಂಬರ್ಥದಲ್ಲಿ) ಸೇರುತ್ತಾರೆ.

★ ಸತ್ತವರು ಬೇರೆ ಬೇರೆ ಪ್ರಾಣಿಗಳ ಶರೀರಕ್ಕೆ ಹೋಗುತ್ತಾರೆ.

★ ಸತ್ತವರು ಕೆಲವರು ದೆವ್ವಗಳಾಗುತ್ತಾರೆ.

★ ಸತ್ತವರು ಕೆಲವರು ರಣಗಳಾಗುತ್ತಾರೆ.

★ ಸತ್ತವರು ಕೆಲವರು ಅಂತರ್ ಪಿಶಾಚಿಗಳಾಗುತ್ತಾರೆ.

★ ಸತ್ತವರು ಕೆಲವರು ಬದುಕಿದ್ದವರ ಮೈಮೇಲೆ

ಬರುತ್ತಾರೆ, ಮಾತನಾಡುತ್ತಾರೆ. ತಮ್ಮ ಅಪೇಕ್ಷೆಗಳನ್ನು / ಆಕ್ಷೇಪಗಳನ್ನು ಹೇಳುತ್ತಾರೆ, ಕುಡಿಯುತ್ತಾರೆ, ತಿನ್ನುತ್ತಾರೆ, ಊಟ ಮಾಡುತ್ತಾರೆ.

★ ಸತ್ತವರು ಕೆಲವು ಸಮುದಾಯಗಳಲ್ಲಿ ಉಣ್ಣುವ ಗಂಗಳಕ್ಕೆ ಬಂದು ಗಂಗಳವೇ ಚಲಿಸುವಂತೆ ಮಾಡುತ್ತಾರೆ.

★ ಸತ್ತ ಕೆಲವರು ದೆವ್ವ, ರಣ, ಅಂತರ್‌ಪಿಶಾಚಿಗಳಾಗಿ ಜನರಿಗೆ ತೊಂದರೆ ಕೊಡುತ್ತಾರೆ. ಹೀಗೆ ತೊಂದರೆ ಕೊಟ್ಟಾಗ ಅವರನ್ನು ಹಿಡಿದು ನಿಲ್ಲಿಸಲಾಗುತ್ತದೆ. ಬಂಧಿಸಲಾಗುತ್ತದೆ.

ಹೀಗೆ ಬೇರೆ ಬೇರೆ ಸಮುದಾಯಗಳಲ್ಲಿ ಅನೇಕ ರೀತಿಯ ವಿಚಿತ್ರವಾದ ಮತ್ತು ಕುತೂಹಲಕರವಾದ ನಂಬಿಕೆಗಳಿವೆ, ಆಶಯಗಳಿವೆ. 'ಸತ್ತವರು ಸ್ವರ್ಗಕ್ಕೆ ಹೋಗುತ್ತಾರೆ ಅಥವಾ ನರಕಕ್ಕೆ ಹೋಗುತ್ತಾರೆ' ಎಂಬ ನಂಬಿಕೆಯು ತನ್ನ ಪರಿಧಿಯಲ್ಲಿ ಬೆಳೆಯುವುದೇ ಇಲ್ಲ. ಅದಕ್ಕೆ ನಿರಂತರವಾದ ಕ್ರಿಯಾಶೀಲತೆ ಇಲ್ಲ; ಪ್ರಕ್ರಿಯೆಯೂ ಇಲ್ಲ. ಆದರೆ ಸತ್ತವರು ದೆವ್ವ, ರಣ, ಪಿಶಾಚಿಗಳಾಗುವುದಾಗಲಿ, ಮೈಮೇಲೆ ಬಂದು ಮಾತನಾಡುವುದಾಗಲಿ ಆದಾಗ ಇಲ್ಲೆಲ್ಲ ಬೆಳವಣಿಗೆ ಇದೆ, ನಿರಂತರವಾದ ಕ್ರಿಯಾಶೀಲತೆ ಇದೆ. ಈ ಕ್ರಿಯಾಶೀಲತೆಯಿಂದಾಗಿಯೇ ಮಾತುಕತೆ ನಡೆಯುತ್ತದೆ, ಉಣ್ಣುವ ಗಂಗಳ ಚಲಿಸುತ್ತದೆ, ರಾತ್ರಿ ವಿಚಿತ್ರವಾದ ಸದ್ದು ಕೇಳಿಸುತ್ತದೆ, ಮೈಮೇಲೆ ಬಂದು ಉಣ್ಣುವ - ತಿನ್ನುವ - ಕುಡಿಯುವ ಎಲ್ಲವೂ ನಡೆಯುತ್ತವೆ. ಈ ಸೃಷ್ಟಿಶೀಲ ಶಕ್ತಿ ಮತ್ತು ಸೃಷ್ಟಿಶೀಲ ಗುಣ ಸತ್ತವರು ಸ್ವರ್ಗಕ್ಕೆ ಹೋಗುತ್ತಾರೆ, ಸತ್ತವರು ನರಕಕ್ಕೆ ಹೋಗುತ್ತಾರೆ ಎಂಬ ನಂಬಿಕೆಯನ್ನು ಹೊಂದಿರುವ ಸಮುದಾಯಗಳಲ್ಲಿ ಇಲ್ಲ.

ಸಾಮಾನ್ಯವಾಗಿ ಕೆಳವರ್ಗದ ಸಮುದಾಯಗಳಲ್ಲಿನ ಈ ರೀತಿಯ ಸೃಷ್ಟಿಶೀಲ ಶಕ್ತಿ ಮತ್ತು ಸೃಷ್ಟಿಶೀಲ ಗುಣಗಳು ಇವರ ದೈಹಿಕ ಪ್ರಧಾನ ದುಡಿಮೆಯಿಂದ, ಶ್ರಮದಿಂದ ಬಂದವುಗಳಾಗಿವೆ. ದೈಹಿಕ ಪ್ರಧಾನ ದುಡಿಮೆಯಲ್ಲಿ ಅಮೂರ್ತವಾದ, ಅಲೌಕಿಕವಾದ ಉತ್ಪಾದನೆಗಳಿಲ್ಲ. ಅಲ್ಲಿ ಏನಿದ್ದರೂ ಎಲ್ಲವೂ ಮೂರ್ತ, ಎಲ್ಲವೂ ಲೌಕಿಕ. ಇವರು ಏನನ್ನು ಬೆಳೆದರೂ ಕಣ್ಣಿಗೆ ಕಾಣಿಸುತ್ತದೆ; ಏನನ್ನು ಉತ್ಪಾದನೆ ಮಾಡಿದರೂ ಕಣ್ಣಿಗೆ ಕಾಣುತ್ತದೆ. ಇವರ ಹಾಡುಗಳಲ್ಲಿ, ಕತೆಗಳಲ್ಲಿ, ಮಾತುಕತೆಯಲ್ಲಿ ಎಲ್ಲೆಲ್ಲೂ ಮೂರ್ತಜಗತ್ತು ಇದೆ. ಹಾಗಾಗಿ ಈ ವರ್ಗಕ್ಕೆ ಅಲೌಕಿಕ ಜಗತ್ತು ಎಂಬುದು, ಅಮೂರ್ತ ಎಂಬುದು ತುಂಬಾ ದುರ್ಬಲವಾದ ಎಳೆ. ಹೀಗಾಗಿ ಸತ್ತವರ ಬಗ್ಗೆ ಇವರು ಕಟ್ಟಿಕೊಂಡಿರುವ ನಂಬಿಕೆಗಳು, ಕಲ್ಪನೆಗಳು, ಆಶಯಗಳು ಅತ್ಯಂತ ಮೂರ್ತವಾದವು. ಅವು ಕಣ್ಣಿಗೆ ಕಾಣುತ್ತವೆ; ಚಟುವಟಿಕೆಗಳಿಂದ ಕೂಡಿರುತ್ತವೆ.

ಸ್ವರ್ಗದ ಕಲ್ಪನೆ ಇದಕ್ಕಿಂತ ಭಿನ್ನ. ಅದು ಕಣ್ಣಿಗೆ ಕಾಣುವುದಿಲ್ಲ. ಅದೊಂದು ಅಮೂರ್ತ ಜಗತ್ತು; ಕಲ್ಪನೆಯ ಲೋಕ. ಒಂದರ್ಥದಲ್ಲಿ ಅದು ಸತ್ತವರ ಸಾಮ್ರಾಜ್ಯ. ಅಲ್ಲಿಗೆ ಎಲ್ಲಾ ವರ್ಗದ, ಎಲ್ಲಾ ಜಾತಿಯ, ಎಲ್ಲಾ ವರ್ಣದವರು ಹೋಗುತ್ತಾರೆಂಬ ನಂಬಿಕೆ ಇಲ್ಲ. ಹಾಗಾಗಿ ಅವರ್ಣೀಯರು, ಅಸ್ಪೃಶ್ಯರು, ಮಾಂಸಹಾರಿಗಳು ಅಲ್ಲಿಗೆ ಹೋಗದೆಯೂ ಇರಬಹುದು. ಯಾಕೆಂದರೆ ಬದುಕಿರುವಾಗಲೆ ಅಗುಳು ಅನ್ನ, ನೂಲು ಅರಿವೆ ಸಮಸ್ಯೆ ಇದ್ದವರು, ಸತ್ತ ನಂತರ ಹೊಟ್ಟೆ ತುಂಬಿದ ಯಮನ (ಇಂದ್ರನ ?) ಲೋಕಕ್ಕೆ ಹೋಗಲಾರರು ಅಥವಾ ಅಲ್ಲಿಗೆ ಹೋಗಬೇಕೆಂದು ಇವರು ಅಪೇಕ್ಷಿಸಿದರೂ ಅವರು ಅಷ್ಟು ಸುಲಭಕ್ಕೆ ಇವರಿಗೆ ಪ್ರವೇಶ ಕೊಟ್ಟಿರಲಾರರು. ಪ್ರಾಯಶಃ ಇಂಥ ಕಲ್ಪನೆಯನ್ನು ಮೊಟ್ಟ ಮೊದಲ ಬಾರಿಗೆ ಎಲ್ಲಾ ಕೆಳವರ್ಗದ ಸಮುದಾಯಗಳು ಅತ್ಯಂತ ಕ್ರಾಂತಿಕಾರಕವಾಗಿ ಪ್ರತಿಭಟಿಸಿವೆ. ಆ ಸ್ವರ್ಗದ ಕಲ್ಪನೆಯ ವಿರುದ್ಧ ವೀರಾವೇಶದಿಂದ ನಿರಂತರವಾಗಿ ಹೋರಾಡಿವೆ. ಹಾಗಾಗಿ ಕೆಳವರ್ಗದ ಸಮುದಾಯಗಳಲ್ಲಿ ಸ್ವರ್ಗದ ಕಲ್ಪನೆ ಎಂಬುದು ಅತ್ಯಂತ ತೆಳುವಾದ ಮತ್ತು ದುರ್ಬಲವಾದ ಆಶಯ. ಇದಕ್ಕೆ ವಿರುದ್ಧವಾಗಿ ಬೇರೆ ಬೇರೆ ರೂಪಗಳಲ್ಲಿ ಸತ್ತವರು ಕ್ರಿಯಾಶೀಲವಾಗುವುದು ಬಹಳ ಮುಖ್ಯವಾದ ಆಶಯ.

ಸತ್ತ ನಂತರ ಸ್ವರ್ಗದ ಕಲ್ಪನೆ ಅತ್ಯಂತ ತೆಳುವಾಗಿರುವ ಈ ಸಮುದಾಯಗಳಲ್ಲಿ ಸತ್ತವರು ದೆವ್ವ, ರಣ, ಅಂತರ್‌ಪಿಶಾಚಿ ಆಗುತ್ತಾರೆಂಬ ನಂಬಿಕೆ ಇದೆ. ಆದರೆ ಈ ರೀತಿ ಆಗುವುದು ಆಯಾ ಸಮುದಾಯಗಳಲ್ಲಿ ಆರೋಗ್ಯಕರವಾದುದಲ್ಲ. ಯಾಕೆಂದರೆ ಅವೆಲ್ಲ ಏನನ್ನಾದರೂ ಕೇಳುತ್ತವೆ, ಕಾಡುತ್ತವೆ ಮತ್ತು ತೊಂದರೆ ಕೊಡುತ್ತವೆ. ಇದರಿಂದ ಸತ್ತವರು ಈಗಾಗಲೇ ಸತ್ತಿರುವ ಹಿರಿಯರ ಜೊತೆಗೆ ಸೇರಬೇಕು ಎಂಬ ಆಶಯವೂ ಇದೆ. ಆದರೆ ಸ್ವರ್ಗಕ್ಕೆ ಹೋಗಲಿ ಎಂಬ ಆಶಯವಿಲ್ಲ.

**ಸತ್ತವರು ಪ್ರಾಣಿ ಶರೀರಕ್ಕೆ ಹೋಗುವುದು**

ಸತ್ತವರು ಪ್ರಾಣಿ ಶರೀರಕ್ಕೆ ಹೋಗುತ್ತಾರೆಂಬ ನಂಬಿಕೆ ಕೆಲವು ಸಮುದಾಯಗಳಲ್ಲಿದೆ. ಹಕ್ಕಿಪಿಕ್ಕಿಯರು, ನಟುವರು ಮತ್ತು ಲಂಬಾಣಿಯರು ಹಾಗೆ ನಂಬುತ್ತಾರೆ. ಹಕ್ಕಿಪಿಕ್ಕಿಯರಲ್ಲಿ ಸತ್ತವರ ಆತ್ಮ ಪ್ರಾಣಿ ಶರೀರಕ್ಕೆ ಹೋಗಿರುವುದನ್ನು ಪರೀಕ್ಷೆ ಮಾಡುವ ಕ್ರಮವಿದೆ. ಸಮಾಧಿಯಿಂದ ತಟ್ಟೆಯಲ್ಲಿ ಸ್ವಲ್ಪ ಬೂದಿಯನ್ನು ತಂದು ಮತ್ತೊಂದು ತಟ್ಟೆಯಿಂದ ಮುಚ್ಚಿಡುತ್ತಾರೆ. ಒಂದು ರಾತ್ರಿ ಬಿಟ್ಟು ಮೂರನೆ ದಿನ ಕೆಲವು ಗುರುತುಗಳನ್ನು ನೋಡಿ ಯಾವ ಪ್ರಾಣಿಯ ಆತ್ಮಕ್ಕೆ ಹೋಗಿದೆ ಎಂಬುದನ್ನು ನಿರ್ಧರಿಸುತ್ತಾರೆ. ನಟುವರು ಸತ್ತು ಹನ್ನೊಂದನೇ ದಿನ ಮನೆಯ ಮುಂದೆ ಎಡೆ ಹಾಕುತ್ತಾರೆ. ಕಾಗೆ ಬಂದು ತಿಂದರೆ ಸತ್ತ ವ್ಯಕ್ತಿಯೇ ಕಾಗೆಯ ರೂಪದಲ್ಲಿ ಬಂದು ತಿಂದದ್ದು ಎಂದು ನಂಬುತ್ತಾರೆ. ಲಂಬಾಣಿಯರಲ್ಲಿ ಹೆಣವನ್ನು ಹೊತ್ತುಕೊಂಡು ಹೋಗುತ್ತಿರುವಾಗ ಕಾಗೆ, ನರಿ, ಮೊಲ ಮತ್ತು ಹಾವು ಬಲದಿಂದ ಎಡಕ್ಕೆ ಹೋದರೆ ಸತ್ತವರು ಅವುಗಳ ಜೀವ ಪಡೆದರೆಂದು ನಂಬುತ್ತಾರೆ.

ಮೇಲಿನ ಮೂರು ಸಮುದಾಯಗಳಲ್ಲಿ ಸತ್ತವರು ಕಾಗೆ, ನರಿ, ಮೊಲ ಮತ್ತು ಹಾವಿನ ಶರೀರಕ್ಕೆ ಹೋಗುತ್ತಾರೆಂಬ ನಂಬಿಕೆ ಇದೆ. ಇಲ್ಲಿ ಪ್ರಾಣಿಪಕ್ಷಿಗಳ ಭೇದವಿಲ್ಲ, ಸಾಕು ಪ್ರಾಣಿಗಳೆಂಬ ಭೇದವಿಲ್ಲ. ಇವುಗಳಲ್ಲಿ ಮೊಲ ಒಂದನ್ನು ಬಿಟ್ಟರೆ ಉಳಿದವುಗಳ ಬಗ್ಗೆ ಬದುಕಿನಲ್ಲಿ ಅಪಶಕುನಗಳೆಂಬ ನಂಬಿಕೆ ಇದೆ. ಆದರೆ ಸತ್ತವರು ಮುಂದೇನಾಗುತ್ತಾರೆ ಎಂಬುದರ ಬಗ್ಗೆ ನಕಾರಾತ್ಮಕ ನಂಬಿಕೆ ಇಲ್ಲ. ರಣ, ದೆವ್ವ, ಅಂತರ ಪಿಶಾಚಿಗಳು ಆಗಲೇಬಾರದೆಂಬುದಿಲ್ಲ. ಯಾಕೆಂದರೆ, ಒಂದು ವೇಳೆ ಹಾಗೆ ಆದಲ್ಲಿ ಅವನ್ನು ಬಂಧಿಸುವ, ಹಿಡಿದು ನಿಲ್ಲಿಸುವ ಪದ್ಧತಿಯೂ ಇದೆ. ಹಾಗೆ ಸತ್ತವರು ಮುಂದೇನಾಗುತ್ತಾರೆ ಎಂಬ ವಿಷಯವು ಯಾವ ನಂಬಿಕೆಗೆ ಒಳಗಾಗಿದೆ ಎಂಬುದಕ್ಕಿಂತಲೂ ಹೆಚ್ಚಾಗಿ ಅವರು ಸ್ವರ್ಗಕ್ಕೆ ಹೋಗಿಲ್ಲ ಎಂಬ ಅಂಶವನ್ನೇ ಪ್ರಧಾನವಾಗಿ ಪರಿಗಣಿಸಬೇಕಾಗಿದೆ.

**ಉಣ್ಣುವ ಗಂಗಳವೆ ಚಲಿಸುತ್ತ ಬರುವುದೆ ?**

ಮಲೆನಾಡಿನ ಒಂದು ಪ್ರದೇಶದ ಹರಿಜನರು ಮಾಡುವ ಆಚರಣೆಯಲ್ಲಿ ಜರುಗುವ ಕ್ರಿಯೆ ಇದೆ. ಇದು ೧೧ನೇ ದಿನದ ತಿಥಿಯಲ್ಲಿ ನಡೆಯುತ್ತದೆ. ಸತ್ತ ವ್ಯಕ್ತಿಗೆ ಸ್ನಾನ ಮಾಡಿಸಿದ ಜಾಗದಲ್ಲಿ ಗಂಗಳವನ್ನು ಪೂಜೆ ಮಾಡುತ್ತಾರೆ. ಅನಂತರ ಸಂಬಂಧಿಕರೊ ಹಿರಿಯರೊ ಸತ್ತ ವ್ಯಕ್ತಿಯನ್ನು ಸಂಬೋಧಿಸಿ 'ಮನೆಯವರು, ಬಂಧುಗಳು, ನೆಂಟರು ಸಂತೋಷದಿಂದ ಅನ್ನ ನೀರು ಹಾಕಿದ್ದಾರೆ', ಮುಂತಾಗಿ ಪ್ರಾರ್ಥಿಸುತ್ತಾರೆ. ಉಳಿದವರು ಕೈಮುಗಿಯುತ್ತಾರೆ. ಗಂಗಳಕ್ಕೆ ಹಿರಿಯರೊಬ್ಬರು ಕೈ ಮುಟ್ಟಿಸುತ್ತಾರೆ. ಗಂಗಳವು ಚಲಿಸಲು ಶುರು ಮಾಡುತ್ತದೆ. ಅಂತಿಮವಾಗಿ ಮನೆಯೊಳಗಿನ ಅಡಿಗೆ ಕೋಣೆಯ 'ಇಡುಕ್ಲಿ'ಗೆ ಹೋಗುತ್ತದೆ. ಆ 'ಇಡುಕ್ಲಿ'ಗೆ ಇಟ್ಟಿರುವ 'ಎಡೆ'ಯ ಬಳಿಗೆ ಹೋಗುತ್ತದೆ.

ಮನೆಯಲ್ಲಿ ಇಡುಕ್ಲಿಗೆ ವಿಶೇಷ ಮಹತ್ವವಿದೆ. ಅದು ಅಡುಗೆ ಮಾಡುವ ಮಡಕೆ ಪಾತ್ರೆಗಳನ್ನು ಇಡುವ ಸ್ಥಳ. ಅದರ ಎಡತುದಿಯಲ್ಲಿ ಒಲೆ (ಬೆಂಕಿ) ಇರುತ್ತದೆ. ಬಲತುದಿಯಲ್ಲಿ ನೀರಿನ ಮಡಕೆ ಇರುತ್ತದೆ. ಕೆಲವು ಗುಡಿಸಲು/ಮನೆಗಳಲ್ಲಿ ಸರಿಯಾದ ಗೋಡೆಗಳಿಲ್ಲದಿರಬಹುದು. ಬಾಗಿಲು ಇಲ್ಲದಿರಬಹುದು. ಆದರೆ 'ಇಡುಕ್ಲು' ಇಲ್ಲದ ಮನೆಗಳಿರುವುದು ಸಾಧ್ಯವೇ ಇಲ್ಲ. 'ಇಡುಕ್ಲು' ಯಾವುದೇ ಗುಡಿಸಲು/ಮನೆಯ ಸಾಂಸ್ಕೃತಿಕವಾದ ಹೃದಯಭಾಗ. ಗೌರವ ಭಾವನೆಯುಳ್ಳ ಪೂಜನೀಯ ಭಾಗ. ಆದ್ದರಿಂದಲೇ ಅದಕ್ಕೆ ಒದೆಯಬಾರದು ಅಥವಾ ಕಾಲು ತಾಗಿಸಬಾರದು ಎಂಬ ನಂಬಿಕೆ ಇದೆ. ಒಲೆಗೂ ಕೂಡ ಕಾಲು ತಾಗಿಸಬಾರದು ಎಂಬ ನಂಬಿಕೆ ಇದೆ. ಒಂದು (ಬಲ) ತುದಿಯಲ್ಲಿ ನೀರು, ಇನ್ನೊಂದು (ಎಡ) ತುದಿಯಲ್ಲಿ ಬೆಂಕಿ ಇರುವ 'ಇಡುಕ್ಲು' ಸಾಮಾನ್ಯ ಸ್ಥಳವಲ್ಲ.

ಒಂದು ಕಡೆ ಸತ್ತವರು ಹೆಣದ ರೂಪದಲ್ಲಿ ಸಮಾಧಿಗೆ ಹೋಗಿ ಸೇರುತ್ತಾರೆ. ಮತ್ತೊಂದು ಕಡೆ ಸತ್ತವರು ತಿಥಿಯ ದಿನ ಚಲಿಸುವ ಗಂಗಳದಲ್ಲಿ ಬಂದು ಮನೆಯೊಳಗೇ ಇರುವ ಇಡುಕ್ಲಿಗೆ ಬಂದು ಸೇರುತ್ತಾರೆ. ಈ ಇಡುಕ್ಲಿನಲ್ಲಿ

ಬೆಂಕಿ(ಒಲೆ)ಯು ಎಡಭಾಗದಲ್ಲಿಯೂ, ನೀರು (ನೀರಿಡುವ ಮಡಕೆ) ಬಲಭಾಗದಲ್ಲಿಯೂ ಇರುತ್ತದೆ. ಇದು ಇವರು ನೀರಿಗೆ ಕೊಟ್ಟಿರುವ ಪ್ರಾಧಾನ್ಯವನ್ನು ಸೂಚಿಸುತ್ತದೆ. ಇಲ್ಲಿ ನೀರು ಬಲಕ್ಕೂ ಬೆಂಕಿಯು ಎಡಕ್ಕೂ ಇರುವುದೊಂದು ವಿಶೇಷ. ಅಂತೆಯೇ ಇವರಲ್ಲಿ ಸತ್ತವರನ್ನು ಬೆಂಕಿಯಲ್ಲಿ ಸುಡುವ ಪದ್ಧತಿ ಇಲ್ಲ, ಹೂಳುವ ಪದ್ಧತಿ ಇದೆ. 'ಇಡುಕ್ಲು' ಸತ್ತವರು ಬಂದು ಸೇರುವ ಜಾಗ. ಸತ್ತವರು ಈಗಾಗಲೇ ಇರುವ ಜಾಗ. ಆದ್ದರಿಂದ ಯಾವುದೇ ಹಬ್ಬ ಮತ್ತು ವಿಶೇಷ ದಿನಗಳಲ್ಲಿ ಸತ್ತ ಹಿರಿಯರಿಗಾಗಿ ಇಡುಕ್ಲಿಗೆ ಎಡೆ ಹಾಕುತ್ತಾರೆ.

**ನಮ್ಮ ಆಳನ್ನು ನಮ್ಮ ಜೊತೆಗೆ ಕಳಿಸಿಕೊಡು**

ಕೆಲವರಿಗೆ ಸತ್ತವರು ದೇವರಿಗೆ ಸಮಾನ. ಇನ್ನು ಕೆಲವರಿಗೆ ದೆವ್ವ, ಭೂತ, ಪಿಶಾಚಿ ಮತ್ತು ಕಾಡುವ ರಣ. ಸತ್ತವರು ದೇವರಾಗುವ ಒಂದು ಸಾಧ್ಯತೆಯನ್ನು ಬಿಟ್ಟರೆ ಉಳಿದವುಗಳಲ್ಲಿ ಸತ್ತವರು ಈ ಲೋಕವನ್ನು ಬಿಟ್ಟು ಕಾಣದ ಲೋಕಕ್ಕೆ ಹೋಗುವುದಿಲ್ಲ. ಅವರು ಒಂದಿಲ್ಲ ಒಂದು ರೂಪದಲ್ಲಿ ಬದುಕಿರುವವರ ಜೊತೆಯಲ್ಲಿ ಇರುತ್ತಾರೆ. ಕೆಲವು ಸಲ ವ್ಯಕ್ತಿ ಸತ್ತ ನಂತರ ಒಂದು ನಿರ್ದಿಷ್ಟ ಅವಧಿಯವರೆಗೆ ಮಾತ್ರ ಇರುವುದಿಲ್ಲ. ಆ ಅವಧಿಯ ನಂತರ ಸತ್ತವರನ್ನು ಮತ್ತೆ ಬೇರೆ ಬೇರೆ ರೂಪಗಳಲ್ಲಿ ಕೆಳಸಮುದಾಯಗಳು ಕರೆಯುತ್ತವೆ; ಕರೆಸಿಕೊಳ್ಳುತ್ತವೆ. ಮತ್ತು ತನ್ನೊಳಗೆ ಸೇರಿಸಿಕೊಳ್ಳುತ್ತವೆ. ಇದು ಬೇರೆ ಬೇರೆ ವಿಧಾನಗಳಲ್ಲಿ ನಡೆಯುತ್ತದೆ.



ಎರವರ ಸಮುದಾಯದಲ್ಲಿ ಸತ್ತ ದಿನದ ಆಚರಣೆಯ ವಿವಿಧ ಹಂತಗಳಲ್ಲಿ ಕನ್ನೆಲಾಡಿಗಳು ದೀರ್ಘವಾದ ಸಂಭಾಷಣೆಗಳನ್ನು ನಡೆಸುತ್ತಾರೆ. ಅದು ೧೧ನೇ ದಿನ ಅವರು ಮಾಡುವ ತಿಥಿಯ ಕಾರ್ಯದಲ್ಲೂ ಮುಂದುವರಿಯುತ್ತದೆ. ತಿಥಿಯ ದಿನ ಸಮಾಧಿಯ ಮೇಲೆ ಎಡೆ ಹಾಕುತ್ತಾರೆ. ಆಗ ಒಬ್ಬ ಕನ್ನೆಲಾಡಿಯು ಸ್ಮಶಾನ ದೇವತೆಯನ್ನು ಕುರಿತು ಹೀಗೆ ಹೇಳುತ್ತಾನೆ: 'ನಾವು ಬಡವರು. ನಮ್ಮ ಕೈಲಾದಷ್ಟನ್ನು ನಿನಗೆ ಮಾಡಿಕೊಂಡು ಬಂದಿದ್ದೇವೆ. ಇದನ್ನು ಸ್ವೀಕರಿಸು. ನಮ್ಮ ಆಳನ್ನು ಇಲ್ಲಿಯವರೆಗೆ ಕಾಯ್ದು ಕಾಪಾಡಿದ್ದಕ್ಕೆ ನಾವು ಇದಕ್ಕಿಂತ ಹೆಚ್ಚಿನ ಕಾಣಿಕೆ ನೀಡಲು ಅಶಕ್ತರು. ಈಗಾಗಲೇ ತಡವಾಗಿದ್ದರೆ ಕ್ಷಮಿಸು. ನಮ್ಮ ಆಳನ್ನು ನಮ್ಮ ಜೊತೆ ಕಳಿಸಿಕೊಡು'

ಇಲ್ಲಿ ಸತ್ತವರು ದೇವರು ಅಲ್ಲ, ರಣವೂ ಅಲ್ಲ. ಬದಲಿಗೆ ಅವರು ಸತ್ತವರನ್ನು ಆಳು ಎಂದು ಪರಿಗಣಿಸುವುದೊಂದು ವಿಶೇಷ. ಜೊತೆಗೆ ಮಸಣ ದೇವತೆಯೊಂದಿಗೆ ಇವರು ನಡೆಸುವ ಮಾತುಕತೆಯೂ [illegible] ಹೆಣವನ್ನು ಮಸಣಕ್ಕೆ ತಂದು ಹೂಳುವಾಗ ಮಸಣ ದೇವತೆಯೊಂದಿಗೆ ಕನ್ನೆಲಾಡಿ ಕೋರುವ ಕ್ರಮವೂ ಇವರಲ್ಲಿದೆ. 'ನಾವು ತಂದಿರುವ ಹೆಣವನ್ನು ಯಾವುದೇ ನರಿ, ಕಾಗೆ, ರಣಹದ್ದುಗಳಿಗೆ ಕೊಡಬೇಡ. ನಾವು ಮತ್ತೆ ಇಲ್ಲಿಗೆ ಬರುವವರೆಗೆ ನೀನು ರಕ್ಷಿಸು. ನಿನಗೆ ನಾವು ಕೂಲಿಯನ್ನೋ, ಸಂಬಳವನ್ನೋ ಕೊಡುತ್ತೇವೆ. ನಿನಗೆ ಕೊಡಬೇಕಾದ ಕಾಣಿಕೆಯನ್ನು ಕೊಟ್ಟು ಕರೆದುಕೊಂಡು ಹೋಗುತ್ತೇವೆ', ಎಂಬುದಾಗಿ ಕೇಳಿಕೊಳ್ಳುತ್ತಾರೆ. ಇವರು ಮಸಣ ದೇವತೆಗೆ ಕೊಡುವ ಕಾಣಿಕೆಯನ್ನು ಕೂಲಿಯೆಂದು, ಸಂಬಳವೆಂದು ಕರೆಯುವುದು ತುಂಬಾ ಕುತೂಹಲದ ಸಂಗತಿ. ಇಲ್ಲಿ ಮಸಣ ದೇವತೆಗೂ ಈ ಸಮುದಾಯಕ್ಕೂ ಶ್ರೇಣೀಕರಣ ವಿನ್ಯಾಸವೇ ಇಲ್ಲ. ಅದೇ ರೀತಿ ಬದುಕಿರುವವರಿಗೂ ಸತ್ತಿರುವವರಿಗೂ ರೂಢಿಗತವಾದ ಶ್ರೇಣೀಕರಣವಿಲ್ಲ.

ಇದಕ್ಕಿಂತ ಮುಖ್ಯವಾದುದೆಂದರೆ, ಸಮುದಾಯವು ಸತ್ತವರನ್ನು ಹೊರಗೆಲ್ಲಿಯೂ ಹೋಗಗೊಡದೆ ಮತ್ತೆ ತನ್ನೊಳಗೇ ಸೇರಿಸಿಕೊಳ್ಳುತ್ತದೆ. ಅಂದರೆ ಎರವರೂ ಸೇರಿದಂತೆ ಅನೇಕ ಸಮುದಾಯಗಳಲ್ಲಿ ಸತ್ತಿರುವವರನ್ನು ಪುನಃ ತನ್ನೊಳಗೆ ಸೇರಿಸಿಕೊಳ್ಳುವ ಪದ್ಧತಿ ಇದೆ. ಮ್ಯಾಸಬೇಡರಲ್ಲಿ ಸತ್ತವರು ಕಾಣದ ಲೋಕಕ್ಕೆ ಹೋಗುವುದಿಲ್ಲ. ಆದರಿಂದ ಅವರು ೧೫ನೇ ದಿನದ ತಿಥಿಯ ದಿನ ಸಮಾಧಿಯಲ್ಲಿ ಸತ್ತವನನ್ನು/ಳನ್ನು ಹೀಗೆ ಕೇಳಿಕೊಳ್ಳುವರು: 'ಕಾಡಿನ ಯಾವ ಗಿಡ, ಮರ, ಪೊದೆ, ಕಲ್ಲುಬಂಡೆ ಸಂದಿನಲ್ಲಿ ಎಲ್ಲಿ ಅಡಗಿಹೋದೆ? ಓ ತಂದೆಯೇ ನೀನು ಇವತ್ತು ಬಂದು ನಮ್ಮೊಂದಿಗೆ ಊಟ ಮಾಡು'. ಚಿಕ್ಕಮಗಳೂರಿನ ಮಲೆನಾಡು ಭಾಗದ ಹರಿಜನರಲ್ಲಿ 'ನೀನು ಬಂದು ಕೊಲೆಗೆ ಸೇರಿಕೊ' ಎಂದು ಕರೆಯುವ ಪದ್ಧತಿ ಇದೆ. ಜೊತೆಗೆ, ಸತ್ತವರು ಬೇರೆ ಬೇರೆ ರೂಪಗಳಲ್ಲಿ, ಬದುಕಿರುವ ತಮ್ಮ ಜೊತೆಯಲ್ಲಿ ಇರುತ್ತಾರೆಂಬ ನಂಬಿಕೆ ಇದೆ. ಮುಗೇರರಲ್ಲಿ, ಸುಳ್ಯದ ಗೌಡರಲ್ಲಿ ಇದೇ ರೀತಿಯಲ್ಲಿ ಕರೆಯುವ ಕ್ರಮವಿದೆ. ಅಂದರೆ ಸತ್ತ ನಂತರ ವ್ಯಕ್ತಿ ಕಾಣದ ಲೋಕಕ್ಕೆ ಹೋಗದೆ ಬದುಕಿರುವವರ ಸಂಗಡ ಇರುತ್ತಾನೆಂಬ ನಂಬಿಕೆ ಇಲ್ಲಿ ಬಹಳ ಮುಖ್ಯವಾದುದು.

**ನೀವು ಭಯಪಡಬೇಡಿ, ಇನ್ನು ಇಂಥ ಘಟನೆ ನಡೆಯಲು ಬಿಡುವುದಿಲ್ಲ.**

ಕೆಳಸಮುದಾಯಗಳಲ್ಲಿ ದೇವರು ಮೈಮೇಲೆ ಬರುವ ಪದ್ಧತಿ ಇದೆ. ಹಬ್ಬ, ಜಾತ್ರೆಗಳಲ್ಲಿ ಈ ದೇವರು ತಾವಾಗಿಯೇ ನಿರ್ದಿಷ್ಟ ವ್ಯಕ್ತಿಗಳ ಮೇಲೆ ಬರುತ್ತವೆ. ಆಗ ಜನರು ತಮ್ಮ ಸಮಸ್ಯೆ ತಾಪತ್ರಯಗಳನ್ನು ಮೈಮೇಲೆ ಬಂದಿರುವ ದೇವರಲ್ಲಿ ನಿವೇದಿಸಿಕೊಳ್ಳುತ್ತಾರೆ. ಇದಲ್ಲದೆ ಜನರಿಗೆ ಯಾವುದಾದರೂ ತೊಂದರೆಗಳಾದಲ್ಲಿ ದೇವರನ್ನು ಬೇಡಿಕೊಳ್ಳುತ್ತಾರೆ. ಆಗಲೂ ದೇವರು ಸಂಬಂಧಪಟ್ಟ ಜನರ ಮೈಮೇಲೆ ಬರುತ್ತವೆ. ಸಂಬಂಧಪಟ್ಟ ವಿಷಯಗಳನ್ನು ಮಾತನಾಡುತ್ತವೆ. ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತಾರೆ. ಇಲ್ಲಿಗರಲ್ಲಿ ಸತ್ತವರು ಕಣಿಗಾರನ ಮೈಮೇಲೆ ಬರುತ್ತಾರೆ. ಮೈಮೇಲೆ ಬಂದು ತಾನು ಸತ್ತ ಕಾರಣವನ್ನು, ಸಾಯಲು ಒದಗಿ ಬಂದ ವಿಪತ್ತು ಮತ್ತು ಕಾಯಿಲೆಗಳನ್ನು ತನ್ನ ಕುಟುಂಬದ ಸದಸ್ಯರಿಗೆ ತಿಳಿಸುವ ಕ್ರಮವಿದೆ. ಅನಂತರ ಇರಿಸಿದ ಎಡೆಯನ್ನು ಉಣ್ಣುತ್ತಾಳೆ/ನೆ. ಗ್ರಾಮೊಕ್ಕಲು ಸಮುದಾಯದವರಲ್ಲಿ ಸತ್ತವರು ತಮ್ಮ ಮಕ್ಕಳ ಮೈಮೇಲೆ ಬರುವುದುಂಟು. ಹೀಗೆ ಮೈಮೇಲೆ ಬಂದು ತಾನು ಇಂತಹ ಜಟಗ ಅಥವಾ ಮಾಸ್ತಿ ತಳದಲ್ಲಿ ನಿಲ್ಲುವುದಾಗಿ ಹೇಳುವ ಪದ್ಧತಿ ಇದೆ. ಮುಕ್ರಿಯರಲ್ಲಿ ಸತ್ತು ೧೧ನೇ ದಿನಕ್ಕೆ ದೆವ್ವ ಕಡಿಯುವ ಶಾಸ್ತ್ರವಿದೆ. ಅಂದು ಸತ್ತವನನ್ನು ಕುರಿತು 'ಯಾರ ಮೈಮೇಲೆ ಬರುವ ಖುಷಿ ಇದೆ ಬಾ' ಎಂದು ಕರೆಯುತ್ತಾರೆ. ಆಗ ಮನೆಯ ಒಬ್ಬರ ಮೈಮೇಲೆ ಅಥವಾ ಎರಡು ಮೂರು ಜನರ ಮೈಮೇಲೆ ಬರುವ ಪದ್ಧತಿ ಇದೆ.

ಕೊಡಗಿನ ಪಣಿಯರು ಏಳು ದಿವಸದ ತಿಥಿಯಾದ

ನಂತರ ಮತ್ತೆ ಒಂದು ವರ್ಷಕ್ಕೆ ವರ್ಷ ತಿಥಿ ಆಚರಿಸುತ್ತಾರೆ. ಚಪ್ಪರವನ್ನು ಹಾಕಿಕೊಂಡು ಅದರಡಿಯಲ್ಲಿ ದುಡಿ ಬಡಿದುಕೊಂಡು ಕುಣಿಯುತ್ತಾರೆ. ರಾತ್ರಿ ಹನ್ನೆರಡು ಗಂಟೆಯ ನಂತರ ಪಾಟಾಳಿಯು ಹಾಡಲು ಶುರುಮಾಡುತ್ತಾನೆ. ಆತ ಮರುದಿನ ಮಧ್ಯಾಹ್ನದ ತನಕ ಹಾಡುತ್ತಾನೆ. ಹಾಗೆ ಹಾಡಿ ಎದ್ದಮೇಲೆ ಆತನ ಮೈಮೇಲೆ ಸತ್ತ ವ್ಯಕ್ತಿ ಮೈಮೇಲೆ ಬಂದು ಹೀಗೆ ಮಾತನಾಡುತ್ತಾಳೆ/ನೆ: 'ಈಗ ಆದದ್ದು ಆಯಿತು. ಮುಂದೆ ಹೀಗಾಗದಂತೆ ನೋಡಿಕೊಳ್ಳುತ್ತೇನೆ. ನೀವು ಭಯಪಡಬೇಡಿ. ಇನ್ನು ಇಂಥ ಘಟನೆ ನಡೆಯಲು ಬಿಡುವುದಿಲ್ಲ.' ಅಲ್ಲಿಗೆ ತಿಥಿ ಕಾರ್ಯ ಮುಗಿಯುತ್ತದೆ.

ಸತ್ತವರು ಹೀಗೆ ಮೈಮೇಲೆ ಬರುತ್ತಾರೆಂದರೆ ಅವರು ಸ್ವರ್ಗಕ್ಕೊ ಮತ್ತೆಲ್ಲಿಗೋ ಹೋಗಿಲ್ಲವೆಂದೇ ಅರ್ಥ. ಆದರಿಂದಲೇ ಮೈಮೇಲೆ ಬಂದು ಅವರು ಕುಡಿಯುತ್ತಾರೆ, ಊಟ ಮಾಡುತ್ತಾರೆ, ಮಾತನಾಡುತ್ತಾರೆ, ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತಾರೆ, ಬದುಕಿರುವವರ ಕಷ್ಟ ಸುಖಗಳನ್ನು ವಿಚಾರಿಸಿಕೊಳ್ಳುತ್ತಾರೆ. ಸತ್ತವರು ಮತ್ತು ಇದ್ದವರ ನಡುವಿನ ಪ್ರೀತಿ ವಿಶ್ವಾಸಗಳು ಪರಸ್ಪರ ಕ್ರಿಯಾಶೀಲಗೊಳ್ಳುವ ಮಾನವೀಯ ಸನ್ನಿವೇಶಗಳು ಸಾವಿನ ಆಚರಣೆಗಳಲ್ಲಿ ಮೇಲಿಂದ ಮೇಲೆ ಕಾಣುತ್ತವೆ. ಇಲ್ಲಿ ಸಾವು ಒಂದು ನಿಗೂಢ ಸಂಗತಿಯಲ್ಲ; ಸತ್ತ ನಂತರ ಏನಾಗುತ್ತಾರೆ ಎಂಬುದು ಕಲ್ಪನಾ ಲೋಕದ ರಹಸ್ಯಮಯ ವಿಷಯವೂ ಅಲ್ಲ. ಸತ್ತವರು ಮತ್ತೆ ಬೇರೆ ರೂಪದಲ್ಲಿ ಮರಳಿ ಬದುಕಿರುವವರ ಜೊತೆಗೇ ಬರುತ್ತಾರೆ. ಬಂದು ಸಮಾಧಾನ ಮಾಡುತ್ತಾರೆ; ಸಾಂತ್ವನ ಹೇಳುತ್ತಾರೆ. ಇದರಿಂದ ಸಾವಿನ ಸುತ್ತ ಇರುವ ಭಯ ಮತ್ತು ನಿಗೂಢತೆಗಳು ದುರ್ಬಲಗೊಳ್ಳುತ್ತವೆ. ಅಥವಾ ಸಾವನ್ನು ಎದುರಿಸಲು ಮತ್ತು ಬದುಕನ್ನು ಪ್ರೀತಿಸಲು ಸಮುದಾಯಗಳು ಸೃಷ್ಟಿಸಿಕೊಂಡಿರುವ ಒಳದಾರಿಗಳು ಇವು ಎಂದೂ ಇದನ್ನು ಗ್ರಹಿಸಬಹುದು. ಯಾಕೆಂದರೆ, 'ಸತ್ತವರು ತಿರುಗಿ ಬಾರದ ಲೋಕಕ್ಕೆ ಹೋಗುತ್ತಾರೆ' ಎಂಬ ನಂಬಿಕೆ ಮೇಲ್ವರ್ಗದ ಕೆಲವು ಸಮುದಾಯಗಳಲ್ಲಿದೆ. ಆದರೆ ಈ ಕೆಳವರ್ಗದ ಸಮುದಾಯಗಳಲ್ಲಿ ಹಾಗೆ ಹೊರಗೆ ಹೋಗುವ ಕ್ರಮವಿಲ್ಲ.

**ಸತ್ತವರನ್ನು ಬಂಧಿಸುವುದು**

ಬೇರೆ ಬೇರೆ ರೂಪಗಳಲ್ಲಿ ಬದುಕಿರುವವರ ಜೊತೆಗೆ ಬಂದವರನ್ನು ಕೆಲವು ಸಮುದಾಯಗಳಲ್ಲಿ ಹಿರಿಯರ ಜೊತೆ ಸೇರಿಸುವ ಪದ್ಧತಿ ಇದೆ. ಮತ್ತೆ ಕೆಲವು ಸಮುದಾಯಗಳಲ್ಲಿ ಸತ್ತವರು ಬೇರೆ ಬೇರೆ ರೂಪಗಳಲ್ಲಿ ಹಿಂತಿರುಗಿ ಬಂದಾಗ ಅಂಥವರನ್ನು ಬಂಧಿಸುವ ಕ್ರಮವಿದೆ. ಇದನ್ನು ಬೇರೆ ಬೇರೆ ಸಮುದಾಯಗಳಲ್ಲಿ 'ದೆವ್ವ ಕಡಿಯುವುದು', 'ರಣ ಹಿಡಿದು ನಿಲ್ಲಿಸುವುದು.' 'ಬಂಧಿಸುವುದು' ಎಂದು ಕರೆಯುತ್ತಾರೆ. ಅಗೇರರಲ್ಲಿ ಸತ್ತವರನ್ನು ಗ್ರಾಮದೇವತೆಯಲ್ಲಿ ಬಂಧಿಸುವ ಕ್ರಮವಿದೆ. ಕರೆ ಒಕ್ಕಲರಲ್ಲಿ ಮೈಮೇಲೆ ಆಹ್ವಾನಿಸಿಕೊಂಡು ಸತ್ತ ವ್ಯಕ್ತಿಯ ಮನೆಯವರ ಇಷ್ಟದಂತೆ ಬಂಧಿಸಲಾಗುತ್ತದೆ. ಮುಕ್ರಿಯರಲ್ಲಿ ಸತ್ತ ವ್ಯಕ್ತಿ ತೊಂದರೆ ಕೊಡುವವನಾಗಿದ್ದರೆ, 'ದೆವ್ವ ಕಡಿಯುವ ಶಾಸ್ತ್ರ'ದ ಮೂಲಕ ಬಂಧಿಸಲಾಗುತ್ತದೆ. ಹಾಲಕ್ಕಿ ಒಕ್ಕಲಿಗರಲ್ಲಿ ಸತ್ತವರನ್ನು ಅನಂತರ 'ಗಾಳಿ' ಎನ್ನುತ್ತಾರೆ. ಇವರಲ್ಲಿಯೂ ಕೂಡ 'ದೆವ್ವ ಕಡಿಯುವ' ಆಚರಣೆಯ ಮೂಲಕ ಬಂಧಿಸುತ್ತಾರೆ.

ಸತ್ತವರನ್ನು ಹಿಡಿದು ನಿಲ್ಲಿಸುವ ಅಥವಾ ಬಂಧಿಸುವ ಮೂರು ವಿಧಾನಗಳು ರೂಢಿಯಲ್ಲಿವೆ: ೧. ಗ್ರಾಮ ದೇವತೆಯಲ್ಲಿ ಸತ್ತವರನ್ನು ಬಂಧಿಸುವುದು. ೨. ದೇವರ ಸಹಾಯದಿಂದ ಹಿಡಿದು ನಿಲ್ಲಿಸುವುದು. ೩. ಮಂತ್ರಶಕ್ತಿಯ ನೆರವಿನಿಂದ ಬಂಧಿಸುವುದು. ಎಲ್ಲ ಸಮುದಾಯಗಳಲ್ಲೂ ಸತ್ತವರೆಲ್ಲರನ್ನೂ ಬಂಧಿಸುವ ಕ್ರಮವಿಲ್ಲ. ಸತ್ತ ನಂತರ ಕುಟುಂಬಕ್ಕೆ, ಊರಿಗೆ ಕೆಟ್ಟದ್ದನ್ನು ಮಾಡದೆ ಒಳ್ಳೆಯದು ಮಾಡುವಂಥವರನ್ನು ಬಂಧಿಸುವುದಿಲ್ಲ. ಅದರ ಬದಲು ಸತ್ತವರು ಕುಟುಂಬಕ್ಕೆ ಮತ್ತು ಊರಿನವರಿಗೆ ಒಳ್ಳೆಯದನ್ನು ಮಾಡದೆ ಕೆಟ್ಟದು ಮಾಡುವಂಥವರನ್ನು ಬಂಧಿಸುವ ಕ್ರಮವಿದೆ. ಸಾಮಾನ್ಯವಾಗಿ ಬಂಧಿಸುವ ಕ್ರಮವು ಯುದ್ಧದ ಅಥವಾ ಸಂಘರ್ಷದ ಫಲಿತಾಂಶದ ಪರಿಭಾಷೆಯಾಗಿದೆ. ಅದು ಸೋಲುಗೆಲುವಿನ ಸಂಕೇತವಾಗಿದೆ. ಕೆಳಸಮುದಾಯಗಳಲ್ಲಿ ಅವರ ದೈನಂದಿನ ಜೀವನಕ್ಕೆ ತೊಂದರೆ ಕೊಡುವ ಭೌತಿಕ ಇಲ್ಲವೆ ಅಭೌತಿಕ ಶಕ್ತಿಗಳೊಂದಿಗಿನ ಸಮರ ನಿರಂತರವಾದುದು. ಈ ಸಂಘರ್ಷದಲ್ಲಿ ತನಗೆ ಬೇಡವಾದುದನ್ನು ಸಂಪೂರ್ಣ ನಾಶಮಾಡುವ ಸ್ವಭಾವ ಸಮುದಾಯಗಳಲ್ಲಿ ಇಲ್ಲ. ಅದರ ಬದಲು ತನಗೆ ತೊಂದರೆ ಕೊಡುವಂತಹದ್ದನ್ನು ಪರಿವರ್ತಿಸುವ ಅಥವಾ ರೂಪಾಂತರಿಸುವ ಗುಣ ಸಮುದಾಯಗಳದ್ದು. ಇಲ್ಲಿ ಸಂಘರ್ಷದ ನಂತರ ಸರ್ವನಾಶವಲ್ಲ; ಬದಲಾಗಿ ಇರುವ ಸ್ವರೂಪದ ಸಮಗ್ರ ಬದಲಾವಣೆ. ಹಾಗಾಗಿಯೇ ಸತ್ತ ನಂತರ ತೊಂದರೆ ಕೊಡುವಂಥವರನ್ನೆಲ್ಲ ಇವರು ತಮ್ಮ ನಿಯಂತ್ರಣಕ್ಕೆ ತಂದುಕೊಂಡು ತೊಂದರೆ ಮಾಡದಿರುವಂತಹ ಸ್ವರೂಪಕ್ಕೆ ಬದಲಾಯಿಸುತ್ತಾರೆ. ಅನಂತರ ಮುಂದೆ ಅಂಥವರೊಂದಿಗೆ ಸಂಬಂಧ ಮುಂದುವರಿದುಕೊಂಡು ಹೋಗುತ್ತದೆ.

ಕೆಳಸಮುದಾಯಗಳ ಸಾವಿನಾಚರಣೆಯ ಜಗತ್ತಿನಲ್ಲಿ ಅಡಗಿರುವ ಆಲೋಚನೆಯ ಧಾತುವೆಂದರೆ, ನಮ್ಮ ಸ್ಥಾಪಿತ ಗ್ರಹಿಕೆಯ ವಿಧಾನಗಳನ್ನು ತಲೆಕೆಳಗೆ ಮಾಡುವಂತಹದ್ದೇ ಆಗಿದೆ. ಸಾವಿನ ನಂತರ ಸ್ವರ್ಗ ಇಲ್ಲವೆ ನರಕ ಎಂಬ ಎರಡೇ ಸಾಧ್ಯತೆಗಳು ರೂಢಿಮೂಲ ತಿಳುವಳಿಕೆಯ ಭಾಗಗಳಾಗಿಬಿಟ್ಟಿವೆ. ಈ ಎರಡೂ ಸಾಧ್ಯತೆಗಳಿಗೆ ಪ್ರಕ್ರಿಯೆಯೇ ಇಲ್ಲ; ಬೆಳವಣಿಗೆಯೇ ಇಲ್ಲ. ಜನತಾಂತ್ರಿಕ ತಿಳುವಳಿಕೆಯ ವಿಧಾನವೆಂದರೆ ಅದು ಪ್ರಕ್ರಿಯಾತ್ಮಕವಾದುದು ಮತ್ತು ನಿರಂತರ ಬೆಳವಣಿಗೆಯಾಗುವಂತಹದ್ದು. ಇಂದು ಸಾಮ್ರಾಜ್ಯಶಾಹಿಯು ತನ್ನನ್ನು ಸುತ್ತುವರಿದ ಬಿಕ್ಕಟ್ಟನ್ನು ಮುಚ್ಚಿಟ್ಟುಕೊಳ್ಳಲು ಇದು ಚರಿತ್ರೆಯ ಕೊನೆಯ ಹಂತ ಎಂದು ಬಣ್ಣಿಸುತ್ತಿದೆ. ಆದರೆ ಇದಕ್ಕೆ ವಿರುದ್ಧವಾಗಿ ಜನತಾಂತ್ರಿಕ ತಿಳುವಳಿಕೆಯು ತನ್ನ ಪ್ರಕ್ರಿಯಾತ್ಮಕತೆಯ ಮೂಲಕ ಸಾಮ್ರಾಜ್ಯಶಾಹಿಯ ನಂತರದ ದಿನಗಳ ಬರುವಿಕೆಗಾಗಿ ಕಾಯುತ್ತಿದೆ. ಸ್ವರ್ಗ-ನರಕದ ಕಲ್ಪನೆ ಯಾಂತ್ರಿಕವಾದುದು; ಜಡವಾದುದು. ಹಾಗಾಗಿಯೇ ಕೆಳಸಮುದಾಯಗಳು ಇವೆರಡನ್ನೂ ಪ್ರಧಾನ ಆಶಯವಾಗಿ ಸ್ವೀಕರಿಸದೇ ಬೇರೆ ಬೇರೆ ಸಾಧ್ಯತೆಗಳನ್ನು ನಂಬಿವೆ ಮತ್ತು ಸ್ವೀಕರಿಸಿವೆ. ಈ ಮೂಲಕ ಸ್ವರ್ಗದ ಕಲ್ಪನೆಯನ್ನು ಅನಾಯಾಸವಾಗಿ ನಿರಾಕರಿಸಿವೆ.



# ಮುರಕಲ್ಲು ಕ್ವಾರಿಯಲ್ಲಿ

ಕೆ. ಪಿ. ಸ್ವಾಮಿ

**ಚೊ**ಕ್ಕಾಡಿಯ ಮಿತ್ರರು ಕಟ್ಟಿಸುತ್ತಿದ್ದ ಮನೆಯ ಗೋಡೆಗಳಿಗೆ ಬಳಸಿದ್ದ ಜಂಬಿಟ್ಟಿಗೆಗಳು ನನ್ನ ಗಮನ ಸೆಳೆದವು. ಸಾಧಾರಣ ಇಟ್ಟಿಗೆಯ ಒಂದೂವರೆಯಷ್ಟು ಉದ್ದ, ಆರು ಇಟ್ಟಿಗೆಗಳನ್ನು ಒಟ್ಟಿಗೆ ಸೇರಿಸಿದರೆ ಆಗುವಷ್ಟು ದಪ್ಪ. ಮೈ ನುಣುಪಾಗಿಲ್ಲದಿದ್ದರೂ ಕೆಮ್ಮಣ್ಣು ಮತ್ತು ಬಿಳುಪು ಕಲ್ಲಿನ ಪದರದ ಅಮೂರ್ತ ರಚನೆ - ಕೊರೆದ ಉಬ್ಬು ಚಿತ್ರದಂತೆ.

ಸಾಧಾರಣ ಇಟ್ಟಿಗೆ ತಯಾರಿಯಲ್ಲಿ ಬೇಕಾಗುವ ಅಚ್ಚು, ಕಲಸಿದ ಕೆಮ್ಮಣ್ಣು, ಒತ್ತಿದ ಇಟ್ಟಿಗೆಗಳನ್ನು ಒಣಗಿಸಲು ಬಿಸಿಲು, ಅನಂತರ ಹಸಿ ಇಟ್ಟಿಗೆ ಗೂಡು ಕಟ್ಟಿ ಬೆಂಕಿಯ ಶಾಖದಲ್ಲಿ ಸುಡಲು ಕಟ್ಟಿಗೆ - ಯಾವುದರ ಅಗತ್ಯವೂ ಇಲ್ಲ. ಭೂಮಿ ನಮ್ಮ ಬಳಕೆಗೆಂದು ಜಂಬು ಮಣ್ಣನ್ನು ಹದವಾಗಿ ಕಲೆಸಿ, ಮಳೆ ನೀರಿಗೆ ಕರಗಿಹೋಗದಂತೆ ಒಡಲಿನಲ್ಲಿ ಪಾಕಗೊಳಿಸಿ ತಯಾರಿಸಿದ ಇಟ್ಟಿಗೆ. ಪ್ರಕೃತಿಯ ತಯಾರಿಕೆಯಾದ ಇದನ್ನು ಲ್ಯಾಟ್ರೈಟ್ ಎನ್ನುತ್ತಾರೆ. ಜಂಬಿಟ್ಟಿಗೆ, ಮುರಕಲ್ಲು ಅಥವಾ ಕೆಂಪು ಕಲ್ಲು ಇತ್ಯಾದಿ ಹೆಸರಿನಲ್ಲಿ ಪರಿಚಿತ. ಸುಮಾರು ವರ್ಷಗಳ ಹಿಂದೆ ಅಲ್ಲಿಗೆ ಹೋಗಿದ್ದಾಗ ಕಾರ್ಮಿಕರು ಮುರಕಲ್ಲನ್ನು ಭೂಮಿಯಿಂದ ಕತ್ತರಿಸಿ ತೆಗೆಯುತ್ತಿದ್ದುದನ್ನು ನೋಡಿದ್ದೆ. ಈಗ ಯಂತ್ರದ ಸಹಾಯದಿಂದ ಮುರಕಲ್ಲು ತೆಗೆಯುತ್ತಾರೆಂದು ಕೇಳಿ ನನ್ನ ಆಸಕ್ತಿ ಮತ್ತಷ್ಟು ಹೆಚ್ಚಿತು.

ಸುಳ್ಯ ರಸ್ತೆಯಲ್ಲಿ ೨ ಕಿ.ಮೀ. ಸಾಗಿದ ನಂತರ ರಸ್ತೆಯಿಂದ ಬಲಗಡೆಗೆ ಕಾಡಿನೊಳಕ್ಕೆ ಗೇರು ಮರಗಳ ಮಧ್ಯೆ ಸಾಗುವ ಹಳ್ಳತಿಟ್ಟಿನ ಕಚ್ಚಾ ರಸ್ತೆಯಲ್ಲಿ ಹೊರಟೆವು. ಸುತ್ತು ಬಳಸಿ ಮತ್ತಷ್ಟು ಮುಂದೆ ಸಾಗಿದಾಗ ಅನುತ್ತಡ್ಕದ ಮುರಕಲ್ಲು ಕ್ವಾರಿ ಕಣ್ಣಿಗೆ ಬಿದ್ದಿತು.

ಸ್ವತಂತ್ರ ಭಾರತದ ಹಂಗರಹಳ್ಳಿಯ ಕಲ್ಲು ಕ್ವಾರಿಯ ಒಡೆಯ, ಅಲ್ಲಿ ದುಡಿಯುತ್ತಿದ್ದವರ ಕಾಲಿಗೆ ಸಂಕೋಲೆ ಹಾಕಿದ್ದ ಚಿತ್ರ ಕಣ್ಮುಂದೆ ಸುಳಿಯಿತು. ಎಷ್ಟು ಪ್ರಯತ್ನಿಸಿದರೂ ಕಾಲಿಗೆ ಸರಪಳಿ ಹಾಕಿಸಿಕೊಂಡ ಹಂಗರಹಳ್ಳಿಯ ನತದೃಷ್ಟರ ಚಿತ್ರ ಅಳಿಸಿಹೋಗಲೊಲ್ಲದು. ಆದರೆ ಅನುತ್ತಡ್ಕದ ದೃಶ್ಯ ಬೇರೆಯೇ ಆಗಿತ್ತು. ಕೆಂಬಣ್ಣದಲ್ಲಿ ಮಿಂದಂತಿದ್ದ ಕೆಲಸಗಾರರು, 'ಯಾವ ಕಡೆಗೆ ಹೊರಟವರು ?' - ಎಂಬಂತೆ ನಮಗೆ ಮುಗುಳ್ನಗೆಯ ಸ್ವಾಗತ ನೀಡಿದರು. ಕ್ವಾರಿಯ ಒಡೆಯ ಇಪ್ಪತ್ತು ದಾಟಿರಬಹುದಾದ ಯುವಕ. ಆತನನ್ನು ನೋಡಿದ ನಂತರ ನನ್ನ ಮನಸ್ಸಿಗೆ ಅಮರಿದ್ದ ಹಂಗರಹಳ್ಳಿಯ ಪಿಶಾಚಿಯ ರೂಪ ಮರೆಯಾಯಿತು. ಕ್ವಾರಿಯ ಒಡೆಯ ಚಿಕ್ಕನಡ್ಕ ಗ್ರಾಮದ ಥಾಮಸ್ ಡಿಸೋಜ ನನ್ನ ಗೆಳೆಯ ಮಾಸ್ತರರ ಶಿಷ್ಯ. ಹಾಗಾಗಿ ನಮ್ಮ ಮಾತುಕತೆ ಕೇವಲ ವ್ಯಾವಹಾರಿಕವಾಗಿರದೆ ಒಂದಿಷ್ಟು ಆತ್ಮೀಯತೆಯಿಂದ ಕೂಡಿದ್ದಿತು.

ಮೊದಲಿಗೆ ಮಟ್ಟಸವಾದ ನೆಲದ ಮೇಲೆ ಮುರಕಲ್ಲಿನ ಗಾತ್ರಕ್ಕೆ ತಕ್ಕ ಹಾಗೆ ಉದ್ದಕ್ಕೆ ಅಡ್ಡಕ್ಕೆ ಗುರುತು ಮಾಡುತ್ತಾರೆ. ಪವರ್ ಟಿಲ್ಲರ್‌ನ ಒಂದು ಪಾರ್ಶ್ವಕ್ಕೆ ಗರಗಸದ ಹಲ್ಲು ಚಕ್ರವನ್ನು ಅಳವಡಿಸಿದ್ದಾರೆ. ಟಿಲ್ಲರ್ ಚಾಲೂ ಆದ ನಂತರ ಗರಗಸವನ್ನು ಚಾಲೂ ಮಾಡಿ, ಹಾಕಿರುವ ಗುರುತಿನ ನೇರಕ್ಕೆ ನೆಲವನ್ನು ಕೊಯ್ಯುತ್ತ ಹೋಗುತ್ತಾರೆ. ಗುರುತಿನ ನೇರಕ್ಕೆ ಸರಿಯಾಗಿ ಗರಗಸದಿಂದ ಕೊಯ್ಯುವುದರಿಂದ ಇಟ್ಟಿಗೆಗಳು ಪ್ರಮಾಣಕ್ಕೆ ತಕ್ಕಂತಿರುತ್ತವೆ. ಗರಗಸ ವೃತ್ತಾಕಾರದಲ್ಲಿರುವುದರಿಂದ ಇಟ್ಟಿಗೆಗಳ ದಪ್ಪ ಎಷ್ಟಿರಬೇಕೋ ಅಷ್ಟನ್ನು ಮಾತ್ರವೇ ಕತ್ತರಿಸಲು ಬರುತ್ತದೆ. ಉದ್ದ - ಅಡ್ಡ ಗುರುತಿಗೆ ಸರಿಯಾಗಿ ಕೊಯ್ದ ನಂತರ ಟಿಲ್ಲರ್‌ನ ಕೆಲಸ ಮುಗಿಯುತ್ತದೆ. ಮೊದಲು ಕೊಡಲಿಯಂಥ ಆಯುಧದಿಂದ ಮುರಕಲ್ಲು ಕತ್ತರಿಸಿ ತೆಗೆಯುತ್ತಿದ್ದ ಕಾರ್ಮಿಕರಿಗೆ, ಈಗ ಯಂತ್ರ ಕತ್ತರಿಸಿರುವ ಕಲ್ಲುಗಳನ್ನು ಭೂಮಿಯಿಂದ ಎಬ್ಬಿಸುವುದಷ್ಟೇ ಕೆಲಸ.

ಯಂತ್ರದ ಸಹಾಯದಿಂದ ದಿನವೊಂದಕ್ಕೆ ಒಂದು ಸಾವಿರ ಮುರಕಲ್ಲು ತೆಗೆಯಬಹುದಾಗಿದೆ. ಟಿಲ್ಲರ್‌ಗೆ ಕೆಲವೊಮ್ಮೆ ದುರಸ್ತಿ ಅಗತ್ಯವಾಗುತ್ತದೆ. ಅಂಥ ಸಂದರ್ಭಗಳಲ್ಲಿ ಮೂರು ನಾಲ್ಕು ದಿನ ಉತ್ಪಾದನೆ ಇರುವುದಿಲ್ಲ. ಕ್ವಾರಿಯಲ್ಲಿ ಒಂದು ಮುರಕಲ್ಲಿಗೆ ನಾಲ್ಕರಿಂದ ಐದು ರೂಪಾಯಿ. ಯಂತ್ರ ಕತ್ತರಿಸಿ ಬಿಟ್ಟು ಹೋದ ಮುರಕಲ್ಲನ್ನು ಭೂಮಿಯಿಂದ ಎಬ್ಬಿಸುವ ಕೆಲಸ ಗಂಡಾಳುಗಳದು. ನೆಲದ ಮಟ್ಟಕ್ಕೆ ಒಂದೊಂದೇ ಕಲ್ಲನ್ನು ಕೆತ್ತಿ ಎಬ್ಬಿಸುವ ಕೆಲಸ. ನೆಲದಿಂದ ಎಬ್ಬಿಸುವ ಪ್ರತಿಯೊಂದು ಕಲ್ಲಿಗೆ ಐವತ್ತೈದು ಪೈಸೆ. ಒಬ್ಬ ಗಂಡಾಳು ದಿನಕ್ಕೆ ೭೫ರಿಂದ ೧೦೦ ರೂಪಾಯಿ ಗಳಿಸುತ್ತಾನೆ. ಗಂಡಾಳು ಎಬ್ಬಿಸಿದ ಕಲ್ಲನ್ನು ಹೊತ್ತೊಯ್ದು ಲಾರಿ ನಿಲ್ಲುವ ಕಡೆ ಪೇರಿಸಿಡುವ ಕೆಲಸ ಹೆಣ್ಣಾಳುಗಳದು. ಹೆಣ್ಣಾಳು ದಿನಕ್ಕೆ ೩೫ ರಿಂದ ೫೦ ರೂ. ಸಂಪಾದಿಸುತ್ತಾಳೆ. ಸಾಕಷ್ಟು ಅಂತರವಿದೆ ಎಂದಾಯಿತು.

ಸಾಮಾನ್ಯವಾಗಿ ದಕ್ಷಿಣ ಕನ್ನಡದ ಎಲ್ಲ ಕಡೆ ಮುರಕಲ್ಲು ಬಳಸಿಯೇ ಮನೆ ಕಟ್ಟುತ್ತಾರೆ. ಅಗ್ಗವೂ ಹೌದು. ಗೋಡೆ ಗಟ್ಟಿಯಾಗಿರುತ್ತದೆ. ಅನೇಕ ಸಲ ಅವರವರ ಜಮೀನಿನಲ್ಲಿಯೇ ಮುರಕಲ್ಲು ತೆಗೆಸಿ ಬಳಸುತ್ತಾರೆ. ಅನುತ್ತಡ್ಕದಲ್ಲಿರುವ ಡಿಸೋಜರ ಕ್ವಾರಿಯಿಂದ ಸಕಲೇಶಪುರ, ಚಿಕ್ಕಮಗಳೂರು, ಮಡಿಕೇರಿ, ಕುಶಾಲನಗರದ ಕಡೆಯಿಂದಲೂ ಗ್ರಾಹಕರು ಬಂದು ಇಟ್ಟಿಗೆ ಒಯ್ಯುತ್ತಾರೆ.

ಕ್ವಾರಿಗೆಂದು ಸರಕಾರಕ್ಕೆ ಪರವಾನಗಿ ಶುಲ್ಕ ತೆತ್ತ ನಂತರ ಒಡೆಯನಿಗೆ ಕ್ವಾರಿಯಿಂದ ಕಲ್ಲು ತೆಗೆಯಲು ಅನುಮತಿ ದೊರಕುತ್ತದೆ. ಥಾಮಸ್ ಡಿಸೋಜರ ಪ್ರಕಾರ ಇದರಲ್ಲಿ ಅನೇಕ ಸಣ್ಣ ಪುಟ್ಟ ತೊಡಕುಗಳು ತಲೆದೋರುವ ಸಾಧ್ಯತೆ ಇರುತ್ತದೆ. ಟಿಲ್ಲರ್ ಹಾಗೂ ಅದಕ್ಕೆ ಬೇಕಾದ ಉಪಕರಣಗಳನ್ನು ಕೊಳ್ಳಲು ಹೆಚ್ಚು ಬಂಡವಾಳ ಬೇಕಾಗುತ್ತದೆ. ಅದರ ಚಾಲಕನಿಗೆ ದಿನಕ್ಕೆ ೨೦೦ ರೂ., ಕ್ಲೀನರನಿಗೆ ೧೫೦ ರೂ. ಕೊಡಬೇಕು. ಕೆಲಸ ಸುಸೂತ್ರವಾಗಿ ನಡೆಯಬೇಕಾದರೆ ಅದಕ್ಕೆ ಅಗತ್ಯವಾದ ಎಲ್ಲ ಪರಿಕರಗಳನ್ನೂ ಶೇಖರಿಸಿಟ್ಟಿರಬೇಕು. ಬೇಕೆಂದೇ ಆಗಾಗ ಕಿರುಕುಳ ಕೊಡುವ ಅಧಿಕಾರಿಗಳಿರುತ್ತಾರೆ. ಮಳೆಯ ದಿನಗಳಲ್ಲಿ ಕಲ್ಲು ತೆಗೆಯಲು ಬರುವುದಿಲ್ಲ. ಕೆಲವೊಮ್ಮೆ ಕ್ವಾರಿಯಲ್ಲಿ ನಿರೀಕ್ಷಿಸಿದಷ್ಟು ಕಲ್ಲು ದೊರಕದೆ ಹೋಗಬಹುದು. ಇವೆಲ್ಲ ಯಾವುದೇ ಉದ್ಯಮದಲ್ಲಿ ತಲೆದೋರಬಹುದಾದ ಅನಿವಾರ್ಯ ತೊಡಕುಗಳು.

ಕೆಲವು ಅಡ್ಡಿ ಆತಂಕಗಳಿದ್ದಾಗ್ಯೂ ವಹಿವಾಟನ್ನು ಅಚ್ಚುಕಟ್ಟಾಗಿ ನಡೆಸುತ್ತಿರುವ ಥಾಮಸ್ ಡಿಸೋಜರನ್ನು ಮೆಚ್ಚಲೇಬೇಕು. ಸಣ್ಣ ವಯಸ್ಸಿನ ತನ್ನ ಮಗ ಸ್ವಂತ ಉದ್ಯಮವನ್ನು ಯಶಸ್ವಿಯಾಗಿ ನಡೆಸುತ್ತಿರುವಾಗ, ಈತನ ತಂದೆ ತೋಟ ಮನೆ



ನೆಲದಿಂದ ಮುರಕಲ್ಲು ಎಬ್ಬಿಸುವುದು

ನೋಡಿಕೊಂಡು ಹಾಯಾಗಿರಬೇಕು ಎಂಬ ನಿಟ್ಟಿನಲ್ಲಿ ನನ್ನ ಆಲೋಚನೆ ಸಾಗಿತು.

ಥಾಮಸ್ ನಗುತ್ತ ಹೇಳಿದರು : ''ನೀವು ನೋಡಿದಿರಲ್ಲ ಸಾರ್, ಟಿಲ್ಲರ್ ಕಲ್ಲು ಕತ್ತರಿಸುವಾಗ ಮುರಕಲ್ಲಿಗೆ ನೀರು ಹನಿಸುತ್ತಿದ್ದ ವ್ಯಕ್ತಿಯನ್ನು. ಅವರೇ ನನ್ನ ತಂದೆ ಅಂತಿನ್ ಡಿಸೋಜಾ !''

ನನ್ನ ಮುಖ ಪೆಚ್ಚಾಯಿತು. ಆದರೂ ಇಷ್ಟು ವಹಿವಾಟು ನಡೆಸುವ ಇವರಿಗೆ ತೋಟ ಮನೆ ಅಂತ ಇರಲೇಬೇಕು. ತೋಟ ಮನೆಯ ವ್ಯವಹಾರ ತಾಯಿ ನೋಡಿಕೊಳ್ಳುತ್ತಿರಬಹುದು ಎಂದುಕೊಂಡೆ.

''ಡಿಸೋಜರೇ, ನಿಮ್ಮ ತೋಟ ಮನೆ ವ್ಯವಹಾರ ನಿಮ್ಮ ತಾಯಿ ನೋಡಿ ಕೊಳ್ಳುತ್ತಿರಬಹುದಲ್ಲ !''

''ಮನೆಯಿದೆ. ನೀವಂದು ಕೊಂಡಂತೆ ತೋಟವೇನೂ ಇಲ್ಲ,'' ಎಂದು ಹೆಣ್ಣಾಳುಗಳ ಗುಂಪಿನಲ್ಲಿ ಕೆಂಬಣ್ಣ ಬಳಿದುಕೊಂಡಂತಿದ್ದ ಮಧ್ಯಮ ಪ್ರಾಯದ ಮಹಿಳೆಯತ್ತ ಬೆರಳು ತೋರಿಸಿ ''ಅಗೋ ನೋಡಿ ನನ್ನ ತಾಯಿ !'' ಎಂದರು. ತಾಯಿಯ ಹೆಸರು ಕರ್ಮಿಂಗ್ ಲೋಬೋ. ಅವರ ಪರಿಚಯ ಮಾಡಿಕೊಂಡೆ. ಮತ್ತೊಮ್ಮೆ ಬಂದಾಗ ತಮ್ಮಲ್ಲಿಗೆ ಬರುವಂತೆ ಆಮಂತ್ರಣ ನೀಡಿದರು.



*ಯಂತ್ರದ ಸಹಾಯದಿಂದ ಮುರಕಲ್ಲು ತಯಾರಿಕೆ*

ಒಂದು ಲಕ್ಷದಷ್ಟು ಹಣ ನೀಡಿ ಟಿಲ್ಲರ್ ಖರೀದಿಸಿರುವ, ಸುಮಾರು ಹತ್ತಿಪ್ಪತ್ತು ಕಾರ್ಮಿಕರಿಗೆ ಮಜೂರಿ ನೀಡುವ ಒಂದು ಮುರಕಲ್ಲು ಕ್ವಾರಿಯ ಒಡೆಯ ಥಾಮಸ್ ಡಿಸೋಜ, ತನ್ನ ತಂದೆ ತಾಯಿ ಅಲ್ಲಿ ಕಾರ್ಮಿಕರೊಂದಿಗೆ ಸೇರಿಕೊಂಡು ಕೆಲಸ ಮಾಡುತ್ತಾರೆ ಎಂದು ಅಪರಿಚಿತನಾದ ನನ್ನೊಂದಿಗೆ ಹೇಳಿಕೊಳ್ಳಲು ಸಂಕೋಚಪಡಲಿಲ್ಲ. ನಿಜವಾದ ಅರ್ಥದಲ್ಲಿ ಅದು ದುಡಿಮೆಗಾರರ ಕ್ವಾರಿ. ಅವರ ಯಶಸ್ಸಿನ ಗುಟ್ಟಿರುವುದು ಅದರಲ್ಲೇ ಎನ್ನಿಸಿತು.

ಡಿಸೋಜರ ತಂದೆ ತಾಯಿ ಕ್ವಾರಿಯ ಒಡೆತನದ ಗತ್ತನ್ನು ಕಳಚಿಟ್ಟು, ಕಾರ್ಮಿಕರೊಂದಿಗೆ ಕಾರ್ಮಿಕರಾಗಿ ದುಡಿಯುತ್ತಾರೆ. ಮಧ್ಯಯುಗದ ಗುಲಾಮೀ ಪದ್ಧತಿಯನ್ನು ನೆನಪಿಗೆ ತರುವ, ದುಡಿಯುವವರ ಸ್ವಾತಂತ್ರ್ಯಕ್ಕೆ ಸಂಕೋಲೆ ತೊಡಿಸಿದ್ದ ಹಂಗರಹಳ್ಳಿಯ ಪ್ರಕರಣವನ್ನು ಅನುತ್ತಡ್ಕದ ಕ್ವಾರಿಯೊಂದಿಗೆ ಹೋಲಿಸುವುದು ಸಹ ಅಪರಾಧವಾಗುತ್ತದೆ ಎನ್ನಿಸಿತು.

**ಕೆ. ಪಿ. ಸ್ವಾಮಿ**

ನಂ. ೧೬೭, ೧೦ನೇ ಮೈನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು- ೫೬೦ ೦೫೮

RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna